12th Century's
Enlightenment Technic
and Evolution



# ಸಿದ್ಧರಾಮ ಶಿವಯೋಗಿಗಳ ವಚನಾನುಭಾವ

ಬಸವರಾಜ ಸ್ವಾಮಿ

12th Century's
Enlightenment Technic
and Evolution

# ಸಿದ್ಧರಾಮ ಶಿವಯೋಗಿಗಳ
# ವಚನಾನುಭಾವ

ಹನ್ನೆರಡನೆ ಶತಮಾನದ ಸ್ವಯಂಜ್ಞಾನ ಕ್ರಾಂತಿ ಮತ್ತು ತಂತ್ರಗಾರಿಕೆ

ಬಸವರಾಜ ಸ್ವಾಮಿ

ಪ್ರಕಾಶಕರು
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಸವನಗರ, ಬಸವನಬಾವಿ ವೃತ್ತ, ಗಂಜ್ ಏರಿಯಾ
ರಾಯಚೂರು - 584 102 ಕರ್ನಾಟಕ

12th Century's
Enlightenment Technic
and Evolution

Siddarama Shiva Yogigala Vachananubhava

*by :* **Basavaraj Swamy**
*Editor, Suddimoola Kannada Daily*
*Siyatalab, Raichur - 584102*
*M. 9980553750*

**ಸಿದ್ಧರಾಮ ಶಿವಯೋಗಿಗಳ**
**ವಚನಾನುಭಾವ**

ಹಕ್ಕುಗಳು : ಲೇಖಕರವು

ಬೆಲೆ : ರೂ.300/-

ಪ್ರತಿಗಳು : 1000

ಮುದ್ರಣ : 2019

ಕಾಗದ ಬಳಕೆ : 70 ಜಿಎಸ್ಎಂ. ಎನ್ ಎಸ್ ಮ್ಯಾಪಲಿತೋ

ಆಕಾರ : ಡೆಮಿ 1/8

*Page* : 601 + x

*Price* : Rs.300/-

*Copies* : 1000

*Size* : Demy 1/8

*Printed* : 2019

ಮುಖಪುಟ : ಮುರಳೀಧರ . ವಿ. ರಾಠೋಡ್, ಬೆಂಗಳೂರು

ಮುದ್ರಣ : ಶುಭೋದಯ ಪ್ರಿಂಟರ್ಸ್, ಬೆಂಗಳೂರು.

**ಪ್ರಕಾಶನ :**
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಸವನಗರ, ಬಸವನಬಾವಿ ವೃತ್ತ, ಗಂಜ್ ಏರಿಯಾ
ರಾಯಚೂರು - 584 102 ಕರ್ನಾಟಕ

# ........ ಓದುವ ಮುನ್ನ

ಜಗದ ಸಕಲ ಜೀವಿಗಳಲ್ಲಿ ಮನುಷ್ಯನೇ ಶ್ರೇಷ್ಠ. ಮನುಷ್ಯನಿಗೆ ಮಾತ್ರ ತಿಳಿಯುವ ಶಕ್ತಿಯಿದೆ. ತಿಳಿದು ತನಗೆ ತಾನೇ ಜ್ಞಾನಿಯಾಗುವ ಶಕ್ತಿಯಿದೆ. ತನ್ನ ಜ್ಞಾನ ತಾನೇ ಬಳಕೆ ಮಾಡುವುದರಲ್ಲಿ ಮನುಷ್ಯ ಹಿಂದೆ ಬಿದ್ದಿದ್ದಾನೆ. ತನ್ನ ಜ್ಞಾನ ತಾನೇ ಬಳಕೆ ಮಾಡುವ ತಂತ್ರಗಾರಿಕೆಯನ್ನು ತಾನೇ ಕಲಿಯುವ ಅವಶ್ಯಕತೆಯಿದೆ. ಭೌತಿಕ ಕಲಿಕೆಗಳು ತನ್ನನ್ನು ಎಂದಿಗೂ ಸುಧಾರಿಸಲಾರವು.

ಮನುಷ್ಯ ಭೌತಿಕವಾಗಿ ಸಾಕಷ್ಟು ಮುಂದುವರೆದಿದ್ದಾನೆ. ಈ ಮುಂದುವರಿಕೆಯಿಂದ ನಿಸರ್ಗಕ್ಕೆ ಸಾಕಷ್ಟು ಪೆಟ್ಟು ಬಿದ್ದಿದೆ. ನಿಸರ್ಗವನ್ನು ಬದಲಿಸಬಾರದು. ಬದಲಿಸಲು ಬರುವ ನಿಸರ್ಗವನ್ನು ನಿಸರ್ಗ ಎಂದು ಕರೆಯಲು ಬರುವುದಿಲ್ಲ. ಹಾಗೆಯೇ ಮನುಷ್ಯನನ್ನು ಕೂಡಾ ಮನುಷ್ಯ ಬದಲಿಸಲು ಬರುವುದಿಲ್ಲ. ನಿಸರ್ಗದ ಮೂಲಕ್ಕೆ ಹೋಗಿ ತನಗೆ ತಾನೇ ಬದಲಾಗಲು ಬರುತ್ತದೆ. ತಾನು ಕಲಿತ ತನ್ನ ಭೌತಿಕ ಕಲಿಕೆಗಳನ್ನೆಲ್ಲ ಬೀಸಾಡಿ ಸಹಜವಾಗಿ ಇರಲು ಬರುತ್ತದೆ.

ಭೂಮಿಯ ಮೇಲೆ ವಾಸ ಮಾಡುವ ಸಕಲ ಪ್ರಾಣಿಗಳು, ಗಿಡ ಮರ ಬಳ್ಳಿ ಸಸ್ಯಕಾಶಿಗಳು, ಉರಗ ಕೀಟಗಳು, ಜಲಚರಗಳು ಸಹಜವಾಗಿಯೇ ಇವೆ. ಸಹಜತೆಯ ಪರಿಚಯ ಕೂಡಾ ಅವುಗಳಿಗೆ ಇಲ್ಲದಂತೆ ಸಹಜವಾಗಿವೆ. ಇದೆಲ್ಲವನ್ನೂ ತಿಳಿದು ಸಹಜವಾಗಿ ಇರುವ ಇರುವಿಕೆಯನ್ನು ಮಾತ್ರ ಮನುಷ್ಯ ಕಳೆದುಕೊಂಡಿದ್ದಾನೆ. ಮನುಷ್ಯನ ಭೌತಿಕ ಕಲಿಕೆ ಮನುಷ್ಯನನ್ನೇ ರಕ್ಕಸನಂತೆ ಮುತ್ತಿಗೆ ಹಾಕಿದೆ. ತನ್ನ ಕಲಿಕೆ ತನ್ನನ್ನೇ ತಿಂದು ಹಾಕುತ್ತಲಿದೆ. ಇದರಿಂದ ಹೊರಬರುವ ಎಚ್ಚರಿಕೆಯ ಸಂಕೇತಗಳು ಮನುಷ್ಯಕುಲದಲ್ಲಿ ಕಾಣುತ್ತಿಲ್ಲ.

ಮನುಷ್ಯ ಮನುಷ್ಯನನ್ನು ಎಚ್ಚರಿಸಬೇಕಿಲ್ಲ. ಹಾಗೆ ಎಚ್ಚರಿಸುವುದು ಪುನಃ ಕಲಿಕೆಯಾಗುತ್ತದೆ. ತನಗೆ ತಾನೇ ಎಚ್ಚರವಾಗುವ ಅರಿವು ತನುವಿನಲ್ಲಿಯೇ ಇದೆ. ಆ ಅರಿವನ್ನು ಮರೆವು ಮಾಡಿ ಅಜ್ಞಾನದ ಸುಖ ಉಣ್ಣುವ ಕಲಿಕೆಯೂ ತನುವಿನಲ್ಲಿಯೇ ಇದೆ.

ಅರಿವು ಎನ್ನುವ ಪದ ತನುವಿನ ಸಹಜತೆ. ಅದು ತನುವಿನೊಂದಿಗೆ ಬಂದಿದೆ. ತನುವಿನ ಕಣಕಣದಲ್ಲಿ ಸಂಗಮವಾಗಿದೆ. ತನುವಿನಲ್ಲಿ ಅರಿವು ಇಲ್ಲದ ಜಾಗವೇ ಇಲ್ಲ. ನೋಡುವ ಕಣ್ಣಿನಲ್ಲಿ ಅರಿವಿದೆ; ಕೇಳುವ ಕಿವಿಯಲ್ಲಿ ಅರಿವಿದೆ; ಮೂಸಿಸುವ ಮೂಗಿನಲ್ಲಿ ಅರಿವಿದೆ; ರುಚಿಸುವ ನಾಲಿಗೆಯಲ್ಲಿ ಅರಿವಿದೆ; ಸ್ಪರ್ಶಿಸುವ ಚರ್ಮದಲ್ಲಿ ಅರಿವಿದೆ. ಮಾತನಾಡುವ ಪ್ರತಿ ಶಬ್ದದಲ್ಲಿ ಅರಿವಿದೆ. ಆ ಅರಿವನ್ನೇ ಸಂಶೋಧನೆ ಮಾಡಿ ತನುಕುಲಕ್ಕೆ ಬಳಕೆ ಮಾಡಲು ಹೇಳಿಕೊಟ್ಟ ಜ್ಞಾನಿಗಳ ಸಂಖ್ಯೆ ವಿರಳಾತಿ ವಿರಳ.

ತನುವಿನ ಕಣಕಣದಲ್ಲಿ ಸಂಗಮವಾದ ಅರಿವನ್ನು ಜ್ಞಾನಿಗಳು 'ಗುರು' ಎಂದು ಹೆಸರಿಟ್ಟು ಕರೆದರು. ಈ ಗುರುದೇವನನ್ನೇ 'ಮಹಾದೇವ', 'ಸದಾಶಿವ', ಸಾಕ್ಷಾತ್ ''ಪರಬ್ರಹ್ಮ'' ಎಂದು ಕರೆದರು. 'ವಿಷ್ಣು' ಎಂದು ಕರೆದರು. ''ಗುರುದೇವೋ ಮಹಾದೇವೋ ಗುರುದೇವೋ ಸದಾಶಿವಃ ಗುರುಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರುವೇ ನಮಃ'' ಎಂಬ ಸೂತ್ರವನ್ನು ಕೂಡಾ ಜ್ಞಾನಿಗಳು ರಚಿಸಿದರು.

''ಗುರು'' ಒಂದು ವಸ್ತುವಲ್ಲ. ಒಬ್ಬ ವ್ಯಕ್ತಿಯೂ ಅಲ್ಲ. ವ್ಯಕ್ತಿಯಲ್ಲಿರುವ ಅವ್ಯಕ್ತ ಸಹಜ

ಶಕ್ತಿ. ಆ ಸಹಜ ಶಕ್ತಿ ಅವ್ಯಕ್ತ ವ್ಯಕ್ತಿಯಾಗಿ ವ್ಯಕ್ತಿಯಲ್ಲಿಯೇ ಇದ್ದು ವ್ಯಕ್ತಿಗೆ ಸದಾ ಬೋಧೆ ಮಾಡುತ್ತದೆ. ಈ ಭಾಗ್ಯ ಮನುಷ್ಯನಿಗೆ ಮಾತ್ರ ಇದೆ. ಈ ತಂತ್ರಗಾರಿಕೆಯನ್ನು ಸಿದ್ಧರಾಮ ಶಿವಯೋಗಿಗಳು ಹಾಗೂ ಸಕಲ ಶರಣರು ತಮ್ಮ ವಚನಗಳಲ್ಲಿ ದಾಖಲಿಸಿದ್ದಾರೆ.

ಮನುಷ್ಯನನ್ನು 'ವ್ಯಕ್ತಿ' ಎಂದು ಕರೆಯಲಾಗಿದೆ. ಏಕೆಂದರೆ ವ್ಯಕ್ತಿ ಕಾಣುತ್ತಾನೆ. ವ್ಯಕ್ತ ತನುವನ್ನು ಆವರಿಸಿದ 'ಮನ' ಕಾಣುವುದಿಲ್ಲ. ವ್ಯಕ್ತ ತನುವಿನಲ್ಲಿ ಸಂಗಮವಾದ 'ಗುರುದೇವ' ಕೂಡಾ ಕಾಣುವುದಿಲ್ಲ. ಕಾಣಬಾರದ ಗುರುದೇವ ಕಾಣಬಾರದ ಮನಕ್ಕೆ ಬೋಧೆ ಮಾಡುತ್ತಾನೆ. ಈ ಬೋಧೆಯನ್ನು ತನು ಸಾಕ್ಷಿಯಾಗಿ ಕೇಳುತ್ತದೆ. ಹಾಗೆಯೇ ಸಾಕ್ಷೀಕರಿಸುತ್ತದೆ. ಗುರುದೇವನ ಬೋಧೆಯನ್ನು ಆಲಿಸಲು ಮನ ಎಂದು ಸಿದ್ಧವಾಗುತ್ತದೆಯೋ ಅಂದೇ ಆ ಮನ ಘನಮನವಾಗುತ್ತದೆ. ಗುರುದೇವನಿಗೆ ಪರಮ ಶಿಷ್ಯನಾಗುತ್ತದೆ. ಮಹಾದೇವನಿಗೆ ಪರಮ ಭಕ್ತನಾಗುತ್ತದೆ.

'ಗುರು' 'ಶಿಷ್ಯ' ಇಬ್ಬರೂ ಸೇರಿ ತನುವನ್ನೇ ಉಪಕರಣ ಮಾಡಿಕೊಂಡು ತನುವಿನ ಏಳ್ಗೆಗಾಗಿ ಭಗವದ್ಗೀತೆ ರಚಿಸಿದರು. ಬೈಬಲ್, ಕುರಾನ್, ಗ್ರಂಥಸಾಹೇಬ, ತ್ರಿಪಿಟಿಕ, ಜೈನಸಾಹಿತ್ಯವನ್ನು ರಚಿಸಿದರು. ವಚನಗಳು, ತತ್ವಪದಗಳು, ಕೀರ್ತನಗಳು, ಮುಂಡಿಗೆಗಳು, ಉಗಾಭೋಗಗಳು ವೇದ ಆಗಮ ಉಪನಿಷತ್ ಭಾಗವತ ರಚನೆಯಾದವು.

ಈ ಎಲ್ಲಾ ಗ್ರಂಥಗಳು ತನುವಿನ ಏಳ್ಗೆಗಾಗಿ ತನುವಿನಿಂದಲೇ ಹೊರಬಂದವು. ತನುವಿನಲ್ಲಿ ಇರುವ ಅರಿವಿನ ಸಂಪತ್ತನ್ನು ಸೂಚಿಸುವ ಸೂತ್ರಗಳಾಗಿ ನಕಾಶೆಗಳಾಗಿ ಹೊರಬಂದವು. ಆದರೆ ಮನ ಈ ಎಲ್ಲಾ ಪುಸ್ತಕಗಳನ್ನು ಧರ್ಮಗ್ರಂಥಗಳನ್ನಾಗಿ ಮಾಡಿಕೊಂಡು ತನುವಿನಲ್ಲಿಯೇ ತುಂಬಿಕೊಂಡಿತು. ತನುವನ್ನು ಒಂದು ಗೋದಾಮನ್ನಾಗಿ ಮಾಡಿಕೊಂಡಿತು. ಮನ ತನುವನ್ನು ಪಂಡಿತನನ್ನಾಗಿ, ಗುರುವನ್ನಾಗಿ, ಮೌಲ್ವಿಯನ್ನಾಗಿ, ಬಿಷಪ್‌ನನ್ನಾಗಿ ಮಾಡಿತು. ಪೋಪ್‌ನನ್ನಾಗಿ ಜಗದ್ಗುರುವನ್ನಾಗಿ ಮಾಡಿತು. ಆಶ್ರಮ ಕಟ್ಟಿಕೊಂಡು ಮಠ ಪೀಠಗಳನ್ನು ರಚಿಸಿ ಮನ ತನುವನ್ನು ಅವುಗಳಿಗೆ ಅಧಿಪತಿಯನ್ನಾಗಿ ನಿಯಮಿಸಿತು.

ಮನ ಭೌತಿಕವಾಗಿ ಬೆಳೆಯಿತು; ಆಂತರಿಕವಾಗಿ ಬೆಳೆಯಲಿಲ್ಲ. ಭೌತಿಕ ವಸ್ತುಗಳು ಮನಕ್ಕೆ ಆಕರ್ಷಣೆಯಾದವು. ಹಗಲಿರುಳೆನ್ನದೆ ಭೌತಿಕ ವಸ್ತುಗಳಿಗಾಗಿ ಮನ ತನುವನ್ನು ದಂಡಿಸಿತು. ಭೌತಿಕ ವಸ್ತುಗಳನ್ನು ಪಡೆದು ಶ್ರೀಮಂತನಾಯಿತು. ಭೌತಿಕ ವಸ್ತುಗಳನ್ನು ಕದ್ದು ತನುವಿಗೆ ಕಳ್ಳನ ಪಟ್ಟ ಲಭಿಸಿತು. ಭೌತಿಕ ವಸ್ತುಗಳಿಗಾಗಿಯೇ ರಾಜ ಮತ್ತೊಬ್ಬ ರಾಜನನ್ನು ಕೊಂದ, ಪ್ರಧಾನಿ ಸೇನಾಧಿಪತಿ ಸೈನಿಕರು ವ್ಯರ್ಥವಾಗಿ ಸತ್ತು ಹೋದರು.

ಮನ ಮತ್ತು ತನುವಿಗೆ ಭೌತಿಕ ವಸ್ತುಗಳಿಂದ ಸುಖವಾಯಿತು. ದುಃಖವೂ ಆಯಿತು. ಸುಖ ದುಃಖಗಳಿಗಾಗಿ ಇತಿಹಾಸವೇ ರಚನೆಯಾಯಿತು. ಮನ ಮತ್ತು ತನುವಿಗೆ ತನುವಿನಲ್ಲಿಯೇ ಸಂಗಮವಾದ ಅರಿವಿನ ಸಹಜ ಸುಖ ಲಭ್ಯವಾಗಲೇ ಇಲ್ಲ. ತನುವಿನ ಸ್ಥಿತಿ ನೀರೊಳಗಿದ್ದೂ ನೀರಡಿಸಿದಂತಾಯಿತು.

ತನು ಮತ್ತು ಮನದ ಸಹಜ ಸುಖಕ್ಕಾಗಿ ರಚನೆಯಾದ ಸೂತ್ರಪ್ರಧಾನವಾದ ಜ್ಞಾನಗ್ರಂಥಗಳೆಲ್ಲ ಧರ್ಮಗ್ರಂಥಗಳಾದವು. ಅವುಗಳನ್ನು ರಚನೆ ಮಾಡಿದ ತನುಗಳು, ತನುಗಳಿಗೆ ಆರಾಧ್ಯದೈವವಾದವು. ಮನ ತನುವನ್ನು ಹಿಡಿದು ಭವ್ಯವಾದ ದೇವಾಲಯಗಳನ್ನು ಮಾಡಿತು. ಬಸವ ಬುದ್ಧ ಮಹಾವೀರ ಕ್ರಿಸ್ತ ಕ್ರಿಷ್ಣ ರಾಮ ಕನಕ ಪುರಂದರ ಪೈಗಂಬರ ಮೊದಲಾದ ಶರಣರು ದಾಸವರೇಣ್ಯರು ದೇವರಾದರು.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಜ್ಞಾನವನ್ನು ಪಡೆದು ಜ್ಞಾನಿಯಾಗುವುದನ್ನು ಬಿಟ್ಟು ಜ್ಞಾನಿಯಾಗಲು ಹೇಳಿದ ಜ್ಞಾನಿಗಳನ್ನೇ ದೇವರನ್ನಾಗಿಸಿತು. ಮನಕ್ಕೆ ತನುವಿನೊಂದಿಗೆ ಭೌತಿಕ ವಸ್ತುಗಳ ಮೂಲಕ ಸುಖ ಅನುಭವಿಸುವ ಚಾಳಿ ಬಿದ್ದಿದೆ. ಆ ಸುಖ ಸಿಗದಿದ್ದರೆ ಮನ ತನುವಿಗೆ ಆತ್ಮಹತ್ಯೆ ಮಾಡಿಕೊಳ್ಳಲು ಪ್ರೇರಣೆ ನೀಡುವ ಅಜ್ಞಾನ ಕೂಡಾ ತನುವನ್ನು ಆವರಿಸಿದೆ.

ಶ್ರೀಕೃಷ್ಣ ನಾನೇ ದೇವರು ಎಂದ. ತನಗೆ ತಾನೇ 'ವಿರಾಟಸ್ವರೂಪಿ' ಎಂದು ಘೋಷಣೆ ಮಾಡಿಕೊಂಡ. ಶಂಕರಾಚಾರ್ಯರು 'ಅಹಂಬ್ರಹ್ಮಾಸ್ಮಿ' ಎಂದರು. ಹಾಗೆ ಸಕಲ ತನುಗಳು ಕೂಡಾ ವಿರಾಟಸ್ವರೂಪಿಯೇ ಆಗಿವೆ. ಬ್ರಹ್ಮವೇ ಆಗಿವೆ. ಹಾಗೆ ಹೇಳಿದ ಮಹನೀಯರ ಸೂತ್ರವನ್ನು ಕಂಡುಕೊಂಡು ಮನ ಅರಿವಿನೊಂದಿಗೆ ಸುಖಿಸುವುದನ್ನು ಬಿಟ್ಟು ಸೂತ್ರ ಹೇಳಿದ ನಿಪುಣರನ್ನೇ ದೇವರನ್ನಾಗಿ ಆರಾಧಿಸಿದರೆ ಯಾರಾದರೂ ಏನು ಮಾಡಿಯಾರು?

ತನುವಿನಲ್ಲಿಯೇ ತನ್ಮಯವಾದ ಮಾತನಾಡುವ ಅರಿವಿನ ದೇವರನ್ನು ಮರೆತು ರಾಮ, ಸೀತೆ, ರಾಧಾ, ಕ್ರಿಷ್ಣನನ್ನು ಕಲ್ಲಲ್ಲಿ ಕೆತ್ತಿ , ಕಲ್ಲಲ್ಲೇ ಆಲಯ ಮಾಡಿ, ಹೊನ್ನ ಕಳಶವಿಟ್ಟು, ರಾಮನಿಗೆ ಪಂಚೆಯನ್ನು ಸೀತೆಗೆ ಸೀರೆಯನ್ನು ಉಡಿಸಿ, ಕಲ್ಯಾಣೋತ್ಸವ ಮಾಡಿ ಆರಾಧಿಸಿದರೆ, ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರು ಗಹಗಹಿಸಿ ನಗಲಾರನೆ?

ತನು ಮನಕ್ಕೆ ಪಾಠ ಮಾಡುತ್ತಾ ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರು ದೇವರೊ? ತನುವನ್ನು ಆವರಿಸಿದ ಮನ ತನುವನ್ನು ಹಿಡಿದು ತನುವಿನಿಂದಲೇ ನಿರ್ಮಾಣ ಮಾಡಿದ ದೇವರು ದೇವರೊ? ತನುವನ್ನು ಮಾಡಿ ತನುವಿನಲ್ಲಿಯೇ ವಾಸ ಮಾಡಿದ ಅರಿವಿನ ದೇವರನ್ನು ಬಿಟ್ಟು, ತನು ಮಾಡಿದ ದೇವರನ್ನು ದೇವರೆಂದು ತನು ಆರಾಧಿಸುತ್ತಲಿದೆ.

ತನು ಮತ್ತು ಮನ, ತಾನು ಮಾಡಿದ ದೇವರನ್ನು ಆರಾಧಿಸುವುದನ್ನು ಬಿಟ್ಟು ತನ್ನನ್ನು ಮಾಡಿದ ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರನ್ನು ಆರಾಧಿಸಲು ತೊಡಗಿದಾಗಲೇ ಮನ ಘನಮನವಾಗುವುದು. ಮನ ತನ್ನ ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮನಾಗುವುದು, ವಿರಾಟಸ್ವರೂಪಿಯೇ ತಾನಾಗುವುದು.

ವೇದ ಆಗಮ ಉಪನಿಷತ್ ಭಗವದ್ಗೀತೆ ಭಾಗವತದಿಂದ ಹಿಡಿದು, ವ್ಯಾಸ ಕ್ರಿಷ್ಣ ಬುದ್ಧ ಕ್ರಿಸ್ತ ಪೈಗಂಬರ ಮಹಾವೀರ ಬಸವಾದಿ ಶರಣರು ದಾಸವರೇಣ್ಯರಿಂದ ಹಿಡಿದು, ಜಿಡ್ಡು ಕ್ರಿಷ್ಣಮೂರ್ತಿ ಆಚಾರ್ಯ ರಜನೀಶರಿಂದ ಹಿಡಿದು ಇಲ್ಲಿಯವರೆಗೆ ತನುವಿನ ಅಂತರಾಳದ ಸಂಶೋಧನೆ ಮುಂದುವರೆದಿದೆ. ತನು ಒಮ್ಮಿಲ್ಲ ಒಮ್ಮೆ ಸಹಜವಾಗುತ್ತದೆ. ಅದು ಸಹಜವಾಗಿಯೇ ಇದೆ.

ಸಹಜ ಕಾಯವೊಂದು, ಅಸಹಜ ಕಾಯವೊಂದು, ಕಾಯವೊಂದು. ಹೀಗೆ ಕಾಯದಲ್ಲಿ ಸಹಜ ಅಸಹಜ ಕಾಯಗಳೆರಡು ಇವೆ. ಸ್ಥೂಲ ಸೂಕ್ಷ್ಮ ಕಾರಣ ಕಾಯಗಳೆಂದು ಈ ಹಿಂದೆಯೇ ವಿಂಗಡಿಸಿದಂತೆ.

ಭೌತಿಕ ಜ್ಞಾನ ಉಪಜೀವನಕ್ಕೆ ಉಪಯುಕ್ತವಾದರೆ ಆಂತರಿಕ ಜ್ಞಾನ ಜೀವನಕ್ಕೆ ಉಪಯುಕ್ತವೆಂದು ಕಾಯ ನಿರ್ಧರಿಸಿದಾಗ ತನ್ನನ್ನು ತಾನೇ ಬೇರ್ಪಡಿಸಿಕೊಂಡು ಸಹಜ ಕಾಯದಲ್ಲಿ ಮನವೆಂಬ ಅಸಹಜ ಕಾಯ ಪ್ರವೇಶ ಮಾಡಿ ಪರಕಾಯ ಪ್ರವೇಶವನ್ನು ಅಧಿಕೃತವಾಗಿ ದಾಖಲಿಸುತ್ತದೆ.

ಶಂಕರಾಚಾರ್ಯರು ಭ್ರಮಾಕಾಯದೊಂದಿಗೆ ಬ್ರಹ್ಮಕಾಯಕ್ಕೆ ಪ್ರವೇಶ ಮಾಡಿ

'ಅಹಂಬ್ರಹ್ಮಾಸ್ಮಿ' ಎಂದರು. ಹಿಂಬಾಲಕರಿಗೆ ಸಾಹಿತಿಗಳಿಗೆ ಶಂಕರರು ಹೇಳಿದ್ದು ಅರ್ಥವಾಗಲಿಲ್ಲ. ತಮಗೆ ತೋಚಿದಂತೆ ಬರೆದು ಅಜ್ಞಾನಕ್ಕೆ ಜಾರಿದರು. ಶಂಕರರಂತೆ ಆಗದೆ ಶಂಕರರನ್ನು ಆರಾಧಿಸಿದರು.

ಶರಣರು ಕಾಯದಲ್ಲಿ ಅಜ್ಞಾನ ಸುಳಿಯಬಾರದೆಂದು ನಿರ್ಧರಿಸಿ ಹಿಂದಿನ ಸಕಲ ಸಂಪ್ರದಾಯಗಳನ್ನು ಕಿತ್ತೆಸೆದರು. ಗುರು-ಶಿಷ್ಯ ಪರಂಪರೆಯನ್ನು ಕಿತ್ತೆಸೆದು ತನಗೆ ತಾನೇ ಗುರು ತನಗೆ ತಾನೇ ಶಿಷ್ಯ ಎಂದು ಘೋಷಣೆ ಮಾಡಿದರು. ಕಾಯದಲ್ಲಿ ಸಂಗಮವಾದ ಅರಿವಿಗೆ ಗುರುದೇವ ಎಂದು ನಾಮಕರಣ ಮಾಡಿದರು. ಕಾಯವನ್ನು ಆವರಿಸಿದ ಮನಕ್ಕೆ ಶಿಷ್ಯ ಎಂದು ನಾಮಕರಣ ಮಾಡಿದರು.

ಅಂಗದಲ್ಲಿರುವ ಅರಿವಿಗೆ 'ಲಿಂಗ' ಎಂದು ಕರೆದು, ಮನಕ್ಕೆ 'ಶರಣ' ಎಂದು ಹೆಸರಿಟ್ಟು ಅರಿವೆಂಬ 'ಲಿಂಗ'ಕ್ಕೆ ಶರಣು ಹೋಗುವ ಕಲೆಯನ್ನು ಮನಕ್ಕೆ ತಿಳಿಹೇಳಿದರು. ಅರಿವೆಂಬ 'ಲಿಂಗ'ಕ್ಕೆ ಮನ ಸಂಪೂರ್ಣ ಶರಣಾಗತಿಯಾದಾಗ ''ಶರಣ ಸತಿ ಲಿಂಗ ಪತಿ'' ಎಂದು ತಮಗೆ ತಾವೇ ಘೋಷಿಸಿಕೊಂಡರು.

ಅರಿವಿನ ಈ ಕಾಯಕದಲ್ಲಿ ಒಂದು ಲಕ್ಷ ತೊಂಬತ್ತಾರು ಸಾವಿರ ಕಾಯಗಳು ಕಲ್ಯಾಣದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವು. ಅರಿವಿನ ಈ ಕಾಯಕಕ್ಕೆ 'ಕಾಯ' ಪ್ರಧಾನವೇ ಹೊರತು ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡುಗಳಲ್ಲ ಎಂದು ಬಸವಣ್ಣ ಮುಂತಾದ ಶರಣರು ನಿರ್ಧರಿಸಿದರು. ತನಗೆ ತಾನೆ ಜಾತಿ ಮತ ಪಂಥಗಳು ಹೆಣ್ಣು ಗಂಡು ಶ್ರೀಮಂತ ಬಡವ ಎನ್ನುವ ಅಜ್ಞಾನ ಕಾಯದಿಂದ ಉದುರಿ ಬಿದ್ದವು. ಏಳುನೂರಾ ಎಪ್ಪತ್ತು ಜನ ತಮಗೆ ತಾವೇ ''ತಾವು ಅಮರಗಣಂಗಳೆಂದು'' ''ಶರಣ''ರೆಂದು ಘೋಷಿಸಿಕೊಂಡರು. ಶಂಕರಾಚಾರ್ಯರು 'ಅಹಂಬ್ರಹ್ಮಾಸ್ಮಿ' ಎಂದು ಘೋಷಿಸಿಕೊಂಡಂತೆ! ಶ್ರೀಕೃಷ್ಣ ತನ್ನ ವಿರಾಟಸ್ವರೂಪವನ್ನು ತಾನೇ ಅರ್ಜುನನಿಗೆ ತೋರಿಸಿದಂತೆ! ಬಸವಣ್ಣ , ಸಕಲ ತನುಗಳಲ್ಲಿ ಅರಿವೆಂಬ ಗುರುದೇವ ಸಂಗಮವಾಗಿದ್ದಾನೆ ಎಂದು ಘೋಷಿಸಿದರು! ''ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ, ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವೇ, ಕೂಡಲಸಂಗಮದೇವಯ್ಯಾ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ'' ಎಂದು ತನುವಿನ ಅರಿವಿನ ಶಕ್ತಿಯನ್ನು ಅದರ ವಿರಾಟ ಸ್ವರೂಪವನ್ನು ಸಕಲ ತನುಗಳಿಗೂ ಸುಲಭವಾಗಿ ದಕ್ಕಲಿ ಎಂದು ಬಹಿರಂಗವಾಗಿಯೇ ಘೋಷಿಸಿದರು.

ಅಷ್ಟೇ ಅಲ್ಲ ಸಕಲ ತನುಗಳಲ್ಲಿ ಸಂಗಮವಾದ ವಿರಾಟಸ್ವರೂಪಕ್ಕೆ ತಾವು ಅತ್ಯಂತ ಕಿರಿಯರಾಗಿ ಕಿಂಕರರಾಗಿ 'ಎನಗಿಂತ ಕಿರಿಯರಿಲ್ಲ' ಎಂದು ಹಣೆಮಣಿದರು.

ವಿರಾಟಸ್ವರೂಪಿಯಾದ ಕ್ರಿಷ್ಣನಿಗೆ ಅರ್ಜುನ ಹಣೆಮಣಿದ. ಬಸವಣ್ಣ ಸಕಲ ತನುಗಳಿಗೂ ಹಣೆಮಣಿದು 'ಶರಣು ಶರಣಾರ್ಥಿ' ಎಂದರು. ಸಕಲ ತನುಗಳೂ ಬಸವಣ್ಣನಿಗೆ ವಿರಾಟಸ್ವರೂಪಿಯಾಗಿ ಕಂಡವು!

ಕಲ್ಯಾಣದ ಈ ಜ್ಞಾನ ಕ್ರಾಂತಿ ಅಂದಾಜು ಮೂರು ದಶಕಗಳವರೆಗೂ ನಡೆಯಿತೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಸಾಹಿತಿಗಳು ಸಂಶೋಧಕರಾದವರು ಚರಿತ್ರೆ ಮತ್ತು ಕಲ್ಪನೆಗಳಿಗೆ ಮಹತ್ವ ಕೊಡದೆ ವಚನಗಳು ಏನು ಧ್ವನಿಸುತ್ತವೆ ಎಂದು ಸಂಶೋಧನೆಯಲ್ಲಿ ತೊಡಗಿದರೆ ಸಕಲ ಕಾಯಗಳು ಮತ್ತೆ ತನ್ನ ಅಂತರಾಳದ ಅರಿವಿನ ಕಾಯಕಕ್ಕೆ ಮಹತ್ವ ಕೊಡುವುದರಲ್ಲಿ ಸಂಶಯವೇ ಇಲ್ಲ.

ಸಿದ್ಧರಾಮ ಶಿವಯೋಗಿಗಳ ಚರಿತ್ರೆ ಮುಖ್ಯವಲ್ಲ. ಜಗದ ಕಾಯಗಳಿಗಾಗಿ ಮಾಡಿದ ಅವರ ಕಾಯಕ ಶ್ರೇಷ್ಠ. ಅವರ ಶ್ರಮ ಶ್ರೇಷ್ಠಾತಿ ಶ್ರೇಷ್ಠ.

ಸಿದ್ಧರಾಮ ಶಿವಯೋಗಿಗಳ ವಚನಗಳನ್ನು ಮಹಾಸಂಪುಟದ ಸಿದ್ಧರಾಮೇಶ್ವರ ವಚನ ಸಂಪುಟದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಒಟ್ಟು 1965 ವಚನಗಳು ಇವೆ. ಕಾಂಡ ಒಂದರಲ್ಲಿ 1162 ವಚನಗಳು, ಕಾಂಡ ಎರಡರಲ್ಲಿ 803 ವಚನಗಳಿವೆ. ಕಾಂಡ ಒಂದರಲ್ಲಿಯ 1 ರಿಂದ 500 ವಚನಗಳನ್ನು ತೆಗೆದುಕೊಂಡು ಸದ್ಗುರು ಶ್ರೀ ವಿದ್ಯಾನಂದರು ನುಡಿಸಿದಂತೆ ಅನುಭಾವ ಮಾಡಲಾಗಿದೆ.

ಯಾವ ಕಾಯಗಳಿಗೂ ನೋವುಂಟು ಮಾಡುವ ಉದ್ದೇಶ ಈ ಪುಸ್ತಕದಲ್ಲಿ ಇಲ್ಲ. ಕಾಯವನ್ನು ಆವರಿಸಿದ ಮನವೆಂಬ ಮಾಯೆ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಸೇವಕನಾಗಿ ಆ ಗುರುದೇವನೇ ತಾನಾಗುವ ಬಯಕೆಯಿಂದ ಬಂದ ಮಾತುಗಳು ಸೂತ್ರಗಳೇ ಹೊರತು ಮತ್ತೇನೂ ಅಲ್ಲವೆಂದು ಓದುಗರಿಗೆ ಈ ಮೂಲಕ ಖಚಿತವಾಗಿ ಹೇಳಲು ಇಚ್ಛಿಸುವೆ.

ಈ ಪುಸ್ತಕದ ಮುದ್ರಣ ಸೇವೆಯಲ್ಲಿ ಭಾಗಿಯಾದ ಶರಣದಂಪತಿಗಳಾದ ಶರಣೆ ಶ್ರೀಮತಿ ಅಮರಮ್ಮ ಮತ್ತು ಶರಣ ಶ್ರೀ ಮಾನಪ್ಪ ವಜ್ಜಲ್ ಮಾಜಿ ಶಾಸಕರು ಲಿಂಗಸೂಗೂರು ಅವರಿಗೆ ಶರಣು ಶರಣಾರ್ಥಿ.

**ಬಸವರಾಜ ಸ್ವಾಮಿ**
ಸಂಪಾದಕರು
ಸುದ್ದಿಮೂಲ ಕನ್ನಡ ದಿನ ಪತ್ರಿಕೆ
ರಾಯಚೂರು

# ಮುದ್ರಣ ಸೇವೆ

ಶರಣ ದಂಪತಿಗಳಾದ



**ಶರಣೆ ಶ್ರೀಮತಿ ಅಮರಮ್ಮ ಶರಣ ಶ್ರೀ ಮಾನಪ್ಪ ವಜ್ಜಲ್**

ಮಾಜಿ ಶಾಸಕರು ಲಿಂಗಸೂಗೂರು ಜಿಲ್ಲಾ: ರಾಯಚೂರು

## ಬಸವಯುಗದ ವಚನ ಮಹಾಸಂಪುಟ-1
## ಸಿದ್ಧರಾಮೇಶ್ವರ ವಚನ ಸಂಪುಟದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ

**1**

**ಅಂಕುಸದರಳಿನ ಸಂಪಗೆಯ ಹುವ್ವಿನ ಕಂಪು!**
**ಇತ್ತಲಿತ್ತ ಬಿಜಯಂಗೈಯದಿರು ಶಿವನೆ!**
**ಅರಿಯಾ ಮಗನೆ! ಮಲೆಯ ಮಲ್ಲಯ್ಯ ನಿನಗೆಂದು ಬಂದುದನು.**
**ನೀವು ಭಕ್ತರಂಗಳದಲ್ಲಿ ಆಡುವ**
**ತೊತ್ತಿನ ವೋಹಿಯ ಮಗನೆಂದು ಬಂದಿರಿ ಶಿವನೆ!**
**ಕಪಿಲಸಿದ್ಧ ಮಲ್ಲಿಕಾರ್ಜುನ!**

ಅಂಕುಸದರಳಿನ ಸಂಪಗೆಯ ಹುವ್ವಿನ ಕಂಪು :

ಅಂಕುಶದಲ್ಲಿ ಹೂವು ಅರಳಿದೆ. ಸಂಪಗೆಯ ಕಂಪು ಬೀರುತ್ತಲಿದೆ. ಅದನ್ನು ಆನಂದದಿಂದ ಆಸ್ವಾದಿಸುತ್ತಿದ್ದಾನೆ ಶರಣ. ಇದನ್ನು ಮತ್ತೊಬ್ಬ ಶರಣ ಮಾತ್ರ ಬಲ್ಲ. ಶರಣನಲ್ಲದೆ ಮತ್ಯಾರಿಗೂ ಈ ಪರಿಮಳದ ವಿಷಯ ತಿಳಿಯದು.

ಶರಣನೆಂದರೆ ಜ್ಞಾನಿ! ತನ್ನ ಜ್ಞಾನಕ್ಕೆ ತಾನೇ ಶರಣು ಹೋದವನು. ಅದರ ಪರಿಮಳವನ್ನು ಹೀರುತ್ತಾ ಮೈಮರೆತವನು.

ಸ್ಥೂಲ ತನು, ಸೂಕ್ಷ್ಮ ತನು, ಕಾರಣ ತನು; ಹೀಗೆ ತನುಗಳು ಮೂರು ಕೂಡಿ ಒಂದು ತನುವಾಗಿದೆ. ಸೂಕ್ಷ್ಮ ತನುವಿನ ಮೂಲಕ ಜ್ಞಾನ (ಕಾರಣ) ತನುವಿಗೆ ಪಲ್ಲಟಗೊಂಡು ಸ್ಥೂಲ ತನುವಿನಲ್ಲಿ ಸಂಗಮವಾಗುವುದೇ ಮೂರೊಂದಾದ ಘನ. ಇದು ಘಟಿಸದ ಹೊರತು ತನು ಜ್ಞಾನ ತನುವಲ್ಲ. ತನುವಿನ ರೂಪದಲ್ಲಿದ್ದ ಮದ್ದಾನೆ. ಇದರಲ್ಲಿ ಸಂಪಿಗೆ ಮೊಗ್ಗಿದೆ; ಅರಳುವುದಿಲ್ಲ.

ಮದ್ದಾನೆಯನ್ನು ಅಂಕುಶ ಹಿಡಿದ ಮಾವುತ ಮಾತ್ರ ನಡೆಸಬಲ್ಲ. ಅದು ತಾನಾಗಿಯೇ ಸುಂದರವಾಗಿ ನಡೆಯದು. ಅಂಕುಶವಿದ್ದು ಮಾವುತ ಇಲ್ಲದಿದ್ದರೆ ನಡೆಯದು. ಹಾಗೆಯೇ ತನುವಿದೆ; ತನುವಿನಲ್ಲಿ ಜ್ಞಾನ ತನುವೊಂದಿದೆ; ಈ ಜ್ಞಾನವನ್ನು ಜಾಣತನದಿಂದ ಬಳಸಿಕೊಳ್ಳುವ ಮನವೆಂಬ ಜಾಣ ತನುವೊಂದಿದೆ. ಇದರ ಸಹಾಯದಿಂದ ಜ್ಞಾನವನ್ನು ಬಳಸಿಕೊಳ್ಳದಿದ್ದರೆ ಅದು ತನುವಲ್ಲ; ಮನದ ತನು; ರಕ್ಕಸ ತನು!

ಜ್ಞಾನ ಬಳಸಿಕೊಳ್ಳದ ತನು; ತನುವಿನಿಂದಲೇ ಕಳ್ಳ, ಗೂಂಡಾ, ಭ್ರಷ್ಟಾಚಾರಿ, ವಿಷಯ ಲಂಪಟ, ಮೋಸಗಾರ, ವಿಟ, ವೇಶ್ಯೆ, ಹಾದರಿಗ ಎಂದು ಕರೆಯಿಸಿಕೊಳ್ಳುತ್ತದೆ. ತನುವನ್ನು ಹೀಗೆ ಕರೆಯುವ ತನುಗಳು ಕೂಡಾ ಅಜ್ಞಾನಿ ತನುಗಳೇ ಆಗಿವೆ.

ತನು, ತನುವನ್ನು ಅಜ್ಞಾನಿ ಎಂದು ಕರೆಯುವುದೆಂದರೇನು? ತನುವಿನಲ್ಲಿ ಸಂಗಮವಾದ ಜ್ಞಾನದರ್ಶನ ತನುವಿಗೆ ಆಗಿಲ್ಲವೆಂದೇ ಅರ್ಥ. ಸಸಿಯಲ್ಲಿ ಗುಲಾಬಿ ಅರಳದಿದ್ದರೇನಾಯಿತು? ಆ ಸಸಿಯನ್ನು ಬೇರೆ ಹೆಸರಿನಿಂದ ಕರೆಯಲು ಸಾಧ್ಯವೆ? ಗುಲಾಬಿ ಹೂ ಸಸಿಯಲ್ಲಿ ಸಂಗಮವಾಗಿದೆ. ಬೇರು ಕಾಂಡ ಮುಳ್ಳು ಎಲೆಗಳಲ್ಲಿ ಸಂಗಮವಾಗಿದೆ. ಸಸಿ ಪ್ರೌಢಾವಸ್ಥೆಗೆ ಬಂದಾಗ ಗುಲಾಬಿ ಹೂ ಅರಳುತ್ತದೆ. ಅಂತೆಯೇ ಸಕಲ ತನುಗಳಲ್ಲಿ ಜ್ಞಾನದ ಸಂಪಿಗೆಯ ಹೂ ಅರಳಿ ಅರಿವಿನ ಪರಿಮಳ

ಬೀರಬೇಕಾಗಿತ್ತು; ಆದರೆ ಬೀರುವುದಿಲ್ಲ.

ಮನದ ತನುವಿನ ಮೂಲಕ ಜ್ಞಾನದ ತನುವಿಗೆ ಪರಕಾಯ ಪ್ರವೇಶ ಮಾಡಿ ಸ್ಥೂಲ ತನುವಿನಲ್ಲಿ ಸಂಗಮಗೊಂಡು, ಜ್ಞಾನದ ಸಂಪಿಗೆಯ ಕಂಪು ಬೀರಬೇಕು. ಕಾಯದ ಈ ಕಾಯಕ ಕಾಯದಲ್ಲಿಯೇ ಘಟಿಸಬೇಕು. ಈ ಕಾಯಕ ಬಲು ಜಟಿಲ. ಮಾವುತ ಅಂಕುಶ ಹಿಡಿದು ಮದ್ದಾನೆಯನ್ನು ಪಳಗಿಸಿದಂತೆ! ಕಾಯದಲ್ಲಿ ಈ ಕಾಯಕ ಘಟಿಸಿದರೆ ಅಂಕುಶದಲ್ಲಿ ಅರಳಿದ ಸಂಪಿಗೆಯ ಹೂವಿನ ಕಂಪಿನಂತೆ. ಅರಿವಿನ ಪರಿಮಳದಂತೆ. ಮಾತನಾಡುತ್ತಾ ನಡೆದಾಡುವ ಅರಿವಿನ ಸೊಬಗು ಬೋಧೀ ವೃಕ್ಷದಂತೆ!

ಇತ್ತಲಿತ್ತ ಬಿಜಯಂಗೈಯದಿರು ಶಿವನೆ ! :

ತನುವೆಂದರೆ ಸಿದ್ಧಾರ್ಥನದೂ ಹೌದು, ಅಂಗುಲಿಮಾಲನದೂ ಹೌದು, ವರ್ಧಮಾನನದೂ ಹೌದು, ಬುದ್ಧನದೂ ಹೌದು. ಮಹಾವೀರನದೂ ಹೌದು!

ತನುವಿನಲ್ಲಿ ಬುದ್ಧನೂ ಇದ್ದಾನೆ; ಅಂಗುಲಿಮಾಲನೂ ಇದ್ದಾನೆ, ಸಿದ್ಧಾರ್ಥನೂ ಇದ್ದಾನೆ. ಅಂಗುಲಿಮಾಲನಿದ್ದ ತನುವಿನಲ್ಲಿ ಬುದ್ಧನಿದ್ದರೂ ಬುದ್ಧನ ಪರಿಚಯ ಅಂಗುಲಿಮಾಲನಿಗೆ ಇಲ್ಲ. ಅಂಗುಲಿಮಾಲ ಪರಕಾಯ ಪ್ರವೇಶ ಮಾಡಿ ಬುದ್ಧನಾದ ಮೇಲೆ ಅಂಗುಲಿಮಾಲನಿಗೆ ಆ ತನುವಿನಲ್ಲಿ ಅವಕಾಶವಿಲ್ಲ. ಬುದ್ಧನೆಂದರೆ ಶಿವ; ಮಹಾಜ್ಞಾನಿಯಾತ.

ಅಂಗುಲಿಮಾಲನಿರುವ ಈ ಕಾಯದಲ್ಲಿ ಹೇಗಿದ್ದೆ ಪ್ರಭುವೆ? ಇತ್ತ ಬಿಜಯಂಗೈಯದಿರು ಶಿವನೆ! ಈ ಜಾಗ ನಿನಗೆ ಸೂಕ್ತವಲ್ಲ ಎಂದು ಅಂಗುಲಿಮಾಲ ಸತ್ತಮೇಲೆ ಬುದ್ಧನಾಡುವ ಮಾತಿದು. ಅರವಟ್ಟಿಗೆ, ಕೆರೆ, ದೇವಾಲಯಗಳನ್ನು ಕಟ್ಟಿಸಿದ ಅಹಂಕಾರಿ ವಡ್ಡರಾಮ ಇಲ್ಲವಾದ ಮೇಲೆ ಮಹಾಜ್ಞಾನಿ ಸಿದ್ಧರಾಮ ಶಿವಯೋಗಿ ಆಡಿದ ಮಾತಿದು. ಅಂಕುಶದಲ್ಲಿ ಅರಳಿದ ಸಂಪಿಗೆಯ ಹೂವಿನ ಕಂಪಿನ ಮಾತು. ಮಾತನಳಿಯುವ ಜ್ಞಾನದ ಮಾತು. ಮಾತಲ್ಲದ ಮಾತು.

ಅರಿಯಾ ಮಗನೆ! ಮಲೆಯ ಮಲ್ಲಯ್ಯ ನಿನಗೆಂದು ಬಂದುದನು:

ತನುವೆಂಬುದು ಅರಿವಿನ ಮನೆ. ಇದರ ಒಡೆಯ ಅರಿವಿನ ಮಲ್ಲಯ್ಯ. ಈ ಮನೆಯನ್ನು ಮನವೆಂಬ ಅಜ್ಞಾನಿ ಆವರಿಸಿಕೊಂಡಿದ್ದಾನೆ. ಈತ ಅರಿವಿನ ಮಲ್ಲಯ್ಯನನ್ನು ಅರಿಯುತ್ತಿಲ್ಲ. ಅರಿಯದ ಮಗನ ಕಿವಿ ಹಿಂಡಿ, ಅರಿಯಾ! ಎಲೆ ಮಗನೆ; ಮಲೆಯ ಮಲ್ಲಯ್ಯ ನಿನಗೆಂದು ಬಂದಿದ್ದಾನೆ. ನಿನ್ನ ಉದ್ಧಾರಕ್ಕೆಂದು ಬಂದಿದ್ದಾನೆ. ನಿನ್ನನ್ನು ತನ್ನ ವಾರಸುದಾರನನ್ನಾಗಿಸಿಕೊಳ್ಳಲು ಬಂದಿದ್ದಾನೆ. ನೀನು ನಿನ್ನ ತಂದೆಯನ್ನು ಅರಿತರೆ ಸಾಕು. ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು, ನೀನಲ್ಲದೆ ಮತ್ತಾರೂ ಇಲ್ಲವೆಂದು ಕೂಗಿ ಕರೆದರೆ ಸಾಕು; ಅರಿವಿನ ಸಂಪತ್ತನ್ನೆಲ್ಲ ನಿನಗೆ ಧಾರೆ ಎರೆಯುತ್ತೇನೆ ಎಂದು ತಿಳಿಸಲು ಬಂದ ಅರಿವಿನ ಮಲ್ಲಯ್ಯನಾತ. ನಿನಗೆಂದೇ ಬಂದವನು ಆತ!

ನೀವು, ಭಕ್ತರಂಗಳದಲ್ಲಿ ಆಡುವ ತೊತ್ತಿನ ವೋಹಿಯ ಮಗನೆಂದು ಬಂದಿರಿ ಶಿವನೆ!

ಹೌದು! ತನುವೆಂಬುದು ಅರಿವಿನ ಶಿವ ನಡೆದಾಡುವ ಅಂಗಳ! ತನುವನ್ನು ಆವರಿಸಿದ ಮನಕ್ಕೆ ಅರಿವೆಂಬ ಶಿವ ಪರಿಚಯವಿಲ್ಲದಿದ್ದರೆ ತನುವನ್ನೇ ತನ್ನ ಸುಖಕ್ಕಾಗಿ ವೇಶಿಯನ್ನಾಗಿಸುತ್ತದೆ. ದಾಸಿಯನ್ನಾಗಿಸುತ್ತದೆ. ವಿಟ ಕಳ್ಳ ಭ್ರಷ್ಟಾಚಾರಿ ವಿಷಯ ಲಂಪಟ ಎಂದು ಹಣೆಪಟ್ಟಿ ಹಚ್ಚಿಕೊಂಡು ಕರೆಯಿಸಿಕೊಳ್ಳುತ್ತದೆ. ವಿಟ ಕಳ್ಳ ವೇಶಿ ದಾಸಿ ಹಾದರಿಗ ಎಂದು ಕರೆಯಿಸಿಕೊಂಡ ತನು ಒಮ್ಮೆ ಇಲ್ಲವಾಗುತ್ತದೆ. ತನುವಿನಲ್ಲಿ ತನ್ಮಯವಾದ ಅರಿವಿನ ಶಿವನನ್ನೇ ಮರೆತ ಮನ

ಅಜ್ಞಾನದ ಜನ್ಮಕ್ಕೆ ಅಂತ್ಯ ಹಾಡುತ್ತದೆ.

ಇದೆಲ್ಲ ಘಟಿಸುವ ಮುನ್ನ ನೀನು ನನ್ನ ಅಂಗವನ್ನೇ ನಿನ್ನ ಅಂಗಳ ಮಾಡಿಕೊಂಡು ತೊತ್ತು ವೇಶಿಯ ಮಗನೆಂದು ಬಂದು ಎನ್ನ ಕೈಹಿಡಿದು ಹರಿಸಿದಿರಿ ಶಿವನೆ! ಏನೊಂದೂ ತಿಳಿಯದ ಕಪಿಲೆಯನ್ನು ಸಿದ್ಧನನ್ನಾಗಿಸಿದಿರಿ ತಂದೆ. ಅಂಕುಶದಲ್ಲಿ ಸಂಪಿಗೆಯನ್ನು ಅರಳಿಸಿ ಹೂವಿನ ಜ್ಞಾನದ ಕಂಪು ಬೀರಿದಿರಿ ತಂದೆ; ಮಲ್ಲಿಕಾರ್ಜುನನೆ; ಮನೆಯ ಮಲ್ಲಯ್ಯನೆ ಎನಗಾಗಿ ಬಂದಿರಿ ತಂದೆ ಎಂದು ಸಿದ್ಧರಾಮ ಶಿವಯೋಗಿಗಳು ಅರಿವಿನ ಶಿವನನ್ನು ಕುರಿತು ಮೈಮರೆತು ಹಾಡಿದ್ದಾರೆ.

**2**

**ಅಂಗ ಲಿಂಗದಲ್ಲಿ ಎನ್ನ ಅಂಗವಿಸದಂತೆ ಇರಿಸಯ್ಯಾ**
**ಅಯ್ಯಾ ಸಂಗ ಸಂಗಸುಖದಲ್ಲಿ ಬಳಲಿಸದೆ,**
**ಅಂಗವನೆ ಈಯಯ್ಯಾ**
**ಕಾರುಣ್ಯಾಕರನೆ, ಕಪಿಲಸಿದ್ಧಮಲ್ಲಿನಾಥಯ್ಯಾ**
**ನಿಮ್ಮ ಸಂಗವ ಹಿಂಗದಂತಿರಿಸು.**

ಕೆಲವು ಅಂಗ ಲಿಂಗ ಹಿಡಿದಿವೆ. ಕೆಲವು ಅಂಗ ಸಿಲುಬೆ ಹಿಡಿದಿವೆ. ಕೆಲವು ಅಂಗ ಜನಿವಾರ ಹಿಡಿದಿವೆ. ಕೆಲವು ಅಂಗ ಜುಟ್ಟು ಬಿಟ್ಟು ನಾಮ ಬಳಿದಿವೆ. ಕೆಲವು ಅಂಗ ಗಡ್ಡ ಬಿಟ್ಟು ನಿಲುವಂಗಿ ಧರಿಸಿ ಪ್ರಾರ್ಥನೆ ಗೈಯ್ಯುತ್ತಲಿವೆ. ಅವು ಹಾಗೆ ಮಾಡೆಂದು ಮರೆವಿನ ಅರಿವು ನುಡಿದು ನೀವು ನಿರೂಪಿಸುತ್ತಿರುವುದರಿಂದ ಹಾಗೆ ಮಾಡುತ್ತಲಿವೆ. ತಮ ತಮಗೆ ತಿಳಿದಂತೆ ಮಾಡಲು ಅಂಗಕ್ಕೆ ಸ್ವತಂತ್ರವುಂಟೇ? ಅಂಗದ ಧರ್ಮ ಅಂಗಕ್ಕೆ ಬೋಧಿಸುವುದರಿಂದ ಅಂಗ ಹಾಗೆ ಮಾಡುತ್ತಲಿದೆ. ಅಂಗಕ್ಕೆ ಸ್ವತಂತ್ರವಿಲ್ಲ. ಅಂಗ, ಅಂಗದ ಧರ್ಮದ ಆದೇಶ ಪಾಲಿಸುತ್ತಲಿದೆ. ಅಂಗಕ್ಕೆ ಮತ್ತೊಂದು ಅಂಗ ಬೋಧಿಸಿದರಾಗದು. ಅಂಗದ ಧರ್ಮವೇ ಅಂಗಕ್ಕೆ ಬೋಧಿಸಬೇಕು.

ಅಂಗದಲ್ಲಿ ಅಂಗದ ಧರ್ಮವಿದೆ. ಅಂಗದ ಧರ್ಮ ಅಂಗವನ್ನು ಮರೆಯಿಸಿ ಲಿಂಗ ಪೂಜಿಸಲು ಹೇಳಿದುದಕ್ಕಾಗಿ ಅಂಗ ಲಿಂಗ ಪೂಜಿಸಿತು. ಹಾಗೆಯೇ ಸಿಲುಬೆ ಧರಿಸಿ ಪ್ರಾರ್ಥಿಸಲು ಹೇಳಿದುದಕ್ಕಾಗಿ ಪ್ರಾರ್ಥಿಸಿತು. ಜನಿವಾರ ಧರಿಸಿ ಸಂಧ್ಯಾವಂದನೆ ಮಾಡಲು ಹೇಳಿದುದಕ್ಕಾಗಿ ಮಾಡಿತು. ಏಕೆಂದರೆ ಅಂಗ ಸ್ವತಂತ್ರವಲ್ಲ.

ಕಣ್ಣಿನಲ್ಲಿ ಕಣ್ಣಿನ ಧರ್ಮವೊಂದಿದೆ. ನೋಡುವುದು ಕಣ್ಣಿನ ಧರ್ಮ. ತನ್ನ ಧರ್ಮವನ್ನು ತಾನೇ ಮರೆಯಿಸಿ ನೋಡುವುದಕ್ಕೆ ಹೇಳಿತು. ನೋಡಿ ಭೋಗಿಸಿ ಹಾದರ ಮಾಡುವುದಕ್ಕೆ ಹೇಳಿತು. ಪುನಃ ತಾನು ನೋಡಿದ್ದು ತಪ್ಪೆಂದು ತನಗೆ ತಿಳಿಯುವಂತೆ ಹೇಳಿತು. ನೋಡಿದಾಗ ಸಹಕರಿಸಿತು. ನೋಡಿ ಸುಖಿಸಿ ಹಾದರ ಮಾಡುವಾಗ ಸಹಕರಿಸಿತು. ನಂತರ ಎಚ್ಚರಿಸಿತು. ಶಪಿಸಿತು. ಕಣ್ಣಿನ ಧರ್ಮ ಕಣ್ಣಿಗೆ ಪಾಲನೆ ಮಾಡದಂತೆ ಮಾಡಿತು.

ಕಣ್ಣು ನೋಡಿ ಹಾದರ ಮಾಡುವಾಗ ತಾನೇ ಧರಿಸಿದ ಲಿಂಗ ಜನಿವಾರ ಸಿಲುಬೆಗಳು ಅಡ್ಡಿಪಡಿಸಲಿಲ್ಲ. ಬಿಟ್ಟ ಜುಟ್ಟು ಗಡ್ಡ, ಧರಿಸಿದ ನಿಲುವಂಗಿಗಳು ಅಡ್ಡಿಪಡಿಸಲಿಲ್ಲ. ಪ್ರಾರ್ಥಿಸಿದ ಪ್ರಾರ್ಥನೆಗಳು ಸಂಧ್ಯಾವಂದನೆಗಳು ಮಾಡಿದ ಪೂಜೆಗಳು ಹಾದರಕ್ಕೆ ತಡೆವೊಡ್ಡಲಿಲ್ಲ. ಹಿಂದು ಮುಸಲ್ಮಾನ ಕ್ರೈಸ್ತ ಜೈನ ಬೌದ್ಧ ಫಾರ್ಸಿ ಧರ್ಮಗಳು ಅಂಗ ಮಾಡುವ ಹಾದರಗಳನ್ನು ತಡೆಯಲಿಲ್ಲ. ಇದು ಅಂಗದಲ್ಲಿಯೇ ಸಂಗಮವಾದ ಅಂಗದ ಧರ್ಮದ ಲೀಲೆಯೆಂದು ಅಂಗಕ್ಕೆ

ತಿಳಿಯಲಿಲ್ಲ. ಅಯ್ಯಾ ಅಂಗಗಳ ಸಂಗ ಸುಖದಲ್ಲಿ ಅಂಗವನ್ನು ಬಳಲಿಸದೆ ಅಂಗದ ಅರಿವನ್ನು ಅಂಗಕ್ಕೆ ಈಯಯ್ಯಾ.

ಅಂಗ ರೂಪವುಳ್ಳದ್ದಾದರೆ ಅದರ ಧರ್ಮ ನಿರೂಪ! ಅಂಗ ಒಂದೇ. ಅಂಗದ ಧರ್ಮವೂ ಒಂದೇ. ಅಂಗದಲ್ಲಿ ಒಡಮೂಡಿದ ಕಣ್ಣು ಕಿವಿ ಮೂಗು ನಾಲಗೆ ಚರ್ಮ ಕೂಡಾ ಒಂದೇ. ಅದರ ಭಾವ ಒಂದೇ. ಅದರ ಮನ ಒಂದೇ. ಅದರ ದುರ್ಭಾವ ಒಂದೇ. ಅದರ ನಿರ್ಭಾವ ಕೂಡಾ ಒಂದೇ. ಆದರೂ ಅಂಗವನ್ನು ಅಂಗವೇ ಹೆಣ್ಣೆಂದು ಕರೆದು ತಾನು ಗಂಡಾಗಿ ನೋಡುತ್ತದೆ. ಗಂಡೆಂದು ಕರೆದು ತಾನು ಹೆಣ್ಣಾಗಿ ನೋಡುತ್ತದೆ.

ಕಣ್ಣು ರೂಪವಾದರೆ ಅದರ ನೋಟ ನಿರೂಪ. ನೀವು ಕೊಟ್ಟ ರೂಪ ನಿಮಗೇ ಹುಸಿಯಾಗಬೇಕೆ? ಕಾರುಣ್ಯಾಕರನೇ ಕಪಿಲಸಿದ್ಧ ಮಲ್ಲಿಕಾರ್ಜುನನೇ, ಕಣ್ಣು ಹೆಣ್ಣೂ ಅಲ್ಲ; ಗಂಡೂ ಅಲ್ಲ ಎಂದು ನಿನಗೆ ತಿಳಿದಿಲ್ಲವೇ? ಕಣ್ಣಲ್ಲಿ ಸಂಗಮವಾದ ನಿರೂಪ ಕೂಡಾ ಹೆಣ್ಣು ಅಲ್ಲ ಗಂಡೂ ಅಲ್ಲ. ಅದು ಸಾಕ್ಷಾತ್ ಅರಿವು; ಲಿಂಗ; ಅದು ಕಣ್ಣಿನ ಧರ್ಮವೂ ಹೌದು. ಅದು ಮುಸಲ್ಮಾನ ಹಿಂದೂ ಕ್ರಿಶ್ಚಿಯನ್ ಜೈನ ಬೌದ್ಧ ಅಲ್ಲ ಎಂಬ ಮಾಹಿತಿಯನ್ನು ಏಕೆ ದೂರಮಾಡಿದೆ?

ಕಣ್ಣಲ್ಲಿ ಕಿವಿ ಮೂಗು ಚರ್ಮ ನಾಲಗೆಯಲ್ಲಿ ಹಾಗೂ ಸರ್ವಾಂಗದಲ್ಲಿ ಸಂಗಮವಾದ ಅಂಗದ ಧರ್ಮವನ್ನು ಅರಿವನ್ನು ಏನನ್ನಾದರೂ ಹೆಸರಿಟ್ಟು ಕರೆಯಲು ಸಾಧ್ಯವೆ? ಹಿಂದೆ ಅಂಗದಲ್ಲಿಯೇ ಸಂಗಮವಾದ ನೀವೇ ಧರಿಸಿದ ನಿರೂಪ ನಿಮಗೇ ಹುಸಿಯಾಗಿತ್ತಾಗಿ; ಅಂಗದ ಮೇಲೆ ಮತ್ತೊಂದು ಧರ್ಮದ ವಸ್ತುವನ್ನು ಧರಿಸಲು ನೀವೇ ನಿಮ್ಮಿಂದಲೇ ಪ್ರೇರಣೆ ದೊರೆಯಿತ್ತಾಗಿ ನೀವು ಹೇಳಿದಂತೆ ಮಾಡಿದೆ. ಇನ್ನು ಮುಂದೆ ನಿಮ್ಮ ಸಂಗವನ್ನು ಹಿಂಗದಂತೆ ಇರಿಸಿ ನಡೆಸು ಕಪಿಲಸಿದ್ಧ ಮಲ್ಲಯ್ಯ.

3

**ಅಂಗದಲ್ಲಿ ಲಿಂಗ! ಆ ಲಿಂಗ ಧ್ಯಾನದಲ್ಲಿಪ್ಪ**
**ಒಡಲೊಡವೆ ಒಡೆಯರಿಗೆಂಬ;**
**ಮಾಡಿ ಮನದಲ್ಲಿ ಹೊಳೆಯದೆ ಬಾಳೆ ಫಲದಂತಿಪ್ಪ**
**ಮಾತಿನ ಬಟ್ಟೆಗೆ ಹೋಗದ; ಸೂತಕಶ್ರುತವ ಕೇಳದ;**
**ಸದ್ಭಕ್ತರ ನೆನೆವುದೆ ಮಂತ್ರವಯ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಸ್ಥೂಲಾಂಗದಲ್ಲಿ ಲಿಂಗಾಂಗ! ಅಂದರೆ ಸ್ಥೂಲಾಂಗ ಒಂದು; ಈ ಅಂಗದಲ್ಲಿ ಅರಿವಿನ ಅಂಗ ಒಂದು, ಸ್ಥೂಲಾಂಗವನ್ನು ಆವರಿಸಿದ ಮನೋ ಅಂಗ ಒಂದು. ಈ ಅಂಗ ಸದಾ ಅರಿವಿನ ಅಂಗದ ಧ್ಯಾನದಲ್ಲಿ ಮಗ್ನವಾಗಿರಬೇಕು. ಸ್ಥೂಲಾಂಗ ಅರಿವಿನ ಅಂಗದ ಒಡವೆ. ಅರಿವಿನ ಲಿಂಗಯ್ಯನೆ ಸ್ಥೂಲಾಂಗದ ಒಡೆಯ!

ಮನವೆಂಬುದು ಭಕ್ತನಾಗಿ, ದಾಸನಾಗಿ, ಕಿಂಕರನಾಗಿ ಸದಾ ಅರಿವೆಂಬ ಲಿಂಗಯ್ಯನ ಸೇವೆಯಲ್ಲಿ ನಿರತನಾಗಿರಬೇಕು. ಆ ಅರಿವಿಗೆ ಶರಣು ಹೋಗಿ ಶರಣನಾಗಬೇಕು. ಮಾಡಿದೆನೆಂಬುದು ಮನದಲ್ಲಿ ಹೊಳೆಯದಿದ್ದರೆ ಬಾಳೆಯ ಫಲದಂತೆ ಮತ್ತೊಮ್ಮೆ ಹುಟ್ಟುವುದಿಲ್ಲ.

ಅಂಗದಲ್ಲಿ ಅರಿವು ಸಂಗಮವಾಗಿದೆ. ಮನ ಮರೆತು ಅರಿವನ್ನು ಸಂಗ್ರಹ ಮಾಡಿಕೊಳ್ಳುತ್ತದೆ. ಅರಿವೆಂದರೆ ಬರೀ ಪುಸ್ತಕದಿಂದ ಬಂದುದೊಂದೇ ಅಲ್ಲ. ಹೊರಗಿನ ಸಕಲ ನೈಪುಣ್ಯಗಳನ್ನು ಅರಿವೆಂದು ಭ್ರಮಿಸಿ ಸಂಗ್ರಹಿಸಿಕೊಳ್ಳುತ್ತದೆ. ಸಂಗ್ರಹಿಸಿಕೊಂಡುದೆಲ್ಲವೂ ಅರಿವಿನ ಲಿಂಗಯ್ಯನೆಂಬ ಅಂಗಕ್ಕೆ ಅರ್ಪಣೆ ಮಾಡುವ ಕಲೆ ಮನಕ್ಕೆ ಬಂದಾಗ ಮನ ಘನಮನವಾಗುತ್ತದೆ. ಅರ್ಪಣೆ ಮಾಡಿದುದೆಲ್ಲ ಜೀರ್ಣವಾಗಿ ಸ್ಥೂಲಾಂಗಕ್ಕೆ ಪ್ರಸಾದವಾಗುತ್ತದೆ. ಮನ ಇತರರಿಂದ ಪಡೆದುದು ತನ್ನದಾಗುತ್ತದೆ. ಮನದಲ್ಲಿ ಹೊಳೆಯದೆ ಬಾಳೆಯ ಫಲವಾಗುತ್ತದೆ.

ಮನ ಮಾತಿನ ಬಟ್ಟೆಗೆ ಹೋಗುವುದಿಲ್ಲ. ಕೇಳಿದುದು ಕಿವಿಗೆ ಸೂತಕವಾಗುವುದಿಲ್ಲ. ಏಕೆಂದರೆ ಕೇಳಿದುದು, ನೋಡಿದುದು, ಮುಟ್ಟಿದುದು, ಮೂಸಿಸಿದುದು, ರುಚಿಸಿದುದೆಲ್ಲ ಅರಿವಿನ ಅಂಗಕ್ಕೆ ಎಡೆಯಾಗುತ್ತದೆ. ನಂತರ ಮನ ಬಳಸುತ್ತದೆ.

ಅರಿವಿನ ಈ ಶಿಕ್ಷಣದಲ್ಲಿ ಸದಾ ನಿರತರಾದ ಸದ್ಭಕ್ತರ ಸಂಗದಲ್ಲಿ ಕಾಲ ಕಳೆಯುತ್ತ, ನೆನೆಯುತ್ತ ಮನ ಮಗ್ನವಾಗಿ ಘನ ಮನವಾಗುವುದೇ ಮನಕ್ಕೆ ಮಂತ್ರವಾಗುತ್ತದೆ.

ಅಂಗದಲ್ಲಿಯೇ ಸಂಗವುವಾದ ಅರಿವೆಂಬ ಲಿಂಗಯ್ಯನನ್ನು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎಂದು ಹೆಸರಿಟ್ಟಿದ್ದಾರೆ. ಸದಾ ಆತನ ಧ್ಯಾನದಲ್ಲಿದ್ದು ಆತನನ್ನೇ ಒಡೆಯಾ ಎಂದು ಕೂಗಿ ಕರೆದು ಒಡಲನ್ನು ಒಡೆಯನಿಗೆ ಅರ್ಪಿಸಿ ಒಡಲೊಡೆಯನ ಬೆಳಕನ್ನು ಕಂಡು ಬೆಳಕಿಂಗೆ ಬೆಳಕಾಗಿ ಬೆಳಕಿನತ್ತ ಪಯಣಿಸು ಮಾತಲ್ಲದ ಮಾತನ್ನು ವಚನ ರೂಪದಲ್ಲಿ ಬರೆದು ಲೋಕಕ್ಕೆ ಸಹಕರಿಸಿದ್ದಾರೆ.

**4**

**ಅಂಗನೆಯರು ಮೂವರ ಸಂಗವ ಮಾಡಿದ ಕಾರಣ**
**ಇತರ ಸಂಗಕ್ಕೆ ಸಮನಿಸದಾದೆ.**
**ಅಂಗನೆಯ ಮೂವರನೊಂದು ಮಾಡಿ ಕೂಡಿದಡೆ**
**ಲಿಂಗ ನೀನಾದೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನವೆಂಬ ಅಂಗನೆ ಗುರು-ಲಿಂಗ-ಜಂಗಮದ ಸಂಗ ಮಾಡಿದ ಕಾರಣ ಅಂಗ ಇತರ ಅಂಗದ ಸಂಗಕ್ಕೆ ಸಮನಿಸದಾಯಿತು. ಲೋಕದ ಅರಿವುಳ್ಳ ಅಂಗಗಳೆ ಬೇರೆ, ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನ ಸಂಗವ ಮಾಡಿ ಲಿಂಗಯ್ಯನೆ ತಾನಾದ ಅಂಗವೇ ಬೇರೆ.

ಅಂಗನೆ ಅಂಗದಲ್ಲಿಯೇ ಸಂಗಮವಾದ ಗುರುವನ್ನು ಕಂಡುಕೊಂಡು ಗುರುವೇ ತಾನಾಗಿದ್ದಾಳೆ. ಜಂಗಮವನ್ನು ಕಂಡುಕೊಂಡು ಜಂಗಮವೇ ತಾನಾಗಿದ್ದಾಳೆ. ಲಿಂಗಯ್ಯನನ್ನು ಕಂಡುಕೊಂಡು ಲಿಂಗವೇ ತಾನಾಗಿದ್ದಾಳೆ. ಈ ಅಂಗ ಲೋಕದ ಲೌಕಿಕದ ಅಂಗಕ್ಕೆ ಸಮನಿಸದು. ಗುರು-ಲಿಂಗ-ಜಂಗಮರನ್ನು ಒಂದು ಮಾಡಿದ ಅಂಗನೆ ಅವರನ್ನು ಕೂಡಿಕೊಂಡು ಅವರಲ್ಲಿಯೇ ಸಂಗಮವಾಗಿದ್ದಾಳೆ. ಹೀಗಾಗಿ ನೋಡುವ ಅಂಗಗಳೆಲ್ಲ ಅಂಗನೆಗೆ ಲಿಂಗಾಂಗಳಾಗಿ ಕಾಣುತ್ತವೆ. ಕೇಳುವ ಶಬ್ದವೆಲ್ಲ ನಿಃಶಬ್ದದಿಂದ ಸ್ವೀಕರಿಸುವ ಶಕ್ತಿ ಅಂಗನೆಗೆ ಬಂದಿದೆ. ಮೂಸಿಸುವ ಸುಗಂಧ ದುರ್ಗಂಧವೆಲ್ಲ ಉದುರಿ ಬಿದ್ದು ಪರಿಮಳವಾಗಿ ಪರಿವರ್ತನೆಯಾಗಿದೆ.

ಅಂಗನೆ ಮೂವರನೊಂದು ಮಾಡಿ ಅಂದರೆ ಗುರು-ಲಿಂಗ-ಜಂಗಮ ಇವರನ್ನು

ಒಂದುಮಾಡಿ ಇವರೊಂದಿಗೆ ಕೂಡಿ ತನ್ನ ಅಜ್ಞಾನವನ್ನೆಲ್ಲ ಕಳೆದುಕೊಂಡು ಲಿಂಗಯ್ಯನೆ ತಾನಾಗಿದ್ದಾಳೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿದ್ದಾಳೆ.

5

**ಅಂಗವ ಬೆರಸದ ಲಿಂಗ ಪ್ರಾಣವ ಬೆರಸುವ ಪರಿಯೆಂತೊ?**
**ಬೆನಕನ ತೋರಿ ಬೆಲ್ಲವ ಮೆಲುವಂತೆ**
**ಇಷ್ಟಲಿಂಗವ ತೋರಿ ಹೊಟ್ಟೆಯ ಹೊರೆವರು.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ದೂರ ನೀ ಹೊತ್ತೆ;**
**ಸೂರೆಯನಾರಿಕೆ ಕೊಂಡರು.**

ಅಂಗದ ಮೇಲೆ ಕಟ್ಟಿಕೊಂಡ ಲಿಂಗವು ಅಂಗವನ್ನು ಬೆರೆಯುವುದಿಲ್ಲ; ಅಂದ ಮೇಲೆ ಅದು ಪ್ರಾಣ ಬೆರಸಲು ಸಾಧ್ಯವೆ? ಗುರು ಲಿಂಗ ಜಂಗಮರನ್ನು ಬೆರೆಸಲು ಸಾಧ್ಯವೆ? ಹೊಟ್ಟೆಗೆ ರೆಟ್ಟೆಗೆ ಕೊರಳಿಗೆ ಲಿಂಗ ಕಟ್ಟಿ ಹಸಿವು ಹಿಂಗಿಸಿಕೊಂಡಂತೆ. ಹಸಿವಿಗಾಗಿ ಇಲ್ಲದ ಕೆಲಸವನ್ನು ಕೈಗೊಂಡಂತೆ.

ಮೌಲ್ವಿ, ಬಿಷಪ್, ಪೋಪ್, ಜಂಗಮ, ಜಗದ್ಗುರು, ಆಚಾರ್ಯ, ಬ್ರಾಹ್ಮಣರು ಹುಟ್ಟಿಕೊಂಡಂತೆ. ಸೆಗಣಿಯ ಬೆನಕನ ತೋರಿ ಬೆಲ್ಲವನು ಮೆದ್ದಂತೆ. ಇಷ್ಟಲಿಂಗ ಜನಿವಾರ ಸಿಲುಬೆ ತೋರಿ ಹೊಟ್ಟೆಯ ಹೊರೆವರು. ಇವರು ಯಾರೂ ಅಂಗವನ್ನು ಅಂಗದಲ್ಲಿ ಸಂಗಮವಾದ ಅರಿವನ್ನು ಅಂಗದಲ್ಲಿಯೇ ಸಂಗಮವಾದ ಜಂಗಮವನ್ನು ಅರಿಯರು. ಅಂಗವನ್ನು ಆವರಿಸಿದ ಅಂಗನೆ ಅವರೆಲ್ಲರನ್ನು ಸೃಷ್ಟಿ ಮಾಡಿದೆ.

ಮಾನವ ಧರ್ಮ ಒಂದೇ. ಅದು ಮಾನವನಲ್ಲಿಯೇ ಸಂಗಮವಾಗಿದೆ. ಮಾನವನಿಗೆ ಮಾನವನಾಗಿ ಮೌನದಿಂದ ಬೋಧಿಸುತ್ತದೆ. ಆ ಮೌನದ ಮಾತನು ಮಾನವ ಮೌನದಿಂದಲೇ ಆಲಿಸಿದಾಗ ತನಗೆ ತಾನೇ ತಿಳಿಯುತ್ತದೆ. ತನಗೆ ತಾನೇ ತಿಳಿಯದಂತೆ ಇಲ್ಲದ ಧರ್ಮ ಹಿಂದೂ, ಮುಸಲ್ಮಾನ, ಕ್ರೈಸ್ತ, ಬೌದ್ಧ, ಜೈನ, ಫಾರ್ಸಿಯಾಗಿ ಮಾನವನನ್ನು ಕಾಡುವುದರ ಮೂಲಕ ಮಾನವನನ್ನೇ ಬೇರ್ಪಡಿಸಿದೆ. ಮಾನವ ಧರ್ಮ ಮಾನವನಿಂದಲೇ ಬಹುದೂರ ಸರಿದಿದೆ. ಮಾನವನನ್ನು ಮಾನವನೇ ಮಾನವನೆಲ್ಲಿದ್ದಾನೆಂದು ದೀಪಹಚ್ಚಿ ಹುಡುಕುವ ಸ್ಥಿತಿ ನಿರ್ಮಾಣವಾಗಿದೆ.

ಹೆಜ್ಜೆ ಹೆಜ್ಜೆಗೂ ಹಿಂದೂ ಸಿಗುತ್ತಾನೆ, ಮುಸಲ್ಮಾನ ಸಿಗುತ್ತಾನೆ, ಕ್ರೈಸ್ತ ಸಿಗುತ್ತಾನೆ, ಜೈನ ಸಿಗುತ್ತಾನೆ, ಬೌದ್ಧ ಸಿಗುತ್ತಾನೆ, ಫಾರ್ಸಿ ಸಿಗುತ್ತಾನೆ. ಆದರೆ ಮಾನವ ಸಿಗುತ್ತಿಲ್ಲ. ಮಾನವ ಮಾನವನೊಳಗೇ ಸಂಗಮವಾಗಿ ಮಾನವನಿಗೆ ಸಿಗದೆ ಮಾನವನಿಗೆ ಚೆಳ್ಳೆ ಹಣ್ಣು ತಿನ್ನಿಸುತ್ತಿದ್ದಾನೆ.

ಸಿದ್ಧಾರ್ಥ ಮಾನವನಾಗುವ ಮುನ್ನ ರಾಜನಾಗಿದ್ದ. ರಾಜನ ಧರ್ಮ ಯುದ್ಧ ಮಾಡುವುದು. ರಾಜನನ್ನು ಸೈನಿಕರನ್ನು ಕೊಂದು ಸಾಮ್ರಾಟನಾಗುವುದು; ಚಕ್ರವರ್ತಿಯಾಗುವುದು ಆತನ ಧರ್ಮವಾಗಿತ್ತು. ಅದು ಆತನಿಗೆ ಧರ್ಮವೆನಿಸಲಿಲ್ಲ. ಸಿದ್ಧಾರ್ಥ ತನ್ನ ತನುವಿನಲ್ಲಿಯೇ ತನ್ನ ತನವನ್ನು ಅನುವಿನಿಂದ ಹುಡುಕ ಹತ್ತಿದ. ರಾಜಧರ್ಮ ಅಜ್ಞಾನದ ಆಚರಣೆಯ ಧರ್ಮಗಳು ಸುಟ್ಟು ಹೋದವು. ಮನವೆಂಬ ಅಂಗನೆ ಅಂಗದ ಅರಿವಿನಲ್ಲಿ ಕರಗಿದಳು. ಸಿದ್ಧಾರ್ಥ ಕಳೆದುಹೋದ. ಬುದ್ಧ ಪ್ರಕಟವಾದ.

ಮಹಾ ಮಾನವ ತಾನೇ ಎಂದು ಪ್ರಕಟಿಸಿದ. ತನ್ನಂತೆ ಸಕಲರೆಲ್ಲರೂ ಮಹಾ

ಮಾನವರೆಂದು ಘೋಷಿಸಿದ. ಮಾನವ ಮಾನವನೊಳಗೇ ಕೃಷಿ ಮಾಡಿದರೆ ಮಾತ್ರ ಮಹಾಮಾನವನಾಗಲು ಸಾಧ್ಯವೆಂದು ಖಚಿತವಾಗಿ ಹೇಳಿದ. ಅನುಯಾಯಿಗಳು ಸೃಷ್ಟಿಯಾದರು. ಬುದ್ಧನಂತೆ ಬುದ್ಧರಾದದ್ದು ಮಾತ್ರ ಕೆಲವರೇ. ಬೌದ್ಧರಾದದ್ದು ಮಾತ್ರ ಹಲವಾರು.

ಮಹಾವೀರನಂತೆ ಜಿನನಾಗದೆ ಜೈನರಾದದ್ದು ಮಾತ್ರ ಹಲವಾರು. ಪೈಗಂಬರರಂತೆ ಇಸ್ಲಾಮರಾಗದೆ ಮುಸಲ್ಮಾನರಾದದ್ದು ಮಾತ್ರ ಹಲವಾರು. ಅರಿವಿಗೆ ಶರಣು ಹೋಗಿ ಶರಣರಂತೆ ಶರಣರಾಗದೆ ಲಿಂಗಾಯತರಾದದ್ದು ಮಾತ್ರ ಹಲವಾರು. ಅರಿವಿಗೆ ದಾಸನಾಗಿ ದಾಸರಂತೆ ದಾಸರಾಗದೆ ಬ್ರಾಹ್ಮಣರಾದದ್ದು ಮಾತ್ರ ಹಲವಾರು. ಕ್ರಿಷ್ಣನನ್ನು ಪೂಜಿಸಿದರೆ ಹಿಂದುವಾಗಲಾರ, ಕ್ರಿಸ್ತನನ್ನು ಆರಾಧಿಸಿದರೆ ಕ್ರೈಸ್ತನಾಗಲಾರ. ಅವರೆಲ್ಲ ಮಹಾಜ್ಞಾನಿಗಳು. ಜ್ಞಾನ ಪಡೆಯುವ ಬಗೆಯನ್ನ ಹೇಳಿದ ಮಹಾನುಭಾವರು. ಅವರನ್ನು ಪೂಜಿಸುವುದರಿಂದ ಆರಾಧಿಸುವುದರಿಂದ ಮಾನವನ ಪಂಗಡಗಳು ಅಧಿಕವಾದವೇ ಹೊರತು ಮಾನವನಾಗುವುದಿಲ್ಲ. ಮಾನವ ಮೌನದಿಂದಲೇ ದೂರ ಸರಿದು ಮಾನವ ಮಾನವನೊಳಗೇ ಬಚ್ಚಿಟ್ಟುಕೊಳ್ಳುತ್ತಾನೆ; ಮಾನವನಿಗೆ ಸಿಗದಂತೆ!

ಮನವೆಂಬ ಅಂಗನೆ ಗುರು ಲಿಂಗ ಜಂಗಮದ ಸಂಗ ಮಾಡಿ ಅಲ್ಲಿಯೇ ಕರಗಿದ ಕಾರಣ ಮಹಾದೇವಿಯಾದಳು. ಲಿಂಗಯ್ಯನೊಂದಿಗೆ ಬೆರೆತು ಅರ್ಧನಾರೀಶ್ವರಳೇ ತಾನಾದಳು. ಮನ ಘನದೊಂದಿಗೆ ಬೆರೆತು ಲಿಂಗಯ್ಯನೇ ತಾನಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**6**

**ಅಂಗವ ಮರೆವನ್ನಕ್ಕರ,**
**ಲಿಂಗಾ, ನಿಮ್ಮ ಚೆಲುವ ಕಂಗಳು ತುಂಬಿ ನೋಡುತ್ತಲೆಂದಿಪ್ಪೆನೊ!**
**ಪರಿಪರಿಯ ನೋಟದಿಂದ ಹರುಷವನ್ನೈದಿಕೊಂಡು**
**ಪರಮೇಕಾಂತದೊಳೆಂದಿಪ್ಪೆನೊ!**
**ವರಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ನಿಮ್ಮ ಶರಣ ಪ್ರಭುವಿನ ಕರುಣವೆಂದಪ್ಪುದೊ!**

ಅಂಗವನ್ನು ಅಜ್ಞಾನ ಆವರಿಸಿರುವುದರಿಂದ; ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗವು ಮರೆತು ಹೋಗಿದೆ. ಹೀಗಾಗಿ ಅಂಗ ಅಜ್ಞಾನವನ್ನು ಕೂಡಲೇ ಆಮಂತ್ರಣ ಮಾಡಿಕೊಂಡು ಗಂಡಾಗಿ ಹೆಣ್ಣನ್ನು ನೋಡುತ್ತದೆ, ಹೆಣ್ಣಾಗಿ ಗಂಡನ್ನು ನೋಡುತ್ತದೆ. ಅಂಗ ಮತ್ತೊಂದು ಅಂಗವನ್ನು ಅಂಗವೆಂದು ನೋಡಲು ಸಾಧ್ಯವಾಗುವುದೇ ಇಲ್ಲ. ಅಂಗದ ಅರಿವಿನ ಚೆಲುವು ಅಂಗಕ್ಕೆ ಕಾಣುವುದೇ ಇಲ್ಲ.

ಅಂಗ ಅರಿವಿನಿಂದ ನೋಡಲು ಹೋದರೆ ಸೂರ್ಯ ಚಂದ್ರರಂತೆ ಮಿರಿ ಮಿರಿ ಮಿಂಚುವ ಸುಂದರವಾದ ಚೆಲುವ ಕಂಗಳು. ಅವು ಹೆಣ್ಣೂ ಅಲ್ಲ; ಗಂಡೂ ಅಲ್ಲ. ಅಂದಮೇಲೆ ಅಂಗವನ್ನು ಅರಿವಿನ ಲಿಂಗವೆಂದೇ ಅಂಗ ನೋಡಬೇಕಲ್ಲ! ಹಾಗೆಯೇ ನೋಡುತ್ತವೆ! ನೋಡುವ ಸತ್ಯವನ್ನೇ ನೋಡಿ ಆನಂದ ಪಡುತ್ತವೆ.

ಮಸೀದಿ ಮಂದಿರ ಚರ್ಚ್‌ಗಳನ್ನು ಸತ್ಯದ ಕಂಗಳ ಮೂಲಕ ಪರಿಪರಿಯ ನೋಟದಿಂದ ನೋಡಿದಾಗ ಚಿತ್ತಾರದ ಕಲ್ಲುಗಳಾಗಿ ಕಾಣುತ್ತವೆ. ಪ್ರಾರ್ಥಿಸದೆ, ಪೂಜಿಸದೆ ಉತ್ಸವಗಳನ್ನು

ಮಾಡಗೊಡದೆ ಕಲ್ಲುಗಳಾಗಿ ದರ್ಶನ ನೀಡುತ್ತವೆ. ಕಲ್ಲು ಕಲ್ಲಾಗಿಯೇ ಕಂಡು ಸಹಜವಾಗಿರುವ, ಏಕಾಂತದ ಸುಖದೊಳಗಡಗಿ, ಅಂಗ ಅಂಗವನ್ನೇ ಮರೆತು ಅರಿವಿನ ಲಿಂಗದ ಸುಖವನ್ನು ಪಡೆಯುವ ಭಾಗ್ಯವನ್ನು ಅಂಗದಲ್ಲಿ ಸಂಗಮವಾದ ವರಗುರು ಕಪಿಲಸಿದ್ಧ ಮಲ್ಲಿಕಾರ್ಜುನನು ಎಂದು ಕರುಣಿಸುವನೋ! ಪ್ರಭುವಿನ ಕರುಣೆ ಎಂದು ದಕ್ಕುವುದೋ ಎಂದು ಹಗಲಿರುಳು ಚಿಂತಿಸುವ ಭಾಗ್ಯ ಕರುಣಿಸು ತಂದೆ.

ಅಂಗದಲ್ಲಿ ಅರಿವು ಭರಿತವಾಗಿದೆ. ಆದರೂ ಮನವೆಂಬ ಮರೆವು ಆವರಿಸಿರುವುದರಿಂದ ಅಂಗದಿಂದ ಕೆತ್ತಲ್ಪಟ್ಟ ಕಲ್ಲುಗಳೇ ಮಸೀದೆ ಮಂದಿರ ಚರ್ಚ್ ಗುರುದ್ವಾರಗಳಾಗಿ ಕಾಣುತ್ತವೆ. ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಇವು ಯಾವು ಹೆಣ್ಣು ಗಂಡುಗಳಲ್ಲವಾದರೂ ಅಂಗಕ್ಕೆ ಅಂಗವೇ ಹೆಣ್ಣಾಗಿ ಗಂಡಾಗಿ ಕಾಣುತ್ತದೆ. ಅಂಗವನ್ನು ಆವರಿಸಿದ ಮನವೆಂಬ ಅಂಗವನ್ನು ಅಂಗ ಮರೆತರೆ ಸಾಕು; ಅಂಗವೇ ಅರಿವಿನ ಲಿಂಗಾಂಗವಾಗುತ್ತದೆ. ಆಗ ಅದರ ಕಂಗಳು ಚೆಲುವು. ಅದರ ಪರಿಪರಿಯ ನೋಟ ಚೆಲುವು. ಕೇಳುವ ಶಬ್ದ ಚೆಲುವು. ಮುಟ್ಟುವ ಸ್ಪರ್ಶ, ಮೂಸಿಸುವ ಪರಿಮಳ, ರುಚಿಸುವ ಪದಾರ್ಥ ಚೆಲುವು!

7

**ಅಂಗವರತು ನಿಂದವಂಗೆ**
**ಜಗದ ಹಂಗಿನಲ್ಲಿ ಸಿಕ್ಕ ಜಂಗುಳಿಗಳ ಕೂಡದೆ**
**ಲಿಂಗವೇ ಅಂಗವಾಗಿ ನಿಂದುದು**
**ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವು ತಾನಾದುದು.**

ಅಂಗ ಒಂದು. ಅಂಗವನ್ನು ಆವರಿಸಿದ ಅಂಗ ಒಂದು. ಅಂಗದಲ್ಲಿಯೇ ಸಂಗಮವಾದ ಅಂಗ ಒಂದು. ಹೀಗೆ ಮೂರು ಅಂಗಗಳು. ಇದಾವುದನ್ನೂ ಅರಿಯದಿದ್ದಕ್ಕಾಗಿ; ಅರಿತು ನಿಲ್ಲಲು ಸಾಧ್ಯವಿಲ್ಲದ್ದಕ್ಕಾಗಿ, ಅಂಗ ಜಗದ ಹಂಗಿನಲ್ಲಿ ಸಿಕ್ಕಿ ಹಾಕಿಕೊಂಡಿದೆ. ಜಗದ ಜಂಗುಳಿಗಳಲ್ಲಿ ಕೂಡಿಕೊಂಡಿರುವುದರಿಂದ ಲಿಂಗವಾಗದೇ ಕೇವಲ ಅಂಗವಾಗಿದೆ.

ಅಂಗ ಅಕ್ಷರಾಭ್ಯಾಸ ಮಾಡುವುದರಿಂದ, ವಿಶ್ವವಿದ್ಯಾಲಯದಲ್ಲಿ ಕಲಿಯುವುದರಿಂದ, ಜಪ-ತಪ ಪೂಜೆ ಪುನಸ್ಕಾರಗಳನ್ನು ಮಾಡುವುದರಿಂದ ಅಂಗ ಲಿಂಗಾಂಗ ಅಥವಾ ಅರಿವಿನ ಅಂಗ ಎನ್ನಿಸಿಕೊಳ್ಳುವುದಿಲ್ಲ. ಅದು ಶಾಸಕನಾದರೇನು, ಸಚಿವನಾದರೇನು, ನ್ಯಾಯಾಧೀಶನಾದರೇನು, ಗುರುವಾದರೇನು? ಅದು ಜಗದ ಹಂಗಿನಲ್ಲಿರುವ ಅಂಗವೇ, ಜಂಗುಳಿಗಳ ಮಧ್ಯೆ ಸಿಲುಕಿಕೊಂಡ ಅಂಗವೇ ಆಗಿದೆ.

ಅಂಗ ಅರಿವಿನ ಲಿಂಗಾಂಗವಾಗಬೇಕೆಂದರೆ, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಾಂಗವನ್ನು ಕಂಡುಕೊಳ್ಳಬೇಕು. ಅಂಗವನ್ನು ಆವರಿಸಿದ ಅಂಗದ ಮೂಲಕ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಾಂಗದತ್ತ ಅರಿವಿನ ಅನುವನು ಅರಿತು ಪಯಣಿಸಬೇಕು. ಆ ಅರಿವಿನ ಲಿಂಗಾಂಗವೇ ತಾನಾಗಿ ಅಲ್ಲಿಯೇ ನಿಲ್ಲಬೇಕು. ಆಗ ಜಗದ ಹಂಗು ಹರಿದು ಹೋಗುತ್ತದೆ. ಅರಿವಿನ ಲಿಂಗಾಂಗದ ಹಂಗಿನಲ್ಲಿ ಅಂಗ ಅರಿವಿನ ಅಂಗವಾಗಿ ನೆಲೆ ನಿಲ್ಲುತ್ತದೆ. ಇದೊಂದು ಅಂಗದಲ್ಲಿಯೇ ಸಂಗಮವಾದ ಅರಿವಿನ ಶಿಕ್ಷಣ!

ಶಾಲಾ ಕಾಲೇಜುಗಳಲ್ಲಿ, ಮಠ ಮಾನ್ಯಗಳಲ್ಲಿ, ಮಂದಿರ ಮಸೀದಿಗಳಲ್ಲಿ, ಗುರುದ್ವಾರಗಳಲ್ಲಿ ಇಲ್ಲದ ಶಿಕ್ಷಣ ಅಂಗದಲ್ಲಿಯೇ ಸಂಗಮವಾಗಿದೆ. ಅದನ್ನು ಅನುವರಿತು ಅರಿವಿನಿಂದ ನೋಡಿದರೆ ಸಿಕ್ಕೇ ಸಿಕ್ಕುತ್ತದೆ ಎಂದು ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದ ಮೂಲಕ ಸಾರಿದ್ದಾರೆ.

ಜಗದ ಜಂಗುಳಿಗಳಲ್ಲಿ ಕಾಣಬರುವ ಅಂಗದಿಂದ ಈ ಕೆಲಸ ನೆರವೇರುವುದು ಸಾಧ್ಯವಿಲ್ಲ. ಏಕೆಂದರೆ ಕಂಡುಬರುವ ಈ ಅಡಿಂಗ ಕಾಣಬಾರದ ಅರಿವಿನ ಲಿಂಗಾಂಗದ ಉಪಕರಣವಾಗಿದೆ. ಕಂಡುಬರುವ ಅಂಗವನ್ನು ಕಾಣಬಾರದ ಅಂಗವೊಂದು ಆವರಿಸಿಕೊಂಡಿದೆ. ಕಾಣಬಾರದ ಈ ಅಂಗದಿಂದಲೇ ಕಂಡುಬರುವ ಅಂಗ ಜಗದ ಹಂಗಿನಲ್ಲಿ ಸಿಕ್ಕಿ ಹಾಕಿಕೊಂಡಿದೆ. ಈ ಮರೆವಿನ ಅಂಗದಿಂದಾಗಿಯೇ ಅಂಗ ಅರಿವಿನ ಲಿಂಗ ಎನ್ನಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ.

ಅರಿವಿನ ಅಂಗವೂ ಅಂಗದಲ್ಲಿಯೇ ಸಂಗಮವಾಗಿದೆ. ಮರೆವಿನ ಅಂಗವು ಅಂಗವನ್ನು ಆವರಿಸಿಕೊಂಡಿದೆ. ಈ ಮರೆವಿನ ಅಂಗದ ಮೂಲಕ ಅರಿವಿನ ಅಂಗದೆಡೆಗೆ ಪಯಣಿಸಿ, ಆ ಅರಿವಿನ ಅಂಗವನ್ನು ಅರಿತು ಅಲ್ಲಿಯೇ ನಿಂದವಂಗೆ ಜಗದ ಜಂಗುಳಿಗಳ ಹಂಗು ಕಡಿದು ಹೋಗುತ್ತದೆ.

ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವು ತಾನೇ ಆಗುತ್ತಾನೆ. ಬುದ್ಧ ಮಹಾವೀರ ಮಹಾಜ್ಞಾನಿಯಾಗಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತಾನೆ.

ಈ ಜ್ಞಾನ ಶಿಕ್ಷಣ ಅಂಗದಲ್ಲಿಯೇ ಇದೆ. ಇದನ್ನು ಪಡೆಯುವ ಬಯಕೆ ಅಂಗಗಳಿಗೆ ಆಗಬೇಕು ಅಷ್ಟೇ.

**8**

**ಅಂಗವಸ್ತ್ರವನುಟ್ಟುಕೊಂಡಳವ್ವೆ**
**ಕಾಳಿಗೆವಟ್ಟೆಯ ಕುಪ್ಪಸವ ತೊಟ್ಟುಕೊಂಡಳವ್ವೆ**
**ಕಣ್ಣಲಿ ಬಟ್ಟಂಬಳೆಯ ಬೊಟ್ಟನಿಟ್ಟುಕೊಂಡಳವ್ವೆ**
**ತನ್ನುರವರದ ಕುಚದ ಮೇಲೆ ತೊಟ್ಟಿಲ್ಲದ ಮಣಿಯಸರವ**
**ಇನಿಸುವ ಸಿಂಗಾರವ ಮಾಡಿ ಒಪ್ಪಿದಾಕೆಯನರಸುವನವ್ವ!**
**ಕಪಿಲಸಿದ್ಧ ಮಲ್ಲಿನಾಥಯ್ಯ!**

ಜಗದಲ್ಲಿ ಜನ್ಮ ತಳೆದ ಅಂಗಗಳೆಲ್ಲ ಒಂದೇ. ಸಕಲ ಅಂಗಗಳಲ್ಲಿಯೂ ಮಹಾಜ್ಞಾನ ಭರಿತವಾಗಿದೆ. ಆದರೂ ಆ ಮಹಾಜ್ಞಾನ ಸಕಲ ಅಂಗಗಳಿಗೂ ಪ್ರಕಟವಾಗುವುದಿಲ್ಲ. ಇದೊಂದು ಅಂಗದ ದುರ್ದೈವವೇ ಸರಿ. ಇದೊಂದು ಅಂಗದ ವಿಪರ್ಯಾಸವೇ ಸರಿ. ಅಂಗದಲ್ಲಿಯೇ ಭರಿತವಾದ ಮಹಾಜ್ಞಾನದ ಸಂಪತ್ತನ್ನು ಅಂಗ ಪಡೆದುಕೊಳ್ಳಬೇಕೆಂಬ ಬಯಕೆ ಅಂಗಕ್ಕೆ ಉಂಟಾಗುವುದೇ ಇಲ್ಲ. ಅಂಗವನ್ನು ಆವರಿಸಿದ ಮನಕ್ಕೂ ಉಂಟಾಗುವುದಿಲ್ಲ.

ಮನವೆಂಬುದು ಸುಂದರವಾದ ಹೆಣ್ಣು. ಅದು ಅಂಗವನ್ನು ಆವರಿಸಿಕೊಂಡು ಅಂಗಕ್ಕೆ ಸುಂದರವಾದ ವಸ್ತ್ರವನುಡುಸಿ ಕಪ್ಪನೆಯ ಕುಪ್ಪಸ ತೊಡಿಸಿ ಬೊಟ್ಟನಿಟ್ಟುಕೊಂಡು ಅರಿವಿನ ನಲ್ಲನು ಒಪ್ಪುವುದಕ್ಕಾಗಿ ವನಪು ವೈಯ್ಯಾರವನು ಮಾಡುತ್ತಾಳೆ. ಪ್ರೇಮಭರಿತವಾದ ಮಾತುಗಳನ್ನು

ಆಡುತ್ತ ಕಪಿಲಸಿದ್ಧ ಮಲ್ಲಿನಾಥಯ್ಯನ ಶ್ರೀ ಚರಣಗಳನ್ನು ಹಿಡಿದು ಆತನನ್ನೇ ಒಪ್ಪಿದರೆ ಮಾತ್ರ ವರಿಸುತ್ತಾಳೆ.

ಮನದ ಶೃಂಗಾರವೇನಿದ್ದರೂ ಮನದೊಡೆಯ ಮಲ್ಲಯ್ಯ ನೋಡುವುದಕ್ಕಾಗಿ, ಮಲ್ಲಯ್ಯನಿಗಾಗಿ ಇರಬೇಕೇ ಹೊರತು ಮಂದಿಗಾಗಿ ಅಲ್ಲ ಎನ್ನುವುದು ಮನಕ್ಕೆ ಸಂಪೂರ್ಣವಾಗಿ ತಿಳಿದಿರಬೇಕು.

ಹೆಣ್ಣು ಇದ್ದಲ್ಲಿಗೆ ಗಂಡು ಹೋಗಿ ಹೆಣ್ಣನ್ನು ನೋಡುವುದು ಸಂಪ್ರದಾಯ. ಆದರೆ ಗಂಡನ್ನು ಹುಡುಕುತ್ತ ಅರಿವಿನ ಗಂಡು ಇದ್ದಲ್ಲಿಗೆ ಹೆಣ್ಣು ಹೋಗಿ ಆ ಗಂಡಿಗೆ ಸಂಪೂರ್ಣ ಶರಣಾಗಿ ತನ್ನನ್ನು ಅರ್ಪಿಸಿಕೊಳ್ಳುವುದು ಅರಿವಿನ ಸಂಪ್ರದಾಯ. ಆಧ್ಯಾತ್ಮದ ಸಂಪ್ರದಾಯ. ಅಂದರೆ ಗುರುವಿದ್ದಲ್ಲಿಗೆ ಶಿಷ್ಯ ಹೋಗುವುದು ಅಥವಾ ಸದಾ ಗುರುವಿನ ಸ್ಮರಣೆಯಲ್ಲಿದ್ದು ಗುರುವಿಗಾಗಿ ಹಗಲಿರುಳೆನ್ನದೆ ಹಪಹಪಿಸುವ ಶಿಷ್ಯನಲ್ಲಿಗೆ ಗುರುದೇವ ಬಂದು ಅಪ್ಪಿಕೊಂಡು ಆಶೀರ್ವದಿಸುವುದು ಗುರುದೇವನ ಸಂಪ್ರದಾಯ.

ಗುರು ಶಿಷ್ಯ ಸಂಬಂಧವನ್ನು ಬೆಡಗಿನ ಮಾತಿನಲ್ಲಿ ಹೇಳುವುದು ಸುಲಭ. ಏಕೆಂದರೆ ಬೆಡಗು ಆಧ್ಯಾತ್ಮದ ಭಾಷೆ ! ಅಮೂರ್ತ ಸ್ವರೂಪವನ್ನು ಮೂರ್ತರೂಪಕ್ಕೆ ತಂದು; ಮೂರ್ತ ರೂಪವನ್ನೇ ಅಮೂರ್ತರೂಪವನ್ನಾಗಿ ನೋಡುವ ಭಾಷೆ. ಇಂತಹ ಭಾಷೆಯನ್ನು ಆಡುಭಾಷೆಯಲ್ಲಿ ಆಡುವಾಗ ಬರೆಯುವಾಗ ಅನಿವಾರ್ಯವಾಗಿ ಬೆಡಗು ಪುನಃ ಬಂದು ತನ್ನ ನಿಜ ಸ್ವರೂಪವನ್ನು ತೋರಿಸುತ್ತದೆ. ಮನಕ್ಕೆ ಹೊರಗಣ ಸುಖದ ಆಸೆ ಅತಿಯಾದಾಗ ಒಳಗಣ ಸುಖದ ಬೆಡಗಿನ ಭಾಷೆ ಭಾರವಾಗುವುದು ಸಹಜ. ಏಕೆಂದರೆ ಒಳಗಣ ಸುಖದ ಆಸೆ ಬಲಿಯದ ನಿಮಿತ್ತ ಮನಕ್ಕೆ ಬೆಡಗಿನ ಅಮೂರ್ತ ಸ್ವರೂಪದ ಭಾಷೆ ಅರ್ಥವಾಗುವುದಿಲ್ಲ. ಆದರೆ ಒಳಗಣ ನಿಜ ಅರಿವನ್ನು; ಅರಿವೆಂಬ ದೇವರನ್ನು ಬಲವಾಗಿ ನಂಬದೆ ಹೊರಗೆ ಆರಾಧಿಸಿ ಪೂಜಿಸುವುದನ್ನು ಬಿಡುವುದಿಲ್ಲ. ಅರಿವಿನ ದಾರಿ ದೂರವಾಗಬಹುದು ಅಷ್ಟೆ. ದೇವರನ್ನು ಒಪ್ಪಿದ ಮನವನ್ನು ಅರಿವಿನ ದೇವರು ಇಂದಲ್ಲ ನಾಳೆ ಒಪ್ಪಿಯೇ ಒಪ್ಪುತ್ತಾನೆ.

**9**

**ಅಂಗವಿಸದಿರು ಇನ್ನು ಹಿಂಗಿಹೋಗೆಂದೆನುತ**
**ಮಂಗಳಾತ್ಮಕ ನುಡಿದ ಗುರುಕರುಣದಾ**
**ಅಂಗವಿಸದಿರು ಎಂದನಂಗಹರ ಪ್ರಭುರಾಯ**
**ಬಂದು ನೂಕಿದನೆನ್ನನೆಡಿಸುವ ಮಾಯೆಯನು.**
**ಮಂಗಳಾತ್ಮಕ ಕಪಿಲಸಿದ್ಧಮಲ್ಲೇಶ್ವರನೆ**
**ಲಿಂಗ, ನಿಮ್ಮನು ಅರಿವೆ; ಮಾಯೆಯ ಗೆಲುವೆ ಪ್ರಭುವಿನಂದದಲಿ.**

ಅಂಗವಾಗಿ ಅಂಗದ ಗರ್ಭದಿಂದ ಹೊರಬಂದು ಅಂಗವಾಗಿದೆ ಲಿಂಗಾಂಗವಾಗಿ ಅರಿವಿನ ಲಿಂಗವಾಗಿ ಬದುಕೆಂದು ಮಂಗಳಾತ್ಮಕನಾದ ಗುರುದೇವನು ಕರುಣೆಯಿಂದ ನುಡಿದನು. ಮತ್ತೆ ಅಂಗವಿಸದಿರು ಎಂದು ಆಶೀರ್ವದಿಸುತ್ತಾ ಅಂಗಕ್ಕೆ ಬೋಧಿಸಿದನು.

ಆದರೂ ಅಂಗದಲ್ಲಿಯೇ ಸಂಗಮವಾದ ಅನಂಗ ಪ್ರಭುರಾಯನು ಬಂದು ಅಂಗವನ್ನು

ಮರುಳು ಮಾಡಿ ಮಾಯೆಯ ಬಲೆಗೆ ನೂಕಿದನು. ಸಮರ್ಥನಾಗಿ ಮಾಯೆಯ ಬಲೆಯಿಂದ ಬಿಡಿಸಿಕೊಂಡು ಪುನಃ ತನ್ನಲ್ಲಿ ಸೇರಲೆಂದು.

ಮಾಯೆಯೆಂದರೆ ಅಂಗವನ್ನಾವರಿಸಿದ ಕತ್ತಲು. ಅನಂಗವೆಂದರೆ ಅಂಗವನ್ನು ಬೆಳಗುವ ಬೆಳಕು. ಕತ್ತಲು ಹುಟ್ಟಿದ್ದು ಬೆಳಕಿನಿಂದಲೇ. ಕತ್ತಲು ತೊಲಗುವುದು ಕೂಡಾ ಬೆಳಕಿನಿಂದಲೇ. ಭೌತಿಕ ಕತ್ತಲಿಗೆ ಚಲನೆಯಿಲ್ಲ. ಅಂಗವನ್ನು ಆವರಿಸಿದ ಮಾಯೆಯೆಂಬ ಕತ್ತಲಿಗೆ ಚಲನೆಯಿದೆ. ಈ ಕತ್ತಲು ಎಂಬ ಮಾಯೆ ಅಂಗವನ್ನು ಕತ್ತಲಿನೆಡೆಗೆ ಮತ್ತೆ ಮತ್ತೆ ಕರೆದೊಯ್ಯುತ್ತದೆ. ಕತ್ತಲಿಗೆ ಕತ್ತಲೆಂದರೆ ಇಷ್ಟ. ಅರಿವಿನ ಬೆಳಕೆಂದರೆ ಬಲು ಕಷ್ಟ. ಬೆಳಕಿನೆಡೆಗೆ ಬಂದರೆ ಕತ್ತಲು ಸಾಯುತ್ತದೆ. ಹೀಗಾಗಿ ಕತ್ತಲಿಗೆ ಬೆಳಕೆಂದರೆ ಭಯ.

ಮಾಯೆಯೆಂಬ ಕತ್ತಲೆಯನು ಅಂಗವಿಸದಿರು ಎಂದು ಹೇಳಿದ ಅರಿವಿನ ಅನಂಗ ಪ್ರಭುರಾಯನ ಸಹಾಯದಿಂದಲೇ ಮಂಗಳಾತ್ಮಕ ಕಪಿಲಸಿದ್ಧ ಮಲ್ಲೇಶ್ವರನೆಡೆಗೆ ಕರೆದುಕೊಂಡು ಹೋಗಿ ಆತನನ್ನು ಅರಿತರಿತು ಮಾಯೆಯನು ಗೆಲ್ಲಬೇಕಾಗಿದೆ.

**10**

**ಅಂಗವಿಸನನ್ಯಕ್ಕೆ ಸಂಗಮಾಡನು ತತ್ವ**
**ಯೆಂಬ ಮಠಕವನು ತಾನಪ್ರಮಾಣ**
**ಮಂಗಳಾತ್ಮನ ತೆರಹು ಹಿಂಗದಿಹ ಸೀಮೆಯ**
**ತಂದರುಪಿದಾತ ಗುರು ಕಪಿಲಸಿದ್ಧಮಲ್ಲಿಕಾರ್ಜುನಾ.**

ಜ್ಞಾನಿ, ಅಂಗದೊಂದಿಗೆ ಸಂಗ ಮಾಡನು. ಏಕೆಂದರೆ ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೊಂದಿಗೆ ಸಂಗ ಮಾಡಿ ಅದು ಘನಮನವಾಗಿದೆ. ಹೀಗಾಗಿ ಜ್ಞಾನಿಗೆ ಸಕಲ ಅಂಗಗಳು ಅಂಗಗಳಾಗಿಯೇ ಕಾಣುತ್ತವೆ. ಸಕಲ ಅಂಗಗಳು ಲಿಂಗಗಳಾಗಿಯೇ ಕಾಣುತ್ತವೆ. ಗುರುದೇವನು ಸಂಗಮವಾದ ಜ್ಞಾನಾಂಗಗಳಾಗಿ ಕಾಣುತ್ತವೆ. ಹೆಣ್ಣು ಗಂಡು ಎಂದು ವಿಭಾಗಿಸಿ ನೋಡಲು ಜ್ಞಾನಿಗೆ ಸಾಧ್ಯವಾಗುವುದಿಲ್ಲ.

ತಾನು ಅಪ್ರಮಾಣ ಅಂದರೆ ಯಾರು ಪ್ರಮಾಣಿಸಲು ಸಾಧ್ಯವಾಗದ ಮಹಾಜ್ಞಾನದೊಂದಿಗೆ ಸಂಗಮನಾದ ಕಾರಣ ಅಪ್ರಮಾಣ. ಅಗೋಚರನು ಅಪ್ರತಿಮನು ವಿರಾಟಸ್ವರೂಪನು ಮಂಗಳಾತ್ಮಕನು ನಿಸ್ಸೀಮನು ಆಗಿದ್ದಾನೆ.

ಅಂಗದಿಂದಲೇ ಸೃಷ್ಟಿಯಾದ ವಸ್ತುವಿನೊಂದಿಗೆ ಅಂಗ ಸಂಗ ಮಾಡುವುದು ಒಂದು ಸೋಜಿಗವೇ ಸರಿ. ಭೂಮಿಯ ಮೇಲೆ ಜನ್ಮ ತಾಳಿದ ಪ್ರತಿಯೊಂದು ವಸ್ತುವನ್ನು ಅಂಗ ನೋಡಿ ಗುರುತಿಸಬಲ್ಲುದು. ಅದರ ಮೂಲವನ್ನು ಅರಿಯುವ ಶಕ್ತಿ ಅಂಗಕ್ಕೆ ಮಾತ್ರ ಇದೆ. ವಸ್ತುವಿನ ಮೂಲ ಅರಿತಾಗ ವಸ್ತುವಿನ ಸತ್ಯ ; ಅಂಗದ ಸತ್ಯ ಒಂದೇ ಆಗಿರುವುದು ಅಂಗಕ್ಕೆ ಗೋಚರಿಸುತ್ತದೆ. ಆಗ ಅಂಗ, ಅಂಗ ಬಯಸಿದ ವಸ್ತುವಿನೊಂದಿಗೆ ಸಂಗ ಮಾಡುವುದಿಲ್ಲ.

ಜಲಸಾಗರದಲ್ಲಿರುವ ಜಲವು ಜಲವೇ ಆಗಿದೆ. ಜಲದಲ್ಲಿ ಜನ್ಮ ತಳೆದ ಮೀನು ಕಪ್ಪೆ ಮೊಸಳಿ ತಿಮಿಂಗಲುಗಳು ಕೂಡಾ ಜಲರಾಶಿಯೇ ಆಗಿದೆ. ಜಲ, ಜೀವ ಜಲವಾಗಿ, ಜಲವನ್ನು ಜೀವಿಯನ್ನು ಸ್ವೀಕರಿಸಿದಂತೆ. ಅಂದರೆ ಜಲವೇ ಜಲವನ್ನು ಸೇವಿಸಿ ಬಾಯಾರಿಕೆ ತಣಿಸಿಕೊಂಡಂತೆ!

ಈ ತತ್ವ ಸಕಲ ಜೀವರಾಶಿಗಳಲ್ಲಿ ಘಟಿಸಿದರು ಅವು ಸಹಜವಾಗಿ ಸ್ವೀಕರಿಸುತ್ತವೆ.

ಏಕೆಂದರೆ ಅವುಗಳಿಗೆ ತಿಳಿಯುವ ಶಕ್ತಿಯಿಲ್ಲ. ಪ್ರಕೃತಿಯಲ್ಲಿ ಹುಟ್ಟಿ ಪ್ರಕೃತಿಯಲ್ಲಿ ಬದುಕಿ ಪ್ರಕೃತಿಯಲ್ಲಿಯೇ ಲೀನವಾಗುತ್ತವೆ.

ಮನುಷ್ಯ ಮಾತ್ರ ಇವುಗಳಿಗಿಂತ ಭಿನ್ನವಾಗಿದ್ದಾನೆ. ಏಕೆಂದರೆ ಅವನಿಗೆ ಆಲೋಚನಾ ಶಕ್ತಿಯಿದೆ. ಅನುಭವ ಇದೆ. ಸಂಗ್ರಹಶಕ್ತಿ ಇದೆ. ಹೀಗಾಗಿ ಅವನು ಅರಿವನ್ನು ಬಳಸುತ್ತಾನೆ ಅರಿವಿನಿಂದ ಸಹಜ ಸುಖ ಅನುಭವಿಸುತ್ತಾನೆ.

ಸಂಗ್ರಹ ಶಕ್ತಿ ಅಧಿಕವಾಗಿದ್ದರಿಂದ ಮನುಷ್ಯ ಅಜ್ಞಾನಕ್ಕೆ ಜಾರಿದ್ದಾನೆ. ಜ್ಞಾನ ತನ್ನದೇ ಆಗಿದ್ದರೂ ಕೂಡಾ ಜ್ಞಾನವನ್ನು ಸಹಿತ ಸಂಗ್ರಹ ಮಾಡುತ್ತಾನೆ. ತನ್ನ ಅತಿಯಾದ ವಿವೇಕ ತನ್ನ ಅವಿವೇಕಕ್ಕೆ ಕಾರಣವಾಗಿದೆ. ಹೀಗಾಗಿ ಅಂಗ ತತ್ವ ಅಂಗದಲ್ಲಿಯೇ ಸಂಗಮವಾಗಿದ್ದರೂ ಅನ್ಯಕ್ಕೆ ಅಂಗವಿಸುತ್ತಾನೆ. ಅಂಗ, ತತ್ವವೇತ್ತ ಮಠವೆಂಬುದನ್ನೇ ಮರೆತು ಹೋಗಿದ್ದಾನೆ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ತತ್ತ್ವವನ್ನು ಅರಿತರೆ ಸಾಕು; ಆ ಮನವೇ ಘನಮನವಾಗುತ್ತದೆ. ಅಪ್ರಮಾಣ ಅಪ್ರತಿಮ ವಸ್ತುವಾಗುತ್ತದೆ. ಮಂಗಳ ಮೂರ್ತಿಯೇ ತಾನಾಗುತ್ತದೆ. ಅರಿವೆಂಬ ಗುರುದೇವನು ಎಂದೆಂದೂ ಹಿಂಗದ ನಿಸ್ಸೀಮ ಸುಖವನ್ನು ಮನಕ್ಕೆ ಉಣ್ಣಿಸಿ ತನ್ನಂತೆ ಮಾಡಿಕೊಳ್ಳುತ್ತಾನೆ.

**11**

**ಅಂಗವಿಸನನ್ಯಕ್ಕೆ ಹಿಂಗಿಹ ಮಾಯಕ್ಕೆ**
**ಸಂದ ಸುಖವೆ ಶಿವನ ಅಂಘ್ರಿಗಾಗಿ,**
**ಮಂಗಳ ಉರುತರ ಬೆಳಗು ಪ್ರಕಾಶಿಸುವ**
**ನಿಸ್ಸಂಗ ಗುರುವು ಚೆನ್ನಬಸವಣ್ಣನು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶಿವನೆ ಅಂಗದಲ್ಲಿ ನೀನು ಸೃಷ್ಟಿ ಮಾಡಿರುವ ಮಾಯೆಯನ್ನು ನಿನ್ನ ಕೃಪೆಯಿಂದ ಗೆದ್ದ ಕಾರಣ ನಿನ್ನ ಹೊರತು ಅನ್ಯಕ್ಕೆ ಆತುರಪಡುವುದಿಲ್ಲ. ಏಕೆಂದರೆ ಅಂಗದಲ್ಲಿಯ ಮಾಯೆ ಮಾಯವಾಗಿದೆ; ನಿನ್ನ ಪಾದದ ಸುಖದಿಂದ ಶಿವನೆ!

ಅಂಗದಲ್ಲಿದ್ದು, ಅಂಗದಲ್ಲಿಯೇ ಮಾಯೆಯನ್ನು ಸೃಷ್ಟಿಸಿ, ಅದರ ಸಂಗಸುಖದಿಂದ ಬಹುದೂರ ಉಳಿದ ಗುರುದೇವ ನೀನು. ಕತ್ತಲಿನಲ್ಲಿ ಬೆಳಗುವ ದೀಪ ಕತ್ತಲಿನ ಸಂಗ ಮಾಡಬಲ್ಲುದೆ? ಹಾಗೆಯೇ ಪ್ರತಿ ಅಂಗದಲ್ಲಿಯೂ ಸಂಗಮವಾದ ನೀನು ಅಂಗವನ್ನು ಆವರಿಸಿದ ಮಾಯೆಯೆಂಬ ಕತ್ತಲಿನ ಸಂಗವನ್ನು ಮಾಡಬಹುದೆ? ಅದು ಊಹಿಸಲೂ ಸಾಧ್ಯವಿಲ್ಲ.

ನೀನಿದ್ದ ಅಂಗದಲ್ಲಿ ನಾನೂ ಇರುವೆ. ನೀನು ಅನಂಗ ಸಂಗಿ, ನಾನು ಅಂಗಸಂಗಿ. ಅಂಗ ಒಂದೇ. ಅದು ಹೆಣ್ಣಾದರೇನು; ಗಂಡಾದರೇನು? ಅಂಗದಲ್ಲಿ ಸಂಗಮವಾದ ನೀನು ಕೂಡಾ ಒಬ್ಬನೆ!

ನಯನದಲ್ಲಿ ನಿಮ್ಮ ಮೂರುತಿ ತುಂಬಿದೆ. ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿದೆ. ನೀನು ಸೃಷ್ಟಿಸಿದ ಮನದಲ್ಲಿ ನಿನ್ನ ನೆನಹು ತುಂಬಿದೆ. ಶಿವನೆ ನಿನ್ನ ಚರಣ ಕಮಲದಲ್ಲಿ ನಾನು ತುಂಬಿ ನನ್ನ ಸಂಪೂರ್ಣ ಅಹಂಕಾರವನ್ನು ಕಳೆದುಕೊಂಡೆ ಗುರುದೇವನೆ. ನೆತ್ತಿಯಲ್ಲಿ ವಾಸ ಮಾಡಿದ ಅಂಗದ ಅಹಂಕಾರ ನಿನ್ನ ಪಾದದಲ್ಲಿ ಸಂಗಮವಾಗಿ ನಿವೃತ್ತಿಯಾಯಿತು ಶಿವನೆ.

ಅಂಗ ಒಂದೇ. ಅಂಗದ ನೆತ್ತಿ ಒಂದೇ. ಅಂಗದ ಪಾದವೂ ಒಂದೇ. ಆದರೂ ನೆತ್ತಿಯಲ್ಲಿ

ಅಹಂಕಾರ. ಪಾದ ನಿರಹಂಕಾರ! ಅದು ಏನು ತುಳಿದರೂ ಹೇಸುವುದಿಲ್ಲ. ಏಕೆಂದರೆ ತುಳಿದುದೆಲ್ಲವೂ ಪಾದಕ್ಕೆ ಪ್ರಸಾದ. ನೆತ್ತಿಗೆ ವಾಕರಿಕೆ, ಅಸಹ್ಯ, ಇರಿಸು ಮುರಿಸು.

ಮಲ ಸೆಗಣಿ ಗಂಜಳ, ಉಗುಳು ಧೂಳು ಕೆಸರು ತುಳಿದ ಪಾದ ಆನಂದದಿಂದ ನಿದ್ರಿಸುತ್ತದೆ. ವಿರಮಿಸುತ್ತದೆ. ನೋಡಿದ ನೆತ್ತಿಗೆ ಸಂಕಟ. ನಿದ್ರೆ ಹತ್ತುವುದಿಲ್ಲ. ತುಳಿದುದನ್ನು ನೆನೆ ನೆನೆದು ಉದ್ರೇಕಗೊಳ್ಳುತ್ತದೆ.

ನೆತ್ತಿಯಲ್ಲಿ ನಾನಿದ್ದೇನೆ. ಪಾದದಲ್ಲಿ ನೀನಿರುವಿ. ನಾನು ನಿನ್ನ ಚರಣ ಕಮಲದಲ್ಲಿ ವಿರಮಿಸಿದಾಗಲೇ ನನಗೆ ಮುಕ್ತಿ! ಅನ್ಯಕ್ಕಾಗಿ ಅಂಗವಿಸದೆ ಅಂಗದ ಅಜ್ಞಾನವೆಲ್ಲ ಹಿಂಗಿ, ಮಂಗಳಮಯವಾದ ನಿನ್ನ ಶ್ರೇಷ್ಟ ಶ್ರೀಪಾದಗಳಲ್ಲಿ ಬೆಳಗುವ ಬೆಳಕಿನಲ್ಲಿ ನಾನು ಲೀನವಾದೆ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನನೆ.

**12**

**ಅಂಗಾಲಕೋಪವ ಮನಕ್ಕೆ ತಂದಿಪ್ಪವನ,**
**ಆ ಮನದ ಕೋಪವ ಹೃದಯದಲ್ಲಿಟ್ಟುಕೊಂಡಿಪ್ಪವನ**
**ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳಿವೆ,**
**ಎನ್ನ ನೊಸಲ ಅಮೃತದಿಂದ ಅವನ ಮನವ ತಿಳುಹುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಇಡೀ ಅಂಗ ಒಂದೇ ಆದರೂ ಮನ ಅಂಗವನ್ನು ಅಂಗಾಲು ಪಾದ ಹಣೆ ನೆತ್ತಿ ಮುಖ ಹೊಟ್ಟೆ ಬೆನ್ನು ತೊಡೆ ಮೊಣಕಾಲು ಮುಂಗಾಲು ಬುಜ ರಟ್ಟೆ ಕೈ ಕಣ್ಣು ಮೂಗು ಬಾಯಿ ನಾಲಿಗೆ ಕಿವಿ ಚರ್ಮ ಎಂದು ಮುಂತಾಗಿ ವಿಂಗಡಿಸಿಕೊಂಡಿದೆ. ಆಯಾ ಸ್ಥಾನಗಳು ಪವಿತ್ರ ಅಪವಿತ್ರ, ಎಂದು ಮನ ಮನದಟ್ಟು ಮಾಡಿಕೊಂಡಿದೆ.

ಕಾವಿ ಧರಿಸಿದ ಅಂಗ ವಿಶಿಷ್ಟ: ಅದರ ಪಾದ ಮುಟ್ಟಿ ನಮಸ್ಕರಿಸದಿದ್ದರೆ ಅಂಗಾಲಿನ ಕೋಪ ಮನಕ್ಕೆ ಬರುತ್ತದೆ. ಆ ಮನದ ಕೋಪ ಹೃದಯದಲ್ಲಿ ಮನೆ ಮಾಡಿಕೊಂಡು ಅಂಗ ಇರುವವರೆಗೆ ಅಂಗವನ್ನು ಸುಡುತ್ತದೆ. ಹಣೆ ಪಾದ ಸ್ಪರ್ಶಿಸದಿದ್ದರೆ ಮನಕ್ಕೆ ಕೋಪ. ಹೃದಯಕ್ಕೆ ಸದಾ ತಾಪ.

ಕಾವಿ ಧರಿಸಿದ ಅಂಗವು ವಿಶಿಷ್ಟವಲ್ಲ. ಅದರ ಪಾದ, ಅದರ ನೆತ್ತಿ, ಅದರ ಕೈಗಳು ಕೂಡಾ ವಿಶಿಷ್ಟವಲ್ಲ. ಆದರೂ ಆ ಅಂಗವನ್ನು ಆವರಿಸಿದ ಮನಕ್ಕೆ ಕೋಪ. ನೆತ್ತಿ ನೊಸಲು ಪಾದಕ್ಕೆ ತಾಗದಿದ್ದರೆ ಕೋಪ. ಈ ಕೋಪ ಕಳೆದುಕೊಳ್ಳುವ ಬಗೆ ಹೇಗೆ ಎಂಬುದು ಅಂಗಕ್ಕೆ ತಿಳಿದಿಲ್ಲ. ಆದರೆ ಈ ಕೋಪ ಹೃದಯದಲ್ಲಿ ಮನೆ ಮಾಡಿಕೊಂಡು ಹೃದಯಕ್ಕೆ ಮತ್ತೆ ಮತ್ತೆ ಕೋಪದ ಕಿಚ್ಚನು ಹಚ್ಚುತ್ತದೆ.

ಅಂಗಾಲ ಕೋಪವನು ನೊಸಲ ಸ್ಪರ್ಶದಿಂದ ಕಳೆದುಕೊಳ್ಳಬಹುದು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ನೊಸಲು ಪಾದ ಸ್ಪರ್ಶ ಮಾಡದಿದ್ದಕ್ಕಾಗಿ ಮನದಲ್ಲಿ ಕೋಪ ಹುಟ್ಟಿ ಹೃದಯದಲ್ಲಿ ಸಂಗ್ರಹವಾಗಿದೆ. ಸದಾ ಪಾದಸ್ಪರ್ಶ ಮಾಡಿಸಿಕೊಳ್ಳುತ್ತಿರುವ ನೊಸಲಿನಲ್ಲಿ ಅಹಂಕಾರ ತುಂಬಿದೆ. ಆ ಅಹಂಕಾರ ಹೃದಯಕ್ಕೆ ಹರಿದು ಮತ್ತೆ ಮತ್ತೆ ನೆನಪಿಸುತ್ತದೆ. ಪಾದಸ್ಪರ್ಶ ಮಾಡಿಸಿಕೊಂಡ ಆನಂದ, ಪಾದಸ್ಪರ್ಶ ಮಾಡದೇ ಇರುವ ಸಿಟ್ಟು ಇವೆರಡೂ ಹೃದಯದಲ್ಲಿ ಸಂಗ್ರಹವಾಗಿ ಇಡೀ

ಅಂಗವನ್ನು ಸುಳ್ಳು ಸುಖ ಮತ್ತು ಸಿಟ್ಟಿನಿಂದ ಸುಡುತ್ತಾ ಅಂಗವನ್ನೇ ಕೋಪಿಷ್ಟ ಅಂಗವನ್ನಾಗಿ ಮಾಡಿ, ಮನ ಗೆದ್ದೆನೆಂದು ಆನಂದದಿಂದ ಅಂಗದಲ್ಲಿಯೇ ನಲಿದಾಡುತ್ತದೆ.

ಪಾದದಲ್ಲಿ ಅರಿವೆಂಬ ಗುರುದೇವನಿದ್ದಾನೆಂದು ನೊಸಲಿಗೆ ತಿಳಿಯದು. ನೊಸಲಿನಲ್ಲಿದ್ದ ಅಹಂಕಾರ ಪಾದಕ್ಕೆ ಬಾಗದು. ಪಾದಕ್ಕೆ ಬಾಗಿ ನಮಸ್ಕರಿಸಿದರೆ ನಮಸ್ಕರಿಸಿದ ನೆತ್ತಿಯ ಅಹಂಕಾರ ನಷ್ಟವಾಯಿತು. ನಮಸ್ಕರಿಸಿಕೊಂಡ ಸುಖ, ನಮಸ್ಕರಿಸದೇ ಇದ್ದ ದುಃಖ ದುಃಖವಾಗಿ ನೊಸಲ ದುಃಖವನ್ನು ಇಮ್ಮಡಿಗೊಳಿಸಿತು. ಅದು ಅಹಂಕಾರವಾಗಿ ಮಾರ್ಪಟ್ಟು ನಮಸ್ಕರಿಸಿಕೊಂಡ ಹೃದಯದಲ್ಲಿ ಸಂಗ್ರಹವಾಯಿತು. ನೆನಪಾದಂತೆಲ್ಲ ನೊಸಲ ಕೋಪ ತಾಪಗಳು ಅಧಿಕವಾಗಿ ಇಡೀ ಅಂಗ ಅಗ್ನಿಗೆ ಬಲಿಯಾಯಿತು.

ತನ್ನ ಹೃದಯದಲ್ಲಿ ಹುಟ್ಟಿದ ಕೋಪ ತನಗೆ ತಿಳಿಯದೇ ಹೋಯಿತು. ಇದಕ್ಕೆ ಸಿದ್ಧರಾಮ ಶಿವಯೋಗಿಗಳು ಸರಳವಾದ ಉಪಾಯವನ್ನು ಕಂಡು ಹಿಡಿದಿದ್ದಾರೆ.

ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳಿವೆ, ಎನ್ನ ನೊಸಲ ಅಮೃತದಿಂದ ಅವನ ಮನವ ತಿಳುಹುವೆ, ಕಪಿಲಸಿದ್ಧ ಮಲ್ಲಿಕಾರ್ಜುನ:

ಇದು ಬಹಳ ಸರಳ ಸೂತ್ರ. ಆದರೂ ಬಹು ಕಠಿಣವಾದ ಸೂತ್ರ. ಕಾವಿ ಧರಿಸಿ ಗುರುವೆನ್ನಿಸಿಕೊಂಡ ಅಂಗಕ್ಕೆ ನಮಸ್ಕರಿಸಿದರೆ ಸುಖ, ನಮಸ್ಕರಿಸದಿದ್ದರೆ ದುಃಖ. ಇವೆರಡೂ ಮನಕ್ಕೆ ಬಂದು ಹೃದಯದಲ್ಲಿ ಸಂಗ್ರಹವಾಗಿ ಮನದ ಕೋಪ ಇಮ್ಮಡಿಯಾಗಿದೆ. ಅದು ಅಂದೊಂದೇ ಅಲ್ಲ; ತನು ಇರುವವರೆಗೂ ತನುವನ್ನೇ ಸುಡುತ್ತದೆ. ಇದು ನಷ್ಟವಾಗಬೇಕಾದರೆ ನಮಸ್ಕರಿಸಿದ ಅವನ (ಶಿಷ್ಯ)ಪಾದಕ್ಕೆ ಗುರುವೆನ್ನಿಸಿಕೊಂಡ ತನ್ನ ನೊಸಲ ತಂಪು ತಂದು ತಳಿದಾಗ ನೊಸಲಲ್ಲಿದ್ದ ಅಹಂಕಾರ ಸುಟ್ಟು ಭಸ್ಮವಾಗುತ್ತದೆ. ನೊಸಲಲ್ಲಿದ್ದ ಅರಿವಿನ ಅಮೃತದಿಂದಾಗಿ ಅದರ ಸ್ಪರ್ಶದಿಂದಾಗಿ ಶಿಷ್ಯನ ಮನವೂ ಘನಮನವಾಗುತ್ತದೆ. ಶ್ರೀ ಪಾದದ ಅಮೃತ ಗುರುವಿಗೂ ಗುರುವಿನ ನೊಸಲ ಅಮೃತ ಶಿಷ್ಯನಿಗೂ ಲಭ್ಯವಾಗುತ್ತದೆ. ಗುರು ಶಿಷ್ಯರಿಬ್ಬರಿಗೂ ದೊರೆತದ್ದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನ ಕರುಣೆ. ಇದು ಸಹಜ ಜ್ಞಾನ. ನೆತ್ತಿ ಪಾದವನ್ನು ಬೇರ್ಪಡಿಸದ ಸಹಜ ಜ್ಞಾನ.

**13**

**ಪಾದೋದಕದಿಂದ ಅಂಗರಕ್ಷಣಂಗಳ ಮಾಡುವೆ;**
**ಲಿಂಗೋದಕದಿಂದ ಸರ್ವಪವಿತ್ರವ ಮಾಡುವೆ;**
**ಪ್ರಸಾದೋದಕದಿಂದ ಪ್ರಾಣನ ನೆಲೆಯನರಿವೆ**
**ಇಂತೀ ತ್ರಿವಿಧೋದಕದಿಂದ ಶುದ್ಧನಹೆ, ಸಿದ್ಧನಹೆ, ಪ್ರಸಿದ್ಧನಹೆ,**
**ಕಪಿಲಸಿದ್ಧ ಮಲ್ಲಿಕಾರ್ಜುನ ತಾನಹೆ.**

ವಿಶ್ವ ವಿದ್ಯಾಲಯಗಳಿಂದ ಶಾಲಾ ಕಾಲೇಜುಗಳಿಂದ ಮಾನವ ಮಹಾ ಮಾನವನಾಗಲಾರ. ಮಾನವನಲ್ಲಿಯೇ ಮಹಾ ಮಾನವ ಸಂಗಮವಾಗಿದ್ದಾನೆ. ಮಹಾ ಮಾನವನನ್ನು ಮಾನವನೇ ಕಂಡುಕೊಂಡು ಮಹಾ ಮಾನವನಾಗಬೇಕು. ಇಂತಹ ಜ್ಞಾನ ಶಿಕ್ಷಣದ ಕಾಶಿಯಾಗಿತ್ತು ಕಲ್ಯಾಣ.

ನೋಡುವ ಕಣ್ಣಲ್ಲಿ ಅಜ್ಞಾನ ಆವರಿಸಿದೆ. ಹೀಗಾಗಿ ಮಾನವ ನೋಡುವ ಮೂಲಕ ಕಾಮುಕನಾಗುತ್ತಾನೆ. ನೋಡುವ ಕಣ್ಣಲ್ಲಿಯೇ ಜ್ಞಾನ ಸಂಗಮವಾಗಿದೆ. ಹೀಗಾಗಿ ನೋಡಿ

ಕಾಮುಕನಾದದ್ದು ತನಗೆಯೇ ತಿಳಿಯುತ್ತದೆ. ಅಜ್ಞಾನದಿಂದ ನೋಡಬೇಡವೆಂದು ಕಣ್ಣಿಗೆ ಜ್ಞಾನದ ಕಣ್ಣು ಬೋಧಿಸಿದಂತಾಗಲಿಲ್ಲವೆ? ಅಂದರೆ ಕಣ್ಣಿಗೆ ಜ್ಞಾನದ ಕಣ್ಣಿನಿಂದಲೂ ನೋಡಲು ಬರುತ್ತದೆ; ಅಜ್ಞಾನದ ಕಣ್ಣಿನಿಂದಲೂ ನೋಡಲು ಬರುತ್ತದೆ. ಕಣ್ಣು ಇವೆರಡೂ ಕಣ್ಣಿಗೆ ಉಪಕರಣವಾಗಿದೆ.

ಸರ್ವಾಂಗದಲ್ಲಿ ಜ್ಞಾನ ಭರಿತವಾಗಿದೆ; ಅಜ್ಞಾನ ಆವರಿಸಿಕೊಂಡಿದೆ. ಅಜ್ಞಾನ ಮತ್ತು ಜ್ಞಾನಕ್ಕೆ ಅಂಗ ಉಪಕರಣವಾಗಿದೆ. ಅಜ್ಞಾನ ಬಳಕೆ ಮಾಡಿದ ಅಂಗ ತಾಮಸಿಗ ಎಂದು ರಾಜಸಿಗ ಎಂದು ಸಾತ್ವಿಕನೆಂದು ಕರೆಯಿಸಿಕೊಳ್ಳುತ್ತದೆ. ಜ್ಞಾನ ಬಳಕೆ ಮಾಡಿಕೊಂಡ ಅಂಗ ಜ್ಞಾನಿ ಸಂತ ಮಹಾಂತ ದಾಸ ಶರಣ ಮಹಾವೀರ ಬುದ್ಧ ಕ್ರಿಷ್ಣ ಕ್ರಿಸ್ತ ಎಂದು ಕರೆಯಿಸಿಕೊಳ್ಳುತ್ತದೆ.

ಅಂಗವನ್ನು ಅಜ್ಞಾನದಿಂದ ಬೇರ್ಪಡಿಸಲು ಅಂದರೆ ರಕ್ಷಣೆ ಮಾಡಲು ಅಂಗದಲ್ಲಿಯೇ ಸಂಗಮವಾದ ಜ್ಞಾನವನ್ನೇ ಬಳಕೆ ಮಾಡಬೇಕು. ಸಿದ್ಧರಾಮ ಶಿವಯೋಗಿಗಳು ಜ್ಞಾನವನ್ನು ಅಂಗೋದಕ ಎಂದು ಕರೆದಿದ್ದಾರೆ. ಅಂಗದ ಉದಕವನ್ನೇ ಸಿಂಪಡಿಸಿ ಅಂಗವನ್ನು ರಕ್ಷಣೆ ಮಾಡುವ ವಿಧಾನವನ್ನು ಓದುಗರಿಗೆ ತಿಳಿಯಪಡಿಸಿದ್ದಾರೆ.

ಅಂಗದಿಂದಲೇ ಅಂಗವನ್ನು ರಕ್ಷಣೆ ಮಾಡಬೇಕು. ಅರಿವಿನಿಂದಲೇ ಅರಿವಿನ ಮೂಲಕ ಅಂಗವನ್ನು ರಕ್ಷಣೆ ಮಾಡಿ ಸರ್ವಾಂಗವನ್ನೂ ಪವಿತ್ರ ಮಾಡಬೇಕು. ಅಂಗಕ್ಕೆ ಬಡಿದ ಶಬ್ದ ಸ್ಪರ್ಶ ರುಚಿ ಗಂಧ ದೃಶ್ಯಗಳನ್ನು ಪ್ರಸಾದ ಮಾಡಿಕೊಂಡು ಆ ಪ್ರಸಾದದಿಂದಲೇ ಪ್ರಾಣನ ನೆಲೆಯನು ಅರಿಯಬೇಕು. ಹೀಗೆ ತ್ರಿವಿಧ ಉದಕದಿಂದ ಶುದ್ಧನಾಗಿ ಸಿದ್ಧನಾಗಿ ಪ್ರಸಿದ್ಧನಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಬೇಕು.

ಇಂತಹ ಅಂಗಕ್ಕೆ ಜಾತಿ ಮತ ಪಂಥಗಳ ಸೋಂಕಿಲ್ಲ. ಹೆಣ್ಣು ಗಂಡು ಎಂಬ ಭೇದವಿಲ್ಲ. ಭಾಷೆ ವೇಷ ದೇಶ ಗಡಿಗಳ ಭೇದವಿಲ್ಲ.

**14**

**ಅಂಜನಗಾರನ ಕೈ ನಂಜುಗೊಂಡಿದೆ ಅಯ್ಯಾ.**
**ಅಂಜನಗಾರ ಹರುಷವಾಗಲೆಂದು**
**ಹರಸಿಕೊಂಡ ಹರಕೆ ಈಡೇರಿತ್ತೆನಗಿಂದು.**
**ಕುಂಜರಂಗಳೆಂಟಂಜಿ ಕೆಲ ಸಾರಿದವೈ**
**ಅಂಜನವ ಬಲ್ಲ ನೀನೊಬ್ಬನಲ್ಲದಿಲ್ಲ ಕಾಣಾ,**
**ಕಪಿಲಸಿದ್ಧ ಮಲ್ಲಿನಾಥ.**

ಅಂಜನಗಾರನ ಕೈ ನಂಜುಗೊಂಡಿದೆ ಅಯ್ಯಾ :

ಕಣ್ಣಿದ್ದೂ ಕಾಣುತ್ತಿಲ್ಲ, ಕಿವಿಯಿದ್ದೂ ಕೇಳುತ್ತಿಲ್ಲ, ನಾಲಿಗೆಯಿದ್ದೂ ರುಚಿಸುತ್ತಿಲ್ಲ, ಮೂಗು ಇದ್ದೂ ಮೂಸಿಸಲು ಸಾಧ್ಯವಾಗುತ್ತಿಲ್ಲ, ಚರ್ಮವಿದ್ದೂ ಕೈಗಳಿಗೆ ಸ್ಪರ್ಶಿಸಲು ಸಾಧ್ಯವಾಗುತ್ತಿಲ್ಲ. ಇವುಗಳಿಂದಲೇ ಶ್ರೇಷ್ಠವಾದ ಲಿಂಗಾಂಗವೆಂದು ಹೆಸರಿಟ್ಟು ಕರೆಯಿಸಿಕೊಳ್ಳಬೇಕಾದ ಅಂಗ ಮಂಗನಂತಾಗಿದೆ. ಪಂಚ ಜ್ಞಾನೇಂದ್ರಿಯಗಳ ಮೂಲಕವೇ ಅಜ್ಞಾನದ ಸುಖವನ್ನು ಆನಂದದಿಂದ ಅನುಭವಿಸುತ್ತಾ ವ್ಯರ್ಥ ಕಾಲ ಕಳೆಯುತ್ತಲಿದೆ.

ಮನವೆಂಬ ಮದ್ದಾನೆ ಪಂಚೇಂದ್ರಿಯಗಳನ್ನು ಬಳಸಿಕೊಂಡು, ಅರಿವಿನ ಇಡೀ ದೇಹವನ್ನೇ ಅಜ್ಞಾನದ ತನ್ನ ಸಾಮ್ರಾಜ್ಯವನ್ನಾಗಿ ಮಾಡಿಕೊಂಡಿದೆ. ಕುಲಮದ, ಛಲಮದ,

ಧನಮದ, ರೂಪಮದ, ಯೌವನಮದ, ವಿದ್ಯಾಮದ, ರಾಜಮದ, ತಪೋಮದದಿಂದಾಗಿ ಮನವೆಂಬ ಆನೆಯ ಬಲ ಇಮ್ಮಡಿಯಾಗಿದೆ. ಹೀಗಾಗಿ ಕಣ್ಣಿದ್ದೂ ಕಾಣುತ್ತಿಲ್ಲ. ಕಾಣಿಸುವ ಅರಿವಿನ ಅಂಜನಗಾರನ ಕೈ ನಂಜುಗೊಂಡಿದೆ! ಕಿವಿಯಿದ್ದೂ ಕೇಳುತ್ತಿಲ್ಲ; ಕೇಳಿಸುವ ಅಂಜನಗಾರನ ಕೈ ನಂಜುಗೊಂಡಿದೆ.

ನೋಡುವ ಕಣ್ಣಿಗೆ ಅಂಜನ ಹಾಕಿಕೊಂಡು ನೋಡಿದರೆ ಅಂಗ ಅರಿವಿನ ಲಿಂಗಾಂಗವೇ ಆಗಿದೆ. ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಇವುಗಳಿಗೆ ಕುಲವಿಲ್ಲ. ಅಂಗ ಯಾವ ದೇಶದ್ದಾದರೇನು, ಭಾಷೆಯದ್ದಾದರೇನು, ಹೆಣ್ಣಾದರೇನು, ಗಂಡಾದರೇನು? ಅರಿವಿನ ಅಂಜನ ಹಾಕಿಕೊಂಡು ನೋಡಿದರೆ ಅಂಗಕ್ಕೆ ಕುಲವೇ ಇಲ್ಲ. ಮರೆವಿನಿಂದಾಗಿ ಕಣ್ಣಲ್ಲಿ ಮದ್ದಾನೆ ಸೇರಿಕೊಂಡಿದೆ. ಅಷ್ಟಮದಗಳಿಂದ ಕುಂಜರ ಘೀಳಿಡುತ್ತಲಿದೆ!

ಆನೆಯೂ ಇದೆ; ಅರಿವಿನ ಸಿಂಹವೂ ಇದೆ. ಅಂಜನಗಾರನ ಕೈ ನಂಜುಗೊಂಡಿರುವುದರಿಂದ ಆನೆಯೂ ಸಿಂಹವೂ ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಲಿವೆ. ಆನೆಗೆ ಸಿಂಹದ ಭಯವಿಲ್ಲ. ಸಿಂಹದ ಘರ್ಜನೆ ಆನೆಗೆ ಕೇಳುತ್ತಿಲ್ಲ. ಏಕೆಂದರೆ ಅಂಜನಗಾರನ ಕೈ ನಂಜುಗೊಂಡಿದೆ.

ಅಂಜನಗಾರ ಯಾರೆಂದು ನನಗೆ ಗೊತ್ತಿಲ್ಲ. ಅಂಜನ ಹಾಕಿ ತೋರಿಸುವ ಗಾರುಡಿಗನನ್ನೇ ಮರೆತ ಅವಿವೇಕಿ ನಾನು. ಆನೆಯೆಂದರೆ ಗೊತ್ತಿಲ್ಲ ಸಿಂಹವೆಂದರೆ ಗೊತ್ತಿಲ್ಲ. ಇವೆರಡೂ ಒಂದೇ ತಟ್ಟೆಯಲ್ಲಿ ಉಣ್ಣುತ್ತವೆ ಎಂಬುದೂ ನನಗೆ ಗೊತ್ತಿಲ್ಲ.

ಗೊತ್ತು ಮಾಡಲು ಬಂದ ಬುದ್ಧನ ಮಾತು ಕೇಳದೆ ಪೂಜಿಸಿದ ಅವಿವೇಕಿ ನಾನು. ಗೊತ್ತು ಮಾಡಲು ಬಂದ ಶರಣರನ್ನು ದಾಸರನ್ನು ಮಹಾವೀರನನ್ನು ಪೂಜಿಸಿದ ಅವಿವೇಕಿ ನಾನು. ನೋಡುವ ಕುರುಡು ಕಣ್ಣಿಗೆ ಅಂಜನ ಹಾಕುವವನನ್ನು ತೋರಿಸುವ ಅಂಜನಗಾರರಿವರು. ಮಹಾನುಭಾವರ ಮಾತುಗಳನ್ನು ಅರಿಯದೆ; ಅರಿತರಿತು ಅರಿವನ್ನು ಪೂಜಿಸದೆ ಮರೆತು ಮರೆವಿನ ತನುವನ್ನು ಪೂಜಿಸಿದ ಮರಗುಳಿ ನಾನು.

ಅರಿವಿನಿಂದ ಅರಿತು, ಅಂಜನಗಾರ ಹರುಷಗೊಳ್ಳಲೆಂದು ಹರಕೆ ಹೊತ್ತು, ಅರಿವಿನಿಂದ ಪೂಜಿಸಿದೆ. ಹರಕೆ ಈಡೇರಿತ್ತೆನಗಿಂದು. ಕೂಡಲೇ ಕುಂಜರಗಳು ಎಂಟು ಅಂಜಿ ದಿಕ್ಕಾಪಾಲಾದವು. ಅರಿವಿನ ಸಿಂಹದ ಪಂಜಿನ ಹೊಡೆತದಿಂದ ಆನೆ ಘೀಳಿಟ್ಟಿತು. ಕೊರ್ರನೆ ಕೂಗಿ ನೆಲಕ್ಕುರುಳಿದ ಮದ್ದಾನೆ ಅರಿವಿನ ಸಿಂಹಕ್ಕೆ ಆಹಾರವಾಯಿತು.

ಅಂಜನವ ಬಲ್ಲ ನೀನೊಬ್ಬನಲ್ಲದಿಲ್ಲ ಕಾಣಾ, ಕಪಿಲಸಿದ್ಧ ಮಲ್ಲಿನಾಥ:

ನೋಡುವ ಪ್ರತಿಯೊಂದು ಕಣ್ಣಿನಲ್ಲಿ ಜ್ಞಾನ ಸಂಗಮವಾಗಿದೆ; ಅಜ್ಞಾನ ಆವರಿಸಿಕೊಂಡಿದೆ. ಅಂಜನವ ಬಲ್ಲ ಅಂಜನಗಾರನಿಲ್ಲದಿದ್ದರೆ ಅರಿವಿನ ಮಲ್ಲಯ್ಯನ ದರ್ಶನ ಆಗಲು ಸಾಧ್ಯವಾಗುವುದಿಲ್ಲ. ಸಿದ್ಧರಾಮ ಶಿವಯೋಗಿಗಳು ಅಂಜನಗಾರರಾಗಿ ಅಕ್ಷರದ ಮೂಲಕ ಓದುಗರಿಗೆ ಅರಿವಿನ ಅಂಜನ ಹಾಕಿ ಸತ್ಯ ದರ್ಶನ ಮಾಡಿಸಿದ್ದಾರೆ. ಅರಿವಿನ ಅಂಜನ ಹಚ್ಚಿಕೊಂಡು ನೋಡಿದ ಕಣ್ಣು ಬುದ್ಧನಾಗುತ್ತದೆ. ಕಪಿಲಸಿದ್ಧ ಮಲ್ಲಯ್ಯನಾಗುತ್ತದೆ!

**15**

**ಅಂಜನದಗಿರಿ ರಂಜಿಸುತ್ತಿದೆ ಆಯತವಿಡಿದು ಸುಖವ ಕಂಡು**
**ಅನುಭವದವಳಿಗೆ ಮಾಣಿಕ್ಯ ವರ್ಣವನೇಕೀಕರಿಸಿ ನೋಡಲು**

**ಅನುವಾಯಿತ್ತಯ್ಯ ಅಂಜನದ ಹತ್ತೆಸಳಪೀಠ.**
**ಆ ಪೀಠದಲ್ಲಿ ಭೃತ್ಯನೆಂಬವ ನಿಂದು ಲಿಂಗವಿಡಿದು ನಡೆಯೆ**
**ಉರಿ ನಂದಿ ನೆಲೆಗೊಂಡನಯ್ಯಾ ನಿಮ್ಮ ಶರಣ ಚೆನ್ನಬಸವಣ್ಣನು.**
**ಕಪಿಲಸಿದ್ಧ ಮಲ್ಲಿನಾಥಯ್ಯ, ಚೆನ್ನಬಸವಣ್ಣನಿಂದ ಬದುಕಿದೆನು.**

ಅಂಗವೆಂಬುದು ಅಂಜನವುಳ್ಳಗಿರಿ. ಅದು ಅರಿವಿನಿಂದ ರಂಜಿಸುತ್ತಲಿದೆ. ಅದರ ಆಯತವಿಡಿದು ಅರಿವಿನ ಸುಖ ಕಾಣಬೇಕಿದೆ. ಅಂಗವನ್ನು ಆವರಿಸಿದ ಮನವೆಂಬ ಸುಖಿ ಅಂಗದಲ್ಲಿ ಸಂಗಮವಾದ ಅಂಜನವನ್ನು ಏಕೀಕರಿಸಿ ನೋಡಲು ಅದು ಹತ್ತೆಸಳ ಪೀಠವಾಗಿ ಗೋಚರಿಸಿತು.

ಶ್ವಾಸೋಚ್ಛ್ವಾಸದ ಮೂಲಕ ಅನ್ನವನ್ನು ಜೀರ್ಣಗೊಳಿಸುವ ಪ್ರಾಣದ ಹೃದಯಸ್ಥಾನ ಒಂದು ಪ್ರಮುಖ ಎಸಳಾಗಿ ಗೋಚರಿಸಿತು.

ಉಂಡುದೆಲ್ಲವನ್ನೂ ಸಕಲ ಸಸ್ಯಕಾಶಿಗಳಿಗಾಗಿ ಪ್ರಾಣಿ ಕ್ರಿಮಿ ಕೀಟಗಳಿಗಾಗಿ ಅಮೃತ ರೂಪದಲ್ಲಿ ಹೊರ ಹಾಕುವ ದಿವ್ಯಾಂಗವೊಂದು ಗುದಸ್ಥಾನದ ರೂಪವಾಗಿ ಗೋಚರಿಸಿತು. ಅದು ಅಪಾನವೆಂಬ ಎರಡೆಸಳಾಗಿ ಗೋಚರಿಸಿತು.

ಸರ್ವಾಂಗದಲ್ಲಿ ಚಲನೆ ಉಂಟು ಮಾಡುವ ವ್ಯಾನ ಎಂದು ಹೆಸರಿಟ್ಟುಕೊಂಡ ಮೂರೆಸಳಿನ ಕಾರ್ಯ ಗೋಚರಿಸಿತು.

ಕಂಠದ ಮೂಲಕ ಕೆಮ್ಮು ಬಿಕ್ಕಳಿಕೆ ಉದ್ಘಾರ ಮುಂತಾದ ಕಾರ್ಯನಿರ್ವಹಿಸುವ ಉದಾನವೆಂಬ ಹೆಸರುಳ್ಳ ನಾಲ್ಕೆಸಳಿನ ಹೆಸರಿಟ್ಟುಕೊಂಡು ಅಂಗದಲ್ಲಿಯೇ ಗೋಚರಿಸಿತು.

ನಾಭಿ ಸ್ಥಾನದ ಮೂಲಕ ಅನ್ನರಸವನ್ನು ಸರ್ವಾಂಗಗಳಿಗೆ ತಲುಪಿಸುವ 'ಸಮಾನ'ವೆಂಬ ಐದೆಸಳಿನ ಹೆಸರು ಕೂಡಾ ಅಂಗದಲ್ಲಿಯೇ ಪ್ರಕಟವಾಯಿತು. ಈ ಐದೆಸಳುಗಳು ಮುಖ್ಯ ಪ್ರಾಣವೆಂದು ಕರೆಯಿಸಿಕೊಂಡವು.

ಉಪ ಪ್ರಾಣಗಳಾಗಿ ಅಂಗದಲ್ಲಿಯೇ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯವೆಂದು ಮತ್ತೆ ಐದೆಸಳುಗಳ ಮೂಲಕ ಅಂಗದಲ್ಲಿ ಪ್ರಕಟವಾದವು.

ನಾಗ: ರೋಮಗಳ ಮೂಲಕ ದುಃಖ, ಬೆವರು ಮುಂತಾದವುಗಳನ್ನುಂಟು ಮಾಡಿದರೆ ಕೂರ್ಮದ ಮೂಲಕ ಮುಖದ ಚಲನವಲನಗಳು ಪ್ರಕಟವಾದವು. ಕೃಕರದ ಮೂಲಕ ಮೂಗಿನ ದ್ರವ ವಾಸನೆ ಮುಂತಾದ ಕೆಲಸಗಳನ್ನು ನೆರವೇರಿಸಿತು. ದೇವದತ್ತ ಗುಹ್ಯ ಕಟಿ ಸ್ಥಾನ ಏಳುವ ಕುಳಿತುಕೊಳ್ಳುವ ಚಟುವಟಿಕೆಗಳನ್ನು ನೆರವೇರಿಸಿತು. ಧನಂಜಯ ಬ್ರಹ್ಮರಂಧ್ರದ ಮೂಲಕ ಕಿವಿಯಲ್ಲಿ ಶಬ್ದವನ್ನುಂಟು ಮಾಡಿ ಮರಣ ಕಾಲಕ್ಕೆ ನಿಶ್ಯಬ್ದವಾಯಿತು. ಹೀಗೆ ಅಂಗ ಸಿದ್ಧರಾಮ ಶಿವಯೋಗಿಗಳಿಂದ ಹತ್ತೆಸಳಿನ ಪೀಠವೆಂದು ಹೆಸರು ಪಡೆಯಿತು.

ಹತ್ತೆಸಳಿನ ಈ ಪೀಠದಲ್ಲಿ ಭೃತ್ಯನೆಂಬ ಸೇವಕನು ಲಿಂಗವಿಡಿದು ನಡೆಯೆ ಬೆಳಗಿಂಗೆ ಬೆಳಗಾಗಿ ಬೆಳಗುವ ಚೆನ್ನಬಸವಣ್ಣನೆಂಬ ಶರಣನು ನೆಲೆಗೊಂಡನು. ಭೃತ್ಯನೇ ಚೆನ್ನ ಬಸವಣ್ಣನಾದನು.

ಕಪಿಲಸಿದ್ಧ ಮಲ್ಲಿನಾಥಯ್ಯ, ಚೆನ್ನಬಸವಣ್ಣನಿಂದ ಬದುಕಿದೆನು:

ಬಸವಣ್ಣನೆಂಬ ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕಿನಿಂದ ಸೇವಕನೇ ಚೆನ್ನಬಸವಣ್ಣನಾಗಿ ಹುಟ್ಟಿದನು. ಆತನ ಕರುಣೆಯ ಕೂಸು ನಾನು ಎಂದು ಸ್ಪಷ್ಟಪಡಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**ಅಂತರಾತ್ಮ ಪರಮಾತ್ಮ ಭೂತಾತ್ಮವೊಳಗಾದ ಆಧ್ಯಾತ್ಮಿ ಕೇಳಾ:**
**ನೀನು ಯೋಗದ ಪ್ರಮಾಣ ಬಲ್ಲ ಅಯ್ಯನು**
**ಶ್ರೋತ್ರೇಯ ಮನೆಯಲ್ಲಿ, ನೇತ್ರೆಯ ಜಿಹ್ವೆಯಲ್ಲಿ,**
**ಆನಂದ ಪಾತ್ರೆಯಲ್ಲಿ**
**ಸಂಗತಿ ಸದಾಚಾರ ನಿಷ್ಕಳ ಪರಮಸೀಮೆ ಎಂಬ ಪಾತ್ರೆಯಲ್ಲಿ**
**ಪಂಚಬ್ರಹ್ಮವನೊಡಗೂಡಿದ ಪಂಚಸ್ತ್ರೀಯರಿಗೆ ಪ್ರಸಾದವನಿಕ್ಕುವಾಗ**
**ಪ್ರಸನ್ನತೆಯೆಂಬ ಪ್ರಸಾದವನನುಗ್ರಹಿಸಲರಿಯದೆ**
**ಇದ್ದ ಕಾರಣ ಅಂತರಿಸಿದೆಯಯ್ಯಾ**
**ಆದ್ಯಂತಪ್ರಸಾದವ ಕೊಂಡ ಕಾರಣದಲ್ಲಿ ಆನು ನೀನಾದೆ;**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿ ಸಂದಳಿದೆ.**

ಮನವೆಂಬುದು ಅಜ್ಞಾನಿ. ತನುವನ್ನು ಆವರಿಸಿಕೊಂಡು ಅದನ್ನೇ ಅಂತರಾತ್ಮ ಪರಮಾತ್ಮ ಭೂತಾತ್ಮ ಎಂದು ವಿಂಗಡಿಸಿಕೊಂಡು ಆಧ್ಯಾತ್ಮದ ಸೋಗು ಹಾಕಿಕೊಂಡಿದೆ. ಯೋಗದ ಪಾತ್ರದಲ್ಲಿ ಗೋಚರಿಸಿ ಅದನ್ನು ಪ್ರಮಾಣೀಕರಿಸಿ ಹೇಳುತ್ತದೆ. ಹೇಳುವಾಗ ತನುವಿನ ಮನೆಯನ್ನೇ ಬಳಸುತ್ತದೆ.

ತನುವಿನ ಮನೆಯೆಂಬುದು ಅರಿವಿನ ಆನಂದದ ಪಾತ್ರೆ. ಇಲ್ಲಿ ಪಂಚಬ್ರಹ್ಮರು ವಾಸ ಮಾಡಿದ್ದಾರೆ. ಮನವೆಂಬ ಒಬ್ಬ ಸ್ತ್ರೀ ಐದು ಬ್ರಹ್ಮರೊಂದಿಗೆ ಸ್ತ್ರೀಯಾಗಿದ್ದಾಳೆ. ಕಿವಿ ಕಣ್ಣು ಮೂಗು ನಾಲಿಗೆ ಚರ್ಮವೆಂಬ ಆನಂದದ ಪಾತ್ರೆಗಳನ್ನು ಬಳಸಿ ಊಟ ಮಾಡುತ್ತಾಳೆ.

ಕಿವಿ ಬ್ರಹ್ಮನ ಪಾತ್ರೆ. ಅಲ್ಲಿ ಶಬ್ದವೆಂಬ ಅರಿವಿನ ಪ್ರಸಾದವಿದೆ. ಮನವೆಂಬ ಸ್ತ್ರೀಗೆ ಶಬ್ದ ಪ್ರಸಾದವಾಗದೇ ಇದ್ದ ಕಾರಣ ಅದನ್ನು ಅರಿವಿನಿಂದ ನಿಃಶಬ್ದದ ಮೂಲಕ ಸ್ವೀಕರಿಸಲು ಸಾಧ್ಯವಾಗದ ಕಾರಣ ಕಿವಿಯಿಂದ ಉಂಡು ಬಾಯಿಯಿಂದ ಮಾತನಾಡುತ್ತಾರೆ. ಕಿವಿ ಮಾತನಾಡಲು ಬಾರದ ಮೌನದ ಅಕ್ಷಯ ಪಾತ್ರೆ! ಅಂತರಾತ್ಮ ಪರಮಾತ್ಮ ಭೂತಾತ್ಮ ಯೋಗ ಆಧ್ಯಾತ್ಮ ಎಂದು ಮುಂತಾಗಿ ಹೇಳಲು, ಕೇಳಿದ ಕಿವಿಗೆ ಬರುವುದಿಲ್ಲ. ಹೀಗಾಗಿ ಕಿವಿ ಬ್ರಹ್ಮನ ಮೌನದ ಅಕ್ಷಯ ಪಾತ್ರೆ! ಕಿವಿಯ ಮೌನ ಮುರಿಯಲು ಮನವೆಂಬ ಸ್ತ್ರೀಗೆ ಸಾಧ್ಯವಾಗುವುದಿಲ್ಲ. ಹೀಗಾಗಿ ಕೇಳಿದೆನೆಂದು ಕೇಳಲು ಬಾರದ ಬಾಯಿಯ ಮೂಲಕ ನುಡಿದು ಹೇಳುತ್ತಾಳೆ. ಹೀಗಾಗಿ ಬ್ರಹ್ಮನ ಅರಿವಿನ ಪ್ರಸಾದ ಸ್ತ್ರೀಗೆ ದಕ್ಕಲಿಲ್ಲ!

ಹೂ ನೋಡುವುದು ಕಣ್ಣು. ಇದು ಅರಿವಿನ ಅಕ್ಷಯ ಪಾತ್ರೆ. ಸದಾ ಮೌನಿ! ನೋಡುವ ಪಾತ್ರೆಯಲ್ಲಿ ಮನವೆಂಬ ಸ್ತ್ರೀ ಉಂಡು ಕೀಳಲು ದೇಹಕ್ಕೆ ಆದೇಶ ನೀಡುತ್ತಾಳೆ. ಕಣ್ಣಲ್ಲಿ ಸಂಗಮವಾದ ಹೂವಿನೊಂದಿಗೆ ಸಂಗ ಮಾಡಲು ಮನಕ್ಕೆ ಸಾಧ್ಯವಾಗುವುದಿಲ್ಲ. ಸಸಿಯಲ್ಲಿ ಅರಳಿದ ಹೂ ಮನಕ್ಕೆ ಬೇಕಾಗುತ್ತದೆ. ಬಾಯಿಗೆ ಆದೇಶ ನೀಡಿ ಕೈಗೆ ಕೀಳಲು ಹೇಳುತ್ತದೆ. ನೋಡಲು ಬಾರದ ಕೈಗಳೆರಡು ಮನದ ಆದೇಶ ಪಾಲಿಸುತ್ತವೆ. ಅರಳಿದ ಹೂವಿನ ಸಂತೋಷ ಕ್ಷಣಾರ್ಧದಲ್ಲಿ ಬತ್ತಿ ಹೋಗುತ್ತದೆ. ಕಣ್ಣಲ್ಲಿ ಅರಳಿದ ಪರಮಾನಂದ ಮನದ ಬಳಕೆಗೆ ಬಾರದೆ ಹಾಗೇ ಉಳಿಯುತ್ತದೆ.

ಪಂಚ ಬ್ರಹ್ಮರಿಂದೊಡಗೂಡಿದ ಪಂಚಸ್ತ್ರೀಯರಿಗೆ ಪ್ರಸಾದವನಿಕ್ಕುವಾಗ ಪ್ರಸನ್ನತೆಯೆಂಬ ಪ್ರಸಾದವನನುಗ್ರಹಿಸಲರಿಯದೆ ಇದ್ದ ಕಾರಣ ಅಂತರಿಸೆದೆಯಯ್ಯಾ:

ಕಣ್ಣು ಕಿವಿ ಮೂಗು ಚರ್ಮ ನಾಲಿಗೆಯಲ್ಲಿ ಪಂಚಬ್ರಹ್ಮರಿದ್ದಾರೆ. ಅಂದರೆ ಅರಿವೆಂಬ ಗುರುದೇವನಿದ್ದಾನೆ. ಮಹಾಜ್ಞಾನಿ ಪವಡಿಸಿದ್ದಾನೆ. ಈ ಐದೂ ಜ್ಞಾನೇಂದ್ರಿಯಗಳನ್ನು ಮನವೆಂಬ ಸ್ತ್ರೀ ಐದು ಮುಖದಲ್ಲಿ ಆವರಿಸಿಕೊಂಡಿದ್ದಾಳೆ. ಮನಕ್ಕೆ ಜ್ಞಾನೇಂದ್ರಿಯಗಳ ಪ್ರಸನ್ನತೆಯ ಅರಿವಿನ ಪ್ರಸಾದ ತಿಳಿಯುತ್ತಿಲ್ಲ. ಹೀಗಾಗಿ ಮನಕ್ಕೆ ಅರುವೆಂಬ ಗುರುದೇವನು ಅನುಗ್ರಹಿಸುವುದಿಲ್ಲ. ಅರಿವಿನಿಂದ ಗುರುದೇವನ ಮೂಲಕ ವಸ್ತುಗಳನ್ನು ನೋಡಬೇಕಾದ ಮನ ತಾನೇ ತನ್ನ ಕಣ್ಣಿನಿಂದ ನೋಡುತ್ತದೆ. ಹೀಗಾಗಿ ನೋಡಿ ಪರಮಾನಂದ ಪಡುವುದನ್ನು ಬಿಟ್ಟು ಬೇಡುತ್ತದೆ. ಕೇಳಿ ಬೇಡುತ್ತದೆ. ಮೂಸಿಸಿ ಬೇಡುತ್ತದೆ. ಮುಟ್ಟಿ, ರುಚಿಸಿ ಬೇಡುತ್ತದೆ.

ಜ್ಞಾನವೆಂಬುದು ಸೂರ್ಯನ ಬೆಳಕು. ಬೇಡುವುದಿಲ್ಲ; ಬೆಳಗುತ್ತದೆ. ಸೂರ್ಯ ಜಡ. ಜ್ಞಾನ ಚೇತನ. ಸೂರ್ಯನ ಬೆಳಕನ್ನು ಬೆಳಗುವ ಬೆಳಕು. ಜ್ಞಾನ ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕು.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಪಂಚಬ್ರಹ್ಮ, ಪಂಚ ಸ್ತ್ರೀಯರನ್ನು ಸೃಷ್ಟಿಸಿದ್ದಾರೆ. ಹಾಗೆಯೆ ವ್ಯಾಸ ಮಹರ್ಷಿಗಳು ಮಹಾಭಾರತದಲ್ಲಿ ಪಂಚ ಪಾಂಡವರನ್ನು ಅವರ ಆನಂದಕ್ಕೆ ಬಳಕೆಯಾಗುವ ಒಬ್ಬ ಸ್ತ್ರೀಯನ್ನು, ಶ್ರೀ ಕೃಷ್ಣನನ್ನು, ಕೌರವರನ್ನು ಸೃಷ್ಟಿಸಿದ್ದಾರೆ. ಪಾಂಡವರು ಐದು ಜನ. ಸ್ತ್ರೀ ಒಬ್ಬಳೇ. ಐವರನ್ನು ಸುಖಪಡಿಸಬೇಕು. ಕೌರವರು ನೀಡುವ ದುಃಖವನ್ನು ಸುಖವನ್ನು ದ್ರೌಪದಿ ಪಾಂಡವರೈವರೊಂದಿಗೆ ಹಂಚಿಕೊಳ್ಳುತ್ತಾಳೆ. ಪಗಡೆಯ ಆಟ ಸುಖ ನೀಡಿದರೆ ಅದರಿಂದ ಉಂಟಾಗುವ ಸೋಲು ದುಃಖ ನೀಡುತ್ತದೆ. ಸುಖ ದುಃಖಗಳನ್ನು ತಳ್ಳಿ, ಕೌರವರು ನೀಡುವ ಹಿಂಸೆಯನ್ನು ತಳ್ಳಿ, ಶ್ರೀ ಕೃಷ್ಣ ದ್ರೌಪದಿಯೆಂಬ ಸ್ತ್ರೀಗೆ ದರ್ಶನ ನೀಡುತ್ತಾನೆ. ಆಕೆ ಐದುಜನ ಪಾಂಡವರನ್ನು ಸಾಂತ್ವನಗೊಳಿಸಿ ಅಲ್ಲಿಯೇ ಲೀನವಾಗುತ್ತಾಳೆ.

ದೇಹ ಒಂದೇ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವು ಐದೂ ಪಾಂಡವರು. ಮನವೆಂಬ ಸ್ತ್ರೀಯೇ ದ್ರೌಪದಿ. ಅರಿವೆಂಬ ಪುರುಷನೇ ಶ್ರೀ ಕೃಷ್ಣ. ಐದು ಜ್ಞಾನೇಂದ್ರಿಯಗಳಿಂದ ಉಂಟಾಗುವ ಅಜ್ಞಾನವೇ ನೂರಾ ಒಂದು ಜನ ಕೌರವರು. ದೇಹವೆಂಬುದೇ ರಥ. ಬಳಸಿದಂತೆ ಬಳಕೆಯಾಗುವ ರಥ.

ದೇಹವೆಂಬ ರಥವನ್ನು ಶ್ರೀ ಕೃಷ್ಣ ಬಳಕೆ ಮಾಡಿದರೆ ಬುದ್ಧನಾಗುತ್ತದೆ; ಮಹಾವೀರನಾಗುತ್ತದೆ; ಪೈಗಂಬರ ಕ್ರಿಷ್ಣ ಕ್ರಿಸ್ತನಾಗುತ್ತದೆ. ದೇಹವನ್ನು ಮನ ಬಳಕೆ ಮಾಡಿದರೆ ಸಿದ್ಧಾರ್ಥನಾಗುತ್ತದೆ. ವರ್ಧಮಾನನಾಗುತ್ತದೆ. ಪಾಂಡವರಾಗುತ್ತದೆ. ಇಲ್ಲ ಕೌರವರಾಗುತ್ತದೆ. ರಾವಣ, ಹಿರಣ್ಯಕಶ್ಯಪನಾಗುತ್ತದೆ. ಮಹಾಮಾನವನಾಗದೆ ಅಸಹಜವಾಗಿ ಇರುವಾಗಲೇ ಸತ್ತು, ಸತ್ತೂ ಬದುಕುತ್ತದೆ. ಸಕಲ ಅಜ್ಞಾನದ ಸಂದುಗಳನೆಲ್ಲ ಅಳಿದಳಿದು ಮಹಾಜ್ಞಾನವೆಂಬ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುವುದನ್ನು ಮರೆಯುತ್ತದೆ. ಆ ಮರೆವಿನಲ್ಲಿಯೇ ಮೆರೆಯುತ್ತದೆ.

**17**

**ಅಂದು ಅನಾದಿಯಲ್ಲಿ ತಂದು ಬಿತ್ತಿದ ಬೀಜ**
**ಮುಂದಕ್ಕೆ ಮೂಲ ನಾಶವೈ.**
**ಸಾಧಿಸುವ ನಿಜವ ಮೂಲನಾಶವ ಮಾಡಿದರೆ**
**ತಾನೆ ಫಲ ಕಪಿಲಸಿದ್ಧಮಲ್ಲಿಕಾರ್ಜುನಾ.**

ಆದಿ ಅನಾದಿಯಿಂದ ಅತ್ತತ್ತಲೂ ಅಲ್ಲದ ಬಯಲ ಬೀಜವೊಂದು ಮೊಳೆತು ಮಹಾ

ವೃಕ್ಷವಾಗಿ ಬಯಲಬೀಜದ ಫಲದೋರಿ ಭೂಮಿ ಆಕಾಶ ಕಾಯಗಳನ್ನು ಬೆಳಗುತ್ತಲಿದೆ.

ಬಯಲು ಕಾಣುವುದಿಲ್ಲ. ಅದರ ಬೀಜವೂ ಕಾಣುವುದಿಲ್ಲ. ಆದರೆ ವೃಕ್ಷಗಳು ಮಾತ್ರ ಕಾಣುತ್ತವೆ. ಆ ವೃಕ್ಷಗಳು ಬೆಳೆದು ಫಲಬಿಟ್ಟು ಮತ್ತೆ ವೃಕ್ಷಗಳಾಗಿ, ಮಹಾ ವೃಕ್ಷಗಳಾಗಿ, ಬೋಧೀ ವೃಕ್ಷಗಳಾಗಿ, ತಮ್ಮ ಮೂಲವನ್ನು ತಿಳಿಯಲು ಹೋದರೆ; ವೃಕ್ಷ ಅದರ ಫಲ ಕೂಡಲೇ ನಾಶವಾಗಿ ಬಯಲನ್ನು ಸೇರುತ್ತವೆ.

ಬಯಲು ಬಯಲನೆ ಬಿತ್ತಿ, ಬಯಲು ಬಯಲನೇ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ಬಯಲು ಜೀವನ ಬಯಲು ಭಾವನೆ ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು. ನಾನಿಮ್ಮ ನಂಬಿ ಬಯಲಾದೆ ಗುಹೇಶ್ವರಾ.

ಬೀಸುವ ಗಾಳಿಗೆ ಹರಿಯುವ ಜಲಕ್ಕೆ ಉರಿಯುವ ಅಗ್ನಿಗೆ ಥಳಥಳನೆ ಮಿಣುಕುವ ಆಕಾಶ ಕಾಯಗಳಿಗೆ ಸೂರ್ಯ ಚಂದ್ರ ಭೂಮಿಗೆ ಇದರ ಮೇಲಿನ ಗಿಡ ಮರ ಬಳ್ಳಿಗೆ ಉರುಗ ಕೀಟ ಜಲಚರಗಳಿಗೆ ಪ್ರಾಣಿವರ್ಗಕ್ಕೆ ಕಾರಣವಾದದ್ದು ಬಯಲು! ಬಯಲ ಬೀಜದಿಂದಲೇ ಸಕಲ ಜೀವರಾಶಿಗಳು. ಇದೆಲ್ಲವನ್ನು ತಿಳಿಯುವ ತನು ಕೂಡಾ ಬಯಲ ಬೀಜದ ವೃಕ್ಷ. ಬೋಧೀ ವೃಕ್ಷ. ತನಗೆ ತಾನೇ ತನ್ನೊಂದಿಗೆ ಮೌನದ ಮಾತುಗಳನ್ನು ಮಾತನಾಡಿಕೊಳ್ಳುವ ಮಹಾವೃಕ್ಷ!

ಬಯಲು ತಾನೇ ಬೀಜವಾಗಿ ಅಂಗದಲ್ಲಿ ಅಂಗವಾಗಿ ಅಂಕುರಿಸಿ, ಅಂಕುರಿಸಿದ ಆ ಅಂಗದಲ್ಲಿಯೇ ಲಿಂಗವಾಗಿ ಬಚ್ಚಿಟ್ಟುಕೊಂಡು, ಅಂದು ಅನಾದಿಯಲ್ಲಿ ತಂದು ಬಿತ್ತಿದ ಬೀಜವನ್ನು ಮಹಾ ಬೋಧೀವೃಕ್ಷವಾಗಿ ತಿರುಗಾಡುತ್ತಾ ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ಪರಮಾನಂದದಿಂದ ನೋಡುತ್ತಾ; ಸಾಧಿಸಿದ ನಿಜವನ್ನು ತಾನೇ ಅರಿತು ಇದ್ದಾಗಲೇ ಮೂಲ ನಾಶವ ಮಾಡಿ, ತಾನೇ ತನ್ನ ಅರಿವಿನ ಫಲವನ್ನು ಅನುಭವಿಸಿದ; ಕಪಿಲಸಿದ್ಧ ಮಲ್ಲಿಕಾರ್ಜುನನು.

**18**

**ಅಂದು ಅರಿಯಲಾದ ಆನಂದ ರೂಪಿನ ನಿಜವನು**
**ತಂದೆನ್ನ ಕರಕ್ಷೇತ್ರದಲ್ಲಿ ಬಿತ್ತಿದ, ಸದ್ಗುರುಸ್ವಾಮಿ.**
**ಕೊಂಬು ಬೇರಾಗಿ ಬೇರು ಕೊಂಬಾಗಿ ಫಲಂಗಳಾರಾದವು.**
**ಆ ಫಲ ಗುರುವಿಂಗೊಂದು ಲಿಂಗಕ್ಕೊಂದು**
**ಉಳಿದ ನಾಲ್ಕ ಜಂಗಮಕ್ಕಿತ್ತು**
**ಹಿಂದು ಮುಂದುಗೆಟ್ಟ ಕಪಿಲಸಿದ್ಧ ಮಲ್ಲಿಕಾರ್ಜುನ.**

ತನುವನ್ನು ಆವರಿಸಿದ ಮನವನ್ನು ಹಿಡಿದು, ಹೆಡೆಮುರಗಿ ಕಟ್ಟಿ, ಪರಮಾನಂದ ಸ್ವಸ್ವರೂಪದ ಜ್ಞಾನವನ್ನು ಉಣಬಡಿಸಿದ ಗುರುದೇವನನ್ನು ಏನೆಂದು ಕರೆಯುವುದು. ಆತನೇ ನನಗೆ ತಂದೆ. ಆತನೇ ನನಗೆ ತಾಯಿ. ಆತನೇ ನನಗೆ ಬಂಧು ಬಳಗ. ಆತನಲ್ಲದೆ ಬೇರಾರು ಎನಗಿಲ್ಲ ಎಂದು ಬಸವಣ್ಣ ಹಾಡಿದುದು ಪರಮ ಸತ್ಯ.

ತಂದೆ ತಾಯಿಗಳು ಮಾಂಸ ಪಿಂಡಕ್ಕೆ ಜನ್ಮ ಕೊಟ್ಟರು. ಅದರ ಹುಟ್ಟು ಸಾವುಗಳ ದುಃಖವನ್ನು ಕಳೆಯದೇ ಹೋದರು. ಸದ್ಗುರು ಸ್ವಾಮಿಯು ಆ ಮಾಂಸ ಪಿಂಡವನ್ನು ಮಂತ್ರಪಿಂಡವನ್ನಾಗಿಸಿದರು.

ತನುವನ್ನು ಆವರಿಸಿದ ಮನವನ್ನು ಹಿಡಿದು ಅದರ ಮನೋರೋಗವನ್ನು ಬಿಡಿಸಿದರು. ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ದರುಶನವನ್ನು ಮನಕ್ಕೆ ಮಾಡಿಸಿದರು. ಮನವನ್ನೇ ಮಹಾದೇವನನ್ನಾಗಿಸಿದರು.

ಬೇರಿದ್ದವೃಕ್ಷವನ್ನು ತೋರಿದರು. ಅಂಗವನ್ನು ತೋರಿ ಇದು ಬೇರಿಲ್ಲದಮರವೆಂದು ಅರುಹಿದರು. ಕೊಂಬೆಯನ್ನೇ ಬೇರನ್ನಾಗಿಸಿದರು; ಬೇರನ್ನೇ ಕೊಂಬೆಯನ್ನಾಗಿಸಿದರು. ಷಡ್ರಸ ಫಲಂಗಳನ್ನು ಅಲ್ಲಿಯೇ ತೋರಿ ಅದರ ಅರಿವಿನ ರಸವನ್ನು ಅದಕ್ಕೆ ಉಣಬಡಿಸಿ ಗುರುವಿಂಗೆ ಗುರುವಾದರು.

ಅಂದು ಅರಿಯಲಾದ ಆನಂದ ರೂಪಿನ ನಿಜವನು ತಂದೆನ್ನ ತಂದೆ ಕರವೆಂಬ ತನುವಿನ ಕ್ಷೇತ್ರದಲ್ಲಿ ಬಿತ್ತಿದರು ಸದ್ಗುರು ಸ್ವಾಮಿ. ಆತನ ಲೀಲೆಯೇ ಅನಂತ. ಅಂಗದ ಹಿಂದು ಮುಂದನು ಕೆಡಿಸಿ ಅಂಗವೇ ಲಿಂಗವೆಂದರುಹಿದರು. ಕಪಿಲಸಿದ್ಧ ಮಲ್ಲಿಕಾರ್ಜುನನ ದರುಶನ ಭಾಗ್ಯವನ್ನು ಕರುಣಿಸಿದ ಕರುಣಾಕರನನ್ನು ಏನೆಂದು ಹಾಡುವುದು. ಅವನ ದರುಶನವನ್ನು ಕರುಣಿಸಿದ ಇವನು ಬೇರಲ್ಲ. ಇವನ ದರುಶನ ಭಾಗ್ಯ ಕಲ್ಪಿಸಿದ ಅವನು ಬೇರಲ್ಲ. ಎರಡೊಂದಾದ ಘನ!

**19**

**ಅಂದು ಬಸವಣ್ಣ ಬಂದು ಜರಿದು ಹೋದುದ**
**ಮರೆದೆನೆ ಆ ನೋವ!**
**ಜರಿದುದೆ ಎನಗೆ ದೀಕ್ಷೆಯಾಯಿತ್ತು!**
**ಆ ದೀಕ್ಷೆಯ ಗುಣದಿಂದ ಫಲಪದಕ್ಕೆ ದೂರವಾದೆ.**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,**
**ಬಸವಣ್ಣನೆನ್ನ ಪರಮಾರಾಧ್ಯ!**

ಕೆರೆ ದೇವಾಲಯಗಳನ್ನು ಕಟ್ಟಿದರೆ ಪುಣ್ಯವೆಂದು ಫಲಪದವೆಂದು ಭಾವಿಸಿದ್ದ ಸಿದ್ಧರಾಮ ಶಿವಯೋಗಿಗಳು ಆ ಫಲಪದದಿಂದ ದೂರ ಉಳಿಯುತ್ತಾರೆ. ಬಸವಣ್ಣನವರ ಮಾತೇ ದೀಕ್ಷೆಯೆಂದು ಭಾವಿಸಿ ಗುಣಾವಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗುತ್ತಾರೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನನ್ನೇ ಸಾಕ್ಷಿಯಾಗಿ ಮಾಡಿಕೊಂಡು ಬಸವಣ್ಣನೇ ಎನ್ನ ಪರಮಾರಾಧ್ಯನೆಂದು ಭಾವಿಸುತ್ತಾರೆ.

ಬಸವಣ್ಣನವರು ದೀಕ್ಷೆ ಎಂಬುದನ್ನೇ ತಿರಸ್ಕರಿಸಿ ಈ ಕೆಳಗಿನಂತೆ ನುಡಿಯುತ್ತಾರೆ:

''ಓಹೋ, ನಾನೊಬ್ಬರಿಗೆಯೂ ಉಪದೇಶವ ಮಾಡಲಮ್ಮೆನು. ಮುನ್ನಲಾದವರು ತಮ್ಮಿಂದ ತಾವಾದರು. ಅವರೆಲ್ಲ ನಿಜಲಿಂಗೈಕ್ಯರು. ನಾನೇನ ಮಾಡುತ್ತಿಲ್ಲ. ಕಿಂಕಿಲನಾಗಿ ಅರಸೆಂದು ಕಾಲಾಗ್ನಿ ರುದ್ರನ ಆಜ್ಞೆಯಿಂದ ಭೃತ್ಯನಾಗಿ ಬಂದಿರುವ ಕರ್ತನಾದೆಹೆನೆಂದಡೆ ಆ ಕರ್ತನೆನ್ನ ನಗುವನು. ತತ್ವ ವಿಡಿದವರಿಗೆ ತೊತ್ತಾಗಿ ನಡೆವೆನು ಅಮರಗಣಂಗಳು ಸಾಕ್ಷಿಯಾಗಿ. ಕೂಡಲಸಂಗಮದೇವರ ಮುಂದೆ ಭಾಷೆ ಪ್ರಸಾದವನಿಕ್ಕಲಮ್ಮೆನಯ್ಯಾ, ಚೆನ್ನಬಸವಣ್ಣಾ''.

ಬಸವಣ್ಣನವರ ದೀಕ್ಷೆಯಿಂದ ಫಲಪದಕ್ಕೆ ದೂರವಾದೆ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದರೆ, ದೀಕ್ಷೆ ಕೊಡಲು ಬರುವುದಿಲ್ಲ. ತೆಗೆದುಕೊಳ್ಳಲೂ ಬರುವುದಿಲ್ಲ ಎಂದು ಬಸವಣ್ಣನವರು ಸ್ಪಷ್ಟಪಡಿಸುತ್ತಾರೆ.

ಜಗತ್ತಿನ ಅಂಗಗಳೆಲ್ಲ ದೀಕ್ಷೆ ಪಡೆಯುವುದರಲ್ಲಿ ದೀಕ್ಷೆ ಕೊಡುವುದರಲ್ಲಿಯೇ ಮುಳುಗಿವೆ.

ದೀಕ್ಷೆ ಪಡೆದ ಅಂಗ ಮುಸಲ್ಮಾನ, ಬೌದ್ಧ, ಜೈನ, ವೀರಶೈವ, ಕ್ರಿಶ್ಚಿಯನ್ ಆಗುತ್ತದೆ. ದೀಕ್ಷೆ ನೀಡಿದ ಅಂಗ ಗುರುವೆಂದು, ದೀಕ್ಷೆ ಪಡೆದ ಅಂಗ ಶಿಷ್ಯನೆಂದು ಕರೆಯಿಸಿಕೊಳ್ಳುತ್ತದೆ. ಅಂಗದಲ್ಲಿ ಸಂಗಮವಾದ ಅರಿವನ್ನೇ ಮರೆಯುತ್ತದೆ. ಆ ಅರಿವೇ ಗುರು! ಗುರು ಇಲ್ಲದ ಅಂಗ ಒಂದೂ ಇಲ್ಲವೆಂದ ಮೇಲೆ, ಗುರುವಾಗಿ ಗುರುವಿಗೆ ದೀಕ್ಷೆ ಕೊಡಲು ಸಾಧ್ಯವೆ? ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅಂಗವನ್ನು ಆವರಿಸಿದ ಮನವೆಂಬ ಶಿಷ್ಯ ಅರಿಯಲಿಲ್ಲವೆಂದು ಅರ್ಥವಲ್ಲವೆ? ಹೀಗಾಗಿ ತನಗೆ ತಾನೇ ಗುರು; ತನಗೆ ತಾನೇ ಶಿಷ್ಯ.

ಹಿಂದೆ ಬುದ್ಧ ಮಹಾವೀರ ಕ್ರಿಸ್ತ ಕ್ರಿಷ್ಣ ಪೈಗಂಬರರು ತಮಗೆ ತಾವೇ ಗುರುವಾದರು; ತಮಗೆ ತಾವೇ ಶಿಷ್ಯರಾದರು. ಅವರೆಲ್ಲರೂ ನಿಜ ಲಿಂಗಾಂಗಿಗಳು; ನಿಜ ಲಿಂಗೈಕ್ಯರು. ಬಸವಣ್ಣನೆಂಬ ನಾನು ಸೇವಕ. ಸರ್ವಾಂಗಗಳಲ್ಲಿ ಸಂಗಮವಾದ ಅರಿವೆಂಬ ಗುರುದೇವನ ಸೇವೆ ಮಾಡಲು ಬಂದ ಸೇವಕ. ಸೇವಕನಾಗಿದ್ದುಕೊಂಡು ಭೃತ್ಯನಾಗಿದ್ದುಕೊಂಡು ಗುರುದೇವನಿಗೆ ದೀಕ್ಷೆ ಕೊಡಲು ಸಿದ್ದನಾದರೆ ಆ ಗುರುದೇವನೆಂಬ ಕರ್ತನು ನಗಲಾರನೆ? ಹೀಗಾಗಿ ನಾನು ಯಾರಿಗೂ ದೀಕ್ಷೆಯ ಕೊಡಲಾರೆ ತತ್ವವಿಡಿದವರಿಗೆ ತೊತ್ತಾಗಿ ನಡೆವೆನು.

ಅಮರಗಣಂಗಳ ಸಾಕ್ಷಿಯಾಗಿ ಹೇಳುವೆನು: ಸಕಲ ಅಂಗಗಳಲ್ಲಿ ಅರಿವೆಂಬ ಸಂಗಮನಾಥನು ಸಂಗಮಗೊಂಡಿದ್ದಾನೆ. ಸಕಲ ಭಾಷೆಗಳನ್ನು ಬಲ್ಲ ನಿಪುಣನಾತ. ಆತನಿಗೆ ಸೇವಕನಾಗುವುದೇ ಸೇವಕನ ಧರ್ಮ. ಅದನ್ನು ಬಿಟ್ಟು ಗುರುವಿಗೆ ಗುರುವಾಗಿ ಬೋಧಿಸುವುದೆಂದರೇನು? ಭಾಷೆ ಬಲ್ಲಾತನಿಗೆ ಭಾಷೆಯ ಮೂಲಕ ಬೋಧಿಸುವುದೆ? ಅದು ಸಾಧ್ಯವಾಗುವುದಿಲ್ಲ ಎಂದು ಚೆನ್ನಬಸವಣ್ಣನಿಗೆ ತನಗೆ ಬಸವಣ್ಣ ಹೇಳಿದ ಮಾತನ್ನೇ ದೀಕ್ಷೆಯಾಗಿ ಪಡೆದ ಸಿದ್ಧರಾಮ ಶಿವಯೋಗಿ!

ತನ್ನಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಪರಮಾರಾಧ್ಯ ಬಸವಣ್ಣನ ಹೆಸರಿಟ್ಟು ಸಕಲ ನೋವುಗಳನ್ನು ಮರೆದ. ಗುಣಾವಗುಣಗಳನ್ನು ಕಳೆದುಕೊಂಡು ಫಲಪದಕ್ಕೆ ದೂರವಾದ. ನಿರ್ಗುಣಿಯಾದ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ.

**20**

**ಅಂದೊಮ್ಮೆ ಜಗನ್ನಾಥ ಭಸ್ಮವ ತೊಡೆದು ಕೈಯ ಬಿರ್ಚಿದರೆ**
**ಕೇಳಿರಣ್ಣ! ಅಣ್ಣ! ಅಣ್ಣ ಕೇಳಿರಣ್ಣ!**
**ಬ್ರಹ್ಮ ತಾ ಮರೆದೊರಗಿ ವಿಷ್ಣು ತಾ ಜುಮ್ಮೆಂದು**
**ವೇದಗಳು ಮತಿಗೆಟ್ಟು ದೆಸೆಗೆ ಬಾಯ ಬಿಟ್ಟವಯ್ಯ!**
**ಎನಿಸೆನಿಸು ಲೋಕಂಗಳು ಅನಿಸು ಬಾಯ ಬಿಟ್ಟವು!**
**ಕೇಳಿರಣ್ಣ! ಅಣ್ಣ! ಅಣ್ಣ! ಕೇಳಿರಣ್ಣ!**
**ತಮ್ಮ ಬಲ ಅವಕುಂಟು ಕೇಳಿರಣ್ಣ!**
**ಆಯುಷ ತನಿಗೆನಿಸೆಂಬುದವೈ**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯನ ಕೈಯ ಸಬುದಕಣ್ಣ!**

ಜಗನ್ನಾಥನ ಲೀಲೆಯೇ ಹಾಗೆ. ಕೈಯೊಳಗೆ ಅಂದರೆ ತನ್ನ ಮುಷ್ಟಿಯೊಳಗೆ ಜಗತ್ತನ್ನು ಮುಚ್ಚಿಟ್ಟುಕೊಂಡಿದ್ದಾನೆ. ಹೀಗಾಗಿ ಜಗತ್ ಸೃಷ್ಟಿಗೆ ಸೃಷ್ಟಿಕರ್ತನೆನ್ನಿಸಿಕೊಂಡು ಜಗತ್ತಿಗೆ ನಾಥನಾಗಿದ್ದಾನೆ.

ಗಾಳಿ ಬೆಂಕಿ ನೀರು ಭೂಮಿ ಆಕಾಶ ಕಾಯಗಳನ್ನು ತನ್ನಲ್ಲಿಯೇ ಸಂಗಮ ಮಾಡಿಕೊಂಡು ವಿರಾಟ ಸ್ವರೂಪಿ ಎನ್ನಿಸಿಕೊಂಡಿದ್ದಾನೆ. ಬಯಲಾಗಿ ಬಯಲ ಬೀಜವಾಗಿ, ಆ ಬಯಲ ಬೀಜವನ್ನು ಬಯಲಲ್ಲಿಯೇ ಬಿತ್ತಿ ಬಯಲನ್ನೇ ಬೆಳೆದು ಪುನಹ ಬಯಲಾಗಿದ್ದಾನೆ. ಇದೆಲ್ಲವನ್ನು ತಿಳಿಯುವ ಅಂಗವಾಗಿದ್ದಾನೆ. ಲಿಂಗಾಂಗವಾಗಿದ್ದಾನೆ. ಅಂಗೈಯಲ್ಲಿಯೇ (ಕೈ) ಲಿಂಗವನ್ನು ಬಚ್ಚಿಟ್ಟುಕೊಂಡು ''ಲಿಂಗ ಮಧ್ಯೆ ಜಗತ್ ಸರ್ವಂ'' ಎಂಬ ಹೆಸರಿನಿಂದ ಕರೆಯಿಸಿಕೊಂಡ ಜಗನ್ನಾಥನೀತ!

ಇದು ಜಗನ್ನಾಥನ ಕತೆ. ಅಂಗ ಜಗನ್ನಾಥನನ್ನು ಬಚ್ಚಿಟ್ಟುಕೊಂಡ ಕತೆ! ಅಂಗ ಎಂದರೆ ಶ್ರೀಮಂತನಲ್ಲ, ಬಡವನೂ ಅಲ್ಲ. ಅದು ಹೆಣ್ಣಲ್ಲ; ಗಂಡೂ ಅಲ್ಲ. ಶಾಸಕ ಸಚಿವ ಪ್ರಧಾನಿ ಅಧ್ಯಕ್ಷನೂ ಅಲ್ಲ. ಅಧಿಕಾರಿ ನ್ಯಾಯಾಧೀಶ ಅಲ್ಲವೇ ಅಲ್ಲ. ಅಂಗವೆಂದರೆ ಸಾಕ್ಷಾತ್ ಲಿಂಗ. ಪಂಚಭೂತಗಳನ್ನು ಅಂಗೈಯಲ್ಲಿ ಬಂಧಿಸಿಕೊಂಡ ಲಿಂಗಾಂಗ!

ಸುಳಿದು ಬೀಸುವ ಗಾಳಿ ಅಂಗದಲ್ಲಿ ಬಂಧಿಯಾಗಿದೆ. ಉರಿಯುವ ಅಗ್ನಿ ಅಂಗದಲ್ಲಿ ಸಂಗಮವಾಗಿದೆ. ಹರಿಯುವ ಜಲ ಅಂಗದಲ್ಲಿ ಸಂಗಮವಾಗಿ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸಾಗಿ ಭೂಮಿಯಂತೆ ಗಟ್ಟಿಗೊಂಡಿದೆ. ಬಯಲುದೇವ ಜಗನ್ನಾಥನಾಗಿ ಅಂಗದಲ್ಲಿಯೇ ಸಂಗಮವಾಗಿ ಜಗತ್ತನ್ನೇ ಸೃಷ್ಟಿಸಿದ್ದಾನೆ. 'ಲಿಂಗ ಮಧ್ಯೆಜಗತ್ ಸರ್ವಂ' ಎನ್ನಿಸಿಕೊಂಡಿದ್ದಾನೆ.

ಅಣ್ಣ ! ಅಣ್ಣ ! ಕೇಳಿರಣ್ಣ ! ಅಂಥ ಜಗನ್ನಾಥನು ಸಾಮಾನ್ಯನೆ ! ಜಗನ್ನಾಥನಿದ್ದ ಅಂಗ ಸಾಮಾನ್ಯವೆ! ಅಂಗೈ ಬಿಚ್ಚಿದರೆ ಬ್ರಹ್ಮ ಮರೆದೊರಗಿದ. ವಿಷ್ಣು ಜುಮ್ಮೆಂದು ಮೈ ಜುಮುಕಿಸಿದ. ವೇದ ಆಗಮ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್‌ಗಳು ಬಾಯಿಬಿಟ್ಟವು. ಜಗನ್ನಾಥನಿದ್ದ ಅಂಗದಿಂದಲೇ ಹುಟ್ಟಿದ ಯಕಶ್ಚಿತ್ ಗ್ರಂಥಗಳಿವು. ಜಗನ್ನಾಥನನ್ನು ತಿಳಿಯಲೆಂದು ಜಗನ್ನಾಥ ಸೃಷ್ಟಿಸಿದ ಗ್ರಂಥಗಳಿವು! ಅಣ್ಣ ! ಅಣ್ಣ ! ಕೇಳಿರಣ್ಣ ! ಕೇಳಿರಣ್ಣ ! ಸೃಷ್ಟಿಸಿದ ಜಗನ್ನಾಥನನ್ನೇ ಮರೆತು ಯಕಶ್ಚಿತ್ ಗ್ರಂಥಗಳನ್ನು ಪೂಜಿಸುವುದೇ?

ಬ್ರಹ್ಮ ಎಂದರೆ ಮನಸ್ಸು. ವಿಷ್ಣು ಎಂದರೆ ದೇಹ. ಅಂಗ. ಅಂಗವನ್ನು ಆವರಿಸಿದ ಬ್ರಹ್ಮ ಜಗನ್ನಾಥನ ದರುಶನದಿಂದ ಅಂಗದಲ್ಲಿಯೇ ಮರೆದೊರಗಿದ. ಆತನ ದರುಶನದಿಂದ ವಿಷ್ಣು ಜುಮ್ಮೆಂದ. ಅಂಗವನ್ನು ಆವರಿಸಿದ ಭ್ರಮೆಯೆಂಬ ಮನದ ಬಲ ಅವಕುಂಟು ಕೇಳಿರಣ್ಣ!

ಅಂಗದ ಮೂಲಕ ಅಂಗವಾಗಿ ಹೊರಬಂದ ವಿಷ್ಣುವಿಗೂ ಆಯುಷ್ಯ ಉಂಟು. ಹೊರ ಬಂದ ಆ ಅಂಗವನ್ನೇ ಆವರಿಸಿದ ಮನವೆಂಬ ಬ್ರಹ್ಮನಿಗೂ ಆಯುಷ್ಯ ಉಂಟು. ಭಸ್ಮವ ತೊಡೆದು ಅಂಗೈ ಬಿಚ್ಚಿದರೆ ಸಾಕು ಬಿಚ್ಚಿದ ಜಗನ್ನಾಥನ ಶಬುದಕ್ಕೆ ಜಗವೇ ಗಡಗಡನೆ ನಡುಗುತ್ತದೆ. ಆ ಜಗನ್ನಾಥನಿಗೆ ಆಯುಷ್ಯ ಉಂಟೆ?

ಅಣ್ಣ! ಅಣ್ಣ! ಕೇಳಿರಣ್ಣ! ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಒಮ್ಮೆ ತನ್ನವನನ್ನಾಗಿಸಿಕೊಳ್ಳಿರಣ್ಣ!

**21**

**ಅಂಧಕಾರದ ಗಿರಿ ಅರಿವೇರಿತು ಅನುವಿಡಿದು ಸುಖವ ಕಂಡು**
**ಅನುಭವದವಳಿಗೆ (ಕೆಂಪುವರ್ಣ) ಸುಖವನೇಕೀಕರಿಸಿ ನೋಡಲು**
**ಆಯತವಾಯಿತ್ತು ಈ ಅಂಧಕಾರದ ಎರಡೆಸಳಪೀಠ**
**ಆ ಪೀಠದಲ್ಲಿ ಸಮಯಾಚಾರಿಯೆಂಬವ ನಿಂದು**
**ಪರಿಣಾಮವಿಡಿದು ನಡೆಯೆ,**

**ಆತ್ಮನ ಗುಣ ಕೆಟ್ಟು ನೆಲೆಗೊಂಡನಯ್ಯಾ**
**ನಿಮ್ಮ ಶರಣ ಚೆನ್ನಬಸವಣ್ಣನು.**
**ಕಪಿಲಸಿದ್ಧಮಲ್ಲಿನಾಥಯ್ಯಾ,**
**ಚೆನ್ನಬಸವಣ್ಣನ ಧರ್ಮದಿಂ ಬದುಕಿದೆನು.**

ಮನವೆಂಬುದು ಅಂಧಕಾರದ ಗಿಳಿ. ಅಜ್ಞಾನದ ಗಿಳಿ. ಬ್ರಾಹ್ಮಣರ ಮನೆಯಲ್ಲಿದ್ದು ವೇದವನು ಓದುತ್ತದೆ. ಕಟುಗರ ಮನೆಯಲ್ಲಿದ್ದು ಕಡಿ ಬಡಿ ಎನ್ನುತ್ತದೆ. ರಾಜನ ಅರಮನೆಯಲ್ಲಿದ್ದು ಅರಸೊತ್ತಿಗೆಯ ಮಾತನಾಡುತ್ತದೆ. ನುಡಿಸಿದಂತೆ ನುಡಿಯುವ ಅಂಧಕಾರದ ಗಿಳಿ ಇದು.

ಅನುವನು ಹಿಡಿದು ಅನುಭವದ ಆಳಕ್ಕೆ ಹೋಗಿ ಅನುಭವಿಸಿದ ಅಂಧಕಾರದ ಸುಖವನು ಏಕೀಕರಿಸಿ ಅರಿವಿನಿಂದ ನೋಡಲು ಅರಿವಾಯಿತ್ತು ಈ ಅಂಧಕಾರದ ಗಿಳಿಗೆ ಎರಡೆಸಳ ಪೀಠ. ಮನ ಗಿಳಿಯಾದರೆ ತನು ಅದಕ್ಕೆ ಪಂಜರ. ಈ ಎರಡೆಸಳ ಪೀಠದಲ್ಲಿಯೇ ಗಿಳಿಯ ವಾಸ. ಈ ಎರಡೆಸಳ ಪೀಠದಲ್ಲಿಯೇ ಸಮಯಾಚಾರಿಯೆಂಬವ ಮನೆ ಮಾಡಿ ಕೊಂಡಿದ್ದಾನೆ.

ಅಂಧಕಾರದ ಗಿಳಿ ಪರಿಣಾಮವಿಡಿದು ನಡೆದಲ್ಲಿ ಅದರ ಗುಣಾವಗುಣಗಳು ಕೆಟ್ಟು ನಿರ್ಗುಣಿಯಾಗುತ್ತದೆ. ಸಾತ್ವಿಕ ರಾಜಸ ತಾಮಸ ಗುಣಗಳು ಕೆಟ್ಟು ಕಪಿಲಸಿದ್ಧ ಮಲ್ಲಿನಾಥಯ್ಯನೇ ತಾನಾಗುತ್ತದೆ.

ಚೆನ್ನಬಸವಣ್ಣ ಹೇಳಿದ ಈ ಅರಿವಿನ ಸೂತ್ರ ಹಿಡಿದು ಮೂರು ಗುಣಗಳನ್ನು ಸುಟ್ಟು ನಿರ್ಗುಣಿಯಾಗಿ ಅರಿವಿನ ಧರ್ಮ ಹಿಡಿದು ಗೋಚರಕ್ಕೆ ಬಾರದಂತಹ ಅಗೋಚರ ಆಚಾರವನು ಹಿಡಿದು ಅರಿವಿನಿಂದ ಬದುಕಿದೆನು ಎಂದು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಮನವರಿಕೆ ಮಾಡಿದ್ದಾರೆ.

**22**

**ಅಕ್ಷರತ್ರಯದಲ್ಲಿ ಆನಂದ ಬ್ರಹ್ಮದಲ್ಲಿ**
**ಅಕ್ಷರತ್ರಯದಲ್ಲಿ ನಿತ್ಯರೂಪ**
**ಅಕ್ಷರತ್ರಯವೆಂಬ ಆನಂದ ಬ್ರಹ್ಮದ**
**ಅಕ್ಷರವು ಆರರಲ್ಲಿ ಭಕ್ತಿ ಶಕ್ತಿ**
**ನಿತ್ಯಾಂಗನೆಯ ಹಸ್ತ ತತ್ವಮಸಿಯಿಂದತ್ತ**
**ಭಕ್ತಿ ಕಾರಣ ಶಿವನು ಕಪಿಲಸಿದ್ಧಮಲ್ಲಿಕಾರ್ಜುನ.**

'ಅ'ಕಾರ 'ಉ'ಕಾರ 'ಮ'ಕಾರವೆಂಬ ಮೂರಕ್ಷರಗಳಿಂದ ಓಂಕಾರ ಹುಟ್ಟಿದೆ. ಅದು ಆನಂದ ಬ್ರಹ್ಮ. ನಿತ್ಯರೂಪ. ನಿರೂಪವೂ ಹೌದು. ಅದು ಅಂಗದಲ್ಲಿ ಸಂಗಮವಾದ ಲಿಂಗವೂ ಹೌದು. ಅರಿವೆಂಬ ಲಿಂಗದಿಂಲೇ ಅಂಗ ಲಿಂಗಾಂಗವೆನ್ನಿಸಿಕೊಂಡಿದೆ. ಓಂಕಾರ ಸ್ವರೂಪವೆನ್ನಿಸಿಕೊಂಡಿದೆ.

ಅಂಗವನ್ನು ಮೂರು ಗುಣಗಳು ಆವರಿಸಿಕೊಂಡಿವೆ. ಹೀಗಾಗಿ ಅಂಗ ಬ್ರಹ್ಮವೆಂಬುದನ್ನೇ ಮರೆತು ಭ್ರಮಾಧೀನಗೊಂಡಿದೆ. 'ಅ'ಕಾರ 'ಉ'ಕಾರ 'ಮ'ಕಾರವೆಂಬ ಮೂರಕ್ಷರಗಳನ್ನು ಒಳಗೊಂಡ 'ಓಂ'ಕಾರ ಪರಿಚಯವಾದರೆ ಸಾಕು ಆ 'ಓಂ'ಕಾರವೇ ತಾನಾಗುತ್ತದೆ. ಮೂರು ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗುತ್ತದೆ.

ತ್ರಿಗುಣಾತೀತಂ ಅಂದರೆ ತ್ರಿಗುಣಗಳಿಗೆ ಅತೀತನಾಗಿ, ನಿರಂಜನನಾಗುತ್ತದೆ. ನಾದ

ಬಿಂದು ಕಲೆಗಳಿಗೆ ಅತೀತವಾಗಿ ಆನಂದ ಬ್ರಹ್ಮನಾಗುತ್ತದೆ. ಮೂರಕ್ಷರಗಳ ಸಂಗಮವಾದ ಓಂಕಾರದಲ್ಲಿ ನಿತ್ಯ ರೂಪವನ್ನು ಕಂಡುಕೊಳ್ಳುತ್ತದೆ.

ಮೂರಕ್ಷರಗಳು ಕೂಡಿ 'ಓಂ' ಎಂಬ ಒಂದಕ್ಷರವಾಗಿ 'ನಮಃ ಶಿವಾಯ' ಎಂಬ ಐದಕ್ಷರಗಳು ಸೃಷ್ಟಿಯಾಗಿ ಒಂದೇ ಆರಾಗಿ ಜನ್ಮ ತಳೆಯಿತು. ಈ ಆರಕ್ಷರಗಳು ಅಂಗವೆಂಬ ಲಿಂಗಾಂಗಕ್ಕೆ ಜನ್ಮ ನೀಡಿದವು. ಆ ಅಂಗದಲ್ಲಿ ಭಕ್ತಿ ಶಕ್ತಿ ಎಂಬ ಎರಡು ದಿವ್ಯ ಶಕ್ತಿಗಳು ಹುಟ್ಟಿದವು. ಹಾಗೆ ಹೇಳುವುದಕ್ಕಿಂತ ಈ ಶಕ್ತಿಗಳೇ ಅಂಗವಾಗಿ ಲಿಂಗಾಂಗವಾಗಿ ಪ್ರಕಾಶಮಾನವಾಗಿ ಗರ್ಭದಿಂದ ಹೊರಬಂತು.

ತ್ವಙ್ಮಯವಾಗಿಹುದು 'ಓಂ'ಕಾರ; ರುಧಿರಮಯವಾಗಿಹುದು 'ನ'ಕಾರ ಅಸ್ತಿಮಯವಾಗಿಹುದು 'ಮ'ಕಾರ ಎಂದು ಮುಂತಾಗಿ ಆರಕ್ಷರಗಳ ಮಹಿಮೆಯನ್ನು ಚೆನ್ನ ಬಸವಣ್ಣನವರು ಸಾರಿದ್ದಾರೆ. ಅಂದರೆ ಚರ್ಮದಲ್ಲಿ ಓಂಕಾರ ಸಂಗಮವಾಗಿದ್ದರೆ ರಕ್ತದಲ್ಲಿ ನಕಾರ ಸಂಗಮವಾಗಿದೆ. ಮೂಳೆಯಲ್ಲಿ 'ಮ'ಕಾರ ಸಂಗಮವಾಗಿದ್ದರೆ ಮಾಂಸದಲ್ಲಿ 'ಶಿ'ಕಾರ ಸಂಗಮವಾಗಿದೆ. ಮಜ್ಜೆಯಲ್ಲಿ 'ವಾ'ಕಾರ ಸಂಗಮವಾಗಿದ್ದರೆ ಮೇದಸ್ಸಿನಲ್ಲಿ 'ಯ'ಕಾರ ಸಂಗಮವಾಗಿದೆ.

ಓಂನಮಃಶಿವಾಯ ಎಂಬ ಆರಕ್ಷರಗಳನ್ನು ಹೊತ್ತ ತತ್ವಭರಿತವಾದ ಅಂಗ ಲಿಂಗಾಂಗವೆಂದು ಅನ್ನಿಸಿಕೊಂಡಿದೆ. ಅಂಗದಲ್ಲಿಯೇ ಸಂಗಮವಾದ ತತ್ತ್ವವನ್ನು ಮನವೆಂಬ ಅಂಗನೆಯ ಮೂಲಕ ಭಕ್ತಿ ಮಾಡಿ ಭಕ್ತಿಯ ಶಕ್ತಿಯ ಮೂಲಕವೇ ಸರ್ವಶಕ್ತ ಶಿವನನ್ನು ಅರಿಯಬೇಕು. ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಅರಿತರಿತು ತಿಳಿಯಬೇಕು.

**23**

**ಅಕ್ಷರವ್ಯೆದರಮೇಲೆ ಒಪ್ಪಿಪ್ಪೆ ನೀನು,**
**ಶಿವ ಅಕ್ಷರಾಂಕನು ನೀನು,**
**ಪೂರ್ವಕ್ಕೆ ಮೂರು ಅಕ್ಷರ**
**ಆನತದಿಂ ಮೇಲೆ ನೀನಯ್ಯಾ.**
**ಅನಾದಿ ಮೂಲಶೂನ್ಯ**
**ಕಪಿಲಸಿದ್ಧಮಲ್ಲಿನಾಥ**
**ಆದಿಯಾಧಾರಕ್ಕೆ ಮೂಲ ನೀನು.**

ತನುವೆಂಬುದು ಆದಿ. ಅದರ ಆಧಾರವಾಗಿ ನಿಂತವನು ಅರಿವೆಂಬ ಗುರುದೇವನು. ಅವನನ್ನು 'ಶಿವ' 'ಮಹಾದೇವ' ಎಂದು ಕೂಡಾ ಕರೆದಿದ್ದಾರೆ. ಆತ ಅಕ್ಷರೋತ್ತಮನು. 'ನಮಃಶಿವಾಯ' ಎಂಬ ಐದಕ್ಷರಗಳನ್ನು ಹಿಡಿದು ಆ ಅಕ್ಷರಗಳ ಮೂಲಕ ಅಂಗವನ್ನು ರಚಿಸಿದ. ಅದಕ್ಕೆ ಒಪುವಂತೆ ಅದರ ಆಧಾರವಾಗಿ ಸರ್ವಾಂಗದಲ್ಲಿ ಸಂಗಮವಾದ.

'ಅ'ಕಾರ 'ಉ'ಕಾರ 'ಮ'ಕಾರವೆಂಬ ಮೂರಕ್ಷರಗಳಿಂದ ಓಂಕಾರ ಹುಟ್ಟಿತು. ಅದು ಆನಂದ ಬ್ರಹ್ಮ. ನಿತ್ಯರೂಪ. ನಿರೂಪವೂ ಹೌದು. ಅದು ಅಂಗದಲ್ಲಿ ಸಂಗಮವಾದ ಲಿಂಗವೂ ಹೌದು. ಅರಿವೆಂಬ ಲಿಂಗದಿಂದಲೇ ಅಂಗ ಲಿಂಗಾಂಗವೆನ್ನಿಸಿಕೊಂಡಿದೆ. ಓಂಕಾರ ಸ್ವರೂಪವೆನ್ನಿಸಿಕೊಂಡಿದೆ.

ಅಂಗವನ್ನು ಮೂರು ಗುಣಗಳು ಆವರಿಸಿಕೊಂಡಿವೆ. ಹೀಗಾಗಿ ಅಂಗ ಬ್ರಹ್ಮವೆಂಬುದನ್ನೇ ಮರೆತು ಭ್ರಮಾಧೀನಗೊಂಡಿದೆ. 'ಅ'ಕಾರ 'ಉ'ಕಾರ 'ಮ'ಕಾರ ಮೂರಕ್ಷರಗಳನ್ನು ಒಳಗೊಂಡ

‘ಓಂ’ಕಾರ ಪರಿಚಯವಾದರೆ ಸಾಕು ಆ ‘ಓಂ’ಕಾರವೇ ತಾನಾಗುತ್ತದೆ. ಮೂರು ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗುತ್ತದೆ.

ತ್ರಿಗುಣಾತೀತಂ ಅಂದರೆ ತ್ರಿಗುಣಗಳಿಗೆ ಅತೀತನಾಗಿ, ನಿರಂಜನನಾಗುತ್ತದೆ. ನಾದ ಬಿಂದು ಕಲೆಗಳಿಗೆ ಅತೀತವಾಗಿ ಆನಂದ ಬ್ರಹ್ಮನಾಗುತ್ತದೆ. ಮೂರಕ್ಷರಗಳ ಸಂಗಮವಾದ ಓಂಕಾರದಲ್ಲಿ ನಿತ್ಯ ರೂಪವನ್ನು ಕಂಡುಕೊಳ್ಳುತ್ತದೆ.

ಮೂರಕ್ಷರಗಳು ಕೂಡಿ ‘ಓಂ’ ಎಂಬ ಒಂದಕ್ಷರವಾಗಿ ‘ನಮಃ ಶಿವಾಯ’ ಎಂಬ ಐದಕ್ಷರಗಳು ಸೃಷ್ಟಿಯಾಗಿ ಒಂದೇ ಆರಾಗಿ ಜನ್ಮ ತಳೆಯಿತು. ಈ ಆರಕ್ಷರಗಳು ಅಂಗವೆಂಬ ಲಿಂಗಾಂಗಕ್ಕೆ ಜನ್ಮ ನೀಡಿದವು. ಆ ಅಂಗದಲ್ಲಿ ಭಕ್ತಿ ಶಕ್ತಿ ಎಂಬ ಎರಡು ದಿವ್ಯ ಶಕ್ತಿಗಳು ಹುಟ್ಟಿದವು. ಹಾಗೆ ಹೇಳುವುದಕ್ಕಿಂತ ಈ ಶಕ್ತಿಗಳೇ ಅಂಗವಾಗಿ ಲಿಂಗಾಂಗವಾಗಿ ಪ್ರಕಾಶಮಾನವಾಗಿ ಗರ್ಭದಿಂದ ಹೊರಬಂತು.

ತ್ವಙ್ಮಯವಾಗಿಹುದು ‘ಓಂ’ ಕಾರ; ರುಧಿರಮಯವಾಗಿಹುದು ‘ನ’ಕಾರ ಅಸ್ತಿಮಯವಾಗಿಹುದು ‘ಮ’ಕಾರ ಎಂದು ಮುಂತಾಗಿ ಆರಕ್ಷರಗಳ ಮಹಿಮೆಯನ್ನು ಚೆನ್ನ ಬಸವಣ್ಣನವರು ಸಾರಿದ್ದಾರೆ. ಅಂದರೆ ಚರ್ಮದಲ್ಲಿ ಓಂಕಾರ ಸಂಗಮವಾಗಿದ್ದರೆ ರಕ್ತದಲ್ಲಿ ನಕಾರ ಸಂಗಮವಾಗಿದೆ. ಮೂಳೆಯಲ್ಲಿ ‘ಮ’ಕಾರ ಸಂಗಮವಾಗಿದ್ದರೆ ಮಾಂಸದಲ್ಲಿ ‘ಶಿ’ಕಾರ ಸಂಗಮವಾಗಿದೆ. ಮಜ್ಜೆಯಲ್ಲಿ ‘ವಾ’ಕಾರ ಸಂಗಮವಾಗಿದ್ದರೆ ಮೇದಸ್ಸಿನಲ್ಲಿ ‘ಯ’ಕಾರ ಸಂಗಮವಾಗಿದೆ.

ಓಂ ನಮಃ ಶಿವಾಯ ಎಂಬ ಆರಕ್ಷರಗಳನ್ನು ಹೊತ್ತ ತತ್ವಭರಿತವಾದ ಅಂಗ ಲಿಂಗಾಂಗವೆಂದು ಅನ್ನಿಸಿಕೊಂಡಿದೆ. ಅಂಗದಲ್ಲಿಯೇ ಸಂಗಮವಾದ ತತ್ತ್ವವನ್ನು ಮನವೆಂಬ ಅಂಗನೆಯ ಮೂಲಕ ಭಕ್ತಿ ಮಾಡಿ ಭಕ್ತಿಯ ಶಕ್ತಿಯ ಮೂಲಕವೇ ಸರ್ವಶಕ್ತ ಶಿವನನ್ನು ಅರಿಯಬೇಕು. ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಅರಿತರಿತು ತಿಳಿಯಬೇಕು.

**24**

**ಅಕ್ಕಟಾ ಅವನ ನೆನಹಿನ ಮನೆಯೊಳಗೆನ್ನ ನಿಲಿಸಿ**
**ಅವನನೆ ಮೂಲ ನಾಶವ ಮಾಡಿರವ್ವಾ.**
**ನೆನಹಿನ ಮನೆಯೊಳಗೆ ಅವನನೊಡಗೂಡಿ**
**ಲೀಯವ ಮಾಡು ಕಪಿಲಸಿದ್ಧಮಲ್ಲಿನಾಥಯ್ಯನಾ.**

ಬ್ರಹ್ಮಕಟ್ಟಿದ ಮನೆಯಲ್ಲಿ ಬ್ರಹ್ಮನೇ ಇರಬೇಕು. ಆದರೆ ಬ್ರಹ್ಮನ ಬೆಳಕಿನಿಂದ ಹುಟ್ಟಿದ ನೆರಳೆಂಬ ಭ್ರಮೆ ವಾಸ ಮಾಡುತ್ತಿದೆ. ಅದರ ಕರಿಯ ವಸ್ತ್ರ ಸೃಷ್ಟಿಮಾಡಿದ ಬ್ರಹ್ಮನನ್ನೇ ಕಾಣದಂತೆ ಮಾಡಿದೆ. ಅನಂತ ಜನ್ಮಗಳಲ್ಲಿ ಸೃಷ್ಟಿಮಾಡಿದ ಬ್ರಹ್ಮನನ್ನೇ ನಾಶ ಮಾಡುತ್ತಾ, ಭ್ರಮೆ ತಾನು ಬದುಕುತ್ತಾ ಬಂದಿದೆ. ಇದು ಬ್ರಹ್ಮನ ಮನೆಯೆಂಬ ಅರಿವು ತನಗೆ ಇಲ್ಲದಂತೆ ಅವನ ಮನೆಯನ್ನೇ ತನ್ನ ವಶಕ್ಕೆ ಪಡೆದು ಅದರಲ್ಲಿಯೇ ಬದುಕುತ್ತಲಿದೆ.

ಇದು ಲೋಕದ ನಿಯಮ. ಕಾಯದ ಮಾಯೆ. ಈ ಮಾಯೆಯನ್ನು ಶರಣರು ಅರಿತರು. ಅರಿವಿನಿಂದ ಕಾಯಕ್ಕೆ ಅಂಟಿದ ಮಾಯೆಯನ್ನು ಕಾಯದಲ್ಲಿ ಸಂಗಮವಾದ ಅರಿವಿನಿಂದಲೇ ಗೆದ್ದರು. ಆಗ ಕಾಯ ಕೈಲಾಸವಾಯಿತು.

ಕಾಯ, ಕಾಯವನ್ನು ಆವರಿಸಿದ ಮನ, ಕಾಯದಲ್ಲಿ ಸಂಗಮವಾದ ಅರಿವು ಈ ಮೂರು

ವಿಷಯಗಳು ಕಾಯದ ಗಮನಕ್ಕೆ ಬಾರದೆ ಇದ್ದರೆ, ಕಾಯ ಇವುಗಳನ್ನು ತಿಳಿದುಕೊಳ್ಳದಿದ್ದರೆ ಅದು ಕಾಯವಲ್ಲ. ಆ ಕಾಯಕ್ಕೆ ಯಾವ ನೈಪುಣ್ಯತೆಯೂ ಇರುವುದಿಲ್ಲ. ಅದು ಸಮಾಜದಲ್ಲಿ ಒಮ್ಮೆ ಒಳ್ಳೆಯದೆಂದು, ಮತ್ತೊಮ್ಮೆ ಕೆಟ್ಟದ್ದೆಂದು ಹೆಸರು ಪಡೆಯುವುದರ ಮೂಲಕ ತನ್ನ ಯಾತ್ರೆ ಪೂರೈಸುತ್ತದೆ.

ಸಿದ್ಧರಾಮ ಶಿವಯೋಗಿಗಳು ಕಾಯವನ್ನು ಸ್ವತಹ ಕಾಯವೇ ತಿಳಿಯುವ ಸರಳ ಸೂತ್ರವನ್ನು ತಮ್ಮ ಈ ವಚನದ ಮೂಲಕ ಓದುಗರಿಗೆ ಉಣಬಡಿಸಿದ್ದಾರೆ.

ಕಾಯವಿದೆ. ಕಾಯವನ್ನು ಮನ ಆವರಿಸಿದೆ. ಕಾಯದಲ್ಲಿ ಅರಿವು ಸಂಗಮವಾಗಿದೆ. ಇಲ್ಲಿ ಮನ ಶಿಷ್ಯನಾದರೆ, ಅರಿವು ಗುರು. ಮನ ಮತ್ತು ಅರಿವಿಗೆ ಕಾಯ ಉಪಕರಣವಾಗಿದೆ.

ಮನ ಕಾಯವನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ವಸ್ತುವನ್ನು ನೋಡಿದರೆ ವಸ್ತುವಿನ ಸತ್ಯ ಮನಕ್ಕೆ ಗೊತ್ತಾಗದೆ ವಸ್ತುವಿನ ಮೇಲೆ ಆಸೆ ಪಡುತ್ತದೆ. ಆ ವಸ್ತುವನ್ನು ಕಾಯದಿಂದ ಪಡೆದು ಮನ ಆ ವಸ್ತುವಿನೊಂದಿಗೆ ಸುಖಿಸುತ್ತದೆ. ಉದಾ : ಮನ ಚಿನ್ನದ ಆಭರಣಗಳನ್ನು ನೋಡಿ ಒಂದು ಕಾಯದ ಮೂಲಕ ಖರೀದಿಸುತ್ತದೆ. ಮತ್ತೊಂದು ಕಾಯದ ಮೂಲಕ ಕಳುವು ಮಾಡುತ್ತದೆ. ಖರೀದಿ ಮಾಡಿದ ಕಾಯವನ್ನು ಶ್ರೀಮಂತ ಎಂದು, ಕಳುವು ಮಾಡಿದ ಕಾಯವನ್ನು ಕಳ್ಳ ಎಂದು ಮನದ ಮೂಲಕವೇ ಕಾಯವನ್ನು ಕರೆಯುತ್ತದೆ. ಕಳ್ಳನಿಗೆ ಶಿಕ್ಷೆ, ಶ್ರೀಮಂತನಿಗೆ ಗೌರವ ಕೊಡುತ್ತ ಕಾಯದ ಅವಸಾನವಾಗುತ್ತದೆ. ಆದರೆ ಇದು ಮನದ ಕೆಲಸವೆಂದು ಕಾಯಕ್ಕೆ ಗೊತ್ತಾಗುವುದಿಲ್ಲ. ಏಕೆಂದರೆ ಕಾಯ ಮನದ ಉಪಕರಣ. ಕಳ್ಳನಾದರೇನು, ಶ್ರೀಮಂತನಾದರೇನು ಇವೆರಡೂ ಕಾಯಗಳೇ ಆಗಿವೆ. ಹಾಗೆಯೇ ಇವೆರಡೂ ಕಾಯಗಳಲ್ಲಿರುವ ಮನ ಕೂಡಾ ಒಂದೇ ಆಗಿದೆ. ಏಕೆಂದರೆ ವಸ್ತು ಏನೆಂದು ತಿಳಿಯದೆ, ವಸ್ತುವಿಗೆ ಮರುಳಾದ ಮನ ಕಾಯದ ಮೂಲಕ ಚಿನ್ನವನ್ನು ಖರೀದಿಸಿದೆ. ಹಾಗೆಯೇ ಕಾಯದ ಮೂಲಕ ಚಿನ್ನವನ್ನು ಕದಿಯುತ್ತದೆ. ಚಿನ್ನ ಯಾಕೆ ಬೇಕು? ಚಿನ್ನವೆಂದರೇನು? ಅದು ಕಾಯಕ್ಕಿಂತ ಶ್ರೇಷ್ಠವಾದುದೋ ಹೇಗೆ ಎಂದು ತಿಳಿಯುವ ಗೋಜಿಗೆ ಹೋಗುವುದಿಲ್ಲ. ಹೀಗಾಗಿ ಕದಿಯುವ ಕಾಯವನ್ನು ಅಡ್ಡಿಪಡಿಸಿದರೆ, ಅಡ್ಡಿಪಡಿಸಿದ ಕಾಯವನ್ನು ಕೊಂದು ಚಿನ್ನ ಪಡೆಯುತ್ತದೆ. ಸಿಕ್ಕಿ ಹಾಕಿಕೊಂಡರೆ ಕದಿಯಲು ಬಂದ ಕಾಯವೇ ಸಾಯುತ್ತದೆ.

ಕಾಯದಲ್ಲಿ ಮನ ವಾಸಕ್ಕೆ ಇದೆ. ಅಂದರೆ ಮನಕ್ಕೆ ಕಾಯ ಆಶ್ರಯ ನೀಡಿದೆ. ಹೀಗಿದ್ದರೂ ಕಾಯವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ತನಗೆ ಇಚ್ಛೆ ಬಂದಂತೆ ಕಾಯವನ್ನು ಬಳಸುತ್ತದೆ. ಕಾಯಗಳೆಲ್ಲ ಒಂದೇ ಆದರೂ ಒಂದು ಕಾಯ ಶ್ರೀಮಂತ ಮತ್ತೊಂದು ಕಾಯ ಬಡವ. ಒಂದು ವೇಶ್ಯೆ ಮತ್ತೊಂದು ವಿಟ. ಒಂದು ಕಾಯಕ್ಕೆ ರಾಮನ ಪಟ್ಟ, ಮತ್ತೊಂದು ಕಾಯಕ್ಕೆ ರಾವಣನ ಪಟ್ಟ. ಹೀಗೆ ಮನ ಕಾಯದೊಂದಿಗೆ ವ್ಯವಹರಿಸಿ ಕಾಯದ ಆಯುಷ್ಯವನ್ನು ವ್ಯರ್ಥ ಕಳೆಯುತ್ತದೆ.

ಕಾಯದಲ್ಲಿಯೇ ಸಂಗಮವಾದ ಅರಿವಿನ ಮಾತೇ ಬೇರೆ. ಹೀಗಾಗಿ ಶರಣರು ಆ ಅರಿವನ್ನೇ ಗುರುದೇವನೆಂದು ಕರೆದಿದ್ದಾರೆ. ಮನವನ್ನು ಶಿಷ್ಯನೆಂದು ಕರೆದಿದ್ದಾರೆ.

ಅಯ್ಯಾ, ಎನ್ನ ಮನ ಮತ್ತೊಂದಕ್ಕಿಂಬಿಲ್ಲ ಕಂಡಯ್ಯಾ, ಗುರುದೇವನೇ ನನಗೆ ಹೊರಗಿನ ಯಾವ ವಸ್ತುಗಳೂ ಸರಿಯಾಗಿ ಕಾಣದ ಕಾರಣ ಅವೇ ಸತ್ಯವೆಂದು ತಿಳಿದು ಆ ವಸ್ತುಗಳಿಗೆ ಮಾರು ಹೋಗಿದ್ದೇನೆ. ಕಾಯದಲ್ಲಿ ಅರಿವೆಂಬ ಗುರುದೇವನಿದ್ದರೂ ನಿನ್ನನ್ನು ಗಮನಿಸದೇ ನಿನ್ನ ಕಾಯವನ್ನು ನಾನು ದುರ್ಬಳಕೆ ಮಾಡಿಕೊಂಡಿದ್ದೇನೆ. ಇನ್ನು ಈ ಕಾಯ ನನ್ನದಲ್ಲ. ನಿನ್ನದು. ನಿನ್ನ ಕಾಯವನ್ನು

ನಿನ್ನ ಅಪ್ಪಣೆಯಿಲ್ಲದೆ ಇನ್ನು ಮುಂದೆ ನಾನು ಬಳಸುವುದಿಲ್ಲ. ಯಾವ ವಸ್ತುಗಳನ್ನು ನಾನು ನನ್ನ ಕಣ್ಣಿನಿಂದ ಇನ್ನು ಮುಂದೆ ನೋಡುವುದಿಲ್ಲ. ನಾನು ನಿನ್ನೊಳಗೆ ಸಂಗಮವಾಗುತ್ತೇನೆ. ನೋಡಿದರೆ ನಿನ್ನ ಮೂಲಕ ನೋಡುತ್ತೇನೆ.

ಅಯ್ಯಾ, ಅರಿವೆಂಬ ಗುರುದೇವನೆ ಮತ್ತೊಂದ್ದಕ್ಕಿಂಬಿಲ್ಲದಂತೆ ನಿನ್ನಲ್ಲಿ ಲೀಯವಾಗಿ ನಿನ್ನ ಮೂಲಕ ಆಭರಣಗಳನ್ನು ನೋಡಿದೆ, ಆಗ ಕದಿಯಲಿಲ್ಲ. ಖರೀದಿಸಲೂ ಇಲ್ಲ. ಏಕೆಂದರೆ ಅವು ನನಗೆ ಹಳದಿ ಲೋಹವಾಗಿ ಕಂಡವು! ಲೋಹಕ್ಕೆ ಬಣ್ಣ ಮೆತ್ತಿದ ಮಾತ್ರಕ್ಕೆ ಅರಿವುಳ್ಳ ನಾನು ಲೋಹಕ್ಕೆ ಮರುಳಾಗಬೇಕೆ? ಅಡ್ಡಿಪಡಿಸಲು ಬಂದ ಗುರುದೇವನಿದ್ದ ಕಾಯವನ್ನು ಕೊಂದು ಪಡೆಯಬೇಕೆ? ಲೋಹಕ್ಕಾಗಿ ಕಾಯವನ್ನು ಕಾಯವೇ ಕೊಲ್ಲುವುದೆಂದರೇನು? ಇನ್ನು ನಿನ್ನ ಒಪ್ಪಿಗೆಯಿಲ್ಲದೆ ನಿನ್ನ ಕಾಯವನ್ನು ಬಳಸುವುದಿಲ್ಲ ತಂದೆ, ಕದಿಯಲು ಹೋದಾಗ ಬೇಡವೆಂದೆ. ಚಿನ್ನ ಖರೀದಿಸಲು ಹೋದಾಗ ಬೇಡವೆಂದೆ. ಅದರಲ್ಲೇನಿದೆ, ನಿನಗೆ ಅದು ಏಕೆ ಬೇಕು ಎಂದು ಪ್ರಶ್ನಿಸಿದೆ. ಆದರೂ ನಿನ್ನ ಮಾತು ನನಗೆ ಅರ್ಥವಾಗಲಿಲ್ಲ. ಅನೇಕ ಅಪರಾಧಗಳನ್ನು ಮಾಡಿದರೂ ಮನ್ನಿಸಿ ಮೈದಡವಿದೆ. ನಿನ್ನ ಕಂದ ನಾನು. ನನ್ನ ಹಡೆದ ತಂದೆ ನೀನು. ಹೀಗಾಗಿ ಅಯ್ಯಾ, ನಿನ್ನ ನೆನೆವೆ ನಾನು, ನನ್ನನ್ನ ನೆನೆವೆ ನೀನಯ್ಯಾ!

ಅಯ್ಯಾ, ಗುರುದೇವನೇ ನಿನ್ನ ನೆನಹಿನ ಮನೆಯೊಳಗೆ ಅವನನು ಒಡಗೂಡಿ ಲೀಯವ ಮಾಡು. ನೀನು ಬೆಳಕಾದರೆ ನಿನ್ನ ನೆರಳೇ ನಾನು. ನಿನ್ನಿಂದಲೇ ಹುಟ್ಟಿದ ಕಂದ ನಾನು. ನನಗೆಯೂ ನಿನಗೆಯೂ ಒಂದೇ ಮನೆ ನೋಡಯ್ಯಾ. ನಿನ್ನನ್ನು ಮನವೆಂಬ ನಾನು ಅರಿಯದಿದ್ದಕ್ಕಾಗಿ ಕಾಯಕ್ಕೆ ಕತ್ತಲೆ ಆವರಿಸಿತು. ನಾನು ನಿನ್ನನ್ನು ಸೇರಿ ಮುಕ್ತನಾದ ಕಾರಣ ಅಂದರೆ ಬೆಳಕಿನಿಂದ ಹುಟ್ಟಿದ ಕತ್ತಲು ಬೆಳಕ ಸೇರಿ ಬೆಳಕಾದ ಕಾರಣ ಬೆಳಕಿನ ಕಾಯವಾಯಿತು. ಅರಿವಿನ ಕಾಯವಾಯಿತು. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನ ಕಾಯವಾಯಿತು.

**25**

**ಅಕ್ಕಟ! ಎನಗೆ-ನಿನಗೆ ನೆರೆಗೆ-ಹೊರಗೆ**
**ಹೇಳುವನಲ್ಲ ಕಂಡಯ್ಯ! ಅಯ್ಯ!**
**ಹಾ! ಅಯ್ಯ! ಹೇಳಿದಲ್ಲದೆ ತೋರಿದಲ್ಲದೆ ಕಾಬವನಲ್ಲ ಕಂಡಯ್ಯ.**
**ಹಾ! ಅಯ್ಯ! ಎನ್ನ ಕಾಣದ ಕೇಳದ ಪ್ರಾಣಿಗೆ**
**ಅನಿಮಿಷನಾಗಿರಿಸೆನ್ನ ಕಪಿಲಸಿದ್ಧ ಮಲ್ಲಿನಾಥಯ್ಯ.**

ಮಾನವ ಮಹಾ ಮಾನವನಾಗಲು ಪ್ರಯತ್ನಪಟ್ಟರೆ ಸಕಲ ಮಾನವರಿಗೂ ಸಾಧ್ಯವಾಗುತ್ತದೆ. ಮಹಾ ಮಾನವನೆಂದರೆ ಸ್ವರೂಪ ಜ್ಞಾನವನ್ನು ಪಡೆದವ. ತನ್ನ ಜ್ಞಾನವನ್ನು ತಾನೇ ಹೊಂದಿದವ. ತನ್ನ ತನುವಿನಲ್ಲಿ ಸಂಗಮವಾದ ಸತ್ಯವನ್ನು ತಾನೇ ತಿಳಿದವ. Enlightenment ಆದವ.

ಮನ ಮತ್ತು ಅರಿವು ಒಂದಾಗುವುದು ಒಂದು ಪ್ರಮುಖ ಶಿಕ್ಷಣ. ಈ ಶಿಕ್ಷಣ ಪಡೆಯದ ಮನುಷ್ಯ ಮನುಷ್ಯನೇ ಅಲ್ಲ. ಅವನು ತನ್ನಿಂದ ತನಗೇ ಹೊರಗೆ ತಳ್ಳಲ್ಪಟ್ಟವನು. ತನಗೆ ತಾನೇ ಸಂಬಂಧ ಇಲ್ಲದವನು. ನೆರೆಯವರೊಂದಿಗೆ ಹೊರಗೆ ಆದವನು. ಸದಾ ದುಗುಡ ದುರಭಿಮಾನ ಚಿಂತಾಕ್ರಾಂತನಾಗಿ ಬದುಕಿ ಸಾಯುತ್ತಾನೆ. ತನ್ನ ಯಾತ್ರೆ ತನಗೆ ಗೊತ್ತಾಗದೆ ನಾನಾ ಕ್ಷೇತ್ರಗಳಲ್ಲಿ ನಿಪುಣನೆಂದು ತನಗೆ ತಾನೇ ಬೆನ್ನು ತಟ್ಟಿಕೊಂಡು ತನ್ನ ಯಾತ್ರೆ ಪೂರೈಸುತ್ತಾನೆ. ತನ್ನ ಪರಿಚಯ

ತನಗಾಗದೆ ಕೊನೆ ಉಸಿರೆಳೆಯುತ್ತಾನೆ.

ಎನಗೆ-ನಿನಗೆ ಸಂಬಂಧವಿದೆಯೆಂದು ಗೊತ್ತಾಗದೆ ಸಾಯುತ್ತಾನೆ. ಎನಗೆ ಅಂದರೆ ಮನಕ್ಕೆ ನಿನಗೆ ಎಂದರೆ ಅರಿವಿಗೆ. ಮನಕ್ಕೂ ಅರಿವಿಗೂ ಅವಿನಾಭಾವ ಸಂಬಂಧವಿದೆಯೆಂದು ಗೊತ್ತಾಗದೆ ಮನ ತನುವಿನೊಂದಿಗೆ ಸಾಯುತ್ತದೆ. ನೆರೆಗೆ-ಹೊರಗೆ ಈ ವಿಷಯ ಗೊತ್ತಾಗುವುದೇ ಇಲ್ಲ. ನೆರೆಯವರು ಹೊರಗಿನವರು ಈ ಬಗ್ಗೆ ಹೇಳಿದರೂ ತನಗೆ ಗೊತ್ತಾಗುವುದಿಲ್ಲ.

ಹೇಳಿದರಲ್ಲದೆ ತೋರಿದಲ್ಲದೆ ಕಾಬವನಲ್ಲ ಕಂಡಯ್ಯ :

ಹೇಳಿದರೆ ಬರುವುದೂ ಅಲ್ಲ; ತೋರದಿದ್ದರೆ ಕಾಣಬರುವುದೂ ಅಲ್ಲ. ಹಾ! ಅಯ್ಯಾ! ಎನ್ನ ಕಾಣದ ಕೇಳದ ಪ್ರಾಣಿಗೆ ಅನಿಮಿಷನಾಗಿರಿಸೆನ್ನ ಕಪಿಲಸಿದ್ಧ ಮಲ್ಲಿನಾಥಯ್ಯ.

ಜ್ಞಾನಿಯಾಗಲು ಎಲ್ಲರಿಗೂ ಬರುತ್ತದೆ. ಜ್ಞಾನವೆಂದರೇನು? ಅದನ್ನು ಹೇಗೆ ಪಡೆಯಬೇಕು? ಜ್ಞಾನ ಪಡೆದ ಜ್ಞಾನಿಗಳು ಹೇಗಿರುತ್ತಾರೆ ಎಂದು ಕಂಡು ಹಿಡಿಯಲು ಕೂಡಾ ಸಾಧ್ಯವಾಗುವುದಿಲ್ಲ. ಜ್ಞಾನಿಗಳಾದವರು ಸಕಲರೂ ಜ್ಞಾನಿಯಾಗಲು ಸಾಧ್ಯ ಎಂದು ಹೇಳಿದರೆ ಜನ ಅವನನ್ನು ಪೂಜಿಸುತ್ತಾರೆ. ಅವನಿಗೆ ಆಲಯ ನಿರ್ಮಿಸಿ ದೇವರನ್ನಾಗಿಸಿ ಉತ್ಸವ ಮಾಡುತ್ತಾರೆ. ಜ್ಞಾನಿಯಾಗಲು ಒಲ್ಲರು. ಬುದ್ಧನಿರುವಾಗಲೇ ಬುದ್ಧನನ್ನು ಪೂಜಿಸಿದರು. ಅನುಯಾಯಿಗಳಾದರು ಬೌದ್ಧರಾದರು. ಬುದ್ಧನಿಂದ ಬಹುದೂರ ಉಳಿದರು. ಹಾಗೆಯೇ ಮಹಾವೀರ ಝುರಾತುಷ್ಟ್ರ ಪೈಗಂಬರರನ್ನು ಬಸವಾದಿ ಶರಣರನ್ನು ದಾಸರನ್ನು ಆರಾಧಿಸಿದರು.

ಜ್ಞಾನ ಪಡೆಯಲೇಬೇಕು. ಅದು ನನ್ನದೇ ಸಂಪತ್ತು. ನನ್ನ ಸಂಪತ್ತನ್ನು ನಾನು ಪಡೆದೇ ತೀರುತ್ತೇನೆ ಎನ್ನುವ ತವಕವೇ ಇಲ್ಲದ ತನುಗಳಿಗೆ ಜ್ಞಾನಿ ಕಾಣುವುದೇ ಇಲ್ಲ. ಅನುಮಿಷನಿಗೆ ಅಲ್ಲಮನೊಬ್ಬನೇ ಕಂಡ. ಅಲ್ಲಮನಿಗೆ ಅನುಮಿಷನೊಬ್ಬನೇ ಕಂಡ. ಜ್ಞಾನ ಜ್ಞಾನದೊಂದಿಗೆ ಬೆರೆತು ಜ್ಞಾನವೇ ಆಯಿತು. ಅಲ್ಲಮ ಸಕಲ ತನುಗಳನ್ನು ಜ್ಞಾನ ಭರಿತ ತನುಗಳನ್ನಾಗಿ ಕಂಡ. ಸಕಲ ತನುಗಳು ಅಲ್ಲಮನನ್ನು ತಮ್ಮಂತೆ ಕಾಣದೇ ದೇವರನ್ನಾಗಿ ಕಂಡವು. ಅಲ್ಲಮನನ್ನು ಆರಾಧಿಸಿದವು. ಸಕಲ ತನುಗಳಲ್ಲಿ ಸಂಗಮವಾದ ಜ್ಞಾನವೆಂಬ ಅನುಮಿಷ ಕಾಣದಂತೆ ಹಾಗೆಯೇ ಉಳಿದ.

ಜ್ಞಾನ ತನುವಿಗೂ-ಮನಕ್ಕೂ ಸಂಬಂಧವಿಲ್ಲದಂತೆ ಹೊರಗಡೆಯೇ ಉಳಿಯಿತು. ಇನ್ನು ನೆರೆ-ಹೊರೆಯ ಮಾತಂತೂ ಬಹುದೂರವೇ ಉಳಿಯಿತು. ಹೇಳಿದರೆ ತೋರುವುದಿಲ್ಲ; ಹೇಳದೇ ಇದ್ದರೆ ಬರುವುದೂ ಅಲ್ಲ. ಅನುವಿಡಿದು ಮನ ತನುವಿನಲ್ಲಿಯೇ ಸಂಗಮವಾದ ಜ್ಞಾನವನ್ನು ಸೇರಲು ನಿತ್ಯ ನಿತ್ಯ ಪ್ರಯಾಣಿಸಬೇಕು. ಹೊರಗೆ ಮರೆತು ಒಳಗೆ ತನ್ನೊಳಗೆ ತನ್ನಾಳಕ್ಕೆ ಪ್ರವೇಶ ಮಾಡಿ ಅಲ್ಲಮನಂತೆ ಅನುಮಿಷನನ್ನು ಕೂಡಬೇಕು.

**26**

**ಅಕ್ಕಟಾ ತನು ನೀನೆಯೆಂಬ ನೀನು ನಾನೆಂಬ ಕಾನನದಲ್ಲಿ**
**ಕಾಮಿಸಿದೆನು ಕರುಣರಸ ಕಂಬನಿಯ**
**ಕರಣಗುಣ ಸಂಗಮದ**
**ಅನುನಯದಲೊಪ್ಪಿಪ್ಪ ತಾತ್ಪರ್ಯವಾ**
**ಮನಸಿಜನ ಬಾಣಕ್ಕೆ ಒಳಗಾದ**
**ಮಾನಸಗುರಿಗಳೆತ್ತ ಬಲ್ಲರೈ ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ಹುಟ್ಟಿದ ಕರುಣೆ ತನುವನ್ನು ಪ್ರೀತಿಸುವಂತೆ ಮಾಡಿತು. ನಾನು ನೀನು ಎಂಬ ಕಾಡು ಸೃಷ್ಟಿಯಾಯಿತು. ಕಾಯ ಕಾಯದೊಂದಿಗೆ ಕಾಮಕ್ಕೆ ಒಳಗಾಯಿತು. ಮೋಹಕ್ಕೆ ಒಳಗಾಯಿತು. ಕ್ರೋಧ ಲೋಭಕ್ಕೆ ಒಳಗಾಯಿತು. ಮದ ಮತ್ಸರಗಳಿಗೆ ಒಳಗಾಯಿತು. ಕಾಯದ ಕಣಕಣದಲ್ಲಿ ಸಂಗಮವಾದ ಅರಿವೆಂಬ ಗುರುದೇವ ಕಾಣದಂತೆ ಕರಣಗುಣಗಳು ಕಾಯವನ್ನು ಆವರಿಸಿದವು.

ಕಾಯದಲ್ಲಿ ಸಂಗಮವಾದ ಬ್ರಹ್ಮರಸ ಮಾಯವಾಯಿತು. ಕಾಯ ಮನಸಿಜನ ಬಾಣಕ್ಕೆ ತುತ್ತಾಯಿತು. ಭ್ರಮಾರಸದಿಂದ ಹುಚ್ಚೆದ್ದು ಕುಣಿಯಿತು. ಪ್ರೇಮದಿಂದ ಇರಬೇಕಾದ ಕಾಯ ಕಾಮದಿಂದ ಕಠ್ರನೆ ಕಂದಿತು. ಕಾಯಕ್ಕೆ ಕಾಯ ಹತ್ತಿರವಾಯಿತು. ಕಾಯದಲ್ಲಿ ಸಂಗಮವಾದ ಅರಿವಿನ ಅಕಾಯ ಕಾಯದಲ್ಲಿಯೇ ಉಳಿಯಿತು.

ಕಾಯವೆಂದರೆ ಕೈಲಾಸ. ಅದು ಬ್ರಹ್ಮಾಂಡ. ಬ್ರಹ್ಮರಸ ತುಂಬಿದ ಭಾಂಡ. ಮನವೆಂಬ ಭ್ರಮೆಯು ಕಾಯವನ್ನು ಆವರಿಸಿರುವುದರಿಂದ ಬ್ರಹ್ಮನ ಪರಿಚಯ ಮನಕ್ಕೆ ಆಗಲೇ ಇಲ್ಲ.

ಕಾಯದಲ್ಲಿ ಅರಿವಿನ ಅಕಾಯವು ಇದೆ. ಮರೆವಿನ ಮನವೆಂಬ ಅಕಾಯವೂ ಇದೆ. ಮನವೆಂಬ ಮರೆವಿನ ಅಕಾಯವು ಅಕಾಯ ಭಕ್ತನಾಗಿ ಅರಿವಿನ ಅಕಾಯಕ್ಕೆ ಭಕ್ತಿ ಮಾಡಿದಾಗ ಅಂದರೆ ಸಂಪೂರ್ಣ ಶರಣು ಹೋದಾಗ ಭಕ್ತಕಾಯವೇ ಶರಣಕಾಯವಾಗುತ್ತದೆ.

ಶರಣ ಕಾಯ ಮತ್ತು ಅರಿವೆಂಬ ಗುರುದೇವನ ಅಕಾಯಗಳೆರಡೂ ಒಂದಾಗುತ್ತವೆ. ಇದು ತೋರುವ ಕಾಯದಲ್ಲಿಯೇ ಘಟಿಸುತ್ತದೆ. ಆಗ ಕಾಯಕ್ಕೆ ಅಂಟಿದ ಕರಣಗುಣಂಗಳೆಲ್ಲ ಕರಗಿ ಹೋಗುತ್ತವೆ. ಮನಸಿಜನ ಬಾಣ ಅಜನ ಅರಿವಿಗೆ ತುತ್ತಾಗುತ್ತದೆ.

ತನುವನ್ನು ಆವರಿಸಿದ ಮನಸ್ಸೆಂಬ ಮಾನಸಗುರಿಗೆ ಇದು ಅರ್ಥವಾಗುವುದಿಲ್ಲ. ಎಲ್ಲಿಯವರೆಗೆ ಮನಸ್ಸು ತನುವನ್ನು ಪ್ರೀತಿಸುತ್ತದೋ ಅಲ್ಲಿಯವರೆಗೆ ತನು, ತನುವನ್ನು ಮೋಹ ಮಾಡುತ್ತದೆ, ತನುವೇ ತನುವನ್ನು ದ್ವೇಷಿಸುತ್ತದೆ. ತನುವೇ ತನುವನ್ನು ಕರುಣೆಯಿಂದ ನೋಡುತ್ತದೆ.

ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುಕಾಯಕ್ಕೆ ಮನಸ್ಸು ಎಂದು ಶರಣು ಹೋಗುತ್ತದೋ ಅಂದಿನಿಂದ ಕಾಯ ಕಾಯವನ್ನು ದ್ವೇಷಿಸುವುದಿಲ್ಲ; ಕಾಮಿಸುವುದಿಲ್ಲ; ಕಾಯ, ಸಕಲ ಕಾಯಗಳನ್ನು ಪ್ರೇಮದಿಂದ ನೋಡುತ್ತದೆ. ಬರೀ ಪ್ರೇಮರಸ ಉಕ್ಕಿ ಹರಿಯುತ್ತದೆ. ಕಾಯದಲ್ಲಿ ಸಂಗಮವಾದ ಅರಿವಿನ ಅಕಾಯಕ್ಕೆ ಕಾಯದ ಮೇಲೆ ಕರುಣಾರಸದ ದೃಷ್ಟಿ ಹರಿದಾಗ ಇದು ತಂತಾನೇ ಘಟಿಸುತ್ತದೆ. ಜಲದಲ್ಲಿ ಹುಟ್ಟಿದ ಕಮಲ ಸಸಿ ಜಲವನುಂಡು ಜಲತಾಗದಂತೆ ಜಲದ ಮೇಲೆ ಅರಳಿ ನಿಂತು ಮಕರಂದ ಬೀರಿದಂತೆ!

ತನು ನಾನೆನ್ನಲು ಹೋದರೆ ಅದು ನಾನಲ್ಲ. ಏಕೆಂದರೆ ಅದರಲ್ಲಿ ನನಗೆ ಕಾಣದಂತೆ ನೀನೆ ಅಡಗಿರುವಿ. ನೀನು ನೀನಲ್ಲ; ಅದು ನಾನೇ ಎಂದು ನೀನು ಗೊತ್ತು ಮಾಡಿದ ಕಾರಣ ನನ್ನಲ್ಲಿ ನೀನಿರುವಿ ಎಂಬುದು ನನಗೆ ಗೊತ್ತಾಯಿತು. ನನ್ನಲ್ಲಿ ನೆಟ್ಟ ಮನಸಿಜನ ಬಾಣ ನಿನ್ನ ನೋಟದಿಂದಾಗಿ ಉದುರಿಬಿತ್ತು. ಮಾನಸಗುರಿಗಳೆತ್ತ ಬಲ್ಲರೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

**27**

**ಅಗ್ನಿ ಸ್ತಂಭವ ಬಲ್ಲೆವೆಂಬರಯ್ಯ!**
**ಅನ್ನವನಿಕ್ಕುವರಯ್ಯ!**
**ಜಲಸ್ತಂಭವ ಬಲ್ಲೆವೆಂಬರಯ್ಯ!**

**ಅರವಟ್ಟಿಗೆಯನಿಕ್ಕುವರಯ್ಯ!**
**ಖಡ್ಗಸ್ತಂಭವ ಬಲ್ಲೆವೆಂಬರಯ್ಯ!**
**ಮರೆಹೊಕ್ಕರೆ ಕಾವರಯ್ಯ!**
**ಇಂತೀ ತ್ರಿವಿಧಗುಣವ ಮೀರಿದವರು**
**ದೇವರಿಗೆ ದೇವರಾಗಿಪ್ಪರು ಕಾಣಾ!**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ದೇವರ ದೇವ.**

ಅನ್ನ ನೀಡಿ ಪುಣ್ಯ ಪಡೆಯುವವರು ಕೋಟ್ಯಾನು ಕೋಟಿ ಜನ. ನೀರು ಕೊಟ್ಟು ಪುಣ್ಯ ಪಡೆಯುವವರು ಕೋಟ್ಯಾನು ಕೋಟಿ ಜನ. ಶಾಲಾ ಕಾಲೇಜುಗಳನ್ನು ಕಟ್ಟಿ ಶಿಕ್ಷಣ ನೀಡಿ ಪುಣ್ಯ ಪಡೆಯುವ ಜನ ಕೋಟ್ಯಾನು ಕೋಟಿ.

ಗಿಡ ಮರ ಬಳ್ಳಿ ಪಶು ಪಕ್ಷಿಗಳಲ್ಲಿ ಇಲ್ಲದ ಈ ಅಜ್ಞಾನ ಮಾನವನಲ್ಲಿ ಒಂದೇ ಇದೆ. ಅನ್ನ ನೀಡಿದರೆ ಮಾತ್ರ ಮನುಷ್ಯ; ಅರವಟ್ಟಿಗೆಗಳನ್ನಿಟ್ಟು ಜಲ ನೀಡಿದರೆ ಮಾತ್ರ ಮನುಷ್ಯ. ವಿದ್ಯಾದಾನ ನೀಡಿದವನು ಮಾತ್ರ ಮನುಷ್ಯ ಎಂದು ಮನುಷ್ಯ ತಿಳಿದಿದ್ದಾನೆ. ಮನುಷ್ಯ ಮನುಷ್ಯನಿಗೆ ನೀಡುವುದೆಂದರೇನು? ಮರ ಮರಕ್ಕೆ ಏನನ್ನಾದರೂ ನೀಡುತ್ತದೆಯೇ? ಹೂ ಹಣ್ಣು ಕಾಯಿ ಬಿಡುವುದು ಮರದ ಧರ್ಮ. ಅದು ಮತ್ತೊಂದು ಮರಕ್ಕಾಗಿ ನೀಡಿತೆ? ತನಗಾಗಿ ಫಲಬಿಟ್ಟು ತಾನೇ ಬುಂಜಿಸಿತೆ? ಅರಿವಿದ್ದ ಮನುಷ್ಯ ಮರ ನೋಡಿಯಾದರೂ ಕಲಿಯ ಬೇಡವೆ?

ಮನುಷ್ಯ ಮನುಷ್ಯನಿಗೆ ನೀಡಿದ ಅನ್ನ ತನ್ನದೇ? ಮರದಿಂದ ಪಡೆದ ಹಣ್ಣು ತನ್ನದೇ? ಜಲ ತನ್ನದೇ? ಶಾಲಾ ಕಾಲೇಜುಗಳಲ್ಲಿ ನೀಡುವ ಜ್ಞಾನ ತನ್ನದೇ?

ಸಸಿಯಲ್ಲಿ ಹೂ ಕಾಯಿ ಹಣ್ಣು ಸಂಗಮವಾಗಿ ಮರವಾದ ಮೇಲೆ ಹೊರಗೆ ಬಂದು ಭೂಮಿಗೆ ಬೀಳುತ್ತವೆ. ಅದನ್ನು ಪಡೆದ ಮನುಷ್ಯ ತನ್ನದೇ ಎಂದು ತಿಳಿದು ಇತರ ತನುಗಳಿಗೆ ನೀಡಿ ದಾನಿ ಎನ್ನಿಸಿಕೊಳ್ಳುತ್ತಾನೆ. ಪಡೆದ ತನುವನ್ನು ಬಡವ ಭಿಕ್ಷುಕ ಎಂದು ಕರೆಯುತ್ತಾನೆ. ಇಂತಹ ಅಜ್ಞಾನಿ ತನುವಿಗೆ ಧಿಕ್ಕಾರವಿರಲಿ. ಈ ತ್ರಿವಿಧ ಗುಣಗಳನ್ನು ಮೀರಿದ ತನು ಮಾತ್ರ ದೇವರಿಗೆ ದೇವರೆಂದು ಕರೆಯಿಸಿಕೊಳ್ಳುತ್ತದೆ.

ನೀರು ಇಲ್ಲದಿದ್ದರೆ, ಮಳೆ ಬಾರದಿದ್ದರೆ ಅರವಟ್ಟಿಗೆಗಳನ್ನು ಇಡಲು ಸಾಧ್ಯವೆ? ಭೂಮಿ ಬೆಳೆಯದಿದ್ದರೆ ಸಸ್ಯ ಸಂಕುಲಗಳು ಇಲ್ಲದಿದ್ದರೆ ಅನ್ನ ನೀಡಲು ಸಾಧ್ಯವೆ? ತನು ತನುವಿಗೆ ಜ್ಞಾನ ನೀಡಲು ಸಾಧ್ಯವೆ? ಶಾಲಾ ಕಾಲೇಜುಗಳಲ್ಲಿ ಕಲಿತ ಜ್ಞಾನದಿಂದ ಕಣ್ಣಿನ ಅಜ್ಞಾನ ಅಳಿದು ಹೋಗುತ್ತದೆಯೆ? ಮನುಷ್ಯ ಮನುಷ್ಯನಿಗೆ ನೋಡಲು ಕಲಿಸಲು ಸಾಧ್ಯವೆ? ಕಲಿಕೆಯಿಂದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಕಳೆದುಕೊಳ್ಳಲು ಕಣ್ಣಿಗೆ ಸಾಧ್ಯವೆ?

''ಅಟ್ಟು ನೀಡುವ ಭಕ್ತನ ಬಟ್ಟೆಯ ಇಚ್ಛೆಗೆ ಬಂದಾತನಲ್ಲ ನೋಡಾ ಮಹೇಶನು. ನೆಟ್ಟನೆ ನೀ ಪರವಸ್ತುವೆಂಬ ಜ್ಞಾನವಟ್ಟುವುದಕ್ಕೆ ಬಂದಾತ ಮಹೇಶನ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನ''

ಒಂದು ತನು ಮತ್ತೊಂದು ತನುವಿಗೆ ಏನನ್ನೂ ನೀಡಲು ಬರುವುದಿಲ್ಲ. ಹಾಗೆ ನೀಡಲು ತನ್ನದೆನ್ನುವ ವಸ್ತು ಒಂದೂ ಇಲ್ಲ. ನೋಡುವ ಕಣ್ಣು, ಮುಟ್ಟುವ ಚರ್ಮ, ರುಚಿಸುವ ನಾಲಗೆ ಕೇಳುವ ಕಿವಿ, ಮೂಸಿಸುವ ಮೂಗು ಇವೆಲ್ಲ ದೇಹದ ಸಂಪತ್ತು. ಈ ಸಂಪತ್ತು ಗರ್ಭದಿಂದ ಹೊರಬರುವಾಗಲೇ ತನುವಿನಲ್ಲಿ ಭರಿತವಾಗಿಯೇ ಬಂದಿದೆ. ಇದು ಸರಿ ಇದೆಯೋ ಇಲ್ಲವೋ ಎಂದು ತಾಳೆ ನೋಡಿ ಸರಿಯಾಗಿ ನಡೆಯುವ ಶಕ್ತಿ ಕೂಡಾ ತನುವಿಗೆ

ಇದೆ. ಇದು ಪ್ರತಿ ತನುವಿನಲ್ಲಿ ಭರಿತವಾದ ಜ್ಞಾನ.

ಅನ್ನ ನೀಡಿ ಪುಣ್ಯ ಕಟ್ಟಿಕೊಂಡರೆ ಜ್ಞಾನಿಯಾಗಲಾರ. ಪಡೆದು ಉಂಡು ಸುಖಿಸಿದವನೂ ಜ್ಞಾನಿಯಾಗಲಾರ. ನೀಡುವ ತನು-ಪಡೆಯುವ ತನುಗಳೆರಡೂ ಉಣ್ಣಲು ಮಾತ್ರ ಬಂದವುಗಳಲ್ಲ. ತನುವಿನಲ್ಲಿಯೇ ಸಂಗಮವಾದ ಜ್ಞಾನ ಉಣ್ಣಲು ಬಂದ ತನುಗಳು. ಕಾಯದ ಈ ಕಾಯಕವನ್ನು ಮರೆತು; ತ್ರಿವಿಧ ಗುಣಗಳಿಂದ ಮೆರೆಯುತ್ತಲಿದೆ. ಇದನ್ನು ಮರೆದವನು ಬುದ್ಧನಾದ, ಮಹಾವೀರನಾದ, ಪೈಗಂಬರನಾದ, ಕ್ರಿಸ್ತನಾದ, ಕ್ರಿಷ್ಣನಾದ. ಬಸವಾದಿ ಶರಣನಾದ; ದಾಸನಾದ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ.

**28**

**ಅಘುವಿಧ್ವಂಸನನರ್ಚಿಸಿಹೆನೆಂದು ಹೋದಡೆ**
**ಅಘುವೆ ಪರಿವೇಷ್ಟಿಸಿತಯ್ಯಾ ಎನ್ನನು.**
**ಇದನ ಹೇಂಗೆ ಕಳೆವೆನಯ್ಯಾ?**
**ಇದ ಕಳೆವೆನಿನ್ನು ನಿನ್ನವರ ಸಂಗದಿಂದ;**
**ಇದ ಕಳೆವೆ ನೀನು ಗುರುವಾಗಿ ಬಂದಡೆ.**
**ಎನ್ನವರ ಸಂಗವಿಲ್ಲದೆ**
**ಅಲ್ಲದಿದ್ದಡೆ ನಿನ್ನ ದೈವತ್ವದಿಂದ ಕಳೆದೆನೆಂದಡೆ**
**ಎನ್ನ ಸುತ್ತಿ ಮುತ್ತಿತ್ತೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವಿನ ತನುವೊಂದು, ಮನೋ ತನುವೊಂದು, ತನುವೊಂದು ಹೀಗೆ ತನುವಿನಲ್ಲಿ ಇನ್ನೆರಡು ತನುಗಳಿವೆ. ಅರಿವಿನ ತನುವಿಗೆ ತನು ಉಪಕರಣವಾಗಬೇಕಿತ್ತು; ಆದರೆ ಮನೋ ತನುವಿಗೆ ತನು ಉಪಕರಣವಾಗಿದೆ.

ಮನೋ ತನುವು ತನುವನ್ನು ಹಿಡಿದು ಹಿಂದುವಾಗಿದೆ. ಕ್ರೈಸ್ತನಾಗಿದೆ. ಬೌದ್ಧನಾಗಿದೆ. ಮುಸಲ್ಮಾನ, ಜೈನ, ಫಾರ್ಸಿಯಾಗಿದೆ. ಹೆಣ್ಣಾಗಿದೆ; ಗಂಡಾಗಿದೆ. ಪಂಡಿತನಾಗಿದೆ ಪಾಮರನಾಗಿದೆ. ಮನಕ್ಕೆ ಹೇಗೆ ಸಂತೋಷವೊ ಹಾಗೆ ತನುವನ್ನು ತನಗೆ ಬೇಕಾದಂತೆ ಇರಿಸಿದೆ.

ಮನವೆಂದರೆ ಅದು ಅಘು. ತನುವನ್ನು ಸುಳ್ಳು ಸುಖಕ್ಕೆ ಸುಳ್ಳು ದುಃಖಕ್ಕೆ ಈಡುಮಾಡುವ ಪಾಪಿ. ತನುವನ್ನು ಹುಟ್ಟು ಸಾವುಗಳಿಂದ ವಿಲವಿಲನೆ ಒದ್ದಾಡುವಂತೆ ಮಾಡುವ ರಾಕ್ಷಸಿ. ಶಬ್ದ ಸ್ಪರ್ಶ ರುಚಿ ವಾಸನೆಗಳನ್ನು ತನುವಿನಲ್ಲಿ ಸೃಷ್ಟಿ ಮಾಡಿ ವಿಲವಿಲನೆ ಒದ್ದಾಡುವಂತೆ ಮಾಡುವ ಅವಿವೇಕಿ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ತನುವಿನಲ್ಲಿ ಸೃಷ್ಟಿ ಮಾಡಿ, ಸಪ್ತವ್ಯಸನಗಳಿಗೆ, ಅಷ್ಟಮದಗಳಿಗೆ ದಾಸನನ್ನಾಗಿಸುವ ಭ್ರಮಾಗೇಡಿ. ಬ್ರಹ್ಮನನ್ನು ಮರೆಮಾಚಿ, ಸೃಷ್ಟಿ ಮಾಡಿದ ಬ್ರಹ್ಮನನ್ನೇ ಕಾಡುವ ಬ್ರಹ್ಮರಕ್ಕಸಿ.

ತನುವನ್ನು ಪಂಡಿತನನ್ನಾಗಿಸಿ, ಶಾಸ್ತ್ರಿಯನ್ನಾಗಿಸಿ, ರಾಜ ಪ್ರಧಾನಿ ಕಾಲಾಳನ್ನಾಗಿ ಮಾಡಿ, ಶ್ರೀಮಂತ ಭಿಕ್ಷುಕನ ಅವತಾರವನ್ನು ತನುವಿನಲ್ಲಿಯೇ ಸೃಷ್ಟಿ ಮಾಡಿ ಅನಂತ ಕಾಲಗಳವರೆಗೆ ತನುವನ್ನು ಹೆಣ್ಣಾಗಿ ಕಾಡುತ್ತದೆ; ಹೆಣ್ಣಿಗೆ ಗಂಡಾಗಿ ಕಾಡುತ್ತದೆ.

ಅನಂತ ಕಾಲಗಳವರೆಗೆ ಮನ, ತನುವನ್ನು ಗುರುವಾಗಿ ಕಾಡುತ್ತದೆ; ಶಿಷ್ಯನಾಗಿ ಕಾಡುತ್ತದೆ. ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ತನುವನ್ನು ಮಾತ್ರ

ಸೋಂಕುವುದಿಲ್ಲ. ಸ್ಥೂಲ ತನುವನ್ನು ಆವರಿಸಿದ ಸೂಕ್ಷ್ಮ ತನುವೆಂಬ ಮನ ಸ್ಥೂಲ ತನುವನ್ನು ರಕ್ಕಸನಾಗಿ ಪರಿಪರಿಯಿಂದ ಕಾಡುತ್ತದೆ.

ಹೀಗೆ ಪರಿಪರಿಯಿಂದ ತನುವನ್ನು ಕಾಡುವ; ತನುವಿನ ಆಶ್ರಯದಲ್ಲಿದ್ದೂ ತನುವನ್ನು ನರಕಯಾತನೆಗೆ ತಳ್ಳುವ ಸೂತಕ ಮನವನ್ನು ಹೇಗೆ ಕಳೆವೆನಯ್ಯಾ? ಅರಿವೆಂಬ ಗುರುದೇವನೇ ನಿನ್ನ ಸಂಗದಿಂದ ಮಾತ್ರ ಕಳೆಯಲು ಸಾಧ್ಯ. ನಿನಗೆ ಶರಣುಹೋಗಿ ಶರಣರೇ ತಾವಾದವರ ಸಂಗದಿಂದ ಮಾತ್ರ ಕಳೆಯಲು ಸಾಧ್ಯ.

ಗುರುದೇವನೇ ನೀನಿರುವ ತನುವನ್ನು ಮತ್ತು ನಿನ್ನನ್ನು ಮುತ್ತಿಗೆ ಹಾಕಿದ ಮನವನ್ನು ನೀನೇ ಗುರುವಾಗಿ ಬಂದು ನಿನ್ನಂತೆ ಮಾಡಿಕೊ ನನ್ನಯ್ಯ.

ನಿನ್ನ ದೈವತ್ವದಿಂದ ಕಳೆಯಲು ಹೋದರೆ ಮತ್ತೆ ನನ್ನನ್ನು ಸುತ್ತಿ ಚಕ್ರವ್ಯೂಹದ ಕೋಟೆಯನ್ನೇ ನನ್ನ ಸುತ್ತಮುತ್ತ ಕಟ್ಟುತ್ತದೆ. ಅದನ್ನು ಬೇಧಿಸಿ ಒಳಹೊಕ್ಕು ನಿನ್ನನ್ನು ಸೇರಲು ನನಗೆ ಸಾಧ್ಯವಿಲ್ಲ ದೇವನೆ ಕಪಿಲಸಿದ್ಧ ಮಲ್ಲಿಕಾರ್ಜುನನೇ.

**29**

**ಅಚ್ಚಪ್ರಸಾದ ನಿಚ್ಚಪ್ರಸಾದ ಸ್ವಚ್ಛಪ್ರಸಾದವನರಿಯದ ಮೂಢರಿಗೆ**
**ಷಡ್ವಿಧ ಲಿಂಗಾಂಗ ಪ್ರಸಾದ ಪಾದೋದಕವ ಹೇಳುವನೊಬ್ಬ**
**ಪಾದೋದಕದ್ರೋಹಿ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪ್ರಸಾದವೆಂದರೇನೆಂದು ತಿಳಿಯದ ಮೂಢ ಮನಕ್ಕೆ ಷಡ್ವಿಧ ಲಿಂಗಾಂಗ ಪ್ರಸಾದ ಪಾದೋದಕವ ಹೇಳುವನೊಬ್ಬ ಪಾದೋದಕ ದ್ರೋಹಿ ನೋಡಾ ಎಂದು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನೊಂದಿಗೆ ಸಿದ್ಧರಾಮ ಶಿವಯೋಗಿಗಳು ಸ್ವಗತ ನುಡಿದಿದ್ದಾರೆ.

ಉಂಡ ಅನ್ನ ಜೀರ್ಣವಾದರೆ ಅದು ಪ್ರಸಾದ. ಅನ್ನ ಜೀರ್ಣವಾಗಿ ಕಣ್ಣು ಕಿವಿ ಮೂಗು ನಾಲಿಗೆ ಚರ್ಮಕ್ಕೆ ಕಾಂತಿಯನ್ನು ನೀಡುತ್ತದೆ. ಜೀರ್ಣವಾಗದಿದ್ದರೆ ಸರ್ವಾಂಗವೂ ಯಾತನೆ ಅನುಭವಿಸುತ್ತದೆ.

ಅನ್ನ ಬಾಯಿ ಮೂಲಕ ಜಠರಾಗ್ನಿಗೆ ಹೋಗಿ ಸರ್ವಾಂಗಕ್ಕೆ ಪ್ರಸಾದ ರೂಪದಲ್ಲಿ ವ್ಯಾಪಿಸಿಕೊಳ್ಳುತ್ತದೆ. ಜೀರ್ಣವಾಗದಿದ್ದರೆ ಬಾಯಿ ಮೂಲಕವೇ ಹೊರಚೆಲ್ಲಿ ಸರ್ವಾಂಗ ಬಾಧೆಗೆ ಒಳಗಾಗುತ್ತದೆ. ಸರ್ವಾಂಗ ಅನ್ನವನ್ನು ಪ್ರಸಾದ ಮಾಡಿಕೊಳ್ಳುವ ವಿಧಾನ. ಇದನ್ನು ಯಾರೂ ಯಾರಿಗೂ ಹೇಳಬೇಕಾಗಿಲ್ಲ. ತನಗೆ ತಾನೇ ನಡೆಯುವ ಸರಳ ಕೆಲಸ.

ನೋಡುವ ದೃಶ್ಯ ಕಣ್ಣಿಗೆ ಪ್ರಸಾದವಾಗಬೇಕು. ಕೇಳುವ ಶಬ್ದ ಕಿವಿಗೆ ಪ್ರಸಾದವಾಗಬೇಕು. ಮುಟ್ಟಿದ ಸ್ಪರ್ಶ ಚರ್ಮಕ್ಕೆ ಪ್ರಸಾದವಾಗಬೇಕು. ರುಚಿಸಿದ ಪದಾರ್ಥ ನಾಲಿಗೆಗೆ ಪ್ರಸಾದವಾಗಬೇಕು. ಮೂಸಿಸಿದ ಸುಗಂಧ ದುರ್ಗಂಧ ಮೂಗಿಗೆ ಪ್ರಸಾದವಾಗಬೇಕು. ಸರ್ವಾಂಗಕ್ಕೆ ಪ್ರಸಾದವಾಗಿ ಅಂಗ ಸದಾ ಆನಂದದಲ್ಲಿ ವಿರಮಿಸಬೇಕು. ಆದರೆ ಇದು ಸಾಧ್ಯವಾಗುವುದೇ ಇಲ್ಲ.

ನೋಡಿದ ದೃಶ್ಯ ಅಜ್ಞಾನವಾಗಿ ಕಣ್ಣಿಗೆ (ಜೀರ್ಣವಾಗದೆ) ಪ್ರಸಾದವಾಗದೆ ಸರ್ವಾಂಗಕ್ಕೆ ಬಾಧೆಯನ್ನು ಉಂಟು ಮಾಡುತ್ತದೆ. ಕೇಳಿದ ಶಬ್ದ ಕಿವಿಗೆ ಪ್ರಸಾದವಾಗದೆ ಅಜ್ಞಾನವಾಗಿ ಇಡೀ ದೇಹಕ್ಕೆ ಬಾಧೆಯನ್ನು ಉಂಟು ಮಾಡುತ್ತದೆ. ಹೀಗೆ ಮೂಗು ನಾಲಿಗೆ ಚರ್ಮಕ್ಕೆ ಬಡಿದ ಪದಾರ್ಥಗಳು ಪ್ರಸಾದವಾಗದೆ ಸರ್ವಾಂಗದಲ್ಲಿ ಸೂತಕದ ಛಾಯೆಯನ್ನು ಉಂಟು ಮಾಡಿ

ಅಂಗ ಇರುವವರೆಗೆ ಅಂಗವನ್ನೇ ನರಕಯಾತನೆಗೆ ಗುರಿ ಮಾಡುತ್ತದೆ.

ಅಂಗಕ್ಕೆ ಈ ಎಲ್ಲ ಸೂತಕ ತಿಳಿದಿದೆ. ಗೊತ್ತಿದ್ದೆ ಮಾಡಿಕೊಂಡ ಗಾಯವನ್ನು ಗೊತ್ತುಮಾಡಿ ಕಳೆಯಲು ಮತ್ತೊಂದು ಅಂಗಕ್ಕೆ ಸಾಧ್ಯವೆ? ನೋಡುವ ಅಜ್ಞಾನವನ್ನು, ಕೇಳಿ ರುಚಿಸಿ ಮುಟ್ಟಿ ಮೂಸಿಸಿ ಆನಂದ ಪಡುವ ಅಜ್ಞಾನವನ್ನು ಶಾಸ್ತ್ರ ಹೇಳಿ ಕಳೆಯಲು ಸಾಧ್ಯವೆ?

ನೋಡುವ ಕಣ್ಣಿಗೆ ಹೀಗೆ ನೋಡಬಾರದೆಂದು ಶಬ್ದದ ಮೂಲಕ ಬೋಧಿಸಿದರೆ ಅದಕ್ಕೆ ಕೇಳಲು ಕಿವಿಗಳಿಲ್ಲ. ಹೀಗಾಗಿ ಶಬ್ದ ಕಣ್ಣಿನ ಅಜ್ಞಾನವನ್ನು ಕಳೆಯುವುದಿಲ್ಲ. ಕಣ್ಣು ಕಿವಿ ಮೂಗು ನಾಲಗೆ ಚರ್ಮದಲ್ಲಿ ಅಜ್ಞಾನಿ ಎಂಬ ಮೂಢ ಮನ ವಾಸವಾಗಿದೆ. ಅದೇ ಪಂಚೇಂದ್ರಿಯಗಳ ಮೂಲಕ ಅಜ್ಞಾನವನ್ನು ಉಂಡು ತಾನು ಆನಂದ ಪಡುತ್ತಾ ಸರ್ವಾಂಗಕ್ಕೆ ಗಾಯ ಮಾಡುತ್ತದೆ.

ಪಂಚೇದ್ರಿಯಗಳಲ್ಲಿ ವಾಸ ಮಾಡಿದ ಅರಿವೆಂಬ ಗುರುದೇವನ ಮಾತು ಕೇಳದ ಮೂಢ ಮನ ಹೊರಗಿನ ಶಾಸ್ತ್ರದ ಮಾತು ಕೇಳಲು ಸಾಧ್ಯವೆ?

ಅಚ್ಚ ಪ್ರಸಾದ ನಿಚ್ಚ ಪ್ರಸಾದ ಸಮಯ ಪ್ರಸಾದ ಷಡ್ವಿಧ ಲಿಂಗಾಂಗ ಪ್ರಸಾದ ಹಾಗೂ ಪಾದೋದಕ ಸರ್ವಾಂಗದಲ್ಲಿ ಭರಿತವಾಗಿದೆ. ಇದು ಗುರುದೇವನಾಗಿ ಮೂಢ ಮನಕ್ಕೆ ಸದಾ ಪಾಠ ಮಾಡುತ್ತಲಿದೆ. ಆದರೂ ಮನದ ಮೌಢ್ಯ ತೊಲಗುವುದಿಲ್ಲ. ಗುರುದೇವ ಬೋಧಿಸಿದ ಪಾಠವನ್ನೇ ಶಾಸ್ತ್ರ ಮಾಡಿಕೊಂಡು, ಗುರುವೇಷ ಧರಿಸಿ, ಗುರುದೇವನಿದ್ದ ತನುವಿಗೆ ಗುರುವಾಗಿ ಬೋಧಿಸಲು ಹೋಗುತ್ತದೆ. ಮೂಢಗುರು ಮೂಢ ಮನಕ್ಕೆ ಬೋಧಿಸಿದಂತಾಗಲಿಲ್ಲವೆ? ಇಂತಹ ಗುರು ಪಾದೋಕಕದ್ರೋಹಿ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ.

**30**

**ಅರ್ಚಿಸಲು ಬೇಡವದು, ಪೂಜಿಸಲು ಬೇಡ,**
**ನಿತ್ಯ ಜಪ ತಪ ನೇಮ ನಿನಗೆ ಬೇಡ.**
**ಸಚ್ಚಿದಾನಂದ ಗುರು ಕಪಿಲಸಿದ್ಧಮಲ್ಲಿಕಾರ್ಜುನನ**
**ಬಸವಾಕ್ಷರತ್ರಯವ ನೆನೆ ನಿತ್ಯಪದವು.**

ಜಗದ ಜನ ಅರ್ಚಿಸಿ ಪೂಜಿಸಿ ಧ್ಯಾನ ಮಾಡುವುದರಲ್ಲಿಯೇ ಕಾಲಕಳೆಯುತ್ತದೆ. ಜಪ ತಪ ನಿತ್ಯನೇಮಗಳನ್ನು ಮಾಡುವುದರಲ್ಲಿಯೇ ಕಾಲ ಕಳೆಯುತ್ತದೆ. ಒಂದು ಜಾಗದ ಕಟ್ಟಡಕ್ಕೆ ಹೋಗಿ ಪ್ರಾರ್ಥಿಸಿದರೆ ಪೂಜಿಸಿದರೆ, ಕೊರಳಲ್ಲಿ ಶಿಲುಬೆ ಜನಿವಾರ ಲಿಂಗ ಧರಿಸಿದರೆ ದೇವರು ಒಲಿಯಲು ಸಾಧ್ಯವೆ ಹೇಗೆ? ಎಂದು ಅರಿವಿನ ದೇಹಕ್ಕೆ ಆಲೋಚನೆ ಮಾಡಲು ಕೂಡಾ ಸಾಧ್ಯವಾಗದಂತಹ ಅಜ್ಞಾನವೆಂಬ ಮನ ತನುವನ್ನು ಆವರಿಸಿಕೊಂಡಿದೆ.

ಮನದ ಮೂಲಕ ದೇಹದೊಂದಿಗೆ ಆಲೋಚನೆಗೆ ತೊಡಗಬೇಕು. ಆದರೆ ಮನವೇ ದೇಹವನ್ನು ಕರೆದುಕೊಂಡು ಹೋಗಿ ಪ್ರಾರ್ಥನೆ ಮಾಡಲು ಹಚ್ಚಿದೆ. ಮನವೇ ಕೊರಳಲ್ಲಿ ಶಿಲುಬೆ, ಜನಿವಾರ, ಲಿಂಗ ಧರಿಸಲು ದೇಹಕ್ಕೆ ಆದೇಶ ನೀಡಿರುವಾಗ ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಮಾತು ದೇಹ ಕೇಳಲು ಸಾಧ್ಯವೆ? ಅಥವಾ ಮನಕ್ಕೆ ಸದ್ಗುರುವಿನ ಮಾತು ಇಷ್ಟವಾದೀತೆ ಎಂದು ಆಲೋಚಿಸಲು ಕೂಡಾ ದೇಹಗಳಿಗೆ ಸಾಧ್ಯವಾಗುತ್ತಿಲ್ಲವಲ್ಲ. ಇದು ದೇಹಗಳ ದುರ್ದೈವವೇ ಸರಿ.

ದೇಹಕ್ಕೆ ದೇಹವನ್ನು ಆವರಿಸಿದ ಮನಕ್ಕೆ ದೇವಾಲಯ ಕಟ್ಟಲು ಆಸಕ್ತಿಯಿದೆ. ಕಟ್ಟಿದ ದೇವಾಲಯಗಳ ಕಲ್ಲುಗ್ಗಳಿಂದಲೇ ದೇವರನ್ನು ಕಟೆದು ಅದಕ್ಕೆ ಪ್ರಾಣ ಪ್ರತಿಷ್ಠಾನ ಮಾಡಿ

ದೇವರೆಂದು ಪೂಜಿಸಿ ಆರಾಧಿಸಲು ಆಸಕ್ತಿಯಿದೆ. ಕಲ್ಲಲ್ಲಿಯೇ ಹೆಣ್ಣು ದೇವರನ್ನು ಗಂಡು ದೇವರನ್ನು ಮಾಡಿ, ಅದಕ್ಕೆ ವಸ್ತ್ರಾಲಂಕಾರದಿಂದ ಪೂಜಿಸಿ ಕಲ್ಯಾಣೋತ್ಸವ ಮಾಡಿ ಛತ್ರಿ ಚಾಮರಗಳನ್ನು ಬೀಸಿ ಶಯನಗೃಹಕ್ಕೆ ಕಳುಹಿಸುವ ಆಸಕ್ತಿ ದೇಹಕ್ಕೆ ಇದೆ.

ದೇಹವೇ ದೇವಾಲಯ. ಅದರಲ್ಲಿ ಅರಿವೆಂಬ ಗುರುದೇವನಿದ್ದಾನೆ. ಆ ಗುರುದೇವನೇ ಮಹಾದೇವನು, ಸದಾಶಿವನು, ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ ಎಂದು ತನ್ನನ್ನು ತಾನೇ ತಿಳಿಯಲು ಪುರುಸೊತ್ತಿಲ್ಲ. ಆದರೆ ಪ್ರಾರ್ಥಿಸುವಾಗ 'ಗುರುದೇವೋ ಮಹಾದೇವೋ ಗುರುದೇವೋ ಸದಾಶಿವಃ ಗುರುಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರುವೇ ನಮಃ' ಎಂದು ಹೇಳುವುದನ್ನು ಮರೆಯುವುದಿಲ್ಲ. ಇದು ಪುರಾತನರು ತನ್ನನ್ನು ತಾನೇ ತಿಳಿಯಲು ರಚಿಸಿದ ಸೂತ್ರವೆಂಬುದನ್ನು ಕೂಡಾ ದೇಹ ಅರಿವಿಗೆ ತಂದುಕೊಳ್ಳುವುದಿಲ್ಲ. ಹೀಗಾಗಿ ದೇವರಿದ್ದ ದೇಹ ಹಿಂದು ಕ್ರೈಸ್ತ ಮುಸಲ್ಮಾನ ಬುದ್ಧ ಜೈನ ಫಾರ್ಸಿ ಪಂಜಾಬಿ ಆಗಿದೆ. ಅರಿವಿನ ದೇವರಿಂದ ಬಹುದೂರ ಸಾಗಿದೆ.

ಸಚ್ಚಿದಾನಂದ ಗುರು ಕಪಿಲಸಿದ್ಧ ಮಲ್ಲಿಕಾರ್ಜುನನ ಬಸವಾಕ್ಷರತ್ರಯದ ನೆನೆಪದವು:

ಸಾಕ್ಷಾತ್ ಸಚ್ಚಿದಾನಂದನೇ ತಾನಿದ್ದು, ಸತ್ ಚಿತ್ ಆನಂದಮಯನು. ತಾನು ಸತ್ಯವು ಹೌದು ಶಿವಮಯನೂ ಹೌದು ಅತ್ಯಂತ ಸುಂದರನೂ ಹೌದು. ಸಾವೇ ಇಲ್ಲದ ಕೇಡೇ ಇಲ್ಲದ ರೂಪಿಲ್ಲದ ಚೆಲುವನೂ ಹೌದು.

ದೇಹವನ್ನು ಆವರಿಸಿದ ಮನ ಭಕ್ತಳಾಗಿ ದೇಹದಲ್ಲಿದ್ದ ಅರಿವೆಂಬ ಗುರುದೇವರನ್ನು ಆರಾಧಿಸಿದರೆ ಸಾಕು ಆ ಮನವೂ ಕೂಡಾ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವನನ್ನು ಕೂಡಿ ಆರಾಧಿಸಿ ಚೆಲುವೆಯೇ ತಾನಾಗುತ್ತಾಳೆ. ಚೆಲುವ ಚೆಲುವೆಯರು ದೇಹವೆಂಬ ದೇವಾಲಯದಲ್ಲಿದ್ದು ಅವರಿಗೆ ಸಾಕಾದಾಗ ದೇಹವನ್ನು ತಳ್ಳಿ ಬಯಲಾಗುತ್ತಾರೆ.

ದೇಹದಲ್ಲಿದ್ದ ದೇವರಿಗೆ ಸಿದ್ಧರಾಮ ಶಿವಯೋಗಿ ಬಸವಾಕ್ಷರತ್ರಯದಿಂದ ನೆನೆದಿದ್ದಾರೆ. ಹಾಡಿ ಆಡಿ ಕುಣಿಕುಣಿದಾಡಿದ್ದಾರೆ.

**31**

**ಅಚ್ಚೊತ್ತಿದಂತೆ ಒಚ್ಚತಗೊಂಡರು**
**ಬಸವಣ್ಣ ಮೊದಲಾದ ಪುರಾತರೆಲ್ಲ.**
**ಸೂರೆಗೊಂಡರಯ್ಯಾ ನಿಮ್ಮ ಪ್ರಸಾದ ಭಂಡಾರವ.**
**ಅಲ್ಲಿಯ ಶೇಷವೆನಗಾದರೆ ಅವರಂತೆ ಆನಪ್ಪೆನು**
**ಇಲ್ಲದಿದ್ದಡೆ ಮುನ್ನಿನಂತೆ ಅಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪ್ರಪಂಚದ ಏಳುನೂರಾ ಇಪ್ಪತ್ತುಕೋಟಿ ದೇಹಗಳೆಲ್ಲ ದೇವಾಲಯಗಳೇ ಆಗಿವೆ. ಅವು ನೀನಿದ್ದ ದೇವಾಲಯ. ನೀನೇ ಅರಿವಿನ ಅಚ್ಚು ಒತ್ತಿ ಗರ್ಭಕ್ಕೆ ಕಳುಹಿಸಿದ ದೇವಾಲಯಗಳು. ದೇವಾಲಯವೆಂದು ನೋಡಲು ದೇಹಕ್ಕೆ ಸಾಧ್ಯವಾಗುತ್ತಿಲ್ಲ. ಅದು ನೀನೆ ಒತ್ತಿದ ಅಚ್ಚೆಂದು ಕೂಡಾ ದೇಹಕ್ಕೆ ತಿಳಿಯಲು ಸಾಧ್ಯವಾಗುತ್ತಿಲ್ಲ.

ವೈದ್ಯಕೀಯ ಲೋಕ ಇಂತವರ ಮಗುವೆಂದು, ಈ ಮಗುವಿಗೆ ಇವರೇ ತಂದೆಯೆಂದು ಗುರುತಿಸಬಹುದು. ಡಿಎನ್ಎ ಪರೀಕ್ಷೆಯಿಂದ. ಆದರೆ ಭವರೋಗದ ವೈದ್ಯನಾದ ಬಸವಣ್ಣ

ಸಕಲ ದೇಹಗಳಿಗೂ ಅರಿವಿನ ತಂದೆಯನ್ನೇ ತಂದೆಯೆಂದು ಗುರುತಿಸಿದರು. ಹಾಗೆ ಸರಳವಾಗಿ ಗುರುತಿಸಿದ ಮೊದಲನೆ ವೈದ್ಯರವರು.

'ಲಾಂಛನವ ಕಂಡು ನಂಬುವೆ, ಅವರಂತರಂಗವ ನೀನೇ ಬಲ್ಲೆ. ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯಾ? 'ರತ್ನಮೌಕ್ತಿಕದಚ್ಚು' , ಕೂಡಲಸಂಗಮದೇವಾ ನಿಮ್ಮ ಶರಣರು'.

ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಒಂದೇ ಇದೆ. ಅವು ಸೋರದಂತೆ ಸುಂದರವಾಗಿ ಹೆಣೆದ ಚರ್ಮ ಕೂಡಾ ಒಂದೇ ಇದೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಕೂಡಾ ಒಂದೇ ಇದೆ. ಅವುಗಳ ಧರ್ಮ ಕೂಡಾ ಒಂದೇ ಆಗಿದೆ. ಭಾಷೆ ಹೆಣ್ಣು ಗಂಡು ಎನ್ನುವ ಅಜ್ಞಾನವನ್ನು ನಾನು ಸಂಪಾದಿಸಿಕೊಂಡಿದ್ದೇನೆ. ನೀನು ಒತ್ತಿ ಕಳುಹಿಸಿದ ಅಚ್ಚು ಒಂದೇ. ಅದರಿಂದ ಹೊರಬಂದ ಬೊಂಬೆ ಒಂದೇ. ಅದು ಅರಿವಿನ ಬೊಂಬೆಯಾದರೂ ಅರಿವೊಂದನ್ನು ಬಿಟ್ಟು ಹೊರಗಿನ ಸಕಲವನ್ನು ತಿಳಿಯುವ ಅಜ್ಞಾನದ ದೈತ್ಯ ಶಕ್ತಿಯನ್ನು ಕೂಡಾ ನೀನೆ ನಿನ್ನ ಅಚ್ಚಿನಲ್ಲಿ ತುಂಬಿ ಕಳುಹಿಸಿರುವಿ. ಒಂದನ್ನು ಕಳೆದು ಜ್ಞಾನವನ್ನು ಮಾತ್ರ ಬಳಸುವಂತೆ ನೀನು ತಯಾರಿಸಿದ ಬೊಂಬೆಗೆ ಹೇಳುವ ಶಕ್ತಿ ನಿನಗೆ ಮಾತ್ರ ಇದೆ.

ಏಕೆಂದರೆ ಅಚ್ಚೊತ್ತಿದ ನಿನ್ನ ತನುವೆಂಬ ಅರಿವಿನ ಲಾಂಛನದಲ್ಲಿ ನೀನೇ ಇರುವುದರಿಂದ, ನೀನು ಮಾತ್ರ ನೀನೇ ತುಂಬಿದ ಅಜ್ಞಾನವನ್ನು ಕಳೆಯಲು ಸಾಧ್ಯ.

ಬಸವಣ್ಣನಿಗೆ ಕರುಣಿಸಿದೆ. ಆತ ನೀನು ಒತ್ತಿ ಕಳುಹಿಸಿದ ಸಕಲ ಅಚ್ಚಿನ ಬೊಂಬೆಗಳನ್ನು ನೋಡಿದ. ಅದರಲ್ಲಿ ನೀನಿರುವುದೂ ಆತನಿಗೆ ಗೋಚರವಾಯಿತು. ನಂಬಿದ. ಬೊಂಬೆಯ ಅಂತರಂಗವನ್ನು ನೀನೇ ಬಲ್ಲೆ. ಏಕೆಂದರೆ ಅದು ನಿನ್ನ ಲಾಂಛನ. ನಿನ್ನ ಇರುವಿಕೆಯನ್ನು ತೋರಿಸುವ ಲಾಂಛನ. ಜ್ಞಾನವೆಂಬ ಮುತ್ತು ರತ್ನಗಳಿಂದ ಕೂಡಿದ ನಿನ್ನ ಅಚ್ಚಿನಿಂದ ಹೊರಬಂದ 'ರತ್ನಮೌಕ್ತಿಕದಚ್ಚು' ನೀನಿದ್ದ ಕಾಯಕ್ಕೆ ಶರಣು ಹೋಗುವುದೊಂದೇ ನನ್ನ ಕೆಲಸ. ನಾನು ನಿನ್ನ ತೊತ್ತು. ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯ? ಎಂದು ಬಸವಣ್ಣನವರು ಹೇಳಿದರೆ ಸಿದ್ಧರಾಮ ಶಿವಯೋಗಿಗಳು ಕೂಡಾ 'ಅಚ್ಚೊತ್ತಿದಂತೆ ಒಚ್ಚತಗೊಂಡರು ಬಸವಣ್ಣ ಮೊದಲಾದ ಪುರಾತರೆಲ್ಲ. ಸೂರೆಗೊಂಡರಯ್ಯಾ ನಿಮ್ಮ ಪ್ರಸಾದ ಭಂಡಾರವ. ಅಲ್ಲಿಯ ಶೇಷವು ಎನಗಾದರೆ, ಅವರಂತೆ ನಾನು ಆಗುವುದರಲ್ಲಿ ಸಂದೇಹವೇ ಇಲ್ಲ. ಇಲ್ಲದಿದ್ದಡೆ ಮುನ್ನಿನಂತೆ ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಅರಿವಿನ ದೇವನೇ; ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ಒತ್ತಿದ ಅಚ್ಚಿನ ಮೂಲಕ ನಿನ್ನ ಅರಿವಿನ ಪ್ರಸಾದ ಭಂಡಾರವನ್ನೇ ಸೂರೆಗೊಂಡು ತದ್ರೂಪ ನಿನ್ನಿಂದಲೇ ಹೊರಬಂದರು. ನೀನೇ ಅವರೆಂದು ಜಗವೆಲ್ಲ ಕೊಂಡಾಡಿತು. ಅಲ್ಲಿಯ ಶೇಷವು ಎನಗಾದರೆ ಅವರಂತೆ ನಾನಾಗುವೆ ತಂದೆ; ಕಪಿಲಸಿದ್ಧ ಮಲ್ಲಿಕಾರ್ಜುನಾ.

**32**

**ಅಜನ ಕಲ್ಪಿತವಲ್ಲದ ಭಕ್ತಿ**
**ವಿಷ್ಣುವಿನ ಕಲ್ಪಿತವಲ್ಲದ ಭಕ್ತಿ**
**ರುದ್ರನ ಕಲ್ಪಿತವಲ್ಲದ ಭಕ್ತಿ**
**ನಿನ್ನ ಕಲ್ಪಿತವಾಯಿತ್ತಯ್ಯಾ ಬಸವಾ.**
**ನೋಟಕಾರರ ನೋಟಕ್ಕೆ ಸಿಕ್ಕದ ಭಕ್ತಿ**

**ಕೂಟಕ್ಕೆ ಕೂಟವಾಯಿತ್ತಯ್ಯಾ ಬಸವಾ**
**ಈ ಬೇಟದ ಭಕ್ತಿಯ ನಿಮ್ಮಿಂದ ಕಂಡೆನಯ್ಯಾ, ಬಸವ ಗುರುವೆ,**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ಬ್ರಹ್ಮನಿಗೆ ಶಿವನ ದರ್ಶನ ಸಾಧ್ಯವಾಗಲಿಲ್ಲ. ಶಿವನ ದರ್ಶನ ಮಾಡಿಯೇ ತೀರುತ್ತೇನೆ ಎಂದು ಶಿವನ ಮುಕುಟವನು ಅರಸಿ ಮೇಲಕ್ಕೆ ಜಿಗಿದ. ಪ್ರಯಾಣ ಮಾಡಿ ಮಾಡಿ ದಣಿದ. ಆಕಾಶ ಕಾಯಗಳಲ್ಲಿ ಬೆಳೆದ ಕೇದಿಗೆಯ ತರಿದು ಇದು ಶಿವನ ಜಡೆ ಎಂದು ತೋರಿಸಲು ಹೋದ. ಸುಳ್ಳು ಹೇಳಿದುದಕ್ಕಾಗಿ ಬ್ರಹ್ಮನ ಶಿರವೊಂದು ಕಳಚಿಬಿತ್ತು.

ಬ್ರಹ್ಮನೆಂದರೆ ದೇವರಲ್ಲ. ಅಂಗವನ್ನು ಆವರಿಸಿದ ಮನ. ಅದಕ್ಕೆ ಘನವನ್ನು ಹುಡುಕಲು ಸಾಧ್ಯವಾಗುವುದೇ ಇಲ್ಲ. ಘನವೆಂದರೆ ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗ. ಅಂಗವನ್ನು ಆವರಿಸಿದ ಮನ ಅಂಗದೊಂದಿಗೆ ಏನೆಲ್ಲ ಹುಡುಕುತ್ತದೆ. ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಹುಡುಕುವುದಿಲ್ಲ. ಲಿಂಗವೆಂದರೇನೆಂದು ಮನಕ್ಕೆ ಗೊತ್ತೇ ಆಗುವುದಿಲ್ಲ. ಕಲ್ಲು ಕಟೆದು ಅದನ್ನೇ ಲಿಂಗವೆಂದು ಅಂಗದ ಮೇಲೆ ಧರಿಸಿ, ಹಗಲಿರುಳು ಪೂಜಿಸುತ್ತದೆ. ಕಲ್ಲನ್ನೇ ಲಿಂಗವೆಂದು ಕಲ್ಪನೆ ಮಾಡಿಕೊಂಡ ವಸ್ತುವಿಗೆ ಮನವೆಂಬ ಭ್ರಮೆ ಭಕ್ತಿ ಮಾಡುತ್ತದೆ. ಭ್ರಮೆ ಕಳೆದುಕೊಂಡರೆ ಬ್ರಹ್ಮ ನಾನೇ ಎಂದು ಬೀಗುತ್ತದೆ. ಹೀಗಾಗಿ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯ ಬ್ರಹ್ಮನಿಂದ ಬಹುದೂರವಾಗುತ್ತಾನೆ.

ವಿಷ್ಣು ಶಿವನ ಪಾದ ಹಿಡಿದು ಪಾತಾಳಕ್ಕೆ ಹಾರಿದ. ಆದರೂ ಶಿವನ ಪಾದ ವಿಷ್ಣುವಿಗೆ ದೊರೆಯಲೇ ಇಲ್ಲ. ವಿಷ್ಣುವೆಂದರೂ ದೇವರಲ್ಲ. ವಿಷ್ಣುವೆಂದರೆ ದೇಹ. ದೇಹದಲ್ಲಿ ಸಂಗಮವಾದ ದೇವರನ್ನು ತೊರೆದು ಇಲ್ಲದ ದೇವರನ್ನು ಹುಡುಕಲು ಹೋದ ವಿಷ್ಣುವಿಗೆ ದೇವರು ಸಿಗದೆ ಬರಿಗೈಯಿಂದ ಬಂದ. ಪಾದದಲ್ಲಿ ಕಲ್ಪಿಸಿಕೊಂಡ ಶಿವ ವಿಷ್ಣುವಿಗೆ ದೊರೆಯಲಿಲ್ಲ. ವಿಷ್ಣುವಿನ ಕಲ್ಪನೆಯ ಭಕ್ತಿಗೆ ಅರಿವೆಂಬ ಶಿವ ಒಲಿಯಲಿಲ್ಲ.

ಲಯಕರ್ತ ನಾನೇ ಎಂದು ಅಹಂಕಾರದಿಂದ ಮೆರೆಯುವ ರುದ್ರನಿಗೂ ಶಿವ ಒಲಿಯಲಿಲ್ಲ. ಬ್ರಹ್ಮನೆಂಬ ಮನವನ್ನು, ವಿಷ್ಣುವೆಂಬ ತನುವನ್ನು, ರುದ್ರನೆಂಬ ಕಾಲನನ್ನು ಕಾಣದಂತೆ ಮರೆಯಾದ ಶಿವನನ್ನು ಹುಡುಕಲು ಈ ಮೂರೂ ಜನರಿಗೆ ಸಾಧ್ಯವಾಗಲಿಲ್ಲ. ಏಕೆಂದರೆ ತನುವಿನಲ್ಲಿ ತನ್ಮಯವಾದ ಶಿವನನ್ನು ಬಿಟ್ಟು ಈ ಮೂವರೂ ತನುವಿನೊಂದಿಗೆ ಹೊರಗೆ ಹುಡುಕಿದರು. ಕಲ್ಪನೆಯ ಶಿವನನ್ನು ಆರಾಧಿಸಿ ಆತನಿಗೆ ಭಕ್ತಿ ಮಾಡಿದರು. ಹೀಗಾಗಿ ಈ ಮೂರೂ ಜನರಿಗೆ ಶಿವ ಒಲಿಯಲಿಲ್ಲ.

ಬ್ರಹ್ಮ ವಿಷ್ಣು ರುದ್ರರಿಗೆ ಸಿಗದ ಶಿವ ಬಸವಣ್ಣನ ಭಕ್ತಿಗೆ ಸಿಕ್ಕಿ ಹಾಕಿಕೊಂಡ. ಆತ ಅಂಗದಲ್ಲಿಯೇ ಸಂಗಮವಾದ ಸಂಗಯ್ಯನನ್ನು ಪೂಜಿಸಿದ. ಸಂಗಯ್ಯನಿಗೆ ಭಕ್ತಿ ಮಾಡಿದ. ಬಸವಣ್ಣನ ನೋಟದ ಮಾಟಕ್ಕೆ ಮಾರು ಹೋದ ಶಿವ. ಶಿವ ಬಸವನಾದ. ಬಸವನೇ ಶಿವನಾದ. ಈ ಬೇಟದ ಭಕ್ತಿಯ ಸೂತ್ರವನ್ನು ಬಸವಣ್ಣನಿಂದ ಕಲಿತು ಪಾವನನಾದೆ.

ಬಸವಣ್ಣನೇ ಎನಗೆ ಗುರುವಾದ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನು ನಿನ್ನೊಂದಿಗೆ ಸಂಗ ಮಾಡಲು ಬಸವ ದೇವನೇ ಕಾರಣನಾದ ಎಂದು ಭಕ್ತಿಯಿಂದ ಹಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

33

**ಅಜಲೋಕದೊಳಗಿಪ್ಪ ಬಹುಪರಿಯ ಕುಸುಮಕ್ಕೆ**
**ಕರಂಗಳು ಬಂದು ಪೀಡಿಸುತ್ತಾ**
**ಬಂಡುಂಬ ತುಂಬಿಯನು ಇಂಬಪ್ಪ ಕುಸುಮವನು**
**ಸಂಭ್ರಮದಿ ನುಂಗಿತಾ ಜ್ಯೋತಿ ಬಂದು**
**ಜ್ಯೋತಿಯನು ಸೂಕ್ಷ್ಮ ಸಿದ್ಧಿಯನು**
**ಹಲವೆನಿಸಿ ರೀತಿಯಾದುದು ದೆಸೆಯ ಪ್ರಬಲಕಾಗಿ**
**ಅಜಾತನ ರೀತಿ ವಿಡಿದವರೆಲ್ಲಾ ನಿತ್ಯರಯ್ಯಾ**
**ಕಪಿಲಸಿದ್ದ ಮಲ್ಲಿಕಾರ್ಜುನಾ.**

ಬ್ರಹ್ಮ ಲೋಕದೊಳಗೆ ಬಹುಪರಿಯ ಕಾಯವೆಂಬ ಕುಸುಮಗಳು ಅರಳಿವೆ. ಕಾಯದೊಳಗಿದ್ದು ಕಾಯದೊಂದಿಗೆ ಸುಖಿಸುವ ತುಂಬಿಗಳು ಕಾಯವನ್ನೇ ಪೀಡಿಸುತ್ತಾ ಕಾಯದಲ್ಲಿಯೇ ಸಂಭ್ರಮದಿಂದ ವಾಸಮಾಡಿವೆ.

ಕಾಯದಲ್ಲಿಯೇ ಸಂಗಮವಾದ ಜ್ಯೋತಿಯೊಂದಿದೆ. ಅದು ಜ್ಞಾನದ ಜ್ಯೋತಿ. ಕಾಯವನ್ನು ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕಿನ ಜ್ಯೋತಿ. ಕಾಯದಲ್ಲಿದ್ದು ಕಾಯವನ್ನೇ ಉಣ್ಣುವ ತುಂಬಿಯನು ಸಂಭ್ರಮದಿಂದ ಉಂಡು ಮೆರೆಯುವ ಜ್ಯೋತಿಯಿದು. ಜ್ಯೋತಿ ಉಣ್ಣಲು ಹೋದ ತುಂಬಿ ಜ್ಯೋತಿಯಾಗುವುದು, ತುಂಬಿಯನ್ನು ಉಂಡು ಜ್ಯೋತಿಯಾಗಿಸುವ ಜ್ಯೋತಿಯಿದು.

ಜ್ಯೋತಿ ತುಂಬಿಯನ್ನು ಉಣ್ಣುವುದು ಸುಲಭವಲ್ಲ. ಜ್ಯೋತಿಯೊಳಗೆ ಕೂಡಿ ಜ್ಯೋತಿಯೇ ತಾನಾಗುವುದು ತುಂಬಿಗೆ ಬಹು ಸುಲಭ. ಆದರೆ ಕಾಯವನ್ನು ಮಾಯದಂತೆ ಆವರಿಸಿದ ಮನವೆಂಬ ತುಂಬಿಗೆ ಜ್ಯೋತಿ ಉಣ್ಣುವ ಆಸೆಯಾಗುವುದು ಕಠಿಣ. ಹೀಗಾಗಿ ಕಾಯವನ್ನು ಆವರಿಸಿದ ಮಾಯವೆಂಬ ತುಂಬಿಯೂ ಕಾಯದಲ್ಲಿಯೇ ಇದೆ. ಕಾಯವನ್ನು ಮಾಯದಿಂದ ಬಿಡುಗಡೆಗೊಳಿಸುವ ಜ್ಯೋತಿಯೂ ಕಾಯದಲ್ಲಿಯೇ ಇದೆ. ಒಂದನ್ನು ಮತ್ತೊಂದು ಅರಿಯದಂತೆ ಕೈಲಾಸವೇ ತಾನಾಗಬೇಕಾದ ಕಾಯ ಮಾಯದ ಬಲೆಗೆ ಸಿಲುಕಿಕೊಂಡಿದೆ.

ಈ ಜಗವೇ ಸುಂದರವಾದ ಬ್ರಹ್ಮಲೋಕ. ಪರಿಪರಿಯ ಅರಿವಿನ ಕುಸುಮಗಳು ಇಲ್ಲಿ ಅರಳಿವೆ. ಅರಿವಿನ ಪರಿಮಳ ಬೀರಬೇಕಾದ ಕುಸುಮಗಳು ಆ ಅರಿವನ್ನೇ ಬಚ್ಚಿಟ್ಟುಕೊಂಡು ಅರಳುವುದಕ್ಕೆ ದಾರಿ ಕಾಯುತ್ತಲಿವೆ.

ಅರಳುವುದಕ್ಕೆ ಕಾಯವೆಂಬ ಕುಸುಮಕ್ಕೆ ಇಚ್ಛೆಯಾಗಬೇಕು. ಪ್ರಬಲವಾದ ಇಚ್ಛೆಯಾಗಬೇಕು. ಆಗ ಅಜಾತ ತಾನೇ ಒಲಿಯುತ್ತಾನೆ. ಆತ ಒಲಿದ ಕಾಯಗಳೆಲ್ಲ ಅರಳಿ ಅರಿವಿನ ಪರಿಮಳ ಬೀರುತ್ತವೆ.

34

**ಅಜ್ಞಾನವೆನ್ನದು ಜ್ಞಾನ ನಿನ್ನದು,**
**ಶಿವಯೋಗಿ ಸಿದ್ಧರಾಮಯ್ಯ ತಮಂಧದಲಿ ಬಿದ್ದಿದ್ದೇನೆ**
**ಮುದ್ದ ಸಲಿಸೂದು ಕಪಿಲಸಿದ್ಧಮಲ್ಲಿಕಾರ್ಜುನಾ.**

ಜ್ಞಾನದೇವನೆ, ನಿನ್ನ ಬೆಳಕಿನಿಂದ ಹುಟ್ಟಿದ ಕತ್ತಲು ನಾನು. ಅಜ್ಞಾನಿ ನಾನು. ನಿನ್ನ ಜ್ಞಾನದಿಂದ

ಹುಟ್ಟಿದುದಕ್ಕಾಗಿ ಜ್ಞಾನಿಯಂತೆ ಮಾತನಾಡುತ್ತೇನೆ. ಅವು ನಿನ್ನಿಂದ ಕಲಿತ ಮಾತುಗಳೆಂದು ಇದುವರೆಗೆ ನನಗೆ ತಿಳಿದಿರಲಿಲ್ಲ. ಈಗ ಅರ್ಥವಾಗುತ್ತಲಿದೆ. ಬೆಳಕಿನಿಂದ ಹುಟ್ಟಿದ ಕತ್ತಲು ಬೆಳಕಿನ ಮಾತನಾಡಿದರೆ ಅವು ಎಂದೂ ಬೆಳಗಲಾರವೆಂದು ಇದೀಗ ಅರ್ಥವಾಗುತ್ತಲಿದೆ.

ಶಿವಯೋಗಿ ಸಿದ್ಧರಾಮಯ್ಯನಿಗೆ ನಿನ್ನ ಹೊರತು ಸ್ವಾತಂತ್ರ್ಯ ಇಲ್ಲವೆಂದು ಈಗ ಅರ್ಥವಾಗುತ್ತದೆ. ಮರದ ನೆರಳು ಮರದಿಂದಲೇ ಜನ್ಮತಳೆದದ್ದು ಎಂದು ನೆರಳಿಗೆ ಗೊತ್ತಿರದಿದ್ದರೆ ಹೇಗೆ?

ಬೈಬಲ್ ಭಗವದ್ಗೀತೆ ಕುರಾನ್‌ಗಳು ನಿನ್ನ ಬೆಳಕಿನಿಂದ ಹುಟ್ಟಿದವು. ವೇದ ಆಗಮ ಉಪನಿಷತ್ತುಗಳು ಶ್ರುತಿ ಸ್ಮೃತಿಗಳು ಕೂಡಾ ನಿನ್ನ ಜ್ಞಾನದ ಬೆಳಕಿನಿಂದ ಹುಟ್ಟಿದವು. ಅವು ನಿನ್ನನ್ನು ಬೆಳಗಲು ಸಾಧ್ಯವಿಲ್ಲವೆಂದು ನನಗೆ ಇದೀಗ ತಿಳಿದಿದೆ ತಂದೆ; ಅದು ನಿನ್ನ ದಯದಿಂದ. ಏನಿದ್ದರೂ ನಿನ್ನಿಂದ ಹುಟ್ಟಿದ ಭಗವದ್ಗೀತೆಯ ಮೂಲಕ ಬೊಗಳುವ ಕುನ್ನಿ ನಾನು.

ನಿನ್ನನ್ನು ಮರೆತುದಕ್ಕಾಗಿ ನನಗೆ ಅಜ್ಞಾನ. ಜ್ಞಾನಿ ನೀನು; ಅಜ್ಞಾನಿ ನಾನು. ಬೆಳಕಿನ ಗುಣ ಎಂದರೆ ಬೆಳಗುವುದು. ನನ್ನನ್ನು ನೀನು ಬೆಳಗಿದೆ. ನಿನ್ನ ಬೆಳಕ ಹಿಡಿದು ಬೆಳಗಿದರೆ ಬೆಳಕೇ ನಾನು. ನಿನ್ನನ್ನು ಬಿಟ್ಟು ಬೆಳಗಲು ಹೋದೆ; ಹೀಗಾಗಿ ಕತ್ತಲಾದೆ. ನಿನ್ನ ಬೆಳಕಿನ ಮಾತು ಮಾತ್ರ ನನ್ನವಾದವು. ಮಾತಿನ ಮೂಲಕ ಬೆಳಗಲು ಸಾಧ್ಯವೆ? ಹೀಗಾಗಿ ನಾನು ಕತ್ತಲಾದೆ. ನನಗೆ ಗೊತ್ತಾಗಿದೆ; ನಾನು ಕತ್ತಲೆಂದು. ಕತ್ತಲು ಕತ್ತಲೆಂದು ತಿಳಿದುಕೊಳ್ಳಲು ಅದೆಷ್ಟೊ ಜನ್ಮಗಳು ಬೇಕಾಯಿತು. ಅದು ನಿನ್ನಿಂದಲೇ ನಾನು ಕತ್ತಲೆಂದು ತಿಳಿದುಕೊಂಡೆ. ಈಗ ನನ್ನನ್ನು ನಿನ್ನ ಬೆಳಕಿನಿಂದಲೇ ಬೆಳಗಬೇಕು. ಮತ್ತೆ ಕತ್ತಲಾಗದಂತೆ ಬೆಳಗು ಕಪಿಲಸಿದ್ಧ ಮಲ್ಲಿಕಾರ್ಜುನಾ. ನಾನು ತಮಂಧದಲಿ ಬಿದ್ದಿದ್ದೇನೆ.

**35**

**ಅಟ್ಟಿ ಮುಟ್ಟಿ ಆತುರದಿಂದ ಹಿಡಿದು ಮುಟ್ಟಿ**
**ನಂಬಲರಿಯದ ಕಷ್ಟರನೇನೆಂಬೆನಯ್ಯಾ.**
**ನಿಶ್ಚಯವಿದೆ ಲಿಂಗ; ಸತ್ಯವಿದೆ ಪ್ರಸಾದ; ಪ್ರಸಿದ್ಧವಿದೆ ಜಂಗಮ;**
**ಇನಿತನರಿಯದವರ ಹೊದ್ದಿಸದಿರಯ್ಯ ಎನ್ನತ್ತಲಿ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನಂಬಿದರೆ ತನ್ನ ಮನವೇ ತನಗೆ ಮಹಾದೇವ. ನಂಬಲರಿಯದಿದ್ದರೆ ತನ್ನ ಮನವೇ ತನಗೆ ಮಹಾ ಮಾರಿ; ಮಹಾವೈರಿ! ತನ್ನ ಸುಖಕ್ಕಾಗಿ ಮನ ಮಹಾದೇವನನ್ನು ನೆನೆಯುತ್ತದೆ. ಆಲಯ ನಿರ್ಮಿಸಿ ಆರಾಧಿಸುತ್ತದೆ. ನಿರ್ಮಿಸಿದ ಆಲಯವನ್ನು ಅರಿವಿನಿಂದ ನೋಡಿದರೆ ಅದು ಕಲ್ಲು. ಅದರ ಒಳಗಡೆ ಇದ್ದ ದೇವರೂ ಕಲ್ಲು. ತನ್ನಿಂದಾದ ದೇವರು ತನ್ನನ್ನೇ ಅಟ್ಟಿದ. ತನಗೆ ಕಷ್ಟಕೋಟಲೆಗಳನ್ನು ಕೊಟ್ಟ. ಮತ್ತೆ ಮತ್ತೆ ಪೂಜಿಸುವಂತೆ, ಪ್ರಾರ್ಥಿಸುವಂತೆ, ಆರಾಧಿಸುವಂತೆ ಮಾಡಿದ. ಇದು ತನ್ನ ಭ್ರಮೆಯೆಂದು ಮನ ಅರಿಯಲಿಲ್ಲ. ಅರಿತು ಅರಿವಿನಿಂದ ಮುಟ್ಟಲಿಲ್ಲ.

ದೇವರು ಎನ್ನುವವ ಯಾರೂ ಇಲ್ಲ. ತಾನು ಮಾಡಿದ ದೇವರು ದೇವರಲ್ಲ. ಅದು ಬರೀ ಕಲ್ಲು. ತಾನು ಮಾಡಿದ್ದನ್ನು ತಾನೇ ಮರೆತದ್ದಕ್ಕಾಗಿ ತನಗೆ ಈ ಕಷ್ಟ.

ನಂಬಿದರೆ ಪ್ರಸಾದ. ನಂಬದಿದ್ದರೆ ವಿಷ. ಅರಿವಿನಿಂದ ನೋಡಿ ಅರಿವಿನಿಂದ ಮುಟ್ಟಿ ಅರಿವಿನಿಂದ ತಟ್ಟಿದರೆ ಅದು ಬರೀ ಕಲ್ಲು! ಕಲ್ಲೆಂದು ನಂಬಿದುದಕ್ಕಾಗಿ ದೇವರು ಎನ್ನುವ ಅಜ್ಞಾನ ತನಗೆ ಪ್ರಸಾದವಾಯಿತು.

ನಂಬದಿದ್ದರೆ ಕೆತ್ತಿದ ಕಲ್ಲೇ ಚರ್ಚ್ ಆಯಿತು. ಕ್ರಿಸ್ತನಾಯಿತು. ತಾನು ಕ್ರೈಸ್ತನಾದ. ಎಡೆಬಿಡದೆ ಪ್ರಾರ್ಥಿಸಿದ. ಆರಾಧಿಸಿದ. ಕ್ರಿಸ್ತ ಒಲಿಯಲಿಲ್ಲ. ತಾನು ಎಂದೂ ಕ್ರಿಸ್ತನಾಗಲೇ ಇಲ್ಲ. ತಾನು ಕೆತ್ತಿದ ಕಲ್ಲೇ ತನಗೆ ವಿಷವಾಯಿತು.

ನಂಬದಿದ್ದರೆ ಕೆತ್ತಿದ ಕಲ್ಲೇ ಆಲಯವಾಯಿತು. ಕ್ರಿಷ್ಣನಾಯಿತು. ತಾನು ಹಿಂದುವಾದ ಎಡೆಬಿಡದೆ ಆರಾಧಿಸಿದ. ಭಜಿಸಿದ. ಕ್ರಿಷ್ಣ ಒಲಿಯಲಿಲ್ಲ. ತಾನು ಎಂದೂ ಕ್ರಿಷ್ಣನಾಗಲೇ ಇಲ್ಲ. ತಾನು ಕೆತ್ತಿದ ಕಲ್ಲೇ ತನಗೆ ವಿಷವಾಯಿತು.

ನಂಬದಿದ್ದರೆ ಕೆತ್ತಿದ ಕಲ್ಲೇ ಮಸೀದಿಯಾಯಿತು. ತಾನು ಮುಸಲ್ಮಾನನಾದ. ಐದು ಬಾರಿ ಪ್ರಾರ್ಥಿಸಿದ. ಆರಾಧಿಸಿದ. ದೇವರು ಒಲಿಯಲಿಲ್ಲ. ತನುವಿನ ರೋಗ ಕಳೆದುಕೊಂಡು ತಾನೇ ಪೈಗಂಬರನಾಗಲಿಲ್ಲ. ತಾನು ಕೆತ್ತಿದ ಕಲ್ಲೇ ತನಗೆ ವಿಷವಾಯಿತು.

ಕಲ್ಲು ಒಂದೇ ಆದರೂ ಚರ್ಚ್, ಮಸೀದೆ, ದೇವಾಲಯ ಆಗಿದೆ. ಕೆತ್ತಿದ ಅಂಗಗಳನ್ನೇ ವಿಷವಾಗಿ ಕಾಡುತ್ತಲಿದೆ. ಅಂಗವಾದರೂ ಒಂದೇ ಆಗಿದೆ. ಅಂಗ ಅಂಗವೆಂದು ತಿಳಿಯದ್ದಕ್ಕಾಗಿ ಅದು ಹೆಣ್ಣಾಗಿದೆ; ಗಂಡಾಗಿದೆ. ಹಿಂದು ಮುಸಲ್ಮಾನ ಕ್ರೈಸ್ತ ಆಗಿದೆ.

ಅಂಗವನ್ನು ಹೊತ್ತುಕೊಂಡ ಕಣ್ಣು ಕಿವಿ ಮೂಗು ನಾಲಿಗೆ ಚರ್ಮಗಳಿಗೆ ಭಾಷೆಯಿಲ್ಲ. ಅವು ಹಿಂದು ಮುಸಲ್ಮಾನ ಕ್ರೈಸ್ತ ಬೌದ್ಧ ಜೈನ ಫಾರ್ಸಿಗಳಲ್ಲ ಅವುಗಳಿಗೆ ಜಾತಿ ಮತ ಪಂಥ ಧರ್ಮಗಳಿಲ್ಲ. ಇವೆಲ್ಲವುಗಳನ್ನು ಆವರಿಸಿದ ಮನವೆಂಬ ನಾಯಿಗೆ ಜಾತಿ ಮತ ಪಂಥವಿದೆ. ಧರ್ಮವಿದೆ. ಏಕೆಂದರೆ ನಂಬಲರಿಯದ ಮನ ಕಣ್ಣಿನ ಸತ್ಯವನ್ನು ಅರಿಯದು.

ಕಣ್ಣಿಗೆ ಗೊತ್ತಿದೆ ತಾನು ಹಿಂದು ಮುಸಲ್ಮಾನ ಕ್ರೈಸ್ತ ಅಲ್ಲವೆಂದು! ಹೀಗಾಗಿ ಅದು ಕಲ್ಲನ್ನು ಕಲ್ಲೆಂದೇ ನೋಡುತ್ತದೆ. ಕಲ್ಲೆಂದೇ ನಿಶ್ಚಯಿಸುತ್ತದೆ; ಕಲ್ಲೆಂದೇ ನಿರ್ಧರಿಸುತ್ತದೆ. ಹಾಗೆಯೇ ಚರ್ಮವನ್ನು ಚರ್ಮವೆಂದೇ ನೋಡುತ್ತದೆ. ಅದರೊಳಗೆ ಸಂಗಮವಾದ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಕೂಡಾ ಒಂದೇ ಆಗಿವೆ. ಇವು ಯಾವೂ ಹೆಣ್ಣೂ ಅಲ್ಲ; ಗಂಡೂ ಅಲ್ಲ. ಹೀಗಾಗಿ ಅದು ಅಂಗವೆಂದು ನಿಶ್ಚಯಿಸುತ್ತದೆ. ಅರಿವುಳ್ಳ ಅಂಗವೆಂದು ನಿರ್ಧರಿಸುತ್ತದೆ. ಇದು ಕಣ್ಣಿನ ಧರ್ಮ. ಪ್ರತಿ ದೇಹದ ಧರ್ಮವೂ ಇದೇ ಆಗಿದೆ.

ನಿಶ್ಚಯವಿಲ್ಲದ ಮನ ಆತುರದಿಂದ ನೋಡಿದುದಕ್ಕಾಗಿ, ಬಲವಾಗಿ ನಂಬಲರಿಯದೆ ನೋಡಿದುದಕ್ಕಾಗಿ, ಮನವೆಂಬ ಅಜ್ಞಾನಿ ಕಣ್ಣಲ್ಲಿ ಪ್ರವೇಶ ಮಾಡಿ ನೋಡಿದುದಕ್ಕಾಗಿ, ತನ್ನ ಕಣ್ಣೇ ತನಗೆ ವಿಷವಾಯಿತು. ತನು ಮುಸಲ್ಮಾನವಾಯಿತು, ಹಿಂದುವಾಯಿತು, ಕ್ರೈಸ್ತವಾಯಿತು, ಅರಿವಿನ ಅಂಗವಾಗಲಿಲ್ಲ. ಮರೆವಿನ ಮಂಗವಾಯಿತು!

ಅರಿಯದ ಮನ ಆರಾಧಿಸಿದರೇನು, ಅರ್ಚಿಸಿದರೇನು, ಪೂಜಿಸಿದರೇನು, ಐದು ಬಾರಿ ಪ್ರಾರ್ಥಿಸಿದರೇನು? ತನುವಿನಲ್ಲಿ ತನ್ಮಯವಾದ ತನ್ನ ಅರಿವನ್ನೇ ತಾನು ನಂಬಲರಿಯದು. ಹೀಗಾಗಿ ಬಸವಣ್ಣನವರು ಸುಂದರವಾದ ಸೂತ್ರ ಒಂದನ್ನು ಕರುಣಿಸಿದ್ದಾರೆ. ''ನಂಬರು ನಚ್ಚರು ಬರಿದೆ ಕರೆವರು, ನಂಬಲರಿಯರೀ ಲೋಕದ ಮನುಜರು! ನಂಬಿ ಕರೆದಡೆ ಓ ಎನ್ನನೆ ಶಿವನು? ನಂಬದೆ ನಚ್ಚದೆ ಬರಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ ಕೂಡಲಸಂಗಮದೇವ!''

ಶಿವ, ಅಲ್ಲಾ, ಗಾಡ್ ಎಂದರೆ ಮನ ಹೊರಗೆ ಆರಾಧಿಸುವ ದೇವರಲ್ಲ. ಅರಿವೇ ಗುರು, ಆ ಅರಿವೇ ಬ್ರಹ್ಮ. ಆ ಅರಿವೇ ವಿಷ್ಣು. ಆ ಅರಿವೇ ಸದಾಶಿವ, ಆ ಅರಿವೇ ಸಾಕ್ಷಾತ್ ಪರಬ್ರಹ್ಮ, ''ಗುರುರ್ ಬ್ರಹ್ಮ, ಗುರುರ್ ವಿಷ್ಣು, ಗುರುದೇವೂ ಸದಾಶಿವಃ ಗುರು ಸಾಕ್ಷಾತ್

ಪರಬ್ರಹ್ಮ ತಸ್ಮೈಶ್ರೀ ಗುರುವೇ ನಮಃ'' ಇದು ಅರಿವಿನ ಸೂತ್ರ.

ಎಲೆ ಮನವೆ ಆತುರದಿಂದ ಮುಟ್ಟಬೇಡ. ನಂಬಲು ಅರಿಯದೆ ಕೆಡಬೇಡ. ಅರಿವಿನಿಂದ ನಿಶ್ಚಯಿಸಿ ನೋಡು. ನೋಡುವ ಆ ದೃಶ್ಯದಲ್ಲಿ ನೀನು ಸಂಗಮವಾಗಿ ನೋಡು. ಸತ್ಯದ ದೃಶ್ಯವನ್ನು ಎಲ್ಲೆಡೆ ಚೆಲ್ಲಿ ನೋಡು. ಅಲ್ಲೆಲ್ಲ ಬರೀ ಸತ್ಯವಿದೆ. ಇನಿತನು ಅರಿಯದವರ ಎನ್ನತ್ತ ಕರೆತರಬೇಡ ಎಂದು ಸಿದ್ಧರಾಮ ಶಿವಯೋಗಿಗಳು ಆ ಸತ್ಯ ಕುರಿತು ಪ್ರಾರ್ಥಿಸಿದ್ದಾರೆ.

**36**

**ಅಡಿಗಡಿಗೆ ಅಮೃತದ ಕೊಡನೊಡೆಯೆ,**
**ನಿನ್ನಯ ನುಡಿ ಬ್ರಹ್ಮವು ತಾನು ನಿತ್ಯವಾಗಿ**
**ಮಾಡಿ ಒಳಗೆ ಭಕ್ತಿಯನು**
**ಅಡಿಯೊಳಗೆ ನಿತ್ಯವನು**
**ಕಡಲ ಕಂಡೆನು ಭಕ್ತಿಸಮುದ್ರದಾ,**
**ಕೊಡನೊಡಲು ಒಡೆದೀಗ ಕಡಲೊಳಗೆ ಬೆರಸಲ್ಕೆ**
**ಅಡಿಗಡಿಗೆ ದೀಕ್ಷತ್ರಯದ ಸೊಮ್ಮು.**
**ನಿತ್ಯ ಮೃಡನೀಗ ಕಪಿಲಸಿದ್ಧಮಲ್ಲಿಕಾರ್ಜುನಯ್ಯನ**
**ನುಡಿಯ ಬ್ರಹ್ಮದೊಳಗೆ ಒಡನೆ ಬ್ರಹ್ಮಾ.**

ಚಿನ್ಮಯ ಪಾತ್ರೆ, ಪಾಲ್ಗಡಲು ಎಂದು ಕರೆದಿದ್ದಾರೆ ತನುವನ್ನು ಉಪನಿಷತ್ಕಾರರು. ಸಿದ್ಧರಾಮ ಶಿವಯೋಗಿ ತನುವನ್ನು ಅಮೃತದ ಕೊಡ ಎಂದಿದ್ದಾನೆ. ಇಂತಹ ಅಮೃತದ ಕೊಡವನ್ನು, ಕೊಡವನ್ನು ಆವರಿಸಿದ ಮನವೆಂಬ ಮಾಯಾಮೃಗ ಅಡಿಗಡಿಗೆ ಕೊಡವನ್ನು ಒಡೆದು ಹಾಕುತ್ತಲಿದೆ.

'ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿಮಸಣೆಯ ಭಕ್ತೆ. ಗಂಡ ಕೊಂಬುದು ಪಾದೋದಕ ಪ್ರಸಾದ; ಹೆಂಡತಿ ಕೊಂಬುದು ಸುರೆ ಮಾಂಸ. ಭಾಂಡ ಭಾಜನ ಶುದ್ಧವಿಲ್ಲದಿರ್ದೊಡೆ ಹೆಂಡದ ಮಡಿಕೆ ಹೊರಗೆ ತೊಳೆದಂತೆ ಕೂಡಲ ಸಂಗಮದೇವಾ' ಎಂದು ಬಸವಣ್ಣ ಹೇಳಿದ್ದಾರೆ.

'ಶಿವ'ನಿಗೆ ಭಕ್ತಿ ಮಾಡಿ ಹೆಂಡತಿಯಾಗಬೇಕಾದ ಮನ ಮಾರಿಮಸಣೆಗೆ ಭಕ್ತಿ ಮಾಡಿ ಸುರೆ ಮಾಂಸವನ್ನು ಭಕ್ಷಿಸುತ್ತಲಿದೆ. ಅದೂ ಶಿವ ವಾಸ ಮಾಡಿದ ಅಂಗವನ್ನು ಹಿಡಿದು. ಹೀಗಾಗಿ ಅಂಗ ಎನ್ನುವ ಅಮೃತದ ಕೊಡ ಮನವೆಂಬ ಮಾರಿಗೆ ಹೆಂಡದ ಮಡಕೆಯಾಗಿದೆ.

ಇಂತಹ ಅಮೃತ ಸಮಾನವಾದ ತನುವೆಂಬ ಕೊಡದಲ್ಲಿ ಶಿವನೂ ಇದ್ದಾನೆ, ಮನವೆಂಬ ಶಿವನ ಹೆಂಡತಿಯೂ ಇದ್ದಾಳೆ. ಹೆಂಡತಿ ಎಲ್ಲಿಯವರೆಗೆ ಮಾರಿ ಮಸಣೆಯೆಂಬ ಕ್ಷುದ್ರ ದೇವತೆಗಳಿಗೆ ಶರಣು ಹೋಗುತ್ತಾಳೊ ಅಲ್ಲಿಯವರೆಗೆ ಅರಿವೆಂಬ ಅಮೃತಮಯವಾದ ಶಿವನ ದರುಶನ ಆಕೆಗೆ ಆಗುವುದಿಲ್ಲ. ಅಲ್ಲಿಯವರೆಗೆ ತನುವೆಂಬ ಕೊಡ ಅನಂತ ಜನ್ಮಗಳವರೆಗೆ ಒಡೆಯುತ್ತಲೇ ಇರುತ್ತದೆ. ಕ್ಷಣ ಕ್ಷಣಕ್ಕೂ ಘಾಸಿಗೊಳ್ಳುತ್ತಲೇ ಇರುತ್ತದೆ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಶಿವನಿಗೆ ಮನವೆಂಬ ಭಕ್ತ ಭಕ್ತಿ ಮಾಡುವುದೊಂದೇ ತಡ; ಶಿವ ಆಕೆಯನ್ನು ಹೆಂಡತಿಯನ್ನಾಗಿಸಿಕೊಳ್ಳುತ್ತಾನೆ. ಆಗ ಅದು ಚಿನ್ಮಯ ಪಾತ್ರೆ, ಅಮೃತಮಯ ಕೊಡ; ಪಾಲ್ಗಡಲಾಗುತ್ತದೆ.

ನುಡಿದ ನುಡಿಗಳೆಲ್ಲವೂ ಬ್ರಹ್ಮಮಯವಾಗುತ್ತವೆ. ನೋಡಿದ ನೋಟವೆಲ್ಲವೂ

ಶಿವಮಯ. ಅಜ್ಞಾನದ ಕೊಡವೊಡೆದು ಅಮೃತಮಯವಾದ ಕಡಲೊಳಗೆ ಬೆರೆತು ಜಗದಗಲ ಮುಗಿಲಗಲಕ್ಕೂ ಚಾಚಿ ವಿರಾಟಸ್ವರೂಪವೇ ತಾನಾಗುತ್ತಾನೆ.

37

**ಅಣ್ಣಗಳು ಕೇಳಿರೆ, ಅಣ್ಣಗಳು ಕೇಳಿರೆ,**
**ಲೋಹಿತೇಶ್ವರದೇವರ ಮರೆ ಬಂದು ಒರಸೀತು,**
**ಸುವರ್ಣದ ಕಳಸ ವೆಜ್ಜವಾದೀತು,**
**ಜಪತಾವಡ ಮಣಿ ಹರಿದಾವು,**
**ಗುರುಹಿರಿಯರೆಲ್ಲಾ ಹೆಡೆಗುಡಿಯ ಕಟ್ಟಿಗೊಳಗಾದಾರು**
**ಕಪಿಲೆ ಬಾಣಸಕ್ಕೆ ಬಂದೀತು,**
**ಸೊನ್ನಲಿಗೆಯ ಪುಣ್ಯಕ್ಷೇತ್ರವಳಿದೀತು**
**ಇಂತೀ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನದೇವರು**
**ಇಲ್ಲಿಯೂ ಇಲ್ಲ, ಅಲ್ಲಿಯೂ ಇಲ್ಲ.**

ತನುವಿನ ಅರಿವನ್ನು ತನುವೇ ಅರಿಯದಿದ್ದಕ್ಕಾಗಿ ತನುವನ್ನು ಆವರಿಸಿಕೊಂಡ ಮರೆವು ತನುವನ್ನು ಹಿಡಿದು ಪ್ರಮುಖ ಪಾತ್ರವಹಿಸಿದೆ. ಈ ಅಜ್ಞಾನ ಅಳಿಸಿ ಹೋಗುವ ಸಮಯ ಒಮ್ಮಿಲ್ಲ ಒಮ್ಮೆ ಸನ್ನಿಹಿತವಾಗಬಹುದು ಎಂದು ಸಿದ್ಧರಾಮ ಶಿವಯೋಗಿಗಳು ಈ ವಚನದ ಮೂಲಕ ತನುವಿಗೆ ಧೈರ್ಯ ತುಂಬಿದ್ದಾರೆ.

ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯಾ ಎಂದು ಬಸವಣ್ಣನವರು ಸಾರಿ ಒಂಬತ್ತು ಶತಮಾನಗಳು ಸಂದರೂ ದೇವಾಲಯಗಳ ಕಟ್ಟಡ ನಿಂತಿಲ್ಲ. ದೇವರ ಮೂಲಕ ತನುವನ್ನು ಬೆದರಿಸಿ ತನುವನ್ನೇ ಯಾಮಾರಿಸಿ ಉಪಜೀವನ ಮಾಡುವ ಗುರುವೇಷದ ಪೂಜಾರಿ ತನುಗಳ ಉಪಟಳ ನಿಂತಿಲ್ಲ. ಅವರ ಜಪತಪಗಳು ನಿಂತಿಲ್ಲ, ಅವರು ಎಣಿಸುವ ಮಣಿಗಳು ಇನ್ನೂ ಹರಿದಿಲ್ಲ.

ಶಿರವೇ ಹೊನ್ನ ಕಳಶವಾಗಿದ್ದರೂ ಶಿಖರಕ್ಕೆ ಹೊನ್ನಿನ ಕಳಶ ಧರಿಸುವುದು ನಿಂತಿಲ್ಲ. ಅದು ಇನ್ನೂ ಬಹಿರಂಗವಾಗಿ ಮಾರಾಟದ ವಸ್ತುವಾಗಿಲ್ಲ.

ತನುವನ್ನೇ ಯಾಮಾರಿಸಿ ಮೋಸ ಮಾಡುವ ಗುರುವೇಷ ಧರಿಸಿದ ಅಜ್ಞಾನಿ ತನುವಿನ ಹೆಡಮುರಗಿ ಕಟ್ಟುವ ಕಾಲ ಇನ್ನೂ ಸನ್ನಿಹಿತವಾಗಿಲ್ಲ.

ಪೂಜೆಗೊಳ್ಳುವ ಕಪಿಲೆ ಇನ್ನೂ ಬಾಣಸಕ್ಕೆ ಬಂದಿಲ್ಲ. ತನುವೇ ಪುಣ್ಯಕ್ಷೇತ್ರ, ಅದು ಧರ್ಮಕ್ಷೇತ್ರವೂ ಹೌದು. ತನುವಿನ ಧರ್ಮ ಸಂಪೂರ್ಣ ಅಳಿದು ಅದು ಇನ್ನೂ ಕುರುಕ್ಷೇತ್ರವಾಗಿಲ್ಲ. ಆದರೆ ತನು ನಿರ್ಮಿಸಿದ ಧರ್ಮ ಅಳಿಯುವ ಕಾಲ ತನುವಿಗೆ ಸನ್ನಿಹಿತವಾಗಿದೆ.

ಅಲ್ಲಿ ಇಲ್ಲಿ ಎಲ್ಲೆಲ್ಲೋ ಧರ್ಮವನ್ನು ಹುಡುಕಾಡುವ ತನು, ತನುವಿನಲ್ಲಿಯೇ ಧರ್ಮ ತನ್ಮಯವಾಗಿದೆ ಎಂದು ಖಚಿತವಾಗಿ ತಿಳಿಯುವ ಕಾಲ ಸನ್ನಿಹಿತವಾಗಿದೆ. ಇದು ಸೂಕ್ತ ಕಾಲವೆಂದು ಕಾಯವೇ ನಿರ್ಧರಿಸಬೇಕು. ತಾನು ಎಣಿಸುವ ಜಪಮಣಿಯನ್ನು ತಾನೇ ಹರಿದು ಹಾಕಬೇಕು. ತಾನೇ ಇಟ್ಟ ಕಳಶ ತಾನೇ ಮಾರಬೇಕು. ತನ್ನ ಅರಿವನ್ನು ತಾನೇ ತಿಳಿದು ತನ್ನ ಮರೆವನ್ನು ತಾನೇ ಒರೆಸಿಕೊಳ್ಳಬೇಕು.

ತನು ತನುವಿಗೆ ಬೋಧಿಸಲು ಸಾಧ್ಯವೇ? ಬೋಧಿಸುವ ತನುವಿನ ಹೆಡಮುರಗಿ ಕಟ್ಟಿ ಬೋಧೆಗೊಳಗಾದ ತನುವೇ ಗುರುತನುವಿನಿಂದ ಪಾರಾಗಬೇಕು.

ತನುವಿಗೆ ಅನ್ನವಾಗಿ ಬಾಣಸಕ್ಕೆ ಬರಬೇಕಾದ ಕಪಿಲೆ ಗುರುತನುವಿನ ಅಜ್ಞಾನದಿಂದಾಗಿ ದೇವರಾಗಿದೆ. ಗುರುತನು ಸಕಲ ತನುಗಳನ್ನು ಪೂಜಿಸಲು ಹೇಳಿದೆ, ಪೂಜಿಸಲು ಅದು ದೇವರೇ? ಅಲ್ಲ. ಅದು ಅನ್ನ! ಅನ್ನಂಬ್ರಹ್ಮ ಎಂದು ಬ್ರಹ್ಮವನ್ನು ತಿಳಿದ ಬ್ರಹ್ಮಜ್ಞಾನಿ ಹೇಳಿಲ್ಲವೇ? ಬ್ರಹ್ಮಜ್ಞಾನಿ ಹೇಳಿದ ಮಾತು ಕೇಳಬೇಕೋ, ಏನು ಬ್ರಾಹ್ಮಣ ಹೇಳಿದ ಮಾತು ಕೇಳಬೇಕೋ?

ತಟ್ಟೆಗೆ ಕುಳಿತು ಉಣ್ಣುವಾಗ ಬ್ರಾಹ್ಮಣ 'ಅನ್ನಂ ಬ್ರಹ್ಮ' ಎಂದು ಹೇಳುತ್ತಾನೆ. ಆದರೆ ಅನ್ನ ಹೇಗೆ ಬ್ರಹ್ಮ ಎಂದು ಬ್ರಾಹ್ಮಣನಿಗೆ ತಿಳಿಯುವುದಿಲ್ಲ. ಬ್ರಹ್ಮಜ್ಞಾನಿಗೆ ತಿಳಿಯದೇ ಇರುವುದಿಲ್ಲ. ಸಕಲರೂ ಉಣ್ಣುವ ಅನ್ನವೆಲ್ಲ ಬ್ರಹ್ಮವೇ ಆಗಿದೆ. ಅನ್ನ ಸಸ್ಯವೇ ಆಗಿರಲಿ ಮಾಂಸವೇ ಆಗಿರಲಿ ಅನ್ನ ಅನ್ನವೇ ಆಗಿದೆ.

ತನು ಉಂಡ ಅನ್ನ ತನುವಿನಲ್ಲಿಯೇ ತನ್ಮಯವಾಗಿ ತನುವೇ ಆಯಿತು. ಅನ್ನ ರಕ್ತವಾಯಿತು. ಮಾಂಸವಾಯಿತು. ಮೂಳೆ, ಮಜ್ಜೆ, ಮೇದಸ್ಸು ಆಯಿತು. ದೃಶ್ಯವಾಗಿ ನೋಡಲು ಕಣ್ಣಾಯಿತು. ಶಬ್ದವಾಗಿ ಕೇಳಲು ಕಿವಿಯಾಯಿತು. ಪರಿಮಳವಾಗಿ ಮೂಸಿಸಲು ಮೂಗಾಯಿತು, ಸ್ಪರ್ಶದ ಸುಖ ನೀಡಿ ಮುಟ್ಟಲು ಚರ್ಮವಾಯಿತು. ಪ್ರಸಾದವಾಗಿ ರುಚಿಸಲು ನಾಲಿಗೆಯಾಯಿತು. ತನ್ನನ್ನು ಇತರರನ್ನೂ ತನ್ನಂತೆಯೇ ತಿಳಿಯುವ ಬ್ರಹ್ಮವಾಯಿತು. ಅನ್ನವು ತನುವನ್ನು ಉಂಡು ತನುವೇ ಆಯಿತು.

ಬಾಣಸಕ್ಕೆ ಬಂದಿದ್ದು ಕಪಿಲೆಯಾದರೇನು, ಕುರಿ ಕೋಳಿ ಕಿರಿ ಮೀನಾದರೇನು? ತರಕಾರಿ ಸೊಪ್ಪು ಹಣ್ಣು ಹಾಲು ಅಕ್ಕಡಿ ಕಾಳು ದವಸ ಧಾನ್ಯಗಳಾದರೇನು? ಅನ್ನ ಅನ್ನವಲ್ಲವೇ? ಅನ್ನ ಬ್ರಹ್ಮವಲ್ಲವೇ? 'ಕುರಿ ಕೋಳಿ ಕಿರಿಮೀನು ತಿಂಬುವವರನೆಲ್ಲ ಕುಲಜನೆಂಬರು. ಶಿವಗೆ ಪಂಚಾಮೃತವ ಕರೆವ ಪಶುವ ತಿಂಬುವವನ ಮಾದಿಗನೆಂಬರು. ಬ್ರಾಹ್ಮಣನುಂಡ ಪುಲ್ಲಿಗೆ ನಾಯಿಗೆ ಶೋಭಿತವಾಯಿತು. ಮಾದಿಗನುಂಡ ಪುಲ್ಲಿಗೆ ಬ್ರಾಹ್ಮಣಂಗೆ ಶೋಭಿತವಾಯಿತು. ಅದೆಂತೆಂದೊಡೆ: ಸಿದ್ದಲಿಕೆಯಾಯಿತು. ಸಗ್ಗಳೆಯಾಯಿತು, ಸಿದ್ದಲಿಕೆಯ ತುಪ್ಪವನು ಸಗ್ಗಳೆಯ ನೀರನು ಶುದ್ಧವೆಂದು ಕುಡಿದ ಬುದ್ಧಿಗೇಡಿ ವಿಪ್ರನಿಗೆ ನಾಯಕ ನರಕ ತಪ್ಪದು' ಎಂಬ ಈ ಮಾತನ್ನು ಬ್ರಹ್ಮಜ್ಞಾನಿ ಪುಣ್ಯಸ್ತ್ರೀ ಕಾಳವ್ವೆ ಹೇಳುತ್ತಾಳೆ.

'ಅನ್ನಂಬ್ರಹ್ಮ' ಎಂದು ಹೋಳಿಗೆ ಮೃಷ್ಟಾನ್ನ ಉಂಡು ಎಸೆದ ಬ್ರಾಹ್ಮಣನ ಎಲೆ ನಾಯಿಗೆ ಶೋಭಿತವಾಯಿತು. ಶಿವಗೆ ಪಂಚಾಮೃತವನ್ನು ಕರೆವ ಕಪಿಲೆಯನುಂಡ ಮಾದಿಗನ ಎಲೆ ಬ್ರಾಹ್ಮಣನಿಗೆ ಶೋಭಿತವಾಯಿತು. ಮಾಂಸವನ್ನು ಉಂಡ ಮಾದಿಗ ಅದರ ಚರ್ಮದಿಂದ ತುಪ್ಪ ತುಂಬುವ ಸಿದ್ದಲಿಕೆ (ಚೀಲ)ವನ್ನು, ಬಾವಿಯ ನೀರು ಎತ್ತುವ (ಬೊಕ್ಕಣಿ) ಸಗ್ಗಳೆಯನ್ನು ಮಾಡಿದ. ಸಗ್ಗಳೆಯ ನೀರನ್ನು, ಸಿದ್ದಲಿಕೆಯ ತುಪ್ಪವನ್ನು ಶುದ್ಧವೆಂದು ಕುಡಿದು ಅನ್ನಂಬ್ರಹ್ಮ ಎಂದರೆ ಬ್ರಾಹ್ಮಣ ಬ್ರಹ್ಮನಾಗಲಿಲ್ಲ. ಮಾದಿಗನುಂಡ ಕಪಿಲೆಗೆ ಅದೃಷ್ಟವಿತ್ತು ಹೀಗಾಗಿ ಅದು ಬ್ರಹ್ಮವಾಯಿತು. ತಿಳಿದು ಉಂಡ ತನು ಕೂಡಾ ಬ್ರಹ್ಮತನುವಾಯಿತು. 'ಅನ್ನಂಬ್ರಹ್ಮ' ಎಂಬ ಶಬ್ದ ಸಾರ್ಥಕವಾಯಿತು. ಬ್ರಹ್ಮ ಸ್ವರ್ಗದಲ್ಲಿಯೂ ಇಲ್ಲ, ಮರ್ತ್ಯದಲ್ಲಿಯೂ ಇಲ್ಲ; ಸಕಲ ತನುಗಳಲ್ಲಿಯೇ ತನ್ಮಯವಾಗಿದ್ದಾನೆ, ತಿಳಿದರೆ ಬ್ರಹ್ಮಾಧೀನ! ತಿಳಿಯದಿದ್ದರೆ ಬ್ರಮಾಧೀನ.

**38**

**ಅಡವಿಯಲ್ಲಿ ತಡೆಗಡಿದ ಪಶುವಿನಂತಾದೆವಾವೆಲ್ಲ ಅಯ್ಯಾ!**
**ಅಕ್ಕಟಾ, ಒಡೆಯರಿಲ್ಲದ ಅನಾಥರಾದೆವಾವೆಲ್ಲ ಅಯ್ಯಾ!**

**ಅಕ್ಕಟಾ, ನಮಗಿನ್ನು ದಿಕ್ಕಾರು, ದೆಸೆಯಾರು?**
**ಅಕ್ಕಟಾ, ನಮಗಿನ್ನು ಒಡೆಯರಾರು? ಹೇಳಾ ತಂದೆ!**
**ಅಯ್ಯಾ, ಶ್ರೀಮಲ್ಲಿನಾಥಲಿಂಗಾ, ಅವಧರಿಸು ಎನ್ನ ಬಿನ್ನಹವ**
**ಗಣಾಚಾರಕ್ಕೆ ಬುದ್ಧಿಗಲಿಸುವುದೆನ್ನ ತಂದೆ!**

ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು, ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ ಎಂದು ಬಸವಣ್ಣನವರು ಒಡೆಯನನ್ನು ಕುರಿತು ಹಾಡಿದ್ದಾರೆ. ಬೇಡಿದರೆ ಎನ್ನೊಡೆಯನನ್ನೇ ಬೇಡುವೆ ಅನ್ಯರನ್ನು ಬೇಡಲಾರೆ ಎಂದು ಖಚಿತವಾಗಿ ನುಡಿದಿದ್ದಾರೆ.

ಒಡೆಯನ ಪರಿಚಯವಿಲ್ಲದ ಒಡಲು ಅನಾಥ. ಪಶು ಸಮಾನ. ಸಕಲ ಒಡಲುಗಳಿಗೂ ತಂದೆ ತಾಯಿ ಬಂಧು ಬಳಗವಿದೆ. ನೆರೆ ಹೊರೆಯವರಿದ್ದಾರೆ. ಗೆಳೆಯರಿದ್ದಾರೆ. ಸರಕಾರವಿದೆ. ಕೋರ್ಟ್ ಕಚೇರಿಗಳಿವೆ. ಸಕಲ ಒಡಲುಗಳಿಗೂ ಭೌತಿಕ ಮಾಲೀಕನಿದ್ದಾನೆ. ಆದರೂ ಒಡಲು ದಿಕ್ಕು ದೆಸೆಯಿಲ್ಲದ ಒಡೆಯನಿಲ್ಲದ ಒಡಲು. ತಂದೆ ತಾಯಿಗಳಿಲ್ಲದ ಒಡಲು. ಅನಾಥ ಒಡಲು. ಪಶು ಸಮಾನವಾದ ಒಡಲು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಒಡೆಯರಿಲ್ಲದೆ ಪಶುವಿನಂತಾದ ನನ್ನನ್ನು ಅವಧರಿಸು ತಂದೆ ಎಂದು ಸಿದ್ಧರಾಮ ಶಿವಯೋಗಿಗಳು ಯಾವ ಒಡೆಯನನ್ನು ಬೇಡಿದ್ದಾರೆ. ಆ ಒಡೆಯ ಯಾರು? ಸಕಲ ಒಡಲುಗಳಿಗೂ ತಂದೆ ತಾಯಿ ಬಂಧುಬಳಗವೇ ತಾನಾದ ಆ ಒಡೆಯ ಯಾರು? ಅವಧರಿಸು ಎಂದು ಬೇಡಿದರೆ ಆತ ಒಡಲಿಗೆ ಒಲಿಯುತ್ತಾನೆಯೊ ಹೇಗೆ ಎಂದು ತಿಳಿಯುವುದಾದರೂ ಹೇಗೆ?

ಬಲವಾಗಿ ಬೇಡಲು ಬಂದ ಒಡಲಿಗೆ ಒಡಲೊಡೆಯ ಒಲಿದೇ ಒಲಿಯುತ್ತಾನೆ. ಹೇಗೆಂದರೆ ಆತ ಒಡಲೊಳಗೇ ಇದ್ದಾನೆ. ಒಡಲಿಂಗೆ ಆಧಾರವಾಗಿ ಇದ್ದಾನೆ. ಆದರೂ ಒಡಲು ಸೋಂಕಿಲ್ಲ. ಒಡಲು ಸೋಂಕದೆ ಒಡಲನ್ನು ಬೆಳಗಿಂಗೆ ಬೆಳಗಾಗಿ ಬೆಳಗುತ್ತಾನೆ! ಏಕೆಂದರೆ ಈತ ಒಡಲೊಡೆಯ.

ತಂದೆ ತಾಯಿಗಳು ಮಾಂಸ ಪಿಂಡಕ್ಕೆ ಜನ್ಮ ಕೊಟ್ಟರು. ಗುರು ಒಡಲನ್ನು ಮಂತ್ರ ಪಿಂಡವೆಂದು ಕರೆದ. ಅದರಲ್ಲಿದ್ದ ಒಡೆಯನನ್ನು ತೋರಿದ.

ಗುರು ಒಡಲೊಡೆಯನನ್ನು ತೋರಿದ್ದು ಸತ್ಯವೇ ಆಗಿದೆ. ಒಡಲೊಡೆಯ ಒಡಲ ಗಮನಕ್ಕೂ ಬಂದಿದ್ದಾನೆ. ಆದರೂ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೇ ತುಂಬಿದ ಒಡಲಿಗೆ ಒಡಲೊಡೆಯ ಒಲಿಯಬೇಕಲ್ಲ! ಸಪ್ತವ್ಯಸನಗಳು, ಅಷ್ಟಮದಗಳು ತುಂಬಿದ ಪಶುಸಮಾನವಾದ ಒಡಲಿಗೆ ಒಡಲೊಡೆಯ ಒಲಿಯಬೇಕಲ್ಲ!

ಅಕ್ಕಟಕ್ಕಟಾ ಒಡೆಯರಿಲ್ಲದ ಅನಾಥರಾದೆವಾವೆಲ್ಲ. ನಮಗೆ ದಿಕ್ಕಾರು, ದೆಸೆಯಾರು? ನಮಗಿನ್ನು ಒಡೆಯರಾರು? ಹೇಳಾ ತಂದೆ! ಅವಧರಿಸು ಎನ್ನ ಬಿನ್ನಹವ. ಗಣಾಚಾರಕ್ಕೆ ಬುದ್ಧಿಗಲಿಸಿ ಸಕಲ ಒಡಲುಗಳನ್ನೂ ರಕ್ಷಿಸು ತಂದೆ.

ಒಡಲಿಗೆ ತಂದೆ ತಾಯಿ ಬಂಧುಬಳಗ ಅಧಿಕಾರ ಶ್ರೀಮಂತಿಕೆ ಪದವಿ ಏನೆಲ್ಲ ಇದ್ದರೂ ಅದು ಅನಾಥ. ಏಕೆಂದರೆ ಒಡಲು ಒಡಲೊಳಗಿದ್ದ ಒಡಲಿನ ಜ್ಞಾನವನ್ನೇ ಕಂಡುಕೊಂಡಿಲ್ಲ. ಜ್ಞಾನವೆಂದರೆ ಪದವಿ ಪಡೆಯುವುದಲ್ಲ. ಭಗವದ್ಗೀತೆ, ಬೈಬಲ್, ಖುರಾನ್‌ಗಳನ್ನು ಓದುವುದಲ್ಲ. ಏಕೆಂದರೆ ಈ ಮೂರು ಗ್ರಂಥಗಳನ್ನು ಬರೆದ ಮೂರೂ ಜನ ದನ ಕಾಯುವವರೇ ಆಗಿದ್ದರು. ಒಡಲೊಳಗಿದ್ದ ಒಡಲೊಡೆಯನನ್ನು ಕಂಡುಕೊಂಡ ಮೇಲೆ ವಿರಾಟಸ್ವರೂಪಿಗಳಾದರು.

ಒಡಲೊಡೆಯನನ್ನು ಕಂಡುಕೊಳ್ಳುವ ಮಾರ್ಗದ ನಕಾಶೆಯನ್ನು ಈ ಮೂರೂ ಗ್ರಂಥಗಳ ಮೂಲಕ ರಚಿಸಿದರು. ಆದರೆ ಈ ಮೂರೂ ಗ್ರಂಥಗಳು ಪ್ರಧಾನವಾದ ಒಡಲುಗಳಿಗೆ ಈ ಗ್ರಂಥಗಳೇ ಮುಳುವಾಗಿವೆ. ಒಡೆಯನನ್ನು ಅರಿಯದೆ ಒಡಲುಗಳು ಪಶುಸಮಾನವಾಗಿವೆ. ಅನಾಥವಾಗಿವೆ. ಇಂತಹ ಸಕಲ ಒಡಲುಗಳಿಗೂ ಅವಧರಿಸಿ, ಗಣಾಚಾರಕ್ಕೆ ಬುದ್ಧಿಗಲಿಸಿ ಸಲಹು ತಂದೆ ಎಂದು ಕಳಕಳಿಯಿಂದ ಬೇಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**39**

**ಅತ್ತಲಿತ್ತ ಸುತ್ತಿ ಬಳಲಿ ವ್ಯರ್ಥವಪ್ಪ ಮನವ**
**ನಿಮ್ಮ ಚಿತ್ತದತ್ತ ಧ್ಯಾನಿಸಿ ಇರಿಸಯ್ಯ.**
**ಇನ್ನು ನಿಮ್ಮತ್ತಲಲ್ಲದೆ ಅತ್ತಲಿತ್ತ ಸುತ್ತಿ ಬಂದಡೆ**
**ವಿಚಿತ್ರಮೂಲ ನಿಮ್ಮಾಣೆಯಯ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶಿದ್ಧರಾಮ ಶಿವಯೋಗಿಗಳು ತಮ್ಮ ಜ್ಞಾನಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ನಾಮಕರಣ ಮಾಡಿದ್ದಾರೆ. ಆತನನ್ನು ಸಾಕ್ಷಾತ್ ಪರಮಾತ್ಮನೆಂದು ಸಂಬೋಧಿಸುತ್ತಾ ಆತನ ಮೇಲೆ ಆಣೆಯಿಟ್ಟು ಹೀಗೆಂದು ಹೇಳಿದ್ದಾರೆ:

ನನ್ನ ಮನಸ್ಸನ್ನು ಅತ್ತಲಿತ್ತ ಸುಳಿಯದಂತೆ ಮಾಡು. ಅದನ್ನು ನಿಮ್ಮ ಚಿತ್ತದತ್ತ ಇರಿಸಿ; ಹಗಲಿರುಳೆನ್ನದೆ ನಿಮ್ಮನ್ನು ಧ್ಯಾನಿಸುವಂತೆ ಇರಿಸಯ್ಯಾ. ನಿಮ್ಮತ್ತಲಲ್ಲದೆ ಅತ್ತಲಿತ್ತ ಸುತ್ತಿ ಸುಳಿದು ಬಂದಡೆ ನಿಮ್ಮಾಣೆಯಯ್ಯಾ ಎನ್ನುತ್ತಾರೆ.

ನಿಮ್ಮ ಚಿತ್ತದತ್ತ ಇರಿಸು ಎಂದರೆ, ನನ್ನ ಚಿತ್ತ ಎನ್ನುವುದು ಮತ್ತೊಂದು ಇದೆ ಎಂದೆನಿಸುತ್ತದೆ. ನನ್ನ ಚಿತ್ತ ಎಂದರೆ ಮನದಲ್ಲಿ ಸೃಷ್ಟಿಯಾದ ಚಿತ್ತ. ಅದರ ಕೆಲಸವೇ ಹಾಗೆ. ಅತ್ತಲಿತ್ತ ಸುತ್ತಿ ಸುಳಿದು ಬಳಲಿ ಬಳಲಿ ಸಾಯುವುದು. ವಸ್ತು ಒಂದೇ ಇದ್ದರೂ ನನ್ನ ಚಿತ್ತಕ್ಕೆ ಎರಡಾಗಿ ಕಾಣುತ್ತವೆ. ಹಗ್ಗ ಹಾವಾಗಿ ಕಾಣುತ್ತದೆ. ಚಿನ್ನ ಆಭರಣವಾಗಿ ಕಾಣುತ್ತದೆ. ತನ್ನಂತೆಯೇ ಇರುವ ಅಂಗ ಹೆಣ್ಣಾಗಿ ಗಂಡಾಗಿ ಕಾಣುತ್ತದೆ. ಕಲ್ಲು ಒಂದೇ ಆದರೂ ಹೆಣ್ಣು ದೇವರು ಗಂಡು ದೇವರಾಗಿ ಕಾಣುತ್ತದೆ. ಕಾಗದ ಕರೆನ್ಸಿಯಾಗಿ ಕಾಣುತ್ತದೆ.

ನನ್ನ ಚಿತ್ತ ಆಭರಣ, ಕರೆನ್ಸಿಯತ್ತ ನೆಟ್ಟರೆ ಶ್ರೀಮಂತ ಇಲ್ಲ ಕಳ್ಳನಾಗಿ ಅದನ್ನು ಸಂಗ್ರಹಿಸುವಂತೆ ಮಾಡುತ್ತದೆ.

ನನ್ನ ಚಿತ್ತ ಆಲಯದತ್ತ ನೆಟ್ಟರೆ ಭಕ್ತನಾಗಿ ಆರಾಧಿಸುವಂತೆ ಮಾಡುತ್ತದೆ. ಮಸೀದೆ, ಚರ್ಚ್‌ನತ್ತ ನೆಟ್ಟರೆ ಮುಸಲ್ಮಾನ, ಕ್ರೈಸ್ತನಾಗಿ ಪ್ರಾರ್ಥಿಸುವಂತೆ ಮಾಡುತ್ತದೆ. ನನ್ನ ಚಿತ್ತಕ್ಕೆ ವಸ್ತುವಿನ ಸತ್ಯ ನೋಡುವ ತಾಕತ್ತಿಲ್ಲ. ನನ್ನ ಚಿತ್ತ ಮಹಾ ಜ್ಞಾನವೆಂಬ ನಿಮ್ಮ ಚಿತ್ತದಲ್ಲಿ ನೆಟ್ಟು ಆಲಯ ಮಸೀದೆ ಚರ್ಚ್ ನೋಡಿದರೆ ಅವು ಮೂರೂ ಕಲ್ಲಾಗಿಯೇ ಕಾಣುತ್ತವೆ. ಪೂಜಿಸಲಿಲ್ಲ ಆರಾಧಿಸಲಿಲ್ಲ ಪ್ರಾರ್ಥಿಸಲಿಲ್ಲ. ಕೈ ಮುಗಿದು ಭಕ್ತನೆನ್ನಿಸಲಿಲ್ಲ.

ಆಭರಣ ನೋಡಿದರೆ ಅದು ಹಳದಿ ಬಣ್ಣದ ಲೋಹವಾಗಿ ಕಂಡಿತು. ಕಳ್ಳ ಶ್ರೀಮಂತ ಬಡವನೆನ್ನಿಸಿಕೊಳ್ಳಲಿಲ್ಲ. ಅಂಗ ನೋಡಿದರೆ ಅದು ಮಹಾಜ್ಞಾನದ ಲಿಂಗವಾಗಿ ಕಂಡಿತು. ಕಾಮಿಸಲಿಲ್ಲ ಮೋಹಿಸಲಿಲ್ಲ. ಕೈಮುಗಿಯದೇ ಇರಲಾಗಲಿಲ್ಲ.

ಇದೊಂದು ಸೋಜಿಗ. ವಿಚಿತ್ರ! ವಸ್ತು ಒಂದೇ ಆದರೂ ನನ್ನ ಚಿತ್ತದಿಂದ ನೋಡಿದುದಕ್ಕಾಗಿ ನನ್ನನ್ನು ಅತ್ತಲಿತ್ತ ಸುತ್ತಿ ಸುಳಿದು ಬಳಲುವಂತೆ ಮಾಡಿತು. ನನ್ನ ಚಿತ್ತ ಕತ್ತಲು. ಅದು ಮಸ್ತುವಿನ ಸತ್ಯವನ್ನು ಕಾಣದಂತೆ ಮಾಡುತ್ತದೆ. ನಿಮ್ಮ ಚಿತ್ತ ಬೆಳಕು. ಅದಕ್ಕೆ ವಸ್ತುವಿನ ಸತ್ಯ ಮಾತ್ರ ಕಾಣುತ್ತದೆ.

ನಸುಗತ್ತಲಲ್ಲಿ ನೋಡಿದಾಗ ಹಾವಾಗಿ ಕಂಡಿತು. ಕೋಲು ಹಿಡಿದು ಬೆಳಕು ಚೆಲ್ಲಿ ಬಡಿಯಲು ಹೋದಾಗ ಹಗ್ಗವಾಗಿ ಕಂಡಿತು. ಹಾವೆಂದರೆ ಭಯ. ಹಗ್ಗವೆಂದರೆ ನಿರ್ಭಯ. ನಿಮ್ಮ ಚಿತ್ತ ನಿರ್ಭಯ. ನನ್ನ ಚಿತ್ತ ಭಕ್ತಿ, ಭಯದಿಂದ ಕೂಡಿದೆ. ಅದರ ಭಕ್ತಿಯೂ ಸುಳ್ಳು. ಅದರ ಭಯವೂ ಸುಳ್ಳು.

ಚಿನ್ನವಾದರೇನು, ಕರೆನ್ಸಿಯಾದರೇನು? ಇವೆರಡನ್ನು ತನು ಸೃಷ್ಟಿ ಮಾಡಿದೆ. ತನುವನ್ನು ಆವರಿಸಿದ ಮನದ ಚಿತ್ತ ಇವೆರಡರ ಮೇಲೂ ನೆಟ್ಟುದರಿಂದ ಚಿನ್ನ ಕರೆನ್ಸಿಗಳೆರಡೂ ತನುವನ್ನೇ ಯಾಮಾರಿಸಿವೆ. ಇವೆರಡನ್ನೂ ಅರಿಯದ್ದಕ್ಕಾಗಿ ಶ್ರೀಮಂತ ಪೆಟ್ಟಿಗೆಯಲ್ಲಿ ಬಂಧಿಸಿದ. ಕಳ್ಳ ಪೆಟ್ಟಿಗೆ ಮುರಿದು ಇವೆರಡನ್ನೂ ಕದ್ದ. ಕದ್ದು ಕಳ್ಳನೆನ್ನಿಸಿಕೊಂಡ, ಬಚ್ಚಿಟ್ಟು ಶ್ರೀಮಂತನೆನ್ನಿಸಿಕೊಂಡ. ಕದಿಯುವಾಗ ಅಡ್ಡಿಪಡಿಸಿದರೆ ಶ್ರೀಮಂತ ಪ್ರಾಣ ಕಳೆದುಕೊಳ್ಳುತ್ತಾನೆ. ಸಿಕ್ಕಿಬಿದ್ದರೆ ಕಳ್ಳ ಸಾಯುತ್ತಾನೆ! ನನ್ನ ಚಿತ್ತಕ್ಕೆ ವಸ್ತುವಿನ ಸತ್ಯ ದರ್ಶನ ಆಗದ್ದರಿಂದ ಸಾವು ಸಂಭವಿಸಿತು. ಮನದ ಚಿತ್ತದ ಗುಟ್ಟು ರಟ್ಟಾಗದ್ದರಿಂದ ತನುವಿಗೆ ಸಾವು ಸಂಭವಿಸಿತು. ತನು ದೊಡ್ಡದೊ, ತನು ಸೃಷ್ಟಿಸಿದ ಕರೆನ್ಸಿ, ಆಭರಣ ದೊಡ್ಡದೊ?

ರಾಜಕಾರಣಿಯಾಗಿ, ಅಧಿಕಾರಿಯಾಗಿ, ಶ್ರೀಮಂತನಾಗಿ, ರಾಜನಾಗಿ, ಜಗದ್ಗುರುವಾಗಿ ಕಿರೀಟ ಧರಿಸಿದ; ಲೋಹವೆಂದು ತಿಳಿಯಲಿಲ್ಲ. ಕರೆನ್ಸಿ ಎಂದು ಪೆಟ್ಟಿಗೆಯಲ್ಲಿಟ್ಟ ವಿನಿಮಯಕ್ಕಾಗಿ ಇದ್ದ ಕಾಗದವೆಂದು ತಿಳಿಯಲೇ ಇಲ್ಲ. ಇದು ವಿಚಿತ್ರ! ಆದರೂ ಇದರ ಮೂಲದ ಸತ್ಯ ಒಂದೇ ಆಗಿದೆ. ನನ್ನ ಚಿತ್ತದ ಕರಿನೆರಳು ವಸ್ತುವಿನ ಮೇಲೆ ಬಿದ್ದು ವಸ್ತುಗಳು ಎರಡಾಗಿವೆ.

ಒಂದನ್ನು ಒಂದೇ ಎಂದು ತಿಳಿದರೆ ಅತ್ತಲಿತ್ತ ಸುತ್ತಿ ಸುಳಿದು ವ್ಯರ್ಥ ಸಾಯುವ ಬಳಲಿಕೆಯಿಲ್ಲ. ಈ ಬಳಲಿಕೆ ನಿಲ್ಲಬೇಕಾದರೆ ತನ್ನೊಳಗೆ ತಾನೇ ಕ್ರಾಂತಿಯ ಕಿಡಿ ಹೊತ್ತಿಸಿಕೊಳ್ಳಬೇಕು. ತನ್ನ ಜ್ಞಾನದಿಂದ ತಾನೇ ಸತ್ಯ ಕಂಡುಕೊಂಡು ತನ್ನ ಅಜ್ಞಾನದ ವಿರುದ್ಧ ತಾನೇ ಆಂದೋಲನಕ್ಕೆ ಸಿದ್ಧನಾಗಬೇಕು. ಇದು ಸಿದ್ಧರಾಮ ಶಿವಯೋಗಿಗಳ ಚಿತ್ತದ ಸತ್ಯ ಸೂತ್ರ!

**40**

**ಅತ್ಯತಿಷ್ಠದ್ದಶಾಂಗುಲನನರ್ಚಿಸಿ ಕಂಡೆನೆಂಬ**
**ಬಚ್ಚಬರಿಯ ಮರುಳ ನೀ ಕೇಳಾ.**
**ಅರ್ಚನೆ ಪೂಜೆಯಲ್ಲಿ ಸಿಕ್ಕುವನೆ?**
**ಗುರು ತೋರಿದ ಸಚ್ಚಿದಾನಂದ ಚಿನ್ಮಯ ಚರಲಿಂಗವಪ್ಪ**
**ಅರ್ಚಕರು ಅರ್ಚಿಸಿ ಪಡೆಯರೊ.**
**ಪದ ನಾಲ್ಕ ಮೀರಿದ ಪದವ**
**ನೀವೆಂಬುರುತರ ಪರಮ ಸೀಮೆಯುವನಯ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿಯೇ ತನ್ಮಯವಾದ ಗುರುದೇವನನ್ನು, ಮಹಾದೇವನನ್ನು, ಸದಾಶಿವನನ್ನು, ಸಾಕ್ಷಾತ್ ಪರಬ್ರಹ್ಮನನ್ನು ತನುವಿನಿಂದಲೇ ಅರ್ಚಿಸಿ ಪೂಜಿಸಿ ಪ್ರಾರ್ಥಿಸಿ ಪಡೆಯಲು ಸಾಧ್ಯವೆ?

ಮಸೀದಿಗೆ ಹೋಗಿ ಐದು ಬಾರಿ ಪ್ರಾರ್ಥಿಸಿದವರು ಈ ಭೂಮಿಯ ಮೇಲೆ ಸಾಕಷ್ಟು

ಜನರಿದ್ದಾರೆ. ಹಾಗೆಯೇ ಚರ್ಚಿಗೆ ಹೋಗಿ ಪ್ರಾರ್ಥಿಸಿದವರೂ ಇದ್ದಾರೆ. ಆಲಯ ಆಶ್ರಮ ಪುಣ್ಯ ಕ್ಷೇತ್ರ ಜ್ಯೋತಿರ್ಲಿಂಗಗಳಿಗೆ ಹೋಗಿ ಪೂಜಿಸಿದವರೂ ಇದ್ದಾರೆ. ಮರುಳ ಮನ ತನುವನ್ನು ಯಾಮಾರಿಸಿ ಪೂಜೆ ಪ್ರಾರ್ಥನೆಗೆ ಹಚ್ಚಿತೇ ಹೊರೆತು ಅಲ್ಲಾನ ಸಾಕ್ಷಾತ್ಕಾರವಾಗಲಿಲ್ಲ. ಆ ಕರುಣಾಮಯಿ ದೇವರು ಒಲಿಯಲಿಲ್ಲ.

ಸತ್ ಚಿತ್ ಆನಂದ ಸ್ವರೂಪಿಯಾದ ಭಗವಂತನು ನೋಡುವ ಕಣ್ಣಿನಲ್ಲಿ ಮುಕ್ಕಣ್ಣನಾಗಿ ಸಂಗಮವಾಗಿದ್ದಾನೆ. ಕೇಳುವ ಕಿವಿಯಲ್ಲಿ, ಮೂಸಿಸುವ ಮೂಗಿನಲ್ಲಿ, ರುಚಿಸುವ ನಾಲಿಗೆಯಲ್ಲಿ, ಸ್ಪರ್ಶಿಸುವ ಚರ್ಮದಲ್ಲಿ ಬ್ರಹ್ಮನಾಗಿ ಸಂಗಮವಾಗಿದ್ದಾನೆ. ಗುರುವಿನ ಮೂಲಕ ಕೇಳಿ ಅರಿವಿನಿಂದ ಅರ್ಚಿಸಿದರೆ ಆರಾಧಿಸಿದರೆ ಪ್ರಾರ್ಥಿಸಿದರೆ ಪೂಜಿಸುವ ನೀವೆ ಅವನು ಎಂದು ಅವನಿಂದಲೇ ನಿಮಗೆ ತಿಳಿಯುತ್ತದೆ. ಇದು ಸಕಲರಿಗೂ ವೇದ್ಯವಾಗುತ್ತದೆ.

ನೋಡಲು ಬಾರದ ಕಣ್ಣು, ಕೇಳಲು ಬಾರದ ಕಿವಿಗಳು, ಮುಟ್ಟಲು ಬಾರದ ಚರ್ಮ, ಮೂಸಿಸಲು ಬಾರದ ಮೂಗು, ರುಚಿಸಲು ಬಾರದ ನಾಲಿಗೆಯಿಂದ ಆತನನ್ನು ಆಲಯಕ್ಕೆ ಹೋಗಿ ಆರಾಧಿಸಲು ಸಾಧ್ಯವೆ? ಚರ್ಚ್ ಮಸೀದೆಗಳಿಗೆ ಹೋಗಿ ಪ್ರಾರ್ಥಿಸಲು ಸಾಧ್ಯವೆ? ಕುರಾನ್ ಭಗವದ್ಗೀತೆ ಬೈಬಲ್‌ಗಳನ್ನು ಪಠಿಸಿ ಒಲಿಸಿಕೊಳ್ಳಲು ಸಾಧ್ಯವೆ? ತನುವಿನಲ್ಲಿ ಹುಡುಕಿದರೂ ಸಿಗದ ಧರ್ಮಗಳನ್ನು ತನು ಹೊಂದಿದೆ. ತನುವನ್ನು ಅರಿವಿನ ತನುವೆಂದು ನೋಡಲು ಬಾರದಷ್ಟು ಅಜ್ಞಾನವನ್ನು ಕಣ್ಣು ತುಂಬಿಕೊಂಡಿದೆ.

ಕಣ್ಣಲ್ಲಿರುವ ಅರಿವು ಕಣ್ಣಲ್ಲಿಯೇ ಮರೆಯಾಗಿ ಕಣ್ಣು ಮುಸಲ್ಮಾನ ಹಿಂದು ಕ್ರೈಸ್ತನಾಗಿದೆ. ಹೆಣ್ಣಾಗಿದೆ, ಗಂಡಾಗಿದೆ, ಬೌದ್ಧನಾಗಿದೆ, ಜೈನನಾಗಿದೆ. ದೇಶ ಭಾಷೆ ಗಡಿ ಸೀಮೆ ಎಂಬ ಅಜ್ಞಾನವನ್ನು ಹೇರಿಕೊಂಡಿದೆ. ಕಣ್ಣು ಇದು ಯಾವುದೂ ಅಲ್ಲ. ಅದು ಅರಿವಿನ ಬೆಳಕು ಮಾತ್ರ. ಇದನ್ನು ಪೂರ್ವಜರು ಅಲ್ಲಾ, ಗಾಡ್, ದೇವರೆಂದು ಕರೆದರು. ಅರಿವಿನ ಕಣ್ಣು ಹೊಂದಿದ ಕಣ್ಣನ್ನು ಮುಕ್ಕಣ್ಣನ ಕಣ್ಣು ಎಂದು ಕರೆದರು. ಮನ್ಮಥನ ಕಾಮದ ಕಣ್ಣನ್ನು ಮುಕ್ಕಣ್ಣನ ಕಣ್ಣಿನಿಂದಲೇ ಸುಟ್ಟುಹಾಕಿ ಈತನ ಕಣ್ಣಿನಿಂದ ನೋಡಿದಾಗ ತನು ಅರಿವಿನ ತನುವಾಗಿ ಕಾಣುತ್ತದೆ. ಹಿಂದು ಮುಸಲ್ಮಾನ ಕ್ರೈಸ್ತ ಎಂದು ನೋಡುವ ಕುರುಡು ಕಣ್ಣು ಸುಟ್ಟು ಹೋಗುತ್ತದೆ.

ಕಣ್ಣು ಕಾಣುತ್ತದೆ. ಆದರೆ ಸರಿಯಾಗಿ ಕಾಣುವುದಿಲ್ಲ. ಕಾಣದ ಈ ಕಣ್ಣು ಮಸೀದಿಗೆ ಹೋಗಿ ಐದು ಬಾರಿ ನಮಾಜು ಮಾಡಿದರೆ ಅದರ ಕಾಮ ನಷ್ಟವಾಗುತ್ತದೆಯೆ? ತನುವಿನಲ್ಲಿಯ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರದಿಂದ ಹರಿದಾಡುವ ಅಜ್ಞಾನದ ಹಾವು ಸಾಯುತ್ತದೆಯೆ? ಹೊರಗಿನ ದೇವರನ್ನು ಪೂಜಿಸಿ ಅರ್ಚಿಸಿ ಆರಾಧಿಸಿದರೂ, ಪ್ರಾರ್ಥಿಸಿದರೂ ಅಜ್ಞಾನದ ಹಾವು ಸಾಯುವುದಿಲ್ಲ.

ಗುರು ತೋರಿದ ಸಚ್ಚಿದಾನಂದ ಚಿನ್ಮಯ ಅರಿವೆಂಬ ಚರಲಿಂಗವನು ಮೌಲ್ವಿ ಬಿಷಪ್ ಅರ್ಚಕರು ಅರ್ಚಿಸಿ ಪೂಜಿಸಿ ಪ್ರಾರ್ಥಿಸಿ ಪಡೆಯಲು ಸಾಧ್ಯವಿಲ್ಲ. ತಾವೇ ಪಡೆಯಲು ಸಾಧ್ಯವಿಲ್ಲವೆಂದ ಮೇಲೆ ಮಸೀದಿ ಮಂದಿರ ಚರ್ಚ್‌ಗಳಿಗೆ ಅಲಿಯುವ ತನುಗಳಿಗೆ ಹೇಳಲು ಸಾಧ್ಯವೆ?

ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವೆಂಬ ಪರಮ ಸೀಮೆಯನು ಹೊಂದಿ ನಿಸ್ಸೀಮರಾಗಲು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**41**

**ಅತಿಗಳೆವೆ ವರ್ಗವನು ಮಥನಿಸುವೆ ಮುಕ್ತಿಯನು,**

ಸದಮುದವ ನಿಲಿಸುವೆನು
ದಿಗ್ವಳಯದಾ ಕರಣ ಸಂತತಿಗಳ ತನುಗುಣದ ಭೇದವನು,
ಮನದಲ್ಲಿ ಒಪ್ಪಿಪ್ಪ ತತ್ವಂಗಳಾ ಮನೆ ಐದರ ಭೇದ
ಮನಸಿಜನಿಂಬಿಲ್ಲ ಘನತರ ಮನೆ.
ಐದನೊಂದ ಮಾಡಿ
ತನುತ್ರಯವ ಮನತ್ರಯವ ಮಲತ್ರಯವ ಎಯ್ದದೆ
ಘನತರದ ಭೇದವನು ಅನುವಾಗಿ ಎಯ್ದಿ
ಗಮನವನಿರಿಸಿ ಮಧ್ಯಸ್ಥಾನದಲಿ.
ಕುಶಲತೆಯ ಬಿಟ್ಟೀಗ ಎಸೆವ ಕಮಳದೊಳಗೆ
ಶಶಿಧರನ ಸಾಯುಜ್ಯ ಮಂಚದಲ್ಲಿ
ಕುಸುಮನೇತ್ರೆಯ ಕಂಡು ಪಸರಿ ಪರ್ಬಿದ ಸ್ನೇಹ
ಒಸರುತಿರ್ದುದು ಗಿರಿಯ ಕಂದರದಲಿ
ಮಧುರದೊಂದಾಳಾಪ ಒದವಿರ್ದ ಕ್ರೀಯದಲಿ
ಅನಿಮಿಷದ ಶಕ್ತಿ ಶುದ್ಧ ಪಂಚಮದಲಿ ಒದಗದೆ
ಎಯ್ದಿಪ್ಪ ಪರಾಶಕ್ತಿ ಮಸ್ತಕದ
ಅನುನಯದ ಬೀಜಾಕ್ಷರಂಗಳೆರಡಾ ಬಳಸುತ್ತ
ಚಿತ್ತವನು ಹರಿಯದೆ ನಿಲಿಸಿ,
ತನುವ ವೇಧಿಸುತಿರ್ದುದಾನತದಲಿ
ಶುದ್ಧ ಸಂಗಮದೊಳಗಿದ್ದು ಮೂರ್ಛೆಯನೆಯ್ದಿ
ಅರ್ಧೋದಯದಲ್ಲಿ ಆನತದಲಿ ತಾನು ತನ್ನನರಿತು
ಭಾನುವಿನುದಯದಲಿ ತಾರೆಗಳ ತವಕದಲಿ
ವಿಯೋಗದಾ ಅಂಗಸಂಗವ ಮರೆದು,
ಲಿಂಗಸುಖ ಸಂಯೋಗಿ ಭಂಗವಿಲ್ಲದೆ
ಶುದ್ಧ ಧವಳತೆಯಲಿ ಅನುಗುಣವನತಿಗಳೆದು
ಮನದ ಮಲಿನವ ಕಳೆದು,
ಮನ ನಿಮ್ಮನೆಯ್ದಿತ್ತೈ
ಕಪಿಲಸಿದ್ಧಮಲ್ಲಿಕಾರ್ಜುನಾ.

ತನುವಿನ ಹೊರಗೆ ಏನೂ ಇಲ್ಲ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಮಥನಿಸಿ ನೋಡಿದಾಗ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನು ತನುವನ್ನು ಆವರಿಸಿದ ಮನವನ್ನು ಕೈಮಾಡಿ ಕರೆದು ಆಲಿಂಗನ ಮಾಡಿಕೊಳ್ಳುವನು.

ಐದು ಇಂದ್ರಿಯಗಳನ್ನು ಮನ ಆವರಿಸಿಕೊಂಡಿದ್ದರೆ, ಇನ್ನೈದು ಇಂದ್ರಿಯಗಳ ಸಮೀಪ ಸುಳಿಯಲು ಮನಕ್ಕೆ ಸಾಧ್ಯವಾಗುವುದಿಲ್ಲ. ಅವು ಸದ್ಗುರುದೇವ ವಾಸ ಮಾಡುವಂತಹ ಘನತರವಾದ ಮನೆಯಾಗಿದೆ.

ಐದು ಎನ್ನಲು ಹೋದರೆ ಐದನು ಒಂದೇ ಮಾಡಿದೆ. ತನುತ್ರಯವೆನ್ನುವಂತಿಲ್ಲ;

ಮನತ್ರಯವೆನ್ನುವಂತಿಲ್ಲ ಮಲತ್ರಯವೆನ್ನುವಂತಿಲ್ಲ. ಘನತರದ ಭೇದವನು ಅನುವಿನಿಂದಲಿ ನೋಡಿದರೆ ಕಾಣುವುದೊಂದೇ.

ತನು, ತನುವನ್ನು ಆವರಿಸಿದ ಮನ, ತನುವಿನಲ್ಲಿ ಸಂಗಮವಾದ ಅರಿವೆಂಬ ಲಿಂಗಯ್ಯ. ಮನಕ್ಕೆ ಬಯಕೆಯಾದರೆ ಸಾಕು ಅದು ಸುತ್ತಿಬಳಿಸಿ ತತ್ತ್ವಗಳತ್ತ ಹೋಗದೆ ನೇರವಾಗಿ ಮಧ್ಯಮ ಸ್ಥಾನದಲ್ಲಿರುವ ಅರಿವೆಂಬ ಲಿಂಗಯ್ಯನೊಂದಿಗೆ ಸಂಗ ಮಾಡಿ ಮನ ಘನಮನವಾಗುತ್ತದೆ.

ಮನ ಸಕಲ ಕುಶಲತೆಗಳನ್ನು ಬಿಟ್ಟು ಮನ್ಮಥ ಎಸೆದ ಹೂಬಾಣದಿಂದಾಗಿ ಶಶಿಧರನ ಸಾಯುಜ್ಯವನು ಬಯಸಿ ಮಂಚದಲ್ಲಿ ಪವಡಿಸುತ್ತದೆ. ಘನದಿಂದ ಹೊರಗೆ ಬಂದು ತನುವನ್ನು ಆವರಿಸಿ ಪುನಹ ಘನದಲ್ಲಿ ಲೀನವಾಗಿ ಘನಮನವಾಗುತ್ತದೆ.

ವಸ್ತುಗಳ ಮೇಲೆ ಹರಿಯುವ ಚಿತ್ತ ಘನದ ಮೇಲೆ ಹರಿದು ಚಿತ್ತ ಸುಚಿತ್ತವಾಗಿದೆ. ಅತ್ತಿತ್ತ ಚಲಿಸಲು ಬಾರದಂತೆ ಹೆಳವನಾಗಿದೆ. ಶಶಿಧರನೊಂದಿಗೆ ರಮಿಸಿ ಒಂದಾಗಲು ಮನವನ್ನು ಮಂಚದ ಹತ್ತಿರ ಕರೆದುಕೊಂಡು ಹೋಗಿ ಶಶಿಧರನಲ್ಲಿ ಲೀನವಾಗಲು ಮನಕ್ಕೆ ಪ್ರೇರಣೆ ನೀಡಿದೆ.

ಸೂರ್ಯೋದಯದಲ್ಲಿ ಕಮಲ ಅರಳಿ ನಿಂತು ದುಂಬಿಯಿದ್ದಲ್ಲಿ ತನ್ನ ಮಕರಂದವನ್ನು ಚೆಲ್ಲಿ ತಾನಿದ್ದಲ್ಲಿಗೆ ದುಂಬಿಯನ್ನು ಕರೆತಂದು ಮಕರಂದವನ್ನು ಈಂಟುವಂತೆ ದುಂಬಿಗೆ ಕಮಲ ಹೇಳಿದಂತಿದೆ ಈ ವಚನ. ಪುನಃ ಸೂರ್ಯ ಮುಳುಗಿದಾಗ ಕಮಲ ಮುದುಡಿ ದುಂಬಿಯನ್ನು ತನ್ನ ಹೃದಯಕಮಲದಲ್ಲಿ ಬಚ್ಚಿಟ್ಟುಕೊಂಡಂತಿದೆ ಈ ವಚನ.

ಮನ ಅರಿವೆಂಬ ಗುರುದೇವನ ಮಧುರಸವನ್ನು ಹೀರಲು ಹೋಗಿ ಕಳೆದು ಹೋದಂತೆ. ಸೂರ್ಯನ ಬೆಳಕಿನಿಂದ ಹುಟ್ಟಿದ ಕತ್ತಲು ಮತ್ತೆ ಸೂರ್ಯೋದಯದಲ್ಲಿ ಕತ್ತಲು ಹೇಗೆ ಕಳೆದು ಹೋಗಿದೆಯೋ ಹಾಗೆಯೇ ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಅರಿವಿನ ಲಿಂಗ ಸುಖದಲ್ಲಿ ಭಂಗವಿಲ್ಲದೆ ಸಂಯೋಗವಾಗಿದೆ. ಮನ ತನ್ನ ಮಲಿನವ ಕಳೆದುಕೊಂಡು ಅಂಗ ಸುಖವನ್ನು ತೊರೆದು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೊಂದಿಗೆ ಒಂದಾಗಿದೆ.

**42**

**ಅತಿಮಥನವೆಂಬ ಯೋಗವೆನ್ನ ಗತಿಗೆಡಿಸಿತ್ತಯ್ಯ**
**ದಿತಿಗೆಟ್ಟೆ ನಾನು ಆದರಿಂದ**
**ಅತಿಶಯದ ತಾತ್ಪರ್ಯ ಗುರುಭಕ್ತಿಯನರಿಯದೆ**
**ದಿತಿಗೆಟ್ಟೆನಯ್ಯಾ ತಾತ್ಪರ್ಯವನರಿಯದೆ.**
**ತವಕಿಸುವ ಮನವನು ನಿಮ್ಮ ಕಡೆಗೆ ತೆಗೆದುಕೊಂಡು**
**ಅತಿಶಯದ ತಾತ್ಪರ್ಯ ಗುರುಭಕ್ತಿಯ ಈಯಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ತನ್ಮಯವಾದ ಗುರುವಿನೊಂದಿಗೆ ಬೆರೆಯಲು ಮಥನದ ಅವಶ್ಯಕತೆಯಾದರೂ ಇದೆಯಾ? ಸಮುದ್ರ ಮಥನ ಮಾಡಿದಾಗ ವಿಷ-ಅಮೃತ ಎರಡೂ ಬಂತು. ದೇವತರು, ರಕ್ಕಸರು ಕೂಡಿಯೇ ಮಥನ ಮಾಡಿದರು. ಮಥನ ಮಾಡುವುದು ಸುಲಭ. ಬೇರ್ಪಡಿಸಿ ಸ್ವೀಕರಿಸುವುದು ಜಟಿಲ. ಅಮೃತಕ್ಕೆ ಆಸೆ ಪಡುವುದು ಸಹಜ ಗುಣ. ಆದರೆ ವಿಷವನ್ನು ಅಮೃತವೆಂದೇ ಸ್ವೀಕರಿಸುವುದು ಕಷ್ಟಸಾಧ್ಯ. ಗುರುವಿಗೆ ಮಾತ್ರ ಸಾಧ್ಯ. ಮಹಾದೇವನಿಗೆ ಮಾತ್ರ ಸಾಧ್ಯ. ಸದಾಶಿವನಿಗೆ ಮಾತ್ರ ಸಾಧ್ಯ.

ಹಾಗಾದರೆ ಈ ಗುರುದೇವ ಯಾರು? ಈತ ತನುವುಳ್ಳವನೆ? ಈತನಿಗೆ ತಂದೆ ತಾಯಿಗಳು ಉಂಟೆ? ಈತ ಗುರುವಾದರೆ ಈತನ ಗುರು ಯಾರು? ಗುರುದೇವ ಕೂಡಾ ಹಿಂದೆ ಯಾವ ಗುರುವಿಗಾದರೂ ಶಿಷ್ಯನಾಗಿರಬೇಕಲ್ಲ!

ಗುರುದೇವ ಯಾರಿಗೂ ಹುಟ್ಟಿದಾತನಲ್ಲ. ಅಲ್ಲಾ ಕೂಡಾ ಯಾರಿಗೂ ಹೇಗೆ ಹುಟ್ಟಿಲ್ಲವೊ ಹಾಗೆಯೇ ಗುರುದೇವ ಕೂಡಾ ಯಾರಿಗೂ ಹುಟ್ಟಿದಾತನಲ್ಲ. ಹುಟ್ಟಲೇ ಇಲ್ಲ ಎಂದ ಮೇಲೆ ಈತನಿಗೆ ಸಾವಿಲ್ಲ. ಸಾವಿಲ್ಲದ ರೂಹಿಲ್ಲದ ಕೇಡೇ ಇಲ್ಲದ ಚೆಲುವನೀತ.

ಲೋಕದ ಗುರುವಿಗೆ ಸಾವುಂಟು. ಕೇಡುಂಟು. ತಂದೆ ತಾಯಿಗಳುಂಟು, ಬಂಧು ಬಳಗ ಉಂಟು. ಗುರುಉಂಟು. ಶಿಷ್ಯರುಂಟು. ಹೀಗೆ ಸತ್ತು ಹುಟ್ಟುವ; ಹುಟ್ಟಿ ಸಾಯುವ ಗುರು ಎಣಿಕೆಗೆ ಸಿಕ್ಕುತ್ತಾನೆ. ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಗುರು ಸಿಕ್ಕುವುದು ಜಟಿಲ. ಆತನನ್ನು ಹುಡುಕುವುದೂ ಜಟಿಲ. ಹುಡುಕುವ ಬಯಕೆಯಾಗುವುದೂ ಜಟಿಲ.

ಇಂತಹ ಗುರುದೇವನನ್ನು ಹುಡುಕುವ ಶಿಷ್ಯನಿಗೂ ಸಾವಿಲ್ಲ! ರೂಹಿಲ್ಲ; ಕೇಡಿಲ್ಲ. ಹ್ಯಾಗೆ ಗುರುದೇವನೋ ಹಾಗೆಯೇ ಶಿಷ್ಯ. ಹುಟ್ಟೇ ಇಲ್ಲದವನನ್ನು ಹುಟ್ಟಿದ ಶಿಷ್ಯನು ಹೇಗೆ ಪಡೆಯಲು ಸಾಧ್ಯ. ಹುಟ್ಟು ಸಾವುಳ್ಳ ಶಿಷ್ಯ; ಹುಟ್ಟು ಸಾವುಳ್ಳ ಗುರುವನ್ನು ಪಡೆಯಲು ಮಾತ್ರ ಸಾಧ್ಯ.

ಆದರೆ ಇವರಿಬ್ಬರನ್ನು ಮಥನಿಸಿಯೇ ಪಡೆಯಬೇಕು ಎಂದಂತಾಯಿತಲ್ಲವೆ? ಗತಿಗೆಟ್ಟು ನಿರ್ಗತಿಕನಾಗಿ ಹುಡುಕಿಯೇ ಪಡೆಯಬೇಕು ಎಂದಂತಾಯಿತಲ್ಲವೆ?

ಸಿದ್ಧಾರ್ಥ ಗುರುವನ್ನು ಹುಡುಕಲಿಲ್ಲ. ಗುರುವಿಗೆ ಶಿಷ್ಯನಾಗಲಿಲ್ಲ. ಆದರೆ ಗುರುವನ್ನು ಹುಡುಕಿದ. ಯಾರಿಗೂ ಹುಟ್ಟದ ಗುರುವನ್ನು ಹುಡುಕಿದ. ಗತಿಗೆಟ್ಟು ನಿರ್ಗತಿಕನಾಗಿ ಮಥನಿಸಿ ಮಥನಿಸಿ ಹುಡುಕಿದ. ಹುಡುಕುವುದರೊಳಗಾಗಿ ಹುಡುಕುವ ಸಿದ್ಧಾರ್ಥ ಇಲ್ಲವಾದ. ಖಾಲಿ ಖಾಲಿಯಾದ.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಬುದ್ಧನಲ್ಲಿ ಸಿದ್ಧಾರ್ಥ ಕಳೆದು ಹೋದ. ಹುಡುಕುವ ಗುರು ಕಾಣಲಿಲ್ಲ; ಹುಡುಕುವ ತಾನೂ ಕಾಣಲಿಲ್ಲ. ಕಾಯವನ್ನು ಹೊಂದಿದ ಸಿದ್ಧಾರ್ಥ ಅಕಾಯ ಬುದ್ಧನಾದ. ಅಕಾಯ ಶಿಷ್ಯನಿಗೆ ಅಕಾಯ ಗುರು ಒಲಿದ.

ಗುರು ಎಂಬ ತಾತ್ಪರ್ಯವನ್ನು ಅರಿಯಲು ಹೋದ ಧೃತಿಗೆಟ್ಟ ಶಿಷ್ಯನ ಬಯಕೆ ಅತಿಯಾಗಿ ಕಾಡಿದಾಗ ಕಾಡುವ ಬಯಕೆಯೂ ಖಾಲಿ ಖಾಲಿಯಾದಾಗ ಗುರುದೇವ ಒಲಿಯುತ್ತಾನೆ.

ಶಿದ್ಧರಾಮ ಶಿವಯೋಗಿಗಳು ತವಕಿಸುವ ಮನವನ್ನು ನಿಮ್ಮ ಕಡೆಗೆ ತೆಗೆದುಕೊಂಡು ಹೋಗಿ ಎಂದು ಶಿಷ್ಯನಾಗಿ ಗುರುದೇವನನ್ನು ಬೇಡುತ್ತಿದ್ದಾನೆ. ಗುರುದೇವನೆ, ನಿಮ್ಮನ್ನು ಒಲಿಸುವ ಭಕ್ತಿ ನೀವೇ ನನಗೆ ಕರುಣಿಸಬೇಕು ಎಂದು ಅಕಾಯ ಗುರುದೇವನನ್ನು ಅಕಾಯ ಶಿಷ್ಯನಾಗಿ ಬೇಡುವ ಸೂತ್ರವನ್ನು ಓದುಗರಿಗೆ ಕರುಣಿಸಿದ್ದಾನೆ.

**43**

**ಅತಿಶರಣರ ಕೂಡೆ ಮತಿವಂತ ಭಕ್ತರು ಸಂಗ ಮಾಡಲಾಗದು.**
**ದಾಸಿಯ ಸಂಗ ವೇಶಿಯ ಸಂಗ**
**ದಾಸರಲ್ಲದೆ ರಾಜರು ಮಾಡಲಾಗದು.**
**ಚಂಪಕಸಂಗ ಭ್ರಮರ ಮಾಡಲಾಗದು.**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**

**ಅತಿಶರಣರ ಸಂಗ ಗುರುಭಕ್ತರು ಮಾಡಲಾಗದು.**

ಮಹಾಜ್ಞಾನಿಗಳು ಮಾತ್ರ ಸಕಲರನ್ನು ತನ್ನಂತೆ ನೋಡಬಲ್ಲರು. ಅವರು ಮಾತ್ರ ಸಮರ್ಥರು. ಹಾಗೆಯೇ ಲೋಕದ ಹಿರಿಯರೆನ್ನಿಸಿಕೊಂಡ ಗುರುಗಳು, ರಾಜರು, ಮತಿವಂತರು, ಪಂಡಿತರು ಶರಣರ ಜೊತೆಗೆ ಕೂಡಲಾರರು. ಅವರ ಸಂಗ ಮಾಡಲಾರರು. ಏಕೆಂದರೆ ಶರಣರು ಸಕಲರನ್ನೂ ತನ್ನಂತೆ ಭಾವಿಸುವರು.

ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹಾರ ಕಕ್ಕಯ್ಯ, ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ, ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ, ಎನ್ನನೇತಕೆ ಕರಿಯಿರಿ? ಕೂಡಲಸಂಗಯ್ಯ ಎಂದು ಬಸವಣ್ಣನವರು ಸಕಲ ಶರಣರನ್ನು ಅಪ್ಪಿಕೊಳ್ಳುತ್ತಾರೆ.

ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ ಅಯ್ಯಾ ಅಯ್ಯಾ ಎನಲಾರೆ. ಚೆನ್ನಯ್ಯ ನೆಮ್ಮಯ್ಯನು. ಚೆನ್ನಯ್ಯನ ಮಗ ನಾನು. ಕೂಡಲಸಂಗನ ಮಹಾ ಮನೆಯಲಿ ಧರ್ಮಸಂತಾನಿ ಭಂಡಾರಿ ಬಸವಣ್ಣನು! ಎಂತಹ ಸುಂದರವಾದ ಮಾತು! ಹೊಲೆಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲ ಎಂದು ಹೇಳುವ ಶರಣರು ಹುಟ್ಟಿದ ನಂತರ ಪ್ರತಿ ಒಂದು ದೇಹ ಪ್ರಯತ್ನಪಟ್ಟು ಜ್ಞಾನಿ ಆಗಲೇಬೇಕು. ಜ್ಞಾನಿ ಆಗದಿದ್ದರೆ ಗತಿ ಇಲ್ಲ.

ಉತ್ತಮ ಕುಲದಲ್ಲಿ ಹುಟ್ಟಿದವ ಸಾತ್ವಿಕ ಪಂಡಿತ ಶಾಸ್ತ್ರಿ ರಾಜ ಮುಂತಾದ ಗೌರವಗಳನ್ನು ಪಡೆಯಬಹುದು. ಆದರೆ ಶರಣ ಪದವಿಯನ್ನು ಪಡೆಯಲಾರ. ಇದನ್ನು ಯಾರೂ ಕೊಡಲಾರರು. ತನಗೆ ತಾನೆ ಸ್ವತಃ ಕೊಟ್ಟು ಕೊಳ್ಳುವ ಏಕೈಕ ಪದವಿ ಎಂದರೆ ಶರಣತ್ವ. ತಾನು ತನ್ನ ಪ್ರಯತ್ನದಿಂದ ಮಾತ್ರ ಪಡೆದುಕೊಳ್ಳಲು ಸಾಧ್ಯ. ತನಗೆ ತಾನೆ ತನ್ನ ಸಹಜ ಜ್ಞಾನ ಸುಖ ತಾನು ಅನುಭವಿಸಲು ಮಾತ್ರ ಸಾಧ್ಯ. ಹಾಗೆ ಜ್ಞಾನಿಯಾದಾತ ಜ್ಞಾನಿಯಾಗಲು ಬಯಸುವ ದಾಸಿಯ ಸಂಗವಾದರೂ ಮಾಡುತ್ತಾನೆ ವೇಶಿಯ ಸಂಗವಾದರೂ ಮಾಡುತ್ತಾನೆ.

ಹನ್ನೆರಡನೆ ಶತಮಾನದಲ್ಲಿ ಶರಣರು ಉತ್ತಮ ಜಾತಿಯ ಸಂಗ ಮಾಡಲಿಲ್ಲ. ಹಾಗೆ ಮಾಡಬಾರದೆಂದೇನೂ ಇಲ್ಲ. ಸಹಜ ಜ್ಞಾನದ ಒಡೆಯನಾಗಬೇಕಾದ ತನು ಸಕಲ ಕಲೆಗಳಿಂದಲೂ ಮಾಗಿರಬೇಕು. ತನುವನ್ನು ತನು ಗೌರವಿಸಬೇಕು. ದಾಸಿ ವೇಶಿಯ ವೃತ್ತಿಯಲ್ಲಿದ್ದ ತನುಗಳು ಸಕಲ ತನುಗಳನ್ನೂ ಗೌರವಿಸಲು ಹುಟ್ಟಿದಂದಿನಿಂದ ಕಲಿತಿರುತ್ತವೆ. ಅದಕ್ಕೆ ಸ್ವಲ್ಪ ಜ್ಞಾನದ ಸ್ಪರ್ಶವಾದರೆ ಸಾಕು ಪುಣ್ಯ (ವೇಶ್ಯಾ) ವೃತ್ತಿಯಲ್ಲಿದ್ದ ಸ್ತ್ರೀಯರೆಲ್ಲರೂ ಪುಣ್ಯಸ್ತ್ರೀಯರಾಗುತ್ತಾರೆ. ವಿರಾಟ ಸ್ವರೂಪಿಗಳಾಗುತ್ತಾರೆ! ಹೀಗಾಗಿಯೇ ಶರಣರು ಮತಿವಂತ ಭಕ್ತರ ಸಂಗ ಮಾಡಲಿಲ್ಲ. ಮತಿವಂತ ಗುರುಗಳು ಶರಣರ ಸಂಗ ಮಾಡಲಿಲ್ಲ.

ಮತಿವಂತ ಲೋಕ ಶರಣರನ್ನು ದಾಸರನ್ನು ತಿಳಿಯಲಾರದು. ಅವರು ದೇವರ ಅವತಾರ. ಕ್ರಿಷ್ಣ ಕ್ರಿಸ್ತ ಪೈಗಂಬರರು ಹೇಗೋ ಹಾಗೆ ಶರಣರು ದಾಸರು ಕೂಡಾ ದೇವರ ಅವತಾರ. ದೇವರೆಂದರೆ ಲೋಕ ಪೂಜಿಸುವ ದೇವರು ದೇವರಲ್ಲ. ಲೋಕದ ಪ್ರತಿ ತನು ಕೂಡಾ ದೇವರ ಅವತಾರ. ಲೋಕ ತಿಳಿಯುವುದಿಲ್ಲ. ಶರಣರು ದಾಸರು ಮಾತ್ರ ತಿಳಿಯದೇ ಇರುವುದಿಲ್ಲ. ಹೀಗಾಗಿ ಶರಣರಿಗೆ ಲೋಕ ದೇವರನ್ನು ಹೊತ್ತಿದೆ ಎಂದು ತಿಳಿಯುತ್ತದೆ. ಆದರೆ ಲೋಕಕ್ಕೆ ಶರಣರು ಯಾರೆಂದು ತಿಳಿಯುವುದಿಲ್ಲ. ಬಯಕೆಯಾದರೆ ತಿಳಿಯದೆ ಇರುವುದಿಲ್ಲ. ಶರಣನನ್ನು ತಿಳಿಯ ಹೋದ ತನು ಶರಣನೇ ಆಗುತ್ತದೆ. ಆದರೆ ತಿಳಿಯ ಹೋಗಬೇಕಲ್ಲ. ಇದು ಜಟಿಲ. ಪೂಜಿಸುವುದು ಆರಾಧಿಸುವುದು ಸರಳ. ಹೀಗಾಗಿ ಶರಣ ಬದುಕಿದ್ದಾಗ ಲೋಕ ದೂರ ಉಳಿಯುತ್ತದೆ. ಸತ್ತಾಗ

ಆರಾಧಿಸುತ್ತದೆ. ಇದು ಮತಿವಂತರ ನಿಯಮ. ಲೋಕದ ನಿಯಮ.

**44**

**ಆರ್ತಿಯಲ್ಲಿ ಮುತ್ತೈದೆ ಆರತಿವಿಡಿದು ಬಂದು**
**ನಿಂದ್ಯೆದಾಳೆಯಯ್ಯಾ ನಿಮ್ಮ ಮುಂದೆ.**
**ನಿಜಶುದ್ಧ ಸಾರಸನ್ಮತವಾದ ಮುಖವಂತೆ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ, ನಿಮ್ಮ ಮುಖವಂತೆ**
**ನಿಯತವ ಕಂಡಳು ಚೆನ್ನಬಸವಣ್ಣನ ಧರ್ಮದಿಂದೆ.**

ತನು ಮನ ಅರಿವು ಇವು ಮೂರು ಒಂದನ್ನು ಬಿಟ್ಟು ಮತ್ತೊಂದಿರಲಾರದು. ಮನ ತನುವಿನೊಂದಿಗೆ ಬಯಸಿದೆಡೆಗೆ ನಡೆದಾಗ ಆ ನಡಿಗೆಯನ್ನು ತಡೆದು ನಿಲ್ಲಿಸುತ್ತದೆ ಅರಿವು. ತನ್ನೆಡೆಗೆ ನೋಡುವಂತೆ ಮಾಡುತ್ತದೆ. ಅದಕ್ಕೂ ಮನ ಮಣಿಯದಿದ್ದರೆ ಮನದ ಅಪರಾಧವನ್ನು ಪಟ್ಟಿ ಮಾಡಿ, ಮಾಡಿದ ಕೆಲಸವನ್ನು ಮತ್ತೆ ಮತ್ತೆ ಮನಕ್ಕೆ ನೆನಪಿಸುತ್ತದೆ ಅರಿವು. ಈ ಅರಿವೆ ಗುರು. ಇದನ್ನು ಗುರುವೆಂದು ನಂಬಬೇಕು ಮನ. ಹ್ಯಾಗೆ ಬಲವಾಗಿ ನಂಬಬೇಕೆಂದು ಬಸವಣ್ಣ ಹೇಳುತ್ತಾರೆ.

ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ, ನಂಬಬಲ್ಲ ಭಕ್ತಂಗೆ ದೇವನೊಬ್ಬನೆ ಕಾಣಿರೋ. ಬೇಡ ಬೇಡ ಅನ್ಯದೈವದ ಸಂಗ ಹೊಲ್ಲ! ಬೇಡ ಬೇಡ ಪರ ದೈವದ ಸಂಗ ಹೊಲ್ಲ! ಬೇಡ ಬೇಡ, ಅನ್ಯದೈವವೆಂಬುದು ಹಾದರ ಕಾಣಿರೋ, ಕೂಡಲಸಂಗಮದೇವ ಕಂಡಡೆ ಮೂಗು ಕೊಯ್ವ ಕಾಣಿರೊ.

ಮನವನ್ನು ಹೆಂಡತಿಯನ್ನಾಗಿಸಿಕೊಂಡು, ಅರಿವನ್ನು ಗಂಡನನ್ನಾಗಿಸಿಕೊಂಡು ಬಲವಾಗಿ ನಂಬಬೇಕು. ತಾನು ಭಕ್ತನಾಗಿ ಅರಿವೆಂಬ ಗುರುದೇವನನ್ನು ಗುರುವಾಗಿಸಿಕೊಂಡು ಬಲವಾಗಿ ನಂಬಬೇಕು. ಅನ್ಯದೈವದ ಪರದೈವದ ಸಂಗ ಮಾಡದೆ ಬಲವಾಗಿ ನಂಬಬೇಕು. ಅನ್ಯದೈವವೆಂಬುದು ಹಾದರ ಕಾಣಿರೋ. ಕೂಡಲಸಂಗಯ್ಯನೆಂಬ ಗಂಡ ಅರಿವಿನ ಗಂಡ. ಆತ ಕಂಡರೆ ಮೂಗ ಕೊಯ್ಯದೆ ಬಿಡುವನೆ?

ಹೆಂಡತಿ ಮಾಡುವ ಹಾದರ ಕಾಣದೆ ಇರಬಹುದು. ಆದರೆ ಮನವೆಂಬ ಹೆಂಡತಿ ಮಾಡುವ ಹಾದರ ಅರಿವೆಂಬ ಗಂಡನಿಗೆ ಕಾಣದೆ ಇರಲು ಸಾಧ್ಯವೆ? ಹೀಗಾಗಿ ನಂಬಿದ ಹೆಂಡತಿಗೆ ಗಂಡನೊಬ್ಬನೆ ಕಾಣಿರೊ! ನಂಬಬಲ್ಲ ಭಕ್ತಂಗೆ ದೇವನೊಬ್ಬನೆ ಕಾಣಿರೋ!

ಚೆನ್ನಬಸವಣ್ಣ ಹೇಳಿದ ಸೂತ್ರವನ್ನು ಸಿದ್ಧರಾಮ ಶಿವಯೋಗಿ ನಂಬಿದ. ಬಲವಾಗಿ ನಂಬಿದ!

ತನುವೇ ತಟ್ಟೆಯಾಯಿತು. ಮನವೇ ಸದಾ ಮುತ್ತೈದೆಯೆಂಬ ಹೆಂಡತಿಯಾಗಿ, ಅರಿವೆಂಬ ಗಂಡನಿಗೆ ಆರತಿ ಮಾಡಿದಳು. ಹಚ್ಚಿದ ಕರ್ಪುರವೂ ಹೊತ್ತಿದ ಬೆಳಕೂ ತನುವೆಂಬ ತಟ್ಟೆಯನ್ನು ಬೆಳಗಿದವು. ಆ ಬೆಳಕಿನಲ್ಲಿ ಸಾರಸನ್ಮತವಾದ ಮುಖ ಪ್ರಕಟವಾಯಿತು. ಅದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥಯ್ಯನ ಮುಖ. ಚೆನ್ನಬಸವಣ್ಣನ ಧರ್ಮದಿಂದ ಈ ಸತ್ಯ ಕಾಣಲು ಸಾಧ್ಯವಾಯಿತು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಶರಣರ ಧರ್ಮ ಅರಿವಿನ ಧರ್ಮ. ಹೆಣ್ಣು ಗಂಡು ಎನ್ನುವ ಅಜ್ಞಾನದ ಜಾತಿ ಕಳೆದುಕೊಂಡು ಸುಜ್ಞಾನದಿಂದ ಬೆಳಗುವ ತನುವಿನ ಧರ್ಮ. ಹೀಗೆ ತನು ತನುವಿನ ಧರ್ಮ ಪಾಲಿಸುವುದಕ್ಕೆ ತನುವಿಗೆ ಬಯಕೆಯಾದಾಗ ಮಾತ್ರ ಸಾಧ್ಯವಾಗುತ್ತದೆ.

45

**ಅನಂತ ಭವ ಭವದಲ್ಲಿ ಬಂದು ನಾನು ಶಾಂತನಾದೆ ಅಯ್ಯಾ,**
**ನಿನ್ನ ಪ್ರಸಾದವನು ನಾನಾ ಭವದಲ್ಲಿ ಕಾಣೆ, ತಂದೆ.**
**ನಿನ್ನ ಪಾದೋದಕವನು ನಾನಾ ಭವದಲ್ಲಿ ಕಾಣೆ, ತಂದೆ.**
**ಕವಿಲೆಯ ಕಂದನಂತೆ ನಾನಿದ್ದೇನೆಂದು ಬಾರಾ.,**
**ಶಿವನೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಜನನ ಮರಣಗಳ ಬಾಧೆ ನನ್ನನ್ನು ಅನಂತ ಜನ್ಮಗಳವರೆಗೆ ಕಾಡಿದವು ತಂದೆ. ನಿನ್ನ ದರುಶನದಿಂದ ನಾನು ಶಾಂತನಾದೆ ನನ್ನಯ್ಯಾ. ನಿನ್ನ ಅರಿವಿನ ಮಹಾಪ್ರಸಾದವನ್ನು ಯಾವ ಜನ್ಮಗಳಲ್ಲಿಯೂ ಕಾಣಲಿಲ್ಲ. ನಿನ್ನ ಜ್ಞಾನ ಪಾದೋದಕವನ್ನು ಕೂಡಾ ನಾನು ಯಾವ ಜನ್ಮಂಗಳಲ್ಲಿಯೂ ಕಾಣಲಿಲ್ಲ.

ಕವಿಲೆಯ ಕಂದ ನಾನು. ಪಶು ನಾನು. ಪಶುಪತಿಯಾಗಿ ನನ್ನನ್ನು ಉದ್ಧರಿಸಲು ಬಂದ ಶಿವ ನೀನು. ನನ್ನೊಳಗೆ ನೀನಿರುವೆ. ನಿನ್ನನ್ನು ತಿಳಿಯದೆ ಅನಂತ ಜನ್ಮಗಳನ್ನು ಅಜ್ಞಾನದಿಂದ ಕಳೆದೆ. ನಾನಿದ್ದೇನೆ ಎಂದು ನನಗೆ ನೀನು ತಿಳಿಸಿದರೂ ಕೂಡಾ ತಿಳಿಯದ ಅಜ್ಞಾನಿ ನಾನು.

ನನ್ನ ತಪ್ಪು ಅನಂತ ಕೋಟಿಗಳಷ್ಟಿದ್ದರೂ ನಿನ್ನ ಸೈರಣೆಗೆ ಲೆಕ್ಕವಿಲ್ಲ. ಅದೆಷ್ಟು ಬಾರಿ ನನ್ನ ತಪ್ಪುಗಳಿಗೆ ನಿನ್ನಿಂದ ಕ್ಷಮೆ! ಆದರೂ ನಾನಿದ್ದೇನೆಂದು ಕರೆದು ನನ್ನನ್ನು ಬಿಗಿದಪ್ಪಿಕೊಂಡೆ. ಕವಿಲೆಯ ಕಂದ ನಾನು.

46

**ಅನಿಲ ಬಂದೆನ್ನ ಮಗಳ ಹೊರೆಯಲಿದ್ದು ಒಯ್ದನವ್ವಾ;**
**ಅ ಅ ಅ ಅ ಅ ಅವ್ವಾ;**
**ಮಾಯವಾದಳೆನ್ನಲ್ಲಿ.**
**ಎನ್ನ ಮಗಳನೊಯ್ದು ಎಲ್ಲಿ ಮಾಯಮಾಡಿದಳೆಂದರಿಯೆ.**
**ಎನ್ನ ಮಗಳನೊಯ್ದು ತನ್ನ ಮಾಯದೊಳಗೆ ಅಡಗಿಸಿದ**
**ಕಪಿಲಸಿದ್ಧಮಲ್ಲಿನಾಥಯ್ಯನ.**

ಅರಿವೆಂಬ ಗುರುದೇವನ ಆಟವೇ ವಿಪರೀತ. ಅಂಗವನ್ನು ಸೃಷ್ಟಿ ಮಾಡಿ, ಆ ಅಂಗದಲ್ಲಿ ತಾನು ಸಂಗಮವಾಗಿ, ಅಂಗವನ್ನು ತನ್ನನ್ನು ತಿಳಿಯಲು ಮನವನ್ನು ಸೃಷ್ಟಿ ಮಾಡಿದ್ದಾನೆ. ತನ್ನನ್ನು ತನ್ನ ಅಂಗವನ್ನು ತಿಳಿಯಬೇಕಾದ ಮನವನ್ನು ಅನಿಲದೇವ ಕದ್ದು ತನ್ನ ಸ್ವಾಧೀನ ಮಾಡಿಕೊಂಡಿದ್ದಾನೆ.

ಅಂಗದಲ್ಲಿಯೇ ಸುಳಿದು ಸೂಸಬೇಕಾದ ಅನಿಲ ಅಂಗವನ್ನು ಆವರಿಸಿದ ಮನದ ಹೊರೆಯಲ್ಲಿದ್ದಂತೆ ಮಾಡಿ; ಮನವನ್ನು ಕದ್ದೊಯ್ದು ತನ್ನ ಮಾಯದ ಬಲೆಯಲ್ಲಿ ಬಂಧಿಸಿದ್ದಾನೆ.

ಅರಿವಿನ ತಂದೆಯ ಆಶ್ರಯದಲ್ಲಿರಬೇಕಾದ ಮನವೆಂಬ ಮಗಳು ಅನಿಲನ ಆಶ್ರಯದಲ್ಲಿದ್ದಾಳೆ. ಅ ಅ ಅಅಅ ಅವ್ವಾ; ಮಾಯವಾದೆಯಾ? ನನ್ನಲ್ಲಿಯೇ ಮಾಯವಾಗಬೇಕಾದ ನೀನು ಅನಿಲನ ಮಾಯದೊಳಗೆ ಮಾಯವಾದೆಯಾ? ಲಿಂಗಯ್ಯನಿದ್ದ ಅಂಗವನ್ನು ಮಂಗದಂತೆ ಮಾಡಿದೆಯಾ? ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನಲ್ಲಿ ಸಂಗಮವಾಗಬೇಕಾದ ನೀನು ಅನಿಲದೊಂದಿಗೆ ಓಡಿ ಹೋದೆಯಾ?

ಎನ್ನ ಮಗಳನ್ನು ಒಯ್ದು ಎಲ್ಲಿ ಮಾಯ ಮಾಡಿದನೆಂದು ನಾನರಿಯೆ. ಎನ್ನ ಮಗಳನೊಯ್ದು ತನ್ನ ಮಾಯದೊಳಗೆ ಅಡಗಿಸಿದ ಕಪಿಲಸಿದ್ಧ ಮಲ್ಲಿನಾಥಯ್ಯ.

ಅಲೆದಾಡುವ ಅನಿಲನ ಸಂಗಬಿಟ್ಟಾಗಲೇ ಮನಕ್ಕೆ ಮುಕ್ತಿ ಅನಿಲದೊಂದಿಗೆ ಮನ ಎಲ್ಲಿ ಅಲೆದಾಡಿದರೂ ಅದರ ಸೂತ್ರದ ದಾರ ಮಾತ್ರ ಅರಿವಿನ ತಂದೆಯ ಕೈಯಲ್ಲಿದೆ. ಅವರಿಬ್ಬರೂ ಎಲ್ಲೆಲ್ಲಿಗೆ ಹೋಗುತ್ತಾರೊ ಸೂತ್ರ ಹಿಡಿದ ತಂದೆ ಕೂಡಾ ಅಲ್ಲಿಯೇ ಹಾಜರಿರುತ್ತಾನೆ.

ತಂದೆಯೊಂದಿಗೆ ಸಂಗಮವಾಗಬೇಕಾದ ಮಗಳು ಅನಿಲನೊಂದಿಗೆ ಹಾದರಕ್ಕೆ ಇಳಿದಿದ್ದಾಳೆ. ಅನಿಲನ ಸಂಗಬಿಟ್ಟು ತಂದೆಯೊಂದಿಗೆ ಸಂಗಮವಾದರೆ ಸಾಕು ಅನಿಲ ಅಂಗದಲ್ಲಿಯೇ ಸುಳಿದು ಬೀಸುತ್ತಾನೆ. ಹೊರಗಿನ ಅನಿಲನ ಅರ್ಭಟ ಒಳಗೆ ನಡೆಯುವುದಿಲ್ಲ. ಅದು ಅರಿವಿನ ದೇವಾಲಯ. ದೇಹ ಅರಿವೆಂಬ ದೇವರಿದ್ದ ದೇವಾಲಯ. ದೇವರಲ್ಲಿ ಮಗಳು ಸಂಗಮ ದೇಹದಲ್ಲಿ ಅನಿಲ ಸಂಗಮ!

**47**

**ಅನುನಯದ ಅನ್ಯಕ್ಕೆ ತೆರಹುಗುಡದೆ ಇಪ್ಪ**
**ಕರುಣ ಸಾಗರದೊಳಗೆ ಮುಳುಗಾಡುವಾ**
**ಕರುಣಾಕರನು ಕಪಿಲಸಿದ್ಧಮಲ್ಲೇಶ್ವರನು**
**ತೆರಹಿಲ್ಲದೊಡಗೂಡಿ ಇಪ್ಪ ಸುಖದಿಂ.**

ಜನನ ಮರಣಂಗಳಿಲ್ಲದಂತೆ, ತೆರಹಿಲ್ಲದಂತೆ, ನುಡಿಗೆ ಎಡೆಗೊಡದೆ, ಅಂಗದಲ್ಲಿಯೇ ಸಂಗಮವಾಗಿದ್ದೂ ಅಂಗಕ್ಕೆ ಅರಿವಾಗದಂತೆ ಸುಖದಿಂದ ಇರುವ ಕರುಣಾಕರನು ಆತ. ಕರುಣಸಾಗರದೊಳಗೆ ಮುಳಗಾಡುವ ಕರುಣಾಮಯನು ಆತ.

ಮನವನ್ನು ಸೃಷ್ಟಿ ಮಾಡಿ; ಮನಕ್ಕೆ ತನ್ನ ದರುಶನ ನೀಡಲು ಅನುದಿನವೂ ಮನಕ್ಕೆ ಪಾಠ ಮಾಡುವ ಮಹಾ ಮಹಿಮನು ಆತ. ಆತನ ಲೀಲೆ ಅನಂತ.

ಕೌಶಿಕನ ಅರಸಿಯಾದರೂ, ಅಕ್ಕ ಅರಸನನ್ನು ಅರಸುತನವನ್ನು ಧಿಕ್ಕರಿಸಿ ಭಗವಂತನೊಂದಿಗೆ ಮಾತನಾಡುತ್ತಾ ಆತನ ಸಂಗಾತಿಯಾಗಿ ಪರಮಸುಖಿಯಾದಳು. ಹೀಗಾಗಿ ಅಕ್ಕ ಯಾರನ್ನೂ ಬೇಡಲಿಲ್ಲ. ಹಸಿವಾದಡೆ ಭಿಕ್ಷಾನ್ನಗಳನ್ನೆ ಮೃಷ್ಟಾನ್ನದಂತೆ ಸವಿದಳು. ತೃಷೆಯಾದಡೆ ಕೆರೆಭಾವಿಗಳ ಆಶ್ರಯ ಪಡೆದಳು. ಶಯನಕ್ಕಾಗಿ ಪಾಳುಬಿದ್ದ ದೇವಾಲಯಗಳಲ್ಲಿ ವಿರಮಿಸಿದಳು. ಆತ್ಮಸಂಗಾತಕ್ಕಾಗಿ ಚೆನ್ನ ಮಲ್ಲಿಕಾರ್ಜುನನೊಂದಿಗೆ ವಿಶ್ರಮಿಸಿದಳು. ಭಗವಂತನೊಂದಿಗೆ ಮಾತನಾಡುವ ಉಣ್ಣುವ ಮಲಗುವ ಕಲೆಯನ್ನು ಕಲಿತು ಸದಾ ಸಹಜ ಸುಖದಲ್ಲಿ ಬದುಕಿದಳು. ಬದುಕುವ ಈ ಕಲೆಯನ್ನು ವಚನದ ಮೂಲಕ ಸಕಲರೂ ಉಣ್ಣಲೆಂದು ಎಂದೆಂದಿಗೂ ಹಳಸದ ಬುತ್ತಿ ಬಿಟ್ಟು ಹೋದಳು.

ಒಂದು ದೇಹದಲ್ಲಿ ಅತ್ಯಂತ ಸುಖಮಯವಾದ ಭಗವಂತನ ಸಂಸಾರವೂ ಇದೆ. ಅಜ್ಞಾನದ ಸದಾ ಉಪದ್ರವ ಕೊಡುವ ಮನದ ಸಂಸಾರವೂ ಇದೆ. ಭಗವಂತ ಮನದೊಂದಿಗೆ ಮಾತನಾಡುವ ಮಾತು ಮನದ ಗಮನಕ್ಕೆ ಬಾರದೆ ಮನದ ಉಪಟಳ ತನುವಿನೊಂದಿಗೆ ಹಗಲಿರುಳು ಎನ್ನದೆ ನಡೆದೇ ಇದೆ. ಮನದ ಉಪಟಳವನ್ನು ಏನೊಂದೆನ್ನದೆ ಸಹಜವಾಗಿ ಸ್ವೀಕರಿಸುವ ಪರಮಾತ್ಮನ ಕಾಯಕವೂ ಕಾಯದಲ್ಲಿ ನಡೆದಿದೆ.

ಅನ್ಯ ವಿಷಯಗಳಿಗೆ ಆಸ್ಪದ ಕೊಡದಂತೆ ಕರುಣ ಸಾಗರದೊಳಗೆ ಮುಳುಗಾಡುವ ಕರುಣಾಕರನು ಕಪಿಲಸಿದ್ಧ ಮಲ್ಲಿಕಾರ್ಜುನ. ಅಣು ಅಣುವಿನಲ್ಲಿ ರೋಮ ರೋಮದಲ್ಲಿ ತೆರಹಿಲ್ಲದಂತೆ ಅಂಗದೊಂದಿಗೆ ಒಡಗೂಡಿ ಲಿಂಗವಾಗಿ ವಿರಮಿಸಿದ್ದಾನೆ. ತಾನು ವಾಸ ಮಾಡಿದ ಅಂಗವನ್ನು ಲಿಂಗಾಂಗವನ್ನಾಗಿಸಿಕೊಂಡು ಅಂಗದಲ್ಲಿಯೇ ಪರಮ ಸುಖದಿಂದ ವಿರಮಿಸಿದ್ದಾನೆ.

ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಬಲ್ಲ ಸಿದ್ಧರಾಮ ಶಿವಯೋಗಿ ಆತನ ಸಂಗ ಮಾಡುವ ಮೂಲಕ ಮನವನ್ನು ಘನಮನವನ್ನಾಗಿಸಿ, ಸಖನಿಗೆ ಸಖಿಯಾಗಿ ಸುಖಿಯಾಗಿರುವ ಕಲೆಯನ್ನು ಸಕಲ ಓದುಗರಿಗೆ ನೀಡಿದ್ದಾನೆ.

**48**

**ಅನುಪಮನೆ, ಅಪ್ರಮೇಯನೆ, ನಿತ್ಯತೃಪ್ತನೆ,**
**ಇರವು ನಿನಗೆಲ್ಲಿ ಹೇಳೆಂದು ನುಡಿದು,**
**ಪರೀಕ್ಷಿಸುವ ಇರವಿಲ್ಲ ಇತ್ತ ಬಾಯೆಂದು**
**ಲಿಂಗತ್ರಯವ ಕರದಲ್ಲಿ ಪಿಡಿದು,**
**ಒಳ ಹೊರಗುಯೆಂದೆನ್ನದಾನತದ ನಿಷ್ಕಲದ**
**ಪರಿಯರುಹಿದ ಶಿವನು ಶಿಷ್ಯ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅನುಪಮನು, ಅಪ್ರತಿಮನು, ಅಪ್ರಮಾಣನು, ನಿತ್ಯತೃಪ್ತನು, ಅಪ್ರಮೇಯನು ಆದಂತಹ ಕಪಿಲಸಿದ್ಧ ಮಲ್ಲಿಕಾರ್ಜುನನು ಅಂಗತ್ರಯದಲ್ಲಿ ಒಳಹೊರಗೆನ್ನದಂತೆ ತೆರಹಿಲ್ಲದಂತೆ ಸಂಗಮವಾಗಿದ್ದಾನೆ.

ಅನುಪಮನನ್ನು, ಅಪ್ರಮೇಯನನ್ನು ಹುಡುಕುವ ಕಲೆ ಬಲ್ಲವರಿಂದ ತಿಳಿದು ಕಲಿಯಬೇಕಿದೆ. ಕಲಿತು ಕಾಯತ್ರಯದಲ್ಲಿಯೇ ಹುಡುಕಬೇಕಿದೆ.

ಸ್ಥೂಲಕಾಯ ವಿಷ್ಣುವಾದರೆ ಸೂಕ್ಷ್ಮಕಾಯ ಬ್ರಹ್ಮ. ಕಾರಣ ಕಾಯವೇ ಮಹೇಶ್ವರ. ಸ್ಥೂಲಕಾಯವನ್ನು ಸೂಕ್ಷ್ಮಕಾಯ ಆವರಿಸಿ, ಸೂಕ್ಷ್ಮಕಾಯ ಸ್ಥೂಲಕಾಯದೊಂದಿಗೆ ಸಂಗ ಮಾಡಿದುದಕ್ಕಾಗಿ; ಸ್ಥೂಲಕಾಯಕ್ಕೆ ಸೂಕ್ಷ್ಮಕಾಯಕ್ಕೆ ಮಹೇಶ್ವರನ ದರುಶನವಾಗುತ್ತಿಲ್ಲ.

ಸೂಕ್ಷ್ಮಕಾಯದ ಭ್ರಮೆ ಕಳಚಿ ಬಿದ್ದರೆ ಸಾಕು ಅದೇ ಬ್ರಹ್ಮಕಾಯ. ಆಗ ಸ್ಥೂಲಕಾಯವೇ ವಿಷ್ಣುಕಾಯವಾಗಿ ಕಾರಣಕಾಯವೇ ಮಹೇಶ್ವರ ಕಾಯವಾಗಿ ಸೂಕ್ಷ್ಮಕಾಯಕ್ಕೆ ದರುಶನ ನೀಡುತ್ತದೆ. ಆಗ ಲಿಂಗಕಾಯಗಳಾಗುತ್ತವೆ. ಲಿಂಗತ್ರಯವು ಅಂಗದಲ್ಲಿ ಸಂಗಮವಾಗಿ ಒಳಹೊರಗೆನ್ನದಂತೆ ನಿಷ್ಕಲದ ಪರಿ ತನಗೆ ತಾನೇ ತಿಳಿಯುತ್ತದೆ.

ಸೂಕ್ಷ್ಮಕಾಯದ ಭ್ರಮೆ ಹರಿಯುವ ಕಾಲ ಸನ್ನಿಹಿತವಾದಾಗ ಭ್ರಮೆಯೇ ಭಕ್ತನಾಗಿ ಮಾರ್ಪಟ್ಟು ಬ್ರಹ್ಮನಲ್ಲಿ ಲೀನವಾಗುತ್ತಾನೆ.

ಸ್ಥೂಲಕಾಯದಲ್ಲಿಯ ವಿಷ್ಣು ಭಕ್ತನಿಗೆ ದರುಶನ ನೀಡುತ್ತಾನೆ. ಹಾಗೆಯೇ ಕಾರಣಕಾಯದಲ್ಲಿಯ ಮಹೇಶ್ವರ ಭಕ್ತನಿಗೆ ದರುಶನ ನೀಡುತ್ತಾನೆ.

ಅಂಗ ಮೂರು ಲಿಂಗಗಳನ್ನು ಒಳಗೊಂಡ ಅರಿವಿನ ಮಹಾಕೂಟ! ತ್ರಿಕೂಟ ಸಂಗಮ. ಹೀಗಾಗಿ ಬಸವಣ್ಣ ಸರ್ವಾಂಗವನ್ನು ಕೂಡಲಸಂಗಮದೇವಾ ಎಂದು ಹೆಸರಿಟ್ಟು ಕರೆದ. ಅಂಗ ಕಂಡಲ್ಲಿ ಅದು ಲಿಂಗಯ್ಯನ ಲಾಂಛನವೆಂದು ಶಿರಬಾಗಿ ಕೈಮುಗಿದು ಶರಣು ಶರಣಾರ್ಥಿ

ಎಂದು ಅಂಗದ ಮೂಲಕ ಅಂಗಕ್ಕೆ ಶರಣು ಹೋದ. ಅದು ಬರೀ ಅಂಗವಲ್ಲ; ಲಿಂಗಯ್ಯನಿದ್ದ ತ್ರಿಕೂಟ ಸಂಗಮವೆಂದು ಆತ ಮಾತ್ರ ತಿಳಿದಿದ್ದ.

**49**

**ಅನ್ಯೋನ್ಯವೆಂಬುದು ತನ್ನತ್ತಲಿಲ್ಲ**
**ಅನ್ಯ ಬಂದಡೆ ಅಯ್ಯನತ್ತಲೆ**
**ಮುಖವ ಬೆರಸುವ ಭೇದ**
**ಅಯ್ಯನ ಮುಖವೆ ಮುಖವಾದನೊ.**
**ಇಂದ್ರಿಯಂಗಳೈದು ಆತನ ಇಂಬಪ್ಪ**
**ಮುಖವಾಗಿ ಬಂದ ಪ್ರಸಾದವ ಕೊಂಬ**
**ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಯ್ಯನಲ್ಲಿ**
**ಗುರುಭಕ್ತ ಪ್ರಸಾದಿಯ ಪರಿಯಿಂತು.**

ಅನ್ಯರ ಕಂಡಡೆ ಅನ್ಯೋನ್ಯವಾಗಿರಬೇಕೆಂಬುದು ಮನದ ಬಯಕೆ. ಆದರೆ ಅದು ಮನದ ವಶದಲ್ಲಿಲ್ಲ. ಮನ ಕಲಿತು ನುಡಿಯುತ್ತದೆ; ಕಲಿತು ನಡೆಯುತ್ತದೆ. ಸಮರಸ ಭಾವದಿಂದ, ಸಮತಾ ಭಾವದಿಂದ ತನುವನ್ನು ಅರಳಿಸಲು ಮನಕ್ಕೆ ಸಾಧ್ಯವಾಗುವುದಿಲ್ಲ.

ತನು ಮನಗಳೆರಡರ ಒಡೆಯನಿಂದ ಮಾತ್ರ ಸಾಧ್ಯವಾಗುವುದು. ಏಕೆಂದರೆ ಆತ ತನು ಮನಗಳನ್ನು ಸೃಷ್ಟಿ ಮಾಡಿ ಅದರಲ್ಲಿ ಸಂಗಮವಾದಾತ. ಇಂದ್ರಿಯಂಗಳೈದನ್ನು ಸೃಷ್ಟಿ ಮಾಡಿ ಅದರಲ್ಲಿಯೂ ತಾನು ಸಂಗಮವಾದಾತ.

ತನುವಿನೊಡೆಯ ತನುವಿನ ಸಕಲ ಇಂದ್ರಿಯಗಳಲ್ಲಿ ಹೇಗೆ ಸಂಗಮವಾಗಿದ್ದಾನೆಯೋ ಹಾಗೆಯೆ ಆತ ಸೃಷ್ಟಿ ಮಾಡಿದ ಮನ ಕೂಡಾ ತನುವಿನ ಸಕಲ ಇಂದ್ರಿಯಗಳಲ್ಲಿ ತನ್ನದೇ ಆದ ಮತ್ತೊಂದು ಲೋಕವನ್ನು ಸೃಷ್ಟಿ ಮಾಡಿದೆ.

ದೇವರು ತನುವನ್ನು ಮನವನ್ನು ಸೃಷ್ಟಿ ಮಾಡಿದರೆ ಮನ ತನ್ನನ್ನು ಸೃಷ್ಟಿ ಮಾಡಿದ ದೇವರನ್ನು ಸಂಪೂರ್ಣ ಮರೆತು; ತನುವಿನ ಸಹಾಯದಿಂದ ತನಗೆ ಬೇಕಾದ ದೇವರನ್ನು ಸೃಷ್ಟಿ ಮಾಡಿತು. ತಾನು ಸೃಷ್ಟಿ ಮಾಡಿದ ದೇವರನ್ನೇ ದೇವರೆಂದು ಆರಾಧಿಸಿ, ಆ ದೇವರಿಗೆ ಆಲಯಗಳನ್ನು ನಿರ್ಮಿಸಿತು. ದೇವರಿದ್ದ ದೇಹದ ಮೂಲಕ ಮನ ತಾನು ಮಾಡಿದ ದೇವರಿಗೆ ಉರುಳು ಸೇವೆ ಮಾಡುತ್ತಲಿದೆ.

ತನ್ನಂತೆಯೇ ಇರುವ ತನುವನ್ನು ತನ್ನಂತೆಯೇ ನೋಡದೆ ಹೆಣ್ಣೆಂದು ಗಂಡೆಂದು ನೋಡಿ ಉದ್ರೇಕಗೊಂಡು ತನುವಿನಿಂದಲೇ ತನುವನ್ನು ಹರಿದು ತಿನ್ನುತ್ತದೆ. ಲೋಹವನ್ನು ಲೋಹವೆಂದು ನೋಡದೇ ಬಣ್ಣದ ಲೋಹವನ್ನು ಬಂಗಾರವೆಂದು ನೋಡಿ, ಲೋಹಕ್ಕಾಗಿ ಯುದ್ಧ ಮಾಡುತ್ತದೆ. ತನುವಿನ ಸಂತಾನವನ್ನು ತನುವೇ ಕೊಂದು ಕಳ್ಳ ಕೊಲೆಗಡುಕ ರಾಜನ ಪಟ್ಟ ತನುವಿಗೆ ಕಟ್ಟಿ ಲೋಹಕ್ಕಾಗಿ ಹಪಹಪಿಸುತ್ತದೆ.

ತನುವಿನ ಸ್ಪರ್ಶ ತನುವಿಗೆ ತಿಳಿಯಲು ಸಾಧ್ಯವಾಗುತ್ತಿಲ್ಲ. ರುಚಿ ಅರುಚಿಯೆಂದು ಯುದ್ಧ ಮಾಡುತ್ತದೆ. ಸುಗಂಧ ದುರ್ಗಂಧವೆಂದು ಕಾದಾಡುತ್ತದೆ. ಅರಿವಿನ ಪರಿಮಳವನ್ನು ಮರೆತು ಹೋಗಿದೆ.

ಕಸ್ತೂರಿಯ ವಾಸನೆ ತನ್ನದೆ ಎಂದು ಮೃಗಕ್ಕೆ ಕಂಡು ಹಿಡಿಯಲು ಸಾಧ್ಯವಾಗುವುದಿಲ್ಲ. ಏಕೆಂದರೆ ಅದು ಮೃಗ. ಹೊಕ್ಕಳನ್ನು ಹೊರತುಪಡಿಸಿ ಎಲ್ಲೆಲ್ಲೋ ಹುಡುಕುತ್ತದೆ.

ಹಾಗೆಯೇ ತನು, ತನುವನ್ನು ಆವರಿಸಿದ ಮನದ ಪರಿಯಾಗಿದೆ.

ತನುವಿನಲ್ಲಿ ಸಂಗಮವಾದ ಅರಿವಿನ ಪರಿಮಳವನ್ನು ಮನಕ್ಕೆ ಹುಡುಕಲು ಸಾಧ್ಯವಾಗುವುದಿಲ್ಲ. ಭಗವದ್ಗೀತೆ ಬೈಬಲ್ ಕುರಾನ್‌ನಲ್ಲಿರುವ ಅರಿವು ಆಸ್ವಾದಿಸಲು ಹೋದರೆ ಮನದಲ್ಲಿರುವ ಮರೆವು ನಷ್ಟವಾಗಲು ಸಾಧ್ಯವೆ?

ಮನದಿಂದ ತನುವಿನ ಮೂಲಕ ಹೊರಬಂದ ಅಜ್ಞಾನ ತನುವಿನಲ್ಲಿಯೇ ಸಂಗಮವಾದ ಜ್ಞಾನ ಪ್ರಸಾದದಿಂದ ಮಾತ್ರ ತೊಲಗಲು ಸಾಧ್ಯವೇ ಹೊರತು ಅರಿವಿನ ಪುಸ್ತಕಗಳಿಂದ ಹೋಗಲು ಸಾಧ್ಯವಿಲ್ಲ.

ಕಲ್ಲನ್ನು ನೋಡಿ ದೇವರೆಂದು ಆರಾಧಿಸಲು ತನುವಿಗೆ ಸೂಚಿಸಿದ ಕಣ್ಣು ಮರವಿನ ಕಣ್ಣು. ಪೂಜೆಗೊಳಗಾದ ದೇವರನ್ನು ಕಲ್ಲೆಂದು ನೋಡುವ ಕಣ್ಣು ಅರಿವಿನ ಕಣ್ಣು. ಲೋಕದ ದೇವರು ಅರಿವಿನ ಕಣ್ಣಿಗೆ ಪ್ರಸಾದವಾದ. ಮನ ಸೃಷ್ಟಿ ಮಾಡಿದ ಐದು ಇಂದ್ರಿಯಗಳು ಐದು ಜ್ಞಾನೇಂದ್ರಿಯಗಳಿಗೆ ಪ್ರಸಾದವಾದವು. ಮನ ಘನಮನವಾಯಿತು; ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**50**

ಅಪರಸ್ಥಾನದಲ್ಲಿ ಆನಂದಬ್ರಹ್ಮವ ಭೇದಿಸುವ ಪರಿಯೆಂತೋ?
ಪೂರ್ವದಕ್ಷಿಣವೆಂಬ ದಿಕ್ಕುಗಳಲ್ಲಿ ಸಮನಿಸುವ
ಆತ್ಮ ಅಂತರ್ಯಾತ್ಮ ಭೂತಾತ್ಮ ಸರ್ವಾತ್ಮ ಪರಮಾತ್ಮವೆಂಬ
ಆತ್ಮಪಂಚಕಗಳೆಂಬವನು
ಹಿಂದು ಮುಂದರಿಯದೆ, ಮುಂದು ಹಿಂದೆಂದರಿಯದೆ
ಸಂಯೋಗದಲಿಕ್ಕಿ ಪ್ರಯೋಗಿಸಿಹೆನೆಂಬ ಯೋಗಿ ಕೇಳಾ;
ಪೂರ್ವವಾವುದು? ದಕ್ಷಿಣವಾವುದು?
ಪೂರ್ವದಲ್ಲಿ ದಿವಾಕರರು
ಹನ್ನೆರಡರ ಆನಂದ ಪ್ರಭೆಯಲ್ಲಿ ಭವಿಸಲ್ಪಟ್ಟ
ನಯನದ ಕಿರಣದ ಕೊನೆಯ ಮೊನೆಯ ಮೇಲೆ
ದಿವ್ಯಾಂಗಯೋಗ ಸಮನಿಸುವ ಪರಿಯೆಂತು ಹೇಳಾ?
ದಕ್ಷಿಣದಲ್ಲಿ ದಿಗ್ವಳಯ ಹದಿನಾಲ್ಕರ ವ್ಯಾಪ್ತಿಯ
ಸಂಚರಿಸದೆ ಸಮನಿಸುವ ಕೋಹಂ ತತ್ವಾರ್ಥದಿಂದತ್ತ
ನಾಹಂ ಪರಮಾರ್ಥದಿಂದತ್ತ
ಸೋಹಂ ಸದ್ಭಕ್ತಿಯ ಮುಟ್ಟದ ದಾಸೋಹ
ನಿನ್ನಲ್ಲಿ ಸಂಯೋಗವ ಎಂತು ಮಾಡುವೆ ಹೇಳಾ?
ಯೋಗಿ ನೀನು
ಯೋಗಕ್ಕೆ ಹರಿವಾವುದು? ಯೋಗಕ್ಕೆ ನೆಲೆಯಾವುದು?
ಮತ್ತೆ ಪೆರತನರಿಯದೆ
ಶಾಶ್ವತವು ನೀನೆ ನೀನೆ ಎಂದೆನ್ನು,
ಸಕಲನಿಷ್ಕಲದೊಳಗೆ ನೀನೆ ನೀನೆಯೆನ್ನಾ
ತಾತ್ಪರ್ಯವರ್ಮ ಕಳೆಗಳೊಳಗೆ ನೀನೆ ನೀನೆಯೆಂದೆನ್ನಾ.

ಓಂ ಗ್ರಾಂ ಫ್ರೀಂ ಘ್ರೂಂ ಎಂಬಕ್ಷರ
ಚತುಷ್ಟಯದ ಮೇಲೆ
ಶುದ್ಧ ಸಂಯೋಗವೆಂಬ ಗದ್ದುಗೆಯಿಕ್ಕಿ
ಅಕ್ಷರದ್ವಯದ ಆನಂದರಾಜ ಕುಳ್ಳಿದ್ದೈದಾನೆ ಜಪಿಸುತ.
ಆ ಜಪವು ನಿತ್ಯ, ಅದು ಮುಕ್ತಿ, ಅದು ಸತ್ಯ.
ಅದು ಪದಕ್ಕೆ ಫಲಕ್ಕೆ ಭವಕ್ಕೆ ದೂರ,
ವರ್ಣಾಶ್ರಯವ ಮೀರಿತ್ತು ತತ್ವ ಪ್ರಾಪಂಚಿಕವ ಜರಿಯಿತ್ತು.
ಮಂತ್ರಂಗಳ ಕೈಯಿಂದ ವಂದಿಸಿಕೊಂಡಿತ್ತು.
ಮೂರರಲ್ಲಿ ಭವಿಸಿತ್ತು, ಆರರಲ್ಲಿ ಫಲವಾಯಿತ್ತು.
ಮೂವತ್ತಾರರಲ್ಲಿ ಹಣಿತಿತ್ತು
ಯೋಗಿಗಳ ನಡೆಸಿತ್ತು ತತ್ವಮಸಿ ಸಂಗಮವಾಯಿತ್ತು.
ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆಂಬ
ನಿತ್ಯದಲ್ಲಿ ನಿತ್ಯವಾಯಿತ್ತು.

ಅಂಗದಲ್ಲಿ ಆನಂದಮಯವಾದ ಪರಬ್ರಹ್ಮವೇ ಸಂಗಮವಾಗಿದೆ. ಭ್ರಮೆ ಆವರಿಸಿಕೊಂಡಿದೆ. ಆವರಿಸಿಕೊಂಡ ಭ್ರಮೆ ತೊಲಗಲು ಬ್ರಹ್ಮನಿಂದ ಹೊರಬಂದ ಸೂತ್ರಗಳು ಬೇಕಾಗುತ್ತವೆ. ಆದರೆ ಸಕಲ ಸೂತ್ರಗಳನ್ನು ಶಾಸ್ತ್ರಗಳನ್ನು ಮನ ತನ್ನ ಭ್ರಮಾ ಬತ್ತಳಿಕೆಯಲ್ಲಿ ಹಾಕಿಕೊಂಡು ಒಂದೊಂದನ್ನೇ ತನ್ನ ಆಟಕ್ಕಾಗಿ ಹೊರಬಿಡುತ್ತದೆ.

ಅಂಗ ಒಂದೇ ಅಂಗದಲ್ಲಿ ಸಂಗಮವಾದ ಲಿಂಗಯ್ಯನು ಕೂಡಾ ಒಬ್ಬನೆ. ಅವನನ್ನು ತಿಳಿದು ಅವನೇ ಆಗಬೇಕಾದ ಮನ ಕೂಡಾ ಒಂದೇ ಆಗಿದೆ. ಆದರೂ ಮೂರು ಒಂದಾಗುತ್ತಿಲ್ಲ. ಈ ಮೂರೇ ಆರು ಸೂತ್ರಗಳನ್ನಾಗಿ ಮಾಡಿದೆ. ಆರಾರು ಸೂತ್ರಗಳೇ ಒಂದಕ್ಕೊಂದು ಸೀಳುತ್ತಾ ಸೀಳುತ್ತಾ ಮೂವತ್ತಾರು ತತ್ವಗಳಾಗಿ ನಿಂತಿವೆ. ಮನ ಪಂಡಿತನಾಗುವುದಕ್ಕೆ ಉತ್ಸುಕನಾಗಿ ನಿಂತುದರಿಂದ ಸೂತ್ರಗಳನ್ನು ಒದರಿ ಒದರಿ ಶಾಸ್ತ್ರಿಯಾಗಿದೆಯೇ ಹೊರತು; ಮನ ಘನ ಮನವಾಗಲು ಇಚ್ಛಿಸುತ್ತಿಲ್ಲ.

ಪೂರ್ವವಾವುದು? ದಕ್ಷಿಣವಾವುದು? ಕೋಹಂ ಯಾವುದು ನಾಹಂ ಯಾವುದು? ಸೋಹಂ ಯಾವುದು? ಬೇರೆ ಬೇರೆಯಾಗಿ ಮನ ಎಣಿಕೆ ಮಾಡುವುದು ಅದರ ಧರ್ಮ. ಅದು ಅರಿಯಲು ಹೋದರೆ ಬಯಲು. ಬಯಲಲ್ಲಿ ಪೂರ್ವ ಪಶ್ಚಿಮ ಉತ್ತರ ದಕ್ಷಿಣ ದಿಕ್ಕುಗಳನ್ನು ಎಣಿಸಲು ಸಾಧ್ಯವೇ.

ಮನಕ್ಕೆ ಎಣಿಕೆಯುಂಟು. ಅದು ಅಷ್ಟದಿಕ್ಕುಗಳನ್ನು ಹದಿನಾಲ್ಕರ ವ್ಯಾಪ್ತಿಯಲ್ಲಿ ಶಾಸ್ತ್ರದ ಮೂಲಕ ಹೇಳಿ ಕೇಳುಗರಿಂದ ಹೌದೌದೆಂದೆನ್ನಿಸಿಕೊಳ್ಳುತ್ತದೆ. ಮನವನ್ನು ತನುವನ್ನು ಸೃಷ್ಟಿ ಮಾಡಿ, ಇಡೀ ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿ, ತಾನು ಸೃಷ್ಟಿ ಮಾಡಿದ ತನು ಮನವನ್ನು ಒಂದು ಮಾಡಿ ಅದರ ಮೂಲಕ ಪರಮಾನಂದವನ್ನು ಅನುಭವಿಸಲು ಬಂದ ಅರಿವಿನ ಲಿಂಗಯ್ಯನಿಗೆ ಯಾವುದೂ ಇಲ್ಲ. ತಾನು ಸೃಷ್ಟಿ ಮಾಡಿದ ಸಕಲವನ್ನೂ ಒಂದು ಮಾಡಿ ನೋಡುವ ಶಕ್ತಿ ಆತನಿಗಿದೆ.

ಯೋಗಿ ನೀನು. ನಿನಗೆ ಅರಿವು ಯಾವುದು? ನೆಲೆ ಯಾವುದು? ಮತ್ತೊಂದನರಿಯದ ಶಾಶ್ವತನು ನೀನು. ಸಕಲದೊಳಗೆ ನೀನು ನಿಷ್ಕಲದೊಳಗೆ ನೀನು. ತಾತ್ಪರ್ಯವರ್ಮ ಕಳೆಗಳೊಳಗೂ

ನೀನೇ ನೀನು ತುಂಬಿರುವಿ.

ಸಕಲ ಅಕ್ಷರಗಳೊಳಗೂ ಭರಿತವಾದ ಅಕ್ಷರೋತ್ತಮನು ನೀನೇ ಆಗಿರುವಿ. ಶುದ್ಧ ಸಂಯೋಗವೆಂಬ ತನುವಿನ ಗದ್ದುಗೆಯ ಮೇಲೆ ಪರಮಾನಂದ ಭರಿತನಾದ ಪರಮ ಹಂಸನಾದ ಆನಂದ ರಾಜನಾಗಿ ಜಪಿಸುತ್ತ ಕುಳಿತಿರುವಿ. ಅದು ಲೋಕದ ಜಪದಂತಹ ಜಪವಲ್ಲ. ನಿನ್ನ ಜಪ ನಿತ್ಯ ಜಪ, ಅದು ಮುಕ್ತ ಜಪ. ಅದು ಸತ್ಯ ಜಪ. ಅದು ಪದಕ್ಕೆ ಫಲಕ್ಕೆ ಭವಕ್ಕೆ ದೂರವಾದ ಜಪ.

ವರ್ಣಾಶ್ರಮಗಳನ್ನು ಮೀರಿದ ಜಪ. ತತ್ವ ಪ್ರಾಪಂಚಿಕವನ್ನು ಜರಿದ ಜಪ. ಮಂತ್ರಗಳ ಮೂಲಕವೇ ವಂದಿಸಿಕೊಂಡ ಮಹಾಮಾಂತ್ರಿಕನು ನೀನು. ನಿನ್ನಿಂದ ಹುಟ್ಟಿದ ಮಂತ್ರ ನಿನಗೇ ಕೈಮುಗಿದು ಶಿರಬಾಗಿ ನಿಂತಿತು.

ಮೂರರಲ್ಲಿ ಭವಿಸಿತ್ತು . ಆರರಲ್ಲಿ ಫಲವಾಯಿತ್ತು . ಮೂವತ್ತಾರರಲ್ಲಿ ಹಣಿತಿತ್ತು. ಯೋಗಿಗಳನ್ನು ಕೈ ಹಿಡಿದು ನಡೆಸಿತ್ತು . ತನುವಿನಲ್ಲಿ ತತ್ತ್ವ ಭರಿತವಾಗಿ ತನು ತತ್ತ್ವವೇತ್ತ ತನುವಾಯಿತ್ತು . ತತ್ವಮಸಿ ಎಂದು ಕರೆಯಿಸಿಕೊಂಡು ಕಪಿಲಸಿದ್ಧ ಮಲ್ಲಯ್ಯನೇ ತಾನಾಗಿತ್ತು . ನಿತ್ಯದಲ್ಲಿ ನಿತ್ಯವಾಯಿತ್ತು .

**51**

**ಅಪ್ರಮಾಣನು ಗುರು ಅನಪ್ರಮಾಣನು ಶಿಷ್ಯ**
**ಅತ್ಯತಿಷ್ಠಾನಂದ ಜ್ಯೋತಿರ್ಮಯ**
**ಇಂತಪ್ಪ ಗುರುವಿನ ಆನಂದ ಮಠದೊಳಗೆ**
**ನಿಶ್ಚಿಂತನಾದ ಶಿಷ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.**

ಗುರುದೇವನು ಒಬ್ಬ ವ್ಯಕ್ತಿಯಲ್ಲ. ವ್ಯಕ್ತಿಯನ್ನು ಹೀಗೆ ಎಂದು ಪ್ರಮಾಣಿಸಿ ಹೇಳಬಹುದು. ವ್ಯಕ್ತಿಯೊಳಗಣ ಅವ್ಯಕ್ತ ಶಕ್ತಿಯಾತ. ವ್ಯಕ್ತಿಯನ್ನು ಆವರಿಸಿದ ಮನಕ್ಕೆ ಹಾಗೂ ತನುವಿಗೆ ಸದಾ ಪಾಠ ಮಾಡುವಾತ. ಈತನನ್ನು ಪ್ರಮಾಣಿಸಲು ಬರುವುದಿಲ್ಲ. ಹೀಗಾಗಿ ಅಪ್ರಮಾಣನು ಗುರು. ಅನಪ್ರಮಾಣನು ಶಿಷ್ಯ. ಶಿಷ್ಯನು ಕೂಡಾ ಪ್ರಮಾಣಕ್ಕೆ ನಿಲುಕದವನು ಅನಪ್ರಮಾಣನು.

ಗುರುದೇವನು ಕಾಣಬಾರದವನು. ಶಿಷ್ಯನು ಕೂಡಾ ಕಾಣಬಾರದವನು. ಅಂಗದಲ್ಲಿ ಸಂಗಮವಾದ ಅರಿವೇ ಗುರು. ಅಂಗವನ್ನು ಆವರಿಸಿದ ಮನವೇ ಶಿಷ್ಯ . ಇವರಿಬ್ಬರೂ ಕಾಣಬಾರದವರು. ಕಾಣಬಾರದ ಶಿಷ್ಯ ಕಾಣಬಾರದ ಗುರುವಿನ ಶ್ರೀಚರಣದಲ್ಲಿ ಲೀನವಾದಾಗ ಇಬ್ಬರೂ ಅಪ್ರಮಾಣರೇ ಆಗುತ್ತಾರೆ.

ಬಸವಣ್ಣ ಕಾಣಬಾರದ ಗುರುದೇವನನ್ನು ಕುರಿತು: ಜಗದಗಲ ಮುಗಿಲಗಲ ಮಿಗೆಯಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ. ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವೇ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ ಎಂದು ಹಾಡಿದ್ದಾರೆ.

ಅಂಗದಲ್ಲಿ ಸಂಗಮವಾದ ಪ್ರಮಾಣಿಸಲು ಬಾರದಂತಹ ಗುರುದೇವನನ್ನು ಅಂಗವನ್ನು ಆವರಿಸಿದ ಮನದಿಂದಲೇ ಕಂಡುಕೊಳ್ಳಬೇಕು. ಅರ್ಜುನ ಶ್ರೀಕೃಷ್ಣನನ್ನು ಕಂಡಂತೆ. ಆತನ ವಿಶ್ವರೂಪವನ್ನು ಕಂಡು ಬೆರಗಾದಂತೆ.

ಲೋಕಕ್ಕೆ ಇವರಿಬ್ಬರಾಗಿ ಕಂಡರೂ ಜ್ಞಾನ ಲೋಕಕ್ಕೆ ಅವರಿಬ್ಬರೂ ಒಬ್ಬರೇ ಆಗಿದ್ದಾರೆ. ದೇಹವನ್ನೇ ರಥ ಮಾಡಿಕೊಂಡು ಶ್ರೀಕೃಷ್ಣ ಸಾರಥಿಯಾಗಿ ಅರ್ಜುನನೊಂದಿಗೆ ಜ್ಞಾನ ಯುದ್ಧಕ್ಕೆ

ಹೊರಟಿದ್ದಾನೆ. ಕೃಷ್ಣ ಹೇಳಿದಲ್ಲಿ ಬಾಣ ಹೂಡಿದರೆ ಹುಲ್ಲು ಕಡ್ಡಿ ಕೂಡಾ ಬ್ರಹ್ಮಾಸ್ತ್ರವಾಗುತ್ತದೆ. ಅರ್ಜುನ ಅಜ್ಞಾನದ ಯುದ್ಧ ಗೆದ್ದು ನಿಶ್ಚಿಂತನಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

52

**ಅಪ್ಪಿನಲಾದ ಘಟವು ಅರ್ಪಿತದಲೆ ಲೀಯ,**
**ಇಪ್ಪತ್ತೈದೆಂದು ಕುರುಹಿಡುವೆ ಏಕೆಲೆ ಮನುಜಾ.**
**ತಾ ಹುಟ್ಟಿ ತಮ್ಮವ್ವೆ ಬಂಜೆಯೆಂಬ ನ್ಯಾಯದಲ್ಲಿ**
**ಬೇರೆ ವಿವರಿಸಿ ತೋರಬಲ್ಲಡದು ಯೋಗ.**
**ಅಭ್ಯಾಸ ಸಮಾಧಿಯಿಂ ಅನುಭವಿಗಳೆಲ್ಲರಿಗೆ**
**ಬಯಲ ಸಮಾಧಿಯಾಗದಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಲದಿಂದಲಾದ ತನು ಜಲದಲ್ಲಿಯೇ ಲೀನವಾಗಿ ಜಲವಾಗುವುದು. ಜಲ ಜಲಕ್ಕೆ ಅರ್ಪಿತ ಮಾಡುವ ಅವಶ್ಯಕತೆಯೂ ಇಲ್ಲ. ಜಲಗಟ್ಟಿ ಮಾಡಿ ಬೊಂಬೆಯನ್ನು ಮಾಡಿದರೆ ಮತ್ತೆ ಅದನ್ನು ಜಲದಲ್ಲಿ ಅದ್ದಬೇಕೆ? ಸ್ವಲ್ಪ ಸಮಯ ತೆಗೆದುಕೊಂಡು ಮತ್ತೆ ಅದು ತಂತಾನೆ ಜಲವಾಗದೆ?

ಮಂಜುಗಡ್ಡೆಯಾದದ್ದು ಜಲವೇ ಆಗಿದೆ. ಮತ್ತೆ ಮಂಜುಗಡ್ಡೆ ಕರಗಿ ಜಲವಾಗುವುದು ಜಲದ ಧರ್ಮವಾಗಿದೆ. ಹೀಗೆ ಜಲಬಿಂದು ಜೀವಜಲಬಿಂದುವಾಗಿ ತಂದೆಯ ಮುಖಾಂತರ ತಾಯಿ ಗರ್ಭ ಪ್ರವೇಶ ಮಾಡಿದೆ. ಜಲ ರಕ್ತವಾಗಿದೆ; ಜಲವೇ ಮಾಂಸವಾಗಿದೆ, ಜಲವೇ ಮೂಳೆಯಾಗಿದೆ, ಜಲವೇ ಮಜ್ಜಾ ಆಗಿದೆ, ಜಲವೇ ಮೇದಸ್ಸು ಆಗಿದೆ. ಇವು ಯಾವೂ ಸೋರದಂತೆ ಜಲವೇ ಸುಂದರವಾದ ಚರ್ಮವಾಗಿದೆ. ತಂತಾನೆ ಚರ್ಮದಿಂದ ಹೊಲಿದುಕೊಂಡು ಜಲಬೊಂಬೆಯಾಗಿ ಹೊರಬಂದು ಘಟವೆಂದು, ತನುವೆಂದು, ಅಂಗವೆಂದು ಅಂಗದಿಂದಲೇ ಕರೆಯಿಸಿಕೊಂಡಿದೆ.

ಜಲ ಜಲವಲ್ಲ ಬಯಲ ಗರ್ಭದಲ್ಲಿದ್ದ ಜಲಜನಕ ಮತ್ತು ಆಮ್ಲಜನಕಗಳೆರಡರನ್ನು ಬಯಲು ಒಂದು ಮಾಡಿ ತಾನು ಅದರಲ್ಲಿ ಒಳಹೊರಗೆನ್ನದಂತೆ ಸಂಗಮವಾಗಿ ಜಲವನ್ನಾಗಿಸಿದೆ. ಆ ಜಲವೇ ಅಂಗವಾಗಿ ಅದರಲ್ಲಿ ಬಯಲು ಲಿಂಗವಾಗಿ ಸಂಗಮವಾಗಿದೆ. ಹೀಗಾಗಿ ಅಂಗ ಲಿಂಗಾಂಗವೆಂದು ಕರೆಯಿಸಿಕೊಂಡಿದೆ. ಇಂತಹ ಲಿಂಗಾಂಗಕ್ಕೆ ಇಪ್ಪತ್ತೈದು ತತ್ವಗಳ ಅವಶ್ಯಕತೆಯಾದರೂ ಇದೆಯೇ? ಸಂಪದ್ಭರಿತ ನಿಧಿಯೇ ತಾನಾಗಿದ್ದು ಸಂಪತ್ತಿಗಾಗಿ ಹಪಹಪಿಸಿದಂತೆ ಆಗಲಿಲ್ಲವೆ?

ಹೀಗಾಗಿ ಉಪನಿಷತ್ಕಾರರು ಅಂಗವನ್ನು 'ತತ್ವಮಸಿ' ಎಂದು ಕರೆದರು. ತತ್ ತ್ವಂಅಸಿ ಎಂದರು. ತತ್ವ ನೀನೇ ಆಗಿದ್ದೀಯ; ಅದು ನೀನೆ ಎಂದು ನಿನ್ನನ್ನೇ ನೀನು ತಿಳಿ ಎಂದು ತಿಳಿದ ಅಂಗ, ಅಂಗಕ್ಕೆ ಹೇಳಿದ ಮಾತು ಇದು. ಇದು ಕೂಡಾ ಅಪಹಾಸ್ಯವೇ ಆಗಿದೆ. ಏಕೆಂದರೆ ಸ್ವತಃ ಬಯಲು ಬಯಲಿಗೆ ನೀನು ಬಯಲು ಎಂದು ಹೇಳಿದಂತೆ ಆಗಲಿಲ್ಲವೆ?

ಬಯಲು, ಬಯಲಿಂದಲೇ ಹುಟ್ಟಿ; ರೂಪವಾಗಿ ಅದಕ್ಕೆ ನೋಡಲು ಕಣ್ಣಾಗಿ, ಕೇಳಲು ಕಿವಿಯಾಗಿ, ಮೂಸಿಸಲು ಮೂಗಾಗಿ, ರುಚಿಸಲು ನಾಲಿಗೆಯಾಗಿ, ಮಾತನಾಡಲು ಬಾಯಿಯಾಗಿ ನೀನು ಬಯಲು ನಿನ್ನನ್ನು ಹಡೆದ ನಿಮ್ಮವ್ವ ಬಂಜೆ. ಆಕೆಗೆ ಮಕ್ಕಳಿಲ್ಲ. ಆಕೆಯ ಮಗ ನೀನು ಎಂದು ರೂಪವಾದ ಬಯಲು ಮತ್ತೊಂದು ರೂಪಕ್ಕೆ ಈ ಮಾತನ್ನು ಹೇಳಿದರೆ ಅದು ನಂಬುತ್ತದೆ ಎಂದರೆ ಯಾರಾದರೂ ಏನು ಮಾಡಿಯಾರು.

'ತತ್ವಮಸಿ' ವಾಕ್ಯದ ಮೂಲಕ ತತ್ವವೇ ತಾನಾದ ಬಯಲ ಬೊಂಬೆಗೆ ಮತ್ತೊಂದು

ತತ್ವವೇ ಮಾತನಾಡಿ ಹೇಳುತ್ತದೆ ಎಂದರೆ ಇದು ಯೋಗವೇ ಇರಬೇಕು. ಈ ಯೋಗವನ್ನು ಬಯಲು ಬಯಲ ಮೂಲಕವೇ ಪಾಲಿಸಿದಂತೆ ನಟಿಸಿ ಅಭ್ಯಾಸ ಮಾಡುವ ಸಮಾಧಿ ಪುರುಷರು ಎಂದು ಕರೆಯಿಸಿಕೊಳ್ಳುವ ಅನುಭಾವಿಗಳಿಗೆ ಬಯಲ ಸಮಾಧಿಯಾಗಲು ಸಾಧ್ಯವೇ ಇಲ್ಲ ಎಂದು ಸಿದ್ಧರಾಮ ಶಿವಯೋಗಿಗಳು ಸಕಲರಿಗೂ ಕೇಳುವಂತೆ ಡಂಗುರು ಹೊಡೆದಿದ್ದಾರೆ.

**53**

**ಅರ್ಪಿಸೇನೆಂದೆಂಬೆ? ಅರ್ಪಿತವೇತಕ್ಕೆ?**
**ಅರ್ಪಿತವಾರಿಗೆ? ಅರ್ಪಿತದ ಪರಿಯೆಂತುಟಯ್ಯ?**
**ಅರ್ಪಿತದ ಮುಖವ ಬಲ್ಲವರಾರು? ಚೆನ್ನಬಸವಣ್ಣನಲ್ಲದೆ.**
**ಅರ್ಪಿತವುಳ್ಳಡೆ ಕಲ್ಪಿತವೇಕಯ್ಯ ಕಾಡಿಹವು?**
**ಅರ್ಪಿಸುವ ಭೇದವ ಚೆನ್ನಬಸವಣ್ಣ ಬಲ್ಲ.**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯ.**
**ಅರ್ಪಿಸಿ ಸುಖಿ ಚೆನ್ನಬಸವಣ್ಣ, ಸಾವಧಾನಿ ನಿರಂತರಂ.**

ತನು ಮನ ಧನ ಗುರುವಿಂಗೆ ಅರ್ಪಿಸಬೇಕೆಂದು ಗುರುಗಳಾದವರು ಶಿಷ್ಯನಿಗೆ ಹೇಳುವರು. ಅರ್ಪಿಸಲು ಬರುತ್ತದೆಯೇ? ತನುವಿನ ಮೂಲಕ ಗುರುದೇವನ ಸೇವೆ ಮಾಡಬಹುದು; ಹಾಗೆ ಮಾಡುವುದರಿಂದ ತನುವನ್ನು ಅರ್ಪಿಸಿದಂತೆ ಆಗುತ್ತದೆಯೇ? ಮನವನ್ನು ಗುರುವಿಗೆ ಅರ್ಪಿಸಲು ಸಾಧ್ಯವೆ?

ಧನವೆಂದರೆ ದ್ರವ್ಯವಲ್ಲ; ಅದು ತನುವಿನಲ್ಲಿಯೇ ಸಂಗಮವಾದ ತನುವಿನದೇ ಆದ ಸಂಪತ್ತು. ಅರಿವಿನ ಸಂಪತ್ತು. ಈ ಅರಿವಿನ ಸಂಪತ್ತು ಇದ್ದರೂ ಕೂಡಾ ತನುವಿನಲ್ಲಿ ತನುವನ್ನು ಆವರಿಸಿದ ಮನ ತನಗೆ ಬೇಕಾದ ವೇದ ಆಗಮ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಅಭ್ಯಾಸ ಮಾಡಿ ಅದನ್ನೇ ಅರಿವೆಂದು ತಿಳಿದು ತನುವಿನಲ್ಲಿ ತುಂಬಿಕೊಂಡಿದೆ. ಇಂತಹ ಧನವನ್ನು ಪಡೆಯಲು ಗುರುದೇವನಿಗೆ ಸಾಧ್ಯವಾಗುತ್ತದೆಯೇ ಹೇಗೆ?

ತನು ಮನ ಧನವನ್ನು ಯಾರಿಗೆ ಅರ್ಪಣೆ ಮಾಡಬೇಕು? ಅರ್ಪಿತದ ಮುಖವನ್ನು ತೋರಬಲ್ಲವರು ಅಥವಾ ಹೇಳಬಲ್ಲವರು ಯಾರಾದರೂ ಇದ್ದಾರೆಯೇ? ತನು ಮನ ಧನವನ್ನು ಅರ್ಪಿಸಿದ ಸಮರ್ಥನನ್ನು ಹುಡುಕಲು ಅದಾರಿಗಾದರೂ ಸಾಧ್ಯವಾಗಿದೆಯೇ? ಆತನ ಕುರುಹಿನ ಪರಿಚಯವಾದರೂ ಇದೆಯೇ ಹೇಗೆ ಎಂದು ಅರಿಯಲು ಹೋದರೆ ಭಯವಾಗುತ್ತದೆ. ಇಂತಹ ವಚನಗಳ ಸೂತ್ರಗಳು ಸಾಕಷ್ಟಿವೆ. ಅರ್ಥೈಸಿಕೊಂಡು ಅರಿವಿಗೆ ತಂದುಕೊಳ್ಳುವ ಗೋಜಿಗೆ ಯಾರೂ ಹೋಗುವುದಿಲ್ಲ.

ವಿಶ್ವವಿದ್ಯಾಲಯಗಳಿಗೆ ಸಾಮರ್ಥ್ಯವಿಲ್ಲ. ಮಠಮಾನ್ಯಗಳ ಅಧಿಪತಿಗಳಾದರೋ ಉಪಜೀವನಕ್ಕಾಗಿ ಪೀಠವನ್ನು ಅಲಂಕರಿಸಿದ್ದಾರೆ. ತಾವು ತಿಳಿದು ಸಮಾಜಕ್ಕೆ ಹೇಳಬೇಕಾದವರು ಕೈಚೆಲ್ಲಿ ಕುಳಿತಾಗ ತನುವಿನ ಕೈ ಹಿಡಿದು ತನುವಿಗೆ ಸಹಜ ಧರ್ಮವನ್ನು ತನುವಿಗೆ ತೋರುವವರಾದರೂ ಯಾರು ಎಂದು ತನಗೆ ತಾನೇ ಪ್ರಶ್ನಿಸಿಕೊಳ್ಳುವ ಗಹನವಾದ ಆಶಯವುಳ್ಳ ವಚನವಿದು.

ಸಿದ್ಧರಾಮ ಶಿವಯೋಗಿಗಳಿಗೆ ಚೆನ್ನಬಸವಣ್ಣ ಅರ್ಪಿಸುವ ಅರ್ಪಿತದ ಸೂತ್ರವನ್ನು ಹೇಳುತ್ತಾ ಅಜ್ಞಾನದ ಇಡೀ ತನುವನ್ನು ತನ್ನದೇ ಆದ ಮಹಾಜ್ಞಾನದ ತನುವಿಗೆ ಅರ್ಪಿಸುವ

ಬಗೆಯನ್ನು ತನುವಿನ ಕೈ ಹಿಡಿದು ಕರೆದುಕೊಂಡು ಹೋಗಿ ಬಿಟ್ಟಾಗ ಇಡೀ ತನುವಿಗೆ ತನುವೇ ಜಗದಗಲ ಮುಗಿಲಗಲಕ್ಕೂ ಚಾಚಿಕೊಂಡು ತನ್ನ ವಿರಾಟಸ್ವರೂಪವನ್ನು ಮೆರೆಯುತ್ತದೆ.

ಅರ್ಪಿಸುವ ಭೇದವನ್ನು ಚೆನ್ನಬಸವಣ್ಣ ಮಾತ್ರ ಬಲ್ಲ. ಆತ ಅರ್ಪಿಸಿ ಸುಖಿಸಿದಾತ. ನಿರಂತರ ಸಾವಧಾನಿ. ಸಮಾಧಾನಿ ಸಮತತ್ವವನ್ನು ಸದಾ ಹೊಂದಿದಾತ.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಚೆನ್ನಬಸವಣ್ಣ ಅರ್ಪಿಸಿದ ಸುಖಿ ಎಂದು ತನ್ನದೇ ಆದ ಮಹಾಜ್ಞಾನದೊಂದಿಗೆ ತಾನೇ ಮಾತನಾಡುತ್ತಿದ್ದಾನೆ. ಸಿದ್ಧರಾಮ ಶಿವಯೋಗಿ ಕಪಿಲಸಿದ್ಧ ಮಲ್ಲಯ್ಯನೊಂದಿಗೆ ಮಾತನಾಡಿದ ಪ್ರಸಂಗವನ್ನು ಯಥಾವತ್ತಾಗಿ ಓದುಗರಿಗೆ ಉಣಬಡಿಸಿದ್ದಾನೆ. ಹೀಗಾಗಿ ಇದು ಸಾಮಾನ್ಯವಾದ ಸೂತ್ರವಲ್ಲ. ತನುವಿನ ಅಜ್ಞಾನ ತನುವಿನಲ್ಲಿಯೇ ಸಂಗಮವಾದ ಅರಿವಿನ ತನುವಿಗೆ ಅರ್ಪಣೆ ಮಾಡುವ ಮಹಾಸೂತ್ರ. ಅರ್ಪಿತ ಮಾಡಿದಡೆ ತನುವಿನ ಸಕಲ ಕಲ್ಪಿತಗಳೆಲ್ಲ ಜ್ಞಾನಾಜ್ಞಿಯಲ್ಲಿ ಬೆಂದು ಹೋಗುವ ಸೂತ್ರ!

**54**

**ಅಭ್ಯಂತರದಲಿಪ್ಪ ಗಂಡ**
**ಗುರುವಿನ ಅನುಮತದಿಂದ ಸರ್ವಾಂಗಕ್ಕೆ ಬಂದಾನು.**
**ಮನೆಯನಿಂಬುಮಾಡು ಮದವಳಿಗೆ,**
**ಮನವ ಶುದ್ಧವ ಮಾಡು ಮದವಳಿಗೆ,**
**ಮನೆಯಲಿದ್ದೆರಡನೂ ಎಬ್ಬಟ್ಟವ್ವಾ.**
**ಸಿದ್ಧ ಶುದ್ಧ ಪ್ರಸಿದ್ಧದಿಂದ, ದೀಕ್ಷೆ ಶಿಕ್ಷೆ ಸ್ವಾನುಭಾವದಿಂದ ಎಬ್ಬಟ್ಟಿ**
**ಮನೆಯ ಮಂಗಳವ ಮಾಡವ್ವಾ.**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆಂಬ ಗಂಡ**
**ಮನೆಯೊಳಕೆ ಬಂದು ಮತ್ತೊಬ್ಬರಿದ್ದಡೆ ಸೈರಿಸ.**

ಹೆಂಡತಿಯ ಮೇಲೆ ಮುನಿಸಿಕೊಂಡ ಗಂಡ ಗುರುವಿನ ಅನುಗ್ರಹದಿಂದ ಸರ್ವಾಂಗದಲ್ಲಿ ಸಂಚರಿಸಿಯಾನು. ಲಿಂಗಯ್ಯನೆಂಬ ಗಂಡನಿಗೆ ಅಂಗವೇ ಮನೆ. ಆತ ಬರುವುದರೊಳಗೆ ಮನೆಯನು ಇಂಬು ಮಾಡು. ಮನವ ಶುದ್ಧ ಮಾಡು. ಮದವಳಿದು ಮದುವಳಿಗಳಾಗು. ಮನೆಯಲ್ಲಿ ಇದ್ದ ಮದ ಮತ್ಸರಗಳನ್ನು ಹೊರಗೆ ಚೆಲ್ಲಿ ಮದುಮಗನಿಗಾಗಿ ದಾರಿ ನೋಡು.

ಮನೆಯಲ್ಲಿದ್ದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬವರನ್ನು ಹೊರಗೆ ಹಾಕು. ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಕುಟ್ಟಿ ಹೊರಗೆ ಚೆಲ್ಲು. ಮನೆಯೊಳಗೆ ಬಂದ ಗಂಡ ಮನೆಯಲ್ಲಿ ಒಬ್ಬರಿದ್ದಡೂ ಸೈರಿಸ.

''ಎಮ್ಮ ನಲ್ಲನು ಏಕಾಂತಂಬೊಕ್ಕನು; ಬೇಗ ಬೇಗ ಹೊರ ನಡೆಯಿರಣ್ಣಗಳಿರಾ ಒಬ್ಬರಿದ್ದಡೂ ಸೈರಿಸ ಕಪಿಲಸಿದ್ಧ ಮಲ್ಲಿಕಾರ್ಜುನ''. ಅರಿವಿನ ಮಲ್ಲಯ್ಯನಿಗೆ ಮನವೆಂಬ ಸತಿಯನಿತ್ತು ಮದುವೆ ಮಾಡಿದ್ದಾರೆ. ಗಂಡನ ಮನೆಗೆ ಕಳುಹಿಸಲು ಬಂದ ಅಣ್ಣ ತಮ್ಮಂದಿರು ಅಲ್ಲಿಯೇ ಉಳಿದಿದ್ದಾರೆ. ಅವರಿದ್ದ ಮನೆಯಲ್ಲಿ ಹೆಂಡತಿಯೊಂದಿಗೆ ಏಕಾಂತದ ಸುಖವನ್ನು ಅನುಭವಿಸಲು ಗಂಡ ಒಪ್ಪುವುದಿಲ್ಲ. ಅವರನ್ನು ಹೊರಗೆ ಕಳುಹಿಸಲು ಕೂಡಾ ಹೆಂಡತಿಗೆ ಹೇಳುವುದಿಲ್ಲ. ಹೀಗೆ ಕಾಲ ವ್ಯರ್ಥವಾಗಿ ವ್ಯಯವಾಗುತ್ತದೆ.

ಏಕಾಂತವನ್ನು ಒಲ್ಲದ ಗಂಡನನ್ನು ಏಕಾಂತಕ್ಕೆ ಕರೆಯಲು ಹೆಂಡತಿಗೂ ಸಾಧ್ಯವಾಗುವುದಿಲ್ಲ. ಹೆಂಡತಿ ತನಗೆ ತಾನೇ ತಿಳಿದುಕೊಂಡು ಅರಿಷಡ್ವರ್ಗಗಳನ್ನು ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಹೊರಗಡೆ ಅಟ್ಟಲೇಬೇಕು. ಇಲ್ಲವಾದರೆ ಅವರು ಸತಿಪತಿಗಳ ಏಕಾಂತಕ್ಕೆ ಅಡ್ಡಿಪಡಿಸುವರು.

ಇಪ್ಪತ್ತೊಂದು ಮಂದಿ ಬಂಟರನ್ನು ಹೊರಗಡೆ ಕಳುಹಿಸಿ ಮನೆಯ ಮಂಗಳವ ಮಾಡವ್ವಾ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ಗಂಡ ಮನೆಯೊಳಗೆ ಬಂದು ನಿನ್ನೊಂದಿಗೆ ಏಕಾಂತದಲ್ಲಿ ವಿರಮಿಸುವನು ಅವ್ವಾ. ಮತ್ತೊಬ್ಬರಿದ್ದಡೆ ಸೈರಿಸ ತಾಯಿ.

**55**

**ಅಭ್ಯಾಸದ ಅನುಭಾವಿಗಳಿಗೆ ಅಧಿಕ ಭಕ್ತಿ ಎಂತಪ್ಪುದಯ್ಯಾ?**
**ವಾಕ್ಯದಲ್ಲಿ ನುಡಿದು, ಕಾಯದಲ್ಲಿ ಮಾಡಲು**
**ಭಕ್ತಿಯಪ್ಪುದೆ ಮಾನಸವು ಮುಟ್ಟದನ್ನಕ್ಕರ?**
**ಮಾನಸ ಭಕ್ತಿಸಂಪನ್ನರಾದಡೆ ತಾವು ನೀನಪ್ಪುದೇನರಿದು?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶರಣರು ಮನದಿಂದ ನುಡಿಯಲಿಲ್ಲ. ಹರಿಯುವ ಮನವನ್ನು ಜ್ಞಾನದಲ್ಲಿರಿಸಿ ಜ್ಞಾನದಿಂದ ನುಡಿದರು. ಮನ ಮತ್ತು ಜ್ಞಾನ ತನುವಿನ ಸಾಧನಗಳು.

ಗ್ರಂಥಗಳನ್ನು ಅಭ್ಯಸಿಸಿ ಅನುಭವ ಪಡೆದ ಪಂಡಿತನಿಗೆ ವಾಕ್ಯದಲ್ಲಿ ನುಡಿದದ್ದನ್ನು ಕಾರ್ಯಗತಕ್ಕೆ ತರುವುದು ಸಾಧ್ಯವಾಗುವುದಿಲ್ಲ. ಏಕೆಂದರೆ ಮನ, ಜ್ಞಾನ ಮುಟ್ಟಿ ನುಡಿಯಲಿಲ್ಲ. ಪಂಡಿತ ಮನ ಸಂಪನ್ನನೇ ಹೊರತು ಜ್ಞಾನ ಸಂಪನ್ನನಲ್ಲ. ಜ್ಞಾನ ತಾನಾಗಿ ನುಡಿದವನು ಮಾತ್ರ ನುಡಿದಂತೆ ನಡೆಯಬಲ್ಲ. ಕಪಿಲಸಿದ್ಧ ಮಲ್ಲಿಕಾರ್ಜುನನು ತಾನೇ ಆಗ ಬಲ್ಲ. ಇದು ಸಿದ್ಧರಾಮ ಶರಣರ ಮಾತು.

ಉದಾ: ಒಬ್ಬ ಹಸಿವಿನಿಂದ ಬಳಲುತ್ತಿದ್ದ. ಓಣಿಯಲ್ಲಿ ಯಾರೂ ಅವನಿಗೆ ಅನ್ನ ನೀಡಲಿಲ್ಲ. ಪಂಡಿತನೊಬ್ಬ ಹೊರ ಬಂದು ಹಸಿವಿನಿಂದ ಬಳಲುವವನನ್ನು ನೋಡಿದ. ಹರಕು ಬಟ್ಟೆ ಧರಿಸಿದ ಅವನು ಐದಾರು ದಿನಗಳಿಂದ ಊಟ ಮಾಡಿರಲಿಲ್ಲ. ಒಂದಿಷ್ಟು ಹಳೆ ಬಟ್ಟೆ ಊಟ ತಂದು ನೀರು ಕೊಟ್ಟ, ತೃಪ್ತಿಯಿಂದ ಉಂಡು ಬಾಯಿತುಂಬಾ ಹರಸಿದ. ಸ್ವಾಮಿ ಯಾವುದಾದರೂ ಕೆಲಸ ಕೊಡಿ ನಿಮ್ಮ ಸೇವೆ ಮಾಡಿಕೊಂಡಿರುವೆ ಎಂದ. ಆಯಿತು ಎಂದು ಮನೆಯಲ್ಲೇ ಇಟ್ಟುಕೊಂಡ ಪಂಡಿತ. ಓಣಿಯ ಜನ ಪಂಡಿತನ ಕೆಲಸಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರು.

ಎರಡು ದಿನ ಕಳೆಯಿತು. ಪಂಡಿತ ಹಸಿದ ವ್ಯಕ್ತಿಯನ್ನು ಮನಸಾರೆ ಬಡಿದು ಹೊರ ಹಾಕಿದ. ಓಣಿಯ ಜನ ನೋಡಿ ಮಾತನಾಡಿಕೊಂಡರು, ಹೀಗೇಕೆ ಎಂದು ಗೊಣಗಿದರು. ಹಸಿದ ವ್ಯಕ್ತಿಗೆ ಆಭರಣದ ಮೇಲೆಯೂ ಆಭರಣ ಹೊತ್ತ ತನುವಿನ ಮೇಲೆಯೂ ಹಸಿವಾ ಗಿತ್ತು. ಈ ಎರಡೂ ಹಸಿವುಗಳನ್ನು ಪಂಡಿತ ಸಹಿಸಲಿಲ್ಲ. ಹಸಿದ ವ್ಯಕ್ತಿಗೆ ಅನ್ನ ನೀಡಿ ಪುಣ್ಯ ಕಟ್ಟಿಕೊಂಡ ಎಂದು ಹೇಳಿ ಪಂಡಿತನನ್ನು ಹೊಗಳಿದ ಜನವೂ ಸಹಿಸಲಿಲ್ಲ.

ಹಸಿದವನಿಗೆ ಅನ್ನ ನೀಡಿದರೆ ಪುಣ್ಯ ಎಂದು ಓದಿ ಕೇಳಿ ತಿಳಿದು ಕೊಂಡಿದ್ದ, ತನ್ನಂತೆ ಇರುವ ವ್ಯಕ್ತಿಗೆ ಭಿಕ್ಷುಕನೆಂದು ಅನ್ನ ನೀಡಿದ್ದ. ನೀಡಿದ ತನ್ನನ್ನು ದಾನಿ ಎಂದುಕೊಂಡಿದ್ದ. ಅನ್ನದ ಹಸಿವು ನೀಗಿಸಿದ್ದ, ಆಭರಣ ಮತ್ತು ತನುವಿನ ಹಸಿವಿನ ತೃಪ್ತಿ ಅಡಗಿಸುವುದು ಸಾಧ್ಯವಾಗಲಿಲ್ಲ.

ಅನ್ನವೂ ತನ್ನದಲ್ಲ, ಅದು ಬೆಳೆದ ಭೂಮಿಯೂ ತನ್ನದಲ್ಲ, ಭೂಮಿಯೊಳಡಗಿದ್ದ ಚಿನ್ನವೂ ತನ್ನದಲ್ಲ, ಅನ್ನ ಭೂಮಿ ಚಿನ್ನ ಹಾಗೂ ತನುವಿನ ಮೇಲೆ ಬೆಳೆದ(ವಿಷಯ) ಆಸೆಯೂ ತನ್ನದಲ್ಲ. ಇವು ಜಗಕ್ಕಿಕ್ಕಿದ ವಿಧಿ. ತನ್ನದೆಂಬುದು ಜ್ಞಾನ ರತ್ನ ಕಾಣಾ ಎಂದು ಹೇಳಿದ ಅಲ್ಲಮ ಪ್ರಭುಗಳ ಸೂತ್ರ ಪಂಡಿತನ ಅನುಭಾವಕ್ಕೆ ಬರಲಿಲ್ಲ. ವೇದಿಕೆಗೆ ಮತ್ತು ಲೋಕಕ್ಕೆ ಮಾತ್ರ ಬಳಕೆಯಾಗಿ ಮನ ಸಂಪನ್ನನಾದ. ಜ್ಞಾನ ಸಂಪನ್ನನಾಗಲಿಲ್ಲ.

ಮಾನಸ ಭಕ್ತಿ ಸಂಪನ್ನರಾದಡೆ ತಾವು ನೀನಪ್ಪುದೇನರಿದು? ಕಪಿಲ ಸಿದ್ಧ ಮಲ್ಲಿಕಾರ್ಜುನಾ:

ಅಭ್ಯಾಸ ಪಂಡಿತರು, ಓದಿ ಕೇಳಿ ನೋಡಿ ತಿಳಿದ ಅನುಭವಿಗಳು ಮನ ಮನಸಂಪನ್ನರೇ ಹೊರತು ಜ್ಞಾನ ಸಂಪನ್ನರಲ್ಲ. ಮನವೂ ತನ್ನದೇ, ಜ್ಞಾನವೂ ತನ್ನದೇ, ತನುವೂ ತನ್ನದೇ. ಮನ ಜ್ಞಾನದೆಡೆಗೆ ವಾಲಿದರೆ ಜ್ಞಾನದ ತನು. ಮನ ವಸ್ತುವಿನೆಡೆಗೆ ವಾಲಿದರೆ ಮನದ ತನು. ಮನದ ತನುವಿಗೆ ವಸ್ತುವೇ ಪ್ರಧಾನ. ಜ್ಞಾನದ ತನುವಿಗೆ ವಸ್ತುವಿನ ಸತ್ಯವೇ ಪ್ರಧಾನ. ಮನದಿಂದ ಭಕ್ತಿ ಸಂಪನ್ನರಾದವರಿಗೆ ನಿನ್ನ(ಜ್ಞಾನ)ನ್ನು ತಿಳಿದು ನೀನಾಗಲು ಬರುವುದೇ? ಕಪಿಲಸಿದ್ಧ ಮಲ್ಲಿಕಾರ್ಜುನ (ಜ್ಞಾನ) ತಾನೇ ಆಗಲು ಬರುವುದೇ? ಎಂದು ಪ್ರಶ್ನಿಸುತ್ತ ಜ್ಞಾನ ತಾನಾಗುವ ಸರಳ ಮಾರ್ಗದ ಸೂತ್ರ ಹೇಳಿದ್ದಾರೆ ಸಿದ್ಧರಾಮ ಶರಣರು.

**56**

**ಅಯ್ಯ ನಿನ್ನ ವಿಕಳತೆಯಿಂದ**
**ಹಲವು ಪರಿಯಲಿ ಭ್ರಮಿತನಾದೆನಯ್ಯಾ.**
**ಅಯ್ಯಾ ಗಿರಿಗಹ್ವರದೊಳಗೆ**
**ಹಲವು ಪರಿಯಲಿ ಅರಸಿ ತೊಳಲಿ ಬಳಲಿದೆನಯ್ಯಾ.**
**ಕಂಡೆ, ಕಂಡೆ, ನೀನಪ್ಪ ತಾವ.**
**ನೀನು ಭಕ್ತಿ ಕಾರಣ ಪರಶಿವಮೂರ್ತಿಯಪ್ಪುದನು ಕಂಡೆ ಕಂಡೆ**
**ನಿನ್ನವರಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನಾ.**

ಗಂಡ ಅರಿವಿನ ಮಲ್ಲಯ್ಯ ಹಾಗೂ ಮನವೆಂಬ ಹೆಂಡತಿ ಮಹಾದೇವಿ ಇವರಿಬ್ಬರೂ ಅಂಗವೆಂಬ ಒಂದೇ ಮನೆಯಲ್ಲಿ ಇದ್ದರೂ ಗಂಡನ ವಿರಹದ ಯಾತನೆ ಹೆಂಡತಿಗೆ ಉಂಟಾಗಿದೆ. ಹಲವು ಪರಿಯಲ್ಲಿ ಭ್ರಮಿತಳಾಗಿದ್ದಾಳೆ.

ಗಿರಿಗಹ್ವರದಲ್ಲಿ, ದೇವಾಲಯದಲ್ಲಿ, ಪುಣ್ಯಕ್ಷೇತ್ರಗಳಲ್ಲಿ ಹುಡುಕಿ ಹುಡುಕಿ ಬಳಲಿ ಬೆಂಡಾಗಿದ್ದಾಳೆ. ಗುರುವಿನ ಅಂತಃಕರಣದಿಂದಾಗಿ ಕಂಡೆ ಕಂಡೆ ಎಂದು ಸಂತೋಷದಿಂದ ಕುಣಿ ಕುಣಿದಾಡುತ್ತಿದ್ದಾಳೆ.

ಕಂಡೆ, ಕಂಡೆ, ನೀನಪ್ಪತಾವ. ನೀನು ಭಕ್ತಿ ಕಾರಣ ಪರಶಿವಮೂರ್ತಿಯಪ್ಪುದನು ಕಂಡೆ ಕಂಡೆ ನಿನ್ನವರಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನಾ:

ನೀನಂದರೆ ಹೊರಗಿನವನಲ್ಲವೆಂದು ನನಗೆ ತಿಳಿಯಿತು. ನೀನು ಹೊರಗಿಲ್ಲವೆಂಬುದು ಕೂಡಾ ನನಗೆ ತಿಳಿಯಿತು. ನಿನ್ನನ್ನು ಕಂಡು ನೀನೇ ಆದ ಮಹಾಂತರು ನಿನ್ನ ಕುರಿತು ನನಗೆ ತಿಳಿಹೇಳಿದರು. ಹೀಗಾಗಿ ಕಂಡೆ, ಕಂಡೆ, ನೀನಪ್ಪತಾವ.

ಏನೂ ತಿಳಿಯದ ಭವಿಯಾದ ನಾನು ಭಕ್ತನಾಗಿ ನಿನ್ನನ್ನು ಆರಾಧಿಸುತ್ತಿದ್ದೆ. ನೀನಂದರೆ

ನಾನೇ ಮಾಡಿದ ಕಲ್ಲಲ್ಲಿ ಮೂಡಿದವನೇ ನೀನೆಂದು ತಿಳಿದು ನಿನ್ನನ್ನು ಪೂಜಿಸುತ್ತಿದ್ದೆ. ಎಷ್ಟೋದಿನಗಳ ಬಳಿಕ ನಿನ್ನನ್ನು ಕಂಡವರು ಕಂಡಂತೆ ನನಗೆ ಹೇಳಿದರು; ನೀನು ಮಾಡಿದ ದೇವರು ದೇವರಲ್ಲವೆಂದು. ನೀನು ಮಾಡುವ ಭಕ್ತಿ ಕೂಡಾ ಭಕ್ತಿ ಅಲ್ಲವೆಂದು. ನಿನ್ನನ್ನು ಮಾಡಿದ ದೇವರೇ ದೇವರು. ಆತ ನಿನ್ನಲ್ಲಿಯೇ ಇದ್ದಾನೆ. ನಿನ್ನ ಭವಿತನವನ್ನು ಕಳೆದುಕೊಂಡು ಆತನನ್ನು ಪೂಜಿಸು. ನೀನು ಭಕ್ತನಾದುದು ನಿನಗೆ ತಿಳಿಯುತ್ತದೆ. ನೀನು ಅವನೇ ಆಗುವ ದಾರಿ ನಿನಗೇ ತಿಳಿಯುತ್ತದೆ.

ನೀನು ಭಕ್ತಿ ಕಾರಣ ಪರಶಿವಮೂರ್ತಿಯಪ್ಪುದನು ಕಂಡೆ ಕಂಡೆ ನಿನ್ನವರಲ್ಲಿ. ನನ್ನಲ್ಲಿಯೇ ನಿನ್ನನ್ನು ನೋಡಿ ನಾನೇ ನೀನಾದೆ. ಬೆಳಕನ್ನು ನೋಡಿದ ಕತ್ತಲು ಬೆಳಕಾದಂತೆ. ನೋಡಲು ಬಂದ ಕತ್ತಲನ್ನು ಬೆಳಗಿ ಬೆಳಕಾಗಿಸಿದಂತೆ. ಕಂಡೆ ಕಂಡೆ ಭಕ್ತಿ ಕಾರಣ ಪರಶಿವಮೂರ್ತಿಯಪ್ಪುದನು.

**57**

**(ಅಯ್ಯಾ, ನೀನೇಕೆ ಬಾರೆಯೊ ಹೇಳಯ್ಯ)**
**ಅಯ್ಯಾ! ನೀ ಬಾರಯ್ಯ!**
**ಬಂದು ಎನ್ನ ಹೃದಯ ಮನ ಹಸನವ ಮಾಡಿ ನಿಲ್ಲಯ್ಯ.**
**ಹಾ! ಅಯ್ಯಾ! ಅಯ್ಯಾ! ನೀ ಬಾರ! ನಿನ್ನ ಧರ್ಮ!**
**ಕಪಿಲಸಿದ್ದ ಮಲ್ಲಿನಾಥಯ್ಯ.**

ತನ್ನ ತನುವಿನಲ್ಲಿಯೇ ತನ್ಮಯವಾದ ತನ್ನಂತೆಯೇ ಇರುವ ಪರಮಾತ್ಮನನ್ನು ದಾರಿಗಾಣದೆ ಅಯ್ಯಾ! ನೀ ಬಾರಯ್ಯಾ! ಎಂದು ವಿಲವಿಲನೆ ಒದ್ದಾಡುತ್ತಾ ವಿರಹದಿಂದ ಕರೆಯುವುದು. ಬಂದು ಎನ್ನ ಹೃದಯ ಮನ ಶಾಸನವ ಮಾಡಿ ನಿಲ್ಲಯ್ಯ ಎಂದು ಅಂಗಲಾಚಿ ಬೇಡಿ ಕರೆಯುವುದು.

ಹಾ! ಎನ್ನಯ್ಯನೇ ಎನ್ನ ಪರಮಾತ್ಮನೆ! ನೀ ಬಾರ! ನೀನು ಬಂದು ಎನ್ನ ಮನದೊಳು ಸೇರುವುದು ನಿನ್ನ ಧರ್ಮ! ಕಪಿಲಸಿದ್ಧ ಮಲ್ಲಿನಾಥಯ್ಯನೆ ಎಂದು ಹೃದಯ ತುಂಬಿ ಕರೆದಿದ್ದಾರೆ ಪರಮಾತ್ಮನನ್ನು.

ತಾನು-ಪರಮಾತ್ಮ ಬೇರಲ್ಲ. ಇಬ್ಬರೂ ಒಂದೇ. ಪರಮಾತ್ಮನಿಲ್ಲದೆ ತಾನಿಲ್ಲ. ಆದರೂ ಆತ ಯಾರು ಎಂದು ತನಗೆ ತಿಳಿದಿಲ್ಲ. ತನ್ನ ತನುವಿನೊಳಗೆ ಆತ ತನ್ಮಯವಾಗಿದ್ದರೂ ಆತ ಯಾರೆಂದು ತನಗೆ ತಿಳಿದಿಲ್ಲ. ತಾನು ಯಾರೆಂಬುದು ತನಗೆ ತಿಳಿದಿಲ್ಲ. ತನ್ನನ್ನು ತಾನು ಯಾರೆಂದು ತಿಳಿಯಲು ಹೋದರೆ ತನ್ನ ತನುವಿನೊಳಗೆ ತನ್ಮಯವಾದ ಪರಮಾತ್ಮನ ಇರುವಿಕೆ ತನಗೆ ತಿಳಿಯುತ್ತದೆ. ಆಗ ತಾನು ಆ ಪರಮಾತ್ಮನ ವಾರಸುದಾರನೆಂದು; ನಾನು ಆ ಪರಮಾತ್ಮನ ಬಳಿ ಬಂದವನೆಂದು ಅರಿವಾಗುತ್ತದೆ.

ನನ್ನ-ಆತನ ಸಂಬಂಧ ನನಗೆ ಅರಿವಾದ ಮೇಲೂ ಆತ ನನಗೆ ದರುಶನ ಕೊಟ್ಟು ನನ್ನನ್ನು ಮೈದಡವಿ, ಏಳು ನನ್ನ ಕಂದನೇ ಎಂದು ಎಬ್ಬಿಸಲಾರ. ಏಕೆಂದರೆ ಆತ ನಾನಿದ್ದಲ್ಲಿಗೆ ಬರಲಾರ ಬಂದು ನನ್ನನ್ನು ಎಬ್ಬಿಸಲಾರ. ನಾನೇ ಆತನಿದ್ದಲ್ಲಿಗೆ ಹೋಗಿ ಆತನ ಚರಣಕಮಲಗಳಲ್ಲಿ ದುಂಬಿಯಂತೆ ಮೈಮರೆತು ಮಕರಂದವ ಹೀರುವ ಮಾರ್ಗ ನನಗೆ ಗೊತ್ತಾಗಬೇಕು.

ನಾನು ಎಂದರೆ ಯಾರು? ಹೆಣ್ಣೇ ಅಥವಾ ಗಂಡೆ? ಜಾತಿ ಮತ ಪಂಥದವನೆ?

ಅಥವಾ ಹಿಂದು ಮುಸಲ್ಮಾನ ಕ್ರೈಸ್ತನೆ? ಕೃಷಿಕನೆ-ವ್ಯಾಪಾರಿಯೇ? ಶ್ರೀಮಂತನೆ-ಬಡವನೆ, ಭಿಕ್ಷುಕನೆ, ಅಧಿಕಾರಿಯೆ, ಗುಮಾಸ್ತನೆ? ಶಾಸಕನೆ-ಸಚಿವನೆ? ಪಾಕಿಸ್ತಾನಿಯೇ-ಭಾರತೀಯನೆ? ನಾನು ಎಂದರೆ ಯಾರು? ಈ ನಾನು ಹಿಡಿದು ನನ್ನಲ್ಲಿಯೇ ಇರುವ ಆತನನ್ನು ಹುಡುಕಲು ಹೋದರೆ ಆತ ಸಿಗುವುದಿಲ್ಲ. ನನ್ನ ಧರ್ಮಕ್ಕೂ ಆತನ ಧರ್ಮಕ್ಕೂ ಅಜಗಜಾಂತರ ವ್ಯತ್ಯಾಸ, ನನ್ನ ಧರ್ಮವೇ ಬೇರೆ, ಆತನ ಧರ್ಮವೇ ಬೇರೆ.

ನಾನು ಪರಮಾತ್ಮನ ಧರ್ಮದ ಕುಡಿಯಾದರೂ ನನ್ನದೇ ಆದ ನಾನು ಎನ್ನುವ ಅಹಂಕಾರಿ, ಧರ್ಮದ ಸಾಮ್ರಾಜ್ಯವನ್ನು ಕಟ್ಟಿಕೊಂಡು ಆತನನ್ನು ಮರೆತಿದ್ದೇನೆ. ನನ್ನದೇ ಆದ ಸಾಮ್ರಾಜ್ಯವನ್ನು ನಾನು ಆಳುತ್ತಿದ್ದೇನೆ. ಈ ಅಹಂಕಾರ ವೆಂಬ ಆನೆಯ ಮೇಲೆ ಕುಳಿತು ಕುದುರೆಯ ಮೇಲೆ ಕುಳಿತು ಆತನನ್ನು ಕರೆದರೆ ಆತ ಬರಲಾರ. ನನ್ನ ಕಂದನೇ ಎಂದು ಬರಸೆಳೆದು ಅಪ್ಪಿಕೊಳ್ಳಲಾರ.

ನಾನು ಸ್ಥಾಪನೆ ಮಾಡಿದ ಸುಳ್ಳು ಸಾಮ್ರಾಜ್ಯವನ್ನು ನಾನೇ ನಷ್ಟ ಮಾಡಿಕೊಂಡು ಆತನಿದ್ದಲ್ಲಿಗೆ ನಾನು ಪಯಣಿಸಬೇಕು. ಅಂದರೆ ಮಾತ್ರ ಆತ ನನಗೆ ಒಲಿಯುತ್ತಾನೆ.

ನಾನು ಕಟ್ಟಿದ ಸಾಮ್ರಾಜ್ಯವನ್ನು ನಾನೇ ನಷ್ಟ ಮಾಡುವುದೆಂದರೇನು? ಅದು ತನಗೆ ಸಾಧ್ಯವೆ? ಸುಳ್ಳಿನ ಸುಖದಲ್ಲಿ, ಸುಳ್ಳಿನ ಧರ್ಮದಲ್ಲಿ ನನಗೆ ಅಪಾರವಾದ ಮೋಹ ಇರುವಾಗ, ಅಪಾರವಾದ ನಂಬಿಕೆ ಇರುವಾಗ ನನ್ನ ಧರ್ಮವನ್ನು ನಾನು ನಷ್ಟ ಮಾಡಲು ಸಾಧ್ಯವೆ?

ಕ್ರೈಸ್ತನಾಗಿ ಚರ್ಚಿಗೆ ಹೋಗಿ ನಿನ್ನನ್ನು ಪ್ರಾರ್ಥಿಸುವುದು ನನಗೆ ಸುಖ. ಮಸೀದಿಗೆ ಹೋಗಿ ನಮಾಜಿನ ಮೂಲಕ ನಿನ್ನನ್ನು ಪ್ರಾರ್ಥಿಸುವುದು ನನಗೆ ಸುಖ. ಮಂದಿರಕ್ಕೆ ಹೋಗಿ ನಿನ್ನನ್ನು ಆರಾಧಿಸುವುದು ನನಗೆ ಸುಖ. ಇದೆಲ್ಲ ನನ್ನ ಧರ್ಮ ಕೂಡಾ. ನನ್ನ ಧರ್ಮದಿಂದ ನಾನು ನಿನ್ನನ್ನು ಆರಾಧಿಸುತ್ತೇನೆ. ನನ್ನಲ್ಲಿಯೇ ಇರುವ ನಿನ್ನ ಧರ್ಮವನ್ನು ನಾನು ಪಾಲಿಸುತ್ತಿಲ್ಲ. ನಿನ್ನ ಧರ್ಮ ನಿನಗೆ; ನನ್ನ ಧರ್ಮ ನನಗೆ. ಅಯ್ಯಾ! ನೀ ಬಾರಯ್ಯ! ಬಂದು ಎನ್ನ ಹೃದಯ ಮನ ಶಾಸನವ ಮಾಡಿ ಎನ್ನಲ್ಲಿ ನೀನು ನೆಲೆ ನಿಲ್ಲಯ್ಯಾ ಎಂದು ನನ್ನ ಧರ್ಮದಿಂದ ಕೂಗಿ ಕರೆದರೆ ನೀನು ಬರಲು ಸಾಧ್ಯವೆ? ನಿನ್ನ ಧರ್ಮ ನಿನಗೆ; ನನ್ನ ಧರ್ಮ ನನಗೆ.

ನಿನ್ನ ಧರ್ಮವೂ ನನ್ನ ಧರ್ಮವೂ ಒಂದೇ ಎಂದು ನನಗೆ ಗೊತ್ತಾಗಬೇಕಲ್ಲ! ನಿನ್ನ ಧರ್ಮ ಹಿಡಿದು ನಿನ್ನನ್ನು ಆರಾಧಿಸುವ ಶಕ್ತಿ ನನಗೆ ಬರಬೇಕಲ್ಲ! ಆಗ ಮಾತ್ರ ನಾನು ನನ್ನ ಧರ್ಮ ಕಳೆದುಕೊಂಡು ನನ್ನಲ್ಲಿಯೇ ಇರುವ ನಿನ್ನ ಧರ್ಮ ಪಾಲಿಸಿ ನಿನ್ನಲ್ಲಿ ಲೀನವಾಗಲು ಸಾಧ್ಯ. ನಾನು ಎನ್ನುವ ಅಹಂಕಾರ ನಿನ್ನಲ್ಲಿ ಕಳೆದು ಹೋಗಿ ಆ ನಾನೇ ನೀನಾಗಲು ಸಾಧ್ಯ. ನಿನ್ನ ಧರ್ಮ ಹಿಡಿದು ನೋಡಲು ಹೋದರೆ ನೋಡಿದ ನಾನು ಎನ್ನುವ ಅಹಂಕಾರದ ತನುಗಳೆಲ್ಲ ಭಸ್ಮವಾಗಿ ನೀನೇ ಆಗಿ ಕಾಣುವಿ.

ಹಿಂದು ಮುಸಲ್ಮಾನ ಕ್ರೈಸ್ತ ಜೈನ ಬೌದ್ಧ ಪಾರ್ಸಿ ಎಂದು ತನುವಿಗಂಟಿದ ಅಜ್ಞಾನ ತನುವಿನಲ್ಲಿರುವ ನಿನ್ನ ಜ್ಞಾನ ಧರ್ಮದಿಂದಲೇ ಸುಟ್ಟು ಬೂದಿಯಾಯಿತು. ನಿನ್ನ ಧರ್ಮದಿಂದ ಬೆಳಗಿದ ತನು ಬೆಳಗಿಂಗೆ ಬೆಳಗಾಗಿ ಬೆಳಗಿತು. ನಿನ್ನ ಬೆಳಕಿನಿಂದ ಹುಟ್ಟಿದ ಕತ್ತಲು ನಿನ್ನ ಬೆಳಕಿನಿಂದಲೇ ಕಳೆಯಿತು.

ನಿನ್ನ ಕಾಣುವ ಹಂಬಲದಿಂದಾಗಿ ನನ್ನ ಕತ್ತಲೆಯ ಧರ್ಮ ಸೃಷ್ಟಿಯಾಯಿತು. ನಿನ್ನ ಬೆಳಕಿನ ಧರ್ಮದಿಂದಲೇ ನನ್ನ ಕತ್ತಲೆ ಧರ್ಮ ನಷ್ಟವಾಯಿತು!

58

**ಅಯ್ಯ ಬಂದಾನವ್ವಾ, ತನು ಚಿತ್ತ ಶುದ್ಧವಾಗಿರು.**
**ಅಯ್ಯ ಬಂದಾನವ್ವಾ, ಮನವ ಮಂಚವ ಮಾಡಿ ಪಚ್ಚಡಿಸಿರು.**
**ಅಯ್ಯ ಬಪ್ಪುದ ಕಂಡಳು ಚಿದಂಗನೆ.**
**ಅಯ್ಯ, ಶುದ್ಧ ಸಂಗಮಕೆ ಒಬ್ಬನೆ ಬಂದನು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು.**

ತನ್ನ ಜ್ಞಾನ ತನಗೆ ದೊರಕುವುದು ಸುಲಭದ ಮಾತಲ್ಲ. ಅದಕ್ಕೆ ತನ್ನದೇ ಆದ ಪ್ರಯತ್ನಬೇಕು. ಬಾಲ್ಯದಿಂದಲೂ ತನುವಿನಲ್ಲಿ ತುಂಬಿಕೊಂಡ ಬೇಕು ಬೇಡಗಳನ್ನೆಲ್ಲ ಖಾಲಿ ಖಾಲಿಯಾಗಿಸಬೇಕು. ಭಗವದ್ಗೀತೆ, ಬೈಬಲ್, ಕುರಾನ್‌ಗಳಲ್ಲಿರುವ ಸಂಪತ್ತೇ ನಿಜವಾದ ಸಂಪತ್ತೆಂದು ತಿಳಿದು ತುಂಬಿಕೊಂಡದ್ದನ್ನು ಹೊರಚೆಲ್ಲಬೇಕು. ಅವೆಲ್ಲ ಹೊರಬಂದದ್ದು ತನುವುನಿಂದಲೇ. ತನುವಿನಿಂದ ಬಂದದ್ದನ್ನು ತನು ಮತ್ತೆ ತನುವಿನಲ್ಲಿ ಇಟ್ಟುಕೊಳ್ಳಲಾರದು. ಒಂದು ವೇಳೆ ಇಟ್ಟುಕೊಂಡರೆ ಅದು ನಂಜಾಗಿ ತನುವಿಗೆ ಕಾಡುವುದು.

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನು ತನುವಿನಲ್ಲಿಯೇ ಪ್ರಕಟವಾಗಬೇಕೆಂದರೆ ತನು ಚಿತ್ತ ಶುದ್ಧವಾಗಿರಬೇಕು. ಮನವನ್ನೇ ಮಂಚವನ್ನಾಗಿಸಿಕೊಂಡು ಸದಾ ಸಿದ್ಧಳಾಗಿರಬೇಕು. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಾದಿ ಅಣ್ಣ ತಮ್ಮಂದಿರನ್ನು ಹೊರಗೆ ತಳ್ಳಿ ಅಯ್ಯನ ಬರುವಿಕೆಗಾಗಿ ಶೃಂಗಾರ ಮಾಡಿಕೊಂಡು ಚಿದಂಗನೆ ಕಾತುರದಿಂದ ಕಾಯಬೇಕು.

ತನು ಮನ ಧನವನ್ನು ಧಾರೆ ಎರೆದು ಖಾಲಿಖಾಲಿಯಾಗಿ ಕಾದು ಕುಳಿತ ಸಿದ್ಧರಾಮ ಶಿವಯೋಗಿಗಳು ಗುರುದೇವನ ಸುಖವನ್ನು ಅನುಭವಿಸಿದ್ದಾರೆ. ಅಯ್ಯನನ್ನು ಆಲಿಂಗಿಸಿಕೊಂಡು ಅರ್ಧನಾರೀಶ್ವರಳೇ ತಾನಾಗಿ ಪರಮಾನಂದವನ್ನು ಅನುಭವಿಸಿದ್ದಾರೆ. ಆ ಅನುಭವದ ಮಾರ್ಗವನ್ನು ಓದುಗರಿಗೆ ಈ ಸೂತ್ರದ ಮೂಲಕ ಹಂಚಿಕೊಂಡಿದ್ದಾರೆ.

ಆತನ ಈ ಭಾಷೆ ಓದುಗರಿಗೆ ತಿಳಿಯುವುದೋ ಇಲ್ಲವೋ ಗೊತ್ತಿಲ್ಲ. ಸುತ್ತಿ ಬಳಸಿ ಬೆಡಗಿನಿಂದ ನುಡಿದ ಭಾಷೆಯಲ್ಲ ಇದು. ಅಯ್ಯನನ್ನು ಬರಮಾಡಿಕೊಳ್ಳುವ ಕಾತುರ ಹೆಚ್ಚಾದಂತೆಲ್ಲ ಲೌಕಿಕ ಭಾಷೆ ತಂತಾನೆ ಬದಲಾಗಿ ಅಂಗದಲ್ಲಿಯೇ ಸಂಗಮವಾದ ಅರಿವಿನ ಗುರುದೇವನನ್ನು ಬರಮಾಡಿಕೊಳ್ಳುವ ದೇವ ಭಾಷೆಯಾಗಿ ಮಾರ್ಪಾಡು ಆಗುತ್ತದೆ. ಲೌಕಿಕರಿಗೆ ಈ ಭಾಷೆ ಜಟಿಲ. ಗುರುದೇವನನ್ನು ಬರಮಾಡಿಕೊಳ್ಳುವ ಕಾತುರವುಳ್ಳ ತನುಗಳಿಗೆ ಸರಳ.

ತನು ಮನ ಧನ ಖಾಲಿ ಮಾಡುವುದು ಸರಳವಲ್ಲ. ತನುವಿನಲ್ಲಿ ಮನದಲ್ಲಿ ತಾನು ಗಳಿಸಿದ ಅಜ್ಞಾನದ ಧನವೇ ತುಂಬಿರುವಾಗ ತನುವಿನಲ್ಲಿ ಸಂಗಮವಾದ ಜ್ಞಾನ ತನುವಿಗೆ ಹೇಗೆ ಒಲಿಯುತ್ತದೆ?

ಧನ ಅಂದರೆ ಸಂಪತ್ತು. ತಾನು ಗಳಿಸಿದ ಕರೆನ್ಸಿ, ಭೂಮಿ, ವಡವೆ, ಶೇರುಪತ್ರಗಳನ್ನು ಒಂದೇ ದಿನದಲ್ಲಿ ದಾನಮಾಡಿ ಕಳೆದುಕೊಳ್ಳಬಹುದು. ಆದರೆ ತಾನು ಗಳಿಸಿದ ಪಾಂಡಿತ್ಯ ಮತ್ತು ಇತರ ಸಂಬಂಧಗಳನ್ನು ಕಳೆದುಕೊಳ್ಳುವುದು ಜಟಿಲ.

ನೋಡಿದ ದೃಶ್ಯ ಕಣ್ಣಿನಲ್ಲಿ ಸಂಗ್ರಹವಾಗಿದೆ. ಕೇಳಿದ ಶಬ್ದ ಕಿವಿಯಲ್ಲಿ ಸಂಗ್ರಹವಾಗಿವೆ. ಮುಟ್ಟಿದ ರುಚಿಸಿದ ಮೂಸಿಸಿದ ಅಜ್ಞಾನಗಳೆಲ್ಲ ಅಯಾ ಭಾಗದಲ್ಲಿ ಸಂಗ್ರಹವಾಗಿವೆ.

ಸಂಗ್ರಹವಾದ ಅಜ್ಞಾನದ ಸಂಪತ್ತನ್ನು ಕಳೆದುಕೊಂಡಾಗ ತನು ಶುದ್ಧವಾಗುತ್ತದೆ. ಮನ ಶುದ್ಧವಾಗುತ್ತದೆ. ಚಿತ್ತ ಶುದ್ಧವಾಗುತ್ತದೆ. ಆದರೆ ಬಾಹ್ಯ ಸಂಪತ್ತನ್ನು ಕಳೆದುಕೊಂಡಂತೆ ತನುವಿನಲ್ಲಿ ಸಂಗ್ರಹವಾದ ಅಜ್ಞಾನದ ಸಂಪತ್ತನ್ನು ಕಳೆದುಕೊಳ್ಳಲು ಬರುವುದಿಲ್ಲ. ಹಾಗೆ ಕಳೆದುಕೊಂಡೇ ಗುರುವಿನೊಂದಿಗೆ ಸಂಗಮವಾಗಬೇಕೆಂಬ ಹಠ, ಛಲ ಉಂಟಾದರೆ ಗುರುದೇವ ಈ ಜನ್ಮದಲ್ಲಿ ದೊರೆಯಲಾರ.

ನನ್ನ ಜ್ಞಾನ ನನಗೆ ದೊರೆಯಲೇ ಬೇಕು. ಅದು ನನ್ನ ಜನ್ಮಸಿದ್ಧ ಹಕ್ಕು ಎಂದು ಹಠ ಹಿಡಿದಾಗ ತನಗೆ ತಾನೇ ಹೊಳೆಯುತ್ತದೆ. ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ಮಾರ್ಗ ತೋರುತ್ತಾನೆ. ಇಲ್ಲ ತೋರುವ ಗುರುದೇವ ತನಗೆ ದೊರಕುತ್ತಾನೆ.

ತನುವಿನಲ್ಲಿ ಗುರುದೇವನ ತನುವೂ ಇದೆ. ಆತನನ್ನು ಹುಡುಕಿ ಆತನಲ್ಲಿ ಒಂದಾಗುವ ಬಯಕೆ ಉಳ್ಳ ನನ್ನ ತನುವೂ ಇದೆ. ಹೀಗಾಗಿ ತನುಗಳು ಮೂರು! ಇತರರಿಗೆ ಒಂದು ತನು ಮಾತ್ರ ಕಾಣುತ್ತದೆ ಗುರುದೇವನತ್ತ ಪಯಣಿಸುವ ತನಗೆ ಮಾತ್ರ ಮೂರು ತನುಗಳು ಕಾಣುತ್ತವೆ. ನಾನು ಗುರುದೇವನ ತನುವನ್ನು ಅಪ್ಪಿಕೊಂಡು ಆ ತನುವಿನಲ್ಲಿಯೇ ಸಂಗಮಗೊಂಡಾಗ ನಾನು ಎನ್ನುವ ತನು ಸಂಪೂರ್ಣ ಖಾಲಿಯಾಗುತ್ತದೆ. ಗುರುದೇವನ ತನುವೊಂದೇ ಉಳಿಯುತ್ತದೆ. ಅದೇ ಬುದ್ಧ ಮಹಾವೀರ ವಿರಾಟ ಸ್ವರೂಪಿ ಎಂದು ಕರೆಯಿಸಿಕೊಳ್ಳುತ್ತದೆ. ಅಯ್ಯ, ಶುದ್ಧ ಸಂಗಮನಾಗಿ ಒಬ್ಬನೇ ಉಳಿಯುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ತಾನೇ ಆಗುತ್ತಾನೆ.

**59**

**ಅಯ್ಯ ಬಂದಾನು ಆನಂದ ಮಂಟಪಕ್ಕೆ,**
**ಎಚ್ಚತ್ತಿರಿರೋ ದ್ವಾರಕಿಂಕರರು;**
**ಎಚ್ಚತ್ತಿರಿರೋ ಅವಸರಿಗರು.**
**ಅಯ್ಯ ಸುತ್ತಿಮುತ್ತಿಗೆಗೊಳಗಾದನಾದಡೆ**
**ಪಟ್ಟಣ ಸರ್ವಸ್ವವೂ ವಶವಹುದು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ಹಿಡಿಗಟ್ಟಿಗೊಳಗಹನು.**

ಅಂಗ ಎನ್ನುವುದೊಂದು ಲಿಂಗದ ಆಲಯ. ಅದು ಆನಂದ ಮಂಟಪ; ಹಾಗೂ ಕಲ್ಯಾಣ ಮಂಟಪವೂ ಹೌದು. ಇದನ್ನು ಕಂಡುಹಿಡಿದುಕೊಳ್ಳಬೇಕಾದುದು ಮನ. ಲಿಂಗವನ್ನು ಕಂಡುಕೊಳ್ಳಬೇಕಾದ ಮನ ಅಂಗವನ್ನು ಆವರಿಸಿರುವುದರಿಂದ ಸದಾ ಆನಂದ ಮಂಟಪವೇ ಆಗಿರಬೇಕಾದ ಅಂಗದಲ್ಲಿ ದ್ವಾರಕಿಂಕರರು, ಅವಸರಿಗರು ಹುಟ್ಟಿಕೊಂಡಿದ್ದಾರೆ. ಲಿಂಗಾಂಗವಾಗಬೇಕಾದ ಅಂಗವು ಚಕ್ರವ್ಯೂಹದ ಕೋಟೆಯಾಗಿದೆ. ಸಮರ್ಥ ಮಾತ್ರ ದ್ವಾರಕಿಂಕರರನ್ನು ಅವಸರಿಗರನ್ನು ದೂರ ಸರಿಸಿ, ಅರಿಷಡ್ವರ್ಗಗಳನ್ನು, ಅಷ್ಟಮದಗಳನ್ನು, ಸಪ್ತ ವ್ಯಸನಗಳನ್ನು ದಾಟಿ ಆನಂದ ಮಂಟಪಕ್ಕೆ ಕಾಲಿಟ್ಟು ಪರಮಾನಂದವನ್ನು ಪಡೆಯುತ್ತಾನೆ.

ಅಂಗ ಕುರುಕ್ಷೇತ್ರವೂ ಹೌದು, ಧರ್ಮಕ್ಷೇತ್ರವೂ ಹೌದು. ಮನಕ್ಕೆ ಇಚ್ಛೆಯಾದರೆ ಕುರುಕ್ಷೇತ್ರವನ್ನಾಗಿ ಮಾಡಬಹುದು. ಮನಕ್ಕೆ ಸದಿಚ್ಛೆಯಾದರೆ ಧರ್ಮಕ್ಷೇತ್ರವನ್ನಾಗಿಯೂ ಮಾಡಬಹುದು. ವ್ಯಾಸಮಹರ್ಷಿಗಳು ಸರ್ವಾಂಗಗಳಿಗೆ ಅಂಗದ ಮಹಿಮೆ ತಿಳಿಯಲೆಂದು ಅಂಗದಲ್ಲಿ ಕೌರವರನ್ನು, ಪಾಂಡವರನ್ನು ಸೃಷ್ಟಿ ಮಾಡಿದರು. ದ್ರೋಣ ಭೀಷ್ಮರೆಂಬ

ಆಚಾರ್ಯರನ್ನು ಸೃಷ್ಟಿಸಿದರು. ಏನೂ ಕಾಣದ ಕುರುಡ ಧೃತರಾಷ್ಟ್ರನನ್ನು, ಕಂಡರೂ ಕಾಣದಂತೆ ಮಾಡಿಕೊಂಡ ಗಾಂಧಾರಿಯನ್ನು ಸೃಷ್ಟಿಸಿದರು. ಇವರೆಲ್ಲ ಅವಸರಿಗರು; ದ್ವಾರಕಿಂಕರರು.

ಅವಸರಿಗರನ್ನು ದ್ವಾರಕಿಂಕರರನ್ನು ಗೆದ್ದು ಪಟ್ಟಣದ ಸರ್ವಸ್ವವನ್ನು ವಶಪಡಿಸಿಕೊಂಡಾತ ಮಹಾಜ್ಞಾನಿ ಶ್ರೀಕೃಷ್ಣ ಮಾತ್ರ. ಈತನನ್ನು ಕೂಡಾ ವ್ಯಾಸರು ಅಂಗದಲ್ಲಿಯೇ ಸೃಷ್ಟಿಸಿದರು. ಅಂಗವೆನ್ನುವುದು ಲಿಂಗಾಂಗ! ಅದು ಕೈಲಾಸ ಪಟ್ಟಣ; ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ವಾಸಮಾಡುವ ಸುಕ್ಷೇತ್ರ. ಇಂತಹ ಕ್ಷೇತ್ರವನ್ನು ಕುರುಕ್ಷೇತ್ರವನ್ನಾಗಿ ಮಾಡಿಕೊಳ್ಳುವುದೆ? ಹೀಗೆ ಮಾಡಿಕೊಳ್ಳುವುದು ದ್ವಾರಕಿಂಕರರಿಗೆ ಅವಸರರಿಗೆ ತರವಲ್ಲ. ಮಲ್ಲಿಕಾರ್ಜುನನಿಗೆ ಇಚ್ಛೆಯಾದರೆ ಕ್ಷಣಾರ್ಧದಲ್ಲಿ ಪಟ್ಟಣ ಸರ್ವಸ್ವವೂ ಆತನಿಗೆ ವಶವಹುದು. ಅಂಗವನ್ನು ಆವರಿಸಿದ ಮನಕ್ಕೆ ಗೊತ್ತಾಗಬೇಕು; ಅಂಗ ಲಿಂಗಯ್ಯನಿರುವ ಸುಕ್ಷೇತ್ರವೆಂದು!

ಮನದಿಂದಲೇ ಹುಟ್ಟಿದ ದ್ವಾರಕಿಂಕರರು, ಮನದಿಂದಲೇ ಹುಟ್ಟಿದ ಅವಸರಿಗರು, ಮನದಿಂದಲೇ ಹುಟ್ಟಿದ ಅರಿಷಡ್ವರ್ಗಗಳು ಮನದಿಂದಲೇ ಹುಟ್ಟಿದ ಸಪ್ತವ್ಯಸನಗಳು ಎಚ್ಚತ್ತು ಲಿಂಗಯ್ಯನ ದರ್ಶನ ಪಡೆಯಲು ಬಂದ ಮನಕ್ಕೆ ದಾರಿ ಮಾಡಿಕೊಡುತ್ತವೆ. ಲಿಂಗ ದರ್ಶನ ಮಾಡಿಕೊಂಡ ಮನ ಘನಮನವಾಗುತ್ತದೆ. ದಾಸನಾಗುತ್ತದೆ. ಲಿಂಗಕ್ಕೆ ಶರಣು ಹೋಗಿ ಶರಣನಾಗುತ್ತದೆ. ಶರಣ ಸತಿಯಾಗಿ ಲಿಂಗ ಪತಿಯಾಗುತ್ತದೆ. ಸತಿಯ ಹಿಡಿಗಟ್ಟಿಗೆ ಒಳಗಾದ ಶಿವ ಅರ್ಧನಾರೀಶ್ವರನೆಂದು ಕರೆಯಿಸಿಕೊಂಡು ಅಂಗದ ಮೂಲಕ ದರ್ಶನಕೊಡುತ್ತಾನೆ. ಕಾಯ ಕೈಲಾಸವಾಗುತ್ತದೆ.

**60**

**ಅಯ್ಯ, ಮನದ ಜಡ ಮಣ್ಣ ಕಳೆದುದಯ್ಯಾ.**
**ಶಾಂತ ಉದಕದೊಳಗಿಕ್ಕಿ ತೊಳೆವೆ ನೋಡಯ್ಯಾ.**
**ಅದರುದಕವನೆ ಮಾಡಿ ಯೋಗ ಕಂಪನಿಕ್ಕಿ ಮೊರವೆ ನೋಡಯ್ಯ.**
**ಅದನೊಂದೆಡೆ ತೆಗೆದು ಬಂದು ಬರುಗಾಣದಲಿಕ್ಕಿ ಹಿಳಿವೆ ನೋಡಯ್ಯ.**
**ಹಿಳಿದ ರಸದ ಕಂಪ ತೊಡೆವೆಡೆಯನೊಬ್ಬನೆ**
**ಕಪಿಲಸಿದ್ಧಮಲ್ಲಿಕಾರ್ಜುನ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಪರಿಚಯ ಅಂಗವನ್ನು ಆವರಿಸಿದ ಮನಕ್ಕೆ ಆಗುವುದೊಂದೆ ತಡ ಮನದ ಜಡಮಣ್ಣು ಕೂಡಲೇ ಕಳೆದು ಹೋಗುವುದು. ಪರಮಶಾಂತಿಯ ಅರಿವಿನ ಉದಕದಿಂದಲೇ ಗುರುದೇವನು ಮನದ ಜಡಮಣ್ಣನ್ನು ತೊಳೆಯುವನು.

ಅರಿವಿನ ಉದಕವನ್ನು ಮಾಡಿ ಮನ ಘನದಲ್ಲಿ ಬೆರೆಸಿ ಯೋಗ ಕಂಪನು ಇಕ್ಕಿ ಅದರ ಪರಿಮಳದಿಂದ ಪರಮಾನಂದವನ್ನು ಉಂಟು ಮಾಡುವನು.

ಮಣ್ಣಲ್ಲಿ ಉದಕ ಬೆರೆತರೆ ಅದು ಕೆಸರು ಆಗುವುದು. ಗುರುದೇವನ ಕರುಣೆಯಿಂದ ಉದಕದಲ್ಲಿಯೇ ಜ್ಞಾನೋದಕ ಹುಟ್ಟಿ ಮನವೆಂಬ ಮಣ್ಣನ್ನು ಜ್ಞಾನೋದಕದಿಂದ ತೊಳೆದು ಅದಕ್ಕೆ ಯೋಗದ ಕಂಪನ್ನು ಅರೆದರೆ ಅರಿವಿನ ಪರಿಮಳವನ್ನು ಇಕ್ಕಿ ಆನಂದದಿಂದ ಕುಣಿಕುಣಿದಾಡುವಂತೆ ಮಾಡುವನು.

ಮನವನೊಂದೆಡೆ ಹಿಡಿದು ಅರಿವಿನ ಗಾಣದಲಿ ಇಕ್ಕಿ ಅದರಿಂದ ಇಳಿದ ಸಿದ್ಧ ರಸದ ಕಂಪನು ಅದಕ್ಕೆ ಪಾನಮಾಡಿಸುವ ಒಡೆಯನು ಒಬ್ಬನೇ ಆಗಿದ್ದಾನೆ. ಆತನೆ ಕಪಿಲಸಿದ್ಧ ಮಲ್ಲಯ್ಯನು.

61

**ಅಯ್ಯಯ್ಯಾ ನೀ ಬಾರಯ್ಯ ಬಾರಯ್ಯ.**
**ಆನಂದದಾದಿಯಲ್ಲಿ ಬಂದೆನ್ನ ಕರದಲ್ಲಿ ನಿಲ್ಲಯ್ಯ.**
**ಅಯ್ಯಯ್ಯಾ, ಒಯ್ಯನೆ ಕೈಯಗುಡಯ್ಯ.**
**ಕಂಗೆಟ್ಟ ಪಶುವಾದೆನು ಎಲೆ ಅಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಕರುಣಿಸು ನಿಮ್ಮ ಧರ್ಮ.**

ತನುವಿನಲ್ಲಿ ತನ್ಮಯವಾದ ಮಹಾಜ್ಞಾನೇಶ್ವರನನ್ನು ಕಂಡು ಸಿದ್ಧರಾಮ ಶಿವಯೋಗಿಗಳು ಕೈಮಾಡಿ ಕರೆಯುತ್ತಿದ್ದಾರೆ: ಅಯ್ಯಯ್ಯಾ, ನೀ ಬಾರಯ್ಯ ಬಾರಯ್ಯ.

ಆನಂದದ, ಮಹದಾನಂದದ ಆದಿಯಲ್ಲಿ ಬಂದವನು ನೀನು. ಬಂದು ನನ್ನ ಸರ್ವಾಂಗದಲ್ಲಿ (ಕರ) ನಿಂತವನು ನೀನು, ಆದರೂ ನೀನು ನೀನಾಗಿಯೇ ಎನಗೆ ದರುಶನವ ನೀಡಲಿಲ್ಲ. ಆತುರದಿಂದ ನೀನು ನನ್ನನ್ನು ಕೈಮಾಡಿ ಕರೆಯುವುದನ್ನು ಬಿಡಲಿಲ್ಲ. ಏನೀ ನಿನ್ನ ಲೀಲೆ! ನನಗಾಗಿ ಬಂದು ನನ್ನ ಸರ್ವಾಂಗದಲ್ಲಿ ನೆಲೆನಿಂತವನು ನೀನು! ನನ್ನತ್ತ ನೋಡಿದರೆ ಸಾಕು; ಬರದಿಂದ ಸೆಳೆದು ಬಿಗಿದಪ್ಪಿ, ಅನಂತ ಕಾಲದ ದುಃಖವನ್ನು ಒಂದುಗುರಿಲೆ ಜಾಡಿಸಿ ಬಿಡುವೆ ಎಂದು ಅತ್ಯವಸರದಲ್ಲಿ ನಿಂತವನು ನೀನು! ಆದರೂ ನನಗೆ, ನೀನು ನನ್ನಲ್ಲಿಯೇ ಇರುವಿಯೆಂದು ತಿಳಿಯಲಿಲ್ಲ ತಂದೆ!

ಪಶು ನಾನು. ಸದಾ ನನ್ನಲ್ಲಿಯೇ ಇದ್ದು ನನ್ನನ್ನು ಕಾಯುವ ಪಶುಪತಿ ನೀನು. ಅದಕ್ಕಾಗಿಯೇ ನಿನ್ನನ್ನು ಗೋಪಾಲ ಎಂದು ಕರೆದರು. ತುಡುಗುಣಿಯಾಗಿ ಬೇಲಿಹಾರಿ ವಿಷಯವೆಂಬ ಹಸುರು ಮೇಯುವಾಗ ನಿನ್ನನ್ನು ಹೊತ್ತುಕೊಂಡ ನನಗೆ ನೀನು ನನ್ನಲ್ಲಿಯೇ ಇರುವ ಅರಿವಾಗಲಿಲ್ಲ ತಂದೆ. ಕಂಗೆಟ್ಟ ಪಶುವು ನಾನು. ಪಶುಪತಿ ನೀನು ತಂದೆ!

ನನ್ನಲ್ಲಿಯೇ ಇರುವ ನಿನ್ನನ್ನು ನನ್ನ ಮೂಲಕ ನಾನೇ ತಿಳಿಯಬೇಕಲ್ಲದೆ ಶಾಸ್ತ್ರ ಪುರಾಣ ಆಗಮ ಉಪನಿಷತ್ತು ಬೈಬಲ್ ಕುರಾನ್‌ಗಳ ಮೂಲಕ ನಿನ್ನನ್ನು ತಿಳಿಯಲು ಸಾಧ್ಯವೆ?

ಪಶು ನಾನು. ನನ್ನನ್ನೇ ವಾಹನಮಾಡಿಕೊಂಡ ಪಶುಪತಿ ನೀನು. ನಿನ್ನನ್ನು ಹೊತ್ತುಕೊಂಡ ನಾನು ನಿನ್ನನ್ನು ಮರೆತೆ. ನಿನ್ನನ್ನೇ ನೋಡಲು ನಿನ್ನನ್ನು ಹೊತ್ತುಕೊಂಡು ಶ್ರೀಶೈಲಕ್ಕೆ ನಡೆದುಕೊಂಡು ಹೋದೆ. ತಿರುಪತಿಗೆ ಬೆಟ್ಟ ಹತ್ತಿ ಹೋದೆ. ಮೆಕ್ಕಾ, ವ್ಯಾಟಿಕಾನ್‌ಗೆ ಹೋದೆ. ಜ್ಯೋತಿರ್ಲಿಂಗಗಳ ದರುಶನ ಮಾಡಿಕೊಂಡೆ ಆದರೂ ನೀನು ನನಗೆ ದೊರೆಯಲಿಲ್ಲ. ನನ್ನಲ್ಲಿಯೇ ಇರುವ ನೀನು ಅಲ್ಲಿಲ್ಲವೆಂದು ನನಗೆ ತಿಳಿಯಲಿಲ್ಲ. ಅಯ್ಯಯ್ಯಾ, ನೀ ಬಾರಯ್ಯ ಬಾರಯ್ಯ ಎಂದು ಕರೆದರೆ ನೀನು ಬರಲು ಸಾಧ್ಯವೆ?

ನಿನ್ನನ್ನು ಹೊತ್ತುಕೊಂಡು ನಿನ್ನನ್ನೇ ಹುಡುಕುತ್ತಾ ಅಲೆದಾಡುವ ಮೂರ್ಖ ನಾನು. ಪಶು ನಾನು. ನಾನು ತಪ್ಪು ಮಾಡಿದಾಗ ನನ್ನನ್ನು ''ದನಕಾಯುವವನೆ'' ಎಂದು ಜನ ಮೂದಲಿಸಿ ನುಡಿದರು. ನನಗೆ ಸಿಟ್ಟು ತಡೆಯಲಾಗಲಿಲ್ಲ. ನನ್ನಲ್ಲಿರುವ ನಿನಗೆ ಸಿಟ್ಟೇ ಬರಲಿಲ್ಲ.

ನಾನು ದನ. ನನ್ನನ್ನು ಕಾಯುವವನು ನೀನು. ನಾನು ತಪ್ಪು ಮಾಡಿದಾಗ ಜನ ನಿನ್ನನ್ನು ಬೈದರೆಂದು ನನಗೆ ತಿಳಿಯಲಿಲ್ಲ. ಪಶು ನಾನು. ಪಶುಪತಿ ನೀನು. ನಿನ್ನ ನಿರ್ಗುಣವನ್ನು ಈ ಪಶುವಿಗೆ ತುಂಬಿ ಮನಸಾರೆ ಹರಸಲಿಲ್ಲ. ದಾರಿಕಾಣದ ಕಂಗೆಟ್ಟ ಪಶುವಾದೆನು ಎಲೆ ಅಯ್ಯಾ.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಕರುಣಿಸು ನಿಮ್ಮ ಧರ್ಮವನ್ನು.

ನನ್ನ ಧರ್ಮವೇ ಬೇರೆ. ನನ್ನಲ್ಲಿಯೇ ಇದ್ದು ಸದಾ ನನ್ನನ್ನು ಕಾಯುವ ನಿನ್ನ ಧರ್ಮವೇ ಬೇರೆ. ದನ ತನ್ನಂತೆಯೇ ಇರುವ ದನಗಳನ್ನು ನೋಡಿದರೆ ದನಕ್ಕೆ ಏನೂ ಆಗುವುದಿಲ್ಲ. ದನಗಳಿಗೆ ದನ ಎಂದು ಹೇಳುವ ನಾನು ದನಕ್ಕಿಂತ ಕಡೆ. ನನ್ನಂತೆಯೇ ಇರುವ ಇತರರನ್ನು ನಾನು ನನ್ನಂತೆಯೇ ನೋಡಲು ನನಗೆ ಬರುವುದಿಲ್ಲ. ಕಾಮದಿಂದ ನೋಡುವೆ. ಕ್ರೋಧದಿಂದ ನೋಡುವೆ. ಲೋಭ ಮೋಹ ಮದ ಮತ್ಸರಗಳು ಜಾತಿ ಮತ ಪಂಥಗಳು ಶ್ರೀಮಂತ ಬಡವ ಅಧಿಕಾರಿ ಶಾಸಕ ಮಂತ್ರಿ ಎಂದು ನೋಡುವ ಅಜ್ಞಾನ ನನ್ನಲ್ಲಿ ಇಣಕಿ ಹಾಕುತ್ತದೆ. ಈ ಅಜ್ಞಾನದ ಅಧರ್ಮ ನನ್ನ ಕಣ್ಣಲ್ಲಿ ಕಿವಿ ಮೂಗು ನಾಲಿಗೆ ಚರ್ಮದಲ್ಲಿ ತುಂಬಿ ತುಳುಕುತ್ತಲಿದೆ. ಆದರೆ ನನ್ನ ಸರ್ವಾಂಗದಲ್ಲಿ ಭರಿತವಾದ ನಿನ್ನ ಧರ್ಮವೇ ಬೇರೆ.

ನಾನು ಕಾಮದಿಂದ ನೋಡಿದರೆ ನೋಡುವ ನನ್ನ ಕಣ್ಣಲ್ಲಿ ಸಂಗಮವಾದ ನೀನು, ನೀನು ಹಾಗೆ ನೋಡಿದ್ದು ತಪ್ಪೆಂದು ನಿನ್ನ ನೋಟದ ಮೂಲಕ ನನಗೆ ತಿಳಿಸುವ ಧರ್ಮ ನಿನ್ನದು. ಏಕೆಂದರೆ ನಾನು ನೋಡಿದ್ದು, ನಾನು ಹೇಗೆ ನೋಡಿದೆನೆಂದು ನನಗೇ ತಿಳಿಯುತ್ತದಲ್ಲವೆ? ನಾನು ಮೊದಲು ನೋಡಿದ ನೋಟ ನನಗೆ ಸುಖ. ಹಾಗೆ ನೋಡಿದ್ದು ತಪ್ಪೆಂದು ಆ ನೋಟದಿಂದಲೇ ಹೇಳುವ ದುಃಖ ನನಗೆ. ಇವೆರಡೂ ನನ್ನಲ್ಲಿಯೇ ಸಂಗ್ರಹವಾಗಿ ನನ್ನನ್ನೇ ಕಾಡುವ ಕಂಗೆಟ್ಟ ಪಶು ನಾನು. ಎಲೆ ಅಯ್ಯಾ ನನ್ನ ಬಾಧೆಯನ್ನು ಪರಿಹರಿಸಿ ನಿನ್ನ ಧರ್ಮವನ್ನು ಕರುಣಿಸು ತಂದೆ.

**62**

**ಅಯ್ಯಾ, ಅನೇಕ ಪುರಾತರ ಅನುಮತದಿಂದ**
**ಚೆನ್ನಬಸವಣ್ಣನೆನ್ನನಾಗು ಮಾಡಿದ ಪರಿಯ ಹೇಳುವೆನಯ್ಯಾ.**
**ಮುನ್ನಾದಿಯಲಾದ ಸ್ವಯಂಭುಜ್ಞಾನಮಂ ತಿಳುಪಿ**
**ಆನಂದದ ಕರದಲ್ಲಿ ಇಟ್ಟು**
**ಬಸವಾಕ್ಷರಸಂಯುತ ಧ್ಯಾನಮೌನಾದಿ ಸಮ್ಯಜ್ಞಾನವನರುಪಿದ**
**ಗುರುಕರುಣದಿಂದ ಅನು ನೀನಾದೆನ್ನೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುಕರುಣದಿಂದ ಆನು ನೀನಾದೆನ್ನೈ ಕಪಿಲಸಿದ್ಧ ಮಲ್ಲಿಕಾರ್ಜುನ:

ನಾನು ಆದಿಯಾದರೆ ನನ್ನಲ್ಲಿಯೇ ತನ್ಮಯವಾದ ನೀನು ಅನಾದಿ. ಸ್ವಯಂಭುಜ್ಞಾನಿ. ನನ್ನಲ್ಲಿಯೇ ಇರುವ ನಿನ್ನನ್ನು ಶ್ರೀಗುರುದೇವನು ನನ್ನನ್ನು ಆಗು ಮಾಡಲೆಂದು ತಿಳಿಸಿದ ಪರಿಯನ್ನು ಏನೆಂದು ಹೇಳಲಿ ತಂದೆ.

ಶ್ರೀಗುರುದೇವನು ಅನೇಕ ಪುರಾತನರ ಅನುಮತದಿಂದ ಬಂದು; ನನ್ನನ್ನು ಉದ್ಧಾರ ಮಾಡಲೆಂದೇ ನನ್ನ ಆನಂದದ ದೇಹ(ಕರ)ದಲ್ಲಿ ನಿನ್ನನ್ನು ಇಟ್ಟು ನಿನ್ನ ಮಹಿಮೆಯನ್ನು ನಾನಾ ಪರಿಯಿಂದ ತಿಳಿಸಿದನು. ಆತನ ಕರುಣೆಯಿಂದ ನಾನು ನೀನಾದೆ ಪರಮಾತ್ಮನೆ.

ಚೆನ್ನಬಸವಣ್ಣನ ಕರುಣೆಯಿಂದ ಸಿದ್ಧರಾಮಶಿವಯೋಗಿ ತಾನು ಧನ್ಯನಾದ ಸುದ್ದಿಯನ್ನು ಓದುಗರಿಗೆ ತಿಳಿಸಿದ್ದಾನೆ. ಆತ ತಿಳಿಸಿದ ಪರಿಯಲ್ಲಿಯೇ ಲೋಪದೋಷವಿಲ್ಲದೆ ಆತನ ಮಾತಿನಿಂದಲೇ ಸಕಲರಿಗೆ ತಿಳಿಸಿದ್ದಾನೆ.

ಜ್ಞಾನ, ವೇದ ಉಪನಿಷತ್ತು ಬೈಬಲ್ ಭಗವದ್ಗೀತೆಯಿಂದ ಬಂದಿಲ್ಲ. ಬದಲಾಗಿ ಜ್ಞಾನದಿಂದ ಅವು ಬೆಳಗುತ್ತಲಿವೆ. ಜ್ಞಾನವೆಂಬುದು ಮುನ್ನಾದಿಯಲಾದುದು. ಅದು ಯಾರಿಂದಲೂ ಹುಟ್ಟಿಲ್ಲ. ಅದಕ್ಕೆ ಹುಟ್ಟು ಸಾವುಗಳಿಲ್ಲ. ಅದು ಸ್ವಯಂಭು. ಅದನ್ನು ಅಕ್ಷರಗಳಿಂದ, ಗ್ರಂಥಗಳಿಂದ ಬಣ್ಣಿಸಲು ಸಾಧ್ಯವಿಲ್ಲ. ಅದು ದೇಹದಲ್ಲಿಯೇ ಸಂಗಮವಾಗಿದೆ. ಹೀಗಾಗಿ ಜ್ಞಾನ ತಿಳಿದ ದೇಹವದು ಆನಂದದ ದೇಹ.

ಜ್ಞಾನ ಇಲ್ಲದ ದೇಹವೇ ಇಲ್ಲ. ಹೀಗಾಗಿ ಜ್ಞಾನ ಸಂಗಮವಾದ ದೇಹವನ್ನು ಜ್ಞಾನೇಶ್ವರ ಎಂದು ಕರೆದರು. ಶ್ರೀಗುರುದೇವ ಜ್ಞಾನವನ್ನು ಕಂಡುಕೊಂಡಾತ. ದೇಹದಲ್ಲಿಯೇ ಸಂಗಮವಾದ ಸ್ವಯಂಭು ಜ್ಞಾನವನ್ನು ಶ್ರೀಗುರುದೇವ ದೇಹಮುಟ್ಟಿ ದೇಹದಿಂದಲೇ ದೇಹದಲ್ಲಿಯೇ ದೇಹಕ್ಕೆ ದರ್ಶನ ಮಾಡಿಸುತ್ತಾನೆ. ಹಾಗೆ ನನ್ನನ್ನು ಆಗು ಮಾಡಲು ಚೆನ್ನಬಸವಣ್ಣನು ಸ್ವಯಂಭು ಜ್ಞಾನವನ್ನು ನನಗೆ ತಿಳಿಸಿದನು ಎಂದು ಓದುಗರಿಗೆ ವಚನದ ಮೂಲಕ ವಾರ್ತೆ ನೀಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಇದು ಸತ್ಯ ವಾರ್ತೆ. ಸಾಕ್ಷಾತ್ ಚೆನ್ನಬಸವಣ್ಣನವರು ಬಸವಾಕ್ಷರಗಳ ಮೂಲಕ ಬರೆದ ಧ್ಯಾನದ ವಾರ್ತೆ. ಮೌನದ ವಾರ್ತೆ. ಗುರುದೇವನ ಕರುಣೆಯಿಂದ ಸಕಲ ಓದುಗರಿಗೂ ತಿಳುಹಿದ ಸಮ್ಯಜ್ಞಾನದ ವಾರ್ತೆ. ಸಿದ್ಧರಾಮ ಶಿವಯೋಗಿಗಳ ಮೂಲಕ ಓದಿದ ಓದುಗನ ಬಸವಾಕ್ಷರದ ವಾರ್ತೆ. ಅಕ್ಷರೋತ್ತಮ ತಾನೇ ಆಗುವ ಕಪಿಲಸಿದ್ಧ ಮಲ್ಲಿಕಾರ್ಜುನನ ವಾರ್ತೆ.

**63**

**ಅಯ್ಯಾ, ಆನಂದದಾನಂದದಲ್ಲಿ ಎಂದಿಪ್ಪೆನೋ.**
**ಆದಿ ಅಕ್ಷರದೊಳಗೆ ಅಯ್ಯಾ,**
**ನಾನು ಭೇದಾದಿ ಭೇದವೆಂದರಿದೆನಯ್ಯಾ.**
**ಹೋದ ಹೋದ ಬಟ್ಟೆಯ ನೋಡಿ ನೋಡಿ ಬೆರಗಾದೆನಯ್ಯಾ.**
**ವಿಚಿತ್ರ ಮೂಲ ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಎನ್ನ ಚಿತ್ತ ವಿಚಿತ್ತವ ಮಾಡದಿರು ತಂದೆ.**

ಮನುಷ್ಯ ಜ್ಞಾನಿ. ಸದಾ ಆನಂದದಲ್ಲಿ ಇರಬೇಕಾದವನು. ಆದರೂ ಆನಂದದಲ್ಲಿ ಇಲ್ಲ. ಆನಂದದ ಹುಡುಕಾಟಕ್ಕಾಗಿ ಇಡೀ ಆಯುಷ್ಯವನ್ನೇ ಕಳೆಯುತ್ತಾನೆ. ಆನಂದಕ್ಕಾಗಿ ವಿಲಿವಿಲಿ ಒದ್ದಾಡುತ್ತಾನೆ.

ಆನಂದವನ್ನು ರುಚಿಯಲ್ಲಿ, ವಾಸನೆಯಲ್ಲಿ, ಸ್ಪರ್ಶದಲ್ಲಿ, ದೃಶ್ಯದಲ್ಲಿ, ಶಬ್ದದಲ್ಲಿ ಹುಡುಕುತ್ತಾನೆ. ಆನಂದ ಅಲ್ಲಿ ಇಲ್ಲವೆಂದು ತಿಳಿಯಲು ಮನುಷ್ಯನಿಗೆ ತುಂಬಾ ತಡವಾಗುತ್ತದೆ. ಏಕೆಂದರೆ ತನ್ನ ತನುವಿನಲ್ಲಿರುವ ಚಿತ್ತ ತನಗೇ ತೊಂದರೆಯನ್ನು ಉಂಟು ಮಾಡುತ್ತದೆ.

ರಾಜಸ, ತಾಮಸ, ಸಾತ್ವಿಕ ಗುಣಗಳಿಗೆ ಚಿತ್ತ ಮರುಳಾಗಿ ಒಂದಿಷ್ಟುಕಾಲ ತನುವನ್ನು ರಾಜಸನನ್ನಾಗಿ ಮುಂದುವರಿಸುತ್ತದೆ. ಅಧಿಕಾರದ ಅಮಲು ನೆತ್ತಿಗೇರಿ ಸುಖ ದುಃಖಗಳನ್ನು ಅನುಭವಿಸುತ್ತಾ ಅಧಿಕಾರ ಚಲಾಯಿಸುತ್ತದೆ.

ತಾನು ಅಧಿಕಾರಿ; ತನ್ನಂತೆಯೇ ಇರುವ ಇತರ ತನುಗಳು ತನಗೆ ಸೇವಕರು! ಸೇವಕರ ಮೇಲೆ ಅಧಿಕಾರ ಚಲಾಯಿಸುವುದು ಎಂದರೆ ಚಿತ್ತಕ್ಕೆ ಬಲು ಸುಖ. ಏಕೆಂದರೆ ಚಿತ್ತ

ವಿಚಿತ್ತವಾಗಿದೆ. ಚಿತ್ತದ ಚಿತ್ತ ಅಧಿಕಾರದ ಮೇಲೆ ನೆಟ್ಟಿದೆ! ಅಧಿಕಾರವೆಂದರೆ ಚಿತ್ತಕ್ಕೆ ಸುಖ! ಅಧಿಕಾರವಿಲ್ಲದಿದ್ದರೆ ಚಿತ್ತಕ್ಕೆ ದುಃಖ. ಚಿತ್ತ ತನಗಾದ ಸುಖವನ್ನು ತನಗಾದ ದುಃಖವನ್ನು ತನುವಿನ ಮೂಲಕ ಅನುಭವಿಸುತ್ತದೆ. ಅಧಿಕಾರದಲ್ಲಿ ಸುಖವಿಲ್ಲ, ಅಧಿಕಾರವಿಲ್ಲದಿದ್ದರೆ ದುಃಖವೂ ಇಲ್ಲವೆಂದು ಚಿತ್ತಕ್ಕೆ ತಿಳಿಯುವುದಿಲ್ಲ. ಹೀಗಾಗಿ ತನುವಿನ ಆಯುಷ್ಯದ ಒಂದಿಷ್ಟು ಕಾಲ ಅಥವಾ ಆಯುಷ್ಯದ ಪೂರ್ಣಾವಧಿಯನ್ನು ಚಿತ್ತ ರಾಜಸಗುಣದಲ್ಲಿಯೇ ಕಳೆಯುತ್ತದೆ. ರಾಜಸ ಗುಣ ಸಾಕಾದಾಗ; ಚಿತ್ತ ತಾಮಸ ಗುಣವನ್ನು ಆಯ್ಕೆ ಮಾಡಿಕೊಳ್ಳುತ್ತದೆ.

ಸದಾ ವಿಷಯ ಸುಖದಲ್ಲಿ, ಮದಿರೆಯ ಸುಖದಲ್ಲಿ, ನಾನಾ ಭಕ್ಷ್ಯ ಭೋಜನಗಳ ರುಚಿಯಲ್ಲಿ, ನೃತ್ಯ ಮೋಜು ಮಜಾದಲ್ಲಿ ಕಾಲಕಳೆಯುವುದೆಂದರೆ ಚಿತ್ತಕ್ಕೆ ಬಲು ಸುಖ. ಏಕೆಂದರೆ ಚಿತ್ತ ವಿಚಿತ್ತವಾಗಿ ತಾಮಸ ಗುಣವನ್ನು ಆಯ್ಕೆ ಮಾಡಿಕೊಂಡಿದೆ. ರಾಜಸ ಗುಣದಿಂದ ತಾಮಸ ಗುಣಕ್ಕೆ ಪಲ್ಲಟವಾಗಿದೆ.

ವಿಷಯ ಸುಖಕ್ಕಾಗಿ, ಮದಿರೆಯ ಸುಖಕ್ಕಾಗಿ, ಮೃಷ್ಟಾನ್ನ ಭೋಜನದ ಸುಖಕ್ಕಾಗಿ, ಶಬ್ದ ಸುಖಕ್ಕಾಗಿ, ದೃಶ್ಯ ಸುಖಕ್ಕಾಗಿ ಚಿತ್ತ ತಾನು ವಾಸ ಮಾಡಿದ ತನುವನ್ನೇ ಘಾಸಿಗೊಳಿಸುತ್ತದೆ. ಕ್ಷಣ ಕ್ಷಣಕ್ಕೂ ಸುಖ ಕೊಡುತ್ತಾ ಕ್ಷಣ ಕ್ಷಣಕ್ಕೂ ದುಃಖ ಕೊಡುತ್ತಾ ಇಡೀ ತನುವನ್ನು ಹಂತ ಹಂತವಾಗಿ ಕೊಲ್ಲುತ್ತದೆ. ಒಂದಿಷ್ಟು ಕಾಲ ಚಿತ್ತ ತಾಮಸ ಗುಣದಲ್ಲಿ ಕಳೆದು ಸಾತ್ವಿಕ ಗುಣಕ್ಕೆ ಜಿಗಿಯುತ್ತದೆ.

ಲೋಕಕ್ಕೆ ಸಾತ್ವಿಕನೆಂದರೆ ಬಲು ಪ್ರೀತಿ. ಸಾತ್ವಿಕನೆನ್ನುವುದು ಕೂಡಾ ಒಂದು ಗುಣ; ಅದು ಚಿತ್ತ ವಿಚಿತ್ತವಾಗಿ ಸಾತ್ವಿಕ ಎನ್ನುವ ಹುಸಿ ಸೋಗಿನ ಸುಖ ಅನುಭವಿಸುವ ನಾಟಕ ಎಂದು ಮನುಷ್ಯನಿಗೆ ತಿಳಿಯುವುದಿಲ್ಲ. ಏಕೆಂದರೆ ಮನುಷ್ಯನಿಗೆ ತಿಳಿಯದಂತೆ ಮನುಷ್ಯನಿಗೆ ಮೋಸ ಮಾಡುತ್ತ ಚಿತ್ತ ಮನುಷ್ಯನಲ್ಲಿಯೇ ಬಚ್ಚಿಟ್ಟುಕೊಂಡಿದೆ.

ಚಿತ್ತಕ್ಕೆ ದಾನಿ ಎನ್ನಿಸಿಕೊಳ್ಳುವ ಆಸೆ ಉಂಟಾದಾಗ ಅದು ಮನುಷ್ಯನಿಗೆ ದಾನ ಮಾಡುತ್ತದೆ. ದಾನ ಕೊಡುವುದು, ದಾನ ಪಡೆಯುವುದು ಇವೆರಡೂ ಕೂಡಾ ಚಿತ್ತದ ಗುಣವೆಂದು ಚಿತ್ತವೇ ಮರೆಯುತ್ತದೆ. ಹೀಗಾಗಿ ದಾನ ಕೊಡುವ ತನು ದಾನಿಯೆಂದು, ದಾನ ಪಡೆಯುವ ತನು ಭಿಕ್ಷುಕನೆಂದೂ ತನುವಿನಿಂದಲೇ ತನು ಕರೆಯಿಸಿಕೊಳ್ಳುತ್ತದೆ. ಹೀಗೆ ಕರೆಯಿಸಿಕೊಳ್ಳುವಾಗ ದಾನಿ ತನುವಿನಲ್ಲಿರುವ ಚಿತ್ತಕ್ಕೂ ಸುಖವಾಗುತ್ತದೆ; ಭಿಕ್ಷುಕ ತನುವಿನಲ್ಲಿರುವ ಚಿತ್ತಕ್ಕೂ ಸುಖವಾಗುತ್ತದೆ. ದಾನ ಮಾಡಿದ ವಸ್ತು ತನ್ನದಲ್ಲವೆಂದು, ದಾನ ಪಡೆದ ವಸ್ತು ಆತನದಲ್ಲವೆಂದು ಚಿತ್ತಕ್ಕೆ ಗೊತ್ತಾಗುವುದಿಲ್ಲ. ಏಕೆಂದರೆ ಚಿತ್ತ ವಿಚಿತ್ತವಾಗಿದೆ. ದಾನಿ ತನುವನ್ನು, ಭಿಕ್ಷುಕನ ತನುವನ್ನು ಯಾಮಾರಿಸಿದ ಚಿತ್ತ ಅವೆರಡೂ ತನುಗಳಿಗೆ ತಾನೇ ಸಾಮ್ರಾಟನಾಗಿದೆ. ಚಿತ್ತ ಹೇಳಿದಂತೆ ತನು ಕೇಳುತ್ತದೆ. ಇದು ಚಿತ್ತದ ಕಪಟತನವೆಂದು ತನುವಿಗೆ ಗೊತ್ತಾಗುವುದಿಲ್ಲ.

ಚಿತ್ತ ತನುವನ್ನು ರಾಜನನ್ನಾಗಿ ಮಾಡುತ್ತದೆ. ರಾಜಕಾರಣಿಯನ್ನಾಗಿ ಮಾಡುತ್ತದೆ. ಅಧಿಕಾರಿಯನ್ನಾಗಿ ಮಾಡುತ್ತದೆ. ಸೇವಕನನ್ನಾಗಿ ಮಾಡುತ್ತದೆ. ಕುಡುಕ, ವಿಷಯಲಂಪಟ, ವೇಶ್ಯೆ, ಕಳ್ಳ, ಸುಳ್ಳನನ್ನಾಗಿ ಮಾಡುತ್ತದೆ. ದಾನಿಯನ್ನಾಗಿ ಮಾಡುತ್ತದೆ. ಭಿಕ್ಷುಕನನ್ನಾಗಿ ಮಾಡುತ್ತದೆ.

ವಸ್ತುವಿನ ಸತ್ಯ ತನುವಿಗೆ ಗೊತ್ತಾಗದಂತೆ ತನುವಿನಲ್ಲಿದ್ದ ಚಿತ್ತ ತನುವನ್ನೇ ಮೋಸ ಮಾಡುತ್ತದೆ. ಇದು ಚಿತ್ತ ಮಾಡಿದ ಮೋಸವೆಂದು ತನುವಿಗೆ ತಿಳಿಯದೇ ಹೋಗುತ್ತದೆ. ಏಕೆಂದರೆ ಚಿತ್ತಕ್ಕೆ ತನು ಉಪಕರಣವಾಗಿದೆಯೇ ಹೊರತು ತನುವೇ ಏನೆಲ್ಲ ಅಲ್ಲ. ನಾನು ಹೀಗೆ ತನುವನ್ನು ಮೋಸ ಮಾಡುವುದು ತಪ್ಪೆಂದು ಚಿತ್ತಕ್ಕೆ ಅರಿವಾಗಬೇಕಲ್ಲ! ಅರಿವಾಗುವುದೇ ಇಲ್ಲ.

ತನುವನ್ನು ಮೋಸ ಮಾಡುವುದರಲ್ಲಿಯೇ ಚಿತ್ತಕ್ಕೆ ಸುಖವಿದೆ. ತನುವಿಗೆ ಸುಖವಾದರೂ ಚಿತ್ತಕ್ಕೆ ಸುಖ! ತನುವಿಗೆ ದುಃಖವಾದರೂ ಚಿತ್ತಕ್ಕೆ ಸುಖ! ಇಂತಹ ಚಿತ್ತವನ್ನು ತನುವು ತನ್ನ ತನುವಿನಲ್ಲಿಟ್ಟುಕೊಂಡು ಆಶ್ರಯ ನೀಡಿ ಪೋಷಿಸುತ್ತಿದೆ.

ವಸ್ತುವಿನ ಸತ್ಯವನ್ನು ಮರೆ ಮಾಡಿ ವಸ್ತುವಿಗೆ ಮರುಳಾಗುವಂತೆ ತನುವನ್ನು ಪ್ರೇರೇಪಿಸುವುದೇ ಚಿತ್ತದ ಗುಣ. ಉದಾ: ವಸ್ತುವಿನ ಸತ್ಯ ಹಳದಿ ಲೋಹ. ಚಿತ್ತ ಅದರ ಮೇಲೆ ನೆಟ್ಟು ಬಂಗಾರವನ್ನಾಗಿಸುತ್ತದೆ. ಅದನ್ನು ಪಡೆದವ ಶ್ರೀಮಂತ. ಅದನ್ನು ಕದ್ದವ ಕಳ್ಳ. ಕೊಂದು ಪಡೆದವ ಕೊಲೆಗಾರ. ಯುದ್ಧಮಾಡಿ ಪಡೆದವನು ರಾಜ. ಚಿನ್ನಕ್ಕಾಗಿ ಹಪಹಪಿಸುವವ ಭಿಕಾರಿ.

ಒಂದು ಸರಕಾರವನ್ನು, ಒಂದು ದೇಶವನ್ನು, ಒಬ್ಬ ವ್ಯಕ್ತಿಯನ್ನು ಆಳೆಯುವುದು ಕೂಡಾ ಚಿನ್ನದಿಂದಲೇ! ಏನೀ ಚಿತ್ತದ ಮಹಿಮೆ! ಇಡೀ ದೇಶವನ್ನು ಆಳುವ ಸರಕಾರಕ್ಕೂ, ನ್ಯಾಯ ನೀಡುವ ನ್ಯಾಯಾಲಯಗಳಿಗೂ, ನಿಯಂತ್ರಿಸುವ ಆಡಳಿತ ವರ್ಗಕ್ಕೂ ಈ ಚಿತ್ತದ ಮಹಿಮೆ ಗೊತ್ತಾಗಬಾರದೆ!

ವಿಶ್ವವಿದ್ಯಾಲಯಗಳಿಗೂ, ಗುರುವರ್ಗಕ್ಕೂ, ಆಶ್ರಮ ಮಠಗಳಿಗಾದರೂ ಈ ಚಿತ್ತದ ಮಹಿಮೆ ಗೊತ್ತಾಗಬಾರದೆ! ಗೊತ್ತಾಗುವುದಿಲ್ಲ. ಏಕೆಂದರೆ ಗುರುವಾಗುವುದು ಕೂಡಾ ಚಿತ್ತದಿಂದಲೇ! ಗುರುವಿಗೆ ಶಿಷ್ಯನಾಗುವುದು ಕೂಡಾ ಚಿತ್ತದಿಂದಲೇ!

ಗುರುವಾಗುವುದೆಂದರೆ, ಮಠಾಧೀಶನಾಗುವುದೆಂದರೆ ಚಿತ್ತಕ್ಕೆ ಸುಖ. ತನುವಿಗೆ ಖಾವಿ ತೊಡಿಸಿ, ಪುಸ್ತಕದ ನಾಲ್ಕು ಮಂತ್ರಗಳನ್ನು ತನುವಿನ ಮೂಲಕ ಪಠಿಸಿ, ವಿಭೂತಿ ರುದ್ರಾಕ್ಷಿಗಳನ್ನು ತನುವಿಗೆ ಧರಿಸಿ, ಶಿಲುಬೆ ಲಿಂಗ ಜನಿವಾರಗಳನ್ನು ಕೊರಳಿಗೆ ಧರಿಸಿ, ಪಾದಕ್ಕೆ ಆವಿಗೆ ತೊಡಿಸಿ, ಕೈಗೆ ಬೆತ್ತ ಹಿಡಿಸಿ, ಚಿತ್ತ ತನುವನ್ನು ಗುರುವಾಗಿಸುತ್ತದೆ. ಇದು ತನಗೆ ತಾನೇ ಮೋಸ ಮಾಡಿಕೊಳ್ಳುವ ವೇಷವೆಂದು ತನುವಿಗೆ ಅನ್ನಿಸುವುದೇ ಇಲ್ಲ. ಇದು ಚಿತ್ತ ಮಾಡಿದ ಮೋಸವೆಂದು ಕೂಡಾ ತನುವಿಗೆ ಅನ್ನಿಸುವುದಿಲ್ಲ. ತನು ಗುರುವಾಗಿ, ಆ ಗುರುವಿನ ತನುವಿಗೆ ಮತ್ತೊಂದು ತನು ಶಿಷ್ಯನಾಗಿ ಆಯುಷ್ಯ ಕಳೆದು ಹೋಗುತ್ತದೆ.

ಚಿತ್ತವನ್ನು ಕೊಲ್ಲುವ ಶಕ್ತಿಯುಳ್ಳ ತನುವಿಗೆ ಗುರುತನದ ವೇಷ ಬೇಡ. ಶಿಷ್ಯನ ಸೇವೆಯೂ ಬೇಡ. ಚಿತ್ತವನ್ನು ಅರಿವಿನಿಂದ ನೋಡಿ, ಆ ಅರಿವಿನಲ್ಲಿಯೇ ಚಿತ್ತವನ್ನು ನೆಟ್ಟು, ತನುವಿನ-ಅರಿವಿನಿಂದಲೇ ತನುವಿನ ಚಿತ್ತವನ್ನು ಕೊಲ್ಲುತ್ತಾನೆ. ಚಿತ್ತದ ಸಕಲ ಪಾತ್ರಗಳನ್ನು ತನ್ನ ಅರಿವಿನಿಂದ ತಿಳಿಯುತ್ತಾನೆ. ತನಗೆ ತಾನೇ ಗುರುವಾಗುತ್ತಾನೆ. ತನಗೆ ತಾನೇ ಶಿಷ್ಯನಾಗುತ್ತಾನೆ. ಒಮ್ಮೆ ಚಿತ್ತವನ್ನು ಒಮ್ಮೆ ಅರಿವನ್ನು ಒಮ್ಮೆ ತನುವನ್ನು ತನಗೆ ತಾನೇ ನೋಡಿಕೊಂಡು ತನ್ನೊಂದಿಗೆ ತಾನೇ ಮಾತಾಡಿಕೊಳ್ಳುತ್ತಾನೆ.

ತನುವಿನಲ್ಲಿ ಉಂಟಾದ ಭೇದ ತ್ರಯವನ್ನು ಅಂದರೆ ರಾಜಸ ತಾಮಸ ಸಾತ್ವಿಕ ಗುಣಗಳನ್ನು ತನುವಿನಲ್ಲಿಯೇ ಸಂಗಮವಾದ ಜ್ಞಾನದಿಂದ ಕೊಂದು ಮಹಾಜ್ಞಾನಿಯೇ ತಾನಾಗುತ್ತಾನೆ. ತನಗೆ ತಾನೇ ಜ್ಞಾನಿಯಾಗುವ ಮಹಾ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಕರುಣಿಸಿದ್ದಾರೆ.

ಚಿತ್ತ ವಸ್ತುಗಳ ಮೇಲೆ ನೆಟ್ಟರೆ ತನುವಿಗೆ ವಸ್ತುಗಳು ಬೇಕೇ-ಬೇಕು. ಭೂಮಿ ಬೇಕು; ಹೇಮ ಬೇಕು; ಕಾಮಿನಿಯೂ ಬೇಕು. ಅಧಿಕಾರ ಬೇಕು; ಪದವಿ ಬೇಕು. ಭೂಮಿಯ ಮೇಲಿದ್ದ ಸಕಲ ವಸ್ತುಗಳೂ ಬೇಕು. ಏಕೆಂದರೆ ತನುವಿನ ಚಿತ್ತ ವಸ್ತುವಿನ ಮೇಲೆ ನೆಟ್ಟಿದೆ. ಹೀಗಾಗಿ ವಸ್ತುವಿನ ಸತ್ಯ ತನುವಿಗೆ ಗೊತ್ತಾಗುವುದಿಲ್ಲ. ವಸ್ತುವಿನ ಆಸೆಗಾಗಿ ತನು ಕಳ್ಳನಾಗುತ್ತದೆ, ಸುಳ್ಳನಾಗುತ್ತದೆ, ವಿಷಯ ಲಂಪಟನಾಗುತ್ತದೆ, ಪ್ರಾಮಾಣಿಕನಾಗುತ್ತದೆ, ಭ್ರಷ್ಟನಾಗುತ್ತದೆ.

ತನುವಿನಿಂದಲೇ ತನು ಹೀಗೆ ಕರೆಯಿಸಿಕೊಂಡು ಸುಖ ಮತ್ತು ದುಃಖಕ್ಕೆ ಒಳಗಾಗುತ್ತದೆ. ವಸ್ತುವಿನ ಸತ್ಯ ತಿಳಿದುಕೊಳ್ಳುವ ಜ್ಞಾನಶಕ್ತಿ ತನುವಿಗಿದ್ದರೂ ಆ ಜ್ಞಾನ ಶಕ್ತಿಯ ಸಮೀಪಕ್ಕೆ ಚಿತ್ತ ಹೋಗುವುದೇ ಇಲ್ಲ. ಚಿತ್ತ ತನುವನ್ನು ಯಾಮಾರಿಸಿ ಜ್ಞಾನವನ್ನು ಬಯಸಿ ಪುಸ್ತಕದಲ್ಲಿ ಹುಡುಕಲು ಹಚ್ಚುತ್ತದೆ. ಪುನಃ ಚಿತ್ತ ತನುವನ್ನು ಪುಸ್ತಕಕ್ಕೆ ದಾಸನಾಗುವಂತೆ ಮಾಡುತ್ತದೆ. ಬೈಬಲ್ ಓದಿ ಶಿಲುಬೆ ಧರಿಸಿ ಕ್ರೈಸ್ತನಾಗುತ್ತದೆ. ಕುರಾನ್ ಓದಿ ಮುಸಲ್ಮಾನನಾಗುತ್ತದೆ. ಭಗವದ್ಗೀತೆ ಓದಿ ಹಿಂದುವಾಗುತ್ತದೆ. ವೈಚಾರಿಕ ಪುಸ್ತಕಗಳನ್ನು ಓದಿ ಕವಿ ಸಾಹಿತಿ ವಿಚಾರವಾದಿ ಪಂಡಿತ ಶಾಸ್ತ್ರಿಯಾಗುತ್ತದೆ. ಸಹಜ ಜ್ಞಾನದಿಂದ ಬಹುದೂರ ಉಳಿಯುತ್ತದೆ. ಹೀಗಾಗಿ ಬಸವಣ್ಣನವರು ತನುವಿನಲ್ಲಿರುವ ಚಿತ್ತವನ್ನು ಹತ್ತಿಯ ಹಣ್ಣಿಗೆ ಹೋಲಿಸಿದ್ದಾರೆ.

ಎನ್ನ ಚಿತ್ತವು ಹತ್ತಿಯ ಹಣ್ಣು, ನೋಡಯ್ಯಾ,
ವಿಚಾರಿಸಿದಡೆ ಏನೂ ಹುರುಳಿಲ್ಲವಯ್ಯಾ
ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು
ರೂಪುಮಾಡಿ ನೀವಿರಿಸಿದಿರಿ, ಕೂಡಲಸಂಗಮದೇವಾ.

ಹತ್ತಿಯ ಹಣ್ಣು ನೋಡಲು ಸುಂದರ; ಬಿಚ್ಚಿ ನೋಡಿದರೆ ಅದರ ತುಂಬಾ ಹುಳುಗಳು. ತಿನ್ನಲು ಆಗುವುದೇ ಇಲ್ಲ. ತನುವಿನ ಚಿತ್ತ ನೆಟ್ಟ ವಸ್ತುಗಳು ಕೂಡಾ ಹಾಗೆಯೇ. ಬಿಚ್ಚಿ ನೋಡಿದರೆ ಹುರುಳಿಲ್ಲ. ಆದರೂ ತನುವಿಗೆ ಆ ವಸ್ತು ಬೇಕು. ಚಿತ್ತ ಆ ವಸ್ತುವಿನ ಮೇಲೆ ನೆಟ್ಟರೆ ಸಾಕು. ಆ ವಸ್ತು ತನುವಿಗೆ ಬೇಕೇ ಬೇಕು. ಕದ್ದು ಪಡೆಯಲೂ ಹೇಸುವುದಿಲ್ಲ. ಕೊಂದು ಪಡೆಯಲೂ ಹೇಸುವುದಿಲ್ಲ. ಹಡೆದ ತಂದೆ ತಾಯಿಗಳಾದರೇನು? ಗಂಡ ಹೆಂಡತಿಯಾದರೇನು? ಮಡದಿ ಮಕ್ಕಳಾದರೇನು? ಸಂಬಂಧಿಗಳಾದರೇನು? ಗುರುವಾದರೇನು, ಶಿಷ್ಯನಾದರೇನು? ಚಿತ್ತ ನೆಟ್ಟ ವಸ್ತು ತನುವಿಗೆ ಬೇಕೇ ಬೇಕು.

ನಿತ್ಯಾನಂದ, ರಾಘವಶ್ರೀ ಸ್ವಾಮಿಗಳು ತನುವಿನೊಂದಿಗೆ ಸುಖಿಸಿದರು. ತನುವಿನ ಚಿತ್ತ ತನುವಿನ ಮೇಲೆ ನೆಟ್ಟು ತನುವಿಗೆ ಮತ್ತೊಂದು ತನು ಬೇಕಾಯಿತು. ಯಡಿಯೂರಪ್ಪನವರಿಗೆ ಹಣಬೇಕಾಯಿತು. ಸಿದ್ರಾಮಯ್ಯನವರಿಗೆ ಗಡಿಯಾರ ಬೇಕಾಯಿತು. ಇದು ಚಿತ್ತ ವಸ್ತುವಿನ ಮೇಲೆ ನೆಟ್ಟ ಪ್ರಭಾವ. ಎನ್.ಡಿ.ತಿವಾರಿಗೆ ತೊಂಬತ್ತು ವರ್ಷ ಆದರೂ ಚಿತ್ತ ಕೇಳಬೇಕಲ್ಲ. ಸುಖಿಸುವ ಆಸೆಗೆ ಬಲಬಂತು. ಚಿತ್ತದಿಂದಾಗಿ ರಾಜ್ಯಪಾಲ ಪದವಿ ದೂರವಾಯಿತು.

ಇದು ಚಿತ್ತದ ದೋಷ! ಆದರೂ ಯಾವ ತನುಗಳೂ ಇದು ಚಿತ್ತದ ದೋಷವೆಂದು ತಿಳಿಯುವುದೇ ಇಲ್ಲ. ತನುಗಳೆಲ್ಲ ಸೇರಿ ತನುವನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತವೆ. ಇದು ಕೂಡಾ ಚಿತ್ತದ ಮಹಿಮೆ. ಎನ್ನ ಚಿತ್ತ ಹತ್ತಿಯ ಹಣ್ಣು ವಿಚಾರಿಸಿ ನೋಡಿದರೆ ಹುರುಳಿಲ್ಲವಯ್ಯಾ!

ತನು ಹೆಣ್ಣಾದರೇನು, ಗಂಡಾದರೇನು? ತನುವಿನ ಚಿತ್ತ ಒಂದೇ. ತನುವಿನ ಭಾಷೆ ಯಾವುದಾದರೇನು? ತನುವಿನ ಚಿತ್ತ ಒಂದೇ. ತನುವಿನ ಚಿತ್ತದ ಪ್ರಭಾವದಿಂದಾಗಿಯೇ ತನುವಿಗೆ ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡು ಅಧಿಕಾರ ಶ್ರೀಮಂತ ಬಡವ ಭಿಕ್ಷುಕ ದರಿದ್ರ, ಪಂಡಿತ ಅಜ್ಞಾನಿ ಶಾಸ್ತ್ರಿ ಗುರು ಶಿಷ್ಯ ಸ್ವಾಮಿ ಜಗದ್ಗುರು ಶಾಸಕ ಮಂತ್ರಿ ಪ್ರಧಾನಿ ಎನ್ನುವ ರೋಗ ಅಂಟಿಕೊಂಡಿದೆ. ವಿಚಾರಿಸಿ ನೋಡಿದರೆ ಹುರುಳಿಲ್ಲವಯ್ಯಾ. ಅದು ತನು ಮಾತ್ರ. ತನುವನ್ನು ತನುವೆಂದು ತಿಳಿಯುವ ಶಕ್ತಿ ಚಿತ್ತದಿಂದಾಗಿ ತನು ಕಳೆದುಕೊಂಡಿದೆ.

ತನುವಿನಲ್ಲಿ ಇದೆಲ್ಲವನ್ನು ತಿಳಿಯುವ ಜ್ಞಾನವಿದೆ. ಆದರೂ ಚಿತ್ತದಿಂದಾಗಿ ತನು ಜ್ಞಾನವನ್ನು

ಪುಸ್ತಕದಲ್ಲಿ ಹುಡುಕುತ್ತದೆ. ಓದಿ ಕೆಟ್ಟ ಕೂಚು ಭಟ್ಟ ಎನ್ನುವ ಸ್ಥಿತಿ ತನುವಿಗೆ ಒದಗಿ ಬಂದಿದೆ.

''ಎನ್ನ ಚಿತ್ತವು ಹತ್ತಿಯ ಹಣ್ಣು'' ನೋಡಯ್ಯಾ: ಬಸವಣ್ಣನವರ ಈ ವಚನವನ್ನು ಪಂಡಿತ, ಸಾಹಿತಿ, ಸಂಶೋಧಕ, ವಿಚಾರವಾದಿ, ಉಪನ್ಯಾಸಕರಾದವರು ಬೇರೆ ಬೇರೆ ರೀತಿಯಿಂದ ಅರ್ಥೈಸಿಕೊಳ್ಳುತ್ತಾರೆ. ಬಸವಣ್ಣನವರದೇ ಈ ಗತಿಯಾದ ಮೇಲೆ ನಮ್ಮದೇನು ಎಂದು ಒಬ್ಬರು ತಿಳಿದರೆ, ಮತ್ತೊಬ್ಬರು ಬಸವಣ್ಣ ತಮ್ಮನ್ನು ವಿಮರ್ಶಿಸಿಕೊಂಡಿದ್ದಾರೆ ಎಂದು ತಿಳಿಯುತ್ತಾರೆ. ಇದು ಅವರವರ ತನುಗಳಲ್ಲಿಯ ಚಿತ್ತದ ಮಹಿಮೆಯೇ ಹೊರತು ಮತ್ತೇನೂ ಅಲ್ಲ. ಚಿತ್ತವನ್ನು ಸುಚಿತ್ತವನ್ನಾಗಿಸಿಕೊಳ್ಳಬೇಕೆಂಬ ಬಯಕೆ ಚಿತ್ತಕ್ಕೆ ಸುಳಿಯದಿದ್ದರೆ ಯಾರು ಯಾರಿಗೂ ಏನೂ ಮಾಡುವಂತಿಲ್ಲ.

ಬೆದಕದಿರು ಬೆದಕದಿರು, ಬೆದಕಿದಡೆ ಹುರುಳಿಲ್ಲ, ಚಿತ್ತರಟ್ಟೆಯ ಕಾಯಲ್ಲಿ ಮತ್ತೇನನರಸುವಿರಯ್ಯಾ?

''ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಪು ಮಾಡಿ ನೀವಿರಿಸಿದಿರಿ'' ಆದರೆ ''ಚಿತ್ತರಟ್ಟೆಯ ಕಾಯಲ್ಲಿ ಮತ್ತೇನನರಸುವಿರಯ್ಯಾ?'' ಎನ್ನುವ ಬಸವಣ್ಣನವರ ಇವೆರಡೂ ಮಾತುಗಳ ಮೂಲಕ ಚಿತ್ತವನ್ನು ಚಿತ್ತದಿಂದಲೇ ಗಮನಿಸುವ ಸುಳುಹು ತನುಗಳಿಗೆ ಲಭ್ಯವಾದಾಗ ಚಿತ್ತ ಸುಚಿತ್ತವಾಗುವುದರಲ್ಲಿ ಸಂದೇಹವೇ ಇಲ್ಲ.

ಜ್ಞಾನಕ್ಕೆ ಮಾತ್ರ ಆಶ್ರಯ ನೀಡಬೇಕಾದ ಕಾಯದಲ್ಲಿ ಚಿತ್ತ ಹೆಪ್ಪುಗಟ್ಟಿ ಚಿತ್ತರಟ್ಟೆಯ ಕಾಯ ಎನ್ನಿಸಿಕೊಂಡಿದೆ. ಜ್ಞಾನಕ್ಕೆ ಮಾತ್ರ ಆಶ್ರಯ ನೀಡಬೇಕು ಎಂದರೆ ಪುಸ್ತಕಗಳ ಜ್ಞಾನವನ್ನು ಸಂಗ್ರಹಿಸಿಕೊಳ್ಳಬೇಕು ಎಂದಲ್ಲ. ಚಿತ್ತದ ಅಜ್ಞಾನದಿಂದಾಗಿ ಕಾಯ ಪುಸ್ತಕಕ್ಕೆ ಶರಣು ಹೋಗುತ್ತದೆ. ಪುಸ್ತಕಗಳ ರುಚಿ ಉಂಡ ಚಿತ್ತ ಕಾಯದಲ್ಲಿಯೇ ಸಂಗಮವಾದ ಜ್ಞಾನದ ರುಚಿ ಉಣ್ಣಲು ಹೋದಾಗ ಆ ಮಹಾಜ್ಞಾನಕ್ಕೆ ಸಂಪೂರ್ಣ ಶರಣು ಹೋಗುತ್ತದೆ. ದಾಸನಾಗುತ್ತದೆ. ದಾಸಾನು ದಾಸನಾಗುತ್ತದೆ.

ಜ್ಞಾನ ಒಂದು ವಸ್ತುವಲ್ಲ. ಕಾಯದಲ್ಲಿಯೇ ಸಂಗಮವಾದ ಮತ್ತೊಂದು ಕಾಯ. ಈ ಕಾಯವನ್ನು ಶರಣರು ಅಕಾಯವೆಂದು ಕರೆದಿದ್ದಾರೆ. ಇದು ಕಾಣುವುದಿಲ್ಲ. ಕಂಡು ಬರುವ ಕಾಯಕ್ಕೆ ಆಧಾರವಾಗಿದೆ. ಕಾಯದಲ್ಲಿಯೇ ಇದೆ. ಕಾಯವನ್ನು ಸೋಂಕಿಲ್ಲ. ಕಾಯವನ್ನು ಬೆಳಗುತ್ತಿದೆ. ಬೆಳಗಿಂಗೆ ಬೆಳಕಾಗಿ ಬೆಳಗುತ್ತಲಿದೆ.

ಬೆಳಗಿಂಗೆ ಬೆಳಗಾಗಿ ಬೆಳಗುವ ಕಾಯ ಒಂದಾದರೆ; ಈ ಕಾಯದಿಂದಲೇ ಜನ್ಮ ಪಡೆದು, ಜನ್ಮ ನೀಡಿದ ಕಾಯವನ್ನೇ ಮರೆತು ಚಿತ್ತ ತುಂಬಿದ ಅಜ್ಞಾನದ ಕಾಯ ಮತ್ತೊಂದು. ಚಿತ್ತದಿಂದಾಗಿ ನಾನೇ ಸರ್ವಸ್ವ ಎಂದು ಅರಿತ ಅಜ್ಞಾನದ ಕಾಯಕ್ಕೆ ಕಾಯದಲ್ಲಿಯೇ ಸಂಗಮವಾದ ಅಕಾಯ ಪರಿಚಯವಾಗಬೇಕು. ಆಗ ಅಕಾಯದ ಮಹಿಮೆ ಕಾಯಕ್ಕೆ ತಿಳಿಯುವುದು.

ಬಾ ಅಪ್ಪಿಕೊ, ನನ್ನತ್ತ ಬಾ. ನನ್ನಲ್ಲಿ ಸಂಗಮವಾಗಿ ಸಂಗಮನಾಥನೇ ನೀನಾಗು. ನನ್ನ ಪರಿಚಯಕ್ಕಾಗಿ ಮಾತ್ರ ನಾನು ನಿನಗೆ ಜನ್ಮ ನೀಡಿದ್ದೇನೆ. ನನ್ನ ಪರಿಚಯವಾಗದ ವಿನಹ ನಿನಗೆ ಮುಕ್ತಿಯಿಲ್ಲ. ಹಾಗೆಯೇ ನಿನಗೆ ಬಂಧನವೂ ಇಲ್ಲ. ನಾನು ನಿನ್ನನ್ನು ಬಂಧಿಸಿಲ್ಲ. ನಿನಗರಿಯದಂತೆ ನಿನ್ನನ್ನು ನೀನೇ ಬಂಧಿಸಿಕೊಂಡಿರುವೆ. ನಿನಗೆ ನೀನೆ ಎಚ್ಚರವಾಗು. ನಿನ್ನ ಕಣ್ಣಲ್ಲಿಯೇ ಕಣ್ಣಾಗಿರುವ ಮುಕ್ಕಣ್ಣನ ಕಣ್ಣನ್ನು ಒಮ್ಮೆ ನಿನ್ನ ಕಣ್ಣಿಂದಲೇ ನೋಡು. ದೃಶ್ಯದ ಮೂಲಕ ಹೀಗೆ ಮಾತನಾಡಿ ಹೇಳುತ್ತಿರುವ ನಿನ್ನ ಆಲಿಯ ಅಜ್ಞಾನದ ದೃಶ್ಯಕ್ಕೆ ಈ ಮಾತು ಅರ್ಥವಾಗುತ್ತಿಲ್ಲ.

ಕಣ್ಣಾಲಿಯ ಮೂಲಕ ಅಜ್ಞಾನದ ದೃಶ್ಯ ಹೊತ್ತುಕೊಂಡು, ತನ್ನ ಚಿತ್ತ ವಸ್ತುವಿನ ಮೇಲೆ ಚೆಲ್ಲಿ, ಆ ವಸ್ತುವು ತನಗೆ ಬೇಕೆಂದು ಸ್ಥೂಲ ಕಾಯದ ಮೂಲಕ ಬೇಡುವ ಕಾಯವೂ ಅಕಾಯವೇ ಆಗಿದೆ. ಆದರೆ ಈ ಅಕಾಯ ಅಜ್ಞಾನದ ಕಾಯ; ಇದು ಕೂಡಾ ಕಾಣುವುದಿಲ್ಲ. ಕಾಣುವ ಕಾಯವನ್ನೇ ತನ್ನ ಸಾಮ್ರಾಜ್ಯ ಮಾಡಿಕೊಂಡು ರಾಜ್ಯಭಾರ ಮಾಡುತ್ತದೆ.

ಜ್ಞಾನ ಕಾಯವೂ ಅಕಾಯವೇ! ಅಜ್ಞಾನದ ಕಾಯವೂ ಅಕಾಯವೇ! ಇವೆರಡೂ ಕಾಯಗಳಿಗೆ ಸ್ಥೂಲಕಾಯ ಉಪಕರಣವಾಗಿದೆ. ಸಕಲ ಕಾಯಗಳಿಗೆ ಸ್ಥೂಲ ಕಾಯ ಮಾತ್ರ ಕಾಣುತ್ತದೆ. ಚಿತ್ತಭರಿತವಾದ ಅಜ್ಞಾನದ ಕಾಯ ಕಾಣುವುದಿಲ್ಲ. ಈ ಕಾಯಕ್ಕೆ ಹಾಗೂ ಸ್ಥೂಲಕಾಯಕ್ಕೆ ಜನ್ಮ ನೀಡಿದ ಜ್ಞಾನ ಕಾಯವೂ ಕಾಣುವುದಿಲ್ಲ.

ಸ್ಥೂಲ ಕಾಯವನ್ನೇ ಪಂಡಿತ ಕಳ್ಳ ಶ್ರೀಮಂತ ಬಡವ ಭಿಕ್ಷುಕ ರಾಜ ಮಂತ್ರಿ ಸೈನಿಕ ಅಧಿಕಾರಿ ಹೆಣ್ಣು ಗಂಡು ಎಂದು ಗುರುತಿಸಿ ಸಕಲ ಕಾಯಗಳೂ ಕರೆಯುತ್ತವೆ. ಜ್ಞಾನಿ ಎಂದು ಗುರುತಿಸಿ ಕರೆಯಿಸಿಕೊಳ್ಳುವ ಕಾಯ ಕೂಡಾ ಸ್ಥೂಲಕಾಯವೇ ಆಗಿದೆ. ಆದರೆ ಸ್ಥೂಲಕಾಯ ಉಪಕರಣ ಮಾತ್ರ ಎಂದು ಕರೆಯುವ ಕಾಯಗಳಿಗೆ ಹೊಳೆಯುವುದೇ ಇಲ್ಲ. ಹೀಗಾಗಿ ಅಜ್ಞಾನದ ಚಿತ್ತಭರಿತವಾದ ಅಕಾಯ ಮತ್ತು ಸಂಪೂರ್ಣ ಜ್ಞಾನ ಭರಿತವಾದ ಅಕಾಯ ಸ್ಥೂಲ ಕಾಯಗಳಿಗೆ ಕಂಡು ಬಾರದ ನಿಮಿತ್ತ ಕಾಯಗಳೆಲ್ಲ ಸೇರಿ ಸ್ಥೂಲ ಕಾಯವನ್ನೇ ಅಪರಾಧಿಯನ್ನಾಗಿಸುತ್ತವೆ. ಸ್ಥೂಲ ಕಾಯವನ್ನೇ ಜ್ಞಾನಿಯನ್ನಾಗಿಸುತ್ತವೆ.

ಅಜ್ಞಾನಕ್ಕೆ ಚಿತ್ತ ಭರಿತವಾದ ಅಕಾಯವೇ ಕಾರಣ. ಇದು ಹಾವು ಆದರೆ ಸ್ಥೂಲಕಾಯ ಹುತ್ತ. ಹುತ್ತದಲ್ಲಿ ಹುದಗಿದ ಹಾವು ಕಾಣುವುದಿಲ್ಲ. ಆದರೆ ಹುತ್ತಕ್ಕೆ ಹೊಡೆಯುತ್ತಾರೆ; ಹಾವು ಸಾಯುವುದಿಲ್ಲ; ಕೋಲು ಮುರಿಯುವುದಿಲ್ಲ. ''ಹುತ್ತವ ಬಡಿದರೆ ಹಾವು ಸಾಯಬಲ್ಲುದೇ ಅಯ್ಯಾ'' ಚಿತ್ತವೆಂಬ ಅಜ್ಞಾನದ ಹಾವು ಮಾಡಿದ ಅಪರಾಧಕ್ಕೆ ಕಾಯವೆಂಬ ಹುತ್ತವನ್ನು ಬಡಿದರೆ ಅಜ್ಞಾನದ ಹಾವು ಸಾಯುವುದೆ? ಆದರೆ ಅಜ್ಞಾನವೆಂಬ ಚಿತ್ತ ಆವರಿಸಿದ ಕಾಯಗಳಿಗೆ ತಿಳಿಯಬೇಕಲ್ಲ! ಜ್ಞಾನ ಭರಿತವಾದ ಕಾಯವನ್ನು ಬಾಧಿಸಬಾರದೆಂಬ ಸುಳುಹು ಕಾಯಗಳಿಗೆ ಹೊಳೆಯಬೇಕಲ್ಲ; ಹೊಳೆಯುವುದೇ ಇಲ್ಲ. ಹಾವು ಸಾಯುವುದಿಲ್ಲ; ಕೋಲು ಮುರಿಯುವುದಿಲ್ಲ. ಕಾಲಾನು ಕಾಲದಿಂದ ಚಿತ್ತದ ಕಾರಣದಿಂದಾಗಿ ಕಾಯದ ಅಜ್ಞಾನ ಹೀಗೇ ಮುಂದುವರೆದಿದೆ.

ಕಾಯದ ಅಜ್ಞಾನ ಕಾಯಕ್ಕೆ ತಿಳಿದು ಕಾಯದಲ್ಲಿಯೇ ಜ್ಞಾನದ ಕ್ರಾಂತಿ ಉಂಟಾಗಬೇಕು. ಅಕಾಯದ ಅಜ್ಞಾನವನ್ನು ಅಕಾಯದ ಜ್ಞಾನದಿಂದಲೇ ಕೊಲ್ಲಬೇಕು. ಈ ಜ್ಞಾನ ಯಜ್ಞಕ್ಕೆ ಕಾಯವೇ ಸಿದ್ದವಾಗಬೇಕು. ಸಕಲ ಕಾಯಗಳ ದೋಷ ಕಾಯಕ್ಕೆ ಹೊಳೆಯುತ್ತದೆ. ಸಕಲ ಕಾಯಗಳನ್ನೂ ಕಾಯ ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತದೆ. ಆದರೆ ಕಾಯದ ದೋಷ ಕಾಯಕ್ಕೆ ಹೊಳೆಯುವುದಿಲ್ಲ. ಇದು ಕಾಯವನ್ನು ಆವರಿಸಿದ ಚಿತ್ತದ ಪ್ರಭಾವವೆಂದು ಕಾಯಕ್ಕೆ ಹೊಳೆಯುವುದೇ ಇಲ್ಲ. ಇದು ಚಿತ್ತದ ಮಹಿಮೆ! ಸುಚಿತ್ತದಿಂದಲೇ ಬಗೆಹರಿಯುವುದು. ಜ್ಞಾನದ ಕೊಡಲಿಯಪೆಟ್ಟು ಬೇಕೇ ಬೇಕು.

ಕಾಯವನ್ನು ಆವರಿಸಿದ ಅಜ್ಞಾನದ ಹಾವನ್ನು ಕಾಯದಲ್ಲಿಯೇ ಸಂಗಮವಾದ ಜ್ಞಾನಿಯೆಂಬ ಹಾವಾಡಿಗ ಹಿಡಿದು, ಅದರ ವಿಷದ ಹಲ್ಲನ್ನು ಕಿತ್ತಿ, ಪಳಗಿಸಿ ತನ್ನಂತೆ ಆಡಿಸುತ್ತಾನೆ. ಕೊರಳಲ್ಲಿ ದರಿಸಿ ನಾಗಭೂಷಣನಾಗುತ್ತಾನೆ.

ನಿಮ್ಮ ಉತ್ತಮಿಕೆಯ ಪೂರೈಸುವುದು ಕೂಡಲಸಂಗಮದೇವಾ:

ಚಿತ್ತ ಭರಿತವಾದ ಅಜ್ಞಾನದ ಅಕಾಯದಿಂದಲೇ ''ನಿಮ್ಮ ಉತ್ತಮಿಕೆಯನ್ನು ಪೂರೈಸು'' ಎಂದು ಜ್ಞಾನ ಕಾಯವನ್ನು ಬೇಡಬೇಕು. ಜ್ಞಾನ ಕಾಯಕ್ಕೆ ಭಕ್ತಿ ಮಾಡಿ ಅಕಾಯ ಭಕ್ತನಾಗಬೇಕು. ಆಗ ಭಗವಂತನೂ ಅಕಾಯನೇ ಭಕ್ತನೂ ಅಕಾಯನೇ. ಅಕಾಯ ಭಗವಂತ ಅಕಾಯ ಭಕ್ತರಿಬ್ಬರೂ ಸ್ಥೂಲಕಾಯವನ್ನೇ ಕೈಲಾಸ ಮಾಡಿಕೊಂಡು ಅರ್ಧ ನಾರೀಶ್ವರರಾಗಿ, ಶಿವ-ಪಾರ್ವತಿಯರಾಗಿ ವಾಸ ಮಾಡುತ್ತಿರುವುದನ್ನು ತನಗೆ ತಾನೇ ಸಾಕ್ಷಿಯಾಗಿ ನೋಡಲು ಬರುತ್ತದೆ.

ಇದನ್ನೇ ಬಸವಣ್ಣನವರು ತಮ್ಮ ಒಂದು ವಚನದಲ್ಲಿ ''ನಾನಾ ವರ್ಣದ ಸಂಸಾರ ಹಾವು ಹಾವಾಡಿಗನಂತೆ'' ಎಂದಿದ್ದಾರೆ. ''ಮನವೇ ಸರ್ಪ, ತನುವೆ ಹೇಳಿಗೆ: ಹಾವಿನೊಡತಣ ಹುದುವಾಳಿಗೆ!'' ಎನ್ನುವ ಸೂತ್ರವನ್ನು ಹೇಳುತ್ತಾ ''ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ ನೋಡಾ; ಕೊಲುವುದು ತ್ರೈಜಗವೆಲ್ಲವ, ತನಗೆ ಬೇರೆ ಪ್ರಳಯವಿಲ್ಲ''. ಎನ್ನುವ ಸೂತ್ರವನ್ನು ಸಕಲ ಕಾಯಗಳಿಗೆ ಕರುಣಿಸಿದ್ದಾರೆ.

ತಲೆ ಬಾಲವಿಲ್ಲದ ಅಜ್ಞಾನದ ಹಾವೊಂದು ಸಕಲ ಕಾಯಗಳನ್ನು ಆವರಿಸಿ ಹೆಣ್ಣು ಗಂಡು, ಬಡವ ಶ್ರೀಮಂತ, ಪಂಡಿತ ಶಾಸ್ತ್ರಿ ಅಜ್ಞಾನಿ, ಜಾತಿ ಮತ ಪಂಥಗಳನ್ನು ಸೃಷ್ಟಿಸಿ, ಧರ್ಮದ ವಿಷ ಬೀಜವನ್ನು ಕಾಯದಲ್ಲಿಯೇ ಬಿತ್ತಿ, ಕಾಯಗಳಿಗೆ ಅರಿವಿಲ್ಲದಂತೆ ಕಾಯಗಳನ್ನೇ ತಿಂದು ಹಾಕುತ್ತದೆ. ರಾಜಸ ತಾಮಸ ಸಾತ್ವಿಕವೆಂಬ ಮೂರು ಗುಣಗಳುಳ್ಳ ಮೂರು ಲೋಕಗಳನ್ನೇ ಕೊಲ್ಲುತ್ತದೆ. ಕಾಯದ ಅಜ್ಞಾನವೇ ಕಾಯಕ್ಕೆ ಪ್ರಳಯ. ಇದರ ಹೊರತಾಗಿ ಕಾಯಕ್ಕೆ ಬೇರೆ ಪ್ರಳಯವೇ ಇಲ್ಲ.

ನದಿ ನದಿಯಲ್ಲಿ ಬೆರೆತು ನದಿಯ ಹೆಸರನ್ನು ಕಳೆದುಕೊಂಡು ಸಂಗಮವಾದಂತೆ, ಜ್ಞಾನ ಕಾಯದಲ್ಲಿ ಅಜ್ಞಾನ ಕಾಯ ಬೆರೆತು ಸ್ಥೂಲ ಕಾಯದಲ್ಲಿ ಸಂಗಮವಾಗಿ ಕೂಡಲಸಂಗಯ್ಯನೇ ತಾನಾಗಬಹುದೆಂಬ ಸುಳುಹಿನ ಸೂತ್ರವನ್ನು ಬಸವಣ್ಣನವರು ಹಾಗೂ ಸಿದ್ಧರಾಮ ಶಿವಯೋಗಿಗಳು ಸಕಲ ಕಾಯಗಳಿಗೂ ನೀಡಿದ್ದಾರೆ.

ಇದು ತನಗೆ ತಾನೇ ಮಾಡಿಕೊಳ್ಳುವ ಜ್ಞಾನ ಕ್ರಾಂತಿ. ಕಾಯದಲ್ಲಿ ಸಂಗಮವಾದ ಜ್ಞಾನಕ್ಕೆ ಕಾಯದಿಂದಲೇ ಶರಣು ಹೋಗಿ ಸ್ವಯಂ ಜ್ಞಾನಿಯಾಗುವ ಶರಣರ ಕ್ರಾಂತಿ!

**64**

**ಅಯ್ಯಾ, ಎನ್ನ ಮನದಲು ನಿಮಗೀ ಒಡವೆ ಕೆರೆಯೆಂದೂ**
**ತಿದ್ದುವುದೆಂಬ ಚಿಂತೆಯೆನೆಗೆ ಹೋ! ವಾ! ಹಾ!**
**ಅಯ್ಯಾ, ಇದ ಮಾಡಿಸು ಒಡೆಯಾ,**
**ಕೇಳು, ಕೇಳು, ಸಿದ್ಧಮಲ್ಲಿನಾಥಯ್ಯ.**

ಅಯ್ಯಾ, ಪರಮಾತ್ಮನೇ; ಮಹಾಜ್ಞಾನೇಶ್ವರನೇ; ನೀನು ವಾಸ ಮಾಡಿದ ಒಡಲನ್ನು ಮನಸ್ಸು ಬಳಸಿ; ತನ್ನ ಮನ ಬಂದಂತೆ ಬಳಸಿದುದೇ ಸಂಪೂರ್ಣ ನಿನ್ನನ್ನು ಮರೆತದ್ದೇ ತಪ್ಪಾಗಿದೆ. ಈಗ ಮನಕ್ಕೆ ಅರಿವಾಗಿದೆ. ಶಿವಧೋ ಶಿವಧೋ ಎನ್ನುವಂತಾಗಿದೆ. ನಿನ್ನ ಚರಣ ಕಮಲಕ್ಕೆರಗಿ ತಾನು ವಾಸಕ್ಕೆ ಬಳಸಿದ ಒಡಲನ್ನೇ ಕೆರೆಯನ್ನಾಗಿಸಿ ನಿನ್ನ ಒಡವೆಯೆಂಬ ಒಡಲನ್ನು ನಿನಗೇ ಅರ್ಪಿಸಿದೆ.

ಒಡಲು ಹಿಡಿದು, ಕೆರೆ ಅರವಟ್ಟಿಗೆಗಳನ್ನು ಕಟ್ಟಿ, ಅಹಂಕಾರದಿಂದ ಮೆರೆಯುವುದನ್ನು ಮರೆಯಿಸಿ, ಒಡಲನ್ನೇ ಪರಮಾತ್ಮನಿಗೆ ಬಿಟ್ಟುಕೊಟ್ಟಿದೆ. ಹೋ! ವಾ! ಹಾ! ಅಯ್ಯಾ, ಎನ್ನ ಮನವನ್ನು

ಎಚ್ಚರಿಸಿ, ನಿನ್ನ ಚರಣ ಕಮಲದತ್ತ ಸೆಳೆದುದಕ್ಕಾಗಿ, ಆನಂದದಿಂದ ಕುಣಿ ಕುಣಿದಾಡಿದೆ.

ದಾಹದಿಂದ ಬಳಲುವ ಒಡಲುಗಳಿಗೆ ಕೆರೆ ಕಟ್ಟಿದೆನೆಂಬ ಅಹಂಕಾರ. ಈ ಅಹಂಕಾರ ಸಾಮಾನ್ಯವಾದುದೇ? ಪರಮಾತ್ಮ ವಾಸ ಮಾಡಿದ ಒಡಲಿಗೆ ದಾಹವಾಗುವುದೆಂದರೇನು? ಒಡಲೊಡೆಯನ ಒಡವೆಗೆ ಕೆರೆ ಕಟ್ಟಿಸುವುದೆಂದರೇನು? ನೀರೊಳಗಿರ್ದೂ ನೀರಡಿಸಿದ ಅಗಸನ ಪರಿಯಂತಲ್ಲವೇ ಎನ್ನ ಬಾಳುವೆ? ಮನದ ಕೆಲಸವೇ ಹೀಗೆ. ಪರಮಾತ್ಮ ವಾಸ ಮಾಡಿದ ಒಡಲಿಗೆ ಸಹಾಯ ಮಾಡಿದ ಕೀರ್ತಿ ಶನಿ ಮನಕ್ಕೆ ; ತನಗಂಟಿದ ಕೀರ್ತಿ ಶನಿಯನ್ನು ಎಂದು ಕಳೆದುಕೊಳ್ಳಬೇಕು?

ಒಡೆಯಾ, ಈ ಒಡಲೆಂಬ ಒಡವೆಯೇ ನಿನ್ನ ಕೆರೆಯೆಂದು ತಿದ್ದುವ ಚಿಂತೆಯೆನಗೆ! ಹೋ! ವಾ! ಹಾ! ಅಯ್ಯಾ, ಇದನ್ನು ಎನ್ನಿಂದ ಮಾಡಿಸು ದೇವಾ.

ಗಂಗೆಯನ್ನು ಸದಾ ತಲೆಯ ಮೇಲಿಟ್ಟುಕೊಂಡ ಗಂಗಾಧರ ನೀನು. ನಿನಗೆ ದಾಹವೇ? ದಾಹವಾಗಿದೆಯೆಂದು ಕೆರೆ ಕಟ್ಟಿ ದಣಿಯುವ ಮೂರ್ಖ ನಾನಲ್ಲವೆ? ಕಟ್ಟಿದ ಕೆರೆಗೆ ಮಳೆಯೇ ಸುರಿಯದಿದ್ದರೆ ಹೇಗೆ ಎಂದು ಒಮ್ಮೆಯೂ ಚಿಂತಿಸಲಿಲ್ಲವಲ್ಲ! ನಿನ್ನನ್ನು ಮರೆತ ಮನದ ಪಾಡು ಹೀಗೇ ಒಡೆಯಾ. ಒಡಲನ್ನೇ ಕೆರೆಯಾಗಿಸಿಕೊಂಡ ಒಡೆಯನಿಗೆ ಮರೆತು ಕೆರೆ ಕಟ್ಟಿಸಿದಂತೆ. ಕಟ್ಟಿಸಿದರೆ ಕಟ್ಟಿಸು ಅದು ನೀನೇ ಚೆಲ್ಲಿದ ಜಲರಾಶಿಯೆಂದು ತಿಳಿಯದಿದ್ದರೆ ಹೇಗೆ? ಆ ಅಹಂಕಾರದಲ್ಲಿ ಮೆರೆಯುವ ಮನವನ್ನು ಎಚ್ಚರಿಸಿದ ತಂದೆಯೇ ನಿನ್ನೊಡವೆಯನ್ನು ನಿನಗೆ ಅರ್ಪಿಸಿದೆ ಒಡೆಯಾ. ಕೇಳು, ಕೇಳು, ಸಿದ್ದಮಲ್ಲಿನಾಥಯ್ಯನೇ!

65

**ಅಯ್ಯಾ, ಕರಣ ಕಂಬನಿಯ ದೆಸೆಗೆಟ್ಟ ವಾರಿಧಿಯೊಳಗೆ**
**ಮುಸುಕಿ ಮುಸುಕಿ ಮೋಹಿಸುತಿದ್ದೆ.**
**ಅಯ್ಯಾ, ದೆಸೆಗೆಟ್ಟ ಪಶುವಾನು**
**ಪಶುಪಾಶಮೋಚನ ಹಸುಳೆಯ**
**ನಿನ್ನ ವಶಕ್ಕೆ ತೆಗೆದೆತ್ತ ಬಾ ಎನ್ನ ಕರುಣಿ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕರುಣೆಯ ಕಂಬನಿ ಇಡೀ ಶರೀರವನ್ನೇ ಮೋಹದ ಪಾಶಕ್ಕೆ ಸಿಲುಕಿಸಿ ಆ ವಾರುಧಿಯೊಳಗೆ ತನಗರಿಯದಂತೆ ತನ್ನನ್ನು ಮುಳುಗಿಸುತ್ತದೆ. ದೆಸೆಗೆಟ್ಟ ಬಡ ಪಶುವನ್ನಾಗಿಸುತ್ತದೆ, ತನಗರಿಯದಂತೆ ಕರುಣೆಯ ರಸ ಉಕ್ಕಿ ಕಂಬನಿಯಾಗಿ ಹರಿದು ಅದರಲ್ಲಿ ತನ್ನ ಕಾಯವನ್ನು ತಪ್ಪನೆ ತೋಯಿಸುತ್ತದೆ.

ಕರುಣೆ ಕೂಡಾ ಒಂದು ಪಾಶವೆಂದು ಮನ ತಿಳಿಯುವುದಿಲ್ಲ. ತಿಳಿಯುವ ಶಕ್ತಿ ಯುಕ್ತಿ ಕೂಡಾ ಮನಕ್ಕಿಲ್ಲ. 'ಬಡಪಶು ಪಂಕದಲ್ಲಿ ಬಿದ್ದೊಡೆ ಕಾಲ ಬಡಿಯುವುದಲ್ಲದೆ ಮತ್ತೇನ ಮಾಡಬಲ್ಲುದು' ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ''ಪಶುವಾನು; ಪಶುಪತಿ ನೀನು. ತುಡುಗುಣಿಯೆಂದು ಹಿಡಿದು ಎನ್ನ ಬಡಿಯದ ಮುನ್ನ; ತಂದೆ ನಿನ್ನ ಬಯ್ಯದಂತೆ ಮಾಡು'' ಎಂದು ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೂ ಆದ ಸಂಗಯ್ಯನಿಗೆ ಮೊರೆ ಹೋಗಿದ್ದಾರೆ.

ತನುವಿನಲ್ಲಿ ಹುಟ್ಟಿದ ವಿಷಯ, ತನುವಿನಲ್ಲಿ ಹುಟ್ಟಿದ ಕರುಣೆ, ತನುವಿನಲ್ಲಿ ಹುಟ್ಟಿದ

ದ್ವೇಷ ಅಸೂಯೆಗಳನ್ನು ತನುವಿನಿಂದಲೇ ಕಳೆದುಕೊಳ್ಳಲು ಬರುವುದಿಲ್ಲ. ಮನದ ಮೂಲಕ ವಿಕಾರಗೊಂಡ ತನು, ಮನದ ಮೂಲಕವೇ ಕರುಣಾ ರಸವನ್ನು ಚೆಲ್ಲಿದ ತನು, ಕರುಣಾ ಕಂಬನಿಯ ಮೂಲಕ ಮುಸುಕಿ ಮುಸುಕಿ ಮೋಹಿಸುತ್ತಿದ್ದ ಮನ, ಮೋಹದ ಪಾಶಕ್ಕೆ ಸಿಲುಕಿದ ಮನ ದೆಸೆಗೆಟ್ಟ ಪಶುವಂತಾಗುತ್ತದೆ.

ತಾನೇ ಹೆಣೆದುಕೊಂಡ ಹಸುಳೆಯ ಪಶುವಿನ ಪಾಶದಿಂದ ಹೊರಬರಲು ಸಾಧ್ಯವಾಗದೆ ಕಾಲ ಬಡಿಯುವುದಲ್ಲದೆ ಮತ್ತೇನ ಮಾಡಬಲ್ಲುದು? ಕರುಣೆಯ ಕೆಸರಲ್ಲಿ ಸಿಕ್ಕಿ ಹಾಕಿಕೊಂಡ ಬಡಪಶುವನ್ನು ಪಶುಪತಿ ಮಾತ್ರ ಕಿತ್ತಿ ಹೊರಗೆಳೆಯಲು ಸಾಧ್ಯ.

ಪಶುವಿಗೆ ಪಶುವಿನಲ್ಲಿಯೇ ಸಂಗಮವಾದ ಪಶುಪತಿಗೆ ಮೊರೆ ಹೋಗುವ ಸೂತ್ರ ತಿಳಿಯಬೇಕು. ಆಗ ಪಶುಪಾಶ ಮೋಚನನಾದ ಪಶುಪತಿಯು ಹಸುಳೆಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಕರುಣೆಯಿಂದ ಪೋಷಿಸುತ್ತಾನೆ.

ಸಿದ್ಧರಾಮ ಶಿವಯೋಗಿಗಳು ಕರುಣೆಯ ಕಂಬನಿಯ ಮೋಹಪಾಶಕ್ಕೆ ಸಿಲುಕಿದ ಪಶುವೆಂಬ ತನುವನ್ನು, ಮುಸುಕಿ ಮುಸುಕಿ ಮೋಹಿಸುತ್ತಿದ್ದ ದೆಸೆಗೆಟ್ಟ ಪಶುವನ್ನು, ಪಶುವಿನ ಪಾಶ ಮೋಚನನೆ ಹಸುಳೆಯನ್ನು ನಿನ್ನ ವಶಕ್ಕೆ ತೆಗೆದುಕೋ ತಂದೆ. ಬಾ ಎನ್ನ ಕರುಣೆ ಕಪಿಲಸಿದ್ಧ ಮಲ್ಲಿಕಾರ್ಜುನನೆ ಎಂದು ಕೈಮುಗಿದು ಕರೆದಿದ್ದಾರೆ.

**66**

**ಅಯ್ಯಾ, ಕಾಮ ಕಾಡಿತ್ತು ಕ್ರೋಧ ಕೊಂದಿತ್ತು**
**ಆಮಿಷ ತಾಮಸಂಗಳೆಳವುತ್ತಿವೆ.**
**ಕರುಣಮಾಡಾ ಹರಹರಾ ಮಹಾದೇವ**
**ಕರುಣಮಾಡಾ ಶಿವಶಿವ ಮಹಾದೇವ**
**ಕರುಣಮಾಡಾ ದೆಸೆಗೆಟ್ಟ ಪಶುವಿಂಗೊಮ್ಮೆ**
**ಕರುಣಮಾಡಾ ವಶವಲ್ಲದ ಪಶುವಿಂಗೊಮ್ಮೆ**
**ಕರುಣಮಾಡಾ ನೀವಲ್ಲದೆ ಬಲ್ಲವರಿಲ್ಲ**
**ಕರುಣಮಾಡಾ ಅನ್ಯವ ನಾನರಿಯೆ**
**ನಿಮ್ಮ ಪಾದವನುರೆ ಮಚ್ಚಿದೆ,**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ತಂದೆ.**

ಕಾಮ ಕ್ರೋಧ ಆಮಿಷ ತಾಮಸಂಗಳುಂಟಾದಾಗ ದೇಹ ಅವುಗಳ ಸುಖ ದುಃಖದಲ್ಲಿ ಭಾಗಿಯಾಗುತ್ತದೆ. ಇದಕ್ಕೆ ಮನವೇ ಕಾರಣ. ಮನಕ್ಕೆ ಇವುಗಳೆಂದರೆ ಸುಖ. ಮನ ಸುಖದಲ್ಲಿದ್ದಾಗ ಕಾಮ ಕ್ರೋಧ ಆಮಿಷ ತಾಮಸಗಳನ್ನು ದುಃಖವೆಂದು ತಿಳಿಯುವುದಿಲ್ಲ. ಭೋಗದ ನಂತರ ಭಾಗಿದಾರನಿಗೆ ದುಃಖವಾಗುತ್ತದೆ. ಇದಕ್ಕೆ ಕಾರಣವೇನೆಂದು ಹುಡುಕಲು ಹೋದಾಗ ಮನವೇ ಕಾರಣವೆಂದು ಮನದಿಂದಲೇ ಮನಕ್ಕೆ ಗೊತ್ತಾಗುತ್ತದೆ. ಹಾಗೆ ಮನಕ್ಕೆ ಸಹಕರಿಸಿದ್ದು ಅರಿವು.

ಆ ಅರಿವನ್ನೇ ಸಿದ್ಧರಾಮ ಶಿವಯೋಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ಎನ್ನ ತಂದೆಯೇ ಎಂದು ಸಂಬೋಧಿಸಿದ. ಅಯ್ಯಾ ಕರುಣ ಮಾಡು ಹರಹರ ಮಹಾದೇವ ಶಿವಶಿವ ಮಹಾದೇವ, ಕರುಣ ಮಾಡು ದೆಸೆಗೆಟ್ಟ ಪಶುವಿಂಗೊಮ್ಮೆ. ಕರುಣ ಮಾಡು ತನ್ನ ವಶವಲ್ಲದ ಪಶುವಿಂಗೊಮ್ಮೆ.

ಕರುಣ ಮಾಡು ನೀವಲ್ಲದೆ ಬಲ್ಲವರಿಲ್ಲ ತಂದೆ. ನಿಮ್ಮ ಪಾದವ ನುರೆ ಮೆಚ್ಚಿದೆ ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆ ಎಂದು ಅಂಗಲಾಚಿ ಪರಿಪರಿಯಿಂದ ಬೇಡಿಕೊಂಡಿದ್ದಾರೆ.

ತನುವನ್ನು ತನ್ನ ಸುಖಕ್ಕೆಂದು ಕರೆದುಕೊಂಡು ಹೋದ ಮನ ತನುವನ್ನು ದುಃಖಕ್ಕೆ ಸಿಲುಕಿಸಿ ತಾನು ಪಾರಾಗುತ್ತದೆ. ಹೀಗೆ ತನುವಿನ ಆಯುಷ್ಯ ಪೂರ್ತಿ ತನುವನ್ನೇ ಬಳಕೆ ಮಾಡಿ ತನುವಿನ ಆಯುಷ್ಯ ಮುಗಿದ ಬಳಿಕ ಸಿಪ್ಪೆಯಂತೆ ದೇಹವನ್ನು ದೂರ ಮಾಡುತ್ತದೆ.

ಮನಕ್ಕೆ ಇದು ತಪ್ಪೆಂದು ಅರಿವಾದಾಗ ತನ್ನನ್ನು ತಾನೇ ನಿಯಂತ್ರಿಸಲು ಸಾಧ್ಯವಾಗುವುದಿಲ್ಲ. ತನ್ನ ಬಾಧೆಯನ್ನು ಬಲ್ಲ ಶರಣರಲ್ಲಿ ಹೇಳಿಕೊಂಡಾಗ ಆ ಮಹಾಜ್ಞಾನಿಗಳು ತನುವಿನಲ್ಲಿಯೇ ಸಂಗಮವಾದ ಅರಿವಿನ ದರ್ಶನವನ್ನು ಮನಕ್ಕೆ ಮಾಡಿಸುತ್ತಾರೆ.

ಮನಕ್ಕೆ ಅರಿವಾಗುತ್ತದೆ. ನಾನು ಅರಿವಿನ ಸಂಬಂಧಿ. ಆ ಅರಿವೆಂಬ ಗುರುದೇವನು ಕೂಡಾ ತನುವಿನಲ್ಲಿ ಇದ್ದಾನೆ. ಆತನಿಗೆ ಮೊರೆ ಹೋಗದೆ ಗತ್ಯಂತರವಿಲ್ಲವೆಂದು ತಿಳಿದು ಅಯ್ಯಾ ಕರುಣ ಮಾಡು ಮಹಾದೇವ ಶಿವಶಿವ ಮಹಾದೇವ ಎಂದು ಅರಿವೆಂಬ ಗುರುದೇವನನ್ನು ಪ್ರಾರ್ಥಿಸತೊಡಗುತ್ತದೆ.

ಮನ ಕತ್ತಲು. ಕತ್ತಲಲ್ಲಿ ಬಿದ್ದ ವಸ್ತುಗಳ ಪರಿಚಯ ಹೇಗೆ ಆಗುವುದಿಲ್ಲವೋ ಹಾಗೆ ಮನಕ್ಕೆ ಯಾವುದೂ ಗೊತ್ತಾಗುವುದಿಲ್ಲ. ತಾನು ಗೊತ್ತು ಮಾಡಿಕೊಂಡ ಸುಖವನ್ನು ದೇಹದ ಮೂಲಕ ಅನುಭವಿಸುತ್ತದೆ.

ಮದುವೆಯಾದರೂ ಮನ ಪರ ತನುವಿನ ಸುಖವನ್ನು ಬಯಸುತ್ತದೆ. ಸುಖ ಬಯಸಿದ್ದು ಮನ. ಸಿಕ್ಕಿ ಹಾಕಿಕೊಂಡಿದ್ದು ತನು. ಅಪಮಾನಕ್ಕೆ ಗುರಿಯಾದ ತನುವನ್ನು ಪುನಃ ಆತ್ಮಹತ್ಯೆಗೆ ಕರೆದುಕೊಂಡು ಹೋಗುತ್ತದೆ. ಮನಕ್ಕೆ ಸುಖ ಬಯಸಿದಾಗಲೂ ಸುಖ, ಹಾದರ ಮಾಡಿ ಸುಖ ಅನುಭವಿಸಿದಾಗಲೂ ಸುಖ, ತನು ಆತ್ಮಹತ್ಯೆಗೆ ಗುರಿಯಾದಾಗಲೂ ಮನಕ್ಕೆ ಸುಖ. ಇಂತಹ ದರಿದ್ರ ಗುಣಗಳುಳ್ಳ ನನ್ನನ್ನು ರಕ್ಷಣೆ ಮಾಡು ತಂದೆ ಎಂದು ತಾನು ವಾಸ ಮಾಡಿದ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಪ್ರಾರ್ಥಿಸುತ್ತದೆ.

ಹೀಗೆ ಪ್ರಾರ್ಥನೆ ಮಾಡುವ ಮೂಲಕ ಮನ ತನ್ನ ಗತಿಯನ್ನು ಬದಲಾಯಿಸುತ್ತದೆ. ಮನಕ್ಕೆ ಹೊಸ ಜನ್ಮ ಹೊಸ ಹುಟ್ಟು ಪ್ರಾರಂಭವಾಗುತ್ತದೆ. ತನುವಿನೊಂದಿಗೆ ಸದಾ ಬಾಹ್ಯ ಸುಖ ಅನುಭವಿಸುತ್ತಿದ್ದ ಮನ, ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಅಂತರಂಗದ ಸುಖ ಅನುಭವಿಸಲು ಸಿದ್ಧವಾಗುತ್ತದೆ.

ಕರಣ ಮಾಡು ತಂದೆ ನೀವಲ್ಲದೆ ಬಲ್ಲವರಿಲ್ಲ ಎಂದು ಗುರುದೇವನ ಮೊರೆ ಹೋಗುತ್ತದೆ. ಅನ್ಯವ ನಾನರಿಯೆ ನಿಮ್ಮ ಪಾದವೆ ಮೆಚ್ಚಿದೆ ಎಂದು ಹೇಳುತ್ತಾ ಅರಿವೆಂಬ ಗುರುದೇವನನ್ನು ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ನಾಮಕರಣ ಮಾಡಿ ಆ ಹೆಸರಿನಿಂದ ಕರೆಯಲು ಮನ ಪ್ರಾರಂಭಿಸುತ್ತದೆ.

ಮನ ಅರಿವನ್ನು ಗುರುದೇವನೆಂದು ಕರೆದು ಶಿಷ್ಯನಾಗುತ್ತದೆ. ಸಖನೆಂದು ಕರೆದು ಸಖಿಯಾಗುತ್ತದೆ. ನಲ್ಲನೆಂದು ಕರೆದು ಆತನ ಒಲುಮೆಯ ನಲ್ಲೆಯಾಗುತ್ತದೆ. ತಂದೆಯೆಂದು ಕರೆದು ಆ ತಂದೆಗೆ ಕಂದನಾಗುತ್ತದೆ. ಪತಿಯೆಂದು ಕರೆದು ಆ ಪತಿಗೆ ಸತಿಯಾಗುತ್ತದೆ. ಹೀಗೆ ಮನ ಮತ್ತು ಅರಿವಿನ ಸಂಬಂಧ ಮುಂದುವರೆದು ಮನ ಒಮ್ಮೆ ಆ ಅರಿವಿನಲ್ಲಿ ಸಂಗಮವಾಗಿ ಘನಮನವಾಗುತ್ತದೆ.

**67**

**ಅಯ್ಯಾ, ಗುರುವೆಂಬ ಮಹಾಜ್ವಾಲೆಯಲ್ಲಿ ದಹನವಾದೆ**
**ಬಸವಾಕ್ಷರವೆಂಬ ಮರುಜೆವಣಿಯಲ್ಲಿ ಭವಿಸಿದೆ**
**ಉಂಡೆ ನಾನು ಶಿಶುವಾಗಿ ಶುದ್ಧಸಿದ್ಧಪ್ರಸಿದ್ಧವೆಂಬ ಪ್ರಸಾದತ್ರಯ**
**ಏಕೀಭವಿಸಿ ಕೊಂಡೆ ಎನಗಿನ್ನರಿದಿಲ್ಲ.**
**ನೀನೊಟ್ಟತ್ತೆ ಮಾರಿದ ಮಾರಿಂಗೆ ಸಂದೆ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಉರಿಯುವ ಜ್ವಾಲೆ ಬೆಳಕು ಕೊಡುತ್ತದೆ ಹಾಗೆಯೇ ಆ ಜ್ವಾಲೆಯ ಬೆಳಕಿನಿಂದ ನೆರಳು ಹುಟ್ಟುತ್ತದೆ. ಬೆಳಕು ಮತ್ತು ನೆರಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಬೆಳಕಿನ ಹಿಂದೆಯೇ ನೆರಳಿದೆ. ನೆರಳು ಬೆಳಕಿನಿಂದ ಹುಟ್ಟಿದುದಕ್ಕಾಗಿ ಬೆಳಕಿನ ಮಾತಾಡುತ್ತದೆ. ಹೀಗಾಗಿ ಗುರುವೇಷದ ತನುಗಳೆಲ್ಲ ಬೆಳಕಲ್ಲ. ಆದರೂ ಬೆಳಕಿನ ಮಾತನಾಡುತ್ತವೆ. ಸ್ವತಃ ತಾನು ಬೆಳಕಲ್ಲ; ತನಗೆ ತಾನು ಬೆಳಕೆಂದುಕೊಂಡು ತಾನೇ ಮೋಸಕ್ಕೆ ಗುರಿಯಾಗಿದ್ದಾನೆ. ಹಾಗೆಯೇ ಇತರ ತನುಗಳನ್ನು ಮೋಸಕ್ಕೆ ಗುರಿ ಮಾಡಿದ್ದಾನೆ. ತಾನು ಹುಟ್ಟಿದ ಮಹಾಜ್ವಾಲೆಯಲ್ಲಿ ತಾನೇ ಜಿಗಿದು ಭಸ್ಮವಾದಾಗ ಮಾತ್ರ ತನ್ನ ಕತ್ತಲ ಜನ್ಮ ನಾಶವಾಗುತ್ತದೆ.

ಬಸವಾಕ್ಷರವೆಂಬ ಮರಣವಿಲ್ಲದ ಮರುಜವಣಿಯ ಹಣ್ಣ ಮೆದ್ದು ಪುನಃ ಬೆಳಕಿನ ಶಿಶುವಾಗಿ ಶುದ್ಧ ಸಿದ್ಧ ಪ್ರಸಿದ್ಧವೆಂಬ ಪ್ರಸಾದ ತ್ರಯದಿಂದ ಬೆಳಗಿ ಬೆಳಗಿಂಗೆ ಬೆಳಗಾಗಿ ನಿರಂತರ ಬೆಳಗುವ ಪ್ರಕ್ರಿಯೆ ಆರಂಭವಾಗುತ್ತದೆ. ಇನ್ನು ಅದಕ್ಕೆ ಸಾವಿಲ್ಲ. ಕೇಡಿಲ್ಲ.

ಬಯಲು ಜೀವನ ಬಯಲು ಭಾವನೆಗಳ ಯಾತ್ರೆ ಮುಗಿಸಿಕೊಂಡು ಬಯಲಾಗಿ ಬಯಲು ಸೇರಿದ ಮೇಲೆ ಆ ಬಯಲಿಗೆ ಸಾವುಂಟೆ? ಆ ಬಯಲಿಗೆ ಕೇಡುಂಟೆ? ಆ ಬಯಲ ಬೀಜದಿಂದ ಹುಟ್ಟಿ ಆ ಬಯಲನ್ನು ಮರೆತುದರಿಂದ ಹುಟ್ಟು ಸಾವುಗಳಿಂದ ನರಳಿದೆ. ಪುನಃ ಅರಿವೆಂಬ ಗುರುದೇವನ ಜ್ವಾಲೆಯಿಂದ ಸುಟ್ಟು ಭಸ್ಮವಾಗಿ ಬಸವಾಕ್ಷರದಿಂದ ಜನ್ಮ ಪಡೆದ ಬಳಿಕ ಜನನ ಮರಣಗಳಿಲ್ಲದ ಮರುಜವಣೆಯ ಹಣ್ಣ ಮೆದ್ದ ಬಳಿಕ ಸಾವಿಲ್ಲ. ಹಾಗೆಯೇ ನನಗೆ ಹುಟ್ಟು ಸಹಿತ ಇಲ್ಲವೆಂದು ತಿಳಿದುಕೊಂಡೆ. ಗರ್ಭದ ಮುಖಾಂತರ ಬರುವುದು ಜನನವಲ್ಲ ಎಂದು ಬಸವಾಕ್ಷರ ಮೆದ್ದ ಬಳಿಕ ತಿಳಿಯಿತು.

ಅದು ನೀನೇ ನನಗೆ ಒಡ್ಡಿದ ಅಜ್ಞಾನ. ಅದು ನಿನ್ನ ಲೀಲೆ. ನೀನೇ ಹಡೆದು ನಿನ್ನನ್ನು ಮರೆಯಿಸುವಂತೆ ಮಾಡಿದ ನಿನ್ನ ಲೀಲೆ. ಬೆಳೆದು ದೊಡ್ಡವನಾದ ಮೇಲೆ ನೀನೊಡ್ಡಿದ ಮಾರಿ ನಿನ್ನನ್ನು ತಿಳಿಯುವುದರಿಂದಲೇ ದೂರವಾಯಿತು. ಎನಗೆ ನೀನೇ ತಂದೆಯಾದೆ. ತಾಯಿಯಾದೆ. ಬಂಧುವಾದೆ. ಬಳಗವಾದೆ. ನಿನ್ನಿಂದಧಿಕವಾದ ಬಂಧುಗಳು ಯಾರೂ ಇಲ್ಲವೆಂದು ನಿನ್ನ ಮೂರಕ್ಷರಗಳಿಂದಲೇ ನನಗೆ ತಿಳಿಯಿತು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ.

**68**

**ಅಯ್ಯಾ, ಜಗತ್ಪಾವನ ನಿಮಿತ್ಯರ್ಥವಾಗಿ**
**ಸಾಕಾರಲೀಲೆಯ ಧರಿಸಿದ ಸ್ವಯಚರಪರಗುರುಚರಮೂರ್ತಿಗಳ**

ಅರ್ಪಿತಾವಧಾನದ ನಿಲುಕಡೆಯೆಂತೆಂದಡೆ:
ಲಿಂಗಾಚಾರ ಮೊದಲಾದ ಸದ್ಭಕ್ತಶರಣಗಣಂಗಳಲ್ಲಿ
ಲಿಂಗಾರ್ಪಿತ ಭಿಕ್ಷಲೀಲೆಯ ಧರಿಸಿ ಹೋದ ವ್ಯಾಳ್ಯದೊಳು
ಆ ಭಕ್ತಗಣಂಗಳು ಶರಣುಹೊಕ್ಕು
ಸಮುಸ್ತ ಆಚರಣೆಯ ಒದಗಿಸಿಕೊಟ್ಟಲ್ಲಿ
ದಶವಿಧ ಪಾದೋದಕ
ಏಕಾದಶ ಪ್ರಸಾದದಾಚರಣೆಯಾಗುವುದಯ್ಯಾ.
ಇಂತು ಲಿಂಗಾಚಾರ ಭಕ್ತಗಣಂಗಳು ದೊರೆಯದಿರ್ದಡೆ
ವೇದಾಂತಿ ಸಿದ್ಧಾಂತಿ ಭಿನ್ನಯೋಗಿ ಮೊದಲಾದ ಸಮಸ್ತಮತದಿಂದ
ಏಕಶಬ್ದಭಿಕ್ಷವ ಸಪ್ತಗೃಹವ ಬೇಡಿ
ದುರ್ಗುಣಯುಕ್ತವಾದ ಅಯೋಗ್ಯದ್ರವ್ಯವನುಳಿದು
ಸದ್ಗುಣಯುಕ್ತವಾದ ಯೋಗ್ಯದ್ರವ್ಯವ ಕೈಕೊಂಡು,
ಧೂಳಪಾದಜಲದಿಂದ ಭವಿತನವ ಕಳೆದು ಭಕ್ತಿಪದಾರ್ಥವೆನಿಸಿ
ಅರ್ಘ್ಯಪಾದ್ಯಾಚಮನವ ಮಾಡಿ
ಧಾನ್ಯವಾದಡೆ ಪರಿಣಾಮಜಲದಿಂ ಶೋಧಿಸಿ ಪಾಕವ ಮಾಡಿ,
ಫಲಾಹಾರವಾದಡೆ ಶೋಧಿಸಿ ಪಕ್ವವ ಮಾಡಿಟ್ಟು
ಆಮೇಲೆ, ಅಯ್ಯಾ, ನಿನಗೆ ಭಕ್ತಗಣಂಗಳು ದೊರೆಯದ ಸಮಯದಲ್ಲಿ
ಚತುರ್ವಿಧ ಪಾದೋದಕವೆಂತುಟೆಂದಡೆ:
ಏಕಾಂತವಾಸದಲ್ಲಿ ಪರಿಣಾಮತರವಾದ
ಹಳ್ಳ ಹೊಳೆ ಕೆರೆ ಬಾವಿ ಮಡು ಹೊಂಡ ಚಿಲುಮೆ ಕೊಳ
ಮೊದಲಾದ ಸ್ಥಾನಕ್ಕೆ ಹೋಗಿ
ಪ್ರಥಮದಲ್ಲಿ 'ಶಿವ ಶಿವ! ಹರಹರ! ಗುರುಬಸವಲಿಂಗ!' ಎಂಬ
ಮಂತ್ರಧ್ಯಾನದಿಂದ ಪಾದವನಿಟ್ಟು ಚರಣಸೋಂಕಿನಿಂ ಪವಿತ್ರವಾದುದಕವೆ
ಧೂಳಪಾದೋದಕವೆನಿಸುವದಯ್ಯ;
ಆ ಮೇಲೆ ತಂಬಿಗೆಯೊಳಗೆ ಶೋಧಿಸಿ ಬಸವಾಕ್ಷರವ ಲಿಖಿಸುವದೆ
ಗುರುಪಾದೋದಕವೆನಿಸುವದಯ್ಯ;
ಆ ಮೇಲೆ ಅರ್ಚನಾಕ್ರಿಯೆಗಳ ತೀರ್ಚಿಸಿಕೊಂಡು
ನಿಚ್ಚಪ್ರಸಾದಿ ಸಂಬಂಧಾಚರಣೆಯಂತೆ ಮುಗಿದಲ್ಲಿ
ಜಂಗಮ ಪಾದೋದಕವೆನಿಸುವದಯ್ಯ.
ಇಂತು ಚತುರ್ವಿಧ ಪಾದೋದಕದೊಳಗೆ ಷಡ್ವಿಧ ಪಾದೋದಕ ಉಂಟಯ್ಯ.
ಅದೆಂತೆಂದಡೆ :
ಹಸ್ತವಿಟ್ಟು ಸ್ಪರ್ಶನವ ಮಾಡೆ ಸ್ಪರ್ಶನೋದಕವೆನಿಸುವದಯ್ಯ;
ಲಿಂಗಕ್ಕೆ ಧಾರೆಯಿಂದ ಅಭಿಷೇಕವ ಎರೆದಲ್ಲಿ
ಅವಧಾರೋದಕವೆನಿಸುವದಯ್ಯ;

ಲಿಂಗಾರ್ಪಿತವ ಮಾಡಬೇಕೆಂಬ ಆನಂದವೆ
ಆಪ್ಯಾಯನೋದಕವೆಂದೆನಿಸುವದಯ್ಯ;
ಅರ್ಪಿತಮುಖದಲ್ಲಿ ಹಸ್ತವ ಪ್ರಕ್ಷಾಲಿಸಿ ಖಂಡಿತವ ಮಾಡಿದಲ್ಲಿಗೆ
ಹಸ್ತೋದಕವೆನಿಸುವದಯ್ಯ;
ಲಿಂಗಕ್ಕೆ ಸಂತೃಪ್ತಿಪರಿಯಂತರವು ಅರ್ಪಿತವ ಮಾಡಿದಲ್ಲಿ
ಪರಿಣಾಮೋದಕವೆನಿಸುವದಯ್ಯ;
ತಟ್ಟೆ ಬಟ್ಟಲ ಲೇಹವ ಮಾಡಿದಲ್ಲಿ ನಿರ್ನಾಮೋದಕವೆನಿಸುವದಯ್ಯ;
ಲೇಪವ ಮಾಡಿದ ಮೇಲೆ ದ್ರವ್ಯವನಾರಿಸಿ ಸರ್ವಾಂಗದಲ್ಲಿ
ಲೇಪಿಸುವದೆ ಸತ್ಯೋದಕವೆನಿಸುವದಯ್ಯ.
ಇಂತೀ ದಶವಿಧ ಪಾದೋದಕದ ವಿಚಾರವ ತಿಳಿದು
ಆ ಮೇಲೆ ನಿಚ್ಚ ಪ್ರಸಾದಿಯ ಸಂಬಂಧಾಚರಣೆಯಂತೆ
ಪ್ರಸಾದವ ಮುಗಿವುದಯ್ಯ.
ಅದರೊಳಗೆ ಏಕಾದಶಪ್ರಸಾದದ ವಿಚಾರವೆಂತೆಂದಡೆ:
ಪ್ರಥಮದಲ್ಲಿ ಹಸ್ತಸ್ಪರ್ಶ ಮಾಡಿದಂತಹದೆ
ಗುರುಪ್ರಸಾದವೆನಿಸುವದಯ್ಯ;
ಇಷ್ಟ ಮಹಾಲಿಂಗಕ್ಕೆ ಮಂತ್ರಸ್ಮರಣೆಯಿಂದ ಮೂರು ವೇಳೆ
ರೂಪನರ್ಪಿಸಿದಲ್ಲಿಗೆ ಲಿಂಗಪ್ರಸಾದವೆನಿಸುವದಯ್ಯ;
ಎರಡು ವೇಳೆ ಇಷ್ಟ ಮಹಾಲಿಂಗದೇವಂಗೆ
ರೂಪನರ್ಪಿಸಿ ಜಿಹ್ವೆಯಲ್ಲಿಟ್ಟಲ್ಲಿ
ಜಂಗಮ ಪ್ರಸಾದವೆನಿಸುವದಯ್ಯ;
ಆ ಮೇಲೆ ಲಿಂಗದೇವಂಗೆ ತೋರಿ ಜೋಜೆಗಟ್ಟಿ
ಲಿಂಗದೇವಂಗೆ ತೋರಿ ಜಿಹ್ವೆಯಲ್ಲಿಟ್ಟಂತಹದೆ
ಪ್ರಸಾದಿಯ ಪ್ರಸಾದವೆನಿಸುವದಯ್ಯ.
ಆ ಭೋಜ್ಯರೂಪಾದ ಪ್ರಸಾದಿಯ ಪ್ರಸಾದದೊಳಗೆ
ಮಧುರ ಒಗರು ಕಾರ ಆಮ್ಲ ಕಹಿ ತೃಪ್ತಿ-ಮಹಾತೃಪ್ತಿಯೆ
ಆಪ್ಯಾಯನ, ಸಮಯ, ಪಂಚೇಂದ್ರಿಯವಿರಹಿತ,
ಕರಣಚತುಷ್ಟಯವಿರಹಿತ, ಸದ್ಭಾವ, ಸಮತೆ, ಜ್ಞಾನಪ್ರಸಾದ
ಮೊದಲಾದವು ಸಪ್ತವಿಧಪ್ರಸಾದವೆನಿಸುವದಯ್ಯ.
ಇಂತು ಪರಾಧೀನತೆಯಿಂ ಭಿಕ್ಷವ ಬೇಡಲಾರದಿರ್ದಡೆ,
ಅರಣ್ಯದಲ್ಲಿ ಫಲರಸಯುಕ್ತವಾದ ಹಣ್ಣು ಕಾಯಿಗಳ
ಲಿಂಗಾರ್ಪಿತಭಿಕ್ಷಾಯೆಂದು ಆ ಫಲಾದಿಗಳ ತೆಗೆದುಕೊಂಡು ಶೋಧಿಸಿ,
ಪವಿತ್ರವ ಮಾಡಿ ಲಿಂಗಾರ್ಪಿತ ಭೋಗಿಯಾದಾತನೆ
ಸ್ವಯಂಭು ಪ್ರಸಾದ ಭಕ್ತನಾದ ಚಿತ್ಕಲಾಪ್ರಸಾದಿ ನೋಡಾ,
ಕಪಿಲಸಿದ್ಧ ಮಲ್ಲಿಕಾರ್ಜುನಾ.

ಪರಮಾನಂದದ ಸಹಜ ಸಂತೋಷವನ್ನು ಪಡೆಯುವುದಕ್ಕಾಗಿ ದೇಹ ಸಾಕಾರ ರೂಪು ತಾಳಿ ಅವತರಿಸಿದೆ. ಜಗದ ಸಕಲ ದೇಹಗಳೂ ದೇಹದ ಸಾಕಾರ ಲೀಲೆಯ ಸುಖವನ್ನು ಉಣ್ಣಲೆಂಬ ಮಹಾದಾಸೆಯನ್ನು ಗುರು ಚರಮೂರ್ತಿಗಳು ಹೊಂದಿದ್ದಾರೆ.

ಗುರುಗಳೆಂದರೆ ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ನಿರಾಕಾರ ಲೀಲೆಯನ್ನು ಅನುಭವಿಸಿದವರು. ಅವರು ಚರಮೂರ್ತಿಗಳಾಗಿ ಅಲಿಯುತ್ತಾ, ಆಸಕ್ತಿ ಹೊಂದಿದ ದೇಹಗಳಿಗೆ ದೇವರ ನಿರಾಕಾರ ಸುಖದ ಅನುಭವವನ್ನು ಹೇಳುತ್ತ, ಆ ದೇಹಕ್ಕೆ ಅನುಭವ ಮಾಡಿಸುವರು. ಆ ಅನುಭವದ ಸಾರಾಂಶವನ್ನು ಸಿದ್ಧರಾಮ ಶಿವಯೋಗಿಗಳು ಸಕಲ ದೇಹಗಳಿಗೂ ತಿಳಿಯುವಂತೆ ಅಕ್ಷರದ ರೂಪು ನೀಡುವ ಮೂಲಕ 69 ಸಾಲುಗಳುಳ್ಳ ವಚನವನ್ನು ಓದುಗರಿಗೆ ಉಣ ಬಡಿಸಿದ್ದಾರೆ.

ಪರಮಾತ್ಮ ಸಾಕಾರನೆಂದು ಕೆಲವರು ವಾದ ಮಾಡಿದರೆ ಮತ್ತೆ ಕೆಲವರು ನಿರಾಕಾರನೆಂದು ವಾದ ಮಾಡುತ್ತಾರೆ. ಹೀಗೆ ವಾದ ಮಾಡುವ ಜನರಿಂದ ಜಗತ್ತು ನಿರ್ಮಾಣವಾಗಿದೆ.

ನಿರಾಕಾರವೆಂದು ತಿಳಿದು ಪ್ರಾರ್ಥಿಸುವ ಜನ; ಸಾಕಾರವೆಂದು ತಿಳಿದು ಆರಾಧಿಸುವ ಜನ ಸಿಕ್ಕುತ್ತಾರೆ. ದೇವರೆಂದರೆ ಯಾರು? ನಿರಾಕಾರವೆಂದರೆ ಹೇಗೆ? ಸಾಕಾರವೆಂದರೆ ಹೇಗೆ? ಆತನನ್ನು ಸಾಕ್ಷಾತ್ಕರಿಸಿಕೊಳ್ಳಲೇಬೇಕು ಎಂಬ ಛಲ ಹೊಂದಿದವರು ಮಾತ್ರ ವಿರಳ. ವಿರಳಾತಿ ವಿರಳ.

ದೇಹದಲ್ಲಿಯೇ ಸಂಗಮವಾದ ದೇವರು ನಿರಾಕಾರ! ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದು ಬಯಸಿದ ಮನವೂ ನಿರಾಕಾರ! ಇವರಿಬ್ಬರನ್ನೂ ಹೊಂದಿದ ದೇಹ ಸಾಕಾರ!

ದೇಹದಲ್ಲಿ ಸಂಗಮವಾದ ಅರಿವೆಂಬ ಗುರುದೇವನೆ ದೇವರು. ದೇಹವನ್ನು ಆವರಿಸಿದ ಮನವೇ ಭಕ್ತ. ಈ ಭಕ್ತ, ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಶರಣು ಹೋಗುವವನೇ ಶರಣ. ಶರಣ ಸತಿಯಾದರೆ ಲಿಂಗ ಪತಿ. ಅರಿವೆಂಬ ಗುರುದೇವನನ್ನೇ ಲಿಂಗವೆಂದು ಹೆಸರಿಸಿ ಆ ಲಿಂಗದೇವನನ್ನೇ ಪತಿಯನ್ನಾಗಿ ಮಾಡಿಕೊಂಡು; ಆ ಪತಿಗೆ ಶರಣ ಸತಿಯಾಗುತ್ತಾನೆ. ಸತಿ-ಪತಿಗಳು ಒಂದಾಗಿ; ದೇಹವನ್ನೇ ಮನೆ ಮಾಡಿಕೊಂಡು; ಆ ಮನೆಯಲ್ಲಿ ಸತಿ ಪತಿಗಳು ಅರಿವಿನ ಸಂಸಾರ ಹೂಡುತ್ತಾರೆ.

ಇಂತಹ ಸದ್ಭಕ್ತ ಶರಣಗಣಂಗಳಲ್ಲಿ ಭಕ್ತ ಗಣಂಗಳು ಶರಣು ಹೊಕ್ಕರೆ ದಶವಿಧ ಪಾದೋದಕ ಏಕಾದಶ ಪ್ರಸಾದದ ಆಚರಣೆಯು ಸಹಜವಾಗಿಯೇ ಆಗುವುದು. ಶರಣರು ಆಸಕ್ತ ಭಕ್ತರನ್ನು ಅರಿವಿನ ಶಿವನ ದರ್ಶನಕ್ಕೆ ಸರಳವಾಗಿ ಕರೆದುಕೊಂಡು ಹೋಗುವರು. ಆಗ ಭಕ್ತರಿಗೆ ಯಾವ ಆಚಾರದ ಅವಶ್ಯಕತೆಯೂ ಇರುವುದಿಲ್ಲ.

ಆಸಕ್ತ ಭಕ್ತನಿಗೆ ಶರಣರು ದೊರೆಯದಿದ್ದಲ್ಲಿ ದಶವಿಧ ಪಾದೋದಕ, ಏಕಾದಶ ಪ್ರಸಾದದ ಆಚರಣೆಯ ಮೂಲಕ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಕಂಡುಕೊಳ್ಳಬಹುದಾಗಿದೆ ಎಂದು ಆ ಅರಿವಿನ ಅಗೋಚರದ ಆಚಾರವನ್ನು ಈ ವಚನದ ಮೂಲಕ ವಿವರಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಧೂಳಪಾದೋದಕ, ಗುರುಪಾದೋದಕ, ಜಂಗಮ ಪಾದೋದಕ, ಸ್ಪರ್ಶನೋದಕ, ಅವಧಾರೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ, ಇವು ದಶ ವಿಧ ಪಾದೋದಕ.

ಗುರುಪ್ರಸಾದ, ಲಿಂಗಪ್ರಸಾದ, ಜಂಗಮಪ್ರಸಾದ, ಪ್ರಸಾದಿಯ ಪ್ರಸಾದದೊಳಗೆ

ಮಧುರ, ಒಗರು, ಕಾರ, ಆಮ್ಲ, ಕಹಿ, ತೃಪ್ತಿ-ಮಹಾತೃಪ್ತಿಯ ಆಪ್ಯಾಯನ, ಸಮಯ, ಪಂಚೇಂದ್ರಿಯ ವಿರಹಿತ, ಕರಣ ಚತುಷ್ಟಯ ವಿರಹಿತ, ಸದ್ಭಾವ, ಸಮತೆ, ಜ್ಞಾನಪ್ರಸಾದ ಮೊದಲಾದವು ಸಪ್ತವಿಧ ಪ್ರಸಾದವೆನಿಸುವುದು ಎಂದು ಹೇಳಿದ್ದಾರೆ.

ದಶವಿಧ ಪಾದೋದಕದ ಮೂಲಕ, ಏಕಾದಶ ಪ್ರಸಾದದ ಅಗೋಚರದ ಆಚರಣೆಯ ಮೂಲಕ ಸತ್ಯದರ್ಶನ ಮಾಡಿಕೊಂಡು ಸ್ವಯಂಭು ಪ್ರಸಾದಿ, ಚಿತ್ಕಲಾಪ್ರಸಾದಿಯಾಗಬಹುದು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಧೂಳ ಪಾದೋದಕ:

ಹಳ್ಳ, ಹೊಳೆ, ಕೆರೆ, ಬಾವಿ, ಮಡು, ಹೊಂಡ, ಚಿಲುಮೆ, ಕೊಳ ಮೊದಲಾದ ಜಲವಿರುವ ಸ್ಥಳಕ್ಕೆ ಹೋಗಿ ಶಿವ ಶಿವ, ಹರಹರ, ಗುರುಬಸವಲಿಂಗ ಎಂಬ ಮಂತ್ರಧ್ಯಾನದಿಂದ ಪಾದವನಿಟ್ಟಲ್ಲಿ ಆ ಪಾದದ ಸೋಂಕಿನಿಂದ ಉದಕ ಪವಿತ್ರವಾಗುತ್ತದೆ. ಇದನ್ನೇ ಧೂಳಪಾದೋದಕ ಎಂದು ಶರಣರು ಕರೆದಿದ್ದಾರೆ.

ಜಲಬಿಂದುವೇ ಜೀವಜಲಬಿಂದುವಾಗಿ ಮಹಾಜ್ಞಾನವೆಂಬ ಬಯಲ ಬೀಜದೊಂದಿಗೆ ಗರ್ಭ ಸೇರಿ ದೇಹವೆಂಬ ದೇವಾಲಯವಾಗಿ ಹೊರಬಂದಿದೆ. ದೇಹದಲ್ಲಿ ದೇವರು ಇದ್ದಾನೆ. ದೇವರನ್ನು ಕಾಣುವ ಮನವೆಂಬ ಭಕ್ತನೂ ಇದ್ದಾನೆ. ದೇವರು-ಭಕ್ತರುಳ್ಳ ದೇಹ ತ್ರಿಕೂಟ ಸಂಗಮ. ಈ ದೇಹವೆಂಬ ದೇವರ ಪಾದ ಸೋಂಕಿದ ಜಲ ಪಾವನ! ಇದೇ ಧೂಳಪಾದೋದಕ!

ಗುರುಪಾದೋದಕ:

ಆ ಧೂಳ ಪಾದೋದಕವನ್ನು ಶೋಧಿಸಿ ತಂಬಿಗೆಯಲ್ಲಿ ತುಂಬಿ ಬಸವಾಕ್ಷರ ಬರೆದು ಸ್ವೀಕರಿಸುವುದೇ ಗುರುಪಾದೋದಕ!

ಜಂಗಮ ಪಾದೋದಕ:

ತಂಬಿಗೆಯಲ್ಲಿದ್ದ ಉದಕ ಸುಡುವುದಿಲ್ಲ, ತನುವಿನಲ್ಲಿ ಸಂಗಮವಾಗಿ ತನುವೇ ತಾನಾದ ಉದಕ ತನುವನ್ನು ಸುಡದೆ ಬಿಡುವುದಿಲ್ಲ. ಇದನ್ನರಿತು ಪ್ರಸಾದ ಸಂಬಂಧದ ಆಚರಣೆಯಲ್ಲಿ ತೊಡಗಿದ ತನುವೇ ಜಂಗಮ ತನು. ಜ್ಞಾನೋದಕದಿಂದ ಅಜ್ಞಾನವನ್ನು ಕೊಂದ ಜಂಗಮ ಪಾದೋದಕವೆನ್ನಿಸಿಕೊಂಡಿದೆ.

ಸ್ಪರ್ಶನೋದಕ: ಒಂದು ತನುವನ್ನು ಮತ್ತೊಂದು ತನು ಸ್ಪರ್ಶಿಸಿದರೆ ಎರಡೂ ತನುಗಳಿಗೂ ತೊಂದರೆಯಾಗುವುದು. ಹೀಗೇಕೆ ಆಗುವುದೆಂದು ಚರ್ಮ ಆಲೋಚನೆ ಮಾಡಲು ಪ್ರಾರಂಭಿಸಿಲ್ಲ. ಚರ್ಮದ ಮೂಲ ದ್ರವ್ಯ ಉದಕ. ಉದಕ ಉದಕದೊಳು ಬೆರೆತಂತೆ ಎಂದು ಶರಣರು ಹೇಳುತ್ತಾರೆ. ಉದಕದಲ್ಲಿ ಉದಕ ಬೆರೆತರೆ ಅದನ್ನು ಸಂಗಮ ಎಂದು ಕರೆಯುತ್ತಾರೆ. ಹೀಗೆ ಚರ್ಮದಲ್ಲಿ ಸಾಧ್ಯವಾಗುತ್ತಿಲ್ಲ. ಚರ್ಮವನ್ನು ಮನವೆಂಬ ಅಜ್ಞಾನ ಆವರಿಸಿದೆ. ಚರ್ಮದಲ್ಲಿ ಜ್ಞಾನಚರ್ಮ ಸಂಗಮವಾಗಿದೆ. ತನ್ನನ್ನು ತಾನು ಮುಟ್ಟಿಕೊಂಡಾಗ ತನಗೆ ಸಹಜ ಜ್ಞಾನ. ತನಗೆ ಯಾವ ಬಾಧೆಯೂ ಆಗುವುದಿಲ್ಲ. ತಾನು ಇತರರನ್ನು ಮುಟ್ಟಿದಾಗ ಇಬ್ಬರಿಗೂ ಬಾಧೆಯಾಗುತ್ತದೆ. ಏಕೆಂದರೆ ಚರ್ಮ ಹೆಣ್ಣು ಅಲ್ಲ, ಗಂಡೂ ಅಲ್ಲದಿದ್ದರೂ ಹೆಣ್ಣೆಂದು ಗಂಡೆಂದು ಭಾವಿಸಿ ಮುಟ್ಟುವುದರಿಂದ ಭಾವ ದುರ್ಭಾವಕ್ಕೆ ಒಳಗಾಗಿ ಬಾಧೆಯಾಗುತ್ತದೆ. ಅದು ಚರ್ಮವೆಂದು ಸ್ಪರ್ಶಿಸಿದಾಗ ಉದಕ ಉದಕದೊಳಗೆ ಬೆರೆತಂತಾಗುತ್ತದೆ. ಇದನ್ನೇ ಶರಣರು ಸ್ಪರ್ಶನೋದಕ ಎಂದು ಕರೆದಿದ್ದಾರೆ.

ಒಂದು ತಂಬಿಗೆಯಲ್ಲಿದ್ದ ಉದಕಕ್ಕೆ ಅರಿಷಡ್ವರ್ಗಗಳ, ಸಪ್ತವ್ಯಸನಗಳ, ಅಷ್ಟಮದಗಳ ರೋಗವಿಲ್ಲ. ಒಂದು ಜಲಬಿಂದು ಜೀವ ಜಲಬಿಂದುವಾಗಿ, ಜೀವಜಲಬಿಂದುವೇ ಗರ್ಭದಲ್ಲಿ ಬೆರೆತು, ಅರಿವಿನ ತನುವಾಗಿ ಗರ್ಭದಿಂದ ಹೊರಬಂದಿದೆ. ಅರಿವಿನ ನೋಟ, ಅರಿವಿನ ಸ್ಪರ್ಶ, ಅರಿವಿನ ರುಚಿ, ಅರಿವಿನ ವಾಸನೆ, ಅರಿವಿನ ಧ್ವನಿ, ತನುವೆಂಬ ಉದಕದಲ್ಲಿ ಸಂಗಮವಾಗಿದ್ದರೂ ತನುವಿನ ಕಿಚ್ಚು ನಂದುತ್ತಿಲ್ಲ. ಇತರರನ್ನು ಪ್ರಶ್ನಿಸುವ ತನು ತನ್ನನ್ನು ತಾನು ಪ್ರಶ್ನಿಸಿಕೊಳ್ಳುತ್ತಿಲ್ಲ. ಹೀಗಾಗಿ ಶರಣರ ಸ್ಪರ್ಶನೋದಕದ ಮಂತ್ರದ ಸೂತ್ರ ಭಕ್ತ ತನುವಿಗೆ ಬೇಕಾಗಿದೆ. ಇದು ಆಸಕ್ತ ತನುವಿಗೆ ಮಾತ್ರ ಸಿಕ್ಕುತ್ತದೆ. ಸಕಲ ತನುಗಳಲ್ಲಿಯೂ ಈ ಶಕ್ತಿ ಇದ್ದರೂ ಕೂಡಾ ಪಡೆಯುವ ಆಸಕ್ತಿ ಇಲ್ಲದುದಕ್ಕಾಗಿ ವ್ಯರ್ಥವಾಗಿ ಕಾಯದ ಅವಸಾನವಾಗುತ್ತದೆ.

ಹೀಗೆ ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕದ ಬಗ್ಗೆ ಶರಣ ಭಕ್ತನಿಗೆ ಹೇಳುತ್ತ ಅದರ ವಿವರಣೆಯನ್ನು ಕೊಡುವ ಮೂಲಕ ತನುವನ್ನು ಸ್ಪರ್ಶಿಸುತ್ತ ತನುವಿನಲ್ಲಿಯೇ ಜ್ಞಾನಿ ಆಸಕ್ತ ಭಕ್ತನಿಗೆ ಸತ್ಯದರ್ಶನ ಮಾಡಿಸುತ್ತಾನೆ. ಈ ಸತ್ಯ ದರ್ಶನಕ್ಕೆ ಸತ್ಯೋದಕವೆಂದು ಹೆಸರಿಸಿ ಭಕ್ತನನ್ನು ಶರಣನನ್ನಾಗಿ ಪರಿವರ್ತನೆ ಮಾಡುತ್ತಾನೆ. ಸಿದ್ಧಾರ್ಥ ಬುದ್ಧನಾದಂತೆ; ವರ್ಧಮಾನ ಮಹಾವೀರನಾದಂತೆ; ಭಕ್ತ ಶರಣನಾಗುತ್ತಾನೆ. ಮಧುರ ಒಗರು ಕಾರ ಆಮ್ಲ ಕಹಿ ಎಂಬ ರುಚಿಗಳ ಅಜ್ಞಾನಕ್ಕೆ ಬಲಿಯಾದ ತನು; ಇವುಗಳ ಆಸೆಗಾಗಿ ತನು ತನುವನ್ನೇ ಕೊಲ್ಲುತ್ತದೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಿಂದಾಗಿ ತನು ತನುವಿನೊಂದಿಗೆ ವಿಲಿ ವಿಲಿ ಒದ್ದಾಡಿ ಸಾಯುತ್ತದೆ. ಸಪ್ತ ವ್ಯಸನಗಳನ್ನು ಅಷ್ಟ ಮದಗಳನ್ನು ಸೃಷ್ಟಿ ಮಾಡಿಕೊಂಡು ಅಜ್ಞಾನದ ಜ್ವಾಲೆಯಲ್ಲಿ ತನಗೆ ತಾನೆ ಬೆಂದು ಸಾಯುತ್ತದೆ. ತನುವಿನಲ್ಲಿ ಸಂಗಮವಾದ ಜ್ಞಾನದ ಪರಿಚಯ ತನುವಿನ ಅಜ್ಞಾನಕ್ಕೆ ಹೊಳೆಯದೇ ಸಾಯುತ್ತದೆ.

ಜ್ಞಾನವನ್ನೇ ದೇವರೆಂದು ಸತ್ಯವೆಂದು ಅಲ್ಲಾ ಎಂದು ಗಾಡ್ ಎಂದು ಜ್ಞಾನಿಗಳು ಕರೆದಿದ್ದಾರೆ. ಮನದ ಮೂಲಕ ಆ ಮಹಾಜ್ಞಾನವನ್ನು ದೇಹದಲ್ಲಿಯೇ ಪಡೆಯುವ ಬಗೆಯನ್ನು ಭಗವದ್ಗೀತೆ, ಕುರಾನ್, ಬೈಬಲ್‌ಗಳಲ್ಲಿ ಬರೆದಿದ್ದಾರೆ. ಆದರೆ ತಿಳಿಯದ ತನುಗಳಿಗೆ ಗ್ರಂಥಗಳೇ ಶ್ರೇಷ್ಠವಾದವು. ಅದನ್ನು ಬರೆದವರನ್ನು ಬರೆದ ಪುಸ್ತಕಗಳನ್ನು ಹಗಲಿರುಳೆನ್ನದೆ ತನುಗಳು ಹೊತ್ತು ತಿರುಗುತ್ತವೆ. ಜ್ಞಾನಕ್ಕೆ ಹೋಗುವ ಸೂತ್ರ ಬರೆದ ಕ್ರಿಷ್ಣ ಕ್ರಿಸ್ತರಿಗೆ ಬಸವಾದಿ ಶರಣರಿಗೆ ದಾಸರಿಗೆ ಆಲಯ, ಚರ್ಚ್‌ಗಳನ್ನು ನಿರ್ಮಿಸಿ ಕಾದಾಡುತ್ತವೆ. ಪ್ರಾರ್ಥನಾ ಮಂದಿರಗಳನ್ನು ಕಟ್ಟಿ ಪ್ರಾರ್ಥಿಸುತ್ತವೆ.

ತನುವಿನ ಧರ್ಮವನ್ನು ತನುವಿನಲ್ಲಿ ಹುಡುಕುವುದನ್ನು ಬಿಟ್ಟು ಪುಸ್ತಕಗಳಲ್ಲಿ, ಆಲಯಗಳಲ್ಲಿ ಹುಡುಕಿದರೆ ಸಿಗುತ್ತದೆಯೇ? ಮುಸ್ಲಿಮನಾಗಿ, ಕ್ರೈಸ್ತನಾಗಿ ಪ್ರಾರ್ಥಿಸಿದರೆ ಸಿಗುತ್ತದೆಯೇ? ಹಿಂದುವಾಗಿ ಪೂಜಿಸಿದರೆ ಸಿಗುತ್ತದೆಯೇ?

ಉದಕದಿಂದಾದ ತನುವಿನ ಅಜ್ಞಾನವನ್ನು ಉದಕದಲ್ಲಿಯೇ ಹುಡುಕಬೇಕು. ಉದಕಕ್ಕೆ ವಾಸನೆ ಇಲ್ಲ, ರುಚಿ ಇಲ್ಲ, ಬಣ್ಣವಿಲ್ಲ, ತನ್ನ ಮಟ್ಟವನ್ನು ತಾನು ಕಾಯ್ದುಕೊಳ್ಳುತ್ತದೆ. ಉದಕದಲ್ಲಿ ಜಲಜನಕವಿದೆ. ಉದಕದಲ್ಲಿ ಆಮ್ಲಜನಕವಿದೆ. ಇವೆರಡೂ ಬಯಲಲ್ಲಿ ವಾಸ ಮಾಡಿ, ಬಯಲು ಇವೆರಡನ್ನೂ ಬಂಧಿಸಿ, ಅದರಲ್ಲಿ ತಾನು ಸಂಗಮವಾಗಿ ಉದಕವನ್ನಾಗಿಸಿ ಕೆಳಗೆ ಬೀಳಿಸಿದೆ. ಈ ಉದಕದಿಂದಲೇ ಭೂಮಿ ನಿರ್ಮಾಣವಾಗಿ ಭೂಮಿಯ ಮೇಲೆ ಉದಕ ಹರಿಯುತ್ತದೆ. ಭೂಮಿಯಲ್ಲಿ ಉದಕ ಸಂಗ್ರಹವಾಗಿ, ಸಸ್ಯ ಸಂಕುಲಕ್ಕೆ ತನುವಿಗೆ ಆಧಾರವಾಗಿ, ಸಕಲ ಜೀವ ಜಗತ್ತನ್ನು ಉದಕ ಸೃಷ್ಟಿಸಿದೆ. ಭೂಮಿಯ ಗರ್ಭದಲ್ಲಿಯ ಸಕಲ ಖನಿಜಗಳಿಗೂ

ಉದಕ ಆಧಾರವಾಗಿದೆ. ಹೇಮವಾಗಿದೆ.

ರುಚಿಯೇ ಇಲ್ಲದ ಉದಕ ಮೆಣಸಿನ ಸಸಿಗೆ ಹರಿದು ಕಾರವಾಗಿದೆ. ಕಬ್ಬಿನ ಸಸಿಗೆ ಹರಿದು ಸಿಹಿಯಾಗಿದೆ. ಹಲಸು ಮಾವು ಪೇರಲಕ್ಕೆ ಹರಿದು ಮಧುರವಾಗಿದೆ. ಉದಕ ಗಟ್ಟಿಯಾಗಿ ಉಪ್ಪಾಗಿದೆ, ಒಗರಾಗಿದೆ, ಕ್ಷಾರವಾಗಿದೆ. ಬೇವಿಗೆ ಉದಕ ಹರಿದು ಕಹಿಯಾಗಿದೆ. ಆದರೂ ಉದಕಕ್ಕೆ ರುಚಿಯಿಲ್ಲ, ಬಣ್ಣವಿಲ್ಲ, ವಾಸನೆಯಿಲ್ಲ, ಇದೇನಾಶ್ಚರ್ಯ.

ಜಲಜನಕದಲ್ಲಿ ಉರಿಯುವ ಗುಣವಿದೆ! ಆಮ್ಲಜನಕದಲ್ಲಿ ಉರಿಸುವ ಗುಣವಿದೆ! ಇವೆರಡರಿಂದ ಕೂಡಿದ ಜಲಕ್ಕೆ ಉರಿಯುವ ಅಗ್ನಿಯನ್ನು ನಂದಿಸುವ ಗುಣವಿದೆ. ಇಡೀ ಬ್ರಹ್ಮಾಂಡವೆಲ್ಲ ಉದಕದಿಂದ ಶೃಂಗಾರಗೊಂಡಿದೆ. ಅದನ್ನು ತಿಳಿದು ಮಹದಾನಂದ ಹೊಂದುವ ಶಕ್ತಿ ಉದಕದಿಂದಲೇ ಹುಟ್ಟಿದ ಮನುಷ್ಯನಿಗೆ ಮಾತ್ರ ಇದೆ. ಆದರೆ ಮನುಷ್ಯ ಶ್ರೇಷ್ಠ ಹಿಂದುವಾಗಿದ್ದಾನೆ. ಶ್ರೇಷ್ಠ ಮುಸಲ್ಮಾನನಾಗಿದ್ದಾನೆ, ಶ್ರೇಷ್ಠ ಕ್ರಿಶ್ಚಿಯನ್ ಆಗಿದ್ದಾನೆ, ಶ್ರೇಷ್ಠ ಪಾರ್ಸಿ, ಶ್ರೇಷ್ಠ ಬೌದ್ಧ, ಶ್ರೇಷ್ಠ ಜೈನನಾಗಿದ್ದಾನೆ. ಇವೆಲ್ಲವನ್ನೂ ತಿಳಿದು; ತನ್ನನ್ನು ತಾನು ತಿಳಿದು ಶ್ರೇಷ್ಠ ಮನುಷ್ಯನಾಗಲು ಮನುಷ್ಯನಿಗೆ ಇಷ್ಟವಿಲ್ಲ.

ಮನುಷ್ಯ ಸ್ವತಹ ತನ್ನ ಜ್ಞಾನದಿಂದ ತನ್ನ ಅಜ್ಞಾನವನ್ನು ತನಗೆ ತಾನೇ ಕಳೆದುಕೊಂಡು ತನ್ನನ್ನು ತಾನು ಪವಿತ್ರ ಮಾಡಿಕೊಂಡು, ಸ್ವಯಂಭು ಜ್ಞಾನಿಯಾಗಿ, ಸಕಲ ಅಜ್ಞಾನವನ್ನು ಪ್ರಸಾದ ಮಾಡಿಕೊಂಡು ಚಿತ್ಕಲಾ ಪ್ರಸಾದಿಯಾಗಬೇಕೆಂಬ ಹಿರಿಯ ಉದ್ದೇಶವನ್ನು ಸಿದ್ಧರಾಮ ಶಿವಯೋಗಿಗಳು ಹೊಂದಿದ್ದಾರೆ. ಹಾಗೆಯೇ ಸ್ವಯಂ ಜ್ಞಾನಿಯಾಗುವ ಈ ಸೂತ್ರವನ್ನು ಸಕಲರಿಗೂ ಪ್ರಸಾದ ರೂಪದಲ್ಲಿ ಅಕ್ಷರಗಳ ಮೂಲಕ ಹಂಚಿದ್ದಾರೆ.

**69**

**ಅಯ್ಯಾ, ನಾನೆಂಬುದನು ಒಯ್ಯನೆ ಒಯ್ಯನೆ ಮರೆದೆ.**
**ಅಯ್ಯಾ, ನೀ ಗುರುವಾಗಿ ಕರುಣದಿಂದ ಒಯ್ಯನೆ ಬಂದೆನ್ನ**
**'ಅಯ್ಯೊ ಮಗನೆ' ಎಂದು ಕೈವಿಡಿದು**
**ತೆಗೆದೆನ್ನ ಸಲಹಿದಿರಿ ಕರುಣದಿಂದ.**
**ಆನೀಗ ನಿಮ್ಮ ಅವ್ಯಯದ ಪದಕಾನು ಮೂಲನಾದೆ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ನಾನು ಎನ್ನುವುದು ಅಜ್ಞಾನ. ಅದು ಒಂಟಿ. ನಾನು ಎನ್ನುವ ಅದಕ್ಕೆ ಸ್ವಂತ ಜ್ಞಾನವಿಲ್ಲ. ಅದೇನಿದ್ದರೂ ಓದಿದ ಕೇಳಿದ ಅನ್ಯದಿಂದ ತಿಳಿದ ಸಂಗ್ರಹ ಜ್ಞಾನವೇ ಹೊರತು ಸ್ವಂತ ಜ್ಞಾನವಲ್ಲ.

ನಾನು ಎನ್ನುವುದು ಅವನ ಕೃಪೆಯಿಂದ ಹುಟ್ಟಿದ್ದು. ಅವನನ್ನು ಮರೆತುದಕ್ಕಾಗಿ ನಾನು ಎನ್ನುವ ಮನಕ್ಕೆ ದುರ್ಗತಿ. ನಾನು ಎನ್ನುವವನು ಶಿಷ್ಯನಾದರೆ ಅವನು ಎನ್ನುವವನು ಗುರುವು. ನಾನು ಎನ್ನುವವಳು ಸಖಿಯಾದರೆ ಅವನು ಎನ್ನುವವನು ಸಖ. ನಾನು ಎನ್ನುವವಳು ಸತಿಯಾದರೆ ಅವನು ಎನ್ನುವವನು ಪತಿ. ನಾನು ಎನ್ನುವವನು ಮಗನಾದರೆ ಅವನು ಎನ್ನುವವನು ತಂದೆ. ನಾನು ಎನ್ನುವವನು ಮನವಾದರೆ ಅವನು ಎನ್ನುವವನು ಮಹಾದೇವ.

ನಾನು ಮತ್ತು ಅವನು ಇರುವ ದೇಹವೇ ದೇವಾಲಯ. ದೇಹವೆಂಬ ದೇವಾಲಯದಲ್ಲಿ ನಾನು ಇದ್ದೇನೆ. ಹಾಗೆಯೇ ದೇವನೆಂಬ ಅವನು ಇರುವನು. ನಾನು

ದೇವನೆಂಬ ಅವನನ್ನು ಮರೆತುದಕ್ಕಾಗಿ ಅವನ ವಾಹನವನ್ನು ಎಂದರೆ ದೇಹವನ್ನು ನಾನು ಬಳಸಿಕೊಳ್ಳುತ್ತಿರುವುದಕ್ಕಾಗಿ ನನಗೆ ಅನೇಕ ತಾಪತ್ರಯಗಳು. ಪಶುಪತಿಯ ವಾಹನದ ಮೇಲೆ ಪಶು ಸವಾರಿ ಮಾಡುವುದೆಂದರೇನು? ಪಶುಪತಿ ಇಲ್ಲದ ವಾಹನ ಪಶು ಸಮಾನ.

ಎಚ್ಚರವಾಗಿ ನಾನು ಅವನನ್ನು ನೆನೆದು, ತಂದೆ ನೀನೆ ಗತಿ ಗುರುದೇವ ಎಂದು ಅವನ ಚರಣಕಮಲಗಳಿಗೆ ಶಿರ ಒಡ್ಡಿದೆ. ಕೂಡಲೇ ನಾನೆಂಬ ಅಹಂಕಾರ ಜರ್‍ರನೆ ಇಳಿದು ನಾನೆಂಬುದನ್ನೇ ಮರೆತು ಹೋದೆ. ಆಗ ಗುರುದೇವ ಕರುಣದಿಂದ ಬಂದೆನ್ನ 'ಅಯ್ಯಾ ಮಗನೆ' ಎಂದು ಕೈಹಿಡಿದು ಸಲುಹಿದ.

ನಾನೆಂಬುದು ಇಲ್ಲ. ಕತ್ತಲು ಎನ್ನುವುದು ಇಲ್ಲ. ಅದು ಬೆಳಕಿನಿಂದ ಹುಟ್ಟಿ; ಬೆಳಕಿನಿಂದಲೇ ಬೆಳಗಿ ಬೆಳಗಿ ಬೆಳಕಾಗುವುದು.

ಆನೀಗ ನಿಮ್ಮ ಅವ್ಯಯದ ಪದಕಾನು ಮೂಲನಾದೆ :

ಅವನು ಎಂಬ ಬೆಳಕಿನಿಂದ ಹುಟ್ಟಿದ ನಾನು ಅವನನ್ನು ಮರೆತದ್ದಕ್ಕಾಗಿ ಕತ್ತಲಾಗಿದ್ದೆ; ಅವನನ್ನು ಕೂಡಲೇ ಅರಿತೆ. ಒಯನೇ ಬಂದೆನ್ನ ಬಿಗಿದಪ್ಪಿ ತನ್ನಂತೆ ಮಾಡಿಕೊಂಡ. ಹೀಗಾಗಿ ನಾನು ನನ್ನನ್ನು ಮರೆತು ಬೆಳಕಾದೆ. ನಾನು ಬೆಳಕಿನಲ್ಲಿ ಸಂಗಮವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನಾದೆ.

**70**

**ಅಯ್ಯಾ ನಾನೊಂದ ಬೇಡುವೆ ನಿಮ್ಮಲ್ಲಿ**
**ಎನಗೊಂದು ಲೇಸ ಮಾಡಯ್ಯ.**
**ನಾರಿಯರುರದ ಗಾಳಿ ಸೋಂಕದಂತೆ**
**ಎನ್ನುವ ಮಂತ್ರಿಸಿ ರಕ್ಷಿಸಯ್ಯ.**
**ಎನಗಿನಿಸು ಮಾಡಿ ಬದುಕಿಸಯ್ಯ ಎನ್ನ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಅಯ್ಯಾ ಎನ್ನ ತನುವಿನಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನೇ ನಾನೊಂದ ಬೇಡುವೆನು ನಿಮ್ಮಲ್ಲಿ ಸಾಧ್ಯವಾದರೆ ಎನಗೊಂದ ಲೇಸ ಮಾಡಯ್ಯ. ನನ್ನ ತನುವಿನಲ್ಲಿ ನೀನು ಸಂಗಮವಾಗಿದ್ದರೂ ನಿನ್ನ ಮರೆತು, ನಿನ್ನ ತನುವನ್ನು ಆವರಿಸಿದ ಮನವೆಂಬ ನಾರಿ ತನುವಿನ ನರನಾಡಿಗಳನ್ನು ಹರಿದು ತಿನ್ನುತ್ತಿದ್ದಾಳೆ.

ತನು ಹೆಣ್ಣೂ ಅಲ್ಲ ಗಂಡೂ ಅಲ್ಲ. ಅಲ್ಲದಿದ್ದರೂ ತನುವಿನಲ್ಲಿಯೇ ಭೇದ ಸೃಷ್ಠಿ ಮಾಡಿ ತನುವನ್ನೇ ತನ್ನ ಸಾಮ್ರಾಜ್ಯ ಮಾಡಿಕೊಂಡ ನಾರಿ ತನುವನ್ನು ತನ್ನ ಕೈವಶ ಮಾಡಿಕೊಂಡಿದ್ದಾಳೆ.

ತನು ಒಂದೇ. ತನುವನ್ನು ಪ್ಯಾಕ್ ಮಾಡಿದ ಚರ್ಮ ಒಂದೇ. ತನುವಿನಲ್ಲಿ ಹರಿಯುವ ರಕ್ತ ಒಂದೇ. ತನುವಿನಲ್ಲಿಯ ಅಸ್ತಿ ಮಾಂಸ ಮಜ್ಜಾ ಮೇದಸ್ಸುಗಳು ಕೂಡಾ ಒಂದೇ. ಕಣ್ಣು ಕಿವಿ ಮೂಗು ನಾಲಿಗೆ ಕೂಡಾ ಒಂದೇ. ಇವುಗಳ ಕೆಲಸ ಕೂಡಾ ಒಂದೇ ಆಗಿರುವಾಗ ಇದೆಲ್ಲವನ್ನು ಮರೆಯುವಂತೆ ಮಾಡಿದ ನಾರಿ ತನುವಿನಲ್ಲಿ ತನ್ನದೇ ಆದ ಜಾತಿ-ಮತ ಧರ್ಮಗಳನ್ನು ಸ್ಥಾಪಿಸಿ ಹೆಣ್ಣು ಗಂಡೆಂಬ ಅಜ್ಞಾನ ಸೃಸ್ಟಿ ಮಾಡಿ ಶ್ರೀಮಂತ ಬಡವ ಅಧಿಕಾರಿ ಎನ್ನುವ ಅಹಂಕಾರ ಕನಿಕರ ಕರುಣೆಯನ್ನು ಹುಟ್ಟಿಸಿದ ನಾರಿ ನರೇಶನನ್ನೇ ಮರೆತು ತನ್ನ ರಾಜ್ಯಭಾರ ಮಾಡುತ್ತಿದ್ದಾಳೆ.

ಸಿದ್ಧರಾಮ ಶಿವಯೋಗಿಗಳು 'ನಾರಿಯರುರದ ಗಾಳಿ ಸೋಂಕದಂತೆ ಎನ್ನುವ ಮಂತ್ರಿಸಿ

ರಕ್ಷಿಸಯ್ಯ', 'ಎನಗೊಂದು ಲೇಸ ಮಾಡಯ್ಯ', ಅಯ್ಯಾ, 'ನಾನೊಂದ ಬೇಡುವೆ ನಿಮ್ಮಲ್ಲಿ', ಎನಗಿನಿಸು ಮಾಡಿ ಬದುಕಿಸಯ್ಯ ಎಂದು ಪರಿಪರಿಯಿಂದ ಕೇಳಿದ್ದಾರೆ. ಅಂದರೆ ಸಿದ್ಧರಾಮ ಶಿವಯೋಗಿಗಳು 'ನಾರಿ'ಯನ್ನು ಅಪಮಾನಕ್ಕೀಡು ಮಾಡಿದ್ದಾರೆ ಎಂದು ತಿಳಿಯುವಂತಿಲ್ಲ. ಅವರು ತಮ್ಮ ಮತ್ತೊಂದು ವಚನದಲ್ಲಿ ಸ್ವತಃ ತಾವು ಗಂಡಾಗಿದ್ದರೂ ಹೆಣ್ಣಾಗಿ ಹೀಗೆ ಹಾಡಿದ್ದಾರೆ:

''ಎಮ್ಮ ನಲ್ಲನು ಏಕಾಂತಂಬೊಕ್ಕನು, ಬೇಗ ಬೇಗ ಹೊರನಡಿಯಿರಣ್ಣಗಳಿರಾ, ಒಬ್ಬರಿದ್ದಡೂ ಸೈರಿಸ ಕಪಿಲಸಿದ್ಧ ಮಲ್ಲಿಕಾರ್ಜುನ ''

ನನ್ನ ತನುವಿನಲ್ಲಿಯೇ ಸಂಗಮವಾದ ಅರಿವಿನ ನಲ್ಲನು ತನುವನ್ನು ಆವರಿಸಿದ ಮನವೆಂಬ ನಲ್ಲೆಯೊಂದಿಗೆ ತನುವಿನಲ್ಲಿಯೇ ಸಂಗ ಮಾಡಲು ಬರುತ್ತಿದ್ದಾನೆ. ಆತನ ಬರುವಿಗಾಗಿ ನಾನು ಕಾಯುತ್ತಿದ್ದೇನೆ. ಆದರೆ ತನುವಿನಲ್ಲಿಯೇ ನನ್ನ ಸಹೋದರ ಸಂಬಂಧಿಗಳಾದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ವಾಸ ಮಾಡಿದ್ದಾರೆ. ಅವರೆಲ್ಲರೂ ಹೊರಗೆ ಹೋಗುವವರೆಗೂ ನನ್ನ ನಲ್ಲ ನನ್ನೊಂದಿಗೆ ಕೂಡಲಾರ. ದಯವಿಟ್ಟು ನೀವೆಲ್ಲ ಹೊರಗೆ ಹೋಗಿ ಎಂದು ಅರಿಷಡ್ವರ್ಗಗಳಿಗೆ ಅಷ್ಟ ಮದಗಳಿಗೆ ಸಪ್ತ ವ್ಯಸನಗಳಿಗೆ ಸಿದ್ಧರಾಮ ಶಿವಯೋಗಿ ಪ್ರಾರ್ಥಿಸುತ್ತಿದ್ದಾರೆ.

ಮನವೆಂಬ ಹೆಣ್ಣು ಕಾಮಾದಿ ಅರಿಷಡ್ವರ್ಗಗಳನ್ನು, ಅಷ್ಟಮದ, ಸಪ್ತ ವ್ಯಸನಗಳನ್ನು ಸೃಷ್ಟಿಸಿ ಅರಿವೆಂಬ ಗುರುವಿದ್ದ ತನುವಿನ ಮನೆಯಲ್ಲಿಯೇ ಆಶ್ರಯ ಪಡೆದಿದ್ದಾಳೆ. ಇಂತಹ ನಾರಿಯ ಗಾಳಿ ಸೋಂಕದಂತೆ ಎನ್ನನು ಮಂತ್ರಿಸಿ ರಕ್ಷಿಸಯ್ಯ, ಎನಗಿನಿಸು ಮಾಡಿ ಬದುಕಿಸಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ತನಗೆ ತಾನೇ ಸಾಕ್ಷಿಯಾಗಿ ಅರಿವೆಂಬ ಗುರುದೇವನನ್ನು ಕಳಕಳಿಯಿಂದ ಬೇಡಿದ್ದಾರೆ.

ಹೀಗೆ ಬೇಡಲು ಬಂದರೆ ಸಾಕು ಮನ ಅರಿವಿನ ದಾರಿಯಲ್ಲಿ ಬೀಳುವುದರಲ್ಲಿ ಸಂದೇಹವೇ ಇಲ್ಲ.

**71**

**ಅಯ್ಯಾ, ನಿತ್ಯನು ನೀನೆ;**
**ಆ ಸತ್ಯಶುದ್ಧ ದೇಹಿ ನೀನೆ ಕಾಣಾ, ಎಲೆ ಅಯ್ಯಾ.**
**ಅಯ್ಯಾ, ನೀನು ಕಾರುಣ್ಯವುಳ್ಳ ಮಹದಾಶ್ರಯ ಕಾಣಾ, ಎಲೆ ಅಯ್ಯಾ .**
**ನೀನು ಭಕ್ತದೇಹಿಕ ದೇವನಾದ ಕಾರಣ ಮೆಚ್ಚಿದೆನಯ್ಯಾ .**
**ಒಲುಮೆಯ ಮಚ್ಚು ನಿಶ್ಚಯವೆಂದು ನಂಬಿದೆನಯ್ಯಾ .**
**ಗುರುವೇ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕೈಯಲ್ಲಿ ಹಿಡಿದ ಖಡ್ಗ ತನುವನ್ನು ಹಿರಿದು ಕೊಂದಾಗ ಖಡ್ಗದ ತಪ್ಪಲ್ಲ; ಹಾಗೆಯೇ ತನುವಿನ ತಪ್ಪು ಕೂಡಾ ಅಲ್ಲ; ತನುವನ್ನು ಆವರಿಸಿದ ಮನದ ತಪ್ಪು!

ತನು ಅರಿವೆಂಬ ಗುರುದೇವನದು. ಆ ತನುವಿನಲ್ಲಿ ವಾಸ ಮಾಡುವ ನಿತ್ಯನು ನೀನು. ಖಡ್ಗದಿಂದ ಕೊಂದ ದೇಹವು ನಿನ್ನದೆ; ಕೊಲ್ಲಲ್ಪಟ್ಟ ದೇಹವೂ ನಿನ್ನದೇ! ಆ ಸತ್ಯ ಶುದ್ಧ ದೇಹಗಳ ದೇಹಿ ನೀನು; ತನುವನ್ನು ಆವರಿಸಿದ ಮನ ನಾನು. ಮನದಿಂದಾಗಿ ಒಂದು ದೇಹ ಖಡ್ಗ ಹಿಡಿದು ಕೊಂದಿತು. ಮತ್ತೊಂದು ಖಡ್ಗ ಹಿಡಿದು ಕೊಲ್ಲಲ್ಪಟ್ಟಿತು. ಇವೆರಡೂ ದೇಹಗಳೂ ನಿರಪರಾಧಿಗಳೆ ಆಗಿವೆ. ಮನ ಮಾತ್ರ ಅಪರಾಧಿ.

ಒಂದು ತನು ನಿರಪರಾಧಿ; ಅಪರಾಧಿ ಮನದಿಂದಾಗಿ ತನು ಶಿಕ್ಷೆ ಅನುಭವಿಸಿತು.

ನಿರಪರಾಧಿ ತನುವಿನಿಂದ ನಿರಪರಾಧಿ ತನುವನ್ನೇ ಕೊಲ್ಲಲ್ಪಟ್ಟಿತು. 'ಕೋತಿ ಮೊಸರನ್ನ ತಿಂದು ಮೇಕೆಯ ಮೋತಿಗೆ ಸವರಿದಂತೆ' ಎನ್ನುವ ಗಾದೆ ಮನದಿಂದಾಗಿಯೆ ಹುಟ್ಟಿತು.

ತನು ನಿರಪರಾಧಿಯಾಗಿದ್ದರೂ ತನುವಿಗೇ ಶಿಕ್ಷೆ. ಮನದಿಂದಾಗಿ ತನುವಿಗೆ ಕೊಲೆಗಡುಕನ ಪಟ್ಟ! ಕಳ್ಳನ ಪಟ್ಟ; ಸುಳ್ಳ ಭ್ರಷ್ಟಾಚಾರಿ ದುಷ್ಟನ ಪಟ್ಟ! ಜಾತಿ ಮತ ಪಂಥ ಧರ್ಮದ ಪಟ್ಟ! ಹೆಣ್ಣು ಗಂಡು ಎಂಬ ಅಜ್ಞಾನದ ಪಟ್ಟ. ಪಂಡಿತ ಶಾಸ್ತ್ರಿ ಪಾಮರ ಶ್ರೀಮಂತ ಬಡವನ ಪಟ್ಟ.

ತನು ಭಕ್ತ ದೇಹಿಕ ಗುರುದೇವನದೆಂದು ಮನವರಿಯದು. ಆ ದೇವರ ದೇವ ಮಹಾದೇವ ವಾಸ ಮಾಡಿದ ತನುವೆಂದು, ಆ ತನುವನ್ನು ಮನ ತನಗೆ ತಿಳಿದಂತೆ ಬಳಕೆ ಮಾಡಬಾರದೆಂದು ಮನಕ್ಕೆ ತಿಳಿಯದು.

ಮನಕ್ಕೆ ಅರಿವಾದರೆ ಸಾಕು; ಅದು ತನುವಿನೊಳಗೆ ಹೊಕ್ಕು ಅರಿವೆಂಬ ಗುರುದೇವನ ಚರಣ ಕಮಲಗಳಿಗೆರಗಿ; ಅಯ್ಯಾ, ನಿತ್ಯನು ನೀನೇ; ಆ ಸತ್ಯ ಶುದ್ಧ ದೇಹಿ ಕೂಡಾ ನೀನೇ ಪರಮಾತ್ಮನೆ. ಎಲೆ ಅಯ್ಯಾ ಎಂದು ಹಾಡುತ್ತಾ ಆಡುತ್ತಾ ಆತನ ಪಾದಗಳ ಮೇಲೆ ಪವಡಿಸುವುದು.

ಪರಮಾತ್ಮ ಅಂದರೆ ಅರಿವೆಂಬ ಗುರುದೇವರು ವಾಸ ಮಾಡಿದ ದೇಹವನ್ನು, ತನ್ನ ಮನ ಬಂದಂತೆ ಬಳಸಿ, ಅಪರಾಧ ಮಾಡಿದ ಮನದ ಮೈದಡವಿ, ತನ್ನ ಕಾರುಣ್ಯವನ್ನು ಮನದ ಮೇಲೆ ಬೀರಿ; ಮನಕ್ಕೆ ತನುವಿನಲ್ಲಿಯೇ ಮಹಾದಾಶ್ರಯ ನೀಡಿದ ಮಹಾದೇವ ಭಕ್ತ ದೇಹಿಕ ದೇವನೆನ್ನಿಸಿಕೊಂಡ.

ಮನದ ಸಕಲ ಅಪರಾಧವನ್ನು ಒಂದು ಬಟ್ಟಿಲೆ ತೊಡೆದು ಬೆಟ್ಟದನಿತಪರಾಧವನ್ನು ಒಂದು ಬಟ್ಟಿಲೆ ತೊಡೆದ ಕರುಣಾಮಯಿ ಎನ್ನಿಸಿಕೊಂಡ. ಆತನು ನಿತ್ಯನೆಂದು, ಆತ ಸತ್ಯಶುದ್ಧ ದೇಹಿ ಎಂದು, ಬೇಡಿ ಬಂದ ಮನಕ್ಕೆ ಮಹಾದಾಶ್ರಯ ನೀಡುವ ಕರುಣಾಮಯಿ ಎಂದು, ಮನ ಅರಿತರೆ ಸಾಕು, ಆತನ ಒಲುಮೆಯ ಮಚ್ಚು ನಿಶ್ಚಯವೆಂದು ನಂಬಿದರೆ ಸಾಕು, ಆ ಮನವನ್ನು ಮಹಾದೇವನನ್ನಾಗಿಸುವನು. ಅಂದಿನಿಂದ ಆ ತನುವಿಗೆ ಆ ತನುವಿನ ಮನಕ್ಕೆ ಸಕಲ ತನುಗಳು ಕೂಡಾ ಸತ್ಯ ಶುದ್ಧ ದೇಹಿಗಳಾಗಿಯೇ ಕಾಣುವವು.

72

**ಅಯ್ಯಾ, ನಿನಗೆರಗಿದವರಿಗೆ ಜನವೆರಗಿ**
**ಮರುಗುವದಿದೆ ಕಾರಣವಯ್ಯ.**
**ಅಯ್ಯಾ, ಹಾ ಹಾ, ನಾಲಗೆಯೆರಳೆಗೆ ಗುಣವೆಂಬ ತಂಪಿಗೆ**
**ಜನವೆರೆಗಿ ಮರಗುವದಯ್ಯ.**
**ಹಾಹಾ, ಅಲ್ಲಿ ನೀನಿಪ್ಪ ಕಾರಣ ತಂಪಿನ ಸಿಂಪುಳಿಕ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಅಯ್ಯಾ, ನಿನಗೆರಗಿದವರಿಗೆ ಜನವೆರಗಿ ಮರುಗುವದಿದೆ ಕಾರಣವಯ್ಯ :

ನಿನಗೆರಗಿದವರಿಗೆ ಅಂದರೆ ಅರಿವೆಂಬ ಗುರುದೇವನಿಗೆ ಎರಗಿದ ಮನವದು ಘನಮನ. ದೇಹವೆಂಬುದು ಸಾಕ್ಷಾತ್ ಆ ಗುರುದೇವನೇ ಇದ್ದ ದೇವಾಲಯ. ಅದು ನುಡಿದರೆ ಮುತ್ತಿನ ಹಾರದಂತೆ ಬೆಳಗುವುದು. ಸ್ಪಟಿಕದ ಸಲಾಕೆಯಂತೆ ಥಳಥಳನೆ ಹೊಳೆಯುವುದು. ಮಾಣಿಕ್ಯದ ದೀಪ್ತಿಯಂತೆ ಕಂಗೊಳಿಸುವುದು. ಅಂತಹ ದೇಹಕ್ಕೆ ಸಕಲ ದೇಹಗಳೂ ತಲೆ ಬಾಗುವವು. ಆ ಗುರುದೇವನ ಚರಣಕಮಲಗಳಿಗೆರಗಿ ಧನ್ಯತಾಭಾವ ಮೆರೆಯುವವು.

ಅರಿವೆಂಬ ಗುರುದೇವ ಅಂಗದಲ್ಲಿಯೇ ಸಂಗಮವಾಗಿದ್ದರೂ ಮನ ಅಂಗವನ್ನು ಆವರಿಸಿದ್ದರೂ ಅರಿವಿನ ದರುಶನ ಮನಕ್ಕೆ ಆಗಿಲ್ಲ. ಮನದ ಮೈದಡವಿ ಅರಿವೆಂಬ ಗುರುದೇವನು ಆಶೀರ್ವದಿಸುವುದೂ ಇಲ್ಲ. ಅರಿವಿನ ದರುಶನ ಪಡೆದು ಮನ ಘನಮನವಾಗುವುದೆಂದರೆ, ಅದು ಅನಂತ ಜನ್ಮಗಳ ಪುಣ್ಯದ ಫಲ. ಗುರುದೇವನ ದರುಶನ ಪಡೆದು ಆತನ ಸುಖವನು ಅನುಭವಿಸಿದ ಮನವೇ ಧನ್ಯ.

ಹಾ ಹಾ, ಅಯ್ಯಾ , ಆ ಮನವೇ ಘನಮನವಾಗಿ ಅದರ ನಾಲಗೆ ಜ್ಞಾನದಿಂದ ತಂತಾನೆ ಅರಳಿ ಅದರ ಮೇಲೆ ಸರಸ್ವತಿ ನಾಟ್ಯ ಮಾಡುತ್ತಾಳೆ. ಆ ನಾಲಗೆಯ ಅರಿವಿನ ತಂಪಿಗೆ ಜನಸಮೂಹವೇ ಎರಗಿ ತಲೆ ಬಾಗುವುದಯ್ಯ .

ಹಾ ಹಾ, ಪರಮಾತ್ಮನೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆ ತಂಪಿನ ಸಿಂಪುಳಿಕೆಯಲ್ಲಿ ನೀನಿರುವ ಕಾರಣ. ನಿನಗೆ ಮನ ಬಾಗಿದ ಕಾರಣ, ಬಾಗಿದ ಮನಕ್ಕೆ ಮನದ ಆ ತನುವಿಗೆ ಜನವೆರಗಿ ಹಾ ಹಾ ಅಯ್ಯಾ ಎನ್ನನು ರಕ್ಷಿಸು ಎಂದು ಮೊರೆಯಿಡುವರು.

73

**ಅಯ್ಯಾ, ನಿನ್ನ ಆಜ್ಞೆಯಲ್ಲಿ ಇರದವರಾರು ?**
**ಬ್ರಹ್ಮೇಂದ್ರಾದಿ ದೇವತೆಗಳೆಲ್ಲ !**
**ಅಯ್ಯಾ, ನಿಮ್ಮಾಜ್ಞೆಯಲ್ಲಿ ಆಗದವರಾರು ?**
**ವಿಷ್ಣು ಮೊದಲಾದ ಮನುಜರೆಲ್ಲ !**
**ಸರ್ವ ಚೈತನ್ಯಾತ್ಮ ಮುಖಲಿಂಗವೆ ಅವಧಾರು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮ ವಿಷ್ಣು ಇಂದ್ರಾದಿ ದೇವತೆಗಳೆಲ್ಲ ಅರಿವೆಂಬ ಗುರುದೇವನ ಅಂದರೆ ಮಹೇಶ್ವರನ ಆಜ್ಞೆ ಪಾಲಿಸುವವರೇ ಆಗಿದ್ದಾರೆ. ಬ್ರಹ್ಮ ವಿಷ್ಣು ಇಂದ್ರಾದಿ ದೇವತೆಗಳೆಲ್ಲ ಮನುಜರೇ ಆಗಿದ್ದಾರೆ. ನಿನ್ನನ್ನು ಕಂಡವರು ದೇವರು. ನಿನ್ನನ್ನು ಕಾಣದವರು ಮನುಜರು; ಮನುಜರಲ್ಲಿ ರಕ್ಕಸರೆಂದೆನ್ನಿಸಿಕೊಂಡವರೂ ಉಂಟು. ನೀನು ಸರ್ವಚೈತನ್ಯಾತ್ಮ ಲಿಂಗವೇ ಆಗಿರುವಿ. ಅವಧಾರು ಕಪಿಲಸಿದ್ಧ ಮಲ್ಲಿಕಾರ್ಜುನಾ.

ಜಗದಗಲ ಮುಗಿಲಗಲ ಮಿಗೆಯಗಲಕ್ಕೂ ವ್ಯಾಪಿಸಿಕೊಂಡಿರುವ ನೀನು ಎನ್ನಗಲಕ್ಕೆ ಬಂದು ಅಂದರೆ ನನ್ನ ಅಂಗದಗಲಕ್ಕೆ ಆಗಮಿಸಿ ಆ ಅಂಗದಲ್ಲಿಯೇ ಲಿಂಗವಾಗಿ ಚುಳುಕಾಗಿರುವಿ. ನೀನು ಚುಳುಕಾಗಿರುವುದು ಎನಗೆ ಗೊತ್ತಾದ ಕಾರಣ; ಪಾತಾಳದಿಂದಲೂ ಅತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದಲೂ ಅತ್ತತ್ತ ನಿಮ್ಮ ಶ್ರೀಮುಕುಟ. ನೀವು ಯಾರ ಗಮನಕ್ಕೂ ನಿಲುಕದವರು. ಅಗಮ್ಯರು ನಿಮ್ಮನ್ನು ಯಾರೂ ಪ್ರಮಾಣಿಸಿ ನೋಡಲು ಸಾಧ್ಯವಿಲ್ಲದವರು. ಹೀಗಾಗಿ ನೀವು ಅಪ್ರಮಾಣರು; ಅಪ್ರತಿಮರು. ಲಿಂಗಮಧ್ಯೇ ಜಗತ್ ಸರ್ವಂ ಎಂದೆನ್ನಿಸಿಕೊಂಡ ನೀವು ಒಂದು ಚಿಕ್ಕ ಅಂಗದಲ್ಲಿ ಬಂದು ಸಂಗಮವಾಗಿ ಲಿಂಗ ಎನ್ನಿಸಿಕೊಂಡಿರುವಿರಿ.

ದೇಹಗಳಿಂದ ತುಂಬಿದ ಪ್ರದೇಶವನ್ನೇ ದೇಶ ಪ್ರಪಂಚ ಎಂದು ಕರೆಯುತ್ತಾರೆ. ದೇಶವೆಂದರೆ ಬಯಲು. ದೇಹವೆಂದರೂ ಬಯಲು. ಪ್ರಪಂಚವೆಂದರೂ ಬಯಲು; ಪಂಚ ಭೂತಗಳಿಂದ ತುಂಬಿದ ಬಯಲು. ಗಾಳಿ ನೀರು ಬೆಂಕಿ ಭೂಮಿ ಆಕಾಶ ಪ್ರಪಂಚವೆಲ್ಲ

ವ್ಯಾಪಿಸಿಕೊಂಡಿದೆ. ಹೀಗೆ ಪ್ರಪಂಚದ ತುಂಬಾ ವ್ಯಾಪಿಸಿಕೊಂಡ ಪಂಚಭೂತಗಳು ನಿನ್ನ ಆಜ್ಞೆಯನ್ನು ಪಾಲಿಸುವುದಕ್ಕೋಸ್ಕರ ಅಂಗದಲ್ಲಿ ಅರಿವೆಂಬ ಲಿಂಗವೆಂದು ಕರೆಯಿಸಿಕೊಂಡು ಅಂಗದಲ್ಲಿಯೇ ಚುಳುಕಾಗಿದೆ. ಹೀಗಾಗಿ ಅಂಗವನ್ನು ಲಿಂಗಾಂಗವೆಂದು ಕರೆಯುತ್ತಾರೆ.

ಪಂಚಭೂತಗಳ ಹೊರತಾಗಿ ಬ್ರಹ್ಮನಿಲ್ಲ. ಇಂದ್ರಾದಿ ದೇವತೆಗಳಿಲ್ಲ. ವಿಷ್ಣುವಿಲ್ಲ. ನೀನಿಲ್ಲದೆ; ನಿನ್ನಾಜ್ಞೆಯನ್ನು ಮೀರದವರು ಯಾರೂ ಇಲ್ಲ . ನಿನ್ನನ್ನು ಸಹಜವಾಗಿ ಕಂಡವರೂ ಇಲ್ಲ.

ಬ್ರಹ್ಮ ನಿನ್ನನ್ನು ಕಾಣಲು ನಿನ್ನ ಶ್ರೀಮುಕುಟವನ್ನು ಆಯ್ಕೆ ಮಾಡಿಕೊಂಡು ಬ್ರಹ್ಮಾಂಡದತ್ತ ಜಿಗಿದ. ವಿಷ್ಣು ನಿನ್ನನ್ನು ಕಾಣಲೆಂದು ನಿನ್ನ ಶ್ರೀಪಾದವನ್ನು ಆಯ್ಕೆ ಮಾಡಿಕೊಂಡು ಪಾತಾಳಕ್ಕೆ ಜಿಗಿದ. ಇವರಿಬ್ಬರೂ ಅಹಂಕಾರಿಗಳು; ನಿನ್ನ ಶ್ರೀಮುಕುಟವನ್ನು ಒಬ್ಬರು, ನಿನ್ನ ಶ್ರೀಪಾದವವನ್ನು ಒಬ್ಬರು ಆಯ್ಕೆ ಮಾಡಿಕೊಂಡರು.

ಚತುರ್ಮುಖ ಬ್ರಹ್ಮನಿಗೆ ನಿಮ್ಮ ಶ್ರೀಮುಕುಟ ಕಾಣಲೇ ಇಲ್ಲ. ಆಕಾಶ ಕಾಯಗಳಲ್ಲಿ ಬೆಳೆದ ಕೇದಿಗೆಯ ಗರಿಯನ್ನು ಕಿತ್ತು ತಂದು ಇದು ಶಿವನ ಜಡೆಯೆಂದು ತೋರಿಸಲು; ಕೂಡಲೇ ಶಿವ ಬ್ರಹ್ಮನ ತಲೆಯೊಂದನ್ನು ಸುಳ್ಳು ಹೇಳಿದುದಕ್ಕಾಗಿ ಚಿವುಟಿ ಹಾಕಿದ. ವಿಷ್ಣು, ತನಗೆ ಶ್ರೀಪಾದ ಕಾಣಲಿಲ್ಲವೆಂದು ಮರಳಿ ಬಂದ.

ಬ್ರಹ್ಮನಾದರೇನು, ವಿಷ್ಣುವಾದರೇನು, ಇಂದ್ರಾದಿ ದೇವತೆಗಳಾದರೇನು ಕೃಷಿ ಮಾಡದಿದ್ದರೆ ಕಪಿಲಸಿದ್ಧ ಮಲ್ಲಿಕಾರ್ಜುನದೇವ ಯಾರಿಗೂ ಕಾಣುವುದಿಲ್ಲ. ಅಂಗದಲ್ಲಿಯೇ ಸಂಗಮವಾಗಿ ಅಂಗಕ್ಕೆ ದರ್ಶನ ಭಾಗ್ಯವನ್ನು ಕಲ್ಪಿಸದೆ; ಅಂಗದಲ್ಲಿಯೇ ಮರೆಯಾಗಿ ಮನವನ್ನು ಮರ್ಕಟದಂತೆ ಆಡಿಸಿ ಕಾಡಿಸಿ ಚೇಡಿಸಿ ಮರೆಯಾಗುತ್ತಾನೆ.

ಸರ್ವ ಚೈತನ್ಯಾತ್ಮ ಮುಖಲಿಂಗವೇ ಅವಧಾರು ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ಆತನೊಂದಿಗೆ ಮಾತನಾಡುತ್ತ ಆತನನ್ನು ಒಲಿಸಿಕೊಳ್ಳುವ ಸೂತ್ರ ಮನುಜನಿಗೆ ಗೊತ್ತಾಗಬೇಕು. ಮನುಜನೆಂದರೆ ಬ್ರಹ್ಮ. ಭ್ರಮೆ ಆವರಿಸಿರುವುದರಿಂದ ತನಗೆ ತಾನು ಬ್ರಹ್ಮನೆಂದು ಗೊತ್ತಾಗುವುದಿಲ್ಲ. ಮನವೇ ಬ್ರಹ್ಮ. ತನುವೇ ವಿಷ್ಣು. ಅರಿವೇ ಮಹಾದೇವ. ಅರಿವೇ ಗುರು. ಅರಿವೇ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ! ದರ್ಶನ ನೀಡು ತಂದೆ ಎಂದು ಗೋಗರೆದು ಕರೆಯುವ ಶಕ್ತಿ ಸಕಲರೂ ಸಂಪಾದನೆ ಮಾಡಿಕೊಳ್ಳಬೇಕೆಂಬ ಕಳಕಳಿ ಶರಣರದಾಗಿದೆ.

**74**

**ಅಯ್ಯಾ, ನಿನ್ನ ಕರವೆಂಬ**
**ಉರುತರ ಗರ್ಭದಲ್ಲಿ ಭವಿಸಿದೆನಯ್ಯಾ.**
**ನಿನ್ನ ಕರುಣವೆ ಎನಗೆ ಮಹಾಕಾನನವಾಯ್ತು .**
**ಲೋಕದ ಪಾತಕಿಗಳು ಉಂಡಂತೆ ಉಂಡೆನಾದಡೆ,**
**ಬಂದಂತೆ ಬಂದೆನಾದಡೆ ನಿಜ ನಿಮ್ಮಾಣೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನೆ, ಮಹಾದೇವನೆ; ಸದಾಶಿವನೆ, ಸಾಕ್ಷಾತ್ ಪರಬ್ರಹ್ಮನೇ ನಿನ್ನ ದೇಹವೆಂಬ ದೇವಾಲಯದಲ್ಲಿ ಹುಟ್ಟಿದೆನಯ್ಯಾ. ನಿನ್ನ ಕರುಣೆ ಅಪಾರ!

ಹಡೆದ ತಂದೆ ತಾಯಿಗಳು ಒಂದು ತಪ್ಪು ಮಾಡಿದರೆ ಸಹಿಸಿಕೊಂಡಾರು; ಎರಡು ತಪ್ಪು

ಮಾಡಿದರೆ ಸಹಿಸಿಕೊಂಡಾರು. ಮತ್ತೆ ಮತ್ತೆ ತಪ್ಪು ಮಾಡಿದರೆ ಹಡೆದ ಮಗನನ್ನೇ ಮನೆಯಿಂದ ತಳ್ಳಿ ಮಗನೇ ಅಲ್ಲವೆಂದು ಮಾತನಾಡಿಸುವುದನ್ನೇ ಬಿಡುತ್ತಾರೆ. ಮಗನ ಮೇಲೆ ಹಗೆ ಸಾಧಿಸುತ್ತಾರೆ. ತಪ್ಪು ಮಾಡಿ ಮಗ ತಮ್ಮ ಮನೆತನದ ಗೌರವ ಕಳೆದನೆಂದು ಮಗನ ಮೇಲೆ ಮಣ್ಣು ತೂರುತ್ತಾರೆ. ಆದರೆ ನಿನ್ನ ಕರಣೆ ಅಪಾರ. ನನ್ನನ್ನು ನೀನು ಹಡೆದು; ನನ್ನ ಗರ್ಭದಲ್ಲಿಯೇ ನೀನು ವಾಸಮಾಡಿ; ನಾನು ತಪ್ಪು ಮಾಡಿದಾಗ ಮಗನೇ ಮತ್ತೆ ತಪ್ಪು ಮಾಡಬೇಡವೆಂದು; ಮಾಡಿದ ತಪ್ಪನ್ನು ಮನ್ನಿಸಿ; ನನ್ನ ಮೇಲೆ ಅಪಾರ ಕರುಣೆ ತೋರುವ ನಿನ್ನನ್ನು ಎಷ್ಟು ಬಣ್ಣಿಸಿದರೂ ಸಾಲದು.

ನಾನು ನೋಡುವಾಗ ನೀನು ನನ್ನ ಕಣ್ಣಲ್ಲಿ ಪ್ರತಿದೃಶ್ಯವಾಗಿ ಅಡ್ಡ ಬಂದು; ನೀನು ಹೀಗೆ ನೋಡುವುದು ತಪ್ಪಲ್ಲವೇ ಎಂದು ದೃಶ್ಯದ ಮೂಲಕ ನನ್ನ ದೃಶ್ಯಕ್ಕೆ ಪಾಠ ಮಾಡುವಿ; ಏನೀ ನಿನ್ನ ಕರುಣೆ ತಂದೆ. ನಾನು ಹಾದರದಿಂದ ನೋಡಿ ಅಕ್ಕ ಎಂದು ಮಾತನಾಡಿದಾಗ ಪುನಃ ನನ್ನ ನೋಟವನ್ನು ನಾನು ನುಡಿದ ನುಡಿಯನ್ನು ನನ್ನ ಮೂಲಕವೇ ತಪ್ಪೆಂದು ನನಗೆ ಅರುಹುವ ನಿನ್ನ ಪಾಠ ಸಾಮಾನ್ಯವೆ? ನನ್ನನ್ನು ಹಡೆದ ತಂದೆ ತಾಯಿಗಳು ನಿನ್ನ ಈ ಕೆಲಸ ಮಾಡಲು ಸಾಧ್ಯವೆ?

ನೋಡಿ, ಹಾದರಮಾಡಿದಾಗ ಅದು ಲೋಕಕ್ಕೆ ಗೊತ್ತಾದಾಗ ಮಾತ್ರ ಲೋಕ ನಿಂದಿಸುವುದು. ಆದರೆ ನೀನು ಹಾಗಲ್ಲ. ನಾನು ನೋಡುವ ಮುನ್ನ ಕಂದ ಹೀಗೆ ನೋಡಬೇಡ ಎಂದು ಎಚ್ಚರಿಸಿದೆ. ನಿನ್ನ ಮಾತನ್ನು ಕೇಳದೆ ಹಾದರದಿಂದ ನೋಡಿದಾಗ ನೋಡಿದರೇನಾಯಿತು ಮತ್ತೆ ಹಾಗೆ ನೋಡಬೇಡ ಎಂದು ಎಚ್ಚರಿಸಿದೆ. ನೋಡಿ ಸುಂದರವಾಗಿ ನುಡಿಯುವಾಗ ಪುನಃ ಎಚ್ಚರಿಸಿದೆ. ನೀನು ನೋಡಿದ್ದು, ನೀನು ನುಡಿದದ್ದು ಬೇರೆ ಬೇರೆ ಅಲ್ಲವೆ? ಎರಡೆರಡು ತಪ್ಪುಗಳನ್ನು ಮಾಡಬಹುದೇ ಮಗನೆ ಎಂದು ನುಡಿದು ಎಚ್ಚರಿಸಿದೆ. ಅದು ನೀನು ನುಡಿದದ್ದು ಅನ್ಯರಿಗೆ ಕೇಳದಂತೆ ನುಡಿದು ಎಚ್ಚರಿಸಿದೆ. ಹಡೆದವರು ಅನ್ಯರಿಗೆ ಕೇಳುವಂತೆ ನುಡಿದು ಅಪಮಾನಿಸಿದರು. ಆಗಲೂ ನನ್ನಿಂದ ನೀನು ದೂರವಾಗದೆ ಮೈದಡವಿ ಸಮಾಧಾನ ಮಾಡಿದೆ ತಂದೆ. ಏನೀ ನಿನ್ನ ಕರುಣೆ! ನಿನ್ನ ಈ ಕರುಣೆಯೇ ನನಗೆ ಕಾನನವಾಯಿತು.

ನೀನೇ ಹಡೆದ ತಂದೆಯೆಂದು ನನಗೆ ಗೊತ್ತಾಯಿತು. ಇನ್ನು ಮುಂದೆ ಈ ದೇಹವೆಂಬ ರಥವನ್ನು ನೀನೇ ಓಡಿಸು. ಲೋಕದ ಪಾತಕಿಗಳು ಈ ದೇಹದ ಮೂಲಕ ಅರಿಷಡ್ವರ್ಗಗಳನ್ನು ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಉಂಡಂತೆ ಇನ್ನು ನಾನು ಉಣ್ಣಲಾರೆ ತಂದೆ. ಲೋಕ ಬಂದಂತೆ ನಾನು ಬರಲಾರೆ, ಲೋಕನುಡಿದಂತೆ ನಾನು ನುಡಿಯಲಾರೆ. ನನಗೆ ನಿನ್ನ ಕರುಣೆಯಾಗಿದೆ. ನಾನು ನಿನ್ನ (ಕರ) ದೇಹದ ಮೂಲಕ ಬಂದವನೆಂದು ನನಗೆ ಅರಿವಾಗಿದೆ.

ನೀನು ನಿರ್ದೇಹಿ. ನಿನ್ನಿಂದ ಹುಟ್ಟಿದ; ನಿನ್ನ ಬೆಳಕಿನಿಂದ ಹುಟ್ಟಿದ ಮನವೆಂಬ ಕತ್ತಲು ನಾನು. ನಿನ್ನ ದರುಶನವಾಗಿ ನಾನು ಕೂಡಾ ನಿನ್ನಂತೆ ಬೆಳಗಿದೆ. ಹೀಗಾಗಿ ನಾನು ಕೂಡಾ ನಿನ್ನಂತೆ ನಿರ್ದೇಹಿ. ಇನ್ನು ಲೋಕ ಬಂದಂತೆ ಬಂದೆನಾದಡೆ ನಿಜ ನಿಮ್ಮಾಣೆ ಕಪಿಲಸಿದ್ಧ ಮಲ್ಲಿಕಾರ್ಜುನಾ. ನನಗೆ ನಿನ್ನ ದರುಶನವಾದ ಮೇಲೆ ನಾನು ಲೋಕದಂತೆ ಮತ್ತೆ ಹುಟ್ಟಲಾರೆ. ನಿನಗೆ ಹೇಗೆ ಹುಟ್ಟು ಸಾವುಗಳಿಲ್ಲವೋ ನಿನ್ನಿಂದ ಹುಟ್ಟಿದ ನನಗೆ ಕೂಡಾ ಹುಟ್ಟು ಸಾವುಗಳಿಲ್ಲ ತಂದೆ. ಈ ಮಾತು; ಈ ನಿಜ ನನಗೆ ನಿನ್ನಿಂದ ತಿಳಿದು ಬಂತು ತಂದೆ!

75

**ಅಯ್ಯಾ , ನಿನ್ನ ಕೂಟದ ಸುಖದಲ್ಲಿ**

**ನೀ ನಾನೆಂಬ ಸಂದಳಿದೆ ಅಯ್ಯಾ .**
**ಮೇಲೆ ಬಿದ್ದ ಮುಸಿಯನ್ನು ಅರಿಯದೆ**
**ಕೂಟದಲ್ಲಿ ತಾಮುಸಿಯಾದೆನಯ್ಯಾ.**
**ಕಾರುಣ್ಯಾಕರನೆ, ಕಪಿಲಸಿದ್ಧಮಲ್ಲಿನಾಥಯ್ಯಾ ,**
**ನಿರ್ನಾಮವಾಗಿ ನಿತ್ಯವೆಯ್ದಿದೆ ತಂದೆ.**

ಅಂಗವನ್ನು ಅರಿವೆಂಬ ಗುರುದೇವನು ಸೃಷ್ಟಿ ಮಾಡಿ ಆ ಅಂಗದಲ್ಲಿಯೇ ಆತ ಸಂಗಮವಾಗಿದ್ದಾನೆ. ಆತನ ಬೆಳಕಿನಿಂದಲೇ ಮನವೆಂಬ ನೆರಳು ಸೃಷ್ಟಿಯಾಗಿ ಅಂಗವನ್ನು ಆವರಿಸಿದೆ. ಅಂಗವನ್ನು ಆವರಿಸಿದ ಕರಿನೆರಳು ಅಂಗವನ್ನು ಸೃಷ್ಟಿ ಮಾಡಿದ ಗುರುದೇವನನ್ನೆ ಕಾಣದಂತೆ ಮಾಡಿದೆ.

ಅರಿವೆಂಬ ಗುರುದೇವನನ್ನು ಕಂಡು ಆ ಗುರುದೇವನಿಂದಾಗಿ ಮನಕ್ಕೆ ನಾನು ಯಾರೆಂಬ ಅರಿವು ಆಯಿತು. ಅರಿವೆಂಬ ಗುರುದೇವನ ಅರಿವು ಕೂಡಾ ಅದಕ್ಕಾಯಿತು.

ಅಯ್ಯಾ , ಗುರುದೇವನೇ ನಿನ್ನ ದರುಶನದಿಂದಾಗಿ ನನಗೆ ನಾನು ಯಾರೆಂಬುದು ತಿಳಿಯಿತು. ಹಾಗೆಯೇ ನನ್ನನ್ನು ಸೃಷ್ಟಿ ಮಾಡಿದ ಗುರುದೇವ ನೀನೆ ಎಂದು ನನಗೆ ನಿನ್ನಿಂದಲೇ ತಿಳಿಯಿತು. ನಾನು ನಿನ್ನ ಬೆಳಕಿನಲ್ಲಿ ಕೂಡಿ ನನ್ನ ಕತ್ತಲೆಯನ್ನು ಕಳೆದುಕೊಂಡೆ. ನಿನ್ನ ಅರಿವಿನ ಬೆಳಕಿನ ಸುಖದಿಂದ ನೀ, ನಾ ನೆಂಬ ಸಂದನಳಿದೆ.

ನನ್ನ ಮೇಲೆ ಬಿದ್ದ ಮಸಿಯು ನಿನ್ನ ಬೆಳಕಿನಿಂದ ಮಾಯವಾಯಿತು.

ಕರುಣಾಕರನೆ, ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿನ್ನ ದರುಶನದಿಂದಾಗಿ ನನ್ನ ಮೂರು ಗುಣಗಳು ನಿರ್ನಾಮವಾಗಿ ನಿತ್ಯವನೆಯ್ದೆ ತಂದೆ.

**76**

**ಅಯ್ಯಾ , ನಿನ್ನನೆನ್ನ ಕರದಲ್ಲಿಟ್ಟು**
**ಆ ಅಕಾಯದ ಕಳೆಯಿಂದತ್ತಲಿ,**
**ಅಯ್ಯಾ , ಜೀವ ಸಂಭೋಗನಾದೆನು.**
**ವಾಯಕಾಯವೆಂಬುದ ಮೀರಿ ನೀನಾದೆ,**
**ಕಪಿಲಸಿದ್ಧಮ್ಲಲಿನಾಥಯ್ಯ .**

ಅಯ್ಯಾ , ಶ್ರೀಗುರುದೇವನ ಕೃಪೆಯಿಂದಾಗಿ ನನಗೆ ನಿನ್ನ ದರುಶನವಾಯಿತು. ಆತ ನನ್ನ ಅಂಗದಲ್ಲಿಯೇ ನಿನ್ನನ್ನು ಘನಲಿಂಗವೆಂದು ತೋರಿದ. ನನ್ನ ಅಂಗದಲ್ಲಿಯೇ ನಿನ್ನನ್ನು ಇಟ್ಟು ನನ್ನನ್ನು ಪೂಜಿಸಲು ಹೇಳಿದ.

ಶ್ರೀಗುರು ನನ್ನನ್ನು ಅಕಾಯನಾಗಿ ತೋರಿದ. ನನ್ನ ಅಂಗದಲ್ಲಿಯೇ ಸಂಗಮವಾದ ನಿನ್ನನ್ನು ಕೂಡಾ ಅಕಾಯನಾಗಿಯೇ ತೋರಿದ. ಅಯ್ಯಾ ನಾನು ನಿನ್ನೊಂದಿಗೆ ಜೀವ ಸಂಭೋಗನಾದೆನು.

ನಾನು ಮನವೆಂಬುದನ್ನು ಮೀರಿ ನಿನಗೆ ಶರಣು ಹೋದೆನು; ಶರಣಾಗತನಾದೆನು. ಶರಣಾಗತನಾದ ನನ್ನನ್ನೇ ನೀನು ಸತಿಯಾಗಿಸಿಕೊಂಡೆ. ಶರಣ ಸತಿಯೆಂದು ಜಗಕ್ಕೆ ಸಾರಿ ನನಗೆ ನೀನು ಪತಿಯಾದೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ಗಂಡನಾದೆ.

ವಾಯಕಾಯವನ್ನು ಮೀರಿದ ನಾನು ನೀನೇ ಆದೆ. ನಾನು ನೀನು ಎಂಬ ಭೇದ ಕಳೆದು

ಹೋಯಿತು. ತೋರುವ ಅಂಗವೇ ಲಿಂಗಪತಿ ಶರಣ ಸತಿಗಳಿಬ್ಬರಿಗೆ ವಾಸದ ಮನೆಯಾಯಿತು.

77

**ಅಯ್ಯಾ, ನಿನ್ನವರ ಕಂಡು ಕರಗದನ್ನಕ್ಕರ**
**ನಿನ್ನವರ ಕಂಡು ನೀನೆಂದೆ ಕಾಣದನ್ನಕ್ಕರ**
**ನಿನ್ನವರ ಮೂರ್ತಿಧ್ಯಾನದಲ್ಲಿ ಮೂರ್ಛೆವೋಗದನ್ನಕ್ಕರ**
**ವೇಷದ ಗೌಳೆಯರ, ಲಾಂಛನದ ಲಂಪಟರ**
**ಮಜ್ಜನಕ್ಕೆರೆವ ಭವಿಗಳಿಗೆ ಏಕೊಲಿವೆಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗ ಯಾವ ದೇಶದ್ದಾದರೇನು? ಯಾವ ಭಾಷೆಯದ್ದಾದರೇನು? ಶ್ರೀಮಂತ ಬಡವ ಭಿಕ್ಷುಕನದಾದರೇನು? ಜಗದ್ಗುರು, ಸ್ವಾಮಿ, ಮಠಾಧೀಶನದಾದರೇನು? ಅಂಗ ಹೆಣ್ಣಾದರೇನು? ಗಂಡಾದರೇನು? ಅಂಗ ಅಂಗವಲ್ಲವೆ? ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಒಂದೇ ಕೆಲಸದಲ್ಲಿ ತೊಡಗಿವೆ. ಅಂಗದ ಮನ ಒಂದೇ; ಅಂಗದ ಅರಿವು ಕೂಡಾ ಒಂದೇ.

ಮನ ಅರಿವೆಂಬ ಗುರುದೇವನಲ್ಲಿ ಸಂಗಮವಾದರೆ ಸಾಕು ಅದು ಸಾಕ್ಷಾತ್ ಸಂಗಮನಾಥನೇ ತಾನಾಗುತ್ತದೆ. ಅರಿವೆಂಬ ಗುರುದೇವನ ಅಂಗವಾಗುತ್ತದೆ; ಅಂಗ ಲಿಂಗಾಂಗವಾಗುತ್ತದೆ. ಹೀಗೆ ಲಿಂಗಾಂಗವಾದ ಅಂಗಕ್ಕೆ ಸಕಲ ಅಂಗಗಳೂ ಲಿಂಗಾಂಗಗಳೇ ಆಗಿ ಕಾಣುತ್ತವೆ. ಅರಿವೆಂಬ ಗುರುದೇವನನ್ನು ದರುಶನ ಮಾಡಿಕೊಂಡ ಮನ ಘನಮನವಾಗಿ; ಅಯ್ಯಾ, ನಿನ್ನ ದರುಶನವಾದ ಮೇಲೆ ನನಗೆ ಯಾರೂ ಅನ್ಯರಾಗಿ ಕಾಣುತ್ತಿಲ್ಲ. ಏನೀ ನಿನ್ನ ಮಹಿಮೆ. ಸಕಲ ಅಂಗಗಳೂ ನಿನ್ನ ವಾಸದ ಸ್ಥಾನಗಳಾಗಿವೆಯಲ್ಲ. ನಿನ್ನನ್ನು ಕಂಡು ಕೈಮುಗಿದ ನಾನು ನಿನಗೆ ಕಿರಿಯನಾದೆ. ನೀನು ಹಿರಿಯನಾದೆ. ನನಗಿಂತ ಯಾರೂ ಕಿರಿಯರಿಲ್ಲ ಎಂದು; ನನಗೆ ನೀನು ಕಂಡುದರಿಂದ ಅರಿವಾಯಿತು. ಎಲ್ಲಿ ನೋಡಿದರೂ ನೀನೆ. ಸರ್ವಾಂಗದಲ್ಲಿ ನೀನು ಭರಿತವಾದ ಮೇಲೆ, ನಿನ್ನ ಮೂರ್ತಿ ಎನಗೆ ದರುಶನವಾದ ಬಳಿಕ ಮೂರ್ಛೆ ಹೋಗದಿದ್ದರೆ ನಾನು ವೇಷ ಧರಿಸಿದ ವೇಶಿಗೆ ಸಮ.

ನಾನೇ ನೀನಾಗಿರುವಾಗ; ನನ್ನಲ್ಲಿ ನೀನು ಸಂಗಮವಾಗಿರುವಾಗ ಪುನಃ ನಾನು ನಿನ್ನ ವೇಷ ಧರಿಸುವುದೆಂದರೇನು? ಜಗದ್ಗುರುವೆಂದು, ಗುರುವೆಂದು, ಪ್ರಣವ ಸ್ವರೂಪಿಯೆಂದು, ಷಟಸ್ಥಲ ಬ್ರಹ್ಮಿ ಎಂದು, ನಿರಂಜನ ಮೂರ್ತಿಯೆಂದು, ರಂಜನಗೆ ಒಳಗಾಗಿ ನಿನ್ನ ಹೆಸರಿಟ್ಟು ಕೊಳ್ಳುವುದು ಲಾಂಛನದ ಲಂಪಟತನವಲ್ಲವೆ? ಇಂತಹ ಲಾಂಛನದ ಲಂಪಟರಿಗೆ ನೀನು ಒಲಿಯಲು ಸಾಧ್ಯವೆ?

ಸಕಲರೂ ನಿನ್ನ ಸ್ವರೂಪಿಗಳೇ ಆಗಿರುವಾಗ, ಅಂದರೆ ಶಿವಸ್ವರೂಪಿಗಳೇ ಆಗಿರುವಾಗ, ವೇಷಧರಿಸಿ. ನಾನು ಮಾತ್ರ ಗುರು ಎಂದು ಗುರುದೇವನಿಗೇ ಹೇಳಿದಂತಾಗಲಿಲ್ಲವೆ? ಗುರುದೇವನನ್ನು ಶಿಷ್ಯನನ್ನಾಗಿ ಮಾಡಿಕೊಂಡು ಆ ಶಿಷ್ಯನಿಗೆ ತಾನು ಗುರುವಾಗುವುದು ಯೋಗ್ಯವೆ? ಲಿಂಗಾಂಗವನ್ನು ಲಿಂಗಾಂಗವೇ ಶಿಷ್ಯನಾಗಿಸುವುದು ಸಲ್ಲದ ಕೆಲಸ. ಅಂಗವೇ ಲಿಂಗವೆಂದರಿಯದೆ ಅಂಗದ ಮೇಲೆ ಲಿಂಗ ಕಟ್ಟಿಕೊಂಡು ಅಂಗದಲ್ಲಿ ಸಂಗಮವಾದ ಲಿಂಗವನ್ನು ಮರೆತ ಅಂಗದ ಕೆಲಸ. ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕೆ ಮಜ್ಜನಕ್ಕೆರೆವ ಭವಿಗಳಿಗೆ ಏಕೆ ಒಲಿವನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಪ್ರಶ್ನಿಸಿದ್ದಾರೆ.

ಹಾಗೆಯೆ ಆಶ್ಚರ್ಯ ವ್ಯಕ್ತಪಡಿಸಿದ್ದಾರೆ.

**78**

**ಅಯ್ಯಾ, ನಿನ್ನ ಸಂಗದಲ್ಲಿ ಸಂಗಿಯಾದೆ**
**ಅಯ್ಯಾ, ನಿನ್ನ ಸಂಗದಿಂದ ಕಾಕತನವ ಬಿಟ್ಟು ಬೇಕಾದ ಹಾಂಗೆಯಾದೆ.**
**ಅಯ್ಯಾ, ನಿನ್ನ ಒಲವು ಅನೇಕ ಪ್ರಕಾರದಲ್ಲಿ**
**ಪಸರಿ ಪರ್ಬಿತ್ತು ಎನ್ನ ಸರ್ವಾಂಗದಲ್ಲಿ.**
**ನಿನ್ನವರೊಲುಮೆಯ ಆನಂದವನು ಎನಗೆ ಕರುಣಿಸು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿಮ್ಮ ಧರ್ಮ.**

ಅಯ್ಯಾ , ನಿನ್ನವರ ಸಂಗದಲ್ಲಿ ಸಂಗಿಯಾದೆ. ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ. ದುರ್ಜನರ ಸಂಗವದು ದೂರ ಕಂಡಯ್ಯಾ. ಸಜ್ಜನರೆಂದರೆ ನಿನ್ನವರು. ನಿನ್ನನ್ನು ಒಲಿಸಿಕೊಂಡವರು. ನಿನ್ನೊಂದಿಗೆ ಸಂಗಮವಾಗಿ ನೀನೇ ಆದವರು. ನಿನ್ನ ಸಂಗಮಾಡಿ ಸಂಗಮನಾಥನೇ ಆದವರು. ನಿನ್ನ ಸಂಗದಿಂದ, ನಿನ್ನವರ ಸಂಗದಿಂದ ನನ್ನ ಕಾಕುತನವ ಬಿಟ್ಟೆ. ಏಕೆಂದರೆ ಅವರು ದುರ್ಜನರು.

ಸಜ್ಜನ-ದುರ್ಜನ ಎಂದರೆ ಬೇರೆ ಬೇರೆ ಅಲ್ಲ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ, ಸಪ್ತ ವ್ಯಸನಗಳು, ಅಷ್ಟ ಮದಗಳು ಇವರು ದುರ್ಜನರು. ಸಜ್ಜನರೆಂದರೆ ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನ. ದುರ್ಜನರ ಸಂಗ ಮಾಡಿ ಕಾಕುತನವ ಗಳಿಸಿಕೊಂಡ ನಾನು ಸಜ್ಜನನ ಸಂಗ ಮಾಡಿ ನನ್ನ ಕಾಕುತನವ ಬಿಟ್ಟೆ.

ಸಜ್ಜನನ ಸಂಗ ಮಾಡಿದವರೆಲ್ಲ ಸಜ್ಜನರೆ. ತನುವಿನಲ್ಲಿ ಸಜ್ಜನ ಸಂಗಮವಾಗಿದ್ದಾನೆ. ದುರ್ಜನರು ತನುವನ್ನು ಆವರಿಸಿದ್ದಾರೆ. ಇವರಿಗೆ ಅರಿಷಡ್ವರ್ಗಗಳೆಂದರೆ ಇಷ್ಟ. ಅಷ್ಟಮದ ಸಪ್ತ ವ್ಯಸನಗಳೆಂದರೆ ಇಷ್ಟ. ಇವರೆಲ್ಲರ ಅಜ್ಞಾನ ಸಜ್ಜನನ ಸಂಗ ಮಾಡಿದರೆ ಮಾತ್ರ ಹೋಗುವುದು.

ನಿನ್ನವರ ಒಲವು ಅನೇಕ ಪ್ರಕಾರದಲ್ಲಿ ಪಸರಿ ಪರ್ಬಿತ್ತು ಎನ್ನ ಅಂಗದಲ್ಲಿ :

ನಿನ್ನವರು ಎಂದರೆ ಶರಣರು. ನಿನಗಾಗಿ ಹಗಲಿರುಳೂ ಕೃಷಿ ಮಾಡಿ ನಿನ್ನನ್ನು ಒಲಿಸಿಕೊಂಡವರು. ಅವರು ಮಹಾಜ್ಞಾನಿಗಳು. ಬುದ್ಧ ಮಹಾವೀರ ಕ್ರಿಸ್ತ ಕ್ರಿಷ್ಣ ಕಬೀರ ಪೈಗಂಬರ ಎಂಬ ಹೆಸರು ಪಡೆದವರು. ಬಸವಾದಿ ಶರಣರು, ದಾಸವರೇಣ್ಯರು, ತತ್ವಪದಕಾರರು ಮುಂತಾದ ಹೆಸರು ಪಡೆದವರೆಲ್ಲ ನಿನ್ನವರು. ನಿನ್ನವರನ್ನು ಹುಡುಕುವುದು ಅಷ್ಟು ಸುಲಭವಲ್ಲ.

ನಿನ್ನ ಕರುಣೆ ಯಾವ ತನುವಿಗೆ ಆಗುತ್ತದೆಯೋ ಆ ತನುವಿಗೆ ನೀನೇ ನಿನ್ನವರನ್ನು ದರ್ಶನ ಮಾಡಿಸಿ ನಿನ್ನಂತೆ ಮಾಡಿಕೊಳ್ಳುವಿ. ಇಲ್ಲ ನಿನ್ನ ದರ್ಶನ ಪಡೆದು ಜ್ಞಾನಿಯಾಗಲೇಬೇಕೆಂದು ಹಟ ತೊಟ್ಟ ತನುವಿಗೆ ದರುಶನವಿತ್ತು ನಿನ್ನಂತೆ ಮಾಡಿಕೊಳ್ಳುವಿ. ಹೀಗೆ ನಿನ್ನವರ ಒಲವು ಅನೇಕ ಪ್ರಕಾರದಲ್ಲಿ ಪಸರಿಸಿತ್ತು ಎನ್ನ ಅಂಗದಲ್ಲಿ. ಅಂಗದಲ್ಲಿಯೇ ಇದ್ದು ಅಂಗವನ್ನು ಆವರಿಸಿದ ಮನಕ್ಕೆ ದರುಶನವನ್ನು ಕೊಡದ ನಿನ್ನ ಲೀಲೆ ಅನಂತ.

ನಿನ್ನವರ ಒಲುಮೆಯ ಆನಂದವನು ಎನಗೆ ಕರುಣಿಸಾ ಕಪಿಲಸಿದ್ಧ ಮಲ್ಲಿಕಾರ್ಜುನಾ :

ಅಂಗವನ್ನು ಆವರಿಸಿದ ಮನಕ್ಕೆ ನವರಸಗಳ ಆನಂದ ಉಂಟು. ಸುಖ ಉಂಟು. ಆದರೂ ಅದು ಕ್ಷಣಿಕ. ಸುಖ ಪಟ್ಟಂತೆಲ್ಲ ಮತ್ತೆ ಮತ್ತೆ ಸುಖಿಸಬೇಕೆಂಬ ಬಯಕೆಯಾಗುತ್ತದೆ. ಅಂಗ ಇರುವವರೆಗೂ ಮನ ಈ ಸುಖಕ್ಕಾಗಿ ಅಂಗವನ್ನು ಮಂಗದಂತೆ ಕುಣಿಸುತ್ತದೆ. ಹೀಗೆ

ನವರಸಗಳೊಂದಿಗೆ ನಿತ್ಯ ನಿತ್ಯ ಸುಖಿಸುವ ಮನಕ್ಕೆ ಬ್ರಹ್ಮರಸ ಪಡೆದು ಅದರೊಂದಿಗೆ ಸುಖಿಸಬೇಕೆಂಬ ಬಯಕೆ ಆದರೆ ಸಾಕು ಬ್ರಹ್ಮ ಜ್ಞಾನಿಗಳನ್ನು ಹುಡುಕುತ್ತದೆ. ಸಕಲ ಭ್ರಮೆಗಳನ್ನು ಕೊಡವಿ ಅರಿವೆಂಬ ಗುರುದೇವನನ್ನು ಒಲಿಸಿಕೊಂಡ ಜ್ಞಾನಿಯನ್ನು ಮನ ಕಂಡು ಹಿಡಿದು ಆ ಗುರುದೇವನ ಸಂಗ ಮಾಡುತ್ತದೆ. ಆತ ನಿನ್ನ ಸಂಗಮಾಡಿ ನಿನ್ನನ್ನು ಒಲಿಸಿಕೊಂಡು ನೀವೇ ಆದಾತ. ಸಂಗ ಮಾಡಲು ಬಂದ ಮನವನ್ನು ತಡವಿ ಅದರ ಸಕಲ ಭ್ರಮೆಗಳನ್ನು ಕಳೆದು ನಿನ್ನ ಬ್ರಹ್ಮರಸವನ್ನು ಉಣ್ಣಿಸುತ್ತಾನೆ. ಮನ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮರಸ ಪಾನ ಮಾಡುತ್ತಾ ಮಹದಾನಂದದಲ್ಲಿ ಮೈಮರೆಯುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**79**

**ಅಯ್ಯಾ, ನಿನ್ನ ವಿಕಳತೆಯಿಂದ ಹಾಹಾ ! ಭೂತನಾದೆ.**
**ಅಯ್ಯಾ, ನಿನ್ನ ನೆನಹಿನ ಧ್ಯಾನದಿಂದ ಮೂರ್ಛೆಹೋದೆ.**
**ಅಯ್ಯಾ, ನಿನ್ನ ಭಕ್ತಿತ್ರಯದಿಂದ ಶುದ್ಧ ಮುಕ್ತನಾದೆನಯ್ಯಾ,**
**ತಾತ್ಪರ್ಯದಲ್ಲಿ ಶುದ್ಧಾತ್ಮನಾಗಿ ನಿನ್ನ ಭಕ್ತಿರತಿಯಲ್ಲಿ ಸಂಪನ್ನನಾದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಯ್ಯಾ, ವಿಕಳತೆಯಿಂದ ಹಾ ಹಾ ! ಭೂತನಾದೆ :

ಲೋಕಕ್ಕೆ ನಿನ್ನನ್ನು ಆರಾಧಿಸುವ ಭ್ರಮೆ ಹಿಡಿದಿದೆ. ನಿನ್ನನ್ನು ಪ್ರಾರ್ಥಿಸಿ ಪೂಜಿಸುವ ಭೂತ ಹಿಡಿದಿದೆ. ನಿನಗಾಗಿ ಆಲಯ ಪ್ರಾರ್ಥನಾ ಮಂದಿರಗಳನ್ನು ಕಟ್ಟಿಸುವ ದೆವ್ವ ಹಿಡಿದಿದೆ. ಎಲ್ಲಿ ನೋಡಿದರೂ ನಿನ್ನದೇ ಧ್ಯಾನ; ನಿನ್ನದೇ ನೆನಹು. ನಿನ್ನ ನೆನಹಿನಿಂದ ಲೋಕ ಮೂರ್ಛೆ ಹೋಗಿದೆ. ಲೋಕಕ್ಕೆ ನೀನು ಬೇಕು; ಆದರೆ ನೀನು ಯಾರು, ನಿನ್ನನ್ನು ತಿಳಿಯುವ ನಾನು ಯಾರು? ನನಗೂ ನಿನಗೂ ಇರುವ ಸಂಬಂಧವೇನು? ನನ್ನ ಹುಟ್ಟು ಹೇಗಾಯಿತು? ನನ್ನನ್ನು ಸೃಷ್ಟಿ ಮಾಡಿದ ನೀನು ಯಾರು? ಇದನ್ನು ವೈಜ್ಞಾನಿಕವಾಗಿ ತಿಳಿಯುವ ಬಗೆ ಹೇಗೆ? ನಿನಗೆ ನಾನು ಹೇಗೆ ಭಕ್ತಿ ಮಾಡಬೇಕು?

ನನ್ನಿಂದ ನಿರ್ಮಾಣವಾದ ನಿನ್ನನ್ನು ನಾನು ದೇವರೆಂದು ಆರಾಧಿಸುವುದು ಸರಿಯೆ? ನೀನು ನನ್ನನ್ನು ಸೃಷ್ಟಿ ಮಾಡಿದೆ; ಇದು ಸರಿಯಾದ ಮಾತು. ಇದು ಲೋಕದ ಮಾತು. ಆದರೂ ಲೋಕ ತಾನು ಸೃಷ್ಟಿಸಿದ ದೇವರನ್ನು ದೇವರೆಂದು ಆರಾಧಿಸುತ್ತಿರುವುದಕ್ಕಾಗಿ ನೀನು ಲೋಕಕ್ಕೆ ಒಲಿಯುತ್ತಿಲ್ಲವೆ ಹೇಗೆ ?

ಅಯ್ಯಾ, ನಿನ್ನ ಭಕ್ತಿ ತ್ರಯದಿಂದ ಶುದ್ಧಮುಕ್ತನಾದೆನಯ್ಯಾ :

ಅರಿವೆಂಬ ಗುರುದೇವನೆ, ನಿನ್ನ ಮಹಾಜ್ಞಾನದ ಬೆಳಕಿನಿಂದ ಮನವೆಂಬ ನನ್ನನ್ನು ಸೃಷ್ಟಿ ಮಾಡಿದೆ. ಜೀವಜಲಬಿಂದುವಿನ ಒಂದು ಕಣದಲ್ಲಿ ನೀನು ಸಂಗಮವಾಗಿ ಶಿವಬಿಂದುವೆಂದು ಕರೆಯಿಸಿಕೊಂಡೆ. ನಾನು ಎನ್ನುವ ಮನ ಶಕ್ತಿಬಿಂದುವಾಗಿ ನೀನು ಎನ್ನುವ ಶಿವ; ಶಿವಬಿಂದುವಾಗಿ ಗರ್ಭದಲ್ಲಿ ಸಂಗಮವಾಗಿ, ಪಿಂಡವಾಗಿ ಬ್ರಹ್ಮಾಂಡವಾಗಿ ದೇಹಧರಿಸಿ ಧರೆಗೆ ಬಂದೆವು. ನಮ್ಮಿಬ್ಬರ ವಾಸಕ್ಕೆ ದೇಹವೇ ದೇವಾಲಯವಾಯಿತು. ಈ ಭಕ್ತಿ ತ್ರಯವನು ಅರಿತು ನಾನು ನಿನ್ನೊಂದಿಗೆ ಬೆರೆತುದನು ತಿಳಿದು ಶುದ್ಧಮುಕ್ತನಾದೆ ತಂದೆ.

ತಾತ್ಪರ್ಯದಲ್ಲಿ ಶುದ್ಧಾತ್ಮನಾಗಿ ನಿನ್ನ ಭಕ್ತಿರತಿಯಲ್ಲಿ ಸಂಪನ್ನನಾದೆ :

ನಿನ್ನ ನರಿಯದೆ ಅಹಂಕಾರದಿಂದ ಹಣದ ಮದದಿಂದ ಯೌವ್ವನದ ಮದದಿಂದ ಪದವಿ ಪ್ರಶಸ್ತಿಗಳ ಮದದಿಂದ ಶ್ರೀಮಂತಿಕೆ ಬಡತನವೆಂಬ ದರಿದ್ರದ ರೋಗದಿಂದ ವಿಕಳತೆಯಿಂದ ವಿಲಿ ವಿಲಿ ಒದ್ದಾಡುತ್ತ ಎಷ್ಟೋ ಜನ್ಮಗಳನ್ನು ಕಳೆದೆ. ದೇಹವೆಂಬ ದೇವಾಲಯ ಹೊತ್ತು ನಿನ್ನೊಂದಿಗೆ ಬಂದರೂ ನಿನ್ನನ್ನು ಮರೆತದ್ದಕ್ಕಾಗಿ ದೈವವೇ ಆಗಬೇಕಾದ ನಾನು ದೆವ್ವವಾಗಿ ಭೂತವಾಗಿ ಅನಂತ ಕಾಲ ಕಳೆದೆ.

ನಾನಾರೆಂದು ಬಲ್ಲವರಿಂದ ಅರಿಯದೆ, ನೀನಾರೆಂದು ನಿನ್ನನ್ನು ಬಲ್ಲವರಿಂದ ಅರಿಯದೆ ನಿನ್ನನ್ನು ಕಲ್ಲಿನಲ್ಲಿ ಕೆತ್ತಿ ನೀನೆ ಆ ಕಲ್ಲೆಂದು ಪೂಜಿಸಿ ಪೂಜಿಸಿ ಧ್ಯಾನಿಸಿ ಮೂರ್ಖ ಹೋದೆ. ನೀನಾರೆಂದು ನನಗೆ ಗೊತ್ತಾಗಲಿಲ್ಲ.

ನಿನ್ನನ್ನು ಗೊತ್ತು ಮಾಡಿಕೊಂಡು ನೀನೇ ಆದ ಶರಣರಿಂದ ನಿನ್ನನ್ನು ತಿಳಿದು ಧನ್ಯನಾದೆ. ನನ್ನ ಆತ್ಮವೇ ಪರಮಾತ್ಮ ನಿನ್ನನ್ನು ಪೂಜಿಸಿ ಆರಾಧಿಸುವ ಮನವೇ ಪರಮೇಶ್ವರಿ ಎಂದು ತಿಳಿದು ಶುದ್ಧಾತ್ಮನಾಗಿ ನಿನ್ನ ಭಕ್ತಿರತಿಯಲ್ಲಿ ಸಂಪನ್ನನಾದೆ ಶಿವನೆ ಕಪಿಲಸಿದ್ಧ ಮಲ್ಲಿಕಾರ್ಜುನನೇ.

**80**

**ಅಯ್ಯಾ, ನಿನ್ನಾಳಾಗಿ ಆರೆನಯ್ಯಾ ಕೆಲಬರ ಬೋಸರಿಸಲು.**
**ಅಯ್ಯಾ, ನಿನ್ನಾಳಾಗಿ ಆರೆನಯ್ಯಾ ಕೆಲಬರ ಸ್ತುತಿಯಿಸಲು.**
**ಅಯ್ಯಾ, ನೀ ನಿತ್ಯನೆಂದು ಮರೆವೊಕ್ಕಡೆ ಸೀಯದಂತಿಪ್ಪರೆ?**
**ಶಿವನೆ ನಿನ್ನ ಕಾಮ್ಯಾರ್ಥವ ಬೇಡಿ ಬಾಧೆಬಡಿಸೆ.**
**ನಿನಗೇನುಂಟಯ್ಯಾ, ನೀನು ನಿಃಕಾಮಿ.**
**ಅಂಜದಿರು, ಫಲಪದವ ಬೇಡೆ; ನೀನಿಹ ಲೋಕ ನಿನಗಿರಲಿ.**
**ಕಾಡದೆ ನಿನ್ನವರೊಳಗೆ ಕೂಡಿರುವ ಪದವ ಕರುಣಿಸಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮಹಾಕವಿ ಪಂಪ ಜೋಳವಾಳಿಗ ನಾನೆಂದು ರಾಜನಿಗೆ ಒತ್ತೆ ಬಿದ್ದು ರಾಜನನ್ನೇ ಅರ್ಜುನನನ್ನಾಗಿಸಿ ಮಹಾಕಾವ್ಯ ಬರೆಯಲು ಹೋದ. ಮನ ಕೇಳಬೇಕಲ್ಲ. ಜೋಳಕ್ಕಾಗಿ ಹೊಗಳುವ ಮನವನ್ನು ಅರಿವು ಒಪ್ಪಬೇಕಲ್ಲ? ಇನ್ನರ್ಧ ಕಾವ್ಯವನ್ನು ಅರ್ಜುನನ್ನೇ ಹೊಗಳಿ ರಾಜನನ್ನು ಕಡೆಗಾಣಿಸಿದ.

ಅಣ್ಣ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿದ್ದರೂ ರಾಜನನ್ನು ಎಂದೂ ಹೊಗಳಲಿಲ್ಲ. ಜೋಳಕ್ಕಾಗಿ ದುಡಿಯಲಿಲ್ಲ. ವೇಳೆಯ ವಾಳಿಗ ನಾನಯ್ಯ ಎಂದು ಸ್ಪಷ್ಟವಾಗಿ ಬಿಜ್ಜಳನಿಗೆ ಕೇಳುವಂತೆ ನುಡಿದರು. ಮನ, ಅರಿವಿನೆಡೆಗೆ ವಾಲಿದವರ ಕೆಲಸವಿದು.

ಹಾಗೆಯೇ ಶರಣರ ಮನ, ಅರಿವೆಂಬ ಗುರುದೇವನಿಗೆ ಶರಣು ಹೊಕ್ಕು ಶರಣಾಗತವಾಗಿದೆ. ಸ್ವತಃ ಶರಣನೇ ತಾನಾಗಿದೆ. ಹೀಗಾಗಿ ಮನಸ್ಸು ಅರಿವೆಂಬ ಗುರುದೇವನ ಆಳಾಗಿದೆ. ಸೇವಕನಾಗಿದೆ. ಆ ಗುರುದೇವನ ಹೊರತಾಗಿ ಯಾರನ್ನೂ ಓಸರಿಸದು; ಯಾರನ್ನೂ ಓಲೈಸದು; ಯಾರನ್ನೂ ಸ್ತುತಿಸದು.

ಅರಿವೆಂಬ ಗುರುದೇವನೇ ಶ್ರೇಷ್ಠಾತಿ ಶ್ರೇಷ್ಠನೆಂದು ಆತನ ಮೊರೆವೊಕ್ಕಿದೆ.

ಅಯ್ಯಾ ಗುರುದೇವನೇ ನೀನು ನಿತ್ಯನೆಂದು ನಿನ್ನ ಮೊರೆವೊಕ್ಕಡೆ ನೀನು ನನ್ನನ್ನು ಅಪ್ಪಿಕೊಳ್ಳುವುದಿರಲಿ, ನಿನ್ನ ಪಾದದಲ್ಲಿ ನನಗೆ ಆಶ್ರಯಕೊಡುವುದಿರಲಿ, ನೀನು ನನ್ನೆಡೆಗೆ

ನೋಡದೆ ನಿನ್ನ ಕೃಪಾದೃಷ್ಟಿ ಎನಗೆ ಬೀರದೆ ನನ್ನನ್ನು ಕಾಡಿಸುತ್ತಿರುವಿಯಲ್ಲ; ಶಿವನೆ ನಿನ್ನ ಕಾಮ್ಯಾರ್ಥವ ಬೇಡಿ ನಿನ್ನನ್ನು ಬಾಧೆಪಡಿಸಲು ಬಂದಿಲ್ಲ ತಂದೆ. ನಿನಗೇನುಂಟೆಂದು ನಾನು ನಿನ್ನನ್ನು ಕೇಳಲಿ. ನೀನು ನಿಃಕಾಮಿ; ಯಾರನ್ನೂ ಏನನ್ನು ಬೇಡದವನು.

ಸುಡಗಾಡೇ ನಿನ್ನ ವಾಸಸ್ಥಾನ. ಪ್ರತಿ ದೇಹದಲ್ಲಿ ನೀನಿರುವಿ. ನಿನ್ನನ್ನು ಅರಿಯದ ಮನ ನೀನಿರುವ ತನುವನ್ನೇ ಸುಡಗಾಡು ಮಾಡಿಕೊಂಡಿದೆ. ಆ ಸುಡುಗಾಡನ್ನೇ ಕೈಲಾಸ ಮಾಡಿಕೊಂಡು ಆನಂದದಿಂದ ವಾಸ ಮಾಡಿರುವಿ. ಆದರೂ ಮನಕ್ಕೆ ನಿನ್ನ ಸುಳಿವಿಲ್ಲ. ನಿನ್ನ ಸುಳಿವಿನ ಸೂತ್ರ ನನಗೆ ಸಿಕ್ಕ ಕಾರಣ ನಾನು ನಿನಗೆ ಮೊರೆ ಹೋಗಿದ್ದೇನೆ.

ಅಂಜದಿರು ಶಿವನೆ; ನಿನ್ನನ್ನು ನಾನು ಯಾವ ಫಲಪದವಿಯನ್ನೂ ಬೇಡಲಾರೆ. ನೀನಿರುವ ಲೋಕ ನಿನಗಿರಲಿ. ಕಾಡದೆ ನನಗೊಲಿದು ನಿನ್ನನ್ನು ಒಲಿಸಿಕೊಂಡವರ ಸಂಗದಲ್ಲಿ ನನ್ನನ್ನು ಇರಿಸು ತಂದೆ. ನನಗದೇ ಕೈಲಾಸ. ನನಗದೇ ಮಹಾಪದವಿ. ಶರಣರ ಸಂಗವದು ನನಗೆ ಹೆಜ್ಜೇನು ಸವಿದಂತೆ; ಕಪಿಲಸಿದ್ಧ ಮಲ್ಲಿಕಾರ್ಜುನನೇ.

**81**

**ಅಯ್ಯಾ, ನಿಮ್ಮ ಕಂಡು ಕಂಗಳು ನೋಡಲಮ್ಮದೆ**
**ಬೆಚ್ಚಿ ಬೆದರಿದುವಯ್ಯಾ;**
**ನೀನು ಶತಕೋಟಿ ಸೂರ್ಯಪ್ರಕಾಶಕ್ಕತೀತನು!**
**ನಿನ್ನ ಕಂಡ ಬಳಿಕ ಕರ್ಮವುಂಟೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಯ್ಯಾ ನಿಮ್ಮ ಕಂಡು ಕಂಗಳು ನೋಡಲಮ್ಮದೆ ಬೆಚ್ಚಿ ಬೆದರಿದುವಯ್ಯಾ ; ನೀನು ಶತಕೋಟಿ ಸೂರ್ಯಪ್ರಕಾಶಕ್ಕತೀತನು:

ನಿಮ್ಮನ್ನು ಕಂಡು ಕಣ್ಣುಗಳು ನೋಡಲಾರದೆ ಬೆಚ್ಚಿ ಬೆದರಿದವು. ನೀನು ನೂರು ಕೋಟಿ ಸೂರ್ಯಪ್ರಕಾಶಕ್ಕೆ ಅತೀತನು! ರೂಪವನ್ನು ಬೆಳಗುವ ಸ್ವರೂಪದ ಬೆಳಕು ನೋಡಲಾರದೆ ಕಣ್ಣುಗಳು ಬೆಚ್ಚಿ ಬೆದರಿದವು ಎನ್ನುತ್ತಾರೆ ಸಿದ್ಧರಾಮ ಶರಣರು.

ಶ್ರೀಕೃಷ್ಣ ಮಹಾಭಾರತದ ಯುದ್ಧ ತಡೆಯಲು ಕೌರವಾಧೀಶನಲ್ಲಿ ಸಂಧಾನಕ್ಕೆಂದು ಹೋಗುತ್ತಾನೆ. ದುರ್ಯೋಧನ, ಶ್ರೀಕೃಷ್ಣನನ್ನು ಬಂಧಿಮಾಡಿ ಕಾರಾಗೃಹಕ್ಕೆ ತಳ್ಳಲು ಹೊಂಚು ಹಾಕುತ್ತಾನೆ. ಆಗ ಶ್ರೀಕೃಷ್ಣ ತನ್ನ ವಿರಾಟ ಸ್ವರೂಪವನ್ನು ತೋರಿಸುತ್ತಾನೆ. ಪ್ರಜ್ವಲಿಸುವ ಆ ಬೆಳಕು ನೋಡಲಾರದೆ ಎಲ್ಲರೂ ಕಣ್ಣು ಮುಚ್ಚಿಕೊಳ್ಳುತ್ತಾರೆ. ಭೀಷ್ಮ, ವಿಧುರ, ದ್ರೋಣರು ಮಾತ್ರ ನೋಡುತ್ತಾರೆ. ವ್ಯೋಮಕಾಯನಾದ ನನ್ನನ್ನು ನೀವು ಬಂಧಿಸಲು ಸಾಧ್ಯವೆ? ಎಂದು ಕೃಷ್ಣ ಪ್ರಶ್ನಿಸುವ ಪ್ರಸಂಗ ಬರುತ್ತದೆ.

ತನ್ನನ್ನು ಬೆಳಗುವ ಬೆಳಕು ಶತಕೋಟಿ ಸೂರ್ಯಪ್ರಕಾಶಕ್ಕೆ ಅತೀತವಾದದ್ದು. ಆ ಬೆಳಕನ್ನು ಕಂಡ ತನ್ನ ಕಣ್ಣುಗಳು ಬೆಚ್ಚಿ ಬೆದರಿದವು. ತಾನೂ ಆ ಬೆಳಕಾದ. ಬೆಳಕಿಗೆ ಬೆಳಗುವುದೊಂದೇ ಕೆಲಸ. ತನ್ನ ಬೆಳಕನ್ನು ಇತರರಿಗೆ ತೋರಿಸಲು ಬರುವುದಿಲ್ಲ. ತನ್ನಲ್ಲಿಯ ಜ್ಞಾನ ತಾನು ನೋಡಲು ಬರುತ್ತದೆ. ಇತರರಿಗೆ ತೋರಿಸಲು ಬರುವುದಿಲ್ಲ. ಸಿದ್ಧರಾಮ, ಬಸವಣ್ಣ, ಅಲ್ಲಮಪ್ರಭು ಮುಂತಾದ ಶರಣರು ತಮ್ಮ ಜ್ಞಾನ ತಾವು ನೋಡಿ ಆನಂದಪಟ್ಟರು. ಇತರರಲ್ಲಿಯೂ ಇರುವ ಮಹಾಜ್ಞಾನವನ್ನು ನೋಡಿ

ತಮ್ಮಂತೆಯೇ ಬಗೆದರು. 'ಭೂ ಲೋಕದಲ್ಲಿರುವ ಜನವೆಲ್ಲ ಸಾಕ್ಷಾತ್ ಕೂಡಲ ಸಂಗನ ಶರಣರ ಪಡಿಯಚ್ಚು ನಾನೊಬ್ಬನೇ ಭಕ್ತ' ಎಂದರು ಬಸವಣ್ಣ.

ಶರಣರು ಇತರರಿಗೆ ನಾವು ಹೀಗೆ ಎಂದು ತೋರಿಸಲಿಲ್ಲ. ಸಮೀಪ ಬಂದವರಿಗೆ ನೀವು ಹೀಗೆ ಮಹಾಜ್ಞಾನಿಗಳು ಎಂದು ತೋರಿಸಿದರು. ಶ್ರೀಕೃಷ್ಣನಾದರೂ ತಾನು ಹೀಗೆ ಎಂದು ತೋರಿಸಲಿಲ್ಲ. ತನ್ನಲ್ಲಿರುವ ಮಹಾಜ್ಞಾನ ಇತರರಲ್ಲಿರುವ ಮಹಾಜ್ಞಾನ ಒಂದೇ. ಅದು ವಿರಾಟ ಸ್ವರೂಪ. ಜಗದಗಲ ಮುಗಿಲಗಲ ಅದರ ವಿಸ್ತಾರ, ಪಾತಾಳದಿಂದತ್ತತ್ತ ಬ್ರಹ್ಮಾಂಡ ದಿಂದತ್ತತ್ತ ಚಾಚಿಕೊಂಡಿರುವ ಬಯಲ ಗರ್ಭದಲ್ಲಿ ಸೂರ್ಯ, ಚಂದ್ರ, ಭೂಮಿ, ಅಗ್ನಿ, ನಕ್ಷತ್ರ, ಆಕಾಶ ಕಾಯಗಳ ವಾಸ!

ಬಯಲ ಪ್ರತಿ ರೂಪವೇ ತನುವಿನ ಸ್ವರೂಪ. ಆಮ್ಲಜನಕ, ಜಲಜನಕ, ಬಯಲ ಮಿಶ್ರಣದ ಒಂದು ಕಣವೇ ಜಲಬಿಂದು ಆ ಜಲ ಬಿಂದುವಿನ ಗರ್ಭ ಪ್ರವೇಶದಿಂದಲೇ ತನು.

ಈ ತನು ಹೇಗೆ ಬಯಲು ಎನ್ನುವುದಕ್ಕೆ 'ಬಯಲು ಬಯಲನೇ ಬಿತ್ತಿ ಬಯಲು ಬಯಲನೇ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯಾ, ಬಯಲ ಜೀವನ, ಬಯಲ ಭಾವನೆ, ಬಯಲು ಬಯಲಾಗಿ ಬಯಲಾಯಿತ್ತಯ್ಯ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ' ಎಂದು ಅಲ್ಲಮಪ್ರಭುಗಳು ತಾನು ತನ್ನಲ್ಲಿರುವ ವಿರಾಟ ಸ್ವರೂಪ ವೀಕ್ಷಿಸಿ ಆ ಸ್ವರೂಪವೇ ತಾನಾಗುವ ಸೂತ್ರ ರಚಿಸಿದ್ದಾರೆ. ತಿಳಿಯುವ ಕುತೂಹಲಿಗನಾಗಬೇಕಷ್ಟೆ.

**82**

**ಅಯ್ಯಾ, ನಿಮ್ಮ ಮಹಾತ್ಮೆಯನಾರಿಗೆಯೂ ಉಪಮಿಸಬಾರದು.**
**ಹಾ ಹಾ, ಅಯ್ಯಾ, ನೀ ಮಹಾಗುರುವು ಕಂಡಯ್ಯಾ.**
**ನೀ ಮಹಾಮಹಾದೇವನೈ**
**ಎನ್ನ ಕಪಿಲಸಿದ್ಧಮಲ್ಲೇಶ್ವರ ದೇವರ ದೇವನಯ್ಯಾ.**

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ ಎನ್ನ ತನುವಿನಲ್ಲಿಯೇ ತನ್ಮಯವಾಗಿ, ತನುವಿಗೆ ಒಂದು ಮನವನ್ನು ಸೃಷ್ಟಿ ಮಾಡಿ, ಮನವೆಂಬ ಮರ್ಕಟದ ಕೈಯಲ್ಲಿ ತನುವನ್ನು ಕೊಟ್ಟು, ಆ ತನುವಿನಲ್ಲಿಯೇ ನೀನು ಸಂಗಮವಾಗಿ, ಮನವೆಂಬ ಮರ್ಕಟಕ್ಕೆ ಗೋಚರವಾಗದೆ ಇದ್ದೂ ಇಲ್ಲದಂತಿರುವಿ. ನಿನ್ನ ಮಹಾತ್ಮೆಯನು ಆರಿಗೂ ಉಪಮಿಸಬಾರದು.

ನೋಡಲು ಕಣ್ಣು ಕೊಟ್ಟು, ಕಣ್ಣಿನಲ್ಲಿ ಆ ಮನವನಿಟ್ಟು, ನೋಡುವ ಸತ್ಯವನು ನೋಡಲು ಬಾರದಂತೆ ಕುರುಡನನ್ನಾಗಿಸಿದಿ. ಕೇಳಲು ಕಿವಿಯನ್ನು ಕೊಟ್ಟು ಆ ಕಿವಿಯೊಳಗೆ ಮನವನಿಟ್ಟು, ತನುವಿನಿಂದ ನುಡಿದ ಶಬ್ದಗಳನ್ನೇ ತನು ಕೇಳದಂತೆ ಮಾಡಿದಿ. ಕಿವಿಯಿದ್ದು, ಶಬ್ದ ಸರಿಯಾಗಿ, ಅರಿವಿನಿಂದ ಕೇಳದ ಕಿವುಡನನ್ನಾಗಿಸಿದಿ. ಸ್ಪರ್ಶಿಸಲು ಚರ್ಮಕೊಟ್ಟು, ಅದರಲ್ಲಿ ಮನವನಿಟ್ಟು ತನುವಿಗೆ ತನುವನ್ನು ಮುಟ್ಟಲು ಬಾರದಂತೆ ಮಾಡಿದಿ. ರುಚಿಸಲು ನಾಲಿಗೆ ಕೊಟ್ಟು ಅದರಲ್ಲಿ ಮನವನಿಟ್ಟು ಪದಾರ್ಥ ರುಚಿಸಲು ಬಾರದಂತೆ ಮಾಡಿದಿ.

ಮೂಸಿಸಲು ಮೂಗು ಕೊಟ್ಟು ಆ ಮೂಗಿನಲ್ಲಿ ಮನವಿಟ್ಟು ಸುಗಂಧ-ದುರ್ಗಂಧವೆಂದು ಭೇದ ಮಾಡಿ ಅರಿವಿನ ಪರಿಮಳ ಮೂಸಿಸಲು ಬಾರದಂತೆ ಮಾಡಿದಿ. ಹಾ ಹಾ, ಅಯ್ಯಾ, ಕಪಿಲಸಿದ್ದ ಮಲ್ಲಿಕಾರ್ಜುನನೇ ನೀನು ಮಹಾಗರುವ ಕಂಡಯ್ಯಾ. ಹೆಗ್ಗಣವನ್ನಿಕ್ಕಿ, ಮನೆಯನ್ನು ಕಟ್ಟಿ, ಅದರಲ್ಲಿ ನೀನಿದ್ದು ನಿನ್ನನ್ನು ತಿಳಿಯದಂತೆ ಮಾಡಿದಿ. ಏನೀ ನಿನ್ನ ಮಹಾತ್ಮೆ! ನಿನ್ನ

ಮಹಿಮೆಯನು ಆರಿಗೂ ಅರಿಯದಂತೆ ಮಾಡಿದಿ ಮಹಾದೇವನೆ !

ನೀನೇ ಸೃಷ್ಟಿ ಮಾಡಿದ ಮನವೆಂಬ ಮರ್ಕಟ ನಿನ್ನನ್ನರಿತರೆ ಸಾಕು ಆಂಜನೇಯನೇ ತಾನಾಗುತ್ತದೆ. ನೀನು ಸೃಷ್ಟಿ ಮಾಡಿದ ಮನ ನಿನ್ನನ್ನರಿತರೆ ಸಾಕು ಮಹಾದೇವನೇ ತಾನಾಗುತ್ತದೆ. ನೀನು ಸೃಷ್ಟಿ ಮಾಡಿದ ಮನ ನಿನ್ನನ್ನರಿತರೆ ಸಾಕು ಘನಮನವಾಗುತ್ತದೆ. ಕಪಿಲಸಿದ್ಧ ಮಲ್ಲೇಶ್ವರನೇ ದೇವರ ದೇವ ನೀನಯ್ಯ.

ನಿನ್ನ ಹೊರತಾಗಿ ಯಾವ ದೇವರೂ ಇಲ್ಲವೆಂದು ಮನವೆಂಬ ಮರ್ಕಟ ಅರಿಯಬೇಕು ಅಷ್ಟೆ. ಆದರೆ ಮನ ನಿನ್ನ ಹೊರತಾಗಿ, ಲೋಕವನ್ನೇ ತಿಳಿಯುತ್ತದೆ. ಆದರೆ ನೀನೇ ಸೃಷ್ಟಿಸಿದ ನಿನ್ನನ್ನು ಅರಿಯಲು ಮನಕ್ಕೆ ಸಾಧ್ಯವಾಗುತ್ತಿಲ್ಲ.

ನೋಡುವ ಕಣ್ಣಲ್ಲಿ ನೀನಿದ್ದು, ಮನದಿಂದ ನೋಡಿದಾಗ, ಹೀಗೆ ನೋಡುವುದು ತಪ್ಪೆಂದು ನೋಟದ ಮೂಲಕವೇ ಮುಕ್ಕಣ್ಣನಾಗಿ ಪಾಠ ಮಾಡುವ ನಿನ್ನನ್ನು ನೀನು ಸೃಷ್ಟಿಸಿದ ಮನವೇ ಅರಿಯುತ್ತಿಲ್ಲ. ಅರಿಯದಂತೆ ಮಾಡಿದ ನೀನು ಧನ್ಯನು. ಇದು ನಿನ್ನ ಲೀಲೆ. ಕಣ್ಣು ಕಟ್ಟಿ, ಕಣ್ಣಿನಲ್ಲೇ ನೀನಿದ್ದು ಕಣ್ಣಿಗೆ ಕಾಣದಂತೆ ಮಾಡಿದೆ. ಹಾಗೆಯೇ ಕಿವಿಗೆ ಕೇಳದಂತೆ ಮಾಡಿದೆ. ಚರ್ಮಕ್ಕೂ ಮುಟ್ಟಲು ಬಾರದಂತೆ ಮಾಡಿದೆ. ನಾಲಿಗೆಗೆ ರುಚಿಸಲು ಬಾರದಂತೆ, ಮೂಗಿಗೆ ಮೂಸಿಸಲು ಬಾರದಂತೆ ಮಾಡಿದೆ. ನಿನ್ನ ಮಹಿಮೆ ಅಪಾರ. ನಿನ್ನನ್ನು ತಿಳಿದ ಮನವೇ ಧನ್ಯ.

**83**

**ಅಯ್ಯಾ, ನಿಮ್ಮ ಮಹಾನುಭಾವರಿಂದ**
**ಮಹಾವಸ್ತುವಿನ ಪ್ರಮಾಣವನರಿದೆ;**
**ಶುದ್ಧ ಸಿದ್ಧ ಪ್ರಸಿದ್ಧವಿದೆಂದರಿದೆ ;**
**ಪಾದೋದಕ ಪ್ರಸಾದ ಭಕ್ತಿಯೆಂಬ ನಿಶ್ಚಯವನರಿದೆ.**
**ನಿಮ್ಮ ಮಹಾನುಭಾವರಿಂದ ಪರತತ್ವ ಪ್ರಮಾಣವನರಿದು**
**ಶರಣು ಶರಣೆನುತಿದ್ದೆನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ನಿನ್ನನ್ನು ಒಲಿಸಿಕೊಂಡವರೇ ಮಹಾನುಭಾವರು. ಮಹಾವಸ್ತುವಿನ ಪ್ರಮಾಣವನು ಅರಿದವರು. ಅದು ಶುದ್ಧ ಸಿದ್ಧ ಪ್ರಸಿದ್ಧವೆಂದು ಅರಿದವರು. ಪಾದೋದಕ ಪ್ರಸಾದ ಭಕ್ತಿಯೆಂಬ ನಿಶ್ಚಯವನರಿದವರು. ಅಂತಹ ಮಹಾನುಭಾವರಿಂದ ಪರತತ್ವ ಪ್ರಮಾಣವನು ಅರಿದೆ.

ಶರಣು ಶರಣೆನುತ್ತಿದ್ದೆನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ :

ಸಕಲರಿಗೂ ಶರಣು ಶರಣೆನ್ನುವುದು ಹುಡುಗಾಟವಲ್ಲ. ಮಹಾನುಭಾವಿಗಳಿಂದ ತನುವಿನಲ್ಲಿ ತನ್ಮಯವಾದ ಮಹಾವಸ್ತುವನ್ನು ಕಂಡುಕೊಂಡ ಬಳಿಕ ತನುವು ಆ ಮಹಾ ವಸ್ತುವಿನ ತನುವಾಯಿತು. ಸಕಲ ತನುಗಳೂ ಮಹಾವಸ್ತುವಿನ ಸೊತ್ತಾಗಿ ಕಂಡವು. ಮಹಾವಸ್ತುವನ್ನು, ಮಹಾದೇವನನ್ನು ಕಂಡರೆ ತನುವಿಗೆ ಹೇಗಾಗಬೇಡ ! ತನುವಿನ ಮನಕ್ಕೆ ಹೇಗಾಗಬೇಡ; ತಂತಾನೇ ತನಗೆ ತಾನೆ ಮಹಾದೇವನಿಗೆ ತಲೆಬಾಗಿ ಕಿರಿಯದಾಗುತ್ತದೆ. ಕಂಡ ತನುಗಳೆಲ್ಲ ವಿರಾಟ ಸ್ವರೂಪವುಳ್ಳ; ಮಹಾದೇವನೇ ಪವಡಿಸಿದ, ಮಹಾದೇವನ ತನುಗಳಾಗುತ್ತವೆ. ಹೀಗಾಗಿ ಅಣ್ಣ

ಬಸವಣ್ಣನವರು ಕಂಡ ತನುಗಳಿಗೆಲ್ಲ ತಲೆ ಬಾಗಿ ''ಎನಗಿಂತ ಕಿರಯರಿಲ್ಲ'' ನಿಮಗಿಂತ ಅಂದರೆ ಸಾಕ್ಷಾತ್ ಶಿವನೇ ಪವಡಿಸಿದ ''ಶಿವಭಕ್ತರಿಗಿಂತ ಹಿರಿಯರಿಲ್ಲ'' ಎಂದು ಘೋಷಿಸಿದರು. ಇದೇ ವಿರಾಟ ಸ್ವರೂಪಿಯಾಗಿ; ವಿರಾಟಸ್ವರೂಪವನ್ನು ದರ್ಶನ ಮಾಡಿಕೊಂಡ ಮಹಾನುಭಾವರ ತನು.

ಮಹಾನುಭಾವರಿಂದ ಪರತತ್ವ ಪ್ರಮಾಣವನು ಅರಿದ ಭಾಗ್ಯ. ಪಾದೋದಕ ಪ್ರಸಾದ ಭಕ್ತಿಯೆಂಬ ನಿಶ್ಚಯವನು ಅರಿದ ಭಾಗ್ಯ. ಶುದ್ಧ ಸಿದ್ಧ ಪ್ರಸಿದ್ಧ ಎಂದು ಅರಿದ ಮಹಾಭಾಗ್ಯ.

ಪಾದೋದಕ : ಜಲಬಿಂದುವೇ ಜೀವಜಲ ಬಿಂದುವಾಗಿ ಪರಮಾತ್ಮನ ಶ್ರೀಚರಣವಾಯಿತು. ಶ್ರೀಮುಕುಟವಾಯಿತು. ವಿರಾಟಸ್ವರೂಪವೇ ತಾನಾಯಿತು. ಮಹಾನುಭಾವರ ಅಂತಃಕರುಣದಿಂದಾಗಿ ಮಹಾ ಮಹಾವಸ್ತುವಿನ ಅರಿವಾಯಿತು. ಪರಮಾತ್ಮ ತನುವಿನಲ್ಲಿಯೇ ತನ್ಮಯವಾಗಿದ್ದರೂ ತನುವಿಗೆ ತಿಳಿಯದಾಯಿತು. ಮಹಾನುಭಾವರ ದಯೆಯಿಂದ ತನ್ನ ತಾನು ಅರಿಯಲಾಗಿ ತನುವಿನಲ್ಲಿಯೇ ತನ್ಮಯವಾಗಿದೆಯೆಂದು ತನುವಿಗೇ ಅರಿವಾಯಿತು. ತನುವಿನಲ್ಲಿಯೇ ತನ್ಮಯವಾದ ಆ ಅರಿವೇ ಕರಿಗೊಂಡ ಬಳಿಕ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**84**

**ಅಯ್ಯಾ, ನಿಮ್ಮವರ ಕಂಡಡೆ ನೀವೆಂದೆ ನಂಬುವ**
**ನಂಬುಗೆಯ ಕರುಣಿಸಯ್ಯಾ.**
**ಅಯ್ಯಾ, ನಿಮ್ಮವರ ವಾಕ್ಯವ ಕೇಳಿದಡೆ,**
**ನಿಮ್ಮ ವಾಕ್ಯವೆಂದೆ ನಂಬುವ ನಂಬುಗೆಯ ಕರುಣಿಸಯ್ಯಾ.**
**ಅಯ್ಯಾ, ನಿಮ್ಮವರ ಕೀಳಿಲ ಕಾಯ್ದುಕೊಂಡಿಪ್ಪೆನಯ್ಯಾ.**
**ಎನ್ನ ಮಾನಸ-ವಾಚಕ-ಕಾಯಕ್ಕೆ ಇದನೆ ಕರುಣಿಸಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿಮ್ಮ ಧರ್ಮ.**

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ನಿಮ್ಮವರ ಕಂಡಡೆ ಅಂದರೆ ನಿಮ್ಮ ದರ್ಶನ ಮಾಡಿಕೊಂಡವರು ಕಂಡರೆ ಅವರು ನೀವಲ್ಲದೆ ಅನ್ಯರಲ್ಲ ಎಂದು ನಂಬುವ ನಂಬುಗೆಯನ್ನು ನನಗೆ ಕರುಣಿಸು ತಂದೆ ಎಂದು ಪರಿಪರಿಯಿಂದ ಪ್ರಾರ್ಥಿಸಿದ್ದಾರೆ.

ಬ್ರಹ್ಮಜ್ಞಾನಿಗಳನ್ನು ಗುರುತಿಸುವುದು ಸುಲಭದ ಮಾತಲ್ಲ. ಮಠಾಧೀಶರು, ಜಗದ್ಗುರುಗಳು, ಪೀಠಾಧಿಪತಿಗಳು, ಆಶ್ರಮದ ಅಧಿಪತಿಗಳನ್ನು ಗುರುತಿಸಬಹುದು. ಅಷ್ಟೇಕೆ ಅವರು ನಾವೇ ಎಂದು ಬೋರ್ಡ್ ಕೊರಳಿಗೆ ಹಾಕಿಕೊಂಡಿರುತ್ತಾರೆ. ಅವರಿಗೆ ಅವರೆಂದು ಕರೆಯದಿದ್ದರೆ ಅವರ ಪಿತ್ತ ನೆತ್ತಿಗೇರುತ್ತದೆ. ಅಂತಹ ವೇಷಧಾರಿಗಳೆಲ್ಲ ನಿಮ್ಮನ್ನು ಕಂಡವರಲ್ಲ. ನಿಮ್ಮ ಹೆಸರ್ಹೇಳಿ ಉಪ ಜೀವನಕ್ಕೆ ವೇಷ ಹಾಕಿಕೊಂಡವರು. ಲೋಕಕ್ಕೆ ಬೇಕಾದವರು.

ಲೋಕದಲ್ಲಿ ಅನುಭಾವಿಗಳು ವಿರಳಾತಿ ವಿರಳವಾಗಿ ಬೆರಳೆಣಿಕೆಯಲ್ಲಿ ಮಾತ್ರ ಸಿಕ್ಕುತ್ತಾರೆ. ಅದು ಅನುಭಾವಿಗಳನ್ನು ಹುಡುಕುವ ಬಲ ಇದ್ದವನಿಗೆ ಮಾತ್ರ ಆತ ಲಭ್ಯವಾಗುತ್ತಾನೆ.

ಅನುಭಾವಿ ಲೋಕಕ್ಕೆ ವಿರೋಧಿಯಾಗಿರುತ್ತಾನೆ. ಲೋಕದ ಯಾವ ಆಚಾರಗಳೂ ಅನುಭಾವಿಗೆ ಬೇಡ. ಅನುಭಾವಿಯ ಮಾತುಗಳು ಲೋಕಕ್ಕೆ ಬೇಡ. ಅಂತಹ ಅನುಭಾವಿಯನ್ನು ಕಂಡಡೆ ; ಪರಮಾತ್ಮನೇ, ಕಪಿಲಸಿದ್ಧ ಮಲ್ಲಿಕಾರ್ಜುನನೇ ಆತ ನಿಮಗಿಂತನ್ಯನಲ್ಲ ಎಂದು ನಂಬುವ ನಂಬುಗೆಯ ನೀನೇ ಎನಗೆ ಕರುಣಿಸು ತಂದೆ.

ಅನುಭಾವಿಗಳ, ಶರಣರ ಮಾತುಗಳ ಕೇಳಿದಡೆ ಅವು ನಿಮ್ಮ ಮಾತುಗಳೇ, ನೀವೇ ಸ್ವತಃ ನುಡಿದ ಮುತ್ತಿನಂತಹ ಮಾತುಗಳೆಂದು, ಮುತ್ತಿನಂತೆ ಬೆಳಗುವ ಮಾತುಗಳೆಂದು ನಂಬುವ ನಂಬುಗೆಯನ್ನು ಎನಗೆ ಕರುಣಿಸು ತಂದೆ.

ಎನ್ನ ಮಾನಸ-ವಾಚಕ-ಕಾಯಕ್ಕೆ ಇದನೆ ಕರುಣಿಸಯ್ಯಾ ಕಪಿಲಸಿದ್ದ ಮಲ್ಲಿಕಾರ್ಜುನಾ.

ನಿಮ್ಮ ಧರ್ಮ :

ನಿಮ್ಮ ಧರ್ಮವೆನ್ನುವುದು ಹಿಂದು ಅಲ್ಲ. ನಿಮ್ಮ ಧರ್ಮ ಎನ್ನುವುದು ಇಸ್ಲಾಂ ಕೂಡಾ ಅಲ್ಲ. ನಿಮ್ಮ ಧರ್ಮ ಎನ್ನುವುದು ಬೌದ್ಧ, ಕ್ರಿಶ್ಚಿಯನ್, ಫಾರ್ಶಿ, ಜೈನ ಅಲ್ಲ. ತನುವಿನ ಧರ್ಮವೇ ನಿಮ್ಮ ಧರ್ಮ. ಪ್ರತಿ ತನುವಿನಲ್ಲಿದ್ದು ; ಆ ತನುವಿನಲ್ಲಿಯೇ ತನ್ಮಯವಾಗಿದ್ದು, ತನುವಿನ ಮನಕ್ಕೆ ಮಾನವ ಧರ್ಮ ಬೋಧಿಸುತ್ತಾ ಆ ಮನಕ್ಕೆ ತನುವಿರುವವರೆಗೂ ಕಂಡುಬರದ ಮಹಾದೇವ ನೀನು! ನಿನ್ನನ್ನು ಕಂಡುಕೊಳ್ಳುವ ಬಯಕೆಯಾ ಮನಕ್ಕೆ ದರ್ಶನ ಭಾಗ್ಯ ಕಲ್ಪಿಸುವ ಮಹಾದೇವ ನೀನು. ಅಂತಹ ಮನವನ್ನು ಘನಮನವನ್ನಾಗಿಸುವ ಧರ್ಮ ನಿನ್ನದು.

ತನು ಒಂದೇ. ಆದರೂ ತನುಗಳನ್ನು ಹಿಂದು ಮುಸಲ್ಮಾನ ಕ್ರೈಸ್ತ ಬೌದ್ಧ ಫಾರ್ಶಿ ಜೈನ ಎಂದು ಭೇದದಿಂದ ನೋಡುವ ಧರ್ಮ ನನ್ನದು. ತನುವಿನೊಳಗೇ ಇದ್ದ ನೀನು ತನುಗಳ ಧರ್ಮ ನೋಡಿ ಗಹಗಹಿಸಿ ನಕ್ಕರೂ ಕೂಡಾ ತನುವಿನ ಮನಕ್ಕೆ ಅರಿವಿಲ್ಲದೆ, ತನುಗಳನ್ನು ಭೇದಿಸಿ ನೋಡುವ ಅಜ್ಞಾನ ಅದಕ್ಕೆ.

ಕಾಯ ನಿನ್ನದು. ಅದನ್ನು ಆವರಿಸಿದ ಮನವೂ ನಿನ್ನದು. ಕಾಯ ನುಡಿಯುವ ನುಡಿಗಳು ಕೂಡಾ ನಿನ್ನವು. ಆದರೂ ಮನಕ್ಕೆ ಅರಿವಿಲ್ಲ. ಗುರುದೇವನನ್ನು ಗುರುತಿಸುವ ಶಕ್ತಿ ಅದಕ್ಕಿಲ್ಲ. ಆ ಶಕ್ತಿಯನ್ನು ನೀನೆ ಕರುಣಿಸು ತಂದೆ, ತನುವನ್ನು ಆವರಿಸಿದ ಅಜ್ಞಾನಿ ಮನವನ್ನು ಅಪ್ಪಿಕೊಂಡು ನಿನ್ನ ತನುವಿನ ಧರ್ಮ ನೀನೇ ಪಾಲಿಸು ತಂದೆ. ಸಕಲ ಧರ್ಮಗಳನ್ನು ಗಾಳಿಗೆ ತೂರಿ, ಅರಿವಿನ ಧರ್ಮವನ್ನು ಪಾಲಿಸು ಕಪಿಲಸಿದ್ಧ ಮಲ್ಲಿಕಾರ್ಜುನನೇ.

**85**

**ಅಯ್ಯಾ, ನಿಮ್ಮ ವಿಕಳದಲ್ಲಿ ನೆನೆವುತ್ತ**
**ಗಾಳಿಯ ಸರವ ನೀವೆಂದು ಬಗೆದೆ ಕಂಡಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನಿಮ್ಮ ವಿಕಳದಲ್ಲಿ ಮಹಾಭ್ರಾಂತಿಯಾಗಿದ್ದೆನಯ್ಯಾ.**

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ನೀವು ಎನ್ನಂಗದಲ್ಲಿ ಸಂಗಮವಾಗಿದ್ದರೂ ನಿಮ್ಮ ದರುಶನ ಭಾಗ್ಯ ಎನಗಿಲ್ಲದೆ ವಿಲವಿಲನೆ ಒದ್ದಾಡುತ್ತಿದ್ದೇನೆ ತಂದೆ. ನನ್ನನ್ನು ಸೃಷ್ಟಿ ಮಾಡಿ, ನನ್ನಲ್ಲಿಯೇ ಸಂಗಮವಾಗಿ, ನನಗೆ ನೀನು ದರುಶನ ನೀಡುತ್ತಿಲ್ಲ, ನಿನ್ನ ಕೊರತೆಯನ್ನು ನೆನೆವುತ್ತ ಗಾಳಿಯ ಶಬ್ದವೇ ನೀವೆಂದು ತಿಳಿದೆ ತಂದೆ.

ನಿಮ್ಮ ಕೊರತೆಯಿಂದ ಮಹಾಭ್ರಾಂತಿಗೆ ಒಳಗಾಗಿದ್ದೇನೆ ತಂದೆ. ಭ್ರಾಂತಿ ಎನ್ನುವ ಭೂತ ನನ್ನನ್ನು ತಗಲು ಹಾಕಿಕೊಂಡಿದೆ. ಭ್ರಾಂತಿಯ ಸುಳ್ಳು ಸುಖದಿಂದಾಗಿ ಬ್ರಹ್ಮನನ್ನು ಮರೆತಿದ್ದೇನೆ.

ಭ್ರಾಂತಿ ಎಂದರೆ ಅಲೆದಾಟ, ತಪ್ಪಾಗಿ ಗ್ರಹಿಸುವುದು, ದಿಕ್ಕು ತೋಚದಿರುವಿಕೆ ಎಂಬ ಅರ್ಥ ನಿಘಂಟಿನಲ್ಲಿದೆ. ಬ್ರಹ್ಮ ಅಂದರೆ ಜ್ಞಾನ, ಬ್ರಹ್ಮ ಜ್ಞಾನ, ಆತ್ಮಜ್ಞಾನ, ಮುಕ್ತಿ, ಮೋಕ್ಷ

ಎಂಬ ಅರ್ಥ ನಿಘಂಟಿನಲ್ಲಿದೆ.

ಸ್ವತಹ ತಾನು ಜ್ಞಾನಿಯೇ ಆಗಿದ್ದರೂ ತನ್ನ ಜ್ಞಾನ ತಾನೆ ಬಳಕೆ ಮಾಡಲು ಸಾಧ್ಯವಾಗದೆ ಮಹಾಭ್ರಾಂತಿಯಲ್ಲಿ ಮನುಷ್ಯ ಬದುಕುತ್ತಿದ್ದಾನೆ.

ಶ್ರೀ ಶಂಕರರು 'ಅಹಂ ಬ್ರಹ್ಮಾಸ್ಮಿ' ನಾನೇ ಬ್ರಹ್ಮ ಎಂದರು. ಇದು ಗರ್ವದಿಂದ ಅಂದ ಮಾತಲ್ಲ. ಬ್ರಹ್ಮ ಎಂದರೆ ಪರಿಪೂರ್ಣ ಜ್ಞಾನಿ. ತಾನು ಜ್ಞಾನಿ ಎಂದು ಕಂಡುಕೊಂಡ ಮೇಲೆ ಹೇಳಿದ ಮಾತು ಇದು. ಲೋಕ ಈ ಮಾತನ್ನು ಒಪ್ಪಲಿಲ್ಲ ; ಒಪ್ಪದಿದ್ದರೆ ಆತನಿಗೇನು ನಷ್ಟ!

ದೇಹದಲ್ಲಿ ಜ್ಞಾನ ಹೇಗಿದೆಯೋ ಹಾಗೆಯೇ ಭ್ರಾಂತಿಯೂ ಇದೆ. ಬ್ರಹ್ಮನೆಂಬ ಅವ್ಯಕ್ತ ಜ್ಞಾನಿಯೂ ಇದ್ದಾನೆ; ಭ್ರಮೆಯೆಂಬ ಅವ್ಯಕ್ತ ಮಾಯೆಯೂ ಇದೆ. ಮರೆವುಳ್ಳ ಅವ್ಯಕ್ತ ಮನುಷ್ಯನೂ ಇದ್ದಾನೆ. ಅಂದರೆ ಅರಿವುಳ್ಳ ಹಾಗೂ ಮರೆವುಳ್ಳ ಮನುಷ್ಯರಿಬ್ಬರೂ ಪ್ರತಿ ತನುವಿನಲ್ಲಿ ಇದ್ದಾರೆ.

ಅರಿವುಳ್ಳ ಮನುಷ್ಯನನ್ನು ಪರಮೇಶ್ವರ ಮಹಾದೇವ ಸದಾಶಿವ ಸಾಕ್ಷಾತ್ ಪರಬ್ರಹ್ಮ ಮುಕ್ಕಣ್ಣ ನಾಗಭೂಷಣ ಚಂದ್ರಶೇಖರ ಗಂಗಾಧರ ಎಂಬ ಮುಂತಾದ ಹೆಸರಿನಿಂದ ಕರೆದರು. ಶರಣರು ಕಪಿಲಸಿದ್ಧ ಮಲ್ಲಿಕಾರ್ಜುನ, ಕೂಡಲಸಂಗಮದೇವಾ, ಚೆನ್ನಮಲ್ಲಿಕಾರ್ಜುನ, ಕೂಡಲ ಚೆನ್ನ ಸಂಗಮದೇವ ಎಂದು ಕರೆಯುತ್ತಾ ಶರಣರು ತಮಗೆ ಬೇಕಾದ ಹೆಸರನ್ನಿಟ್ಟು ದೇವರನ್ನು ಕರೆದರು.

ಮರೆವು ಎನ್ನುವ ಮನವುಳ್ಳ ಮನುಷ್ಯ ಅರಿವುಳ್ಳ ಮಹಾಜ್ಞಾನಿಯ ಸಂಗ ಮಾಡಿದ. ಆ ಮಹಾಜ್ಞಾನಿಗೆ ಶರಣು ಹೋದ, ಆ ಮಹಾಜ್ಞಾನಿಗೆ ಭಕ್ತಿ ಮಾಡಿ ಭಕ್ತನಾದ. ಆ ಮಹಾಜ್ಞಾನಿಯನ್ನೇ ಗುರುವನ್ನಾಗಿಸಿಕೊಂಡು ತಾನು ಆತನಿಗೆ ಶಿಷ್ಯನಾದ. ಆತನನ್ನು ಸಖನನ್ನಾಗಿಸಿಕೊಂಡು ತಾನು ಆತನಿಗೆ ಸಖಿಯಾದ. ಆತನನ್ನು ಪತಿಯನ್ನಾಗಿಸಿಕೊಂಡು ತಾನು ಸತಿಯಾಗಿ- ಸಂಗ ಮಾಡಿದ. ಇದು ದೇಹದಲ್ಲಿಯೇ ಘಟಿಸಿತು! ಕಣ್ಣಿನ ಭ್ರಾಂತಿ ಕಳೆದು ಹೋಯಿತು. ಕಿವಿಯ ಕಿವುಡುತನ ಕಳೆದು ಹೋಯಿತು. ಬ್ರಹ್ಮನನ್ನು ಸೇರಿದ ಭ್ರಾಂತಿ ಬ್ರಹ್ಮ ತಾನೇ ಆಗಿ ಅಹಂ ಬ್ರಹ್ಮಾಸ್ಮಿ ಎಂದು ಘೋಷಿಸಿತು. ದೇವರು ತಾನು ದೇಹದಲ್ಲಿಯೇ ಒಂದಾದುದನು ಕಂಡುಕೊಂಡ ತನಗೆ ಪರ ಮಾನಂದವಾಯಿತು. ಇದು ಪ್ರಯತ್ನ ಮಾಡಿದ ಭ್ರಾಂತಿಗೆ ದಕ್ಕಿದ ಬ್ರಹ್ಮ ಫಲ!

ದೇಹವನ್ನು ಆವರಿಸಿದ ಭ್ರಾಂತಿಗೆ ದೇಹದಲ್ಲಿಯೇ ಸಂಗಮವಾದ ಅರಿವೆಂಬ ದೇವರ ದರ್ಶನವಾಗಬೇಕಲ್ಲ? ಅದಕ್ಕೆ ದರ್ಶನವಾಗದ ಕಾರಣ ದೇವರನ್ನು ಕಲ್ಲಿನಲ್ಲಿ ಚಿನ್ನದಲ್ಲಿ ಪಂಚಲೋಹಗಳಲ್ಲಿ ಕೆತ್ತಿ, ಕಾಗದದಲ್ಲಿ ಬರೆದು, ದೇವಸ್ಥಾನದಲ್ಲಿ ಪ್ರತಿಷ್ಠಾಪಿಸಿ ಅದಕ್ಕೆ ಪ್ರಾಣ ತುಂಬುವ ನಾಟಕವಾಡಿ, ದೇವರನ್ನು ಭ್ರಾಂತಿಯಿಂದ ಆರಾಧಿಸುತ್ತದೆ. ಆ ಭ್ರಾಂತಿಗೆ ಕಲ್ಲೇ ದೇವರಾಗಿ ಕಾಣುತ್ತದೆ.

ಭ್ರಾಂತಿ ಕಳೆದುಕೊಂಡ ಬ್ರಹ್ಮಜ್ಞಾನಿಗೆ ದೇವರು ಕಲ್ಲಾಗಿ ಕಾಣುತ್ತಾನೆ. ಕಲ್ಲನ್ನು ಕಲ್ಲೆಂದು ಹೇಳಿದರೆ ಜ್ಞಾನಿಗೆ ಕಲ್ಲಿನಿಂದ ಹೊಡೆದು ಸಾಯಿಸುವರು. ಇದು ಭ್ರಾಂತಿಯ ಆಟ.

ನಿಮ್ಮನ್ನು ಕಾಣದೆ, ನಿಮ್ಮನ್ನು ತಪ್ಪಾಗಿ ಕಂಡು, ಅನಂತ ಕಾಲ ವ್ಯರ್ಥವಾಗಿ ಕಳೆದೆ ತಂದೆ. ಮಹಾಭ್ರಾಂತಿಯಲ್ಲಿದ್ದು ನಿಮ್ಮ ದರ್ಶನವಾಗದೆ ವಿಲಿವಿಲಿ ಒದ್ದಾಡಿದೆ ನನ್ನಯ್ಯಾ. ಗಾಳಿಯಿಂದ ಉಂಟಾದ ಶಬ್ದವನ್ನೇ ನೀವೆಂದು ಭಾವಿಸಿದೆ. ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿಮ್ಮ ಹುಡುಕಾಟದಲ್ಲಿ ಭ್ರಾಂತಿಯಿಂದ ಅಲೆದಲೆದು ಮಹಾಭ್ರಾಂತಿಯೇ ನಾನಾಗಿದ್ದೆನಯ್ಯಾ. ನನ್ನಲ್ಲಿಯೇ ನಿನ್ನನ್ನು ಕಂಡುಕೊಂಡು ನಾನು ನಿನ್ನಲ್ಲಿ ಲೀನವಾಗಿ ನೀನೇ ನಾನಾದೆನಯ್ಯ !

**86**

**ಅಯ್ಯಾ, ನಿಮ್ಮ ಸತ್‌ಕೃಪೆ !**

**ಎನ್ನ ಸುಕೃತಾಂಗಿಯ ಮಾಡಿ ಮರ್ತ್ಯಕ್ಕೆ ತಂದಿರಯ್ಯಾ.**
**ಅಯ್ಯಾ, ನಿಮ್ಮ ಕೃಪೆಯಿಂದ**
**ನಿಷ್ಠಾಮಾಹೇಶ್ವರನೆನಿಪ ಅಮುಗಿದೇವಯ್ಯಗಳಿಂದ**
**ಪ್ರಭುದೇವರೆಂಬ ಅನಾದಿ ಜಂಗಮವ ಕಂಡೆನಯ್ಯಾ.**
**ಅಯ್ಯಾ, ನಿಮ್ಮ ಪ್ರಭುದೇವರೆಂಬ ಅನಾದಿ ಜಂಗಮದಿಂದ**
**ಪರಮ ಗುರುವಪ್ಪ ಬಸವೇಶ್ವರನ ಕಂಡೆನಯ್ಯಾ.**
**ಆ ಬಸವಣ್ಣನಿಂದ ಅಸಂಖ್ಯಾತ ಪ್ರಮಥಗಣಂಗಳ ಕಂಡೆನಯ್ಯಾ.**
**ಆ ಗಣಂಗಳ ಕೃಪೆಯಿಂದ ಚೆನ್ನಬಸವಣ್ಣನ ಪಡೆದು**
**ನಿಮ್ಮನಂಗದ ಮೇಲೆ ಸಾಹಿತ್ಯವ ಮಾಡಿಕೊಂಡೆನಯ್ಯಾ,**
**ನಿಮ್ಮ ಸಾಹಿತ್ಯದ ಪ್ರಸನ್ನಮೂರ್ತಿ ಎನ್ನ ಕಣ್ಣಮುಂದೆ ಪ್ರತ್ಯಕ್ಷವಾಗಿಪ್ಪ**
**ಮರುಳಶಂಕರದೇವರ ಶ್ರೀಪಾದವ ಕಂಡು**
**ನಾನು ನಿಶ್ಚಯ ಕೃತಾರ್ಥನಾದೆನಯ್ಯಾ,**
**ಕಪಿಲಸಿದ್ಧಮಲ್ಲಿನಾಥ ಪ್ರಭುವೇ, ನಿಮ್ಮ ಧರ್ಮ.**

ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ, ವ್ಯೋಮಕಾಯನೇ, ಬಯಲದೇವನೆ ನಿಮ್ಮ ಸತ್ಕೃಪೆಯಿಂದಾಗಿ ನೀವು ನನ್ನನ್ನು ಸುಕೃತಗೊಳಿಸಿದಿರಿ. ಮರ್ತ್ಯಕ್ಕೆ ತಂದಿರಿ. ತಮ್ಮ ದರುಶನ ಭಾಗ್ಯ ಎನಗೆ ಕರುಣಿಸುವುದಕ್ಕಾಗಿ ನಿಷ್ಠಾ ಮಾಹೇಶ್ವರನೆನಿಪ, ಮಾಹೇಶ್ವರನ ದರುಶನ ಮಾಡಿಕೊಂಡ ಅಮುಗಿದೇವಯ್ಯಗಳನ್ನು ಕಳುಹಿಸಿದಿರಿ. ಅವರು ಎನಗೆ ಪ್ರಭುದೇವರೆಂಬ ಅನಾದಿ ಜಂಗಮನ ದರುಶನ ಮಾಡಿಸಿದರು.

ಅಯ್ಯಾ, ನಿಮ್ಮ ಪ್ರಭುದೇವರೆಂಬ ಅನಾದಿ ಜಂಗಮರು ಎನಗೆ ಪರಮ ಗುರುದೇವನಾದ ಬಸವೇಶ್ವರನ ದರುಶನ ಮಾಡಿಸಿದರು ತಂದೆ. ಆ ಬಸವಣ್ಣನ ಕೃಪೆಯಿಂದ ಅಸಂಖ್ಯಾತ ಪ್ರಮಥ ಗಣಂಗಳ ದರುಶನ ಭಾಗ್ಯ ಎನಗೆ ಲಭಿಸಿತು ತಂದೆ.

ಪ್ರಮಥ ಗಣಂಗಳ ಕೃಪೆಯಿಂದಾಗಿ ಚೆನ್ನಬಸವಣ್ಣನನ್ನು ಪಡೆದೆ. ಅವರನ್ನು ನಿಮ್ಮ ಅನಂಗದ ಮೇಲೆ ಸಾಹಿತ್ಯವ ಮಾಡಿಕೊಂಡೆನಯ್ಯಾ. ನಿಮ್ಮ ಸಾಹಿತ್ಯದ ಪ್ರಸನ್ನಮೂರ್ತಿ ಎನ್ನ ಕಣ್ಣ ಮುಂದೆ ಪ್ರತ್ಯಕ್ಷವಾಗಿಪ್ಪ ಮರುಳ ಶಂಕರ ದೇವರ ಶ್ರೀಪಾದವ ಕಂಡು ನಾನು ನಿಶ್ಚಯ ಜ್ಞಾನವನ್ನು ಪಡೆದು ಕೃತಾರ್ಥನಾದೆನಯ್ಯಾ. ಕಪಿಲಸಿದ್ಧ ಮಲ್ಲಿನಾಥ ಪ್ರಭುವೇ, ನಿಮ್ಮ ಧರ್ಮ.

ನಿಮ್ಮ ಧರ್ಮ ಮಾನವ ಧರ್ಮ. ದೇಹದ ಧರ್ಮ. ದೇಹವೆಂಬ ದೇವಾಲಯದ ಧರ್ಮ. ದೇಹದಲ್ಲಿ ಸಂಗಮವಾದ ಅರಿವಿನ ಧರ್ಮವನ್ನು ಆವರಿಸಿದ ಮನವೆಂಬ ಭಕ್ತನು ಸ್ವೀಕರಿಸಿ ಆಚರಿಸುವ ಅಗೋಚರದ ಧರ್ಮ. ನಿನ್ನದು ಹಿಂದೂ ಧರ್ಮವಲ್ಲ. ಮುಸಲ್ಮಾನ, ಕ್ರೈಸ್ತ ಧರ್ಮವೂ ಅಲ್ಲ. ಫಾರ್ಸಿ ಬೌದ್ಧ ಜೈನ ಧರ್ಮಗಳು ನಿನ್ನವಲ್ಲ. ನಿನ್ನದೆಂಬುದು ದೇಹದ ಧರ್ಮ. ಅರಿವಿನ ಧರ್ಮ.

ದೇಹದಲ್ಲಿ ನೀನಿದ್ದೂ ನಿನ್ನ ಧರ್ಮ ಪಾಲಿಸದಂತೆ ದೇಹವನ್ನು ಆವರಿಸಿದ ಮನಕ್ಕೆ ನೀನೇ ನಿರ್ಬಂಧವನೊಡ್ಡಿದೆ. ನೀನೊಡ್ಡಿದ ಚಕ್ರವ್ಯೂಹವನ್ನು ಯಾರಿಗೂ ಭೇದಿಸಲು ಬಾರದಂತೆ ಮಾಡಿದೆ. ನೀನೊಲಿದರೆ ಕೊರಡು ಕೊನರುವುದು ತಡವಿಲ್ಲ. ಆದರೂ ನಿನ್ನನ್ನು ನೇರವಾಗಿ ಒಲಿಸಿಕೊಳ್ಳಲು ಸಾಧ್ಯವಾಗದಿದ್ದರೆ ಎನ್ನ ಮೇಲೆ ಕೃಪೆ ತೋರಿ, ನಿನ್ನ ದರುಶನ ಪಡೆದ ಅಮುಗಿದೇವರನ್ನು ಎನ್ನಲ್ಲಿಗೆ ಕಳುಹಿಸಿದೆ. ಎನ್ನ ಮೇಲೆ ನಿನಗೆ ಎಷ್ಟು ಕರುಣೆ ತಂದೆ. ನೀನೇ

ನನ್ನಲ್ಲಿಗೆ ಪ್ರಭುದೇವರನ್ನು ಕಳುಹಿಸಿದೆ. ನಿನ್ನ ಕೃಪೆಯಿಂದಾಗಿ ಬಸವರಸರ, ಅಸಂಖ್ಯಾತ ಪ್ರಮಥ ಗಣಂಗಳ ಹಾಗೂ ಚೆನ್ನಬಸವಣ್ಣನ ದರುಶನದಿಂದಾಗಿ ನಿಮ್ಮ ದರುಶನ ಎನಗೆ ಲಭ್ಯವಾಯಿತು; ಕಪಿಲಸಿದ್ಧ ಮಲ್ಲಿಕಾರ್ಜುನದೇವನೆ, ದೇವರ ದೇವನೆ ಎಂದು ಮನದುಂಬಿ ಹಾಡಿದ್ದಾರೆ.

**87**

**ಅಯ್ಯಾ, ನಿಮ್ಮ ಹಾಡಿ ಹಂಬಲಿಸಿದೆನಯ್ಯಾ.**
**ನಿಮ್ಮ ಬೇಡಿ ಬೇಡಿ ಬಾಯಿ ಬೋಡಾದೆನಯ್ಯಾ.**
**ನುಡಿಗೆಟ್ಟ ಬ್ರಹ್ಮದಲ್ಲಿ ನಡೆದಹೆನೆಂದಡೆ**
**ಎನ್ನೊಡಲಾಮಿಷ ಕಾಡುತ್ತಿವೆ.**
**ಮೃಡನೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ,**
**ಇವನೆಲ್ಲವ ಕಳೆದು ನಿಮ್ಮದೊಂದು ಭಕ್ತಿಯ ಕರುಣಿಸಯ್ಯಾ, ತಂದೆ !**

ಲೋಕದ ಮನುಷ್ಯರು ಒಳ್ಳೆಯವರು ಕೆಟ್ಟವರು ಎನ್ನುವ ಮುಖವಾಡದಲ್ಲಿ ಮುಳುಗಿದ್ದಾರೆ. ಸಂಪ್ರದಾಯ ಸಂಸ್ಕಾರ ಓದುವಿಕೆಯಿಂದ ಕಲಿಯುವಿಕೆಯಿಂದ ಮನುಷ್ಯ ಮಹಾ ಮನುಷ್ಯನಾಗಲಾರ.

ಮನೋದೇಹ ಜ್ಞಾನದೇಹವೆಂಬ ಎರಡು ದೇಹಗಳು ಸ್ಥೂಲ ದೇಹದಲ್ಲಿ ಸಂಗಮವಾಗಿವೆ. ಎಲ್ಲಿಯವರೆಗೆ ಮನೋದೇಹ ಸ್ಥೂಲ ದೇಹವನ್ನು ತನ್ನ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡುತ್ತದೆಯೋ ಅಲ್ಲಿಯವರೆಗೆ ಅದು ಮುಖವಾಡದ ದೇಹವಾಗಿಯೇ ಇರುತ್ತದೆ.

ಸ್ಥೂಲದೇಹಕ್ಕೆ ಮನೋದೇಹ ತನ್ನ ಮುಖವಾಡ ಧರಿಸಿ ಮನ ಬಂದತ್ತ ಸ್ಥೂಲ ದೇಹವನ್ನು ಬಳಕೆ ಮಾಡುತ್ತದೆ. ಕಳ್ಳ ಸುಳ್ಳ ಪ್ರಾಮಾಣಿಕ ರಾಜಕಾರಣಿ ಅಧಿಕಾರಿ ಶ್ರೀಮಂತ ಬಡವ ಹೆಣ್ಣು ಗಂಡು ಕೊಲೆಗಡುಕ ಸ್ವಾಮಿ ಗುರು ಜಗದ್ಗುರು ಹೀಗೆ ಅನೇಕ ಮುಖವಾಡ ಧರಿಸಿ ಸ್ಥೂಲದೇಹಕ್ಕೆ ಸುಳ್ಳು ಪಟ್ಟ ಕಟ್ಟುತ್ತದೆ. ಸ್ಥೂಲದೇಹ ಸೂಕ್ಷ್ಮದೇಹದ ಉಪಕರಣವಾಗುತ್ತದೆ.

ಸ್ಥೂಲದೇಹ ಜ್ಞಾನದೇಹದ ಸಂಪತ್ತು. ಆದರೆ ಸೂಕ್ಷ್ಮದೇಹ ಸ್ಥೂಲದೇಹವನ್ನು ಬಳಕೆ ಮಾಡುತ್ತಿರುವುದರಿಂದ ಸ್ಥೂಲದೇಹ ನಾನಾ ಹೆಸರುಗಳಿಂದ ಕರೆಯಿಸಿಕೊಳ್ಳುತ್ತದೆ. ನಾನಾ ಧರ್ಮ ಜಾತಿ-ಮತ ಹೆಣ್ಣು-ಗಂಡೆಂದು ಕಳ್ಳ ಪ್ರಾಮಾಣಿಕ ಬಡವ ಶ್ರೀಮಂತನೆಂದು ಗುರುತಿಸಿಕೊಳ್ಳುತ್ತದೆ.

ಸೂಕ್ಷ್ಮದೇಹ ನೇರವಾಗಿ ಸ್ಥೂಲದೇಹದ ಸಂಗ ಮಾಡದೆ ಜ್ಞಾನದೇಹದ ಸಂಗ ಮಾಡಿದರೆ ಸೂಕ್ಷ್ಮದೇಹ ಜ್ಞಾನದೇಹದಲ್ಲಿ ಕಳೆದು ಹೋಗುತ್ತದೆ. ಆಗ ಸ್ಥೂಲದೇಹ ಜ್ಞಾನಿ ಎಂದು ಕರೆಯಿಸಿಕೊಳ್ಳುತ್ತದೆ. ಜ್ಞಾನದೇಹ ಯಾವ ಸಂಪ್ರದಾಯಕ್ಕೂ ಸಂಬಂಧಿಸಿದ್ದಲ್ಲ. ಅದು ಹೆಣ್ಣು ಅಲ್ಲ; ಗಂಡೂ ಅಲ್ಲ. ಸ್ವಾಮಿ ಜಗದ್ಗುರು ಪೀಠಾಧಿಪತಿಯ ವೇಷ ಅದಕ್ಕೆ ಬೇಕಿಲ್ಲ.

ಸಿದ್ಧಾರ್ಥ ಸೂಕ್ಷ್ಮದೇಹದಿಂದ ಜ್ಞಾನದೇಹಕ್ಕೆ ಪಲ್ಲಟವಾಗಿ; ಜ್ಞಾನಿ ಎಂದು ಬುದ್ಧನೆಂದು ಕರೆಯಿಸಿಕೊಂಡ. ಸೂಕ್ಷ್ಮದೇಹಕ್ಕೆ ಬುದ್ಧತ್ವ ಲಭ್ಯವಾಯಿತು. ಹೀಗೆ ಸೂಕ್ಷ್ಮದೇಹಕ್ಕೆ ಜ್ಞಾನದೇಹ ಲಭ್ಯವಾಗಬೇಕಾದರೆ ಸಿದ್ಧರಾಮ ಶಿವಯೋಗಿಯಂತೆ ಕೃಷಿ ಮಾಡುವುದನ್ನು ರೂಢಿಸಿಕೊಳ್ಳಬೇಕು.

ಅಯ್ಯಾ, ನಿಮ್ಮ ಹಾಡಿ ಹಾಡಿ ಹಂಬಲಿಸಿದೆನಯ್ಯಾ. ಆದರೂ ನೀನು ಎನಗೆ ಒಲಿಯುತ್ತಿಲ್ಲ. ಅಯ್ಯಾ, ನಿಮ್ಮ ಬೇಡಿ ಬೇಡಿ ಬಾಯಿ ಬೋಡಾದೆನಯ್ಯಾ. ಆದರೂ ನೀನು ಎನಗೆ ಒಲಿಯುತ್ತಿಲ್ಲ.

ನುಡಿಗೆಟ್ಟ ಬ್ರಹ್ಮದಲ್ಲಿ ನಡೆದೆಹೆನೆಂದರೆ ಎನ್ನೊಡಲಾಮಿಷ ಕಾಡುತ್ತಿವೆ. ನುಡಿಯಲ್ಲಿ ನೀನಿರುವೆ. ಸ್ಪರ್ಷದಲ್ಲಿ ರುಚಿಯಲ್ಲಿ ದೃಶ್ಯದಲ್ಲಿ ದುರ್ಗಂಧ ಸುಗಂಧ ಎಂಬ ವಾಸನೆಯಲ್ಲಿ ನೀನಿದ್ದು ನಿನ್ನ ಅರಿವಿನ ಪರಿಮಳದ ದರುಶನ ನನಗೆ ಕರುಣಿಸುತ್ತಿಲ್ಲ.

ನಾನು ಎಂಬ ಮನೋದೇಹ ಸಂಪೂರ್ಣ ಭ್ರಮೆಯಿಂದ ಕೂಡಿದ್ದರೆ ನೀನು ಎಂಬ ಜ್ಞಾನದೇಹ ಪರಿಪೂರ್ಣ ಬ್ರಹ್ಮತ್ವದಿಂದ ಭರಿತವಾಗಿದೆ. ಹೀಗಾಗಿ ನನಗೆ ಕಾಣುವುದೆಲ್ಲ ಮಿಥ್ಯವೇ. ನಿನಗೆ ಕಾಣುವುದೆಲ್ಲ ಸತ್ಯವೇ. ನಾನು ಏನನ್ನು ಕಲಿಯಲಾರೆ. ಕಗ್ಗತ್ತಲು. ಕತ್ತಲು ಬೆಳಕೆಂದು ನುಡಿದರೆ ಅದು ಸತ್ಯವಾಗಬಲ್ಲುದೆ? ಕತ್ತಲ ದೇಹ ಮಹಾ ಬೆಳಕಿನ ಜ್ಞಾನದೇಹದತ್ತ ಚಲಿಸಿ; ಅಲ್ಲಿಯೇ ಸಂಗಮವಾಗಿ ಮಹಾಬೆಳಕಾಗಬೇಕೇ ವಿನಃ ಕತ್ತಲು ಬೆಳಕಿನ ವೇಷ ಹಾಕುವಂತಿಲ್ಲ. ಆದರೇನು ಮಾಡುವುದು; ಹೊಟ್ಟೆ ಹೊರೆಯಬೇಕಲ್ಲ! ಅದಕ್ಕಾಗಿಯೇ ಕತ್ತಲೆಂಬ ಮನ ಸ್ಥೂಲದೇಹಕ್ಕೆ ಸ್ವಾಮಿ, ಗುರು, ಮೌಲ್ವಿ, ಪಾದ್ರಿ, ಜಗದ್ಗುರುವಿನ ವೇಷ ಹಾಕಿ ಹೊಟ್ಟೆ ಹೊರೆಯುತ್ತಲಿದೆ.

ಮೃಡನೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ ಇವನೆಲ್ಲವ ಕಳೆದು ನಿಮ್ಮದೊಂದು ಭಕ್ತಿಯ ಕರುಣಿಸಯ್ಯಾ ತಂದೆ ಎಂದು ಸೂಕ್ಷ್ಮದೇಹಕ್ಕೆ ಜ್ಞಾನದೇಹವನ್ನು ಬೇಡುವ ಸೂತ್ರ ಲಭಿಸಬೇಕು.

**88**

**ಅಯ್ಯಾ, ನಿಮ್ಮಾಜ್ಞೆಯಲ್ಲಿಪ್ಪವು ಕಂಡಾ ಸಕಲ ಲೋಕಂಗಳು.**
**ಅಯ್ಯಾ, ನಿಮ್ಮಿಚ್ಛಾ ಮಾತ್ರದಲ್ಲಿಪ್ಪರು ಕಂಡಾ**
**ಕೋಟಿ ಹರಿವಿರಿಂಚ್ಯಾದಿಗಳು;**
**ಅಯ್ಯಾ, ನಿಮ್ಮ ಮೀರಿದಾಧಿಕ್ಯವೊಂದೂ ಇಲ್ಲ.**
**ಎಲೆ ಅಯ್ಯಾ, ಸಮಸ್ತ ಬ್ರಹ್ಮಾಂಡಗಳು,**
**ನಿಮ್ಮ ರೋಮಕೂಪದಲ್ಲಿಪ್ಪವು.**
**ಉರುತರ ಶಿವನೆ! ನಿಮ್ಮನರಿಯದೆ ಏಕೆ ಕೆಡುವರಯ್ಯಾ ನರರು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ಮಾಹೇಶ್ವರನೇ, ಮಹಾ ಮನುಷ್ಯನೆ ! ನೀನು ಮನುಷ್ಯನೊಳಗೆ, ಮನುಷ್ಯನಿಗೆ ಅರಿಯದಂತೆ, ಮನುಷ್ಯನಲ್ಲಿಯೇ ಅರಿವಾಗಿ ಸಂಗಮವಾಗಿರುವಿ. ಆದರೂ ಮನುಷ್ಯ ನಿನ್ನನ್ನು ಅರಿಯುತ್ತಿಲ್ಲ. ಏಕೆಂದರೆ ಮನುಷ್ಯನಿಗೆ ನಿನ್ನನ್ನು ಅರಿಯುವ ಮರೆವಾಗಿದೆ. ಆ ಮರೆವು ಕೂಡಾ ನೀನೇ ಕರುಣಿಸಿರುವಿ. ನಿನ್ನ ಆಜ್ಞೆಯನ್ನು ಪಾಲಿಸುತ್ತ ಸದಾ ನಿನ್ನ ಧ್ಯಾನದೊಳಗೆ ನಿರತನಾಗಿದ್ದಾನೆ. ಆದರೆ ಅವನು ಆರಾಧಿಸುವ ದೇವರು ನೀನಲ್ಲ ಎಂದು ನೀನು ಅವನಿಗೆ ಒಲಿಯುತ್ತಿಲ್ಲ. ಹೀಗೆ ನೀನು ದಯಪಾಲಿಸಿದ ಮರೆವಿನ ಆಜ್ಞೆಯನ್ನು ಪಾಲಿಸುವ ಮನುಷ್ಯನಿಂದ ಲೋಕಭರಿತವಾಗಿದೆ. ಸಕಲ ಲೋಕಗಳು ಮರೆವಿನ ನಿಮ್ಮಾಜ್ಞೆಯನ್ನು ಪಾಲಿಸುತ್ತಿವೆ.

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ದೇವರೆಂದು ಕರೆಯಿಸಿಕೊಳ್ಳುವ ಬ್ರಹ್ಮ ವಿಷ್ಣು ರುದ್ರರು ಕೂಡಾ ಇಂದ್ರಾದಿ ದೇವತೆಗಳು ಕೂಡಾ ನಿಮ್ಮ ಇಚ್ಛಾ ಮಾತ್ರದಲ್ಲಿದ್ದಾರೆ. ನಿಮ್ಮನ್ನು ಆರಾಧಿಸುತ್ತಿದ್ದರೂ ನೀವು ಯಾರೆಂಬ ಸುಳಿವು ಅವರಿಗೂ ಗೊತ್ತಾಗುತ್ತಿಲ್ಲ.

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿಮ್ಮ ಮೀರಿದ ಆಧಿಕ್ಯವೊಂದು ಇಲ್ಲ. ಎಲೆ

ಅಯ್ಯಾ, ಸಮಸ್ತ ಬ್ರಹ್ಮಾಂಡಗಳು ನಿಮ್ಮ ರೋಮಕೂಪದಲ್ಲಿಪ್ಪವು.

ಉರುತರ ಶಿವನೆ! ಸಕಲ ಮಾನವರ ಹೃದಯಲ್ಲಿ ನೆಲೆಸಿದ ಪರಮಪಿತ ಪರಮಾತ್ಮನೆ, ಮಹಾ ಶ್ರೇಷ್ಠಾತಿ ಶ್ರೇಷ್ಠನೆ; ಸಕಲರ ಹೃದಯದಲ್ಲಿ ನೀನಿದ್ದರೂ ನಿನ್ನನ್ನು ಅರಿಯದೆ ಏಕೆ ಕೆಡುವರಯ್ಯ ನರರು! ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನೇ ಉಂಟು ಮಾಡಿದ ಮರೆವನ್ನು ನಿನ್ನ ಅರಿವಿನಿಂದ ನೀನೇ ಕೊಂದಲ್ಲದೆ ನಿನ್ನನ್ನರಿಯಲು ನನಗೆ ಸಾಧ್ಯವಿಲ್ಲ ತಂದೆ.

ಕೃಪೆ ಮಾಡು. ನಿಮ್ಮಾಜ್ಞೆಯಲ್ಲಿಪ್ಪವು ಸಕಲ ಲೋಕಂಗಳು. ನಿಮ್ಮಿಚ್ಛಾ ಮಾತ್ರದಲ್ಲಿಪ್ಪರು ದೇವಾನುದೇವತೆಗಳು. ಸಮಸ್ತ ಬ್ರಹ್ಮಾಂಡಗಳು ನಿಮ್ಮ ರೋಮಕೂಪದಲ್ಲಿಪ್ಪವು. ನಿಮ್ಮನರಿಯದೆ ಕೆಟ್ಟವು. ನಿಮ್ಮನರಿಯುವಂತೆ ನೀನೇ ಕರುಣಿಸು. ನೀನಿದ್ದೂ ನಿನ್ನನ್ನು ನೆನೆಯದಂತೆ ಮಾಡಿದ, ನೀನೇ ದಯಪಾಲಿಸಿದ ಮರೆವನ್ನು ನೀನೇ ಕೊಂದು ನಿನ್ನನ್ನು ಅರಿಯುವಂತೆ ಮಾಡು ತಂದೆ.

**89**

**ಅಯ್ಯಾ, ನೀನಾಡುವ ಹೊಲನ, ನೀನಿಪ್ಪ ಇರವ**
**ಕಂಡೆನೆಂಬ ಸಿದ್ಧರೆಲ್ಲ ನಿಸ್ಸಿದ್ಧರಾದರು.**
**ಆದಿಮಧ್ಯಾವಸಾನರನು ಭೇದಿಸುವ ಭೇದವನು**
**ಸಾಧಿಸುವ ತರ್ಕವನು ತಂತ್ರಗಳ**
**ತನುಗುಣ ಮಲತ್ರಯಂಗಳನತಿಗಳೆದು**
**ಅನುಗುಣವ ಕೊಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ.**

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ದೇಹವೆಂಬುದು ನೀನು ಆಡುವ ಹೊಲ. ನೀನಿರುವ ಜಾಗವನ್ನು, ನಿನ್ನ ಇರುವನ್ನು ಕಂಡೆನೆಂದು ಹೇಳುವ ಸಿದ್ಧರೆಲ್ಲ ನಿಸಿದ್ಧರಾದರು.

ಬಯಲು ನಾನು ಬಯಲೆಂದು ಹೇಳಲು ಬರುವುದಿಲ್ಲ. ಬಯಲ ಬೀಜವೇ ಮೊಳಕೆಯೊಡೆದು ಬಯಲ ವೃಕ್ಷವಾಗಿ ಮರುಜವಣೆಯ ಬಯಲ ಫಲ ಹೊತ್ತು ನಿಂತಾಗ ಅದು ನಾನು ಬಯಲ ಬೀಜದ ಫಲವೆಂದು ಹೇಗೆ ಸಾರುವುದಿಲ್ಲವೊ ಹಾಗೆಯೇ ತಾನು ತನ್ನ ಭ್ರಮೆ ಕಳೆದುಕೊಂಡು ಬ್ರಹ್ಮನಾದಾಗ ನಾನು ಬ್ರಹ್ಮನನ್ನು ಕಂಡೆ ಎಂದು ಹೇಳುವುದಿಲ್ಲ. ಏಕೆಂದರೆ ಕಂಡವನು ಬ್ರಹ್ಮ ತಾನಲ್ಲ ಎಂದು ಹೇಳಿದಂತಾಗುತ್ತದೆ.

ದೇಹ ಚಿಕ್ಕದಾದರೂ ಅದರೊಳಗೆ ಸಂಗಮವಾದ ದೇವರು ದೊಡ್ಡವನು. ಆತ ಜಗದಗಲ ಮುಗಿಲಗಲವಾಗಿದ್ದು ಪಂಚಭೂತಗಳಿಗೂ ಅಗಲವಾಗಿದ್ದು ದೇಹದಗಲಕ್ಕೆ ಬಂದು ಅದರೊಳಗೆ ಚುಳುಕಾಗಿದ್ದಾನೆ. ಕರಿಯು ಕನ್ನಡಿಯೊಳಗೆ ಅಡಗಿದಂತೆ.

ಪಾತಾಳದಿಂದ ಅತ್ತತ್ತ ಆತನ ಶ್ರೀಚರಣ ಚಾಚಿಕೊಂಡಿದೆ. ಬ್ರಹ್ಮಾಂಡದಿಂದ ಅತ್ತತ್ತ ಆತನ ಶ್ರೀಮುಕುಟ ವಿಸ್ತರಿಸಿಕೊಂಡಿದೆ. ಆತ ಅಗಮ್ಯನು ಅಗೋಚರನೂ ಆಗಿದ್ದಾನೆ. ಅಂತಹ ಪರಮಾತ್ಮ ದೇಹವೆಂಬ ಹೊಲಕ್ಕೆ ಬಂದು ಆ ಹೊಲವನ್ನೇ ತನ್ನ ಆಟದ ಮೈದಾನವನ್ನಾಗಿ ಮಾಡಿಕೊಂಡಿದ್ದಾನೆ. ಅಂತಹ ನಿನ್ನನ್ನು ಕಂಡೆನೆಂದು ಹೇಳುವ ಸಿದ್ಧರೆಲ್ಲ ನಿಸಿದ್ಧರಾದರು.

ಆದಿ ಮಧ್ಯ ಅವಸಾನವನು ಭೇದಿಸುವ ಭೇದವನು ಸಾಧಿಸುವ ತರ್ಕವನು ತಂತ್ರಗಳ ತನುಗುಣ ಮಲತ್ರಯಗಳನು ಅತಿಗಳೆದು ಅನುಗುಣವ ಕಂಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ.

ನೀನು ಆದಿ ಅನಾದಿಯಿಂದತ್ತತ್ತ. ನಿನ್ನ ಆದಿಯನ್ನು ಕಂಡವರಾರು? ನೀನು

ಅನಾದಿಯಿಂದತ್ತತ್ತಲಿರುವಾಗ ಆದಿ ಅನಾದಿ ಎಂಬುದು ಸುಳ್ಳಲ್ಲವೆ? ನಿನ್ನ ಆದಿ ಮಧ್ಯ ಅವಸಾನವನ್ನು ಭೇದಿಸುವ ಭೇದವನು, ತರ್ಕದಿಂದ, ಹಲವಾರು ತಂತ್ರಗಳಿಂದ; ತನುಗುಣ ಮಲತ್ರಯಗಳನ್ನು ಅತಿಗಳೆದು ನಿನ್ನನ್ನು ಹುಡುಕಲು ಸಾಧ್ಯವೆ?

ನೀನೇ ಸೃಷ್ಟಿ ಮಾಡಿದ ನಿನ್ನ ಮನದ ಅನುವಿನಿಂದ ನಿನ್ನನ್ನು ಕಾಣಲು ಹೋದರೆ ನೀನು ಸಿಕ್ಕರೆ ಸಿಗಬಹುದು. ನಿನ್ನ ಕಂಡ ಮನ ಘನಮನವಾಗಿ ಏನೊಂದೂ ಅರಿಯದೆ ಅದು ನೀನೇ ಆದಾಗ ನಿನ್ನನ್ನು ನಾನು ಕಂಡೆ ಎಂದು ಮನ ಹೇಳಲು ಬರುವುದೆ ?

ಕತ್ತಲ ಮೇಲೆ ಬೆಳಕು ಚಿಮ್ಮಿದಂತೆ ! ಕತ್ತಲು ಬೆಳಕೇ ಆದಂತೆ ! ಪುನಃ ನಾನು ಬೆಳಕ ಕಂಡೆ ಎಂದು ಬೆಳಕು ಹೇಳಲು ಬರುವುದೆ? ಹೇಗೆ ಬೆಳಕು ನಾನು ಬೆಳಕು ಎಂದು ಹೇಳಲು ಬರುವುದಿಲ್ಲವೋ ಹಾಗೆಯೇ ನಾನು ಪರಮಾತ್ಮನನ್ನು ಕಂಡೆನೆಂದು ಹೇಳುವುದು ಕಂಡಿಲ್ಲವೆಂದೇ ಅರ್ಥವಾಗುತ್ತದೆ. ತಂತ್ರ ತರ್ಕಗಳಿಂದ ಆತನನ್ನು ಒಲಿಸಿಕೊಳ್ಳುವುದು ಸಾಧ್ಯವಾಗದ ಮಾತು ಎಂದು ಶರಣ ಸಿದ್ಧರಾಮ ಶಿವಯೋಗಿ ಹೇಳಿದ್ದಾರೆ.

**90**

**ಅಯ್ಯಾ , ನೀ ನಿತ್ಯ ನಿತ್ಯ ನೀನೆಲೆ ಅಯ್ಯಾ,**
**ನೀ ಸತ್ಯಶುದ್ಧದೇಹಿ ಕಾಣೆಲೆ ಅಯ್ಯಾ ,**
**ಅಯ್ಯಾ ನೀ ಕರುಣವುಳ್ಳ ಮಹಾಶ್ರಯ ಕಾಣೆಲೆ ಅಯ್ಯಾ ,**
**ಅಯ್ಯಾ ನೀನು ಭಕ್ತದೇಹಿಕ ದೇವನಾದ ಕಾರಣ ಒಲಿದೆ ಮಚ್ಚಿದೆ.**
**ಒಲುಮೆಯೂ ಮಚ್ಚು ನಿಶ್ಚಯವೆಂದು ನಂಬಿದೆ ಗುರುವೆ,**
**ಭವಪಾಶದೂರನೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಯ್ಯಾ ನೀನು ನಿತ್ಯ , ನೀನೆ ಸತ್ಯ . ನೀನೇ ಶುದ್ಧ ಎಲೆ ಅಯ್ಯಾ .

ದೇಹವಿದೆ. ದೇಹದೊಳಗೊಂದು ದೇಹವಿದೆ. ದೇಹವನ್ನು ಆವರಿಸಿದ ದೇಹ ಒಂದಿದೆ.

ದೇಹ ನಿರಪರಾಧಿ. ದೇಹವನ್ನು ಆವರಿಸಿದ ದೇಹ ದೇಹವನ್ನು ಬಳಸಿರುವುದರಿಂದ ಅದು ಅಶುದ್ಧವಾಗಿದೆ. ಅಸತ್ಯವಾಗಿದೆ. ಅನಿತ್ಯವಾಗಿದೆ ಅದಕ್ಕೆ ಕರುಣೆಯೆಂಬುದು ಲವಲೇಶವೂ ಇಲ್ಲದಂತಾಗಿದೆ.

ದೇಹವನ್ನು ಆವರಿಸಿದ ದೇಹ ದೇಹದ ಸಂಗ ಮಾಡದೆ, ದೇಹದೊಳಗಿದ್ದ ದೇಹದ ಸಂಗ ಮಾಡಿದರೆ ಅದು ತಂತಾನೆ ನಿತ್ಯವಾಗುತ್ತದೆ, ಸತ್ಯವಾಗುತ್ತದೆ, ಪರಿಶುದ್ಧವಾಗುತ್ತದೆ. ಕರುಣೆಯುಳ್ಳ ಮಹಾ ಅನುಭಾವಿಯೇ ತಾನಾಗುತ್ತದೆ.

ದೇಹವನ್ನು ಆವರಿಸಿದ ದೇಹ ದೇಹದೊಳಗಿದ್ದ ದೇಹಕ್ಕೆ ಭಕ್ತನಾಗಬೇಕು. ಆಗ ದೇಹದೊಳಗಿದ್ದ ದೇಹ ದೇವನಾಗುತ್ತದೆ. ಭಕ್ತದೇಹಿಕ ದೇವನಾಗುತ್ತದೆ.

ಭಕ್ತ ದೇವನಿಗೆ ಒಲಿಯುತ್ತಾನೆ. ದೇವ ಭಕ್ತನ ಭಕ್ತಿಯನ್ನು ಮೆಚ್ಚುತ್ತಾನೆ. ದೇವನ ಮೆಚ್ಚುಗೆಯನ್ನು ನಿಶ್ಚಯವೆಂದು ನಂಬಿದೆ ಗುರುವೆ ಭವಪಾಶ ದೂರನೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

ದೇಹಕ್ಕೆ ಜನನವಿದೆ ಮರಣವೂ ಇದೆ. ದೇಹದೊಳಗಿದ್ದ ದೇಹಕ್ಕೆ ಜನನವಿಲ್ಲ ಮರಣವಿಲ್ಲ. ಏಕೆಂದರೆ ಆತ ದೇಹವನ್ನು ಧರಿಸಿಲ್ಲ. ದೇಹಿಯೂ ಆತನಲ್ಲ. ದೇಹದೊಳಗಿದ್ದು ದೇಹವನ್ನು ಸೋಂಕದೆ ದೇಹವನ್ನು ಬೆಳಗುವ ಮಹಾದೇವನು ಆತ.

ದೇಹವನ್ನು ಆವರಿಸಿದ ಮನವೆಂಬ ದೇಹಕ್ಕೆ ಕೂಡಾ ದೇಹವಿಲ್ಲ. ಈತ ದೇಹವೇ ಇಲ್ಲದ ಮಹಾದೇವನ ಭಕ್ತ. ಮಹಾದೇವನಿಗೂ ದೇಹವಿಲ್ಲ. ಈತನ ಭಕ್ತನಿಗೂ ದೇಹವಿಲ್ಲ. ಇವರಿಬ್ಬರ ದೇಹಗಳು ಕಾಣುವ ಒಂದೇ ದೇಹದಲ್ಲಿ ಸಂಗಮವಾಗಿದೆ.

ಇವರಿಬ್ಬರಿಗೂ ಮರಣವಿಲ್ಲ. ಜನನ ಮರಣಗಳಿಂದ ಇವರಿಬ್ಬರೂ ದೂರ. ಇವರಿಬ್ಬರು ವಾಸ ಮಾಡಿದ ದೇಹಕ್ಕೆ ಮಾತ್ರ, ಜನನವಿದೆ ಮರಣವಿದೆ. ದೇಹ ಇವರಿಬ್ಬರ ವಾಸಕ್ಕೆ ಆಲಯವಾಗಿದೆ. ಆಲಯ ಜಡ. ದೇವರು ಚೇತನ. ಚೇತನದ ಉಪಕರಣವೇ ದೇಹ.

ಆಲಯವನ್ನು ಸುತ್ತುವ ಭಕ್ತನಿಗೆ ಗಹನವಾದ ಈ ವಿಷಯ ತಿಳಿಯದ್ದಕ್ಕಾಗಿ ಅನಿತ್ಯನೂ ಅಸತ್ಯನೂ ಅಶುದ್ಧನೂ ಆಗಿದ್ದಾನೆ. ದೇಹದಲ್ಲಿಯೇ ದೇವರನ್ನು ಇಟ್ಟುಕೊಂಡು ಆ ದೇವನೊಂದಿಗೆ ದೇವಾಲಯಕ್ಕೆ ಹೋಗಿ ಭಕ್ತಿ ಮಾಡುತ್ತಾನೆ. ಹೀಗಾಗಿ ಈತ ಭಕ್ತನಲ್ಲ. ಭಕ್ತನ ವೇಷಧಾರಿ.

ಭಕ್ತನಿಗೆ ಭಕ್ತನ ಪರಿಚಯವಾದರೆ ಆತನ ದೇಹವೇ ದೇವಾಲಯವಾಗುತ್ತದೆ. ದೇಹದೊಳಗಿದ್ದ ಅರಿವಿನ ದೇವರು ಭಕ್ತನಿಗೆ ದರುಶನ ನೀಡುತ್ತಾನೆ.

**91**

**ಅಯ್ಯಾ, ನೀನು ಅನಾಹತ ಲೋಕದಲ್ಲಿ ಪ್ರವೇಶಿಸುವಾಗ**
**ಅಕ್ಷರವೆರಡರ ತದ್ರೂಪವಾಗಿರ್ದೆಯಯ್ಯಾ.**
**ನೀನಾದಿ ಬ್ರಹ್ಮಾಂಡವನರಿವಾಗ ಶಕ್ತಿತ್ರಯದ ಶಾಖೆಯಾಗಿರ್ದೆಯಯ್ಯಾ.**
**ನೀನು ಸಕಲದಲ್ಲಿ ನಿಃಕಲದಲ್ಲಿ ಸ್ವಾನುಭಾವಸಂಬಂಧದಲ್ಲಿ**
**ಅಕ್ಷರವೆರಡರಲ್ಲಿ ಆಂದೋಳನವಾಗಿ ಪ್ರವೇಶಿಸುವಾಗ,**
**ಶುದ್ಧ ನೀನಾಗಿ, ಸಿದ್ಧ ನೀನಾಗಿ, ಪ್ರಸಿದ್ಧ ನೀನಾಗಿ**
**ಪಂಚ ಮಹಾವಾಕ್ಯಂಗಳೆ ನಿನ್ನ ಮನೆಯಾಗಿ**
**ಓಂ ಎಂಬುದೆ ನಿನ್ನ ತನುವಾಗಿ,**
**ಆನಂದವೆಂಬುದೆ ನಿನ್ನ ಮೂರ್ತಿಯಾಗಿ,**
**ಪರಾಪರ ರೂಪೆ ನಿನ್ನವಯವವಾಗಿ ನೀನಿಪ್ಪೆಯಯ್ಯಾ.**
**ನಿತ್ಯಮಂಗಳ ರೂಪನಾಗಿ, ಸ್ವತಂತ್ರವಾಗಿ, ಪರಮ ಸೀಮೆಯ ಮೀರಿಪ್ಪ**
**ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಏಕಾರ್ಥವ ಮಾಡಿದ**
**ಬಸವಣ್ಣ ಗುರುವೇ, ಶರಣು.**

ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ತನುವೆಂಬೆರಡಕ್ಷರದ ಲೋಕದಲ್ಲಿ ಯಾರೂ ಹೋಗಲು ಬಾರದ ಮಹಾಲೋಕವೊಂದಿದೆ. ಅಂತಹ ಲೋಕದಲ್ಲಿ ನೀನಿರುವಿ. ನಿನ್ನ ದರುಶನ ಪಡೆದವರಿಗೆ ಮಾತ್ರ ನೀನು ಕಾಣುವಿ. ತನುವೆಂಬೆರಡಕ್ಷರದ ತದ್ರೂಪ ಅವ್ಯಕ್ತ ತನುವಾಗಿಯೇ ನೀನು ನಿನ್ನವರಿಗೆ ದರುಶನ ನೀಡುವಿ.

ನೀನು ಆದಿ ಬ್ರಹ್ಮಾಂಡವನು ಅರಿಯುವುದಕ್ಕಾಗಿ ಅಂದರೆ ನೀನೇ ಸೃಷ್ಟಿ ಮಾಡಿದ ಬ್ರಹ್ಮಾಂಡದಲ್ಲಿ ನಿನ್ನ ಲೀಲೆಯನ್ನು ತೋರುವುದಕ್ಕಾಗಿ ತನು ಮನ ಘನವೆಂಬ ಶಕ್ತಿ ತ್ರಯದ ಅಂಗವೆಂಬ ಶಾಖೆಯ ಮೂಲಕ ಲಿಂಗವಾಗಿ ಪ್ರಕಟವಾದೆ ತಂದೆ.

ಸಕಲ ನಿಃಕಲ ಸ್ವಾನುಭಾವ ಸಂಬಂಧಿಯಾಗಿ ತನುವಿನಲ್ಲಿ ಮಹದಾನಂದದ

ಮಹಾಪುರುಷನಾಗಿ ಮಹಾದೇವನಾಗಿ ಸದಾಶಿವನಾಗಿ ಪ್ರವೇಶಿಸಿ, ಶುದ್ಧ ಸಿದ್ಧ ಪ್ರಸಿದ್ಧವೆನ್ನಿಸಿಕೊಂಡೆ. ಪಂಚ ಮಹಾಜ್ಞಾನೇಂದ್ರಿಯಗಳೇ ನಿನ್ನ ಮನೆಯಾದವು. ಓಂ ಎಂಬುದೆ ನಿನ್ನ ತನುವಾಯಿತು. ಆನಂದವೆಂಬುದೇ ನಿನ್ನ ಮೂರ್ತಿಯಾಯಿತು. ಪರಾಪರ ರೂಪೆ ನಿನ್ನ ಅವಯವವಾಗಿ ಅದರಲ್ಲಿ ನೀನಿಪ್ಪೆಯಯ್ಯಾ.

ನಿತ್ಯ ಮಂಗಳ ರೂಪನಾಗಿ, ಸ್ವತಂತ್ರನಾಗಿ, ಪರಮ ಸೀಮೆಯ ಮೀರಿಪ್ಪ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಮನವೆಂಬ ನನ್ನನ್ನು ಏಕಾರ್ಥವ ಮಾಡಿದ ಗುರುವೆ; ಬಸವರಸನೇ ನಿನಗೆ ಶರಣು ಶರಣಾರ್ಥಿ.

**92**

**ಅಯ್ಯಾ ನೀ ಮಾಡಿದಂತಾನಾದೆ ನೀ ಇರಿಸಿದಲ್ಲಿದ್ದೆ**
**ಅಯ್ಯಾ ನೀ ಉತ್ತರ ದಕ್ಷಿಣ ಪೂರ್ವ ಪಶ್ಚಿಮ**
**ಅನಾಹತ ವಿಶುದ್ಧಿ ಆಜ್ಞೆ ಪ್ರಣವ ಪಂಚಮ ಸಮಾಧಿಯಲ್ಲಿ**
**ನೀನು ಅನುಭವಿಸಿ ಮುಂದೆ ಇರಿಸುವದ ನಾನಿಂದೆ ಕಂಡೆ.**
**ಅದೇನು ಹದನದಿಂದ ?**
**ನಿನ್ನವರು ಎನ್ನನೊಲ್ಲದಿದ್ದಡೆ ಆ ನಿನ್ನ ಪಾದವ ಹಿಡಿದೆ.**
**ನೀ ನಿನ್ನ ಆ ರೂಪಬಿಟ್ಟು**
**ಗುರುವಾಗಿ ಬಂದೆನ್ನ ಭವದ ಬೇರ ಹರಿದೆ.**
**ನಾನರಿವುದೇನರಿದಯ್ಯ.**
**ನೀ ಶುದ್ಧದಲ್ಲಿ ಹೊಕ್ಕಡೆ ಆನೊಡನೆ ಹೊಕ್ಕೆ.**
**ನೀ ಸಿದ್ಧದಲ್ಲಿ ಹೊಕ್ಕಡೆ ಆನೊಡನೆ ಹೊಕ್ಕೆ.**
**ನೀನು ಪ್ರಸಿದ್ಧದಲ್ಲಿ ಪ್ರವೇಶಿಸಿದಡೆ ಆನೊಡನೆ ಪ್ರವೇಶಿಸಿದೆ.**
**ಎನಗಿನ್ನೇನು ಅರಿದಿಲ್ಲ.**
**ಇನ್ನು ಹಿಂದೆ ತಿರುಗಿ ನೋಡಿದೆನಾಯಿತ್ತಾದಡೆ**
**ಭಕ್ತಿಯ ತೋರಿದ ತಂದೆ, ಎನ್ನಭವವ ತಪ್ಪಿಸಿದ ಗುರು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ತದ್ರೂಪಾದ ಬಸವಪ್ರಭುವಿನಾಣೆ.**

ಅರಿವೆಂಬ ಗುರುದೇವನೇ, ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ನಿರೂಪ; ನಾನು ರೂಪ. ನಿನ್ನ ಆ ನಿರೂಪ ಬಿಟ್ಟು ಗುರುವಾಗಿ ಬಂದು ಎನ್ನ ಜನನ ಮರಣದ ಬೇರ ಹರಿದೆ. ನಾನೇ ಅರಿವುದು ಇನ್ನೇನಿದೆ ಗುರುದೇವನೆ! ನೀನು ಶುದ್ಧ ಸಿದ್ಧ ಪ್ರಸಿದ್ಧದಲ್ಲಿ ಪ್ರವೇಶಿಸಿದೊಡೆ; ನಾನು ನಿನ್ನೊಡನೇ ಪ್ರವೇಶಿಸಿದೆ ತಂದೆ. ನನಗೆ ಇನ್ನೇನು ಅರಿಯುವುದಿದೆ ! ಇನ್ನು ಹಿಂತಿರುಗಿ ನೋಡಿದೆನಾದಡೆ ಭಕ್ತಿಯ ತೋರಿದ ತಂದೆ, ಎನ್ನ ಜನನ ಮರಣಂಗಳ ತಪ್ಪಿಸಿದ ಗುರುದೇವನೆ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ಅರಿವೆಂಬ ಗುರುದೇವನ ತದ್ರೂಪವೇ ಆದ ಬಸವಪ್ರಭುವಿನ ಮೇಲಾಣೆ, ಇನ್ನು ಹಿಂತಿರುಗಿ ನೋಡುವುದಿಲ್ಲ ತಂದೆ.

ಹಿಂದೆಯಾದರೂ ನೀ ಇರಿಸಿದಂತೆ ನಾನಿದ್ದೆ. ಅಯ್ಯಾ ನೀನು ಉತ್ತರ ದಕ್ಷಿಣ ಪೂರ್ವ

ಪಶ್ಚಿಮ ಅನಾಹತ ವಿಶುದ್ಧಿ ಆಜ್ಞೆ ಪ್ರಣವ ಪಂಚಮ ಸಮಾಧಿಯಲ್ಲಿ ನೀನು ಅನುಭವಿಸಿ ಮುಂದೆ ಇರಿಸಿದುದನು ನಾನು ಇಂದೆ ಕಂಡೆ. ಅದೇನು ಕಾರಣ :

ನಿನ್ನವರು ಅಂದರೆ ನಿನ್ನ ದರುಶನ ಭಾಗ್ಯವನು ಪಡೆದವರು ನನ್ನನ್ನು ಒಲ್ಲದಿದ್ದರೆ ನಾನು ನಿನ್ನ ಪಾದವನು ಹಿಡಿದೆ. ಸ್ವಲ್ಪ ತಡವಾಯಿತು ಅಷ್ಟೆ. ನಿನ್ನ ನಿರೂಪವನು ಬಿಟ್ಟು ಗುರುವಾಗಿ ಬಸವಪ್ರಭುವಾಗಿ, ಚೆನ್ನಬಸವಣ್ಣ, ಅಲ್ಲಮಪ್ರಭುವಾಗಿ ನೀ ಬಂದು ಎನ್ನನುದ್ಧರಿಸಿದೆ ತಂದೆ.

ಅವರು ಬೇರೆ ಯಾರೂ ಅಲ್ಲ. ಸಾಕ್ಷಾತ್ ನಿನ್ನ ತದ್ರೂಪವೇ ಅವರು. ನೀನು ನನ್ನ ಗಲ್ಲ ಹಿಡಿದು ತಿಳಿಯ ಹೇಳಿದರೂ ಅನಂತ ಕಾಲ ನಿನ್ನನ್ನು ಮರೆತೆ. ನನ್ನ ನಾನು ಅರಿಯದಾದೆ. ನಿನ್ನನ್ನೂ ಅರಿಯದಾದೆ. ನೀನು ಅರುಹಿದರೂ ನಾನು ತಿಳಿಯದಾದೆ. ನಿನ್ನ ಆ ರೂಪವನ್ನು ಬಿಟ್ಟು ನಿನ್ನ ತದ್ರೂಪನೇ ಆದ ಬಸವಪ್ರಭುವನ್ನು ನೀನೇ ಕಳುಹಿಸಿದೆ. ಇದೆಲ್ಲ ನಿನ್ನ ಲೀಲೆಯೆಂದು ನಿನ್ನ ದರುಶನ ಭಾಗ್ಯ ದೊರೆತ ನನಗೆ ಇಂದು ಅರಿವಾಗಿದೆ.

**93**

**ಅಯ್ಯಾ, ನೀವೆನ್ನ ಕರಸ್ಥಲಕ್ಕೆ ಬಂದಿರಾಗಿ**
**ಆನು ತನುಪ್ರಾಣ ಇಷ್ಟಲಿಂಗಿಯಾದೆನು.**
**ಅಯ್ಯಾ, ನಿನ್ನ ಪ್ರಸಾದ ಪಾದೋದಕಕ್ಕೆ ಯೋಗ್ಯನಾದೆ.**
**ಅಜಾತನೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ಆನು ನೀನೆಂಬ ಕನ್ನಡವಿನ್ನೇಕಯ್ಯ ?**

ಅಯ್ಯಾ, ನೀವೆನ್ನ ಕರಸ್ಥಲಕ್ಕೆ ಬಂದಿರಾಗಿ ಆನು ತನುಪ್ರಾಣ ಇಷ್ಟಲಿಂಗಿಯಾದೆನು: ದೇಹವನ್ನು ತಾನಿರುವ ಮನೆಯನ್ನಾಗಿಸಿಕೊಂಡು, ದೇಹದಲ್ಲಿಯೇ ಇರುವ ದೇವರೊಂದಿಗೆ ಸಿದ್ಧರಾಮ ಶಿವಯೋಗಿಗಳು ಮಾತನಾಡುತ್ತಿದ್ದಾರೆ. ಹೀಗೆ ಮಾತನಾಡುತ್ತಾ; ಮಾತನಾಡುವ ಚಿತ್ರಣವನ್ನು ಅಕ್ಷರಗಳ ಮೂಲಕ ದಾಖಲಿಸಿದ್ದಾರೆ; ಲೋಕದಲ್ಲಿರುವ ದೇಹಗಳಿಗೆ ಈ ಸೂತ್ರ ಗೊತ್ತಾಗಲಿ ಎಂದು!

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ಎನ್ನ ದೇಹಕ್ಕೆ ಬಂದ ಕಾರಣ; ನೀನು ಬಂದುದು ಎನಗೆ ಇಂದು ಗೊತ್ತಾದ ಕಾರಣ; ಪಶು ಸಮಾನವಾದ ನಾನು ನನ್ನ ತನು ಮತ್ತು ಪ್ರಾಣಗಳೆರಡೂ ಇಷ್ಟಲಿಂಗವಾದವು. ಸರ್ವಾಂಗದಲ್ಲಿ ಅರಿವೆಂಬ ಲಿಂಗದೇವನು ಸಂಗಮವಾದುದನ್ನು ನಾನು ನಿನ್ನಿಂದಲೇ ತಿಳಿದೆನು. ನೀನು ಎನ್ನ ಅಂಗದಲ್ಲಿ ಅರಿವೆಂಬ ಲಿಂಗದ ನಿರೂಪದಲ್ಲಿ ಸಂಗಮವಾದುದು ನನಗೆ ಬಲು ಇಷ್ಟವಾಯಿತು. ನೀನು ನನ್ನ ಇಷ್ಟಲಿಂಗವಾಗಿ ನಾನು ನಿನ್ನ ಭಕ್ತನಾಗಿ ಆರಾಧಿಸ ಹತ್ತಿದೆನು.

ಅಯ್ಯಾ, ನಿನ್ನ ಪ್ರಸಾದ ಪಾದೋದಕಕ್ಕೆ ಯೋಗ್ಯನಾದೆ: ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನು ಪಶು ಸಮಾನನು. ನನ್ನ ಸಾಮರ್ಥ್ಯ ತೋರುವುದಕ್ಕಾಗಿ, ಜನರಿಂದ ನಾನು ಹೌದೆನ್ನಿಸಿಕೊಳ್ಳುವುದಕ್ಕಾಗಿ ಕೆರೆಗಳನ್ನು ಕಟ್ಟಿದೆ; ಅರವಟ್ಟಿಗೆಗಳನ್ನು ಇಟ್ಟೆ. ಅಹಂಕಾರದಿಂದ ಮದಗಜದಂತೆ ಮೆರೆದೆ. ಮಳೆಯೇ ಬಾರದಿದ್ದಲ್ಲಿ ಕಟ್ಟಿದ ಕೆರೆ ಅರವಟ್ಟಿಗೆಗಳ ಗತಿಯೇನು ಎಂದು ತಿಳಿಯಲಿಲ್ಲ.

ನಿನ್ನನ್ನು ತಿಳಿಯದೆ ನಿನಗಾಗಿ ದೇವಾಲಯಗಳನ್ನು ನಿರ್ಮಿಸಿದೆ. ದೇವಾಲಯದ ಒಂದು ಕಲ್ಲಿನಲ್ಲಿ ನಿನ್ನನ್ನು ಕೆತ್ತಿದೆ. ಕಲ್ಲೇ ನೀನೆಂದು ಅದಕ್ಕೆ ಪ್ರಾಣ ಪ್ರತಿಷ್ಠಾನ ಮಾಡಿಸಿದೆ. ಆರಾಧಿಸಿದೆ. ನಾನೆಂಥ ಮೂರ್ಖ; ನನಗೆ ಪ್ರಾಣದಾನ ಮಾಡಿದ ಪರಮಾತ್ಮ ನೀನು! ನಿನಗೆ ಪ್ರಾಣ ತುಂಬಲು

ನನ್ನಿಂದ ಸಾಧ್ಯವೆ? ನಿನ್ನನ್ನು ಅರಿಯದೆ ಅಪರಾಧ ಮಾಡಿದೆ; ಮನ್ನಿಸು ತಂದೆ. ನಾನು ಸ್ವತಂತ್ರನಲ್ಲ ಎಂದು ನಿನ್ನಿಂದಾಗಿ ನನಗೆ ತಿಳಿಯಿತು. ಕತ್ತಲು ಎಂದಾದರೂ ಬೆಳಗಲು ಸಾಧ್ಯವೆ? ನಾನು ಕಪಿಲೆ; ಕಪ್ಪು ಬಣ್ಣದ ದನ; ನನ್ನಷ್ಟಿಗೆ ನಾನೇ ಸಿದ್ಧನಾಗಲು ಸಾಧ್ಯವೆ? ನಾನು ಯಾವ ಪದವಿ ಪಡೆದರೇನು? ಜನ ನನ್ನನ್ನು ಹೊಗಳಿದರೇನು; ತೆಗಳಿದರೇನು? ನಾನು ಕತ್ತಲೆ. ನಾನು ಅಜ್ಞಾನಿ! ನಾನು ಪಶು!

ನಾನು ನಿನ್ನನ್ನು ಅರಿಯದೆ ಕಲ್ಲಲ್ಲಿ ಕೆತ್ತಿ ಆರಾಧಿಸಿದೆ. ಕಲ್ಲನ್ನು ಕಲ್ಲೆಂದು ತಿಳಿಯುವ ಶಕ್ತಿ ನನಗಿಲ್ಲ. ಕಾಗದವನ್ನು ಕಾಗದವೆಂದು ತಿಳಿಯುವ ಶಕ್ತಿ ನನಗಿಲ್ಲ. ಲೋಹವನ್ನು ಲೋಹವೆಂದು ತಿಳಿಯುವ ಶಕ್ತಿ ನನಗಿಲ್ಲ. ದೇವರು ಕರೆನ್ಸಿ ಚಿನ್ನವೆಂದು ಬಡಿದಾಡಿ ಕೊಲೆ ಸುಲಿಗೆ ಆತ್ಮಹತ್ಯೆಗೂ ಹೇಸದ ನಾನು ಪಶು ಸಮಾನನು.

ನನ್ನಂಗದಲ್ಲಿ ನೀನು ಸಂಗಮವಾಗಿದ್ದನ್ನು ನಿನ್ನಿದಂಲೇ ನಾನು ಕಂಡುಕೊಂಡೆ. ನಿರಾಕಾರ ಜ್ಞಾನಿಯಾದ ನಿನಗೆ ಪಶುವೆಂಬ ಸಾಕಾರದ ವಾಹನವಾದೆ. ನೀನು ಹೋಗೆಂದಲ್ಲಿಗೆ ಹೋದೆ. ನೀನು ನೋಡೆಂದುದನ್ನು ನೋಡಿದೆ. ನೀನು ಕೇಳೆಂದುದನ್ನು ಕೇಳಿದೆ. ನಿನ್ನ ಪ್ರಸಾದ ಪಾದೋದಕಕ್ಕೆ ಯೋಗ್ಯನಾದೆ.

ನಿನ್ನ ಪ್ರಸಾದವೆಂದರೆ ಅರಿವು. ನಿನ್ನ ಪಾದೋದಕವೆಂದರೆ ಜ್ಞಾನ. ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿನ್ನರಿವು, ಜ್ಞಾನ ಪಡೆದ ನನಗೆ ; ನಾನು ಕೆತ್ತಿದ ದೇವರುಗಳೆಲ್ಲ ಕಲ್ಲಾಗಿ ಕಂಡಿತು. ಕರೆನ್ಸಿ ಕಾಗದವಾಗಿ ಕಂಡವು. ಚಿನ್ನ ಲೋಹವಾಗಿ ಕಂಡಿತು. ನಾನು ನೋಡುವ ಸಕಲ ದೇಹಗಳಲ್ಲಿ ನೀನು ವಾಸ ಮಾಡುವುದನ್ನು ಕಂಡೆ. ನನ್ನ ಅಹಂಕಾರ ಬತ್ತಿ ಹೋಯಿತು. ನಿನ್ನ ಪ್ರಸಾದ ಪಾದೋದಕಕ್ಕೆ ಯೋಗ್ಯನಾದೆ.

ಅಜಾತನೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಆನು ನೀನೆಂಬ ಕನ್ನಡವಿನ್ನೇಕಯ್ಯಾ: ಎನ್ನಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗಯ್ಯನೆ, ಮಲ್ಲಿಕಾರ್ಜುನನೇ, ನೀನು ಅಜಾತ. ನಿನಗೆ ಹುಟ್ಟಿಲ್ಲ, ಸಾವಿಲ್ಲ, ರೂಹಿಲ್ಲ. ಸದಾ ಸರ್ವಾಂಗವನ್ನು ಬೆಳಗುವ ಬೆಳಕು ನೀನು. ನಿನ್ನ ಬೆಳಕಿನಿಂದಾಗಿ ಮನವೆಂಬ ಕತ್ತಲೆ ಜನ್ಮ ತಾಳಿತು. ನಿನ್ನನ್ನು ತಿಳಿಯದ್ದಕ್ಕಾಗಿ ಕತ್ತಲೆ ಕೆಲಸ ಮಾಡಿತು. ನಿನ್ನಿಂದಾಗಿ ನಿನ್ನ ತಿಳಿದು ನಿನ್ನಲ್ಲೇ ಲೀನವಾಯಿತು. ಕತ್ತಲೆ ಬೆಳಗಿತು ! ಇನ್ನು ಆನು ನೀನೆಂಬ ಪರದೆಯೇಕಯ್ಯ. ಅಜ್ಞಾನದ ಪೊರೆ ಹರಿದು ಜ್ಞಾನದ ಬೆಳಕು ಚಿಮ್ಮಿದಾಗ ಕತ್ತಲೆ ಉಳಿಯುವುದೆ ತಂದೆ! ಇನ್ನು ನಿನ್ನಂತೆ ಎನಗೂ ಸಾವಿಲ್ಲ; ರೂಹಿಲ್ಲ ತಂದೆ!

**94**

**ಅಯ್ಯಾ, ಬಾರಯ್ಯಾ ಎನ್ನ ಕರದೊಳಿಪ್ಪನೆ,**
**ನಿನ್ನ ಆನತದ ಕರದೊಳಿಪ್ಪನೆ,**
**ಅಯ್ಯಾ, ನಿನ್ನ ಕರದಲ್ಲಿ ಹಿಡಿಯೆಯಿದ್ದೆ ಪದವ,**
**ಕರುಣಾಕರನೆ, ಕಪಿಲಸಿದ್ಧ ಮಲ್ಲಿನಾಥಾ**
**ಶರಣದೇಹಿಕ ದೇವನೇ ಶರಣು.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅಂಗವನ್ನು ಆವರಿಸಿದ ಮನದಿಂದಲೇ ನಾನಾ ರೀತಿಯಿಂದ ಆಮಂತ್ರಣ ಮಾಡಿಕೊಂಡು ಆ ಅರಿವಿನ ಗುರುದೇವನಲ್ಲಿ ಬೆರೆಯುವುದು ಅನಿವಾರ್ಯವಾಗಿದೆ.

ಪರಿಪರಿಯಿಂದ, ಭಕ್ತಿಯಿಂದ ಕರೆದರೂ ಸಹಿತ ಅರಿವೆಂಬ ಗುರುದೇವನು ಮನಕ್ಕೆ ಒಲಿಯುವುದು ಬಲು ಕಷ್ಟ. ಅನೇಕ ಜ್ಞಾನಿಗಳು ಮನವನ್ನೇ ಹೆಂಡತಿಯನ್ನಾಗಿ ಮಾಡಿಕೊಂಡು ಅರಿವೆಂಬ ಮಹಾಜ್ಞಾನಿಯನ್ನೇ ಗಂಡನನ್ನಾಗಿ ಮಾಡಿಕೊಂಡು ಅಂಗದಲ್ಲಿಯೇ ಕೂಡಿ ಮಹಾಜ್ಞಾನದ ರತಿಸುಖವನ್ನು ಅನುಭವಿಸಿದ್ದಾರೆ.

ಮಹಾಜ್ಞಾನವೆಂಬುದು ಅಂಗದ ಆಶ್ರಯದಲ್ಲಿಯೇ ಇದ್ದ ರತಿಸುಖ. 'ಎನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಿಂದ ಮಾಡಿಸಬಹುದೆ ಅಯ್ಯಾ?' ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ.

ಜ್ಞಾನವೆಂಬುದು ಶಾಲಾ ಕಾಲೇಜುಗಳಲ್ಲಿ ಇಲ್ಲ ; ಪುಸ್ತಕದಲ್ಲಿಯೂ ಇಲ್ಲ. ಅದು ಸ್ವತಃ ತನ್ನ ಅಂಗದಲ್ಲಿಯೇ ಇದೆ. ಅಂಗದಲ್ಲಿ ಸಂಗಮವಾದ, ಅಂಗದ ಆಶ್ರಯದಲ್ಲಿಯೇ ಇದ್ದ ಜ್ಞಾನವನ್ನು; ಅಂಗವನ್ನು ಆವರಿಸಿದ ಮನದಿಂದಲೇ ಪಡೆಯಬೇಕು.

ಮನವೆಂಬ ಸತಿ ಜ್ಞಾನವೆಂಬ ಪತಿ ಅಂಗವನ್ನೇ ಮನೆಯನ್ನಾಗಿಸಿಕೊಂಡು ಅಂಗದ ಆಶ್ರಯದಲ್ಲಿಯೇ ಇದ್ದಾರೆ. ಹೀಗೆ ಅಂಗದಲ್ಲಿಯೇ ಇದ್ದ ತನ್ನಾಶ್ರಯದ ಜ್ಞಾನದ ರತಿಸುಖವನು ಮನದಿಂದ ತಾನೇ ಅನುಭವಿಸಬೇಕು. ತಾನುಂಬ ಊಟವನ್ನು ತನ್ನಾಶ್ರಯದ ರತಿಸುಖವನ್ನು ಬೇರೆ ಮತ್ತೊಬ್ಬರಿಂದ ಮಾಡಿಸಲು ಬರುವುದಿಲ್ಲ.

ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಮಲ್ಲಿಕಾರ್ಜುನನನ್ನು ಬಾರಯ್ಯ ಅಯ್ಯಾ ಎನ್ನ ಕರ(ಅಂಗ)ದೊಳಿದ್ದವನೆ; ನಿನಗೆ ಸಂಪೂರ್ಣ ಶರಣಾಗತನಾದ ಎನ್ನ ಅಂಗದೊಳಗೆ ಸಂಗಮವಾದ ಮಲ್ಲಯ್ಯನೇ; ಬಾರಯ್ಯ ಎನ್ನೊಂದಿಗೆ ಸಂಗ ಮಾಡಲು ಬೇಗ ಬಾರಾ. ಕಪಿಲಸಿದ್ಧ ಮಲ್ಲಿಕಾರ್ಜುನನೇ, ನಿನ್ನ ಅನಂಗದ ಬಾಹುಗಳಿಂದ ಎನ್ನ ಅಂಗವನ್ನು ಅಪ್ಪಿಕೊಂಡು ಎನಗೆ ಮಹಾಜ್ಞಾನದ ಫಲಪದವ ನೀಡು ದೇವನೇ. ದೇವ ದೇವನೇ ಕಪಿಲಸಿದ್ಧ ಮಲ್ಲಿಕಾರ್ಜುನನೇ, ಕರುಣಾಕರನೇ ಶರಣ ದೇಹಿಕದೇವನೇ ನಿನಗೆ ಶರಣು ಹೋದ ಈ ಶರಣನನ್ನು ರಕ್ಷಿಸು ದೇವನೇ.

**95**

**ಅಯ್ಯಾ, ಬಾರಯ್ಯಾ ಬಾರಾ ಆನಂದಾದಿಯಲ್ಲಿ**
**ಅಯ್ಯಾ ಒಯ್ಯನೇ ಕೈಗೂಡಯ್ಯ.**
**ಅಯ್ಯಾ ಕಂಗೆಟ್ಟ ಪಶುವಾದೆನು.**
**ಎಲೆ ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

61ನೇ ವಚನಕ್ಕೆ ಬರೆದ ಅನುಭಾವವನ್ನು ನೋಡಿ.

**96**

**ಅಯ್ಯಾ, ಬಾರಯ್ಯಾ.**
**ಅಯ್ಯಾ, ನೀ ಬಂದು ಅನಾಹತ ಜ್ಞಾನದಲ್ಲಿ ಅನುದಿನ ಪ್ರವೇಶಿಸಾ.**
**ಎಲೆ ಅಯ್ಯಾ, ನಿನ್ನ ಧರ್ಮ.**
**ಅಯ್ಯಾ, ಅನ್ಯರಿಗೆ ಕೈಯಾನಲಾರೆ.**

**ಅಯ್ಯಾ, ಅನ್ಯರಿಗೆ ಅಣ್ಣಾ ಎನಲಾರೆ.**
**ಅಯ್ಯಾ, ನಿನ್ನವ ನಾನಿದ್ದು,**
**ಅನ್ಯರನು ಆಶ್ರಯಿಸುವ ಅನ್ಯಾಯ ನಿನ್ನದು ಕಾಣಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೇ ಭೇದಿಸಲು ಬಾರದಂತಹ ನನ್ನ ಈ ತನುವಿನಲ್ಲಿ ನೀನು ಸಂಗಮವಾಗಿರುವಿ ಎಂದು ನನಗೆ ಅರಿವಾಗಿದೆ. ಆದರೂ ನೀನು ನನ್ನ ಕೈಗೆ ಎಟಕದಿರುವಿ. ತನುವೆಂಬುದು ನಿನ್ನ ಧರ್ಮದ ಕಪಿಲೆ. ನೀನು ಮಾತ್ರ ಇದರ ಮೇಲೆ ಕುಳಿತು ನಿನ್ನ ವಾಹನವಾಗಿಸಿಕೊಂಡು ನಿನ್ನ ಅರಿವಿನ ಧರ್ಮವನ್ನು ಚಲಾಯಿಸಬಲ್ಲೆ.

ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ನನಗೆ ಎಟುಕದ ಕಾರಣ ನಾನು ಅನ್ಯರಿಗೆ ಶರಣು ಹೋಗಬೇಕಾಗಿದೆ. ನನ್ನಲ್ಲಿಯೇ ಇರುವ ನಿನ್ನನ್ನು ನಾನು ಕಾಣಬೇಕಾದರೆ ನಾನು ಅನ್ಯರಿಗೆ ಅಣ್ಣಾ, ಅಯ್ಯಾ ಎಂದು ಮಂಡಿಯೂರಿ ಬೇಡಬೇಕೆ ? ಬೇಡಿದರೆ ಅವರು ನಿನ್ನನ್ನು ನನಗೆ ತೋರಿಸಿಯಾರೆ?

ಬೈಬಲ್ ಭಗವದ್ಗೀತೆ ಕುರಾನ್ ಉಪನಿಷತ್‌ಗಳೆಡೆಗೆ ಬೆಟ್ಟು ಮಾಡಿ ತೋರಿಸುವ ಅವರು ನಿನ್ನನ್ನು ಕಾಣಲು ಸಾಧ್ಯವೆ ?

ಅಯ್ಯಾ, ನಾನು ನಿನ್ನವ. ನನ್ನಲ್ಲಿ ನೀನಿದ್ದು ನಾನು ನಿನಗಾಗಿ ಅನ್ಯರನ್ನು ಆಶ್ರಯಿಸುವುದು ಅನ್ಯಾಯ. ಇದು ನಿನ್ನ ಧರ್ಮವಲ್ಲ.

ಕಣ್ಣಲ್ಲಿ ನೀನಿದ್ದು ನೋಡಲು ಹೋದರೆ ನೀನು ಕಾಣದಾದೆ. ಅನ್ಯರನು ನೋಡಲು ಬಾರದ ಅಧರ್ಮದ ನನ್ನ ಕಣ್ಣಿಗೆ ನಿನ್ನ ಕಣ್ಣಿನಿಂದಲೇ ಧರ್ಮದ ಛಾಟಿಯೇಟನು ಬೀಸಿ ನನ್ನನ್ನು ಎಚ್ಚರಿಸುವಿ. ಇದು ನನಗೆ ತಿಳಿದರೂ ನನ್ನ ಕಣ್ಣಿಗೆ ಧರ್ಮ ದರುಶನವೀಯದೆ ಕಣ್ಣಲ್ಲಿಯೇ ಉಳಿದು ಕಾಣದಂತಿರುವಿ. ಏನೀ ನಿನ್ನ ಧರ್ಮ; ಇದು ನಿನಗೆ ನ್ಯಾಯವೆ!

**97**

**ಅಯ್ಯಾ, ಬ್ರಹ್ಮದಲ್ಲಿ ಅಯ್ಯಾ ನೀನು**
**ಅತಿಶಯ ಜ್ಯೋತಿರ್ಮಯನು.**
**ಆನಂದ ಸ್ಥಾನದಲ್ಲಿ ಅಯ್ಯಾ ನೀನು**
**ಅತಿಶಯ ನಿತ್ಯಮಯನು.**
**ಬಾಹ್ಯಾಭ್ಯಂತರದಲ್ಲಿ ಪರಿಪೂರ್ಣನು.**
**ನಿನ್ನಾಧಿಕ್ಯವನರಿಯಲ್ಕೆ ನಿಗಮಕ್ಕಭೇಧ್ಯ**
**ಗುರುವಿನ ಕರುಣದಿಂದ ಎನ್ನ ಕರಸ್ಥಲದಲ್ಲಿ ಸಿಕ್ಕಿ ಒಳಗಾದೆ**
**ಶಿವನ ಮಹಾಲಿಂಗ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಒಡಲು ಭ್ರಮೆಯಿಂದ ಬಳಲುತ್ತಿದ್ದರೆ; ಒಡಲೊಳಗಿದ್ದು, ಒಡಲಿಂಗೆ ಆಧಾರವಾಗಿದ್ದು, ಒಡಲು ಸೋಂಕದೆ, ಒಡಲನ್ನು ಬೆಳಗುವ ಬ್ರಹ್ಮ ನೀನು. ಬೆಳಗಿಂಗೆ ಬೆಳಕಾಗಿ ಬೆಳಗುವ ಜ್ಯೋತಿರ್ಮಯನು ನೀನು.

ಒಡಲು ಅಜ್ಞಾನದ ನಾನಾ ಹಣೆಪಟ್ಟಿಗಳಿಂದ ಬಳಲುತ್ತಿದ್ದರೆ ಒಡಲಲ್ಲಿಯೇ

ಸಂಗಮವಾದ ನೀನು ಮಹದಾನಂದದಲ್ಲಿದ್ದು ನಿನ್ನ ಲೀಲೆ ಮೆರೆಯುವ ನಿತ್ಯಮಯನು ನೀನು.

ಬಾಹ್ಯಾಭ್ಯಂತರದಲಿ ಪರಿಪೂರ್ಣನು ನೀನು. ನಿನ್ನಾಧಿಕ್ಯವನು ಅರಿಯಲಿಕ್ಕೆ ನಿಗಮಕ್ಕಭೇದ್ಯ:

ಭಗವದ್ಗೀತೆ ಬೈಬಲ್ ಕುರಾನ್‌ಗಳು ವೇದ ಆಗಮ ಉಪನಿಷತ್ತುಗಳು ನಿನ್ನನ್ನು ಅರಿಯವು. ಅವುಗಳಲ್ಲಿ ನೀನಿರುವಿ ಎಂದು ಹುಡುಕುವ ಮನುಜನಿಗೆ ನೀನು ಸಿಕ್ಕದೆ ಬಹುದೂರ ನಿಲ್ಲುವಿ. ನಿನ್ನ ಲೀಲೆ ಅನಂತ.

ಅಂಗದಲ್ಲಿಯೇ ಸಂಗಮವಾದ ಸಂಗಯ್ಯನನ್ನು ಅಂಗದಲ್ಲಿಯೇ ಕಂಡ ಮನವೆಂಬ ಭಕ್ತನಿಗೆ ದರುಶನವಿತ್ತೆ ನೀನು. ನಿನ್ನ ದರುಶನ ಪಡೆದ ಗುರುದೇವನ ಕರುಣದಿಂದ ಎನ್ನಂಗದಲ್ಲಿ ಸಿಲುಕಿ ಎನಗೆ ಒಲಿದೆ ನೀನು. ಶಿವನೇ ಕರುಣಾಕರನೇ ಮಹಾಲಿಂಗ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿನ್ನ ಲೀಲೆ ಅನಂತ!

**98**

**ಅಯ್ಯಾ, ಬ್ರಾಹ್ಮಣಂಗೆ ಬ್ರತಂಗೊಟ್ಟು**
**ಮುಂಜಿಗಟ್ಟಿ ಅಯ್ಯಾ, ಅಯ್ಯಾ,**
**ಅಥರ್ವಣವೇದವನು ಬ್ರಾಹ್ಮಣಂಗೆ ಉಪದೇಶವ ಮಾಡುವಂದು**
**ಅಲ್ಲಿ ಅವನ ಶಿರಸ್ಸ ನಿನ್ನ ಹಸ್ತಮಾಣಿಕವೆಂದು ಕಟ್ಟಿದೆ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂದು ದೇಹವನ್ನು ವಿಂಗಡಿಸುವಂತಿಲ್ಲ. ಬ್ರಹ್ಮನನ್ನು ಮರೆತುದುದಕ್ಕಾಗಿ ಬ್ರಾಹ್ಮಣನಾದ. ಬ್ರಹ್ಮನನ್ನು ಮರೆತುದುದಕ್ಕಾಗಿ ಕ್ಷತ್ರಿಯನಾದ. ಬ್ರಹ್ಮನನ್ನು ಮರೆತುದುದಕ್ಕಾಗಿ ವ್ಯಾಪಾರಿಯಾದ. ಬ್ರಹ್ಮನನ್ನು ಮರೆತುದುದಕ್ಕಾಗಿ ಶೂದ್ರನಾದ.

ದೇಹ ಜನ್ಮ ತಳೆದ ಎಂಟು ವರ್ಷದಲ್ಲಿ ಮುಂಜಿ,ಅಯ್ಯಾಚಾರವೆಂದು ಮಾಡುತ್ತಾರೆ. ದೇಹ ಜನ್ಮ ತಳೆದ ಉದ್ದೇಶವನ್ನು ದೇಹಕ್ಕೆ ನೆನಪು ಮಾಡಿಕೊಡುತ್ತಾರೆ. ದೇಹಕ್ಕೆ ಅದೊಂದು ಪಕ್ವ ಕಾಲ. ಎಂಟರಿಂದ ಹನ್ನೆರಡು ವರ್ಷಗಳ ಪರ್ಯಂತ ವೇದ ಉಪ ನಿಷತ್ತುಗಳನ್ನು ಅಧ್ಯಯನ ಮಾಡುವ ಮೂಲಕ ದೇಹದಲ್ಲಿಯೇ ಸಂಗಮವಾದ ಬ್ರಹ್ಮನನ್ನು ಅರಿತುಕೊಂಡು ಆ ಬ್ರಹ್ಮನ ದರುಶನವನ್ನು ಮಾಡಿಕೊಳ್ಳುವ ಕ್ರಮಬದ್ಧ ಶಿಕ್ಷಣವನ್ನು ಹನ್ನೆರಡು ವರ್ಷಗಳ ಪರ್ಯಂತರ ಗುರುಗಳಾದವರು ನೀಡುತ್ತಾರೆ.

ಹೇಗೆ ವೇದಗಳು ಇವೆಯೋ ಹಾಗೆ ವೇದಿಗಳೂ ಇದ್ದಾರೆ. ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದ. ಇವುಗಳ ಮೇಲೆ ತಮ್ಮದೇ ಆದ ಪ್ರಾಬಲ್ಯವನ್ನುಬೀರಿದ ವೇದಿಗಳು, ಅಥವಾ ಆಯಾ ವೇದವನ್ನು ಬಲವಾಗಿ ಪ್ರೀತಿಸುವ ಬ್ರಹ್ಮ ಋಷಿಗೆ ವೇದಿ ಎಂದು ಕರೆಯುವುದೂ ಉಂಟು.

ಮುಂಜಿ ಮಾಡುವ ಸಂದರ್ಭದಲ್ಲಿ ಮಗುವಿನ ಪಾಲಕರು ಯಾವ ವೇದವನ್ನು ಆರಾಧಿಸುವರೋ ಅಂತಹ ವೇದವನ್ನು ಪಾರಾಯಣ ಮಾಡುವ ವೇದಿಯನ್ನು ಬರ ಮಾಡಿಕೊಂಡು ಮುಂಜಿ ಮಾಡಿಸುವ ಸಂಪ್ರದಾಯವನ್ನು ಹೊಂದಿರುತ್ತಾರೆ.

ವೇದಗಳಲ್ಲಿಯೇ ಅಥರ್ವಣ ವೇದದ ಮೂಲಕ ಮುಂಜಿ ಮಾಡಿಸುವುದು ಬಹಳ ಅಪರೂಪ. ಅದು ಶಿಸ್ತುಬದ್ಧ ಆಚಾರ.

ಮುಂಜಿಗೆ ಸಿದ್ಧನಾದ ಬಾಲಕನ ಕೇಶವನ್ನು ಸಂಪೂರ್ಣ ಮುಂಡನ ಮಾಡಿ ಪಾತ್ರೆಯಲ್ಲಿ

ಕೆಂಡ ತುಂಬಿ ಅದನ್ನು ವೇದಿಯಾದವನು ಬಾಲಕನ ತಲೆಯ ಮೇಲಿಟ್ಟು ಕಠಿಣವಾದ ಸಂಪ್ರದಾಯಗಳ ಮೂಲಕ ಪೂಜಾ ವಿಧಿ ವಿಧಾನಗಳನ್ನು ಆಚರಿಸುತ್ತಾ ಬಾಲಕನಿಗೆ ಬ್ರಹ್ಮೋಪದೇಶ ಮಾಡುವನು.

ಮಸ್ತಕದ ಮೇಲೆ ಹಸ್ತವನಿಟ್ಟು ಬ್ರಹ್ಮೋಪದೇಶ ಮಾಡಿದರೆ ಬ್ರಹ್ಮನ ದರುಶನವಾಗಲು ಸಾಧ್ಯವೆ ? ಹನ್ನೆರಡು ವರುಷಗಳ ಪರ್ಯಂತ ಶಾಸ್ತ್ರ ಗ್ರಂಥಗಳನ್ನು ಅಭ್ಯಾಸ ಮಾಡಿದರೆ ಶಾಸ್ತ್ರ ಕೈವಶವಾಯಿತೇ ಹೊರತು ಅಂಗದಲ್ಲಿಯೇ ಸಂಗಮವಾದ ಬ್ರಹ್ಮ ದರುಶನ ಸಾಧ್ಯವಾಗುವುದಿಲ್ಲ.

ಮುಂಜಿ ಅಯ್ಯಾಚಾರಗಳನ್ನು ಮಾಡುವ ಮೂಲಕ ಬ್ರಹ್ಮ ದರುಶನವಾಗಲು ಸಾಧ್ಯವಿಲ್ಲ. ಬದಲಾಗಿ ಯಾವುದೇ ದೇಹ ಅಂದರೆ ಹೆಣ್ಣು ಗಂಡು ಜಾತಿ ಮತ ಭೇದಗಳನ್ನು ಮರೆತು ಎಂಟನೇ ವರುಷದಿಂದ; ಬ್ರಹ್ಮನನ್ನು ಅರಿತು ಬ್ರಹ್ಮನೇ ತಾನಾದ ಗುರುದೇವನ ಹತ್ತಿರ ಆ ಬಾಲಕನನ್ನು ಅಭ್ಯಾಸ ಮಾಡಲು ಬಿಟ್ಟರೆ ಆ ಬಾಲಕನಿಗೆ ಬ್ರಹ್ಮ ದರುಶನ ಆಗುವುದರಲ್ಲಿ ಸಂದೇಹವೇ ಇಲ್ಲ.

**99**

**ಅಯ್ಯಾ, ಮಹಾಭಕ್ತರ ಹೃದಯದಲ್ಲಿ ನೀನಿಪ್ಪೆಯಾಗಿ,**
**ಅವರ ವಚನವೆನ್ನ ಕರ್ಣದೊಳಗೆ ತುಂಬಲೊಡನೆ,**
**ವಿರಕ್ತಿ ಬೆದೆಯಾಗಿ, ಭಕ್ತಿ ಮೊಳೆಯಾಗಿ**
**ನಿಮ್ಮ ಶ್ರೀಪಾದದೊಳಗೆನ್ನ ಸುತ್ತಿತ್ತು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿನ್ನ ದರುಶನಭಾಗ್ಯ ಪಡೆದವರು ನಿನ್ನ ಭಕ್ತರು; ಮಹಾಭಕ್ತರು. ಅವರ ಹೃದಯದಲ್ಲಿ ನೀನು ಸಂಗಮವಾಗಿರುವಿ. ನೀನು ಕಳುಹಲಾಗಿ ಅವರು ಎನ್ನಲ್ಲಿಗೆ ಬಂದು ಅಥವಾ ನೀನೇ ನನ್ನನ್ನು ಆ ಮಹಾಭಕ್ತರಲ್ಲಿಗೆ ಕಳುಹಿ; ಅವರ ವಚನವೆನ್ನ ಕರ್ಣದೊಳಗೆ ತುಂಬಲೊಡನೆ ವಿರಕ್ತಿ ಬೆದೆಯಾಗಿ, ಭಕ್ತಿ ಮೊಳೆಯಾಗಿ ನಿಮ್ಮ ಶ್ರೀಪಾದದೊಳಗೆನ್ನ ಸುತ್ತಿತ್ತು.

ಮಹಾಭಕ್ತರೆಂದರೆ ನೀನೇ ಕಳುಹಿದ ನನ್ನ ಸ್ವರೂಪವೇ ಅವರಾದ ಗುರುದೇವರು ಅವರು. ನಿನ್ನ ಆಜ್ಞೆಯನ್ನು ಮೀರದೆ; ನಿನ್ನ ಆದೇಶವನ್ನು ಪಾಲಿಸುವುದಕ್ಕಾಗಿ ಗುರುದೇವ ನನ್ನಲ್ಲಿಗೆ ಬಂದು ನನ್ನಲ್ಲಿಯೇ ಸಂಗಮವಾದ ನಿನ್ನ ವೃತ್ತಾಂತವನ್ನು ನನಗೆ ಬಿಡಿ ಬಿಡಿಸಿ ಹೇಳಿದ. ಅದೆಷ್ಟೊ ಜನ್ಮಗಳಿಂದ ನೀನು ನನ್ನಲ್ಲಿದ್ದರೂ ನೀನಾರೆಂದು ನನಗೆ ತಿಳಿದಿರಲಿಲ್ಲ. ನನ್ನ ಮೈದಡವಿ ಅನುದಿನವೂ ನನಗೆ ಭೋದಿಸುವ ಭೋದೆಯನ್ನು ನಾನು ಒಂದು ಕ್ಷಣವೂ ಕೇಳಿರಲಿಲ್ಲ.

ಗುರುದೇವ ಎನ್ನ ಕರ್ಣದೊಳಗೆ ನಿನ್ನ ವಚನವನ್ನು ತುಂಬಲೊಡನೆ ಸಂಸಾರ ಸಂಗದಿಂದ ದೂರವಾದೆ. ಲಿಂಗಯ್ಯನ ಸಂಗ ಮಾಡುವ ವಿರಕ್ತಿ ಬೆದೆಯಾಗಿ ಎನ್ನಂಗದಲ್ಲಿಯೇ ಸಂಗಮವಾದ ನಿನ್ನ ಅನಂಗದೊಂದಿಗೆ ಕೂಡಿ ಒಂದಾದೆ. ನಿನ್ನ ಮೇಲಿನ ಭಕ್ತಿ ಎನ್ನಂಗದಲ್ಲಿ ಮೊಳೆಯಾಗಿ ಚಿಮ್ಮಿ ನಿಮ್ಮ ಶ್ರೀಪಾದದೊಳಗೆನ್ನ ಸುತ್ತಿತ್ತು ಸಖನೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ.

**100**

**ಅಯ್ಯಾ, ಸಂಸಾರದುಪಟಳವು ಕಾಡಿತ್ತು ಇನ್ನೇವೆನಿನ್ನೇವೆ ?**

**ಕಾಮ ಕಿಚ್ಚೈಸಿತ್ತು ಇನ್ನೇವೆನಿನ್ನೇವೆ ?**
**ಕ್ರೋಧ ಕಿಚ್ಚೈಸಿತು ಇನ್ನೇವೆನಿನ್ನೇವೆ ?**
**ನಿನ್ನ ಮಚ್ಚಲೀಯದು ಇನ್ನೇವೆನಿನ್ನೇವೆ ?**
**ಭಕ್ತಿ ತಾತ್ಪರ್ಯವ ಅವಮನ್ನಣೆಯ ಮಾಡಿತ್ತು**
**ಶ್ರೀಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನ.**

ಸಂಸಾರದ ಉಪಟಳಕ್ಕಾಗಿ ತನು ವಿಲವಿಲನೆ ಒದ್ದಾಡುತ್ತದೆ. ತಾನೇ ಕಟ್ಟಿಕೊಂಡ ಸಂಸಾರದ ಬಲೆಯಲ್ಲಿ ತಾನೇ ಬಿದ್ದು ಒದ್ದಾಡುತ್ತದೆ. ತಾನೇ ಎದ್ದು ಸುಖಿಸುತ್ತದೆ. ಸಂಪೂರ್ಣ ಜ್ಞಾನದಿಂದ ಬೆಳಗಬೇಕಾದ ತನು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಿಂದ ಬಳಲುತ್ತದೆ.

ಮನಕ್ಕೆ ಕಾಮವೆಂದರೆ ಸುಖ. ಅದು ತನ್ನಂತಹದೇ ತನುವಿನೊಂದಿಗೆ ಕಾಮದ ಬಯಕೆ ಸೃಷ್ಟಿಸಿಕೊಂಡು ಅದರೊಂದಿಗೆ ಕೂಡಿ ಸುಖವಾಯಿತೆಂದು ಭ್ರಮೆಗೆ ಒಳಗಾಗುತ್ತದೆ. ಸಂತಾನಕ್ಕಾಗಿ ಮಾತ್ರ ತನುವಿನಲ್ಲಿದ್ದ ದ್ರವ್ಯವನ್ನು ಕಾಮದ ಸುಖಕ್ಕಾಗಿ ವ್ಯಯಿಸಿ ಸುಖವಾಯಿತು. ಸುಖ ಮನದಲ್ಲಿ ಸಂಗ್ರಹವಾಗಿ ದೃಶ್ಯ ಸ್ಪರ್ಶ ಜಿಹ್ವೆ ಶಬ್ದ ವಾಸನೆ ಮೂಲಕ ಕಾಮದ ಕಿಚ್ಚು ಹರಿದು ತನು ಕಾಮದ ಕೆಂಡವಾಗಿ ಬಳಲುತ್ತದೆ.

ತನುವಿನಲ್ಲಿಯ ಕಾಮದ ದ್ರವ್ಯ ತನುವಿನ ಮೂಲಕವೇ ಚೆಲ್ಲಿ ತನುವಿಗೆ ಸುಖದ ಭ್ರಮೆಯಾಗುತ್ತದೆ. ಅನ್ಯ ತನುವಿನ ಮೂಲಕ ಸುಖವಾಯಿತೆಂದು ತನು ಭ್ರಮಿಸಿ ಮತ್ತೆ ಮತ್ತೆ ಕಾಮಕೇಳಿಯಲ್ಲಿ ಮುಳುಗುತ್ತದೆ.

ತನುವನ್ನು ಕಾಡುವ ತನುವಿನಲ್ಲಿಯ ಜ್ಞಾನವನ್ನೇ ದೂರೀಕರಿಸಿ ಇಡೀ ಆಯುಷ್ಯವನ್ನೇ ಅಜ್ಞಾನದಿಂದ ಕಳೆಯುತ್ತದೆ.

ಮನ ಜ್ಞಾನಕ್ಕೆ ಭಕ್ತಿ ಮಾಡದೆ ಅವಮನ್ನಣೆಯ ಮಾಡಿ ತನ್ನ ಕರಾಳ ಶಕ್ತಿಯನ್ನು ತನುವಿನ ಮೂಲಕ ತೋರಿ, ಶ್ರೀಗುರುವಿನ ತನುವನ್ನು ಸಂಸಾರದ ಉಪಟಳದ ಮೂಲಕ ಕಾಡುತ್ತದೆ.

ಅರಿವೆಂಬ ಗುರುದೇವನೆ, ಕಪಿಲಸಿದ್ಧ ಮಲ್ಲಿಕಾರ್ಜುನನೇ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳ ಕಿಚ್ಚು ತನುವಿನ ಐದು ಭಾಗಗಳಿಗೂ ಆವರಿಸಿ ಸುಡುವುದನ್ನು ನಿಲ್ಲಿಸಿ ನೀನೇ ರಕ್ಷಿಸು ತಂದೆ.

**101**

**ಅಯ್ಯಾ, ಸಂಸಾರವೆಂಬ ಸಾಗರಕ್ಕೆ**
**ಒಡಲೆಂಬುದೊಂದು ಭೈತ್ರ ಕಂಡಯ್ಯಾ.**
**ಪುಣ್ಯ-ಪಾಪಂಗಳೆಂಬ ಭಂಡವನೆ ತುಂಬಿ ಪಂಚೈವರು ಏರಿದಡೆ,**
**ಜ್ಞಾನವೆಂಬ ಕೂಕಂಬಿಯಲ್ಲಿ**
**ಲಿಂಗವೆಂಬ ತಾರಾಮಂಡಲವ ನೋಡಿ ನಡೆಸುವುದು.**
**ಜವನ ಕಾಲಾಳು ಕರಹಿರಿದು ಕಂಡಾ,**
**ಸಮಭೋಗವೆಂಬ ನೇಣ ನವನಾಳದಲ್ಲಿ ಕಟ್ಟಿ**
**ಮನವೆಂಬ ಪಾವೆಯನು ವಾಯುಗೊಳಲು**
**ಕಳವಳವೆಂಬ ಕಡಲೊಳಗೆ ಸಿಲುಕೆ,**

**ತೆರೆಯು ಹೊಯ್ಲು ಕರ ಹಿರಿದು ಕಂಡಯ್ಯಾ.**
**ಉದಮುದವೆಂಬ ಸುಳಿಯಲ್ಲಿ ತಿರುಗಿಸದೆ**
**ಗುರುಪದವೆಂಬ ಬೆಂಗುಂಡ ಹಿಡಿ ಕಂಡಾ.**
**ಇಹಲೋಕ-ಪರಲೋಕ ಕಪಿಲಸಿದ್ಧ ಮಲ್ಲೇಶ್ವರನ ಕಾಂಬೆ ಕಂಡಾ.**

ಅಯ್ಯಾ ಅರಿವೆಂಬ ಗುರುದೇವನೆ, ಕಪಿಲಸಿದ್ದ ಮಲ್ಲಿಕಾರ್ಜುನನೇ, ಸಂಸಾರವೆಂಬುದೊಂದು ಮಹಾಸಾಗರ. ಸಾಗರವನ್ನು ದಾಟಬಹುದು; ನಿನ್ನ ಕರುಣೆ ಇಲ್ಲದಿದ್ದರೆ ಸಂಸಾರವನ್ನು ದಾಟಲು ಸಾಧ್ಯವಿಲ್ಲ ತಂದೆ. ಎಂಬತ್ತು ನಾಲ್ಕು ಲಕ್ಷ ಜನ್ಮಗಳು ಕಳೆದರೂ ಈ ಅಜ್ಞಾನದ ಸಂಸಾರವನ್ನು ದಾಟಲು ಸಾಧ್ಯವಾಗಲಿಲ್ಲ. ಎಷ್ಟೋ ಒಡಲುಗಳು ಸವೆದು ಹೋದವು; ಆದರೂ ನಿನ್ನ ದರುಶನವಾಗಲಿಲ್ಲ ಈ ಒಡಲಿಗೆ.

ಪುಣ್ಯ-ಪಾಪಗಳೆಂಬ ಸರಕು ತುಂಬಿದ ಈ ಒಡಲಲ್ಲಿ ಐವರು ಏರಿ ಐದೆಡೆಗೆ ವಾಲುತ್ತಿದ್ದಾರೆ. ಮಹಾಜ್ಞಾನವೆಂಬ ಧ್ವಜ ಹಿಡಿದು ಅರಿವೆಂಬ ತಾರಾಮಂಡಲವ ನೋಡುತ್ತಾ ಒಡಲೆಂಬ ಹಡಗು ನಡೆಸುವುದರಲ್ಲಿಯೇ ಯಮನ ಕಾಲಾಳು ಬಂದು ಒಡಲ ಹಿಡಿದು ನೇಣ ಬಿಗಿದೊಯ್ಯುತ್ತಾನೆ.

ಸಿದ್ಧರಾಮ ಶಿವಯೋಗಿಗಳ ಈ ವಚನವು ಸಂಪೂರ್ಣ ಬೆಡಗಿನಿಂದ ಕೂಡಿದೆ. ಒಡಲಿನ ಸಂಸಾರವನ್ನು ಸಾಗರಕ್ಕೆ ಹೋಲಿಸಿದ್ದಾರೆ. ಈ ಸಂಸಾರ ಸಾಗರದಲ್ಲಿ ಒಡಲನ್ನೇ ಹಡಗು ಮಾಡಿದ್ದಾರೆ. ಒಡಲೆಂಬ ಹಡಗಿನಲ್ಲಿ ಪುಣ್ಯ-ಪಾಪಗಳೆಂಬ ಸರಕು ತುಂಬಿದ್ದಾರೆ. ಪಂಚೇಂದ್ರಿಯಗಳಲ್ಲಿ ಐವರನ್ನು ಏರಿಸಿ ಜ್ಞಾನವೆಂಬ ಧ್ವಜವನ್ನು ಹಾರಿಸಿದ್ದಾರೆ.

ಆ ಧ್ವಜದಲ್ಲಿ ಲಿಂಗವೆಂಬ ತಾರಾಮಂಡಲವನ್ನಿಟ್ಟು ಆ ತಾರೆಗಳನ್ನು ನೋಡುತ್ತಾ ಹಡಗು ನಡೆಸುವುದಕ್ಕಾಗಿ ಐವರನ್ನು ನಿಯಮಿಸಿದ್ದಾರೆ.

ಯಮನ ಕಾಲಾಳುಗಳು ಒಡಲೆಂಬ ಹಡಗ ಹಿಡಿದು ಸಮಭೋಗವೆಂಬ ನೇಣನು ನವನಾಳದಲ್ಲಿ ಬಿಗಿದಿದ್ದಾನೆ. ಮನವೆಂಬ ನೌಕಾ ಪಟವನ್ನು ವಾಯುವಿನಲ್ಲಿ ತೇಲಿಬಿಟ್ಟು ಕಳವಳವೆಂಬ ಸಂಸಾರದ ಕಡಲೊಳಗೆ ಒಡಲೆಂಬ ಹಡಗು ಸಿಲುಕಿದೆ.

ಸಂಸಾರವೆಂಬ ಸಾಗರದ ತೆರೆಗಳ ಹೊಡೆತ ಒಡಲೆಂಬ ಹಡಗಿಗೆ ಬಡಿಯಲು ಉದಮುದವೆಂಬ ಸುಳಿಯಲ್ಲಿ ಸಿಲುಕದಂತೆ; ಹಡಗು ಮುಂದೆ ಸಾಗಬೇಕಿದೆ. ಗುರುಪದವೆಂಬ ಗೂಟಕ್ಕೆ ಜಡಿದು ಮನಬಂದತ್ತ ಚಲಿಸದಂತೆ ಕಟ್ಟಬೇಕಿದೆ.

ಇಹಲೋಕ-ಪರಲೋಕಗಳೆರಡರಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕಾಂಬೆ ಮನವೆ.

ಹಡಗು ದೊಡ್ಡದು. ಲಂಗರು ಹಾಕಿ ಬಿಗಿದು ಕಟ್ಟಿದ ಹಗ್ಗ ಚಿಕ್ಕದು. ಭೂಮಿಗೆ ಜಡಿದ ಗೂಟವೂ ಚಿಕ್ಕದು; ಗುರುಪಾದವೆಂಬ ಬೆಂಗುಂಡ(ಗೂಟ) ಹಿಡಿದ ಹಡಗು ದಂಡೆ ಬಿಟ್ಟು ಕದಲದೆ; ಅಲೆಗಳಿಗೆ ಸಿಕ್ಕದೆ; ಮತ್ತೆ ಸಂಸಾರವೆಂಬ ಸಮುದ್ರಕ್ಕೆ ಬೀಳದೆ; ಅರಿವೆಂಬ ಗುರುಪದವ ಹಿಡಿದು ಒಡಲಲ್ಲೇ ಹೊಯ್ದಾಡುತ್ತಾ ಗುರುಪಾದವ ಸೇರುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**102**

**ಅಯ್ಯಾ, ಸಂಸಾರವೆಂಬ ಹಾಯಿ ಹೊಡೆದು**
**ಆನು ಬೆಚ್ಚುತ್ತಿದ್ದೇನೆ, ಬೆದರುತ್ತಿದ್ದೇನೆ.**
**ಎಲೆಲೆ ಸಂಸಾರ ವೈರಿ! ನಿನ್ನವ ನಿನ್ನವನೆನಿಸಯ್ಯಾ,**

**ಕಪಿಲಸಿದ್ಧ ಮಲ್ಲಿಕಾರ್ಜುನಾ, ದೇವರ ದೇವಾ!**

ಸಂಸಾರದಲ್ಲಿ ಸಾಸುವೆ ಕಾಳಿನಷ್ಟು ಸುಖವಿಟ್ಟು ; ಅನಂತ ದುಃಖದ ಸರಕನ್ನು ತುಂಬಿ ಒಡಲನ್ನು ಮನದಿಂದ ಹೊಲಿಯಲಾಗಿದೆ. ಸ್ವಲ್ಪ ಸುಖ ; ಆ ಸುಖದಿಂದಲೇ ಅನಂತ ದುಃಖ! ಅಲ್ಪ ಸುಖಕ್ಕಾಗಿ ಮುನ್ನುಗ್ಗುತ್ತಾ ಅನಂತ ದುಃಖ ಸಂಗ್ರಹಿಸಿಕೊಂಡ ಒಡಲು ಅಜ್ಞಾನದ ಗಾಳಿಯ ಹೊಡೆತವನ್ನು ತಡೆದುಕೊಳ್ಳದಂತಹ ಭಾದೆಯಿಂದ ಹಗಲಿರುಳೂ ಬಳಲುತ್ತದೆ.

ಒಡಲು ಸಂಗ್ರಹಿಸಿಕೊಂಡ ಕರೆನ್ಸಿ, ಒಡಲು ಸಂಗ್ರಹಿಸಿಕೊಂಡ ಸಂಪತ್ತು, ಒಡಲು ಸಂಗ್ರಹಿಸಿಕೊಂಡ ಶಿಕ್ಷಣ ಪದವಿಗಳಿಂದ ಒಡಲಿನ ದುಃಖ ನಿಲ್ಲುತ್ತಿಲ್ಲ. ಒಡಲಿಗೆ ಶ್ರೀಮಂತಿಕೆ ಎಂಬುದು ಕೂಡಾ ದುಃಖವೇ. ಬಡತನವೆಂಬುದು ಕೂಡಾ ದುಃಖವೇ. ಪದವಿ ಪುರಸ್ಕಾರಗಳು ಕೂಡಾ ದುಃಖವೇ. ಹಲವಾರು ದುಃಖಗಳಿಂದ ಒಡಲು ಕ್ಷಣಕ್ಷಣಕ್ಕೂ ಬಳಲುತ್ತಿದೆ; ಬೆಚ್ಚುತ್ತಿದೆ; ಬೆದರುತ್ತಿದೆ. ಇದನ್ನು ನಿವಾರಿಸಿಕೊಳ್ಳಲು ಹೋಗಿ ಹೊಸತೊಂದು ಆಪತ್ಕಾಲವನ್ನು ತನ್ನ ಮೇಲೆ ಹೇರಿಕೊಂಡು ಪರಿಹರಿಸಿಕೊಳ್ಳದೆ ಅಜ್ಞಾನದ ಚಿಕ್ಕಿನಲ್ಲಿ ಸಿಲುಕಿಕೊಳ್ಳುತ್ತದೆ.

ಸುಖ ಮತ್ತು ದುಃಖಗಳ ಸರಕನ್ನು ಒಡಲಲ್ಲಿ ತುಂಬಿಕೊಂಡು ಸಂಸಾರವೆಂಬ ಸಾಗರದಲ್ಲಿ ಅಜ್ಞಾನದ ಅಲೆಗಳ ಹೊಡೆತಕ್ಕೆ ಸಿಕ್ಕಿ ಬೆಚ್ಚಿ ಬೆದರಿದ ಮನಕ್ಕೆ ಅರಿವಿನ ಔಷಧಿಯ ಅವಶ್ಯಕತೆಯಿದೆ. ಪುಸ್ತಕಗಳ ಅರಿವಿನ ಮಲಾಮಿಗೆ ಒಡಲ ಗಾಯ ಮಾಯುವುದಿಲ್ಲ. ಒಡಲಿಂದ ಮಾಡಲ್ಪಟ್ಟ ದೇವರುಗಳನ್ನು ಒಡಲ ಮೂಲಕ ಆರಾಧಿಸಿದರೆ ಒಡಲ ಗಾಯ ಮಾಯುವುದಿಲ್ಲ.

ಒಡಲನ್ನು ಆವರಿಸಿದ ಮನ, ಒಡಲನ್ನೇ ಆಶ್ರಯಿಸಿಕೊಂಡು ಒಡಲಲ್ಲಿಯೇ ತನ್ನ ಅಜ್ಞಾನದ ಸಂಸಾರವನ್ನು ಹೂಡಿದೆ. ಈ ಅಜ್ಞಾನದ ಸಂಸಾರವನ್ನು ಹೊಡೆದೋಡಿಸುವ ಸಂಸಾರ ವೈರಿಯೂ ಒಡಲಲ್ಲಿಯೇ ಸಂಗಮವಾಗಿದ್ದಾನೆ. ಮನಕ್ಕೆ ಒಮ್ಮೆ ಅವನ ಮೇಲೆ ಆಸೆಯಾದರೆ ಸಾಕು; ಅವಳನ್ನು ಬಿಗಿದಪ್ಪಿ ತನ್ನವಳನ್ನಾಗಿಸಿಕೊಳ್ಳುತ್ತಾನೆ.

ಇದು ಸಂಸಾರ ವೈರಿಯ ಆಟ! ಹುಟ್ಟೆಂದು ಒಡಲನ್ನು ಲೋಕದಲ್ಲಿ ಹುಟ್ಟಿಸಿ; ಅಜ್ಞಾನವನ್ನು ಒಡಲಲ್ಲಿ ಇಳಿಬಿಟ್ಟಿದ್ದಾನೆ. ಅರಿವಿನ ದಾರಿಯನ್ನು ಒಡಲಲ್ಲಿಯೇ ಇಟ್ಟು ಮನದಿಂದ ಹೊಲಿದು ಅರಿವಿನ ದಾರಿ ಹುಡುಕುವ ಕಾಯಕವನ್ನು ಕಾಯಕ್ಕೆ ಹಚ್ಚಿದ್ದಾನೆ.

ಒಡಲೊಳಗಿದ್ದು, ಒಡಲಿಂಗಾಧಾರವಾಗಿ ಒಡಲ ಸೋಂಕದೆ ಒಡಲನ್ನು ಬೆಳಗುವ ನೀನು ಒಡಲೊಳಗಿದ್ದು ಮೇಲೆ ಕತ್ತಲೆಯ ಹೊಲಿಗೆ ಹಾಕಿ ಲೋಕದಲ್ಲಿಳಿಯಬಿಟ್ಟಡೆ ನಿಮ್ಮ ನೋಡಿ ನಗುವುದಿಲ್ಲವೆ ದೇವನೆ; ದೇವರ ದೇವನೆ.

ಎಲೆಲೆ ಸಂಸಾರವೈರಿ; ನೀನೇ ಸೃಷ್ಟಿ ಮಾಡಿದ ಸಂಸಾರವೆಂಬ ಕತ್ತಲನ್ನು ನಿನ್ನ ಜ್ಞಾನದ ಬೆಳಕಿನಿಂದಲೇ ಕಳೆದು ನಿನ್ನವ ನಿನ್ನವನೆನಿಸಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಾ, ದೇವರ ದೇವಾ.

**103**

**ಅಯ್ಯಾ ಸುಖಾದಿಗಳು ಬಂದಡೆ**
**ಎನ್ನಿಂದಾಯಿತ್ತೆಂಬೆ.**
**ದುಃಖಾದಿಗಳು ಬಂದಡೆ**
**ನಿನ್ನಿಂದಾಯಿತ್ತೆಂಬೆ.**
**ಅದೇನು ಕಾರಣದಲ್ಲಿ ಕಿಂಚಿತ್ತಕ್ಕೆ ಹಮ್ಮಯಿಸಿ**

**ಹಿಂದಕೆ ಹಾರೈಸುವೆನಾಗಿ**
**ಲೋಕದ ಲೌಕಿಕಗಳಂಥವಂಗೇಕೊಲಿವೆಯಯ್ಯಾ ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನುಷ್ಯಸುಖಕ್ಕೆ ಮಾತ್ರ ಬದುಕಿದ್ದಾನೆ. ಸುಖಕ್ಕಾಗಿ ಮುನ್ನುಗ್ಗಿ ಅದು ದಕ್ಕದೆ ದುಃಖವಾದಾಗ ಬಳಲಿ ಬೆಂಡಾಗುತ್ತಾನೆ. ನರಕಯಾತನೆ ಅನುಭವಿಸುತ್ತಾನೆ. ಆತ್ಮಹತ್ಯೆಗೆ ಪ್ರಯತ್ನಿಸುತ್ತಾನೆ. ದುಃಖವಾದಾಗ ಸಾಯಲು ಕೂಡಾ ಹೇಸುವುದಿಲ್ಲ. ದುಃಖವಾದಾಗ ಆತ್ಮಹತ್ಯೆ ಮಾಡಿಕೊಳ್ಳುವ ಪ್ರಾಣಿಗಳು ಯಾವೂ ಇಲ್ಲ ; ಮನುಷ್ಯನನ್ನು ಬಿಟ್ಟು.

'ಸುಖವಾದಡುಂಡು ದುಃಖ ಬಂದಲ್ಲಿ ಬಳಲಿದಡಹುದೆ? ತುಯ್ಯಲೆಂದಡುಂಡು, ಹುಯ್ಯಲೆಂದಡಹುದೆ ? ಕೇಳಯ್ಯ ಕೂಡಲಸಂಗಮದೇವಯ್ಯಾ ನೀ ಮಾಡಿದ ಮಾಟಕ್ಕಾಡಿದಡಹುದೆ?' ಎಂದು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಮೇಲೆಯೇ ಆರೋಪ ಮಾಡಿ ಮಾತನಾಡುತ್ತಾರೆ ಬಸವಣ್ಣ !

ಸುಖವೆಂದರೇನು, ದುಃಖವೆಂದರೇನು?, ಸಹಜ ಸುಖವೆಂದರೇನೆಂದು ತಿಳಿದುಕೊಂಡು ಸುಖ ದುಃಖಗಳನ್ನು ಕೊಡವಿಕೊಂಡು ಸದಾ ಸಹಜ ಸುಖದಲ್ಲಿದ್ದು ಸಹಜಾನಂದವನ್ನು ಹೊಂದಿದವರೇ ಶರಣರು. ತಾವು ಸಹಜ ಸುಖವನ್ನು ಅನುಭವಿಸಿ ಆ ಸುಖದ ಸೂತ್ರವನ್ನು ಓದುಗರಿಗೆ ಬಿಟ್ಟು ಹೋದವರು.

ಕಲಿತವರು ಶರಣರ ವಚನಗಳನ್ನು ತಮ್ಮ ವ್ಯವಹಾರದ ಸುಖ ದುಃಖಗಳ ಸರಕನ್ನಾಗಿಸಿಕೊಂಡು ಪಂಡಿತೋತ್ತಮ, ಸಾಹಿತಿಗಳೆನ್ನಿಸಿಕೊಂಡರೆ ಹೊರತು ''ಸಹಜ'' ಸುಖಿಗಳಾಗಲಿಲ್ಲ. ಸಹಜ ಸುಖದ ಮಾರ್ಗದ ಉಪನ್ಯಾಸವನ್ನು ಇತರರಿಗೆ ನೀಡಲು ಸಾಧ್ಯವಾಗಲಿಲ್ಲ.

'ಬಯಸಿ ಬಂದುದು ಅಂಗಭೋಗ; ಬಯಸದೆ ಬಂದುದು ಲಿಂಗಭೋಗ' ಶರಣರ ಈ ಸಾಲಿನಲ್ಲಿ ಸಹಜ ಸುಖದ ಸೂತ್ರ ಅಡಗಿದೆ. ಸುಖ ದುಃಖಗಳನ್ನು ಕಳೆದುಕೊಂಡಾಗ ಬಯಸದೇ ಬಂದ ಭಾಗ್ಯದ ಸಹಜ ಸುಖದ ಲಿಂಗಭೋಗವನ್ನು ತಾನು ಅನುಭವಿಸುತ್ತಾನೆ. ಹಾಗೆ ಅನುಭವಿಸುವ ಪರಮಾನಂದದ ಸನ್ನಿವೇಶವನ್ನು ತನಗೆ ತಾನೇ ಕಂಡುಕೊಂಡು ಆ ಆನಂದಲ್ಲಿ ಮೈಮರೆಯುತ್ತಾನೆ.

ಸುಖವೆಂದರೆ ಬಯಸಿ ಸುಖಿಸುವುದು. ಆ ಸುಖ ತನಗೆ ಸಿಕ್ಕದಿದ್ದರೆ ಅಪಾರ ದುಃಖಕ್ಕೆ ಜಾರುತ್ತಾನೆ. ಬಯಸಿದ ಸುಖವೇ ದುಃಖಕ್ಕೆ ಮುಳುವಾಯಿತೆಂದು ಅರಿಯದೇ ಹೋಗುತ್ತಾನೆ. ಈ ದುಃಖವೇ ತನುವಿನ ಆಪತ್ಕಾಲಕ್ಕೆ ಆತ್ಮಹತ್ಯೆಗೆ ಕಾರಣವಾಯಿತೆಂದು ಅರಿಯದೇ ಹೋಗುತ್ತಾನೆ.

ಸುಖವೆಂದರೇನು? ಸುಖಿಸುವ ಸುಖ ನಿಜವಾಗಿಯೂ ಸುಖವೇ ಹೇಗೆ? ಎಂದು ಆಲೋಚನೆಗೆ ತೊಡಗದೆ ದೇಹ ಸುಖಕ್ಕೆ ಒಳಗಾಗುತ್ತದೆ. ಕಾಮವೂ ಒಂದು ಸುಖ; ಇದು ಸುಖವೆಂದು ಲೋಕವೇ ಒಪ್ಪಿಕೊಂಡಿದೆ. ಆದರೆ ಇದು ಸುಖವಲ್ಲ ಎಂದು ಜ್ಞಾನಿಗಳಿಗೆ ಮಾತ್ರ ಗೊತ್ತಿದೆ.

ದೇಹಕ್ಕೆ ಮತ್ತೊಂದು ದೇಹ ಜನ್ಮ ನೀಡುವ ಬಯಕೆಯಾದಾಗ; ದೇಹದಲ್ಲಿ ದೇಹಕ್ಕೆ ಜನ್ಮ ನೀಡುವ ದ್ರವ್ಯ ಉತ್ಪನ್ನವಾಗುತ್ತದೆ. ಹಾಗೆಯೇ ದನಗಳಿಗೆ ದೇಹಕ್ಕೆ ಜನ್ಮ ನೀಡುವ ಬಯಕೆಯಾದಾಗ ಅದನ್ನು ನಾವು 'ಬೆದೆ' ಎಂದು ಕರೆಯುತ್ತೇವೆ. ಅಂತಹ ದನವನ್ನು ನಾವು ಉತ್ತಮ ದನದಲ್ಲಿ ಕರೆದುಕೊಂಡು ಹೋಗಿ, ಅಥವಾ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಅದರ ಕೋರಿಕೆಯನ್ನು ತೀರಿಸುತ್ತೇವೆ. ದನ ತೃಪ್ತಿಯಾಗುತ್ತದೆ. ಹೆರಿಗೆಯಾಗುವವರೆಗೂ ದನ ಮತ್ತೆ ಬೆದೆಗೆ ಬರುವುದಿಲ್ಲ. ಆ ದನಕ್ಕೆ ಮತ್ತೊಂದು ದನ ತೊಂದರೆ ಕೊಡುವುದಿಲ್ಲ. ದನಗಳಿಗೆ 'ಬೆದೆ'

ಸುಖವೂ ಅಲ್ಲ ದುಃಖವೂ ಅಲ್ಲ. ಸಂತಾನಕ್ಕೆ ಜನ್ಮ ಕೊಡುವ ಒಂದು ಸಂದರ್ಭ. ಆದರೆ ದನಗಳಿಗೆ ಇರುವ ಸಹಜ ಅರಿವು ಮನುಷ್ಯರಿಗೆ ಇಲ್ಲ.

ತಾನು ಸಂತಾನಕ್ಕಾಗಿ ದಾನ ಪಡೆದಿದ್ದೇನೆ; ಸಂತಾನಕ್ಕಾಗಿ ದಾನ ಮಾಡಿದ್ದೇನೆ ಎನ್ನುವ ಅರಿವು ಎರಡು ದೇಹಗಳಿಗೆ ಇಲ್ಲದ ನಿಮಿತ್ಯ ದೇಹ ಮತ್ತೆ ಮತ್ತೆ ಕಾಮಕ್ಕೆ ಬಲಿಯಾಗಿ ಸುಖ ದುಃಖಗಳನ್ನು, ನರಕಯಾತನೆಯನ್ನು, ಕೊಲೆ, ಆತ್ಮಹತ್ಯೆಯ ದುರ್ಬಲ ಅಜ್ಞಾನವನ್ನು ತನಗೆ ತಾನೇ ಹೇರಿಕೊಂಡು ದೇಹದ ಸಹಜ ಜ್ಞಾನದಿಂದ ದೇಹವೇ ಬಹುದೂರ ಉಳಿದಿದೆ.

ಹೀಗಾಗಿ ದೇಹಕ್ಕೆ ಸುಖ ಬಂದರೆ ತನ್ನಿಂದಾಯಿತ್ತೆಂದು ಹಿಗ್ಗುತ್ತದೆ. ದುಃಖ ಬಂದರೆ ಇದು ದೇವರ ಕಾಡಿಕೆಯೆಂದು ಕೊರಗುತ್ತದೆ. ಇದರಲ್ಲಿ ಅರಿವೆಂಬ ಗುರುದೇವನ ಪಾತ್ರವೇ ಅಧಿಕವಾಗಿದೆ. ಸುಳ್ಳು ಸುಖವನ್ನು ಉಂಟು ಮಾಡಿ; ಸುಳ್ಳು ದುಃಖವನ್ನು ಉಂಟು ಮಾಡಿ ಸಹಜ ಸುಖದತ್ತ ಹೆಜ್ಜೆ ಇಡದಂತೆ ಮಾಡಿದವನು ಕೂಡಾ ಅರಿವೆಂಬ ಗುರುದೇವನೆ ಹೊರತು ಮತ್ತಾರೂ ಅಲ್ಲ.

ಸಂತಾನದ ಉದ್ದೇಶವಿಟ್ಟುಕೊಂಡು ತನುವಿನಲ್ಲಿ ಕಾಮ ಉತ್ಪನ್ನವಾದರೆ ಅದು ಸಹಜ ಕ್ರಿಯೆ. ಎರಡೂ ತನುಗಳು ಆ ಉದ್ದೇಶವನ್ನು ಈಡೇರಿಸಿಕೊಳ್ಳಬಹುದು. ಅದು ಸಮಾಜದ ನಿಯಮವೂ ಹೌದು. ಸುಖಕ್ಕಾಗಿ ಕಾಮ ಉಂಟಾದುದು ತಪ್ಪೆಂದು ತನುವಿಗೆ ಗೊತ್ತಿದ್ದರೂ ಸುಖ ಬಯಸುವುದು ಅಜ್ಞಾನ. ತಪ್ಪೆಂದು ಹೇಳುವ ಸಹಜ ಜ್ಞಾನವೂ ತನುವಿನಲ್ಲಿ ಇದೆ. ಸಹಜ ಜ್ಞಾನವನ್ನು ತಳ್ಳಿ ಸುಖ ಅನುಭವಿಸುವ ಅಜ್ಞಾನವೂ ತನುವಿನಲ್ಲಿ ಇದೆ. ಲೋಕದ ಲೌಕಿಕಗಳಂಥ ಅಜ್ಞಾನಿಗಳಿಗೆ ಜ್ಞಾನದೇವ ಹೇಗೆ ಒಲಿತಾನು ಎನ್ನುವ ಪ್ರಶ್ನೆಯ ಮೂಲಕ ಸಿದ್ಧರಾಮ ಶಿವಯೋಗಿಗಳು ವಚನವನ್ನು ಪೂರ್ಣಗೊಳಿಸಿದ್ದಾರೆ. ವಿವೇಕ ಜಾಗೃತಗೊಳಿಸಿಕೊಂಡಲ್ಲಿ ಸುಖ ದುಃಖಗಳ ಅಜ್ಞಾನಕ್ಕೆ ಕೊಡಲಿಪೆಟ್ಟು ಬಿದ್ದು ಸಹಜ ಜ್ಞಾನ ಸಹಜವಾಗಿಯೇ ಬಳಕೆಯಾಗಿ ತನು ಸಹಜ ಸುಖದಲ್ಲಿ ಮೈಮರೆಯುವುದು.

ವೃಕ್ಷ ಮೂರು ಕಾಲಗಳಲ್ಲಿ ಸಹಜ ಸುಖ ಅನುಭವಿಸಿದಂತೆ ತನು ಕೂಡಾ ಭೋದೀ ವೃಕ್ಷದಂತೆ ಬೇರಿಲ್ಲದ ಜ್ಞಾನದ ಮಹಾವೃಕ್ಷವಾಗಿ ಬುದ್ಧನಂತೆ ಭೋದಿಸುತ್ತಾ ಸಹಜ ಸುಖದಲ್ಲಿ ಅಲೆದಾಡುವುದು.

**104**

**ಅಯ್ಯಾ , ಹಾ ! ದೈವವ ನಿರ್ದೈವವ ಮಾಡಿದಾ.**
**ಅಯ್ಯಾ , ಮುನ್ನ ಅರ್ಚನೆ ಪೂಜನೆಗೊಡದೆ ದಕ್ಷನೇನಾದ ?**
**ಇನಿಸನರಿದು ಕೆಡುವಡೆ ನಿಮ್ಮ ಮೇಲೆ ಹೊಲ್ಲೆಹವಿಲ್ಲಯ್ಯಾ**
**ಎನ್ನ ಕಪಿಲಸಿದ್ಧ ಮಲ್ಲೇಶ್ವರ ದೇವಾ.**

ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ, ಪಶು ನಾನು; ಪಶುಪತಿ ನೀನು. ನಿನ್ನನ್ನೇ ದೈವವನ್ನಾಗಿ ಮಾಡಿಕೊಂಡು ನಿನಗೆ ವಾಹನವಾದೆ ನಾನು. ನೀನಿದ್ದರೂ ನೀನಿರುವಿ ಎಂದು ಅರಿಯದ ದುರ್ದೈವಿ ನಾನು. ಪಶು ನಾನು.

ಬ್ರಹ್ಮನ ಮಗನೆಂಬ ಅಹಂಕಾರದಿಂದಾಗಿ; ಮಗಳನ್ನು ಕೊಟ್ಟ ಮಾವ ತಾನೆಂಬ ಅಹಂಕಾರದಿಂದಾಗಿ ದಕ್ಷ ಶಿವನನ್ನು ಪೂಜಿಸಲಿಲ್ಲ. ಅರ್ಚಿಸಲಿಲ್ಲ. ಮನೆ ಬಾಗಿಲಿಗೆ ಬಂದ ದೈವವನ್ನು ಆದರದಿಂದ ಬರ ಮಾಡಿಕೊಳ್ಳಲಿಲ್ಲ. ಪಶು ಪ್ರವೃತ್ತಿಯನ್ನು ತೋರಿದ. ದಕ್ಷನ ಅಹಂಕಾರಕ್ಕೆ ತಕ್ಕ ಶಾಸ್ತಿಯಾಯಿತು. ದಾಕ್ಷಾಯಿಣಿ ಶಿವನ ಸತಿ. ದಕ್ಷ ಬ್ರಹ್ಮನ ಪುತ್ರಿ. ಶಿವನನ್ನು

ಆದರಿಸದ ತಂದೆಯ ಮೇಲೆ ಕುಪಿತಳಾಗಿ ಅಗ್ನಿಗೆ ಆಹುತಿಯಾದಳು.

ದಕ್ಷನ ಅಹಂಕಾರ ಮುರಿಯಲು ಪುತ್ರ ವೀರಭದ್ರ ದಕ್ಷನ ರುಂಡವನ್ನೇ ಚೆಂಡಾಡಿದ. ಶಿವನನ್ನು ಮರೆತ ದಕ್ಷನಿಗೆ ಅರಿವಾಯಿತು. ಪುನಃ ಶಿವನನ್ನು ಬೇಡಲು, ದಕ್ಷನಿಗೆ ಹೋತಿನ ತಲೆಯಿಟ್ಟು ಆಶೀರ್ವದಿಸಿದ.

ಸಕಲ ದೇಹಗಳಲ್ಲಿ ಅರಿವೆಂಬ ಶಿವ ಸಂಗಮವಾಗಿದ್ದರೂ ನೆತ್ತಿಯ ಅಹಂಕಾರ ತಗ್ಗಿಲ್ಲ. ಪುರಾಣ ಪುಣ್ಯಕತೆಗಳನ್ನು ಕೇಳಿದರೂ ದೇವಾಲಯವೇ ಆಗಬೇಕಾದ ದೇಹಕ್ಕೆ ಕೇಡು ತಪ್ಪಿಲ್ಲ. ಸಕಲ ದೇಹಗಳೂ ದಕ್ಷನಂತೆ ಬ್ರಹ್ಮನ ಪುತ್ರರೇ ಆಗಿವೆ. ಆದರೂ ಅರಿವೆಂಬ ಶಿವನನ್ನು ಮರೆತು ಮರೆವಿನಲ್ಲಿ ಮೈ ಮರೆತಿವೆ. ದಕ್ಷನಿಗಾದ ಗತಿ ದೇಹಕ್ಕೆ ತಪ್ಪುವುದಿಲ್ಲ.

ಇನಿಸನರಿದು ಕೆಡುವಡೆ ನಿಮ್ಮ ಮೇಲೆ ಹೊಲ್ಲೆಹವಿಲ್ಲಯ್ಯಾ :

ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ. ಆ ಪರಬ್ರಹ್ಮನ ಮಗನೇ ದಕ್ಷ ! ಅಂದರೆ ಅಂಗದಲ್ಲಿ ಸಂಗಮವಾದ ಅರಿವೇ ಗುರು. ಆ ಗುರುದೇವನೇ ಮಹಾದೇವ, ಸದಾಶಿವ, ಸಾಕ್ಷಾತ್ ಪರಬ್ರಹ್ಮನಾಗಿದ್ದಾನೆ. ಇವರು ವಾಸ ಮಾಡುವ ದೇಹವೇ ದಕ್ಷ ಎಂದು ಹೆಸರು ಪಡೆದಿದೆ.

ದೇಹವನ್ನು ಆವರಿಸಿದ ಮನಕ್ಕೆ ಅಹಂಕಾರ ಬಂದರೆ ದೇಹದ ನೆತ್ತಿ ಉರುಳುತ್ತದೆ. ದೇಹವೇ ದೇವಾಲಯವೆಂದು ಕರೆಯಿಸಿಕೊಂಡರೂ ನೆತ್ತಿ ಆ ದೇವಾಲಯಕ್ಕೆ ಹೊನ್ನ ಕಳಶವಾಗಬೇಕಲ್ಲ! ಹೀಗಾಗುವುದು ಅಪರೂಪ. ನೆತ್ತಿ ಶಿವನ ಪಾದಕ್ಕೆ ಬಾಗಿದಾಗ ಇದು ಸಾಧ್ಯ. ಇಲ್ಲದಿದ್ದರೆ ಶಿವ ನೆತ್ತಿಯ ಅಹಂಕಾರವನ್ನು ಕತ್ತರಿಸಿ ಹೋತಿನ ನೆತ್ತಿಯನ್ನು ದೇಹಕ್ಕೆ ಇಟ್ಟು ಶಸ್ತ್ರ ಚಿಕಿತ್ಸೆ ಮಾಡಿ ಕಳುಹಿಸುತ್ತಾನೆ. ಆಗ ದೇಹ ನೋಡಲು ಮನುಷ್ಯನಂತೆ ಕಂಡರೂ ಅದು ಮನುಷ್ಯನಲ್ಲ. ರಕ್ಕಸ ಪ್ರವೃತ್ತಿಯಿಂದಾಗಿ ಮನುಷ್ಯನನ್ನು ಮನುಷ್ಯನಂತೆಯೇ ನೋಡಲು ಮನುಷ್ಯನಿಗೆ ಸಾಧ್ಯವಾಗುವುದಿಲ್ಲ.

ಅರಿವೆಂಬ ಶಿವನ ಕತೆಯನ್ನು ಕೇಳಿಯೂ ಕೆಡುವ ನೀಚ ದೇಹಕ್ಕೆ ಏನೆಂದು ಕರೆದರೂ ಅದಕ್ಕೆ ನಾಚಿಕೆಯಿಲ್ಲ. ಏಕೆಂದರೆ ದೇಹವೆಂಬ ದೇವಾಲಯದಲ್ಲಿಯೇ ಸಂಗಮವಾದ ಅರಿವೆಂಬ ಶಿವನನ್ನು ಮರೆತಿದೆ. ಅದಕ್ಕಾಗಿಯೇ ದೇಹಕ್ಕೆ ಸಕಲ ದೇಹಗಳೂ ದೇವಾಲಯವೇ ಆಗಿವೆ ಎಂದು ಗುರುತಿಸಲು ಸಾಧ್ಯವಾಗುತ್ತಿಲ್ಲ.

**105**

**ಅಯ್ಯಾ , ಹಿಂದೆ ಹಲವು ಯುಗಂಗಳು ತಿರುಗಿ ಬರುತ್ತಿಪ್ಪಲ್ಲಿ,**
**ಅವನು ನೀ ಮಾಡಿದೆಯಲ್ಲದೆ ತಮ್ಮಾಜ್ಞೆಯಿಂದ ಬಂದುದಿಲ್ಲವಯ್ಯಾ.**
**ಬಸವಣ್ಣಾ, ನಿಮ್ಮಾಜ್ಞೆಯಲ್ಲಿ ಯುಗಂಗಳು ಭವಭವದಲ್ಲಿ ಕಾಡಿದವು.**
**ಬಸವಣ್ಣಾ, ಸಂಸಾರವಾಗಿ ಎನ್ನನೆ ಕಾಡಿದವು.**
**ಬಸವಣ್ಣಾ, ಹೊನ್ನು ಹೆಣ್ಣು ಮಣ್ಣು ತ್ರಿವಿಧವಾಗಿ ಎನ್ನನೆ ಕಾಡಿದವು.**
**ಬಸವಣ್ಣಾ, ಆಶಾಪಾಶಂಗಳಾಗಿ ಎನ್ನನೆ ಕಾಡಿದವು.**
**ಬಸವಣ್ಣಾ, ಗುರು ಬಸವಣ್ಣಾ, ಇವೆಲ್ಲಾ ನಿಮ್ಮಾಧೀನದವು :**
**ನೀ ಮಾಡಿದಡಾದವು, ಬೇಡಾ ಎಂದಡೆ ಮಾದವು.**
**ಅವಕ್ಕೆ ಎನ್ನನೊಪ್ಪಿಸದೆ, 'ನಿನ್ನವ ನಿನ್ನವ'ಎನಿಸಾ,**

## ಕಪಿಲಸಿದ್ಧ ಮಲ್ಲಿಕಾರ್ಜುನನ ತೋರಿದ ಗುರು ಬಸವಣ್ಣಾ.

ತನುವಿನೊಳಗೆ ಸಂಗಮವಾದ ಅರಿವೆಂಬ ಗುರುದೇವ ಬೇರೆ ಅಲ್ಲ; ಆ ಗುರುದೇವನನ್ನು ಪರಿಚಯ ಮಾಡಿಕೊಡುವ ಗುರುದೇವನೂ ಬೇರೆ ಅಲ್ಲ! ತನುವಿನಲ್ಲಿ ತನ್ಮಯವಾದ ಗುರುದೇವ ಕಾಣುವುದಿಲ್ಲ ; ಏಕೆಂದರೆ ಆತ ಅವ್ಯಕ್ತ . ನನ್ನ ತನುವನ್ನು ಬಳಕೆ ಮಾಡಿಕೊಂಡು ನನ್ನೊಂದಿಗೆ ಮಾತನಾಡುತ್ತಾನೆ. ಈತನ ಮಾತುಗಳು ನನಗೆ ಮಾತ್ರ ಕೇಳುತ್ತವೆ. ಅನ್ಯರಿಗೆ ಕೇಳುವುದಿಲ್ಲ.

ಈ ಗುರುದೇವನನ್ನು ಗುರುದೇವ ಪರಿಚಯಿಸಿಕೊಟ್ಟ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿ ಸಂಗಮವಾದ ಗುರುದೇವನನ್ನು 'ಬಸವಣ್ಣಾ' ಎಂದು ಕರೆದ. 'ಬಸವಣ್ಣ' ಬೇರೆ ಅಲ್ಲ; ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನೂ ಬೇರೆ ಅಲ್ಲ.

'ನಾನು' ಎಂಬ ಅಹಂಕಾರ ತ್ರೇತಾಯುಗದಲ್ಲಿಯೂ ಇತ್ತು; ದ್ವಾಪರಯುಗದಲ್ಲಿಯೂ ಇತ್ತು; ಕಲಿಯುಗದಲ್ಲಿಯೂ ಇದೆ. ಅದನ್ನು ನೀ ಮಾಡಿದೆಯಲ್ಲದೆ ಯುಗಂಗಳ ಆಜ್ಞೆಯಿಂದ ಬಂದುದಲ್ಲ. ತ್ರೇತಾ, ದ್ವಾಪರ, ಕಲಿಯುಗವೆಂದು ಹೆಸರಿಸಿದವನು ನಾನು.

ನನಗಾಗಿ ಹೆಸರಿಸಿದ ಯುಗಗಳು ನಿನ್ನನ್ನು ಮರೆತುದುದಕ್ಕಾಗಿ ಜನನ ಮರಣಂಗಳಾಗಿ ಕಾಡಿದವು. ಸಂಸಾರವಾಗಿ ಕಾಡಿದವು. ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧವಾಗಿ ನನ್ನನ್ನೇ ಕಾಡಿದವು. ಆಶಾಪಾಶಂಗಳಾಗಿ ಕಾಡಿದವು.

ಬಸವಣ್ಣಾ, ಗುರುಬಸವದೇವಾ ಇವೆಲ್ಲಾ ನಿಮ್ಮ ಆಧೀನವು. ನೀ ಮಾಡೆಂದು ಹೇಳಿದುದಕ್ಕಾಗಿ ನಾ ಮಾಡಿದೆ. ಹೀಗಾಗಿ ನನಗೆ ಕ್ಷಣಿಕ ಸುಖವಾಯಿತು. ದುಃಖವಾಯಿತು. ನೀ ಬೇಡ ಎಂದುದು ನನಗೆ ತಿಳಿಯಲಿಲ್ಲ. ಏಕೆಂದರೆ ನಾ ಮಾಡಿದ ಸಂಸಾರ ನನಗೆ ಸುಖ ನೀಡಿದವು; ದುಃಖ ನೀಡಿದವು. ಸುಖ ದುಃಖದ ಹುಣ್ಣಿನಲ್ಲಿ ಅಜ್ಞಾನದ ಹುಳ ಬಿದ್ದವು. ಗಾಯ ಮಾಯಲೇ ಇಲ್ಲ; ಹಲವು ಯುಗಂಗಳು ಕಳೆದು ಹೋದವು!

ನಾನು ಮಾಡಿಕೊಂಡ ಸಂಸಾರ ನನ್ನನ್ನೇ ಕಾಡಿತು. ನನ್ನಿಂದಾದ ಹೊನ್ನು ಹೆಣ್ಣು ಮಣ್ಣು ನನ್ನನ್ನೇ ಕಾಡಿದವು. ನೀ ಮಾಡಿದ ಮಾಯೆಯಲ್ಲಿ ನನಗೆ ನಾನೇ ಬಂಧಿಯಾದೆ. ಯುಗ ಯುಗಗಳು ಕಳೆದರೂ ಅದು ನೀ ಮಾಡಿದ ಮಾಯೆಯೆಂದು ನನಗೆ ತಿಳಿಯಲೇ ಇಲ್ಲ.

ಬಸವಣ್ಣಾ, ಗುರು ಬಸವಣ್ಣಾ ನೀವು ಮಾಡಿದ ಮಾಯೆಯೆಂದು, ಗುರುದೇವನಾಗಿ ಬಂದು ನನ್ನನ್ನು ಎಚ್ಚರಿಸಿ ಹೇಳಲು ನಿಮ್ಮಿಂದಾಗಿ ಎನಗೆ ತಿಳಿಯಿತು. ನೀವು ಬೇಡ ಎಂದು ಹೇಳಲಾಗಿ; ನಿಮ್ಮ ಮಾತು ಪಾಲಿಸಿ ನಾನು ನನಗಂಟಿದ ಮಾಯೆಯನ್ನು ನೋಡಲಾಗಿ ಕೂಡಲೇ ಮಾದವು.

ನಾನು ನನ್ನ ಅರಿವಿನ ದರುಶನಕ್ಕಾಗಿ ಬಂದವನು. ಬಂದುದನು ಮರೆತು ಮರೆವಿನ ಸಂಸಾರದ ಬೆನ್ನು ಹತ್ತಿದೆ. ಸುಖವಾಯಿತು; ದುಃಖವೂ ಆಯಿತು. ಸುಖದುಃಖಗಳೆರಡು ದೇಹಕ್ಕಾದ ಹುಣ್ಣೆಂದು ಅರಿಯಲಿಲ್ಲ. ಅಜ್ಞಾನದ ಹುಳಬಿದ್ದು ಎಷ್ಟೋ ದೇಹಗಳು ಕಳೆದು ಹೋದವು!

ಗುರುದೇವನೇ ನೀ ಮಾಡಿದಡಾದವು; ಬೇಡ ಎಂದಡೆ ಮಾದವು. ನನಗೆ ತಿಳಿದಿರಲಿಲ್ಲ; ಹೀಗಾಗಿ ನಾನು ನನ್ನನ್ನೇ ಒಪ್ಪಿಸಿಕೊಂಡಿದ್ದೆ. ನಾನು ಒಪ್ಪಿಸಿಕೊಂಡ ದೇಹ ಕೂಡಾ ನಿನ್ನದೆಂದು ತಿಳಿದಿರಲಿಲ್ಲ. ಹೀಗಾಗಿ ನಿನ್ನನ್ನು ಅರಿಯಲು ನನಗೆ ಯುಗ ಯುಗಗಳೇ ಬೇಕಾಯಿತು. ಇನ್ನು ನಾನು ನಿನ್ನವನು ಬಸವಣ್ಣಾ. ನಾನು ನಿನ್ನವನು ಎಂದು ಎನಿಸು ಗುರುದೇವಾ. ನನಗೆ ನನ್ನ ಅರಿವಿನ ದರುಶನ ಮಾಡಿಸು ಗುರುದೇವಾ. ದೇವರ ದೇವ ಕಪಿಲಸಿದ್ಧ ಮಲ್ಲಿಕಾರ್ಜುನನ ದರುಶನ ಮಾಡಿಸಿ ಈ ಅಜ್ಞಾನದಿಂದ 'ನನ್ನನ್ನು ಪಾರು ಮಾಡು ಬಸವಣ್ಣಾ'; ಗುರು ಬಸವಣ್ಣಾ.

ಓದುಗರಿಗೆ ಹೀಗೆ ಕೇಳಲು ಬರಬೇಕೆಂದು ಕಳಕಳಿಯಿಂದ ಸಿದ್ಧರಾಮ ಶಿವಯೋಗಿಗಳು ಈ ಸೂತ್ರವನ್ನು ರಚಿಸಿದ್ದಾರೆ. ಓದುಗರ ಮೇಲೆ ಅವರಿಗೆ ಅಪಾರ ಕರುಣೆ.

**106**

**ಅಯ್ಯಾ, ಹಿಂದೆ ನಾ ಬಂದ ಹಲವು ಭವ ಸಾಲದೆ ?**
**ಏಕೆ ಕಾಡುವೆಯಯ್ಯಾ?**
**ಹಿಂದೆ ನಿನ್ನನರಿಯದೆ ದಾನವರಾಗಿ ಹಲವು ಭವದಲ್ಲಿ**
**ಕುಡಿದು ಆನುಂಡ ನರಕವ ನೀನರಿಯ.**
**ಅರಿದರಿದೆನ್ನ ಕಾಡುವರೆ ?**
**ಅಯ್ಯಾ, ನಾನು ಬಂದ ಸುಖಂಗಳಲ್ಲಿ ನಿನ್ನನರಿಯದ ಕಾರಣದಲ್ಲಿ**
**ನೀನಿಕ್ಕಿದೆ ನರಕದಲ್ಲಿ,**
**ಆನದನುಣ್ಣದಿದ್ದಡೆ ಎನ್ನ ವಶವೆ ?**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಅರಿವು ಎನ್ನುವುದು ಒಂದು ಅವ್ಯಕ್ತ ತನು. ಮನವೆಂಬ ಮರೆವು ಕೂಡಾ ಒಂದು ಅವ್ಯಕ್ತ ತನು. ಇವೆರಡು ತನುಗಳು ಕಾಣುವ ಸ್ಥೂಲ ತನುಗಳಲ್ಲಿಯೇ ಇವೆ.

ಸ್ಥೂಲ ತನು ಮಾತ್ರ ಮನದಿಂದಾಗಿ ಒಳ್ಳೆಯದ್ದು ಕೆಟ್ಟದ್ದು ಎಂದು ಸಮಾಜದಲ್ಲಿಯ ಇತರ ತನುಗಳ ಮೂಲಕ ಕರೆಯಿಸಿಕೊಳ್ಳುತ್ತದೆ. ಹೀಗೆ ಕರೆಯಿಸಿಕೊಳ್ಳುವ ಮೂಲಕ ತನುವಿನ ಆಯುಷ್ಯ ಕಳೆದು ಹೋಗುತ್ತದೆ. ಆದರೆ ತನುವಿನ ಸತ್ಯ ತನುವಿಗೆ ಹೊಳೆಯದೆ ಹೋಗುತ್ತದೆ.

ತನು ಒಂದು ಉಪಕರಣ! ಅದು ಒಳ್ಳೆಯದೂ ಅಲ್ಲ; ಕೆಟ್ಟದ್ದೂ ಅಲ್ಲ, ಮನವೆಂಬುದು ಅರಿವಿನ ಛಾಯೆ; ಅದು ಸ್ವತಂತ್ರವಲ್ಲ. ಕೇಳಿ ಮುಟ್ಟಿ ಓದಿ ನೋಡಿ ರುಚಿಸಿ ಮೂಸಿಸುವ ಮೂಲಕ ಅರಿವು ಸಂಗ್ರಹ ಮಾಡಿಕೊಂಡಿದೆ. ಸಂಗ್ರಹವಾದ ಅರಿವನ್ನೇ ಮನ ತನುವೆಂಬ ಉಪಕರಣದ ಮೂಲಕ ಬಳಸಿ ತನುವಿಗೆ ಸುಖ ದುಃಖ ಉಂಟಾಗುವಂತೆ ಮಾಡುತ್ತದೆ. ಸಾತ್ವಿಕ ರಾಜಸ ತಾಮಸ ಗುಣಗಳ ಹಣೆಪಟ್ಟಿ ಕಟ್ಟಿ ಮನ ತನುವನ್ನು ಆಯಾ ಗುಣಗಳ ಮೂಲಕ ಕರೆಯುವಂತೆ ಮಾಡುತ್ತದೆ. ಹೀಗೆ ತನುವಿನ ನಿಜ ಸುಖ ತನುವಿಗೆ ಗೊತ್ತಾಗದೆ ಹಲವಾರು ಜನ್ಮಗಳು ಕಳಯುತ್ತವೆ. ಆದರೂ ಅರಿವಿನ ಅವ್ಯಕ್ತ ತನುವಿನ ಪರಿಚಯ ಮನಕ್ಕೆ ಆಗುವುದಿಲ್ಲ.

ಶ್ರೀಮಂತ, ಬಡವ, ಭಿಕ್ಷುಕ, ಹೆಣ್ಣು-ಗಂಡು, ಸ್ವಾಮಿ- ಗುರು, ಜಗದ್ಗುರು, ಅಧಿಕಾರಿ, ಶಾಸಕ, ಮಂತ್ರಿ, ಪ್ರಧಾನಿ, ರಾಷ್ಟ್ರಪತಿ, ಹಿಂದು, ಮುಸಲ್ಮಾನ, ಕ್ರೈಸ್ತ, ಬೌದ್ಧ, ಜೈನ, ಫಾರ್ಸಿ ಹೀಗೆ ಅನೇಕ ಪಾತ್ರಗಳ ಮೂಲಕ ತನು ಕಾಣಿಸಿಕೊಂಡರೂ ತನು ದುಃಖದಿಂದ ಮಾತ್ರ ಪಾರಾಗಿಲ್ಲ. ಇದು ಸತ್ಯವೆಂದು ಕೂಡಾ ತನುವಿಗೆ ತಿಳಿದಿದೆ. ಅನೇಕ ಪಾತ್ರಗಳಲ್ಲಿಯೂ ಸುಖದ ಹುಡುಕಾಟ ನಡೆದಿದೆಯೇ ಹೊರತು ಶಾಶ್ವತ ಪರಮ ಸುಖ ತನುವಿಗೆ ಸಿಕ್ಕಿಲ್ಲ.

ಪರಮ ಸುಖವನ್ನು ಎಲ್ಲಿಯೂ ಖರೀದಿಸಲು ಸಾಧ್ಯವಿಲ್ಲ. ಹೀಗಾಗಿ ಮನ ಸುಖಿಯಾಗಲು ಸಾಧ್ಯವೇ ಇಲ್ಲ. ಏಕೆಂದರೆ ಅದು ಸ್ವತಂತ್ರವಲ್ಲ; ಮನ ಬೆಳಕಿನಿಂದ ಹುಟ್ಟಿದ ನೆರಳು. ಅದು ಸ್ವತಹ ಬೆಳಕಾಗಲು ಸಾಧ್ಯವಿಲ್ಲ. ಬೆಳಕಿನ ದೇಹವೊಂದಿದೆ; ಅದೇ ಅರಿವಿನ ದೇಹ; ಮಹಾ ಜ್ಞಾನ ದೇಹ. ಮನವೆಂಬ ಕತ್ತಲ ದೇಹಕ್ಕೆ ತಾನು ಬೆಳಕಾಗಬೇಕೆಂದು ಇಚ್ಛೆಯಾದರೆ ಮಹಾಜ್ಞಾನವೆಂಬ ಬೆಳಕಿನ

ದೇಹದಲ್ಲಿ ಸಂಗಮವಾಗಬೇಕು. ಆಗ ಸ್ಥೂಲದೇಹ ಮಹಾಜ್ಞಾನದೇಹವಾಗಿ ಬೆಳಗುತ್ತದೆ. ವರ್ಧಮಾನ ಮಹಾವೀರನಾಗಿ ಬೆಳಗಿದಂತೆ. ಸಿದ್ಧಾರ್ಥ ಬುದ್ಧನಾಗಿ ಬೆಳಗಿದಂತೆ.

ಮನವೆಂಬ ಸೂಕ್ಷ್ಮದೇಹ ಸ್ಥೂಲದೇಹವನ್ನುಹಿಡಿದು ಅನೇಕ ಪಾತ್ರಗಳನ್ನು ಹಾಕಿದರೂ ಕೂಡಾ ಅವು ಪಾತ್ರಗಳೇ ಹೊರತು ನಿಜವಲ್ಲ. ಸ್ಥೂಲದೇಹದಲ್ಲಿಯೇ ಇರುವ ಅರಿವೆಂಬ ಜ್ಞಾನದೇಹ ಮನವೆಂಬ ಸೂಕ್ಷ್ಮದೇಹಕ್ಕೆ ಪರಿಚಯವಾಗದ ಹೊರತು ದೇಹಕ್ಕೆ ಸುಖ ದುಃಖಗಳ ಭಾದೆ ತಪ್ಪಿದ್ದಲ್ಲ.

ನನ್ನಲ್ಲಿಯೇ ಇರುವ ನಿನ್ನನ್ನು ನಾನು ಅರಿಯದಿದ್ದಕ್ಕಾಗಿ ನನಗೆ ನೀನು ಹಲವು ಜನ್ಮಗಳನ್ನು ಬರಿಸಿದೆ. ಇನ್ನು ನಾನು ನನ್ನಲ್ಲಿಯೇ ಇರುವ ನಿನ್ನನ್ನು ಅರಿತಿದ್ದೇನೆ; ಇನ್ನೂ ಏಕೆ ನನ್ನನ್ನು ಕಾಡುವೆಯಯ್ಯಾ. ನಿನ್ನನ್ನು ತಿಳಿಯದೆ ನಾನು ನಿನ್ನ ಮೇಲೆ ಹಲವು ಜನ್ಮಗಳವರೆಗೆ ಮುನಿಸಿಕೊಂಡಿದ್ದೆ; ನಾನು ನಿನ್ನನ್ನು ತಿಳಿದ ಮೇಲೆ ನೀನು ನನ್ನ ಮೇಲೆ ಮುನಿಸಿಕೊಳ್ಳುವುದೆ ತಂದೆ!

ನಿನ್ನನ್ನು ಅರಿಯದಿದ್ದಕ್ಕಾಗಿ ಹಲವಾರು ಜನ್ಮಗಳಲ್ಲಿ ನಾನು ಉಂಡ ನರಕ ಸಾಲದೆ ತಂದೆ! ಅದು ನೀನೂ ಬಲ್ಲೆ! ಇದು ತಿಳಿದೂ ತಿಳಿದೂ ನನ್ನನ್ನು ಕಾಡಬಹುದೆ?

ನಾನು ಬಂದ ಸುಖಂಗಳಲ್ಲಿ ನಿನ್ನನ್ನು ಅರಿಯದ ಕಾರಣ ನೀನಿಕ್ಕಿದ ನರಕದಲ್ಲಿ ನಾನಿದ್ದೆ. ಅದನುಣ್ಣದಿರಲು ನನ್ನ ವಶವೆ? ಹಾಗೆಯೇ ನಿನ್ನ ಜ್ಞಾನ ಸುಖವನ್ನು ನನಗುಣ್ಣಿಸು ದೇವನೇ ದೇವರ ದೇವನೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನೆ.

**107**

**ಅಯ್ಯಾ , ಹೊಟ್ಟೆ ಬೆನ್ನ ಮಚ್ಚಿದಂತೆ**
**ನಾ ನಿನ್ನ ಮಚ್ಚಿದೆನಯ್ಯಾ .**
**ಅಯ್ಯಾ , ನೀ ಬಾರಯ್ಯಾ**
**ನಿಮ್ಮ ಬರವ ಹಾರುತ್ತಿರ್ದೆನಯ್ಯಾ .**
**ನಿಮ್ಮ ಬರವ ಹಾರಿ ಹಾರಿ ಕಣ್ಮುಚ್ಚದೆನ್ನ ಮನವಯ್ಯ .**
**ಅಯ್ಯಾ , ನೀ ಬಾರಯ್ಯಾ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಹೊಟ್ಟೆ ಹೊರೆಯುವುದಕ್ಕಾಗಿ ಓದಿದೆ; ಹೊಟ್ಟೆ ಹೊರೆಯುವುದಕ್ಕಾಗಿ ರಾಜನಾದೆ; ಸೈನಿಕನಾದೆ; ಕಾಲಾಳಾದೆ; ಭಿಕ್ಷುಕನಾದೆ, ಬಡವನಾದೆ, ಶ್ರೀಮಂತನಾದೆ. ಹೊಟ್ಟೆ ಹೊರೆಯುವುದಕ್ಕಾಗಿಯೇ ಪಂಡಿತನಾದೆ; ಗುರುವಾದೆ, ಜಗದ್ಗುರುವಾದೆ. ಹಲವಾರು ಪುರಾಣ ಶಾಸ್ತ್ರ ವೇದ ಆಗಮ ಉಪನಿಷದ್‌ಗಳನ್ನು ಓದಿದೆ. ಹೊಟ್ಟೆ ಬೆನ್ನಿಗಾಗಿ ಹಲವಾರು ಜನ್ಮಗಳವರೆಗೆ ನಾನು ಇವುಗಳನ್ನು ಮೆಚ್ಚಿದೆ ತಂದೆ. ಆದರೂ ಅರಿವಿನ ದರುಶನವಾಗಲಿಲ್ಲ. ಏಕೆಂದರೆ ಇವುಗಳನ್ನು ಮೆಚ್ಚಿದಂತೆ ನಾನು ನಿನ್ನನ್ನು ಮೆಚ್ಚಲಿಲ್ಲ.

ಗಿಡ ಮರ ಬಳ್ಳಿ ಜಲಚರಗಳು ಪಶು ಪಕ್ಷಿ ಉರುಗ ಪ್ರಾಣಿಗಳಿಗೆ ಇಲ್ಲದ ಭಾದೆ ನನಗಾಯಿತು. ಏಕೆಂದರೆ ಹೊಟ್ಟೆ ಬೆನ್ನು ಮೆಚ್ಚಿದಂತೆ ನಾನು ನಿನ್ನನ್ನು ಮೆಚ್ಚಲಿಲ್ಲ. ನೀನೆಂದರೆ ಲೋಕ ತಿಳಿದಂತಹ ದೇವರು ನೀನಲ್ಲ. ಅನಂತಕಾಲ ಹೊರಗಿದ್ದ ದೇವರನ್ನು ದೇವರೆಂದು ಆರಾಧಿಸಿದರೂ ನೀನು ನನ್ನ ಹಸಿವಿನ ಅಜ್ಞಾನದ ಬಾಧೆಯನ್ನು ತೀರಿಸಲಿಲ್ಲ. ಹಿಂದೆ ಹಸಿವಿಗಾಗಿ ಅನಂತಕಾಲ ನಿನ್ನನ್ನು ಮೆಚ್ಚಿದೆ. ಇಂದು ಅರಿವಿನ ಹಸಿವಿಗಾಗಿ ನಿನ್ನನ್ನು ಮೆಚ್ಚಿದೆನಯ್ಯ .

ನೀನು ನನ್ನಲ್ಲಿಯೇ ಇರುವಿಯೆಂದು ಇಂದು ನನಗೆ ತಿಳಿದಿದೆ. ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಬಾರಯ್ಯ ನೀ ಬಾರಯ್ಯ ನಿಮ್ಮ ಬರುವಿಕೆಗಾಗಿ ನಾನು ಬಳಲುತ್ತಿದ್ದೇನೆ ಬಾರಯ್ಯ. ಬೇಗ ಬಾ ತಂದೆ. ಕಣ್ಮುಚ್ಚದೆ ಕಾಯುತ್ತಿದ್ದೇನೆ ಬೇಗ ಬಾರಯ್ಯ. ಈ ಪಶು ಪ್ರವೃತ್ತಿವುಳ್ಳ ತನುವನ್ನೇ ವಾಹನ ಮಾಡಿಕೊಂಡು ಸಿದ್ಧಪುರುಷನಂತೆ ತೋರಯ್ಯ ಮಲ್ಲಿನಾಥಯ್ಯ.

**108**

**ಅಯಿದಾರೇಳೆಂಟೆಂಬ ಬಲೆಯಲ್ಲಿ ಸಿಲುಕಿ**
**ಎಯ್ದೆ ಗಾರಾಗುತ್ತಿದ್ದೇನೆ**
**ಮೀರಲಾರೆನು ಕರ್ಮಗಳನು**
**ಗಾರು ಮಾಡಿಹವೆನ್ನ ಬೇರೆ ಮತ್ತೊಂದಳವೆ ?**
**ತೋರಾರುವ ಶ್ರುತಿಗಳಿಂದತ್ತತ್ತಲಾದ**
**ಮಹಾಘನ ನೀನು ನೀರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ತನುವನ್ನು ಸುಜ್ಞಾನದೆಡೆಗೆ ಕರೆದುಕೊಂಡು ಹೋಗಬೇಕಾದ ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಎಂಬ ಐದು ಜ್ಞಾನೇಂದ್ರಿಯಗಳು ನರಕಕ್ಕೆ ಕರೆದುಕೊಂಡು ಹೋದವು.

ತನುವಿಗೆ ಆದ ಗಾಯದ ಮೇಲೆ ಸಾಸಿವೆ ಹಿಟ್ಟು ಒರೆಸಿದಂತೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ತನುವನ್ನು ಕಾಡಿದವು. ಮೇಲೆ ಸಪ್ತವ್ಯಸನಗಳು ಅಂದರೆ ಮನ ವ್ಯಸನ, ಧನ ವ್ಯಸನ, ರಾಜ್ಯ ವ್ಯಸನ, ವಿಶ್ವ ವ್ಯಸನ, ಉತ್ಸಾಹ ವ್ಯಸನ, ಸೇವಕ ವ್ಯಸನಗಳು ಕೂಡಾ ತನುವನ್ನೇ ಕಾಡಿಗವು. ಇವುಗಳಲ್ಲದೆ ಬೇಟೆ, ಜೂಜು, ಹಗಲು ನಿದ್ರೆ, ಸ್ತ್ರೀ ಲಾಲಸೆ, ಮದ್ಯಪಾನ, ನೃತ್ಯ, ಗಾನಾಭಿರುಚಿಗಳ ಮೂಲಕ ಏಳು ವ್ಯಸನಗಳು ಕಾಡಿದವು.

ಕುಲಮದ, ಛಲಮದ, ಧನಮದ, ರೂಪಮದ, ಯೌವ್ವನಮದ, ವಿದ್ಯಾಮದ, ರಾಜಮದ, ತಪೋಮದಗಳೆಂಬ ಎಂಟು ಮದಗಳು ತನುವಿನಲ್ಲಿ ಹುಟ್ಟಿ ತನುವನ್ನೇ ಕಾಡಿದವು.

ಈ ಬಲೆಯಲ್ಲಿ ಸಿಲುಕಿ ತನು ವಿಲವಿಲನೆ ಒದ್ದಾಡುತ್ತಲಿದೆ. ಇವುಗಳನ್ನು ಮೆಟ್ಟಿ ನಿಲ್ಲಲು ತನುವಿಗೆ ಸಾಧ್ಯವಾಗುತ್ತಿಲ್ಲ. ಏಕೆಂದರೆ ಇವು ತನುವಿಗೆ ಬಾಧೆ ಕೊಡುವುದಲ್ಲದೆ ಸುಖವನ್ನೂ ಕೊಡುತ್ತಲಿವೆ. ಇದು ಅಜ್ಞಾನದ ಸುಖವೆಂದು ತನುವಿಗೆ ಗೊತ್ತಾಗುತ್ತಿಲ್ಲ. ಕ್ಷಣ ಕ್ಷಣಕ್ಕೂ ಘಾಸಿಗೊಳಿಸುವ ತನುವಿನ ಈ ಅಜ್ಞಾನವನ್ನು ಬೇರೆ ಮತ್ತೊಂದರಿಂದ ಬಿಡಿಸಿಕೊಳ್ಳಲು ಸಾಧ್ಯವೆ?

ಶಾಸ್ತ್ರದಿಂದ, ಶೃತಿ ಆಗಮ ವೇದ ಉಪನಿಷತ್ತುಗಳಿಂದ ಕಳೆದುಕೊಳ್ಳಬೇಕೆಂದು ಅವುಗಳನ್ನು ಹಗಲಿರಳೂ ಓದಲು ಹೋದರೆ ಮತ್ತೆ ಅವೇ ಗ್ರಂಥಗಳು ತನುವನ್ನು ಪಂಡಿತನೆಂದು ಶಾಸ್ತ್ರಿ ಎಂದು ಕಾಡುತ್ತವೆ !

ತನುವಿನಲ್ಲಿ ಜ್ಞಾನ ಸಂಗಮವಾಗಿದೆ; ಅಜ್ಞಾನ ಆವರಿಸಿದೆ. ತನುವಿನಿಂದಲೇ ಹುಟ್ಟಿದ ಅಜ್ಞಾನವನ್ನು ತನುವಿನಲ್ಲಿಯೇ ಸಂಗಮವಾದ ಮಹಾಜ್ಞಾನವೆಂಬ ಬ್ರಹ್ಮಾಸ್ತ್ರದಿಂದ ಸುಡಬಹುದೇ ಹೊರತು ತೋರಿಬರುವ ಶಾಸ್ತ್ರ ಪುರಾಣ ಶೃತಿ ಆಗಮುಗಳಿಂದ ಸುಡಲು ಬರುವುದಿಲ್ಲ.

ಮಹಾಘನ ನೀನು ನೀರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ :

ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಂದಲೇ ತನು ಜನ್ಮ ಪಡೆದಿದೆ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ತನುವೇ ಮರೆತುದಕ್ಕಾಗಿ ತನು

ಅಜ್ಞಾನದ ಬಲೆಯಲ್ಲಿ ಸಿಲಿಕಿದೆ.

ನೀರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ :

ಜಲಬಿಂದು ಜನ್ಮ ತಳೆದದ್ದು ಬಯಲಿನಿಂದ, ಬಯಲು ಜಲಜನಕವನ್ನು ಸೃಷ್ಟಿ ಮಾಡಿತು, ಆಮ್ಲಜನಕವನ್ನು ಸೃಷ್ಟಿಮಾಡಿತು. ಇವೆರಡನ್ನೂ ಕೂಡಿಸಿ ಬಯಲು ಅದರಲ್ಲಿ ಸಂಗಮವಾಗಿ ಜಲಬಿಂದುವಾಯಿತು. ಈ ಜಲವೇ ಗಟ್ಟಿಯಾಗಿ ಭೂಮಿಯಾಯಿತು, ಖನಿಜವಾಯಿತು, ಜಲ ಭೂಮಿಯ ಮೇಲೆ ಹರಿದು ಗಿಡ ಮರ ಬಳ್ಳಿ ಪಶು ಪಕ್ಷಿ ಉರಗ ಜಲಚರವಾಯಿತು. ನೀರಬಿಂದು ಗರ್ಭದಲ್ಲಿ ಹೊಕ್ಕು ತನುವಾಯಿತು. ಇದು ಬಯಲ ಲೀಲೆ; ತನುವಿನಲ್ಲಿ ತನ್ಮಯವಾದ ಬಯಲೇಶ್ವರನ ಲೀಲೆ, ಕಪಿಲಸಿದ್ಧ ಮಲ್ಲಿನಾಥನ ಲೀಲೆ. ಇದು ತನುವಿನ ಶುದ್ಧ ಜ್ಞಾನ. ಈ ಜ್ಞಾನ ತಿಳಿಯುವ ಶಕ್ತಿ ತನುವಿಗೊಂದೇ ಇದೆ. ಈ ಮಹಾಜ್ಞಾನವಿದ್ದೂ; ಅಜ್ಞಾನವನ್ನೇ ಬಳಸಿ ಅಜ್ಞಾನದೊಂದಿಗೆ ಸುಖಿಸಿ ಹಲವಾರು ಜನ್ಮಗಳವರೆಗೆ ಬಳಲಿ ಬೆಂಡಾಗುವ ದುಷ್ಟ ಶಕ್ತಿ ಕೂಡಾ ತನುವಿನಲ್ಲಿಯೇ ಇದೆ.

ತನುವಿನಲ್ಲಿ ಮಹಾಘನನಾದ ಸುಜ್ಞಾನವೆಂಬ ದೇವರೂ ಇದ್ದಾನೆ. ಆತನನ್ನು ಸಿದ್ಧರಾಮ ಶಿವಯೋಗಿ ನೀರಮಲ್ಲಯ್ಯನೆಂದು ಕರೆದಿದ್ದಾನೆ.

**109**

**ಅಯ್ಯೋ ಮಹಾದೇವ ಸುಮ್ಮನೇಕಿದ್ದಪೆ ಕರುಣೆ**
**ಮುಂಬಾಗಿಲಲು ಬಿದ್ದ ಪಶುವೈ.**
**ಓರಂತೆ ಎನ್ನುವನು ಆರಯ್ಯದಿದ್ದಡೆ ಹಾನಿ ನಿನಗಪ್ಪುದೈ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಆಧ್ಯಾತ್ಮವೆನ್ನುವುದು ಅಮೂರ್ತರೂಪದ ಒಂದು ವಿಜ್ಞಾನ. ಇದರ ಭಾಷೆಯೇ ಬೇರೆ. ಅಮೂರ್ತರೂಪವೆಂದರೆ ತನ್ನ ಸ್ವಸ್ವರೂಪ. ಸ್ವರೂಪವೇ ಬೇರೆ; ರೂಪವೇ ಬೇರೆ. ರೂಪ ಜ್ಞಾನದ ಅರಿವು ಸಕಲರಿಗೂ ಇದೆ. ರೂಪದಲ್ಲಿಯೇ ಸಂಗಮವಾದ ಸ್ವರೂಪದ ಅರಿವು ಸಕಲ ರೂಪಗಳಿಗೂ ಇಲ್ಲ. ಅಂದರೆ ಸಕಲರಿಗೂ ಇಲ್ಲ. ಬಯಕೆ ಹೊಂದಿದ ಕೆಲವರಿಗೆ ಮಾತ್ರ ಸ್ವರೂಪದ ಮೇಲ್ಪದರ ಕಂಡುಬರುವುದು. ಹಾಗೆಯೇ ಆಳವಾಗಿ ತನ್ನ ಸ್ವರೂಪದ ಬಗ್ಗೆ ಅಧ್ಯಯನ ಮಾಡಿದಾಗ ಆ ಸ್ವರೂಪ ಜ್ಞಾನವೇ ತಾನಾಗುವುದರಲ್ಲಿ ಸಂದೇಹವೇ ಇಲ್ಲ.

ರೂಪವೆಂದರೆ ನಾನು; ನನ್ನ ದೇಹ. ಸ್ವರೂಪವೆಂದರೆ ನನ್ನ ದೇಹದಲ್ಲಿಯೇ ಸಂಗಮವಾದ ಮತ್ತೊಂದು ಅರಿವಿನ ದೇಹ. ಆ ದೇಹಕ್ಕೆ ರೂಪವಿಲ್ಲ. ರೂಪವಿಲ್ಲದ ಆ ದೇಹಕ್ಕೆ ಸಿದ್ಧರಾಮ ಶಿವಯೋಗಿ ತನ್ನ ಈ ವಚನದಲ್ಲಿ ಮಹಾದೇವ ಎಂದು ಹೆಸರಿಸಿದ್ದಾನೆ.

ಅಯ್ಯೋ ಮಹಾದೇವನೆ ಗುರುದೇವನ ಕರುಣೆಯಿಂದ ನೀನು ಯಾರೆಂಬುದು ನನಗೆ ತಿಳಿಯಿತು. ತಿಳಿದ ಮೇಲೆಯೂ ನೀನು ನನ್ನ ಅಜ್ಞಾನವನ್ನು ನಾಶ ಮಾಡಲಿಲ್ಲ. ಇದುವರೆಗೂ ಸುಮ್ಮನಿದ್ದೆಯೇಕೆ ? ಕರುಣಿಸು ಕರುಣಾಕರನೆ.

ಶಿವ ನೀನು. ಸರ್ವರ ಈಶ್ವರನೂ ನೀನೇ. ಸರ್ವೇಶನೂ ನೀನೆ. ನಿನ್ನ ದ್ವಾರ ಬಾಗಿಲ ಮುಂದೆ ನಿನಗಾಗಿ ಕಾದು ಕುಳಿತ ಪಶು ನಾನು. ಪಶುಪತಿ ನೀನು.

ಅಜ್ಞಾನದ ಕೆಸರಿನಲ್ಲಿ ಬಿದ್ದ ಬಡ ಪಶು ನಾನು. ಬೇಲಿ ಹಾರಿ ವಿಷಯವೆಂಬ ಹಸರನ್ನು

ಮೇಯಲು ಬಂದ ತುಡುಗುಣಿ ಪಶು ನಾನು. ನನ್ನ ಹಿಡಿದು ಬಡಿಯದ ಮುನ್ನ ತಂದೆ ನಿನ್ನ ಬಯ್ಯದಂತೆ ಮಾಡು. ಏಕೆಂದರೆ ಪಶುವಿನ ತಂದೆ ನೀನು. ನನಗೆ ಜನ್ಮ ಕೊಟ್ಟ ದೇವರು ನೀನು. ನಾನು ಬೇಲಿ ಹಾರಿ ಹಸರು ಮೇಯ್ದರೆ ನನ್ನನ್ನು ಹಿಡಿದವ ನನಗೆ ಜನ್ಮಕೊಟ್ಟ ನಿನ್ನನ್ನು ಬಯ್ಯುತ್ತಾನೆ. ನನ್ನ ಮೈದಡವಿ ನನಗೆ ಅರಿವಿನ ಜನ್ಮ ನೀಡಿ ಕರುಣಿಸದಿದ್ದರೆ ಹಾನಿ ನಿನಗಪ್ಪುದು ತಂದೆ. ಕಪಿಲಸಿದ್ಧ ಮಲ್ಲಿಕಾರ್ಜುನನೆ.

ನನ್ನ ಪಶು ಪ್ರವೃತ್ತಿಗೆ ನಿವೃತ್ತಿಯ ನೀಡಿ ಆಶೀರ್ವದಿಸು ಮಹಾದೇವನೆ. ಸುಮ್ಮನೇಕಿರುವಿ ಕರುಣಿ. ನಿನ್ನ ಮುಂಬಾಗಿಲಲು ಬಿದ್ದ ಪಶುವು ನಾನು. ಪಶುಪತಿ ನೀನು.

**110**

**ಅರಣ್ಯದೊಳಗರಸಿಯರ ಪ್ರಾಣವಲ್ಲಭರು ಬಂದುಣುತ್ತೈದಾರೆ,**
**ನೀ ಬೇಗನೇಳೆಂದಡೆ ಏಳದ ಮೊದಲೆ ಉಂಡ,**
**ನಮ್ಮ ಕಪಿಲಸಿದ್ಧ ಮಲ್ಲಿನಾಥಯ್ಯ.**

ದೇಹವನ್ನು ಕುರುಕ್ಷೇತ್ರವನ್ನಾಗಿಸಿದರು ವ್ಯಾಸ ಮಹರ್ಷಿಗಳು. ಕುರುಕ್ಷೇತ್ರವನ್ನೇ ಧರ್ಮಕ್ಷೇತ್ರವನ್ನಾಗಿಸಿ; ಅದಕ್ಕೆ ಶ್ರೀಕೃಷ್ಣನನ್ನು ಒಡೆಯನನ್ನಾಗಿಸಿದರು. ಮನವನ್ನು ಅರಸಿಯನ್ನಾಗಿಸಿ ಆ ಅರಸಿಗೆ ಐವರು ಅರಸರನ್ನು ಒಡಲೊಳಗೆ ಇಟ್ಟರು. ಇವರನ್ನು ವ್ಯಾಸ ಮಹರ್ಷಿ ಪಾಂಡವರು ಎಂದು ಕರೆದರು. ಮನವೆಂಬ ಅರಸಿಯನ್ನು ದ್ರೌಪದಿ ಎಂದು ಕರೆದರು. ಒಡಲೊಳಗೆ ಹುಟ್ಟಿದ ಅರಿಷಡ್ವರ್ಗಗಳನ್ನು ಅಷ್ಟ ಮದಗಳನ್ನು ಸಪ್ತ ವ್ಯಸನಗಳನ್ನು ಕೌರವರೆಂದು ಕರೆದರು. ಕೌರವರಿಗೂ ಪಾಂಡವರಿಗೂ ಯುದ್ಧ ನಡೆದಿದೆ. ದ್ರೌಪದಿಯೇ ಇದಕ್ಕೆ ಸೂತ್ರದಾರಳು. ಒಡಲೇ ಈ ಯುದ್ಧದ ಕುರುಕ್ಷೇತ್ರ. ಶ್ರೀಕೃಷ್ಣನೇ ಇದಕ್ಕೆ ಸಾಕ್ಷಿದಾರ. ಧರ್ಮಕ್ಷೇತ್ರದ ಒಡೆಯ. ಒಡಲ ಸೋಂಕದಂತೆ ಒಡಲ ಬೆಳಗುವ ಒಡಲೊಡೆಯ.

ಹೀಗೆ ಒಡಲನ್ನು ಕುರುಕ್ಷೇತ್ರವೆಂದು, ಧರ್ಮಕ್ಷೇತ್ರವೆಂದು ಪಾಂಡವರು ಕೌರವರನ್ನು ಒಡಲೊಳಗೆ ಇಟ್ಟು ದ್ರೌಪದಿಯನ್ನೇ ಈ ಯುದ್ಧಕ್ಕೆ ಮುಖ್ಯಸ್ಥಳನ್ನಾಗಿ ಐವರು ಅರಸರಿಗೆ ಸತಿಯನ್ನಾಗಿಸಿದರು. ಪಂಚ ಜ್ಞಾನೇಂದ್ರಿಯಗಳೇ ಪಾಂಡವರ ವಾಸ ಸ್ಥಾನವಾಯಿತು.

ಸಿದ್ಧರಾಮ ಶಿವಯೋಗಿಗಳು ತಮ್ಮ ವಚನದಲ್ಲಿ ಒಡಲನ್ನು ಅರಣ್ಯವಾಗಿಸಿ ಅದರೊಳಗೆ ಅರಸಿಯನ್ನು ಇಟ್ಟಿದ್ದಾರೆ. ಆ ಅರಸಿಯರ ಸುಖವನ್ನು ಉಣ್ಣಲು ಪ್ರಾಣವಲ್ಲಭರನ್ನು ಇಟ್ಟಿದ್ದಾರೆ. ಅರಸಿಯರು ಹಲವರು; ಪ್ರಾಣವಲ್ಲಭರು ಹಲವರು.

ಐದು ಜ್ಞಾನೇಂದ್ರಿಯಗಳಲ್ಲಿ ಐದು ಅರಸಿಯರು. ಐದು ಜ್ಞಾನೇಂದ್ರಿಯಗಳಲ್ಲಿ ಐದು ಜನ ವಲ್ಲಭರು :

ಈ ಐವರಿಗೂ ಕಪಿಲಸಿದ್ಧ ಮಲ್ಲಿಕಾರ್ಜುನನು ಒಬ್ಬನೆ. ಮನವೆಂಬ ಅರಸಿ ನೋಡುವ ಮೂಲಕ ದೇಹಕ್ಕೆ ಸುಖ ಕೊಟ್ಟರೆ; ಆ ಕಣ್ಣಲ್ಲಿಯೇ ಅರಸಿಯ ಸುಖವನ್ನು ಖಂಡಿಸಿ ಸತ್ಯದ ದೃಶ್ಯದ ಮೂಲಕ ದೇಹಕ್ಕೆ ಪರಮ ಸುಖ ನೀಡುತ್ತಾನೆ ಪ್ರಾಣವಲ್ಲಭ. ಹೀಗೆ ಕಿವಿ ಮೂಗು ಚರ್ಮ ನಾಲಿಗೆಯ ಸುಳ್ಳು ಸುಖವನ್ನು ಸುಟ್ಟು ತನ್ನ ನಿಜ ದರ್ಶನವನ್ನು ಆಯಾ ಜಾಗದಲ್ಲಿಯೇ ಮಾಡಿಸುತ್ತಾನೆ.

ಈ ಸುಖ ದುಃಖಗಳನ್ನು ಹಾಗೂ ಪರಿಪೂರ್ಣ ಪರಮ ಸುಖದ ಅನುಭವವನ್ನು ಮನವೆಂಬ ಅರಸಿಯರಿಗೆ ಉಣ್ಣಿಸುವ ಮೂಲಕ ತನ್ನಂತೆ ಮಾಡಿಕೊಳ್ಳುತ್ತಾನೆ; ಕಪಿಲಸಿದ್ಧ ಮಲ್ಲಿಕಾರ್ಜುನ.

111

**ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ**
**ಎಲೆ ಅಯ್ಯಾ, ನಿಮ್ಮ ಕಂಡು ಕಂಗಳು ಕಡೆಗೋಡಿವರಿದುವಯ್ಯಾ**
**ಎನ್ನ ಮನಕ್ಕೆ ಮನ ವೇದ್ಯವಾದಡೆ ಕೈಮರದೆನೆಲೆ ಆಹಾ, ಅಯ್ಯಾ**
**ಕಪಿಲಸಿದ್ಧ ಮಲ್ಲಿನಾಥನ ಕಂಡ ಸುಖವು ಆರಿಗೆಯೂ ಇಲ್ಲ.**

ನೀರಿಲ್ಲದೆ ಬಾಯಾರಿ ಬಿರ್‍ರನೆ ಬಿರುಕುಗೊಂಡ ಕೆರೆಗೆ ತೊರೆ ಬಂದು ಹಾಯ್ದಡೆ ಅದಕೆ ದುಃಖವಾಗಲು ಸಾಧ್ಯವೇ, ಅಪರಿಮಿತ ಸುಖವಲ್ಲದೆ! ನಿಮಗಾಗಿ ಅನೇಕ ಯುಗಂಗಳವರೆಗೆ ಕಾದು ಕಾದು ಸುಸ್ತಾದ ಕಂಗಳಿಗೆ ನೀವು ದರುಶನವಿತ್ತರೆ ನಿಮ್ಮ ಕಂಡು ಕಂಗಳು ಕಡೆಗೋಡಿವರಿದುವಯ್ಯಾ. ಪರಮಾನಂದದಲ್ಲಿ ಮುಳುಗಿ ಅಪರಿಮಿತ ಆನಂದದಿಂದ ಕುಣಿಕುಣಿದಾಡಿದೆ ತಂದೆ.

''ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ ಕಡೆಗೋಡಿವರಿದವೆನಗಯ್ಯಾ, ಎನ್ನ ಅಶ್ರುಜಲಂಗಳು! ಆಲಿಕಲ್ಲ ರೂಹಿನಂತೆ, ಅರಗಿನ ಪುತ್ಥಳಿಯಂತೆ ತನು ಪುಳಕಿತವಾದ ಬೆಮರ ಬಿಂದುಗಳೆಲ್ಲಾ! ಕೂಡಲಸಂಗನ ದರ್ಶನ ಸ್ಪರ್ಶನದಿಂದ ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ''

ಒಂದು ಸಿದ್ಧರಾಮ ಶಿವಯೋಗಿಗಳ ಸೂತ್ರವಾದರೆ ಮತ್ತೊಂದು ಬಸವಣ್ಣನವರ ಸೂತ್ರ. ಇವರಿಬ್ಬರೂ ಅರಿವೆಂಬ ಗುರುದೇವನನ್ನು ಒಲಿಸಿಕೊಂಡು ಆ ಗುರುದೇವರೇ ಅವರಾಗಿ; ಮನವೆಂಬ ಮರೆವಿನ ಅಜ್ಞಾನವನ್ನು ಕಳೆದುಕೊಳ್ಳುವ ಸುಜ್ಞಾನ ಸೂತ್ರವನ್ನು ಲೋಕಕ್ಕೆ ನೀಡಿದ್ದಾರೆ.

ಲೋಕದ ಅಜ್ಞಾನ ನಮಗೆ ಗೊತ್ತಾಗುತ್ತದೆ. ಆ ಅಜ್ಞಾನದ ವಿರುದ್ಧ ಹೋರಾಟ ಮಾಡುವ ಹೋರಾಟಗಾರರು ಹುಟ್ಟಿಕೊಳ್ಳುತ್ತಾರೆ. ಇದು ಸುಲಭ. ಪ್ರಪಂಚದ ಸಕಲ ದೇಶಗಳಲ್ಲಿಯೂ ಈ ಕೆಲಸ ನಡೆದಿದೆ.

ಆದರೆ ತನ್ನ ಅಜ್ಞಾನದ ವಿರುದ್ಧ ತಾನೇ ಹೋರಾಟ ಮಾಡುವ ಹೋರಾಟಗಾರ ಹುಟ್ಟುವುದು ಸುಲಭದ ಮಾತಲ್ಲ. ಇಂತಹ ಒಂದು ಉತ್ ಕ್ರಾಂತಿ ಹನ್ನೆರಡನೇ ಶತಮಾನದಲ್ಲಿ ಕಲ್ಯಾಣದಲ್ಲಿ ಮಾತ್ರ ನಡೆಯಿತು. ಪ್ರಪಂಚದ ಯಾವ ಮೂಲೆಯಲ್ಲಿಯೂ ಇಂತಹ ಉತ್ಕ್ರಾಂತಿ ನಡೆದ ಇತಿಹಾಸವಿಲ್ಲ.

ತನ್ನ ಅಜ್ಞಾನದ ವಿರುದ್ಧ ತಾನು ಹೋರಾಟ ಮಾಡಿದಾಗ ಅದು ತನಗೆ ಸಫಲವಾದಾಗ; ತನ್ನ ತನುವಿನಲ್ಲಿಯೇ ಸಂಗಮವಾದ ಮಹಾಜ್ಞಾನ ತನಗೆ ಒಲಿಯುತ್ತದೆ. ಹಾಗೆ ಒಲಿದ ಜ್ಞಾನದಿಂದ ತನಗೆ ಉಂಟಾದ ಪರಮ ಸಂತೋಷವನ್ನು ಸಿದ್ಧರಾಮ ಶಿವಯೋಗಿಗಳು ಹಾಗೂ ಬಸವಣ್ಣನವರು ಓದುಗರಿಗೆ ಹಂಚಿಕೊಂಡಿದ್ದಾರೆ.

ಸಸಿ ಪ್ರೌಢಾವಸ್ಥೆಗೆ ಬಂದಾಗ ಹೂ ಬಿಡುವುದು ಸಹಜ. ಸಸಿ ಹೂ ಬಿಡಲು ಯಾವ ಕೃಷಿಯನ್ನೂ ಮಾಡಬೇಕಿಲ್ಲ. ಆದರೆ ತನು ತನ್ನಲ್ಲಿಯೇ ಬಚ್ಚಿಟ್ಟುಕೊಂಡ ಸುಜ್ಞಾನದ ಹೂ ಅರಳಬೇಕಾದರೆ ಅದು ಸುಲಭ ಸಾಧ್ಯವಲ್ಲ. ಅನೇಕ ಕಾಲಗಳವರೆಗೆ ಜ್ಞಾನದ ಹೂ ಬಿಡುವುದಕ್ಕಾಗಿ ಮನ ಮತ್ತು ತನುಗಳೆರಡೂ ಕೃಷಿ ಮಾಡಬೇಕಾಗುತ್ತದೆ. ಬ್ರಹ್ಮ ಕಮಲ ಎಂಬ ಸಸಿ ಹನ್ನೆರಡು ವರ್ಷಗಳಿಗೊಮ್ಮೆ ಹೂ ಬಿಡುತ್ತದೆ. ಇದು ಸಹಜ. ಆದರೆ ತನುವಿನಲ್ಲಿ ಸಂಗಮವಾದ ಬ್ರಹ್ಮಜ್ಞಾನದ ಹೂ ಅರಳಬೇಕಾದರೆ ತನುವನ್ನು ಆವರಿಸಿಕೊಂಡ ಭ್ರಮೆಯ ಮೂಲಕವೇ ಬ್ರಹ್ಮನತ್ತ ಪಯಣಿಸುವ ಕಾಯಕ ಈ ಕಾಯದಿಂದಲೇ ಕೈಗೊಂಡಾಗ

ಭ್ರಮೆಯೆಂಬ ಮೃಗಜಲ ಬ್ರಹ್ಮನಲ್ಲಿ ಕರಗಿ ಬ್ರಹ್ಮನೇ ತಾನಾಗುತ್ತದೆ.

ಮನವೆಂಬ ಭ್ರಮೆಗೆ ಬ್ರಹ್ಮ ಒಲಿದಾಗ ಆಲಿಕಲ್ಲ ರೂಹಿನಂತೆ, ಅರಗಿನ ಪುತ್ಥಳಿಯಂತೆ ಮನದಿಂದಾದ ಭ್ರಮೆಯ ತನು ಕರಗಿ ಕಡೆಗೋಡಿ ವರಿದಂತಾಗುತ್ತವೆ ಅಶ್ರುಜಲಂಗಳು! ಅರಿವೆಂಬ ಗುರು ದೇವನ ದರುಶನ ಸ್ಪರ್ಶನದಿಂದ.

ಮನಕ್ಕೆ ಮನ ವೇದ್ಯವಾಗಿ ಮೈಮರೆದು ಆಹಾ, ಅಯ್ಯಾ ಕಪಿಲಸಿದ್ಧ ಮಲ್ಲಿನಾಥನ ಕಂಡ ಸುಖವು ಕೃಷಿ ಮಾಡದ ಹೊರತು ಆರಿಗೆಯೂ ಇಲ್ಲ. ಕಾಯ ಕಾಯಕ್ಕಂಟಿದ ಮಾಯೆಯನ್ನು ಕಾಯದ ಮೂಲಕವೇ ಕಳೆದುಕೊಳ್ಳುವ ಈ ಉತ್ಕ್ರಾಂತಿ ಕಾಯದಲ್ಲಿಯೇ ಪ್ರಾರಂಭವಾಗುವುದೆಂದರೆ ಕಾಯದ ಭಾಗ್ಯವೇ ಸರಿ. ಯಾವ ಓದುಗ ಕಾಯಕ್ಕೆ ಶರಣರ ಈ ಭಾಗ್ಯ ದೊರೆಯುವುದೋ ಆ ಕಾಯವೇ ಧನ್ಯ.

**112**

**ಅರಿತವನೆಂತು ಸತ್ತನು ? ಅರಿತವನೆಂತು ಹುಟ್ಟಿದನು ?**
**ಅರಿತವನೆಂತು ಅಘೋರಪಾಶಕ್ಕೆ ಒಳಗಾದನು ?**
**ಅರಿತವನೆ ಚಿರಂಜೀವಿ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನ್ನನ್ನು ತಾನು ಅರಿಯದವನಿಗೆ ಸಾವಿದೆ; ನೋವಿದೆ; ಹುಟ್ಟು ಇದೆ. ಮತ್ತೆ ಮತ್ತೆ ಹುಟ್ಟುತ್ತಾನೆ; ಮತ್ತೆ ಮತ್ತೆ ಸಾಯುತ್ತಾನೆ. ಹುಟ್ಟಿದಂದಿನಿಂದ ಸಾಯುವವರೆಗೆ ಅನೇಕ ಬಾರಿ ಬಳಲುತ್ತಾನೆ. ಸುಖ ದುಃಖಗಳನ್ನು ಹೆಗಲ ಮೇಲೆ ಹೊತ್ತುಕೊಂಡು, ಸಾವು ಇಲ್ಲದ ಪರಮಸುಖವನ್ನು ಹೊಂದದೆ ತನ್ನ ಇಹಲೋಕದ ಯಾತ್ರೆ ಮುಗಿಸುತ್ತಾನೆ.

ಅರಿತವನಿಗೆ ಸಾವಿಲ್ಲ ; ಅರಿತವನಿಗೆ ಹುಟ್ಟಿಲ್ಲ ; ಅರಿತವನಿಗೆ ಅಘೋರ ಪಾಶವಿಲ್ಲ; ಅರಿತವನೇ ಚಿರಂಜೀವಿ ಎಂದು ಸಿದ್ಧರಾಮ ಶಿವಯೋಗಿಗಳು ತಮ್ಮ ವಚನದಲ್ಲಿ ದಾಖಲಿಸಿದ್ದಾರೆ.

ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಚೆಲುವಂಗೆ ಆನೊಲಿದೆನವ್ವಾ. ಸಾವ ಕೆಡುವ ಗಂಡರ ಹೊಯ್ದು ಒಲೆಯೊಳಗಿಕ್ಕು ಎಂದು ಅಕ್ಕಮಹಾದೇವಿ ಹೇಳಿದ್ದಾಳೆ.

ಸಾವು ನೋವುಗಳೇ ಇಲ್ಲದ ಅಂದರೆ ಜನನ ಮರಣಗಳಿಲ್ಲದ ಪರಮಾನಂದದ ಸುಖ ತನುವಿನಲ್ಲಿ ತನ್ಮಯವಾಗಿದೆ ಎನ್ನುವ ರಹಸ್ಯ ಅರಿತವನೆಂತು ಸತ್ತನು? ಎನ್ನುವ ಪ್ರಶ್ನಾರ್ಥಕ ಮಾತಿನಲ್ಲಿ ಅಡಗಿದೆ.

ತನ್ನನ್ನು ತಾನು ಅರಿತರೆ ತನಗೆ ಸಾವಿಲ್ಲ; ತನ್ನನ್ನು ತಾನು ಅರಿತರೆ ತನಗೆ ಹುಟ್ಟಿಲ್ಲ; ತನ್ನನ್ನು ತಾನು ಅರಿತರೆ ತಾನು ಅಘೋರಪಾಶಕ್ಕೆ ಒಳಗಾಗನು. ಅರಿತವನೇ ಚಿರಂಜೀವಿ ನೋಡಾ ಎಂದು ಖಚಿತವಾಗಿ ಹೇಳಿದರು ಕೂಡಾ ನಮ್ಮನ್ನು ನಾವು ಅರಿಯಲು ನಮಗೆ ಸಾಧ್ಯವಾಗಿಲ್ಲ.

ನಮ್ಮನ್ನು ನಾವು ಅರಿತರೆ ನಮಗೆ ದುಃಖವಿಲ್ಲ ಸಾವಿಲ್ಲ ಎನ್ನುವುದಾದರೆ ನಮ್ಮನ್ನು ನಾವು ಅರಿಯುವ ಬಗೆ ಹೇಗೆ ? ಅದನ್ನು ತಿಳಿಸಿಕೊಡುವವರು ಯಾರು ? ಮಠಾಧೀಶರು ತಿಳಿಸುತ್ತಾರೋ ಮೌಲ್ವಿಗಳು ತಿಳಿಸುತ್ತಾರೊ ಚರ್ಚ್‌ನಲ್ಲಿರುವ ಫಾದರ್‌ಗಳು ತಿಳಿಸುತ್ತಾರೊ ಹೇಗೋ ಎಂದು ನಮಗೆ ಗೊತ್ತಿಲ್ಲ.

ನಮ್ಮ ದೇಹದಲ್ಲಿರುವ ಅರಿವಿನ ರಹಸ್ಯ ಧರ್ಮಾಧಿಕಾರಿಗಳಿಗೆ ಗೊತ್ತಾಗಬೇಕಲ್ಲ. ಅವರಿಗೆ

ದೇಹವನ್ನು ಹಿಂದುವಾಗಿಸುವುದು ಗೊತ್ತು, ಮುಸಲ್ಮಾನನಾಗಿಸುವುದು ಗೊತ್ತು, ಕ್ರೈಸ್ತ ಬೌದ್ಧ ಜೈನನಾಗಿಸುವುದು ಗೊತ್ತು. ಹುಟ್ಟು ಸಾವುಗಳಿಲ್ಲದ ಪರಮ ರಹಸ್ಯ ದೇಹದಲ್ಲಿ ಸಂಗಮವಾಗಿದೆ; ಅದನ್ನು ಹೀಗೆ ಗೊತ್ತು ಮಾಡಿಕೊಳ್ಳಬಹುದೆಂದು ಯಾವ ಅಧಿಕಾರಿಯೂ ಹೇಳುವುದಿಲ್ಲ. ಏಕೆಂದರೆ ಸ್ವತಃ ಅಧಿಕಾರಿಯೇ ಕಂಡುಕೊಂಡಿರುವುದಿಲ್ಲ. ಹಾಗೆ ಕಂಡುಕೊಂಡವನು ಅಧಿಕಾರಿಯಾದರೂ ಯಾಕೆ ಆಗುತ್ತಾನೆ? ಅಧಿಕಾರ ಎನ್ನುವುದು ಉಪ ಜೀವನದ ಮಾರ್ಗ! ಊಟಕ್ಕಾಗಿ ಅಧಿಕಾರಿಯಾದವನಿಗೆ ಪರಮ ಸುಖದ ರಹಸ್ಯವಾದರೂ ಯಾಕೆ ಬೇಕು?

ಹೀಗಾಗಿ ಜನನ ಮರಣಗಳಿಲ್ಲದ ಪರಮ ಸುಖದ ರಹಸ್ಯ ಆಯಾ ದೇಹಗಳಲ್ಲಿಯೇ ಉಳಿದು; ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಿಂದ ಸಪ್ತ ವ್ಯಸನಗಳಿಂದ ಅಷ್ಟ ಮದಗಳಿಂದ ದೇಹ ಬಳಲುತ್ತಿರುವುದು ದೇಹದಿಂದಲೇ ದೇಹಕ್ಕೆ ಕಂಡು ಬರುತ್ತದೆ.

ದೇಹದಲ್ಲಿ ಸಂಗಮವಾದ ಅರಿವಿನ ಪರಮಸುಖ ದೇಹಕ್ಕೆ ಬಳಕೆಯಾಗದೆ ದೇಹ ಕಡುಬಡವನಾಗಿಯೇ ಉಳಿದಿದೆ. ದೇಹ ತಾನು ನಿರ್ಮಿಸಿಕೊಂಡ ಕರೆನ್ಸಿಯಿಂದ ಶ್ರೀಮಂತನಾಗಿರಬಹುದು, ಚಿನ್ನ ಆಭರಣಗಳಿಂದ, ಭೂಮಿಯಿಂದ, ಪಡೆದ ಪದವಿಯಿಂದ, ಅಧಿಕಾರದಿಂದ ಶ್ರೀಮಂತನಾಗಿರ ಬಹುದು; ಆದರೆ ಸಾವು ನೋವುಗಳಿಲ್ಲದ ಪರಮ ಸುಖದಿಂದ ವಂಚಿತವಾಗಿದೆ.

ಹಣ ಆಭರಣ ಭೂಮಿ ಅಧಿಕಾರ ಪದವಿಗಳು ದೈಹಿಕ ಸುಖ; ಇವು ದೇಹದಲ್ಲಿ ಉಂಟಾದ ದುಃಖವನ್ನು ದೂರ ಮಾಡುವುದಿಲ್ಲ. ಬದಲಾಗಿ ದೇಹದ ದುಃಖ ಇವುಗಳಿಂದಲೇ ಉಂಟಾಗುತ್ತದೆ. ಆದರೂ ದೇಹ ಇವುಗಳನ್ನು ಪಡೆದು ಇವುಗಳ ಮೂಲಕ ಸುಖಿಸುವುದಕ್ಕಾಗಿ ಹಗಲಿರುಳೆನ್ನದೆ ದುಃಖಿಸುತ್ತದೆ. ಸಾಸಿವೆಯಷ್ಟು ಸುಖಕ್ಕಾಗಿ ಸಾಗರದಷ್ಟು ದುಃಖವನ್ನು ದೇಹವೇ ಬರ ಮಾಡಿಕೊಳ್ಳುತ್ತದೆ. ದೇಹದಲ್ಲಿಯೇ ಸಂಗಮವಾದ ಜನನ ಮರಣಗಳಿಲ್ಲದ ಅರಿವಿನ ಪರಮ ರಹಸ್ಯವನ್ನು ಅರಿಯುವುದಕ್ಕಾಗಿ ದೇಹವೇ ಇಚ್ಛಿಸುವುದಿಲ್ಲ.

ದೇಹದಲ್ಲಿ ಅಪಾರವಾದ ಅರಿವಿನ ಶ್ರೀಮಂತಿಕೆ ಇದೆ. ಈ ಅರಿವನ್ನೇ ಪೂರ್ವಜರು 'ಗುರು' ಎಂದು ಗುರುತಿಸಿದರು. ಗುರುದೇವನೆಂದು ಕರೆದರು. ಈ ಗುರುದೇವನನ್ನೇ 'ಮಹಾದೇವ' ಎಂದು ಕರೆದರು. ಈ ಮಹಾದೇವನನ್ನೇ 'ಸದಾಶಿವ' ಎಂದು ಕರೆದರು. ಈ ಸದಾಶಿವನನ್ನೇ ಸಾಕ್ಷಾತ್ 'ಪರಬ್ರಹ್ಮ' ಎಂದು ಕರೆದರು.

'ಅಲ್ಲಾ' ಎಂದು ಕರೆದರು. 'ಗಾಡ್' ಎಂದು ಕರೆದರು. 'ಬುದ್ಧ' ಎಂದು, 'ಜಿನ' ಎಂದು ಕರೆದರು. ಬಸವಣ್ಣನವರು ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನೇ ಲಿಂಗವೆಂದು, ಕೂಡಲಸಂಗಯ್ಯನೆಂದು ಕರೆದರು. ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನ ಸಾವು ನೋವುಗಳಿಲ್ಲದ ಜನನ ಮರಣಗಳಿಲ್ಲದ ಚಿರಂಜೀವಿ ನೋಡಾ ಎಂದು ಪರಮಾನಂದದಿಂದ ನುಡಿದರು.

ಶರಣರು ಅರಿತವರು. ದೇಹದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಶರಣು ಹೋದವರು. ಕ್ರಿಸ್ತ ಕ್ರಿಷ್ಣ ಪೈಗಂಬರರು ಬಸವಾದಿ ಶರಣರು ಬುದ್ಧ ಮಹಾವೀರ ನಿಜಗುಣರು ನಾಗಭೂಷಣ ವಿದ್ಯಾನಂದಾದಿ ಶರಣರು ಅರಿತವರು. ಅರಿತರಿತು ಅರಿವೆಂಬ ಗುರುದೇವನಿಗೆ ಶರಣು ಹೋಗಿ ಆ ಗುರುದೇವನೇ ತಾವಾದವರು.

ಅರಿವೇ ಗುರು ! ಆ ಗುರುದೇವನಿಗೆ ಸಾವಿಲ್ಲ. ಆ ಗುರುದೇವನನ್ನು ತಿಳಿಯುವ ಮನಕ್ಕೂ ಸಾವಿಲ್ಲ. ''ಎನ್ನ ಕಾಲೇ ಕಂಬ ದೇಹವೇ ದೇವಾಲಯ ಶಿರವೇ ಹೊನ್ನ ಕಳಶವಯ್ಯಾ''

ದೇಹವೆಂಬ ದೇವಾಲಯದಲ್ಲಿ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಅರಿವೆಂಬ ದೇವರಿದ್ದಾನೆ. ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಮನವೆಂಬ ಭಕ್ತಳೂ ಇದ್ದಾಳೆ.

ಮನವೆಂಬ ಹೆಣ್ಣಿನ ಮೂಲಕ ಅರಿವೆಂಬ ದೇವರನ್ನು ದೇಹವೆಂಬ ದೇವಾಲಯದಲ್ಲಿಯೇ ಒಲಿಸಿಕೊಳ್ಳುವವನಿಗೆ ಸಾವಿಲ್ಲ. ಹುಟ್ಟಿಲ್ಲ. ಅವನು ಅಘೋರಪಾಶಕ್ಕೆ ಒಳಗಾಗನು. ಹೀಗೆ ಅರಿತು ಅರಿತರಿತು ಅರಿವಿನಿಂದ ನಡೆಯುವವನೇ ಚಿರಂಜೀವಿ.

ಮನ ಮತ್ತು ಅರಿವು ದೇಹವನ್ನು ಉಪಕರಣವಾಗಿ ಬಳಸಿಕೊಂಡಿವೆ. ಮನ ದೇಹದ ಮೂಲಕ ದೇಹದಲ್ಲಿಯೇ ಸಂಗಮವಾದ ರಹಸ್ಯಮಯ ಅರಿವನ್ನು ಅರಿತು ಆ ಅರಿವೇ ತಾನಾಗುವವರೆಗೆ ದೇಹಕ್ಕೆ ಜನನ ಉಂಟು ; ಮರಣ ಉಂಟು; ಸುಖ ಉಂಟು; ದುಃಖ ಉಂಟು. ಹೆಣ್ಣು ಗಂಡೆಂಬ ಭೇದ ಉಂಟು. ಜಾತಿ ಮತ ಧರ್ಮದ ಅಜ್ಞಾನ ಉಂಟು. ಶ್ರೀಮಂತ ಬಡವ, ಅಧಿಕಾರಿ ಜವಾನ, ಅರಸ ಪ್ರಧಾನಿ, ಕಾಲಾಳು ಎಂಬ ಅಜ್ಞಾನದ ದುಃಖ ಉಂಟು. ಗುರು ಜಗದ್ಗುರು ಮಠಾಧೀಶ ಪಾದ್ರಿ ಮೌಲ್ವಿ ಎಂಬ ಅಹಂಕಾರ ಉಂಟು.

ಹುಟ್ಟು ಸಾವುಗಳ ದುಃಖವನ್ನು ಕಳೆದುಕೊಂಡು ಅಘೋರ ಪಾಶಕ್ಕೆ ಒಳಗಾಗದೆ ಚಿರಂಜೀವಿ ಪದವಿಯ ರಹಸ್ಯವನ್ನು ತನ್ನ ತನುವಿನೊಳಗೆ ಕಂಡುಕೊಳ್ಳುವ ಬಯಕೆಯಾದ ಮನವೇ ಧನ್ಯ! ಇಂತಹ ಉತ್ಕ್ರಾಂತಿಗೆ ಸಕಲ ದೇಹಗಳೂ ಸಜ್ಜಾಗಲಿ ಎನ್ನುವ ಕಳಕಳಿ ಸಕಲ ಸಂತ ಮಹಾಂತರು ಹೊಂದಿದ್ದಾರೆ.

**113**

**ಅರಿದೆನು, ನಾನೇನ ಅರಿವಡೆ ಶೂನ್ಯನೆ**
**ತೆರಹಿಲ್ಲದೊಂದು ಶುದ್ಧ ಘನತರವನು**
**ನೆನಹಿನ ಮನೆಯಾಗಿ**
**ಅವನ ನೋಟವೆ ಕೂಟ**
**ಅವನೆನ್ನ ಕಾಯಕ್ಕೆ ಪ್ರಾಣನಾಗಿ**
**ಪ್ರಾಣ ಪ್ರತಿಷ್ಠೆಯನು ತಾನು ಮಾಡುವ ರೂಪ**
**ಶೂನ್ಯಕಾಯರು ಕಾಣಬಲ್ಲರೆ**
**ಕಪಿಲಸಿದ್ಧ ಮಲ್ಲೇಶ್ವರನ ?**

ಕಲ್ಲುಕೆತ್ತಿ , ಕಲ್ಲೆನ್ನದೆ, ಕೆತ್ತಿದ ಕಲ್ಲಿಗೆ ಪ್ರಾಣ ಪ್ರತಿಷ್ಠೆಯ ಮಾಡುವವರು ಪ್ರಾಣನಾಥನನ್ನು ಕಾಣಬಲ್ಲರೆ? ಅಂತಹ ಪ್ರಾಣ ವಲ್ಲಭನನ್ನು ಅರಿತೆನು ಎನ್ನಲು ಅವನೇನು ನನಗಿಂತ ಭಿನ್ನನೆ? ರೂಪದ ಕಣಕಣದಲ್ಲಿ ನಿರೂಪ ಪ್ರಾಣವಾಗಿ ಸಂಗಮವಾಗಿದ್ದಾನೆ. ಅವನಿಲ್ಲದೆ ನಾನು ನೋಡಲು ಸಾಧ್ಯವೆ? ಅವನಿಲ್ಲದೆ ನಾನು ಕೇಳಲು ಸಾಧ್ಯವೆ? ಅವನಿಲ್ಲದೆ ನಾನು ಮುಟ್ಟಲು ಸಾಧ್ಯವೆ? ಅವನಿಲ್ಲದೆ ನಾನು ರುಚಿಸಿ ಅರಿವಿನ ಪರಿಮಳವನ್ನು ಘ್ರಾಣಿಸಲು ಸಾಧ್ಯವೆ?

ಅರಿವಿನ ಕೆಲಸಕ್ಕೆ ಬಾರದ ತನುವನ್ನು ಪ್ರಾಣವಲ್ಲಭ ತನ್ನಿಂದ ದೂರ ತಳ್ಳಿದ ಮೇಲೆ ಆ ತನುವಿಗೆ ಪ್ರಾಣ ಪ್ರತಿಷ್ಠಾನ ಮಾಡಲು ಸಾಧ್ಯವೆ? ಕೆತ್ತಿದ ಕಲ್ಲನ್ನು ದೇವರೆಂದು ; ಆ ದೇವರನ್ನು ನವಧಾನ್ಯಗಳಲ್ಲಿ ಮಲಗಿಸಿ ಅದಕ್ಕೆ ಪ್ರಾಣ ಪ್ರತಿಷ್ಠಾನ ಮಾಡಿ ದೇವರೆಂದು ಹೇಳಿದರೆ ಸಕಲರೂ ನಂಬುತ್ತಾರೆ. ಹೀಗೆ ಕಲ್ಲನ್ನೇ ದೇವರೆಂದು ನಂಬುವವರು ತನುವಿನಲ್ಲಿಯೇ

ಸಂಗಮವಾದ ಅರಿವಿನ ನಿಜ ದೇವರನ್ನು ನೋಡಲು ಸಾಧ್ಯವೆ ?

ಅರಿವಿನ ದೇವರು ಕಾಯಕ್ಕೆ ಪ್ರಾಣವಾಗಿದ್ದಾನೆ. ಕಣ್ಣಿಗೆ ಅರಿವಿನ ದೃಶ್ಯವಾಗಿದ್ದಾನೆ. ಕಿವಿಗೆ ಶಬ್ದವಾಗಿದ್ದಾನೆ. ಚರ್ಮಕ್ಕೆ ಸ್ಪರ್ಶವಾಗಿದ್ದಾನೆ. ಮೂಗಿಗೆ ಅರಿವಿನ ಪರಿಮಳವಾಗಿದ್ದಾನೆ. ನಾಲಿಗೆಗೆ ರುಚಿಯ ಪ್ರಸಾದವಾಗಿದ್ದಾನೆ.

ಗರ್ಭಕ್ಕೆ ಚಿಮ್ಮಿದ ಜಲಬಿಂದುವಿಗೆ ಪ್ರಾಣ ಪ್ರತಿಷ್ಠಾನ ಮಾಡಿದ ಘನವಂತನು ಆತ. ಆ ಜಲಬಿಂದುವನ್ನೇ ರಕ್ತವನ್ನಾಗಿಸಿ, ಆ ರಕ್ತವನ್ನೇ ಮಾಂಸವನ್ನಾಗಿಸಿ, ಆ ಮಾಂಸವನ್ನೇ ಅಸ್ತಿಯನ್ನಾಗಿಸಿ, ಮಜ್ಜಾ ಮೇದಸ್ಸು ನಖ ಶಿಖೆಯನ್ನಾಗಿಸಿ ಇವೆಲ್ಲವನ್ನೂ ಬೇರ್ಪಡಿಸದಂತೆ, ಸುಂದರವಾದ ಚರ್ಮದಿಂದ ಅಚ್ಚುಕಟ್ಟಾಗಿ ಹೊಲಿದು; ಅವೆಲ್ಲವುಗಳಿಗೂ ಪ್ರಾಣದಾನ ಮಾಡಿ, ಆ ಕಾಯದಲ್ಲಿ ತಾನು ಸಂಗಮವಾಗಿ, ತನ್ನನ್ನು ಅರಿಯದ ಮಾಯೆಯನ್ನು ಕಾಯದೊಳಗೇ ಇಟ್ಟು ಗರ್ಭದಿಂದ ಭೂಮಿಗೆ ತಳ್ಳಿದವನನ್ನು ಶೂನ್ಯಕಾಯರು ಕಾಣಬಲ್ಲರೆ ?

ದೇವರನ್ನು ದೇವರೆಂದು ಅರಿಯದ ಶೂನ್ಯರು ಅವರು. ಕಾಯಕ್ಕೆ ಮುಸುಕಿದ ಮಾಯೆಯನ್ನು ಕಳೆದುಕೊಳ್ಳದ್ದಕ್ಕಾಗಿ, ಕಲ್ಲನ್ನೇ ದೇವರನ್ನಾಗಿಸಿದರು. ಆ ಕಲ್ಲಿಗೆ ಪ್ರಾಣ ಪ್ರತಿಷ್ಠೆಯ ಮಾಡಿ ಆಲಯ ನಿರ್ಮಿಸಿ ಅಜ್ಞಾನದಿಂದ ಆರಾಧಿಸಿದರು. ಲೋಕದ ಜನತೆಯನ್ನು ನಂಬುವಂತೆ ಮಾಡಿ, ಅರಿವಿನ ದೇವರಿಂದ ವಂಚಿತರನ್ನಾಗಿಸಿದರು.

ಕಾಯಕ್ಕೆ ಪ್ರಾಣನಾದ ಪ್ರಾಣವಲ್ಲಭನಿಂದ ಬಹುದೂರ ತಳ್ಳಿದರು. ಕಾಯ ಹೊಂದಿದವರಾಗಿಯೂ ಕಾಯಗಳನ್ನೇ ಯಾಮಾರಿಸುವ ಈ ಪಾತಕಿಗಳನ್ನು; ಕಾಯವನ್ನೇ ಕೈಲಾಸವಾಗಿಸಿಕೊಂಡ ಪ್ರಾಣವಲ್ಲಭ; ಯಾಮಾರಿಸಿದ ಇವರನ್ನು ನರಕಕ್ಕೆ ತಳ್ಳದೆ ಬಿಡನು.

**114**

**ಅರಿಯಬಾರದ ಘನವರಿದು ಸಾಧಿಸಿ ಗೆದ್ದ**
**ಘನಮಹಿಮ ಶರಣರ ಮುಂದೆ ಎನ್ನ ಪ್ರತಾಪ ನಿಲುಕುವುದೆ?**
**ಅವರಿಪ್ಪರು ಲಿಂಗಪ್ರಭೆಯೊಳಗೆ;**
**ನಾನಿಪ್ಪೆನು ಅಹಂಕಾರ ಪಂಜರದೊಳಗೆ**
**ಎನ್ನ ನೊಸಲ ಕಣ್ಣಿನ ಕಿಚ್ಚುಡುಗಿ ಲಜ್ಜಿತವಾಗಿ**
**ಮರಳಿ ಬಂದೆನ್ನ ಸುತ್ತಿ ಮುತ್ತಿತ್ತು**
**ನಾನು ಶರಣೆಂಬ ಗುರುವಚನವಿದಿರೆದ್ದು ಕೊಲುವಡೆ,**
**ಕಪಿಲಸಿದ್ಧ ಮಲ್ಲಿನಾಥನೊಳಗೆ ಅಳಿವೆನಲ್ಲದೆ ಉಳಿವನಲ್ಲ.**

ಭೂಮಂಡಲದಲ್ಲಿ ಏಳುನೂರಾ ಇಪ್ಪತ್ತು ಕೋಟಿ ಜನಸಂಖ್ಯೆ ಇದ್ದರೂ ಅರಿಯಬಾರದ ಘನವನು ಅರಿತು ಸಾಧಿಸಿ ತನ್ನ ಅಜ್ಞಾನದ ವಿರುದ್ಧ ತಾನೇ ಹೋರಾಟ ಮಾಡಿ ಜಯ ಹೊಂದಿದ ಘನ ಮಹಿಮರು ಮಾತ್ರ ಬೆರಳೆಣಿಕೆಯಲ್ಲಿ ಸಿಗುತ್ತಾರೆ.

ಕೋಟಿಗೊಬ್ಬ ಶರಣ ಲಕ್ಷಕ್ಕೊಬ್ಬ ಭಕ್ತ ಎಂದು ಶರಣರೇ ಸಾರಿದ್ದಾರೆ. ಅಂತಹ ಘನಮಹಿಮ ಶರಣರ ಮುಂದೆ ಏನೂ ಅರಿಯದ ಅಜ್ಞಾನಿ ತನ್ನ ಪ್ರತಾಪ ತೋರಿದರೆ; ಅವನ ಗೊಡ್ಡು ಪ್ರತಾಪ ಶರಣರ ಮುಂದೆ ನಿಲ್ಲಲು ಸಾಧ್ಯವೆ?

ಶರಣರು; ತಮ್ಮ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಶರಣು

ಹೋದವರೇ ಶರಣರು. ತನ್ನ ಅಜ್ಞಾನದ ವಿರುದ್ಧ ಹೋರಾಟ ಮಾಡುತ್ತಾ ತನ್ನ ಅರಿವಿಗೆ ತಾನೇ ಶರಣು ಹೋದವನು; ಅರಿವಿನ ಲಿಂಗಪ್ರಭೆಯೊಳಗೆ ಬೆಳಗುತ್ತಿರುವನು.

ಶರಣನನ್ನು ಮತ್ತೊಬ್ಬ ಶರಣನು ಮಾತ್ರ ಗುರುತಿಸಬಲ್ಲ. ಅವರೊಂದಿಗೆ ಬೆರೆತು ಆನಂದ ಪಡಬಲ್ಲ. ಹಾಗೆಯೇ ತನ್ನ ಜ್ಞಾನದ ಮೇಲೆ ಆಸಕ್ತಿ ಹೊಂದಿದ ಭಕ್ತ ಮಾತ್ರ ಶರಣನನ್ನು ಗುರುತಿಸಬಲ್ಲ. ಅವರಿಗೆ ಭಕ್ತಿ ಮಾಡಿ, ಗೌರವ ಸಲ್ಲಿಸಿ ಅನುದಿನವೂ ಅವರ ಸಂಗ ಸುಖಕ್ಕಾಗಿ ಯಾಚಿಸಬಲ್ಲ.

ಉಳಿದ ಜನ ಶರಣನನ್ನು ಭಕ್ತನನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಶರಣರ ಮಾತುಗಳು ಅರ್ಥವಾಗದೆ ಅವರೊಂದಿಗೆ ಅಹಂಕಾರದಿಂದ ನಡೆದುಕೊಳ್ಳುತ್ತಾರೆ. ಕತ್ತಲು ಬೆಳಕಿನಲ್ಲಿ ಲೀನವಾದಂತೆ; ಅಹಂಕಾರದ ಮಾತುಗಳು ಶರಣರ ಜ್ಞಾನ ಪ್ರಭೆಯಲ್ಲಿ ಲೀನವಾಗಿ ಬೆಳಗುತ್ತವೆ. ಆಗ ಅಹಂಕಾರ ಅಹಂಕಾರಿಯನ್ನೆ ಸುಡುತ್ತದೆ.

ಅವರಿಪ್ಪರು ಲಿಂಗಪ್ರಭೆಯೊಳಗೆ; ನಾನಿಪ್ಪೆನು ಅಹಂಕಾರ ಪಂಜರದೊಳಗೆ ಎನ್ನ ನೊಸಲ ಕಣ್ಣಿನ ಕಿಚ್ಚುಡುಗಿ ಲಜ್ಜಿತವಾಗಿ ಮರಳಿ ಬಂದೆನ್ನ ಸುತ್ತಿ ಮುತ್ತಿತ್ತು :

ಶಿವನನ್ನು ತನ್ನಂತೆ ಮಾಡಿಕೊಳ್ಳಲು ಹೋದ ಕಾಮನನ್ನು ಶಿವ ತನ್ನ ನೊಸಲ ಕಣ್ಣಿನಿಂದ ಸುಟ್ಟು ಬೂದಿಮಾಡುತ್ತಾನೆ. ಇದು ಪೌರಾಣಿಕ ಜ್ಞಾನ ಕತೆ. ಈ ಕತೆಯನ್ನೇ ಸಿದ್ಧರಾಮ ಶಿವಯೋಗಿಗಳು ತಿರುವು ಮುರುವು ಮಾಡಿದ್ದಾರೆ.

ಶಿವನಂತೆ 'ಕಾಮ'ನಿಗೂ ನೊಸಲ ಕಣ್ಣಿದೆ. 'ಕಾಮಾತುರಾಣಾಮ್ ನಲಜ್ಜಂ ನ ಭಯಂ' ಎನ್ನುವ ಮಾತಿದೆ. ಕಾಮುಕನಿಗೆ ಕಣ್ಣು ಕಾಣುವುದಿಲ್ಲ. ಅವನು ಅಹಂಕಾರಿ. ಶಿವನಾದರೇನು, ಶರಣರಾದರೇನು? ಅವರ ಮೇಲೆ ತನ್ನ ಪೈಶಾಚಿಕ ಪ್ರವೃತ್ತಿ ಚೆಲ್ಲಿದಾಗ; ಕಾಮುಕನಲ್ಲಿಯೂ ಸಂಗಮವಾದ ನೊಸಲಕಣ್ಣು ಕಾಮುಕನನ್ನೇ ಸುಡದೆ ಬಿಡುವುದಿಲ್ಲ.

ಅಹಂಕಾರಿಯ ನೊಸಲ ಕಣ್ಣಿನ ಕಿಚ್ಚು ಶರಣರನ್ನು ಸುಡದೆ ಅವರಲ್ಲಿ ಅಡಗಿ ನಾಚಿ ನೀರಾಗಿ ಮರಳಿ ಬಂದೆನ್ನ ಸುತ್ತಿ ಮುತ್ತಿತ್ತು; ಸುಟ್ಟು ಭಸ್ಮ ಮಾಡಿತ್ತು. ನೀನು ಶರಣನಾದರೇನಂತೆ ನಿನ್ನಂತೆ ನಾನು ಕೂಡಾ 'ಶರಣ' ಎನ್ನುವ 'ಗುರುವಚನ' ನುಡಿದವನನ್ನೇ ಕೊಂದುದಲ್ಲದೆ ನಿಜ ಶರಣನನ್ನು ಅಲ್ಲ.

**115**

**ಅರಿವಿನ ಅರಿವು ಸಾಧ್ಯವಾಯಿತ್ತು ನಿಮ್ಮಿಂದ.**
**ಕುರುಹಿನ ವಕ್ತ್ರವ ತಿಳಿಸಿದನಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**
**ಚೆನ್ನ ಬಸವಣ್ಣನಿಂದ ನಿಮಗೆ ಪ್ರಸನ್ನ ಮುಖವಾಯಿತ್ತಯ್ಯಾ.**

ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿ ತನ್ಮಯವಾದ; ತನುವಿನ ಮೂಲವನ್ನು ಅರಿತ ಅರುಪಿಂಗೆ ಅರುವು ಆದವರು. ಆ ಅರಿವಿನ ಮೂಲವರಿತ ಅರಿವೆಂದರೆ ಸಾಮಾನ್ಯವಲ್ಲ; ಗುರುದೇವ; ಮಹಾದೇವ; ಸದಾಶಿವ; ಸಾಕ್ಷಾತ್ ಪರಬ್ರಹ್ಮವೇ ಆ ಅರಿವು.

ಸಿದ್ಧರಾಮ ಶಿವಯೋಗಿಗಳು ಕಲ್ಪನೆ ಮಾಡಿಕೊಂಡು ಅರಿವಿಂಗೆ ಅರಿವಾದ ಅರಿವನ್ನು ಕಾಣಲಿಲ್ಲ. ಶ್ರೀಕೃಷ್ಣ ಅರ್ಜುನನಿಗೆ ದರ್ಶನ ಮಾಡಿಸಿದಂತೆ ಚೆನ್ನಬಸವಣ್ಣ ಸಿದ್ಧರಾಮ ಶಿವಯೋಗಿಗಳಿಗೆ ದರ್ಶನ ಮಾಡಿಸಿದ. ಶ್ರೀಕೃಷ್ಣ ತಾನೇ ಆ ವಿರಾಟ ಸ್ವರೂಪನೆಂದು ತನುವಿನಲ್ಲಿಯೇ ತನ್ಮಯವಾದ ಆ ವಿಶ್ವರೂಪವನ್ನು ಅರ್ಜುನನಿಗೆ ತೋರಿದರೆ; ತನುವಿನಲ್ಲಿ

ತನುವಿನಂತೆಯೇ ಇರುವ ಬಾಯಿ ಮುಖ ವದನವುಳ್ಳ ವಿಶ್ವರೂಪೀ ಅವ್ಯಕ್ತ ಭಗವಂತನನ್ನು ನನಗೆ ಚೆನ್ನಬಸವಣ್ಣ ತಿಳಿಸಿದನು ಎಂದು ಸಿದ್ಧರಾಮ ಶಿವಯೋಗಿಗಳು ಹೇಳುತ್ತಾರೆ.

ನನ್ನ ರೂಪದಲ್ಲಿಯೇ ಭಗವಂತನ ಅವ್ಯಕ್ತ ರೂಪವಿರುವುದು ಸದ್ಗುರುವಿನಿಂದ ತಿಳಿದು ಪರಮಾನಂದವಾಯಿತು. ನೀವು ಯಾರೆಂದು ಎಷ್ಟೋ ಜನ್ಮಗಳಿಂದ ನಾನು ನಿಮ್ಮನ್ನು ಕಂಡುಕೊಂಡಿರಲಿಲ್ಲ. ಚೆನ್ನಬಸವಣ್ಣನಿಂದಾಗಿ ನನ್ನಲ್ಲಿರುವ ನಿಮಗೆ ಇಂದು ಪ್ರಸನ್ನ ಮುಖವಾಯಿತಯ್ಯಾ.

ನೀವು ತನುವಿಂಗೆ ತನುವಾಗಿ ತನುವಿನಲ್ಲಿಯೇ ಇದ್ದುದ್ದು, ಮನಕ್ಕೆ ಮನವಾಗಿ ಮನದಲ್ಲಿಯೇ ಇದ್ದುದ್ದು; ಜೀವಕ್ಕೆ ಜೀವವಾಗಿದ್ದ ಘನಲಿಂಗವೇ ತಾವಾಗಿದ್ದುದು, ಇಂದು ಗುರುದೇವನಿಂದ ನನಗೆ ತಿಳಿಯಿತು ಭಗವಂತನೇ. ಆ ಗುರುದೇವನಿಂದ ಇಂದು ನೀವು ಪ್ರಸನ್ನ ಮುಖವಾದಿರಿ ತಂದೆ.

''ತನುವಿಂಗೆ ತನುವಾಗಿ, ಮನಕ್ಕೆ ಮನವಾಗಿ, ಜೀವಕ್ಕೆ ಜೀವವಾಗಿ, ಇದ್ದುದನಾರು ಬಲ್ಲರೊ? ಅದು ದೂರವೆಂದು, ಸಮೀಪವೆಂದು, ಮಹಾಂತ ಗುಹೇಶ್ವರನು ಒಳಗೆಂದು ಹೊರಗೆಂದು, ಬರುಸೂರೆ ಹೋದರು''

ಶರಣರು ಅರಿವಿಗೆ ಶರಣು ಹೋಗಿ ಶರಣರಾದವರು. ಅರಿವಿನ ಅರಿವು ಅರಿತು ಆ ಅರುವೇ ತಾವಾದವರು. ಕಾಣಲು ಬಾರದುದನು ಕಂಡ ಸ್ವಮಹಿಮರು; ಅರಿವರಿತು ಅರಿವೇ ತಾವಾಗಿಹ ಜಂಗಮರು ಅವರು.

ಕುರುಹು ಕೆಡುತ್ತದೆ. ಕುರುಹಿನಲ್ಲಿರುವ ವಕ್ತ್ರ ಕೆಡುವುದಿಲ್ಲ. ಎಂದೆಂದೂ ಕೆಡದ ತನುವೇ ನಿಜ ತನು. ಇದು ತನುವಿಂಗೆ ತನುವಾಗಿದೆ. ಮನಕ್ಕೆ ಮನವಾಗಿದೆ. ಜೀವಕ್ಕೆ ಜೀವವಾಗಿದೆ. ಇದನ್ನು ತಿಳಿಸಿ ಹೇಳುವ ಚೆನ್ನಬಸವಣ್ಣನಂತಹ, ಪ್ರಭುದೇವರಂತಹ, ನಾಗಭೂಷಣರಂತಹ, ಸದ್ಗುರು ವಿದ್ಯಾನಂದರಂತಹ ಗುರುದೇವರು ತನುವಿಗೆ ದೊರೆಯದಿದ್ದಕ್ಕಾಗಿ, ವಿಚಾರವಂತರೆನ್ನಿಸಿಕೊಂಡ ಬುದ್ಧಿಜೀವಿಗಳು ಸಾಹಿತಿಗಳು ತಮ್ಮ ಸ್ವಜ್ಞಾನದಿಂದ ಬಹಳ ದೂರವಿರುವುದರಿಂದಾಗಿ ಈ ಜ್ಞಾನ ದೂರವೆಂದು ಕೈಬಿಡುತ್ತಾರೆ.

ತನುವಿನಿಂದ ಬಂದ ಪುಸ್ತಕವನ್ನು, ಪುಸ್ತಕ ಹೊರತಂದ ತನುವನ್ನು ಮೆಚ್ಚಿಕೊಂಡು ಸ್ವಜ್ಞಾನ ಸಂಗಮವಾದ ತನುವನ್ನೇ ಮರೆಯುತ್ತಾರೆ. ಇದು ಸಾಹಿತಿಗಳ, ಬುದ್ಧಿಜೀವಿಗಳ ಕರ್ಮ.

ತನುವೆಂದರೇನೆಂದು ತನುವಿನ ನಿಜ ತಿಳಿಯಲು ಹೋಗಿ ಆ ನಿಜವೇ ತಾನಾದವನಿಗೆ ಸಕಲ ತನುಗಳನ್ನು ತನ್ನಂತೆಯೇ ತಿಳಿಯುತ್ತಾನೆ. ಓದಿ ಕೆಟ್ಟ ಕೂಚುಭಟ್ಟ ಎನ್ನುವಂತೆ ಓದಿದ್ದನ್ನೇ ಬೊಗಳಿ ತನ್ನ ತನುವಿನ ನಿಜ ತಿಳಿಯದೆ ಮರೆಯಾಗುತ್ತಾನೆ.

''ತನ್ನ ತಾನು ಅರಿಯದ ಮುನ್ನ ತನ್ಮಯವಾದ ಅರಿವು. ತನ್ನ ತಾನು ಅರಿದ ಬಳಿಕ ಅರಿವು ತನ್ಮಯವೆಂದು ಅರಿತ ಅರಿವು. ಆ ಅರಿವೇ ಕರಿಗೊಂಡ ಬಳಿಕ ತಾನೇ ಸೌರಾಷ್ಟ್ರ ಸೋಮೇಶ್ವರಾ'' ಎಂದು ಆದಯ್ಯ ಶರಣರು ತನುವಿನ ನಿಜವನ್ನು ಸರಳವಾಗಿ ತಿಳಿಯುವ ಸೂತ್ರ ಬರೆದಿದ್ದಾರೆ.

ದೇವರೆಂದರೆ ನಾನು ಮಾಡಿದ ದೇವರು ದೇವರಲ್ಲ. ನನ್ನನ್ನು ಮಾಡಿ ನನ್ನಲ್ಲಿಯೇ ಸಂಗಮವಾದ ದೇವರೇ ನಿಜ ದೇವರು. ಅಂತಹ ದೇವರನ್ನು ಗುರುದೇವನಿಂದ ಸಾಕ್ಷಾತ್ಕಾರ ಮಾಡಿಕೊಂಡ ಸಿದ್ಧರಾಮ ಶಿವಯೋಗಿಗಳು ಆ ದೇವರಿಗೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ನಾಮಕರಣ ಮಾಡುತ್ತಾರೆ. ಮುಂದುವರಿದು ಅತ್ಯಂತ ಆನಂದದಿಂದ ಆ ದೇವರನ್ನು ಕುರಿತು ಹೀಗೆ ಹೇಳುತ್ತಾರೆ:

ಕಪಿಲಸಿದ್ಧ ಮಲ್ಲಿನಾಥಯ್ಯನೇ ನನ್ನಲ್ಲಿಯೇ ಸಂಗಮವಾದ ಭಗವಂತನೇ ಸದ್ಗುರು ಚೆನ್ನಬಸವಣ್ಣನಿಂದ ನಿಮಗೆ ಪ್ರಸನ್ನ ಮುಖವಾಯಿತಯ್ಯಾ. ಇದು ಯಾವ ಸಾಹಿತಿಗೂ ಎಟಕದ ಮಾತು. ಸಾಹಿತ್ಯಕ್ಕೆ ಮೀರಿದ ಮಾತು. ತನ್ನನ್ನು ತಾನೇ ಅರಿತ ಅರಿವಿನ ಮಾತು. ತನ್ನ ಅಜ್ಞಾನದ ವಿರುದ್ಧ ತಾನೇ ಹೋರಾಟ ಮಾಡಿ ಜಯಿಸಿದ ಮಾತು. ಜ್ಞಾನಕ್ಕೆ ಶರಣು ಹೋಗಿ ಅಜ್ಞಾನವನ್ನು ಸುಟ್ಟುಕೊಂಡ ಮಾತು!

**116**

**ಅರಿವಿನ ಗುಣ ಬಸವಣ್ಣನೊಳಗಡಕವಯ್ಯಾ ,**
**ಮರಹಿನ ಜ್ಞಾನ ಚೆನ್ನಬಸವಣ್ಣನೊಳಗಡಕವಯ್ಯಾ.**
**ಅರಿವು ಮರವೆ ತಾನೆ ಶಿವರೂಪು ಪ್ರಭೆ**
**ಪ್ರಭುಲಿಂಗ ಮೂರ್ತಿಯಾಯಿತ್ತು**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ದೇಹದಲ್ಲಿ ಜ್ಞಾನ ಸಂಗವುವಾಗಿದೆ; ಹಾಗೆಯೇ ದೇಹವನ್ನು ಮನಸ್ಸು ಆವರಿಸಿಕೊಂಡಿದೆ. ಮನ ಮರಹಿಗೆ ಸಂಬಂಧಪಟ್ಟಿದ್ದಾದರೆ, ಜ್ಞಾನ ಅರಿವಿಗೆ ಸಂಬಂಧಪಟ್ಟದ್ದಾಗಿದೆ. ಮರಹು ಅರುಹಾಗಿ ಪರಿವರ್ತನೆಯಾಗಬೇಕಾದರೆ ಅದು ಅರಿವಿನಲ್ಲಿ ಸಂಗಮವಾಗಬೇಕು.

ಅರಿವು ಮತ್ತು ಮನವೆಂಬ ಮರಹು ಸಂಗಮಗೊಂಡ ದೇಹ ಶಿವರೂಪುಪ್ರಭೆ. ಅದು ಪ್ರಭುಲಿಂಗ ಮೂರ್ತಿ; ಹಾಗೂ ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥಯ್ಯ ಎಂದು ಸಿದ್ದರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಸಹಜವಾಗಿ ಸಕಲರಿಗೆ ತಿಳಿಯುವಂತೆ ಹೇಳಿದ್ದಾರೆ. ಅರಿವು ಮತ್ತು ಮರೆವಿನ ಜ್ಞಾನವನ್ನು ತಾಂತ್ರಿಕವಾಗಿ ತನಗೆ ತಿಳಿಹೇಳಿದ ಗುರುಗಳಾದ ಬಸವಣ್ಣ ಮತ್ತು ಚನ್ನಬಸವಣ್ಣನನ್ನು ತಮ್ಮ ಈ ವಚನದಲ್ಲಿ ನೆನಪಿಸಿಕೊಂಡಿದ್ದಾರೆ.

ಬಸವಣ್ಣನನ್ನು ಅರಿವಿಗೆ ಹೋಲಿಸಿದ್ದಾರೆ. ಚನ್ನಬಸವಣ್ಣನನ್ನು ಆ ಅರಿವನ್ನು ತಿಳಿದು ಗುರುವೆ ಆದ ಮಹಾಗುರುವಿಗೆ ಹೋಲಿಸಿದ್ದಾರೆ. ಅರಿವು, ಮರೆವು ಕೂಡಿಕೊಂಡ ದೇಹವನ್ನು ಸಾಕ್ಷಾತ್ ಶಿವರೂಪ ಪ್ರಭುಲಿಂಗ ಮೂರ್ತಿಯೆಂದು ಕರೆದಿದ್ದಾರೆ.

ದೇಹದಲ್ಲಿ ಅರಿವು ಇದೆ; ದೇಹವನ್ನು ಮನ ಆವರಿಸಿಕೊಂಡಿದೆ. ಮನ ದೇಹವನ್ನು ಬಳಕೆ ಮಾಡುತ್ತಿರುವುದರಿಂದ; ದೇಹ ಮರೆವಿನ ದೇಹ ಎನ್ನಿಸಿಕೊಂಡಿದೆ. ಹೀಗಾಗಿ ದೇಹದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ತುಂಬಿವೆ. ಸಪ್ತವ್ಯಸನಗಳು, ಅಷ್ಟಮದಗಳು ತುಂಬಿವೆ. ಈ ಆರು, ಏಳು, ಎಂಟು ಗುಣಗಳನ್ನು ಮಾತ್ರ ಮನ ಬಳಸಿಕೊಂಡು ಹೆಣ್ಣು, ಗಂಡು ಎಂಬ ಅಜ್ಞಾನದಿಂದ ಮತ್ತು ಅಹಂಕಾರದಿಂದ, ಮದದ ಅವಗುಣಿ ಎನಿಸಿಕೊಂಡಿದೆ.

ದೇಹದ ಸಕಲ ಗುಣಗಳು ಅಂದರೆ ರಾಜಸ, ತಾಮಸ ಮತ್ತು ಸಾತ್ವಿಕ ಎಂಬ ಗುಣಗಳನ್ನು ಕಳೆದುಕೊಳ್ಳಲು ಮನಸ್ಸಿಗೆ ಸಾಧ್ಯವಾಗುವುದಿಲ್ಲ. ಮನಸ್ಸು ದೇಹದ ಮೂಲಕ ತನ್ನ ಅವಗುಣಗಳನ್ನು ಕಳೆದುಕೊಳ್ಳಲು ಭಗವದ್ಗೀತೆ, ಬೈಬಲ್, ಕುರಾನ್‌ಗಳೆಂದು ಜ್ಞಾನ ಗ್ರಂಥಗಳನ್ನು ಓದಿದರು ಕೂಡಾ ಮನವೆಂಬ ಮರೆವಿನ ಅವಗುಣಗಳು ತೊಲಗುವುದಿಲ್ಲ. ಬದಲಾಗಿ ಕುರಾನ್ ಓದಿ ಮುಸಲ್ಮಾನ ಎಂಬ ಗುಣ ದೇಹದಲ್ಲಿ ಬಂದು ಸೇರುತ್ತದೆ. ಭಗವದ್ಗೀತೆ ಓದಿ ತಾನು ಹಿಂದೂ ಎಂಬ ಗುಣ ಬಂದು ಸೇರುತ್ತದೆ. ಬೈಬಲ್ ಓದಿ ತಾನು ಕ್ರಿಶ್ಚಿಯನ್ ಎಂಬ ಗುಣ ಸೇರುತ್ತದೆ. ಆಯಾ ಗ್ರಂಥಗಳನ್ನು

ಓದಿದ ಮನ ಆಯಾ ಧರ್ಮದ ಪಂಡಿತನಾಗಿ, ಪ್ರವಚನಪಟುವಾಗಿ, ಶಾಸ್ತ್ರಿಯಾಗಿ ತನ್ನ ಗುಣ ಪ್ರದರ್ಶನ ಮಾಡುತ್ತದೆ. ಜ್ಞಾನದಿಂದ ಬಹುದೂರ ಉಳಿಯುತ್ತದೆ.

ಸಿದ್ಧರಾಮ ಶಿವಯೋಗಿಗಳು ಬಸವಣ್ಣನೊಳಗೆ ಅರಿವಿನ ಗುಣ ಅಡಕವಾಗಿರುವುದನ್ನು ವಿವರಿಸಿದ್ದಾರೆ. ಅರಿವಿನ ಗುಣವೆಂದರೆ ಅದು ನಿರ್ಗುಣ. ನಿರ್ಗುಣವೆಂದರೆ ಯಾವುದೇ ಗುಣವನ್ನು ಹೊಂದಿರದೆ ಇರುವುದು. ಸಾತ್ವಿಕ ಇದು ಒಂದು ಗುಣ ಅಂದರೆ ಮನಸ್ಸು ರಾಜಸ ತಾಮಸ ಗುಣಗಳನ್ನು ಹೊಂದಿ ಅವೆರಡನ್ನು ತೋರಗೊಡದಂತೆ ತಾನು ಸಾತ್ವಿಕನೆಂದು ದೇಹದ ಮೂಲಕ ಪ್ರದರ್ಶನ ನೀಡುತ್ತದೆ.

ಶೌಚ ಸ್ನಾನಾದಿಗಳನ್ನು ಮಾಡಿ ದೇಹಕ್ಕೆ ವಿಭೂತಿ, ಗಂಧ, ತಿಲಕಾದಿಗಳನ್ನು ಧರಿಸಿ ರುದ್ರಾಕ್ಷಿ, ಲಿಂಗ, ಜನಿವಾರ, ಶಿಲುಬೆಗಳನ್ನು ಹಾಕಿಕೊಂಡು, ಜುಟ್ಟ ಗಡ್ಡ ಬಿಟ್ಟು; ಕಾಶಾಯ ನಿಲುವಂಗಿಗಳನ್ನು ಧರಿಸಿ; ಮನಸ್ಸು ದೇಹದ ಮೂಲಕ ತಾನು ಸಾತ್ವಿಕ ಹಿಂದೂ ಎಂದು, ತಾನು ಸಾತ್ವಿಕ ಮುಸಲ್ಮಾನ ಎಂದು, ತಾನು ಸಾತ್ವಿಕ ಕ್ರಿಶ್ಚಿಯನ್ ಎಂದು ದೇಹದ ಮೂಲಕ ಸಾತ್ವಿಕ ಗುಣಗಳನ್ನು ಪ್ರದರ್ಶನ ಮಾಡುತ್ತದೆ. ಪುಣ್ಯಕ್ಷೇತ್ರಗಳಿಗೆ ಮೆಕ್ಕ ಹಾಗೂ ವ್ಯಾಟಿಕಾನಿಗೆ ಹೋಗಿ ಮನಸ್ಸು ತನ್ನ ದೇಹದ ಮೂಲಕ ಸಾತ್ವಿಕ ಎನ್ನಿಸಿಕೊಳ್ಳುತ್ತದೆ. ಆದರೆ ಗುಟ್ಟಾಗಿ ರಾಜಸ ಹಾಗೂ ತಾಮಸ ಗುಣಗಳ ಮೂಲಕ ದೇಹದೊಂದಿಗೆ ಸುಖಿಸುತ್ತದೆ.

ಜ್ಞಾನ ಅಥವಾ ಅರಿವಿಗೆ ತನ್ನ ಗುಣ ದೇಹದ ಮೂಲಕ ಪ್ರದರ್ಶನ ಮಾಡಲು ಬರುವುದಿಲ್ಲ. ನೋಡುವುದರ ಮೂಲಕ, ಮುಟ್ಟುವುದರ ಮೂಲಕ, ಸಿಹಿ-ಕಹಿ ಶಬ್ದಗಳನ್ನು ಸಮಚಿತ್ತದಿಂದ ಕೇಳುವುದರ ಮೂಲಕ, ಸುಗಂಧ-ದುರ್ಗಂಧ ಅರಿವಿನ ಪರಿಮಳವಾಗಿ ಸ್ವೀಕರಿಸುವುದರ ಮೂಲಕ ಸಿಹಿ, ಕಹಿ, ಹುಳಿ, ಕಾರ, ಒಗರು ಪದಾರ್ಥಗಳನ್ನು ನಿರ್ಭಾವದಿಂದ ರುಚಿಸುವುದರ ಮೂಲಕ ಸದಾ ಅರಿವು ಸಹಜವಾಗಿ ಎಚ್ಚರದಲ್ಲಿ ತನಗೆ ತಾನೆ ಇವುಗಳನ್ನು ಸಮಭಾವದಿಂದ ಅನುಭವಿಸುವುದರ ಮೂಲಕ ಜ್ಞಾನಿ ದೇಹವಾಗಿ ಮಹದಾನಂದದಿಂದ ತನಗೆ ತಾನೆ ಇರುತ್ತದೆ.

ಅರಿವು ಮತ್ತು ಮರೆವು ಸಂಗಮಗೊಂಡಾಗ ಸಾತ್ವಿಕ, ರಾಜಸ, ತಾಮಸ ಗುಣಗಳು ತನಗೆ ತಾನೆ ಕಳೆದುಹೋಗಿ ಅರಿವಿನ ಗುಣ ದೇಹದ ಮೂಲಕ ತನಗೆ ತಾನೇ ಪ್ರಕಟವಾಗುತ್ತದೆ.

ಚನ್ನಬಸವಣ್ಣನವರು ಅರಿವಿನ ಗುಣ ಬಸವಣ್ಣನೊಳಗೆ ಅಡಕವಾಗಿದೆ ಎಂದು ಮರಹಿನ ಜ್ಞಾನ ಚನ್ನಬಸವಣ್ಣನಲ್ಲಿ ಅಡಕವಾಗಿದೆ ಎಂದು ಎರಡು ಸಾಲುಗಳಲ್ಲಿ ಹೇಳುತ್ತಾ ಮೂರನೆ ಸಾಲಿನಲ್ಲಿ ಅರಿವು ಮರೆವು ತಾನೆ ಶಿವರೂಪು ಪ್ರಭೆಯಾಗಿ ಪ್ರಭುಲಿಂಗ ಮೂರ್ತಿಯಾಯಿತು ಕಪಿಲಸಿದ್ಧ ಮಲ್ಲಿಕಾರ್ಜುನನಾಗಿತ್ತು ಎಂದು ಹೇಳುತ್ತಾರೆ.

ಅರಿವಿನಲ್ಲಿ ಮನವೆಂಬ ಮರೆವನ್ನು ಹೇಗೆ ಅಡಕ ಮಾಡಬೇಕೆಂಬುದು ಮನುಷ್ಯನಿಗೆ ತಿಳಿಯುತ್ತಿಲ್ಲ. ಮನಸ್ಸು ತನಗೆ ತಾನೆ ದೇಹವನ್ನು ಬಳಕೆಮಾಡಿಕೊಂಡು ನೋಡುತ್ತದೆ. ಹೀಗೆ ಮನ ದೇಹ ಬಳಕೆ ಮಾಡಿಕೊಂಡು ನೋಡುವುದರಿಂದ ದೇಹ ಹೆಣ್ಣಾಗಿ ಕಾಣುತ್ತದೆ ಇಲ್ಲ ಗಂಡಾಗಿ ಕಾಣುತ್ತದೆ. ಮನಸ್ಸು ತಾನು ಹೆಣ್ಣೆಂಬ ಅಜ್ಞಾನ ಆಮಂತ್ರಣ ಮಾಡಿಕೊಂಡು ಗಂಡನ್ನು ನೋಡುತ್ತದೆ ಗಂಡೆಂಬ ಅಜ್ಞಾನ ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡುತ್ತದೆ. ಹೀಗಾಗಿ ಮನಸ್ಸಿಗೆ ದೇಹ ಕಾಣದೆ ಹೆಣ್ಣು ಗಂಡು ಮಾತ್ರ ಕಾಣುತ್ತದೆ. ತಾನು ದೇಹವಾಗಿದ್ದರೂ ದೇಹ ದೇಹವೆಂಬುದನ್ನು ಮರೆಯುತ್ತದೆ. ಹೀಗಾದಾಗ ಅರಿವು ಪ್ರತಿ ಬಾರಿಯೂ ಮನದ ಮೈದಡವಿ ಮನದ ಮರೆವನ್ನು ಅರಿವು ಮನದ ಗಮನಕ್ಕೆ ತರುತ್ತದೆ.

ಈ ಅರಿವಿನ ತಂತ್ರಜ್ಞಾನವನ್ನು ಬಸವಣ್ಣ ಅಳವಡಿಸಿಕೊಂಡಿದ್ದ. ಮರಹು ಅರಹುವಿನಲ್ಲಿ ಸಂಗಮವಾಗಿ ಅರಿವೇ ತಾನಾಗುವ ಜ್ಞಾನವನ್ನು ಚನ್ನಬಸವಣ್ಣ ಅಳವಡಿಸಿಕೊಂಡಿದ್ದ. ಅರಿವು ಮರೆವೆ ಸಂಗಮಗೊಂಡು, ಅವೆರಡೂ ತಾವೇ ಆಗಿ, ಸಾಕ್ಷಾತ್ ಶಿವರೂಪು ಪ್ರಭೆಯಾದರು. ಇವರಿಬ್ಬರು ಮಹಾಜ್ಞಾನದ ಪ್ರಭುಲಿಂಗ ಮೂರ್ತಿಯಾದರು ಎಂದು ಸಿದ್ಧರಾಮ ಶಿವಯೋಗಿಗಳು ಮಹಾಜ್ಞಾನದ ತಂತ್ರಜ್ಞಾನದ ಈ ಮಹಾಸೂತ್ರವನ್ನು ಸರ್ವ ಓದುಗರಿಗೂ ಐದು ಸಾಲಿನ ತಮ್ಮ ವಚನದ ಮೂಲಕ ಗುಟ್ಟಾಗಿ ಹೇಳಿದ್ದಾರೆ.

**117**

**ಅರುವತ್ತಾರಕ್ಷರದ ಕುರುಹುಗೆಟ್ಟ**
**ಸೀಮೆಯ ತೆರಹಿಗೆ ಬಂದವರಿನ್ನಾರೊ.**
**ಮೇಲೆ ಬ್ರಹ್ಮಾಂಡರನು ಧರಿಸಿ**
**ಇಲ್ಲದಂತೆಯಿಪ್ಪವರಾರೊ.**
**ಆನಂದದಾದಿಯಲಿ ಅಪರ ಶೂನ್ಯನಾದೆ.**
**ಅಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನ ಅಯ್ಯ .**

ದೇಹವೆಂದರೆ ಬ್ರಹ್ಮಾಂಡ. ಬ್ರಹ್ಮನನ್ನು ಧರಿಸಿದ್ದರು ಇಡೀ ಬ್ರಹ್ಮಾಂಡಕ್ಕೆ ಬ್ರಹ್ಮಾಂಡವೆಂದು ಹೆಸರು ಕೊಟ್ಟಿದ್ದರೂ ದೇಹ ಭ್ರಮೆಯಿಂದಾಗಿ ಅಜ್ಞಾನವನ್ನು ಹೇರಿಕೊಂಡು ವಿಲವಿಲನೆ ಒದ್ದಾಡುತ್ತಲಿದೆ. ತಾನು ಬೇರೆ, ಬ್ರಹ್ಮ ಬೇರೆ ಎಂದು ಬ್ರಹ್ಮನನ್ನು ಆರಾಧಿಸುತ್ತದೆ. ನಿಸ್ಸೀಮನಾಗಿ ಇರಬೇಕಾಗಿದ್ದ ದೇಹ ತನ್ನ ಸೀಮೆಯನ್ನು ತಾನೆ ಎಳೆದುಕೊಂಡಿದೆ.

ಅಕ್ಷರೋತ್ತಮನು ತಾನಾಗಿದ್ದರು ತನಗೂ ಅಕ್ಷರೋತ್ತಮನಿಗೂ ಭಿನ್ನತೆ ಇಲ್ಲದಿದ್ದರೂ ಅಕ್ಷರಗಳ ಮುಖಾಂತರ ತನ್ನನ್ನು ಪರಿಚಯಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ದೇಹದ ದುರಂತ.

ಸಕಲ ಪದಾರ್ಥಗಳನ್ನು ಸೃಷ್ಟಿಸಿ ಅವುಗಳಿಗೆ ಹೆಸರಿಸಿ ಆ ಹೆಸರಿನೊಂದಿಗೆ, ಪದಾರ್ಥದೊಂದಿಗೆ ತನ್ನನ್ನು ತನಗರಿಯದಂತೆ ತಾನೆ ಬಂಧಿಸಿಕೊಂಡು ಅವುಗಳ ಮೂಲಕ ತಾನು ಸುಖ ದುಃಖಗಳನ್ನು ಕಂಡುಕೊಳ್ಳುತ್ತಲಿದೆ. ಪರಮಾನಂದದ ಹಾದಿಯ ಪರಿಚಯ ತನ್ನಿಂದ ಬಹುದೂರ ಸರಿದಿದೆ. ತನ್ನ ಮೂಲವನ್ನು ತಾನೆ ಅರಿಯದೆ ತಾನು ಸೃಷ್ಟಿಸಿದ ಪದಾರ್ಥದ ಮೂಲವನ್ನು ಅರಿಯದ ದೇಹ ಕುರುಹುಗೆಟ್ಟಿದೆ.

ಅಕ್ಷರೋತ್ತಮನನ್ನು ಕಾಣುವುದಕ್ಕಾಗಿ ದೇಹವಿದೆ. ಅಂದರೆ ದೇಹದಿಂದಲೆ, ದೇಹದ ಮೂಲಕವೇ ನಿರ್ದೇಹಿ ಪುರುಷೋತ್ತಮನನ್ನು ಕಾಣಬೇಕಿದೆ. ಆದರೆ ದೇಹ ದೇಹದಲ್ಲಿಯೆ ಸಂಗಮವಾದ ನಿಸ್ಸೀಮನನ್ನು ಮರೆತು ತನ್ನದೆ ಆದ ಸೀಮೆಯನ್ನು ದೇಹ ರಚಿಸಿಕೊಂಡಿರುವುದರಿಂದ ಕುರುಹುಗೆಟ್ಟಿದೆ. ದೇಹವೆಂಬ ಕುರುಹಿನಲ್ಲಿ ತೆರಹಿಲ್ಲದಂತೆ ಅಂದರೆ ಸಂದಿಲ್ಲದಂತೆ ಕಣಕಣದಲ್ಲಿ ಅರಿವೇ ತುಂಬಿದ್ದರೂ ಕುರುಹಿಗೆ ಮರೆವು ಆವರಿಸಿರುವುದರಿಂದ ಆನಂದದ ಹಾದಿಯನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಶೂನ್ಯವಾಗಿದೆ.

ಆನಂದ ಎನ್ನುವುದು ವಸ್ತುಗಳಿಂದ, ಪದಾರ್ಥಗಳಿಂದ ಪಡೆಯಲು ಸಾಧ್ಯವಿಲ್ಲ. ಹಾಗೆ ವಸ್ತುವಿನಿಂದ ಪಡೆದು ಸುಖಿಸುವ ಆನಂದವನ್ನು ಆನಂದವೆನ್ನುವಂತಿಲ್ಲ ಆನಂದ ಎನ್ನುವುದು ಆದಿಯಿಂದಲೂ ಅಂಗದೊಂದಿಗೆ ಸಂಗಮವಾಗಿದೆ.

ಗರ್ಭಕ್ಕೆ ಅಂಗದ ಬಿಂದು ಪ್ರವೇಶಿಸುವ ಮುನ್ನ ಆ ಬಿಂದುವಿನಲ್ಲಿಯೇ ಆನಂದ ಸಂಗಮವಾಗಿದೆ. ಹೀಗಾಗಿ ಅಂಗ ಅರಿವಿನ ಲಿಂಗ ಎನ್ನಿಸಿಕೊಂಡಿದೆ. ಲಿಂಗಾಂಗವೆನ್ನಿಸಿಕೊಂಡಿದೆ. ಅಂಗದ ಮೇಲೆ ಲಿಂಗಕಟ್ಟಿಕೊಂಡ ಅಂಗ ಲಿಂಗಾಂಗವಲ್ಲ; ಆ ಅಂಗಕ್ಕೆ ಲಿಂಗದ ಪರಿಚಯವೂ ಇಲ್ಲ. ಲಿಂಗವೆಂಬುದು ಮಹಾಜ್ಞಾನ. ಮಹಾಜ್ಞಾನವಿಲ್ಲದ ಅಂಗವೇ ಇಲ್ಲ. ಹೀಗಾಗಿ ಅಂಗಕ್ಕೆ ಲಿಂಗ ಕಟ್ಟಲು ಬರುವುದೇ ಎಂದು ಶರಣರು ಪ್ರಶ್ನಿಸುತ್ತಾರೆ.

ಲಿಂಗ ಕಾಣುವುದಿಲ್ಲ; ಅದು ಅಂಗದಂತೆಯೇ ಇದ್ದು ಅಂಗದಲ್ಲಿಯೇ ಸಂಗಮವಾಗಿದೆ. ಅದನ್ನು ಅಂಗದ ಮೂಲಕವೇ ಕಂಡುಕೊಳ್ಳಬೇಕು. ಹಾಗೆ ಕಂಡುಕೊಂಡ ಅಂಗವನ್ನು ಅಂಗವೆನ್ನಲು ಬರುವುದಿಲ್ಲ. ಅದು ವಿರಾಟಸ್ವರೂಪ, ಅದು ಬ್ರಹ್ಮಾಂಡ, ಅದು ಜಗದಗಲ, ಮುಗಿಲಗಲ, ಮಿಗೆಯಗಲ ಅಂದರೆ ಪಂಚಭೂತಗಳಿಗೂ ವಿಸ್ತಾರವಾಗಿದೆ. ಬ್ರಹ್ಮಾಂಡದಿಂದತ್ತತ್ತ ಅದು ಪಾತಾಳದಿಂದತ್ತತ್ತ; ಇಡೀ ಬ್ರಹ್ಮಾಂಡವನ್ನೇ ಅಂಗದಲ್ಲಿ ಸಂಗಮಮಾಡಿಕೊಂಡ ಮಹಾದಾನಂದದ ಪರಿಚಯವಾಗುತ್ತದೆ. ಆ ಪರಿಚಯವು ಕೂಡಾ ನಷ್ಟವಾಗಿ ಸಹಜವಾಗುವ ಅಪಾರ ಲಿಂಗಜ್ಞಾನ ಅಂಗದಲ್ಲಿದೆ. ಬಯಲಿಗೆ ಹೇಗೆ ತಾನು ಬಯಲು ಎನ್ನುವುದು ಪರಿಚಯವಿಲ್ಲವೊ ಹಾಗೆಯೇ ಅಂಗಕ್ಕೆ ಅನುಭವವಾಗುತ್ತದೆ.

**118**

**ಅರುವತ್ತಾರು ಕೋಟಿ ಬಂಟರು ಹೆಚ್ಚಿ ಬಾಳಲಿಕೆ ಸತ್ತರೆಂದೆನಿಸಿದೆ.**
**ಅಟ್ಟೋಗರವನವರ ಹಿಂಡೆಯ ಕೂಳಿಗಿಕ್ಕಿಸಿದೆ**
**ನಾನುಂಬುದೇನು ಹೇಳಾ,**
**ಕಪಿಲಸಿದ್ಧ ಮಲ್ಲಿನಾಥಾ ನೀನೊಬ್ಬನೆಯಾದೆ.**

ಹಲವಾರು ಜನ್ಮಗಳಿಂದ ಬಂದ ಅಜ್ಞಾನವು ತಾನು ವಾಸ ಮಾಡಿದ ದೇಹವನ್ನೇ ವೈರಿಯಾಗಿ ಕಾಡುತ್ತದೆ. ಅರವತ್ತಾರು ಕೋಟಿ ಅಜ್ಞಾನಿ ಬಂಟರು ಒಂಟಿ ದೇಹದಲ್ಲಿ ಕಡುವೈರಿಗಳಾಗಿ ಕಾಡುತ್ತಿರುವುದಕ್ಕೆ ಈ ವಚನ ಸಾಕ್ಷಿಯಾಗಿದೆ. ದೇಹ ಮೂರ್ತರೂಪದ್ದಾದರೂ ಅಜ್ಞಾನ ಕೂಡಾ ಅಮೂರ್ತ ರೂಪ; ಅದು ಕಾಣುವುದಿಲ್ಲ. ಅದನ್ನು ಅನುಭವಕ್ಕೆ ತೆಗೆದುಕೊಂಡರೆ ಮಾತ್ರ ಅಯ್ಯೋ ಇಷ್ಟೊಂದು ಆಪತ್ತು ನೀಡುವ ಅಜ್ಞಾನ ದೇಹದಲ್ಲಿದೆಯಲ್ಲ ಅದನ್ನು ಕಳೆದುಕೊಳ್ಳುವುದು ಹೇಗೆ ಎಂದು ಚಿಂತೆ ಹತ್ತುತ್ತದೆ. ಅರಿಷಡ್ವರ್ಗಗಳು, ಅಷ್ಟ ಮದಗಳು, ಸಪ್ತ ವ್ಯಸನಗಳು ಕೂಡಾ ದೇಹವನ್ನು ದೇಹದ ರೂಪದಲ್ಲಿಯೇ ಕಾಡುತ್ತವೆ.

ದೇಹ ಒಂದೇ ಆದರೂ ಆ ದೇಹದಲ್ಲಿಯೇ ವ್ಯಾಸಮಹರ್ಷಿಗಳು ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಸೃಷ್ಟಿಸಿದರು. ಅಲ್ಲಿ ಅವರೆಲ್ಲರನ್ನು ಎದುರಿಸಿ ನಿಲ್ಲಬಲ್ಲ ಐದು ಜನ ಪಾಂಡವರನ್ನು ದೇಹದಲ್ಲಿಯೇ ಸೃಷ್ಟಿ ಮಾಡಿದರು. ಹಾಗೆಯೇ ಅಜ್ಞಾನದ ಕಡುವೈರಿಗಳಾದ ನೂರಾಒಂದು ಕೌರವರನ್ನು ದೇಹದಲ್ಲಿಯೇ ಸೃಷ್ಟಿಸಿದರು. ಇದೆಲ್ಲವನ್ನು ಸಾಕ್ಷಿಯಾಗಿ ನೋಡಬಲ್ಲ ತನ್ನ ಚಾಣಾಕ್ಷತನದಿಂದ ಅವರೆಲ್ಲರನ್ನು ತಿಳಿಯಬಲ್ಲ ಮಹಾಜ್ಞಾನಿ ಶ್ರೀ ಕೃಷ್ಣನನ್ನು ಕೂಡಾ ದೇಹದಲ್ಲಿಯೇ ಸೃಷ್ಟಿಸಿದರು.

ಇವರೆಲ್ಲರಿಗೂ ಆಶ್ರಯ ನೀಡಿದ ದೇಹವನ್ನೇ ರಥವನ್ನಾಗಿಸಿ ಮಹಾಭಾರತದ ಕಥೆಯನ್ನು ಹೆಣೆದರು.

ಅದರಲ್ಲಿ ಭಗವದ್ಗೀತೆಯನ್ನು ಇಟ್ಟು ''ಧರ್ಮಕ್ಷೇತ್ರೇ, ಕುರುಕ್ಷೇತ್ರೇ ಸಮವೇತಾ

ಯುಯುತ್ಸವಃ ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ । ''. ಭಗವದ್ಗೀತೆಯ ಈ ಎರಡು ಸಾಲಿನ ಮೊದಲ ಅಧ್ಯಾಯದ ಮೊದಲನೇ ಶ್ಲೋಕದಲ್ಲಿ ವ್ಯಾಸ ಮಹರ್ಷಿಗಳು ಅದ್ಭುತವಾದ ಅರ್ಥವನ್ನೇ ಅಡಗಿಸಿದರು.

ದೇಹ ಧರ್ಮಕ್ಷೇತ್ರವೂ ಹೌದು. ಕುರುಕ್ಷೇತ್ರವೂ ಹೌದು. ಇದರಲ್ಲಿ ಯುದ್ಧದ ಇಚ್ಛೆಯುಳ್ಳ ಅಜ್ಞಾನಿ ಸೈನಿಕರು ಇದ್ದಾರೆ ಅವರನ್ನು ಹೊಡೆದುರುಳಿಸಿ ಧರ್ಮಕ್ಷೇತ್ರವನ್ನಾಗಿಸುವ ಪಾಂಡವರೂ ಇದ್ದಾರೆ. ಇದೆಲ್ಲವನ್ನು ಸಮಚಿತ್ತದಿಂದ, ಸಮಭಾವದಿಂದ ನೋಡುವ ವಿರಾಟ ಸ್ವರೂಪಿ ಶ್ರೀಕೃಷ್ಣನೂ ಇದ್ದಾನೆ.

ಅರವತ್ತಾರು ಕೋಟಿ ಬಂಟರು ದೇಹವನ್ನೇ ಹರಿದು ತಿನ್ನುತ್ತಾ ದೇಹದಲ್ಲಿಯೇ ನೆಲೆಸಿದ್ದಾರೆ. ಈ ಬಂಟರು ಯಾರೆಂದು ಗೊತ್ತಾದರೆ ಸಾಕು ಅವರ ಬಾಧೆ ತಾಳದೆ ತಾನು ಮಹಾಜ್ಞಾನಿ ಕಪಿಲಸಿದ್ಧ ಮಲ್ಲಿನಾಥನಿಗೆ ಶರಣು ಹೋಗುತ್ತಾನೆ; ಆಗ ಆ ತಂದೆ ಬಂಟರೆಲ್ಲರಿಗೂ ಓಗರ ಬೇಯಿಸಿ ಹಿಂಡೆಯ ಕೂಳನ್ನು ಇಟ್ಟು ಬದುಕಿದ್ದಾಗಲೇ ಸಮಾಧಿ ಮಾಡಿ ಇಲ್ಲವಾಗಿಸುತ್ತಾನೆ. ಅರವತ್ತಾರು ಕೋಟಿ ಬಂಟರೊಂದಿಗೆ ಇದ್ದು ಇಲ್ಲದಂತಿರುವ ಕಪಿಲಸಿದ್ಧ ಮಲ್ಲಿಕಾರ್ಜುನ ಬಂಟರನ್ನು ಸಾಯಿಸಿ ತಾನೊಬ್ಬನೆ ಮಾಲಕನಾಗುತ್ತಾನೆ. ಆಗ ದೇಹ ಅರಿವಿನ ಧರ್ಮಕ್ಷೇತ್ರವಾಗುತ್ತದೆ. ವಿರಾಟ ಸ್ವರೂಪಿಯಾಗುತ್ತದೆ. ಜಗದಗಲ ಮುಗಿಲಗಲವಾಗಿ ನಿಲ್ಲುತ್ತದೆ. ಅತ್ಯತಿಷ್ಠದ್ದಶಾಂಗುಲಂ ಎಂದು ಸಾರುತ್ತದೆ.

**119**

**ಅರೂಪ ರೂಪ ಭಾವನೆ ; ರೂಪ ಅರೂಪ ಭಾವನೆ**
**ಸಾರೂಪ್ಯಲಿಂಗವೆ ಶರಣು ಶರಣು**
**ಅವಧಾರವಧಾರು ಅಯ್ಯಾ ,**
**ಎನ್ನ ಕರಣ ಶುದ್ಧವ ಮಾಡುವನೆ ; ಕರುಣಾಕರರೂಪನೆ**
**ತನುಮನಧನಕ್ಕೆ ಒಡೆಯನೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲಜನಕವೂ ಜಲವಲ್ಲ ; ಆಮ್ಲಜನಕವೂ ಜಲವಲ್ಲ. ಇವೆರಡನ್ನೂ ಬಯಲೆಂಬ ನಿನ್ನ ಗರ್ಭದಲ್ಲಿ ಸೃಷ್ಟಿ ಮಾಡಿದೆ. ಇವೆರಡಕ್ಕೂ ರೂಪಿಲ್ಲ; ಅರೂಪು. ಬಯಲೆಂಬ ನೀನು ಜಲಜನಕವನ್ನೂ, ಆಮ್ಲಜನಕವನ್ನೂ ಕೂಡಿಸಿ ನೀನು ಅದರಲ್ಲಿ ಸಂಗಮಗೊಂಡು ಜಲಬಿಂದುವಾಗಿಸಿದೆ. ಇದು ಅರೂಪವಾದರೂ ರೂಪದ ಭಾವನೆ ಜಲದಲ್ಲಿ ತುಂಬಿದೆ. ನಿನ್ನ ಲೀಲೆ ಅನಂತ.

ಜೀವ ಜಲಬಿಂದುವಿನಲ್ಲಿ ಸಾರೂಪ್ಯ ಅರಿವಿನ ಲಿಂಗವಾಗಿ ಸಂಗಮಗೊಂಡು ಗರ್ಭಕ್ಕೆ ಚಿಮ್ಮಿ ಅರೂಪ-ರೂಪಭಾವನೆವುಳ್ಳ ಲಿಂಗಾಂಗವಾಗಿ ಭೂಮಿಗೆ ಬಂದೆ; ಸಾರೂಪ್ಯ ಲಿಂಗವೆ ನಿನಗೆ ಶರಣು ಶರಣು ಅವಧಾರು ಅವಧಾರು ಅಯ್ಯಾ .

ನಿನ್ನ ಬೆಳಕಿನ ನೆರಳೇ ಅರೂಪವೆಂಬ ಮನವಾಗಿ ರೂಪಕ್ಕೆ ಭಾವನೆಯಾಗಿ ಆವರಿಸಿತು. ಅರೂಪವೂ ಒಂದು ಭಾವನೆಯಾಗಿ ರೂಪವನ್ನು ಕಾಡಿತು. ರೂಪದಲ್ಲಿಯೇ ಸಾರೂಪ್ಯ ಲಿಂಗವಾಗಿ ಬೆಳಗಿಂಗೆ ಬೆಳಕಾಗಿ ಬೆಳಗುವ ತಂದೆಯೇ ನಿನಗೆ ಶರಣು ಶರಣು; ಅವಧಾರು ಅವಧಾರು ಅಯ್ಯಾ.

ರೂಪಕ್ಕೆ ರೂಪವಾಗಿ ಕಾಡುವ ಅರೂಪಭಾವನೆಯ ಕರಣಂಗಳು; ರೂಪಕ್ಕೆ ಅರೂಪವಾಗಿ ಕಾಡುವ ಅರೂಪಭಾವನೆಯ ಕರಣಂಗಳು ಸಾರೂಪ್ಯಲಿಂಗವಾದ ನಿನ್ನನ್ನೇ

ಮರೆತಿವೆ. ನೀನು ವಾಸ ಮಾಡಿದ ನಿನ್ನದೇ ರೂಪವುಳ್ಳ ದೇಹವೆಂಬ ದೇವಾಲಯವನ್ನು ಅರೂಪ ಭಾವನೆಯಾಗಿ ಕಾಡುತ್ತಲಿದೆ.

ಕರಣಂಗಳ ಸೃಷ್ಟಿ ಮಾಡಿ ಅರೂಪವುಳ್ಳ ಆ ಹೆಗ್ಗಣಗಳನ್ನು ನಿನ್ನ ರೂಪದಲ್ಲಿಯೇ ತುಂಬಿ ಅದರಲ್ಲಿ ನೀನು ನಿಶ್ಚಿಂತೆಯಿಂದ ಇದ್ದ ಕರುಣಾಕರ ನೀನು; ಸಾರೂಪ್ಯ ಲಿಂಗ ನೀನು; ನಿನಗೆ ಶರಣು ಶರಣು. ನೀನು ಸೃಷ್ಟಿ ಮಾಡಿದ ಕರಣಂಗಳನ್ನು ನೀನು ಮಾತ್ರ ಶುದ್ಧ ಮಾಡಬಲ್ಲೆ ; ನಿನಗೆ ಶರಣು ಶರಣು ಅವಧಾರು ಅವಧಾರು ಅಯ್ಯಾ.

ತನುವಿಗೆ, ತನುವನ್ನು ಆವರಿಸಿದ ಮನಕ್ಕೆ, ಅರಿವೆಂದು ಸಂಪಾದಿಸಿದ ಮರೆವಿನ ಧನಕ್ಕೆ ಒಡೆಯ ನೀನು. ಕುರಾನ್ ಬೈಬಲ್ ಭಗವದ್ಗೀತೆಗಳು ಎನ್ನ ಕರಣಂಗಳನ್ನು ಶುದ್ಧ ಮಾಡಲರಿಯವು. ಇದನ್ನೇ ಸಂಪತ್ತು ಎಂದು, ಆಪದ್ಧನವೆಂದು ಮನವೆಂಬ ಅರೂಪ ತನುವಿನಲ್ಲಿ ಸಂಗ್ರಹ ಮಾಡಿಕೊಂಡೆ. ನಾನು ಎನಿಸು ಕಾಲ ಬೊಗಳಿದರೂ ಕರಣಂಗಳು ಶುದ್ಧಿಯಾಗಲು ಸಾಧ್ಯವೆ? ಅರೂಪು ರೂಪದಲ್ಲಿಯೇ ಸಂಗಮಗೊಂಡ ಸಾರೂಪ್ಯ ಲಿಂಗಯ್ಯನಿಗೆ ಶರಣು ಹೋಗಲು ಸಾಧ್ಯವೆ?

ರೂಪ ಅರೂಪ ಭಾವನೆಗಳು ಅಳಿದು ರೂಪದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಶರಣು ಹೋದಾಗ ಕರಣಂಗಳೇ ಲಿಂಗ ಕಿರಣಂಗಳಾಗುವವು. ಸಾರೂಪ್ಯ ಲಿಂಗವೇ ನಿನಗೆ ಶರಣು ಶರಣು.

**120**

**ಅವನ ನಚ್ಚಿ ನಮ್ಮ ಬಿಟ್ಟರು ಬಿಡ ಬಿಡ ಬಿಡನೆಂತೊ,**
**ಅವನೆಂದರಿಯೆನು ಎಮ್ಮವರು ಕರ ಮುಗಿವರು.**
**ಅವನ ತಂದು ಕೊಡಿರಣ್ಣಾ ಎಂದೆನುತ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಮನಸ್ಸು ಎನ್ನುವುದು ಮರ್ಕಟ. ಅದು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಮೆಚ್ಚಿಕೊಂಡಿದೆ. ಹಾಗೆಯೇ ಅಷ್ಟಮದಗಳನ್ನು ಸಪ್ತವ್ಯಸನಗಳನ್ನು ಮೆಚ್ಚಿಕೊಂಡು ದೇಹವನ್ನು ಬಿಡದಂತೆ ದೇಹವನ್ನೇ ಅಪ್ಪಿಕೊಂಡು ಅಜ್ಞಾನದಿಂದ ಮನಸ್ಸು ತನ್ನ ಸಂಸಾರವನ್ನು ದೇಹದೊಂದಿಗೆ ನಡೆಸುತ್ತದೆ. ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಮೆಚ್ಚಿಕೊಂಡಿಲ್ಲ. ಅರಿವನ್ನು ಮೆಚ್ಚಿ ಆ ಅರಿವಿನೊಂದಿಗೆ ಸಂಗಮವಾಗಿ ಕಾಯವನ್ನೇ ಕೈಲಾಸ ಮಾಡಿಕೊಂಡು ಆ ಕೈಲಾಸದಲ್ಲಿ ಮನ ಘನಮನವಾಗಿ ಅರಿವಿನ ಸಂಸಾರ ಹೂಡಬೇಕಾಗಿತ್ತು. ಆದರೆ ಅಜ್ಞಾನವನ್ನು ಮೆಚ್ಚಿಕೊಂಡು ಮನ ದೇಹವನ್ನು ಬಿಡದೆ ದೇಹದೊಂದಿಗೆ ಅಜ್ಞಾನದ ಸಂಸಾರ ಹೂಡಿದೆ.

ದೇಹವನ್ನು ಮೆಚ್ಚಿಕೊಂಡ ಮನ ದೇಹವನ್ನು ಬಿಡುತ್ತಿಲ್ಲ. ಅರಿವನ್ನು ಮೆಚ್ಚಿಕೊಂಡ ಮನ ಘನಮನವಾಗಿ ಆ ಅರಿವಿಗೆ ಶರಣು ಹೋಗಿ ಶರಣನೆ ತಾನಾದ ಮನ ಅರಿವಿಗೆ ಸತಿಯಾಗಿದೆ. ಆ ಅರಿವನ್ನೇ ಪತಿಯಾಗಿಸಿಕೊಂಡು ಕಾಯವನ್ನೇ ಕೈಲಾಸವನ್ನಾಗಿಸಿಕೊಂಡು ಅರಿವಿನ ಸಂಸಾರ ಮಾಡುತ್ತದೆ. ಆ ಮನ ಘನಮನವಾಗಿ ಅರಿವೆಂಬ ಗುರುದೇವನನ್ನು ಮೆಚ್ಚಿಕೊಂಡು ಅವನನ್ನೇ ಗಟ್ಟಿಯಾಗಿ ಹಿಡಿದುಕೊಂಡಿದೆ. ಹೀಗೆ ಘನಮನವಾದ ಮನ ಅಜ್ಞಾನವನ್ನು ಹಿಡಿದುಕೊಳ್ಳುವುದಿಲ್ಲ. ಅರಿವನ್ನು ಬಿಡುವುದಿಲ್ಲ.

ಮನ ಘನಮನವಾಗಿ ಅರಿವೆಂಬ ಗುರುದೇವನನ್ನು ನೆಚ್ಚಿ ಶಿರಬಾಗಿ ಅವನಿಗೆ ಕರ

ಮುಗಿವುದು. ಮನವೆಂದರೆ ಮರ್ಕಟ. ಹಿಡಿದ ಅಜ್ಞಾನವನ್ನು ಬಿಡುವಂತಿಲ್ಲ. ಆ ಅಜ್ಞಾನದಲ್ಲಿ ಸುಖಿಸುವ ಮನಕ್ಕೆ ಅರಿವೆಂಬ ಗುರುದೇವ ಪರಿಚಯವಾದರೆ ಮರ್ಕಟವಾದ ಮನವೆ ಅರಿವಿನ ಆಂಜನೇಯನಾಗುತ್ತದೆ.

ಸಿದ್ಧರಾಮ ಶಿವಯೋಗಿಗಳು ಈ ನಾಲ್ಕು ಸಾಲಿನ ವಚನದಲ್ಲಿ ಮನ ಅರಿವಿಗೆ ಹೋಗುವ ಸೂತ್ರವನ್ನು ರಹಸ್ಯವಾಗಿ ಬಚ್ಚಿಟ್ಟಿದ್ದಾರೆ. ಅರಿವನ್ನು ಮೆಚ್ಚಿದ ಮನ ಅರಿಷಡ್ವರ್ಗಗಳನ್ನು ಬಿಟ್ಟು ಅರಿವಿನೊಂದಿಗೆ ಸಂಗಮವಾಯಿತು. ಆ ಅರಿವಿನ ಸಂಗಯ್ಯನನ್ನು ಹಿಡಿದುಕೊಂಡ ಮನ ಮತ್ತೆ ಅರಿಷಡ್ವರ್ಗಗಳನ್ನು ಹಿಡಿದುಕೊಳ್ಳಲಿಲ್ಲ. ಅರಿವನ್ನು ಬಿಡಲಿಲ್ಲ. ಮತ್ತೆ ಅರಿಷಡ್ವರ್ಗವೆಂದರೆ ಏನು, ಸಪ್ತವ್ಯಸನಗಳೆಂದರೆ ಏನು, ಅಷ್ಟಮದಗಳೆಂದರೆ ಏನು, ಪುನಃ ಅದರ ಸಂಗ ಮಾಡಲಿಲ್ಲ ಏಕೆಂದರೆ ಅರಿಷಡ್ವರ್ಗಗಳ ಸಂಗ ಸುಖಕ್ಕಿಂತ ಅರಿವಿನ ಸಂಗಯ್ಯನ ಸುಖ ಮನಕ್ಕೆ ಹೆಚ್ಚಾಯಿತು. ಹೀಗಾಗಿ ಅವನನ್ನೇ ಮೆಚ್ಚಿ ನಮ್ಮನ್ನು ಬಿಟ್ಟರು ಎಂದು ಅರಿಷಡ್ವರ್ಗಗಳು ದುಃಖದಿಂದ ಬಳಲುತ್ತವೆ. ಹಾಗೆಯೇ ಅವನೆಂದರೆ ಯಾರು? ಅವನ ಸುಖ ನಮಗೆ ತಿಳಿದಿಲ್ಲ. ನಮ್ಮ ಸುಖ ಅವನಿಗೆ ಬೇಕಿಲ್ಲ. ಎಮ್ಮವರು ಆ ಗುರುದೇವನಿಗೆ ಕೈಮುಗಿಯುವರು. ಅವನ ಸುಖ ಅನುಭವಿಸುವುದು ನಮಗೆ ಗೊತ್ತಿಲ್ಲ. ಆ ಅರಿವೆಂಬ ಗುರುದೇವನನ್ನು ನಮಗೆ ತಂದು ಕೊಡಿರಣ್ಣಾ ಎಂದು ದುಃಖದಿಂದ ಬಳಲುತ್ತಾ ಅವನ ಸುಖಕ್ಕೆ ಕಾತುರದಿಂದ ಹಾಡುವ ಒಂದು ರಹಸ್ಯ ಇದರಲ್ಲಿ ಅಡಗಿಸಿಟ್ಟಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಕಪಿಲ ಎಂದರೆ ಹಸು, ಪಶು. ಪಶುವನ್ನೇ ವಾಹನ ಮಾಡಿಕೊಂಡು ಪಶುವಿನ ಮೇಲೆ ಕುಳಿತ ಮಲ್ಲಿಕಾರ್ಜುನನ ಪರಿಚಯ ಪಶುವಿಗಿಲ್ಲ. ಹೀಗಾಗಿ ಪಶು ವಿಷಯವೆಂಬ ಹಸುರಿನತ್ತ ಸಾಗುತ್ತಲಿದೆ. ಪಶುವಿಗೆ ಪಶುವಿನ ಒಡೆಯ ಪಶುಪತಿ ಎಂಬ ಅರಿವಿನ ಶಿವ ಪರಿಚಯವಾದಾಗಲೇ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನೆನ್ನುತ್ತಾನೆ.

**121**

**ಅವರನಿವರಗೆ ಹೇಳಲದೇಕೆ, ಇವರನವರಿಗೆ ಹೇಳಲದೇಕೆ?**
**ಒಬ್ಬರಿಗೆ ಹೇಳಿ ಕೂಗಿಡಲೇಕೆ, ಒಬ್ಬರಿಗೆ ಕಣ್ಣುಗಳ ಹರಹರಿಕೆ,**
**ಕಪಿಲಸಿದ್ಧ ಮಲ್ಲಿನಾಥಾ,**
**ನೀನಿಕ್ಕಿದ ತೊಡಕಿನ ನಾಟಕವೆಂಬುದ ನಾನರಿದೆ ನೋಡಯ್ಯಾ.**

ದೇಹದ ಅರಿವಿನ ರಹಸ್ಯವನ್ನು, ಅಜ್ಞಾನದ ಚಾಡಿಕೋರಿತನವನ್ನು ಸಕಲದೇಹಗಳಿಗೂ ಪರಿಚಯವಾಗುವಂತೆ ಸಿದ್ದರಾಮ ಶಿವಯೋಗಿಗಳು ಈ ವಚನದ ಮೂಲಕ ಬಿಚ್ಚಿಟ್ಟಿದ್ದಾರೆ.

ಕಣ್ಣು ನೋಡುತ್ತದೆ; ನೋಡುವ ಕಣ್ಣಿಗೆ ನೋಡುವುದು ಮಾತ್ರ ಗೊತ್ತಿದೆ. ನೋಡಿದ್ದನ್ನು ನೋಡಿದಂತೆ ಮಾತನಾಡಲು ಬರುವುದಿಲ್ಲ. ಆದರೆ ನೋಡದೆ ಇರುವ ಬಾಯಿಗೆ ನುಡಿಯಲು ಹೇಳುತ್ತದೆ. ನುಡಿಯುವ ಬಾಯಿಗೆ ನೋಡಲು ಬರುವುದಿಲ್ಲ. ಆದರೂ ನಾನೇ ನೋಡಿದೆನೆಂದು ನೋಡಲು ಬಾರದ ಬಾಯಿ ನುಡಿಯುತ್ತದೆ. ನೋಡಲು, ನುಡಿಯಲು ಬಾರದ ಕಿವಿ ಇದನ್ನು ಸತ್ಯವೆಂದೇ ಕೇಳಿ ಈ ದೇಹವನ್ನು ಅಜ್ಞಾನಕ್ಕೆ ಕರೆದುಕೊಂಡು ಹೋಗುತ್ತದೆ.

ನೋಡಲು, ಕೇಳಲು, ನುಡಿಯಲು ಬಾರದ ಮೂಗು ದುರ್ಗಂಧ, ಸುಗಂಧವನ್ನು ನೋಡುವ ಕಣ್ಣಿನ ಮೂಲಕ, ಕೇಳುವ ಕಿವಿಯ ಮೂಲಕ ಅರಿತು ತನ್ನ ಸುಳ್ಳು ವಾಸನೆಯನ್ನು

ಪುನಃ ಬಾಯಿಯ ಮೂಲಕ ರವಾನಿಸ್ತುತದೆ.

ಸುಗಂಧ, ದುರ್ಗಂಧ ಕಳೆದು ಪರಿಮಳದಂತೆ ಮೂಸಿಸುವ ಮೂಗು, ಮೂಗಿನಲ್ಲಿಯೇ ಇದ್ದರೂ ಮೂಗು ತನ್ನ ಸತ್ಯದ ಮೂಗನ್ನು ಕಂಡು ಹಿಡಿಯುವ ಶಕ್ತಿ ಕಳೆದುಕೊಂಡದ್ದಕ್ಕಾಗಿ ಬಾಯಿಗೆ ತನ್ನ ಸುಳ್ಳು ಸಂದೇಶವನ್ನು ಕಳುಹಿಸಿ ಕೂಗಲು ಹೇಳುತ್ತದೆ.

ಸ್ಪರ್ಶಿಸುವ ಚರ್ಮಕ್ಕೆ ನೋಡಲು ಬರುವುದಿಲ್ಲ. ಕೇಳಲು ಬರುವುದಿಲ್ಲ. ರುಚಿಸಲು ಬರುವುದಿಲ್ಲ. ಮೂಸಿಸಲು ಬರುವುದಿಲ್ಲ. ಅದಕ್ಕೆ ನುಡಿಯಲು ಬರುವುದಿಲ್ಲ; ಆದರೂ ಕೂಡಾ ಉದ್ರೇಕದ ಅಜ್ಞಾನದ ಸುಳ್ಳು ಸುಖವನ್ನು ಬಾಯಿಗೆ ರವಾನಿಸಿ ನಾನು ಮುಟ್ಟಿ ಸುಖಿಸಿದೆನೆಂದು ಬಾಯಿ ಕೂಗುತ್ತದೆ. ಬಾಯಿಗೆ ಮುಟ್ಟುವುದಕ್ಕೆ ಬರುವುದಿಲ್ಲವೆಂದು ಕೇಳುವ ಕಿವಿಗೆ ಗೊತ್ತಾಗುವುದೇ ಇಲ್ಲ. ಆದರೂ ಕಿವಿ ಬಾಯಿಯೇ ಮುಟ್ಟಿತೆಂದು ದೇಹಕ್ಕೆ ಸುಳ್ಳು ಸಂದೇಶ ರವಾನೆ ಮಾಡಿ ಅರಿವಿನ ದೇವಾಲಯದಂತಿರಬೇಕಾದ ದೇಹವನ್ನು ಕಾಮದಿಂದ ಉದ್ರಿಕ್ತಗೊಳಿಸಿ ಛಿದ್ರ ಛಿದ್ರ ಮಾಡುತ್ತದೆ.

ನಾಲಿಗೆಗೆ ರುಚಿಸಲು ಮಾತ್ರ ಬರುತ್ತದೆ. ನೋಡಲು ಬರುವುದಿಲ್ಲ, ಕೇಳಲು ಬರುವುದಿಲ್ಲ, ಮುಟ್ಟಲು ಬರುವುದಿಲ್ಲ, ಮೂಸಿಸಲು ಬರುವುದಿಲ್ಲ, ನುಡಿಯಲು ಬರುವುದಿಲ್ಲ. ಆದರೂ ತಾನೂ ರುಚಿಸಿದ ಪದಾರ್ಥವನ್ನು ಹುಳಿ, ಒಗರು, ಕಾರವೆಂದು ಸಿಹಿ, ಕಹಿ, ಕ್ಷಾರವೆಂದು ದೇಹಕ್ಕೆ ಸಂದೇಶ ನೀಡಿ ಬಾಯಿಯ ಮೂಲಕ ಬೊಗಳಿಸುತ್ತದೆ.

ನಾಲಿಗೆಗೆ ಅರಿವಿನ ಪರಿಚಯವಿಲ್ಲ. ಹೀಗಾಗಿ ರುಚಿಯ ಸತ್ಯ ಅದಕ್ಕೆ ಇರದೇ ಇರುವುದರಿಂದ ಅದು ದೇಹಕ್ಕೆ ಸುಳ್ಳು ಸಂದೇಶ ನೀಡಿ ಬಾಯಿಯ ಮೂಲಕ ಬೊಗಳಿಸುತ್ತದೆ.

ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆ ಇವು ಯಾವು ಮಾತನಾಡುವುದಿಲ್ಲ. ಇವುಗಳಿಗೆ ಮಾತನಾಡಲು ಬರುವುದಿಲ್ಲ. ಆದರೂ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಇಕ್ಕಿದ ತೊಡಕಿನ ನಾಟಕವೆಂಬುದು ಅವುಗಳು ಅರಿಯದೇ ಹೋಗುತ್ತವೆ.

ಕಣ್ಣಿನಲ್ಲೇ ಅರಿವಿನ ಕಣ್ಣಿದ್ದು. ಕಣ್ಣು ಆ ಅರಿವಿನ ಕಣ್ಣನ್ನು ಮರೆತಿರುವುದಕ್ಕಾಗಿ ಕಣ್ಣು ತೊಡಕಿನ ಈ ನಾಟಕದಲ್ಲಿ ಭಾಗಿಯಾಗಿದೆ.

ಕಿವಿಯಲ್ಲಿಯೇ ಅರಿವಿನ ಕಿವಿಯೊಂದು ಸಂಗಮವಾಗಿದೆ. ಆ ಕಿವಿಗೆ ಶಬ್ದ, ನಿಃಶಬ್ದಗೊಳಿಸಿ ಅರಿವಿನಿಂದ ಕೇಳುವ ಶಕ್ತಿ ಇದೆ. ಕಿವಿ ಈ ಕಿವಿಯ ಪರಿಚಯವಿಲ್ಲದ್ದಕ್ಕಾಗಿ ಕಿವಿ ಬಾಯಿಗೆ ಈ ಉಸಾಬರಿಯನ್ನು ಕೊಟ್ಟಿದೆ. ಹೀಗಾಗಿ ದೇಹದಲ್ಲಿ ಸುಳ್ಳಿನ ತೊಡಕಿನ ನಾಟಕ ನಡೆದಿದ್ದರೂ ದೇಹಕ್ಕೆ ಸತ್ಯದ ಪರಿಚಯವಿಲ್ಲದೆ ಸತ್ಯವೆಂದೇ ನಂಬಿ ಇಡೀ ದೇಹ ತೊಡಕಿಗೆ ಗುರಿಯಾಗಿದೆ.

ಚರ್ಮದಲ್ಲಿ ಅರಿವಿನ ಸ್ಪರ್ಶದ ಶಕ್ತಿಯಿದೆ. ಅದು ತನ್ನನ್ನು ತಾನೇ ಮುಟ್ಟಿಕೊಂಡಾಗ ತನಗೆ ಕಾಮವಿಲ್ಲ, ಕ್ರೋಧವಿಲ್ಲ, ಕರುಣೆಯಿಲ್ಲ ಎಂದು ಅರಿವಾಗುತ್ತದೆ. ಈ ಅರಿವನ್ನು ಕೂಡಾ ಮರೆತು ತನ್ನಂತಹ ಪದಾರ್ಥ ತುಂಬಿಕೊಂಡ ದೇಹ ತನಗೆ ತಾಕಿದಾಗ ಅಜ್ಞಾನದಿಂದ ಕಾಮ ಕೆರಳುತ್ತದೆ. ಸಿಗದೇ ಇದ್ದಾಗ ಕ್ರೋಧದ ಪರಿಚಯವಾಗುತ್ತದೆ. ಆ ಸುಖ ತನಗೆ ಸಿಕ್ಕಾಗ ಅದು ಮತ್ತೊಬ್ಬರಿಗೆ ಸಿಗಬಾರದೆಂಬ ಲೋಭ ಚರ್ಮದಲ್ಲಿಯೇ ಉತ್ಪನ್ನವಾಗುತ್ತದೆ. ಜೊತೆಗೆ ಮೋಹ, ಮದ, ಮತ್ಸರಗಳು ಆ ದೇಹದಲ್ಲಿಯೇ ಹುಟ್ಟಿ ಆ ದೇಹದಲ್ಲಿಯೇ ಆಶ್ರಯ ಪಡೆದು; ದೇಹವನ್ನೇ ನರಕಕ್ಕೀಡು ಮಾಡುತ್ತದೆ.

ಕಪಿಲಸಿದ್ಧ ಮಲ್ಲಿನಾಥನೆಂಬ ಗುರುದೇವನೇ; ನೀನು ಇವೆಲ್ಲ ಬಲ್ಲವನು. ಏಕೆಂದರೆ ನೀನು ಸಕಲ ಜ್ಞಾನವುಳ್ಳ ಮಹಾಮೇಧಾವಿ. ನಿನ್ನಿಂದಲೇ ಸೃಷ್ಟಿಯಾದ ಮನವೆಂಬ ಕತ್ತಲು ನಾನು; ಅರಿವೆಂಬ ಬೆಳಕು ನೀನು. ಕತ್ತಲೆಯಲ್ಲಿ ಬಿದ್ದ ವಸ್ತುಗಳು ಕಾಣಬರುವುದಿಲ್ಲ. ಹಾಗೆಯೇ

ಮನವೆಂಬ ನನಗೆ ಏನೂ ಕಂಡುಬರುವುದಿಲ್ಲ. ಏನೂ ಕಂಡುಬರದ ನನ್ನಲ್ಲಿ ನೀನೆ ಸಂಗಮವಾಗಿ ನೀನು ನನಗೆ ನಿನ್ನನ್ನು ತಿಳಿಯದಂತೆ ತೊಡಕನಿಕ್ಕಿದೆ. ನೀನಿಕ್ಕಿದ ತೊಡಕಿನ ನಾಟಕವೆಂಬುದನ್ನು ನಾನು ನಿನ್ನಿಂದಲೇ ಅರಿತೆ ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನ.

**122**

**ಅವರವರ ನುಡಿದ ನುಡಿಯ**
**ಅವರವರಿಗೆ ಹಾಸುವೆನಯ್ಯಾ, ನೋಡಾ ! ಅಯ್ಯಾ !**
**ಮತ್ತೆ ಮಾರುಗೊಂಡಡೆ ಮಾರಾಟಕ್ಕೆ ಸಂದಿತೆಂಬೆ ನೋಡಯ್ಯಾ.**
**ಮತ್ತೆ ಮಾರುಗೊಳ್ಳದಿರ್ದಡೆ ಮಾರಾಟಕ್ಕೆ ಸಲ್ಲದೆಂಬೆ ನೋಡಯ್ಯಾ.**
**ನೋಡಯ್ಯಾ, ಈ ಹುಟ್ಟು ಸ್ಮರಣೆ ಸಮತೆಯುಳ್ಳಡೆ**
**ತನ್ನನೆ ಕೂಡಿಕೊಂಬನೈ**
**ಎನ್ನ ಕಪಿಲಸಿದ್ಧಮಲ್ಲೇಶ್ವರದೇವ, ಹಾ ! ಅಯ್ಯಾ !**

ದೇಹದಲ್ಲಿ ಅದ್ಭುತವಾದ ಒಬ್ಬ ಮಹಾಜ್ಞಾನಿ ಇದ್ದಾನೆ. ಹಾಗೆಯೇ ಅವನ ಪರಿಚಯವಿಲ್ಲದ ಮನವೆಂಬ ಅಜ್ಞಾನಿಯೂ ಇದ್ದಾನೆ. ಈ ಮನವೆಂಬ ಅಜ್ಞಾನಿ ದೇಹವನ್ನು ಬಳಸಿಕೊಂಡು ನುಡಿಯ ಮೂಲಕ ಅನ್ಯ ದೇಹಕ್ಕೆ ನಿಂದೆಯ ಮಾಡಿದರೆ, ತಾನು ಮಾಡಿದ ನಿಂದೆ ತನ್ನಲ್ಲಿಯೇ ಉಳಿಯುತ್ತದೆ.

ಅವರವರ ನುಡಿದ ನುಡಿಯ ಅವರವರಿಗೆ ಹಾಸುವೆನಯ್ಯಾ, ನೋಡಾ ಅಯ್ಯಾ:

ದೇಹದಲ್ಲಿ ಸಂಗಮವಾದ ಮಹಾಜ್ಞಾನಿ ಮತ್ತೊಂದು ದೇಹಕ್ಕೆ ದೇಹದ ಕುರಿತು ನುಡಿಯುವ ನುಡಿಯ ಸಹಿಸುವುದಿಲ್ಲ. ನುಡಿದ ಆ ನುಡಿಯನ್ನು ನುಡಿದ ದೇಹದಲ್ಲಿಯೇ ಇಟ್ಟು ಆ ದೇಹಕ್ಕೆ ನರಕ ಯಾತನೆಯನ್ನು ಉಂಟು ಮಾಡುತ್ತಾನೆ. ಕರ್ಕಶ ಮತ್ತು ನೋವಿನಿಂದ, ದುಃಖದಿಂದ ಕೇಳಿದ ನುಡಿಗಳನ್ನು ಕೂಡಾ ದೇಹದಲ್ಲಿಯೇ ಇಟ್ಟು ಕೇಳಿದ ದೇಹಕ್ಕೆ ನುಡಿದ ದೇಹಕ್ಕೆ ಬಾಧೆಯುಂಟು ಮಾಡುತ್ತಾನೆ.

ಸುಖದಿಂದ ಕೇಳಿದ ನುಡಿಗಳನ್ನು ಸಹಿತ ದೇಹದಲ್ಲಿಯೇ ಇಟ್ಟು ಬಾಧೆಯನ್ನುಂಟು ಮಾಡುತ್ತಾನೆ. ಮನುಷ್ಯನಿಗೆ ಮಾತುಗಳನ್ನು ಸುಖದಿಂದ ಮತ್ತು ದುಃಖದಿಂದ ಕೇಳಲು ಬರುತ್ತದೆಯೇ ಹೊರತು ಅರಿವಿನಿಂದ ಕೇಳಲು ಬರುವುದಿಲ್ಲ. ಹೀಗಾಗಿ ಅವರವರು ಕೇಳಿದ ನುಡಿಗಳು, ಅವರವರು ನುಡಿದ ನುಡಿಗಳು ಅವರವರಲ್ಲಿಯೇ ಉಳಿದು ಅವರಿಗೆ ಬಾಧೆಯನ್ನುಂಟು ಮಾಡುತ್ತವೆ.

ಮನುಷ್ಯನಿಗೆ ಮಾತು ಕೇಳಲು ಬರುವುದಿಲ್ಲ ಮತ್ತು ನುಡಿಯಲು ಬರುವುದಿಲ್ಲ. ಏಕೆಂದರೆ ಮನುಷ್ಯನಾದವನು ಮನಸ್ಸಿನಿಂದ ಕೂಡಿದ್ದಾನೆ. ಮನುಷ್ಯನಲ್ಲಿ ಮನಸ್ಸೇ ಕೆಲಸ ಮಾಡುತ್ತದೆ. ಮನಸ್ಸು ಎಂಬುದು ಇಲ್ಲದ್ದು. ಹೇಗೆ ಬೇಸಿಗೆಯಲ್ಲಿ ಮರೀಚಿಕೆ ಕಾಣುತ್ತದೆಯೋ ಹಾಗೆಯೇ ಮನಸ್ಸು ಇದೆಯೆಂದು ಮನುಷ್ಯನಿಗೆ ತಿಳಿಯುತ್ತದೆ. ಮನಸ್ಸೇ ಏನೆಲ್ಲಾ ಮಾಡುತ್ತದೆ ಎಂದು ಮನುಷ್ಯ ದೇಹದೊಂದಿಗೆ ಮನಸ್ಸಿಗೆ ಮಾರುಹೋಗಿದ್ದಾನೆ. ಮನುಷ್ಯನಲ್ಲಿದ್ದ ಜ್ಞಾನವನ್ನು ಮನುಷ್ಯನೇ ಮರೆತಿದ್ದಾನೆ.

ಬೇಸಿಗೆಯಲ್ಲಿ ಕಂಡುಬರುವ ಮೃಗಜಲವನ್ನು ನೋಡಿದಾಗ ಬಾಯಾರಿದ ಮನುಷ್ಯನನ್ನು ನೀರಿದೆ ಎಂದು ಹತ್ತಿರ ಹತ್ತಿರ ಕರೆದುಕೊಂಡು ಹೋಗುತ್ತದೆ. ಆದರೆ ನೀರು

ಸಿಗುವುದೇ ಇಲ್ಲ. ಬಾಯಾರಿ ನೀರಿಗಾಗಿ ಸಾಯುವುದು ತಪ್ಪುವುದಿಲ್ಲ. ಹಾಗೆಯೇ ಮನಸ್ಸು ಇಲ್ಲದ ವಸ್ತುಗಳಿಗೆ ಮಾರುಹೋಗುತ್ತದೆ ಮತ್ತು ಭಕ್ತಿ ಮಾಡುತ್ತದೆ. ವಸ್ತುವಿನಲ್ಲಿದ್ದ ಸತ್ಯ ಮನಸ್ಸಿಗೆ ಗೋಚರಿಸುವುದಿಲ್ಲ. ಹೀಗಾಗಿ ಮಾತು, ದೃಶ್ಯ , ಸ್ಪರ್ಶ, ರುಚಿ, ವಾಸನೆಗಳಿಗೆ ಮತ್ತೆ ಮತ್ತೆ ಮನಸ್ಸು ಮಾರುಗೊಳ್ಳುತ್ತದೆ.

ಉದಾ: ಕಲ್ಲಿನಲ್ಲಿ ಮೂರ್ತಿ ಕೆತ್ತಿದ ತಕ್ಷಣ ಮೂರ್ತಿ ಕಂಡ ಮನಸ್ಸಿಗೆ ಭಕ್ತಿ ಉಂಟಾಗಿ ದೇವರೆಂದು ಕೈ ಮುಗಿಯುತ್ತದೆ. ಮನಸ್ಸು ಕಲ್ಲನ್ನು ನೋಡಿ ಕಲ್ಲೆನ್ನುತ್ತದೆ. ಕೆತ್ತಿದ ಕಲ್ಲನ್ನು ಮರೆತು ದೇವರೆನ್ನುತ್ತದೆ. ವಸ್ತುವಿನ ಸತ್ಯ ಕಂಡುಕೊಳ್ಳುವ ಶಕ್ತಿ ಮನಕ್ಕೆ ಇಲ್ಲದ್ದರಿಂದ ವಸ್ತುವಿನಲ್ಲಿಯ ಕಲ್ಲು ಎನ್ನುವ ಸತ್ಯ ಜ್ಞಾನದ ಕಣ್ಣಿನಲ್ಲಿಯೇ ಉಳಿದು ಅಜ್ಞಾನದ ಕಣ್ಣಿಗೆ ಮೂರ್ತಿ ಮಾತ್ರ ಬಳಕೆಯಾಗುತ್ತದೆ. ಮೂರ್ತಿ ಎಂಬ ದೇವರಿಗೆ ಮಾರು ಹೋಗಿ ಆ ದೇವರನ್ನೇ ವ್ಯವಹಾರವನ್ನಾಗಿ ಮಾರಾಟದ ಸರಕನ್ನಾಗಿ ಮಾಡಿಕೊಂಡು ದೇಹವನ್ನು ಅಜ್ಞಾನದಿಂದ ದಂಡಿಸುತ್ತದೆ. ಇಂತಹ ಅಜ್ಞಾನಕ್ಕೆ ನನ್ನನ್ನು ಮಾರುಗೊಳ್ಳುವಂತೆ ಮಾಡದೆ ಜ್ಞಾನದ ದೇಹವನ್ನು ಮಾರಾಟದ ಸರಕನ್ನಾಗಿಸದೆ ನೋಡಯ್ಯಾ ಎಂದು ಮನದಿಂದಲೇ ಮಹಾಜ್ಞಾನವೆಂಬ ದೇವರನ್ನು ಬೇಡಲು ಮನಕ್ಕೆ ಬಂದಾಗ ಮಾತ್ರ ಮನದಲ್ಲಿ ಸಹಜತೆ ಹುಟ್ಟಿ ಸಮತೆಯಿಂದ ನಡೆದುಕೊಳ್ಳುತ್ತದೆ. ಮಹಾಜ್ಞಾನದೊಂದಿಗೆ ಬೆರತು ಆ ಜ್ಞಾನವೇ ತಾನಾಗುತ್ತದೆ.

**123**

**ಅಷ್ಟಮ ಬ್ರಹ್ಮಕ್ಕೆ ಪಟಗಟ್ಟಿತ್ತು, ಮಾತೆ**
**ಹೆತ್ತು ಹೆಸರಿಟ್ಟಿತ್ತೈ , ಅಕ್ಷರಾಂಕ**
**ಆರುವನು ಐದುವನು ಮೇಲಪ್ಪ ಮೂರುವನು**
**ಕೂಡೆ ಹದಿನಾಲ್ಕರೊಳು ಲೋಕವಾಗೆ;**
**ಏಕೈಕ ರುದ್ರ ನಿನ್ನಾಕಾರ ಚತುಷ್ಟಯಕೆ**
**ಅನೇಕ ಪರಿಯಿಂ ಮಾತೆ ಬಸವಾಕ್ಷರ.**
**ಅನಾದಿ ಮುಖಶೂನ್ಯವಾಗಿಪ್ಪ ಲಿಂಗವನು**
**ಖ್ಯಾತಿ ಮಾಡಿದ ಬಸವ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ಬ್ರಹ್ಮಕ್ಕೆ ಮನವೆಂಬ ಭ್ರಮೆ ಆವರಿಸಿ, ಬ್ರಹ್ಮನನ್ನೇ ಕಾಣದಂತೆ ಮಾಡಿ, ಅರಿವಿನ ಕಾಯವನ್ನೇ ಮರೆವಿನ ಸಾಮ್ರಾಜ್ಯವಾಗಿ ಮಾಡಿಕೊಂಡು, ಮನ ಕಾಯದಲ್ಲಿಯೇ ತನ್ನ ರಾಜ್ಯಭಾರ ಮಾಡುತ್ತಿದೆ. ಮನವೆಂದರೆ ಸಾಮಾನ್ಯವಲ್ಲ; ಕಾಯಕ್ಕೆ ಜನ್ಮ ನೀಡಿದ ಮಾತೆ!

ಕಾಯಕ್ಕೆ ಹೆಸರಿಟ್ಟು, ಆ ಹೆಸರೆ ಗಟ್ಟಿಯಾಗಿ ಕಾಯದಲ್ಲಿ ಹೆಸರಿನ ಸಾಮ್ರಾಜ್ಯವೇ ಸೃಷ್ಟಿಯಾಯಿತು. ಕಾಯ, ಕಾಯವನ್ನೇ ಮರೆತು; ಕಾಯದೊಳಗೆ ಸಂಗಮವಾದ ಅಕ್ಷರೋತ್ತಮನೆಂಬ ಅರಿವಿನ ಗುರುದೇವನನ್ನು ಮರೆತು; ಮನ ಐದು ಜ್ಞಾನೇಂದ್ರಿಯಗಳಿಗೆ ಹಾಗೂ ಆ ಜ್ಞಾನೇಂದ್ರಿಯಗಳನ್ನು ಹೊತ್ತ ಕಾಯವನ್ನು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಅರಿಷಡ್ವರ್ಗಗಳಿಂದ ಕಾಡುತ್ತದೆ.

ಕಾಯದಲ್ಲಿ ಹುಟ್ಟಿ, ಕಾಯದ ಆಶ್ರಯ ಪಡೆದು, ಕಾಯವನ್ನೇ ಕಾಡುವ ಅರಿಷಡ್ವರ್ಗಗಳನ್ನು ಕಾಯಕ್ಕೆ ದೂರ ತಳ್ಳಲು ಬರುತ್ತಿಲ್ಲ. ಬದಲಾಗಿ ಅರಿಷಡ್ವರ್ಗಗಳಿಂದಲೇ

ಸುಖ ಪಟ್ಟು ಅರಿಷಡ್ವರ್ಗಗಳಿಂದಲೇ ದುಃಖ ಪಟ್ಟು, ಒಮ್ಮೆ ಸುಖ, ಒಮ್ಮೆ ದುಃಖಕ್ಕೆ ಒಳಗಾಗಿ, ಕಾಯ ಒಮ್ಮೆ ಇಲ್ಲವಾಗುತ್ತದೆ.

ಕಾಯ ಇರುವಾಗಲೇ ಕಾಯಕ್ಕೆ ಅಂಟಿದ ಐದು ಕರ್ಮೇಂದ್ರಿಯಗಳನ್ನು ಆರು ಅರಿಷಡ್ವರ್ಗಗಳನ್ನು ಮೇಲಪ್ಪ, ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಗುಣಗಳನ್ನು ಕೂಡಿಸಿಕೊಂಡು ಹದಿನಾಲ್ಕು ವಿಷಯಾದಿಗಳಿಗೆ ಕಾಯ ಒಳಗಾಗಿದೆ. ಈ ಹದಿನಾಲ್ಕು ವಿಷಯಾದಿಗಳನ್ನು ಒಳಗೊಂಡ ಕಾಯಕ್ಕೆ ಏಕೈಕ ರುದ್ರನಿದ್ದಾನೆ.

ಕಾಯ ಹದಿನಾಲ್ಕು ಲೋಕಗಳನ್ನು ಒಳಗೊಂಡು ಅಜ್ಞಾನದ ಸುಖದಿಂದ, ದುಃಖದಿಂದ ಬಳಲುತ್ತಾ, ಒಮ್ಮೆ ರುದ್ರನಿಂದ ನಾಶಕ್ಕೆ ಒಳಗಾಗುತ್ತದೆ. ಮನವೆಂಬ ಮಾತೆಯ ಮೂಲಕ ಅರಿವೆಂಬ ಬಸವಾಕ್ಷರದೊಂದಿಗೆ ಆದಿ, ಅನಾದಿಯಿಂದ ಅತ್ತತ್ತಲಿದ್ದ ಅರಿವೆಂಬ ಶೂನ್ಯವಾಗಿಪ್ಪ ಲಿಂಗವನ್ನು ಅರಿತುಕೊಂಡರೆ ಕಾಯವನ್ನು ಆವರಿಸಿದ ಹದಿನಾಲ್ಕು ಅಜ್ಞಾನದ ಲೋಕಗಳು ನಾಶವಾಗುತ್ತವೆ.

ಅರಿವಿನ ಹಾದಿಯನು; ಲೋಕದ ಸಕಲ ಕಾಯಗಳಿಗೂ ಅರುಹಿ; ಖ್ಯಾತಿ ಮಾಡಿದ ಬಸವ ತಂದೆ! ಇನ್ನು ಅರಿವಾದ ಮೇಲೆ ಕಾಯ ಹದಿನಾಲ್ಕು ಲೋಕಗಳಿಗೆ ಒಳಗಾದ ಕಾಯವಲ್ಲ. ಅದು ಅರಿವಿನ ಕಾಯ! ಕಾಯವನ್ನೇ ಕೈಲಾಸ ಮಾಡಿದ ಬಸವ ತಂದೆಯನ್ನು ಸಕಲ ಕಾಯಗಳು ನೆನೆಯಲೇಬೇಕು.

**124**

**ಅಳಿಯ ಬಂದಾನೆಂಬರಯ್ಯ, ಎಲ್ಲವ ನೀನೀಗಳೀವೆಯಾಗಿ.**
**ಅಳಿಯನಿದ್ದಹರೆಂಬರಯ್ಯ, ಅಳಿಯದಂತೆ ನೀನಿಪ್ಪೆಯಯ್ಯಾ**
**ಇದೆಲ್ಲವನಳಿದು ನೀನುಳಿದೆಯಯ್ಯಾ,**
**ಎನ್ನ ಕಪಿಲಸಿದ್ಧಮಲ್ಲಿನಾಥ ನೀನೊಬ್ಬನಯ್ಯಾ.**

ತನುವಿನಲ್ಲಿ, ತನುವು ಜನ್ಮ ತಳೆದಂದಿನಿಂದ ಅಜ್ಞಾನ ಸಂಗ್ರಹವಾಗುತ್ತ ಬಂದಿದೆ. ಅದಕ್ಕೆ ಆಸ್ಪದ ಕೊಟ್ಟವನೇ ಅರಿವೆಂಬ ಗುರುದೇವನು.

ಅಜ್ಞಾನಕ್ಕೆ ಆಸ್ಪದ ಕೊಟ್ಟು ಅದನ್ನು ಅಳಿಯ ಬಂದವನು ಕೂಡ ಅವನೇ ಆಗಿರುವನು. ನಾನು ಎನ್ನುವುದೇ ಅಜ್ಞಾನ. ನಾನು ಅಜ್ಞಾನಕ್ಕೆಳೆಸಿ ಆ ಸುಖದಲ್ಲಿ ನೆಲೆ ನಿಂತಾಗ ನನ್ನ ಬೆನ್ನ ಹಿಂದೆಯೇ ನನ್ನ ಅಜ್ಞಾನವನ್ನು ಅಳಿಯುವ ಜ್ಞಾನಿಯಾಗಿ ನೀ ಬಂದೆ.

ನಾನು ಗಳಿಸಿಕೊಂಡ ಅಜ್ಞಾನವನ್ನು ನೀನು ಅಳಿದೆ. ಅಳಿಯದಂತೆ ತನುವಿನಲ್ಲಿ ನೀನಿದ್ದು ನನ್ನನ್ನು ರಕ್ಷಿಸಿದೆ ದೇವ. ನನ್ನ ಸಕಲ ಅಜ್ಞಾನವನ್ನು ಅಳಿದು ನೀನುಳಿದುದು ನನಗೆ ಮಾತ್ರ ತಿಳಿಯಿತು. ಅದನ್ನು ನೀನು ನನಗೆಂದೇ ಹೇಳಿಕೊಟ್ಟೆ. ನನ್ನಂತೆ ಜಗದ ಸಕಲ ತನುಗಳಿಗೂ ನೀನು ಹೇಳಿದರೂ ಕೂಡಾ ನಾನು ಎನ್ನುವ ಅಹಂಕಾರ ನಿನ್ನ ಮಾತು ಕೇಳಬೇಕಲ್ಲ. ಕೇಳಿದ ತನು ಮಾತ್ರ ಧನ್ಯ. ಆಗ ನಾನಳಿದು ನೀನೊಬ್ಬನೇ ಉಳಿದುದು ನನಗೆ ಗೊತ್ತಾಗುತ್ತದೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ವಚನದಲ್ಲಿ ಬಹಳ ಮಾರ್ಮಿಕವಾಗಿ ನುಡಿದಿದ್ದಾರೆ:

ಅಳಿಯ ಬಂದಾನೆಂಬರಯ್ಯ, ಎಲ್ಲವ ನೀನೀಗಳೀವೆಯಾಗಿ ಅಳಿಯನಿದ್ದಹರೆಂಬರಯ್ಯ ಅಳಿಯದಂತೆ ನೀನಿಪ್ಪೆಯಯ್ಯಾ ಇದೆಲ್ಲವನಳಿದು ನೀನುಳಿದೆಯಯ್ಯಾ ಎನ್ನ ಕಪಿಲಸಿದ್ಧಮಲ್ಲಿನಾಥ ನೀನೊಬ್ಬನಯ್ಯಾ:

ತನುವಿನಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು, ಸಪ್ತವ್ಯಸನಗಳು, ಸಾತ್ವಿಕ, ರಾಜಸ, ತಾಮಸ ಗುಣಗಳು ಭರಿತವಾಗಿವೆ. ಅವುಗಳಿಂದ ತನು ಅಜ್ಞಾನದ ಆಗಾರವೇ ಆಗಿತ್ತು. ಅರಿವೆಂಬ ಗುರುದೇವನು ಅವುಗಳನ್ನು ಅಳಿಯಲು ಬಂದ. ಮತ್ತೆ ತನು ಎಂದೂ ಅಜ್ಞಾನಕ್ಕೆ ಒಳಗಾಗಲಿಲ್ಲ. ಅರಿವೆಂಬ ಗುರುದೇವ ಮಾತ್ರ ತನುವಿನಲ್ಲಿ ಅಳಿಯದಂತೆ ಉಳಿದ. ಅಜ್ಞಾನಕ್ಕೆ ಹೆಸರಾದ ತನುವನ್ನು, ತನುವಿನಲ್ಲಿಯೇ ಅಳಿಯದಂತೆ ಉಳಿದ ಮಹಾಜ್ಞಾನಿ ಕಪಿಲಸಿದ್ಧ ಮಲ್ಲಿನಾಥಯ್ಯ ಜ್ಞಾನದ ಬೆಳಕಾಗಿ ಬೆಳಗಿಂಗೆ ಬೆಳಗಾಗಿ ಬೆಳಗಿದ.

**125**

**ಅರ್ಚಿಸಲು ಬೇಡವದ, ಪೂಜಿಸಲು ಬೇಡವದ**
**ನಿತ್ಯ ಜಪತಪವು ನಿನಗೆ ಬೇಡ.**
**ಸಚ್ಚಿದಾನಂದ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ಬಸವಾಕ್ಷರತ್ರಯವ ನೆನೆ ನಿನಗೆ ನಿತ್ಯಪದವು.**

ತಾನು ಮಾಡಿದ ದೇವರನ್ನು ಅಥವಾ ತಾನೇ ಕೊಂಡು ತಂದ ದೇವರನ್ನು ದೇವರೆಂದು ನಿತ್ಯ ಅರ್ಚಿಸಿ ಪೂಜಿಸುವುದನ್ನು, ಲೋಕ ತನ್ನ ಸಂಪ್ರದಾಯವೆಂದು ನಿರ್ಧರಿಸಿದೆ. ಸಂಧ್ಯಾವಂದನೆಗಳನ್ನು ಮಾಡಿ ಶುಚಿರ್ಭೂತನಾಗಿ ನಿತ್ಯ ಆ ದೇವರ ಮುಂದೆ ಕುಳಿತು ಜಪತಪಗಳನ್ನು ಮಾಡುವುದು ಕೂಡಾ ನಡೆದಿದೆ.

ತಾನು ಮಾಡಿದ ದೇವರು ಅದು ದೇವರಾಗುವುದಕ್ಕಿಂತ ಮುನ್ನ ಕಲ್ಲು ಕಟ್ಟಿಗೆ ಲೋಹ ಅಥವಾ ಪ್ಲಾಸ್ಟಿಕ್ ಇಲ್ಲವೆ ಕಾಗದವಾಗಿತ್ತು. ಈ ವಸ್ತುಗಳು ಅಜ್ಞಾನದ ಕಣ್ಣಿಗೆ ತನ್ನ ಪೂರ್ವಾಶ್ರಯ ಕಳೆದುಕೊಂಡವೇ ಹೊರತು ದೇವರಾಗಲಿಲ್ಲ! ತನ್ನ ಅರಿವಿನ ಕಣ್ಣಿನಿಂದ ತಾನು ಪೂಜಿಸುವ ದೇವರನ್ನು ನೋಡಿದರೆ ಅವು ಯಥಾ ರೀತಿ ಮೊದಲಿನಂತೆಯೇ ಇವೆ.

ಭ್ರಮೆ ಆವರಿಸಿರುವುದರಿಂದಾಗಿ ನಾನು ಮಾಡಿದ ದೇವರೇ ನನಗೆ ದೇವರಾಗಿವೆ. ನನ್ನನ್ನು ಮಾಡಿದ ದೇವರು, ನನ್ನಲ್ಲಿಯೇ ಇದ್ದು, ನನ್ನಲ್ಲಿಯೇ ಮರೆಯಾಗಿದ್ದಾನೆ. ನಾನು ಮಾಡಿದ ದೇವರನ್ನು ನಾನೇ ಅರಿವಿನಿಂದ ನೋಡಿದರೆ ಸಾಕು ನನ್ನಿಂದಲೇ ಮರೆಯಾಗುತ್ತಾನೆ. ನನ್ನನ್ನು ಮಾಡಿ, ನನ್ನಲ್ಲಿಯೇ ಸಂಗಮವಾದ ದೇವರು ನನಗೆ ಅರಿವಿಗೆ ಬರುತ್ತಾನೆ.

ಸಿದ್ಧರಾಮ ಶಿವಯೋಗಿಗಳು, ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ 'ಬಸವ' ಎಂದು ಹೆಸರಿಟ್ಟು; ಆ ಗುರುದೇವನನ್ನೇ ಸಚ್ಚಿದಾನಂದ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಎಂದು ಕರೆದಿದ್ದಾರೆ.

ಈ ದೇವರು ತನ್ನನ್ನು ಮಾಡಿದ್ದಾನೆ. ತನ್ನಲ್ಲಿಯೇ ಸಂಗಮವಾಗಿದ್ದಾನೆ. ತನ್ನನ್ನು ಮಾಡಿದ ದೇವರು ದೇವರೇ ಹೊರತು; ತಾನು ಮಾಡಿದ ದೇವರು ದೇವರಲ್ಲ. ಇಂತಹ ದೇವರನ್ನು ನೆನೆ. ನಿನಗೆ ನಿತ್ಯ ಪದವು ದಕ್ಕುತ್ತದೆ ಎಂದು ಲೋಕಕ್ಕೆ ತಿಳಿಹೇಳಿದ್ದಾರೆ ಸಿದ್ಧರಾಮ ಶರಣರು.

**126**

**ಆ ಕರವು ಅಪ್ರಮಾಣವು**

**ಸದಾ ಕಾಲದಲ್ಲಿ ಏಕೋದೇವನ ಹಿಡಿದು ನಿತ್ಯವಾಗಿರ್ಪುದು.**
**ಆ ಹಸ್ತ ಅವ್ಯಕ್ತ ಹಸ್ತ ಶಿವಪಾಶ.**
**ಆ ಹಸ್ತ ಸಕಲ ದೈವಾದಿ ಶ್ರೇಷ್ಠ**
**ಅನೇಕ ರೂಪನ ಏಕೋರೂಪಾಗಿ ಹಿಡಿದುದೈ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಕರ ಎಂದರೆ ದೇಹ. ಹಸ್ತವೆಂದರೂ ದೇಹ. ಇದು ಶರಣರ ಭಾಷೆ. ಕರ ಮತ್ತು ಹಸ್ತವೆಂದರೆ ಕೈ ಎಂದು ಲೋಕ ತಿಳಿದುಕೊಂಡಿದೆ. ಕೈಯಲ್ಲಿ ಐದು ಬೆರಳುಗಳಿವೆ. ಕಾಲಲ್ಲಿಯೂ ಐದು ಬೆರಳುಗಳಿವೆ. ಕಾಲು ಮತ್ತು ಕೈಗೆಳರಡೂ ಇಡೀ ದೇಹದತ್ತಲೇ ಬೆಟ್ಟು ಮಾಡಿ ತನ್ನ ಸ್ವ ಸ್ವರೂಪವನ್ನು ತೋರಿಸುತ್ತಲಿವೆ.

'ಕರ','ಹಸ್ತ' ವೆಂಬ ದೇಹದಲ್ಲಿ ಯಾರೂ ಪ್ರಮಾಣಿಸಲು ಬಾರದ ಅಪ್ರಮಾಣ ದೇವರಿದ್ದಾನೆ. ಹೀಗಾಗಿ ದೇಹವು ಶರಣರಿಂದ ದೇವಾಲಯ ಎಂದು ಹೆಸರು ಪಡೆದಿದೆ. ಈ ದೇವಾಲಯದಲ್ಲಿ ಏಕೋದೇವ ಪವಡಿಸಿದ್ದಾನೆ.

ನಾನು ಮಾಡಿದ ದೇವರನ್ನು 'ಕರ'ದಲ್ಲಿ ಹಿಡಿದು, ಪತ್ರ ಪುಷ್ಪಗಳನ್ನಿಟ್ಟು ಪೂಜಿಸಿದಂತೆ ಈ ದೇವರ ಪೂಜೆಯಲ್ಲ. ಕರದಲ್ಲಿದ್ದು ಕರಕ್ಕೆ ಅಂಟದೆ ಇಡೀ ಕರವನ್ನೇ ಬೆಳಗುವ ದೇವರು ಈತ. ಕರದಲ್ಲಿ ಸಂಗಮವಾದ ದೇವರು ಜಗದಗಲ ಮುಗಿಲಗಲ, ಮಿಗೆಯಗಲ. ಅಂದರೆ ಪಂಚಭೂತಗಳನ್ನು ತನ್ನ ಮುಷ್ಟಿಯಲ್ಲಿಟ್ಟುಕೊಂಡವನು.

ಅಂತಹ ದೇವರು ಕರದಗಲಕ್ಕೆ ಬಂದು ಕರದಲ್ಲಿ ಚುಳುಕಾಗಿದ್ದಾನೆ. ಪಾತಾಳದಿಂದತ್ತತ್ತಲೂ ತನ್ನ ಶ್ರೀಚರಣಗಳನ್ನು ಚಾಚಿದ್ದಾನೆ. ಬ್ರಹ್ಮಾಂಡದಿಂದತ್ತತ್ತಲೂ ತನ್ನ ಶ್ರೀಮುಕುಟವನ್ನು ವಿಸ್ತರಿಸಿದ್ದಾನೆ. ಆತ ಯಾರ ಗಮನಕ್ಕೂ ನಿಲುಕದವನು. ಯಾರೂ ಪ್ರಮಾಣಿಸಲು ಬಾರದಂತವನು - ಕರಸ್ಥಲದಲ್ಲಿ ಬಂದು ಚುಳುಕಾಗಿದ್ದಾನೆ.

ಇಂತಹ ವಿರಾಟ ಸ್ವರೂಪಿ ಪರಮಾತ್ಮನನ್ನು ಬಸವಣ್ಣ ಸಕಲ ಕರಗಳಲ್ಲಿ ಕಂಡು ಪರಮಾನಂದದಿಂದ ಕುಣಿ ಕುಣಿದಾಡಿದ. ನಲಿನಲಿದಾಡಿದ. ಪರಮಾತ್ಮನೇ ನಿನಗಿಂತ ಯಾರೂ ದೊಡ್ಡವರಿಲ್ಲ ತಂದೆ; ಎನಗಿಂತ ಯಾರೂ ಕಿರಿಯರಿಲ್ಲ ಪ್ರಭುವೇ! ಏನೀ ನಿನ್ನ ಆಕಾರ. ನಿನ್ನನ್ನು ನೋಡಿ ನಾನು ಕುಬ್ಜನಾದೆ ಶಿವನೆ ಎಂದು ಉದ್ಗರಿಸಿದರು.

ಆ ಹಸ್ತ ಅವ್ಯಕ್ತ ಹಸ್ತ ಶಿವಪಾಶ. ಆ ಹಸ್ತ ಸಕಲ ದೈವಾದಿ ಶ್ರೇಷ್ಠ ಅನೇಕ ರೂಪನ ಏಕೋ ರೂಪವಾಗಿ ಹಿಡಿದುದೈ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಒಬ್ಬರಿಗಿಂತ ಒಬ್ಬರು ಮಿಗಿಲು. ಒಬ್ಬರು ಸೇರಾದರೆ ಮತ್ತೊಬ್ಬರು ಸವ್ವಾಸೇರು. ಓದುಗ ಸಾಧಕನಿಗೆ ಪರಮಾನಂದವನ್ನುಂಟು ಮಾಡಿ ತಮ್ಮ ತೆಕ್ಕೆಗೆ ತೆಗೆದುಕೊಳ್ಳುವಲ್ಲಿ ಶರಣರದು ನುರಿತ ಹಸ್ತ. ಸಿದ್ಧ ಹಸ್ತ. ಅಜ್ಞಾನದ ಕತ್ತಿಗೆ ನೇಣು ಬಿಗಿದು ಸುಜ್ಞಾನಿಯನ್ನಾಗಿಸುವ ವರದ ಹಸ್ತ. ಈ ಹಸ್ತ ಸಕಲ ದೈವಗಳಿಗೂ ಶ್ರೇಷ್ಠ.

ದೇಹದ ರೂಪು ಮತ್ತು ಅದರ ಭಾಷೆ ಹಲವಾದಡೇನು? ಅದರ ದೃಶ್ಯ ಒಂದೇ. ಕೇಳುವ ಕಿವಿ. ಮೂಸಿಸುವ ಮೂಗು ಒಂದೇ. ಸ್ಪರ್ಶಿಸುವ ಚರ್ಮ ಒಂದೇ. ರುಚಿಸುವ ನಾಲಿಗೆ ಒಂದೇ. ಹಾಗೆಯೇ ಜ್ಞಾನೇಂದ್ರಿಯಗಳನ್ನು ಆವರಿಸಿದ ಅಜ್ಞಾನ ಕೂಡಾ ಒಂದೇ. ದೇಹವೆಂಬ ದೇವಾಲಯವನ್ನು ಎಳೆದುಕೊಂಡು ಅಜ್ಞಾನ ಸುಖಿಸಲು ಹೋದಾಗ; ಅದರ ಕತ್ತಿಗೆ ನೇಣು

ಬಿಗಿದು ತನ್ನತ್ತ ಎಳೆದು ತರುವ ಅರಿವಿನ ಶಿವಪಾಶ ಒಂದೇ. ಈ ಹಸ್ತ ತಾನು ಪೂಜಿಸುವ ಸಕಲ ದೈವಗಳಿಗೂ ಶ್ರೇಷ್ಠ. ಅನೇಕ ರೂಪಗಳನ್ನು ದೇಹ ಹೊಂದಿದ್ದರೇನು? ಈ ರೂಪವನ್ನು ಹಿಡಿದ ಏಕೋ ರೂಪು ಶಿವ. 'ಶಿವ'ಎಂದರೆ ಅರಿವು. 'ಶಿವ'ಎಂದರೆ ಅಲ್ಲಾ. 'ಶಿವ'ಎಂದರೆ ಗಾಡ್. ಭಾಷೆ ಬೇರೆ ಬೇರೆಯಾದರೂ ಅದರ ಮೂಲ ಸ್ವರೂಪ ಒಂದೇ ಆಗಿದೆ.

ತಿಳಿಯಲು ಹೋದ ದೇಹಕ್ಕೆ ಪರಮಾನಂದ ಉಂಟಾದರೆ; ತಿಳಿಯದ ಸಕಲ ದೇಹಗಳಲ್ಲಿ ಅವ್ಯಕ್ತ ದೇವ ಏಕೋರೂಪವಾಗಿ ಬೆಳಗುತ್ತಲಿದ್ದಾನೆ.

**127**

**ಆ ಕಾಲವಾಗಲು ಧರೆ ಹತ್ತಿ ಉರಿಯಲಿ ಕೇಳಿರಣ್ಣಾ ,**
**ಅಣ್ಣಾ ಕೇಳಿರಣ್ಣಾ.**
**ಅಂದು ಕಾಮನ ಸುಳುಹನೆಂದೂ ಕಾಣೆವಣ್ಣಾ .**
**ಅಂದು ಕಾಮ ನೆಲಸಿ ನಿಂದುದು ಕಾಣೆವಣ್ಣಾ .**
**ಅಂದು ಕಾಮ ನೆಲಸಿರಲಿ, ಬಿಲ್ಲು ಮುರಿದು ಧರೆ ಹರಿದು**
**ಕಾಮನ ಕಾಣೆ, ಕಾಣೆ, ಕಾಣೆ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ದಕ್ಷಬ್ರಹ್ಮನ ಮಗಳು ಸತಿ, ದಕ್ಷನ ಯಗ್ನ ಕುಂಡದಲ್ಲಿ ಬಿದ್ದು ಕಾಲವಾಗಲು; ಶಿವ ಧ್ಯಾನ ಮಗ್ನನಾದ. ಎಚ್ಚರವಾಗಲೇ ಇಲ್ಲ. ದೇವತೆಗಳಿಗೆ ಶಿವ ಧ್ಯಾನಕ್ಕೆ ಸರಿದದ್ದು ಸಮಾಧಾನ ತರಲಿಲ್ಲ. ಶಿವನನ್ನು ಎಚ್ಚರಿಸಲು ಕಾಮದೇವ ಬಿಲ್ಲು ಎದೆಯೇರಿಸಿ ಹೂ ಬಾಣಗಳನ್ನು ಬಿಟ್ಟ. ಶಿವ ತನ್ನ ಹಣೆಗಣ್ಣಿನಿಂದ ಕಾಮನನ್ನು ಸುಟ್ಟು ಭಸ್ಮ ಮಾಡಿದ. ಇದು ಪುರಾಣ ಕಾಲದ ಜ್ಞಾನಕ್ಕೆ ಹೋಗುವ ಒಂದು ಕತೆ.

ಕಾಮದೇವ ಎನ್ನುವವ ಆಗಲೂ ಇಲ್ಲ; ಈಗಲೂ ಇಲ್ಲ. ಅಂಗದಲ್ಲಿ ಅರಿವೆಂಬ ಶಿವ ಸಂಗಮವಾಗಿದ್ದಾನೆ. ಮನವೆಂಬ ಕಾಮ ಅಂಗವನ್ನು ಆವರಿಸಿದೆ. ಈ ಕಾಮದೇವ ದೇಹವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು, ತನಗೆ ಬೇಕಾದ ಪದಾರ್ಥಗಳನ್ನು ದೇಹದೊಂದಿಗೆ ಕಾಮಿಸಿ ಭೋಗಿಸುತ್ತಾನೆ. ಭೋಗಿಸುವ ಸರ್ವ ಸುಖಗಳೂ ಸಾಕಾದಾಗ ಕಾಮದೇವ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಶಿವನನ್ನೇ ಭೋಗಿಸಲು ಕಾತುರಪಡುತ್ತಾನೆ. ಆಗ ಶಿವ ತನ್ನ ಹಣೆಗಣ್ಣನ್ನು ತೆರೆದು ಕಾಮದೇವನನ್ನು ಭಸ್ಮ ಮಾಡುತ್ತಾನೆ.

ಸರ್ವಾಂಗವನ್ನು ಆವರಿಸಿದ ಮನವೆಂಬ ಕಾಮ; ಶಿವನ ಜ್ಞಾನದ ಹಣೆಗಣ್ಣಿನ ಬೆಂಕಿಯಿಂದ ಸುಟ್ಟು ಬೂದಿಯಾಗುತ್ತಾನೆ. ಆ ಬೂದಿಯನ್ನೇ ಶಿವ ಭಸ್ಮದಂತೆ ಧರಿಸುತ್ತಾನೆ. 'ಭಸ್ಮಧಾರಿ' ಶಿವನೆಂದು ಹೆಸರು ಪಡೆಯುತ್ತಾನೆ.

ಕಾಮವೆಂದರೆ ಕೆಟ್ಟುದಲ್ಲ. ಕಾಮ ಎನ್ನುವ ವ್ಯಕ್ತಿಯೂ ಇಲ್ಲ. ಕಾಮವೆನ್ನುವುದು ಅವ್ಯಕ್ತ. ಕಾಯವೆಂಬ ಕೈಲಾಸಕ್ಕೆ ಪ್ರೇರಣೆ ನೀಡಿದ ನಿಪುಣ. ಶಿವನಿಗೆ ವಾಸಸ್ಥಾನ ಮಾಡಿಕೊಟ್ಟ ಮಾಂತ್ರಿಕ!

ಅರಿವೆಂಬ ಶಿವನನ್ನೇ ಮರೆಮಾಚಿ; ಕಾಮ ತನ್ನ ಸಾಮ್ರಾಜ್ಯವನ್ನೇ ದೇಹದಲ್ಲಿ ನಿರ್ಮಾಣ ಮಾಡಿದ ಚಾಣಾಕ್ಷ. ಕಾಮ ಎನ್ನುವ ಅವ್ಯಕ್ತ ಮರೆವು; ಅರಿವೆಂಬ ಶಿವನಿಂದಲೇ ಮೃತ್ಯುವಿಗೀಡಾಯಿತು.

ಅಂದು ಕಾಮನ ಸುಳುಹು ಇಲ್ಲ. ಅಂದು ಕಾಮ ನೆಲಸಿ ನಿಂದುದೂ ಇಲ್ಲ. ಬಿಲ್ಲು

ಮುರಿದು ಧರೆ ಹರಿದ ಕಾಮನನ್ನು ಕಾಣೆ, ಕಾಣೆ, ಕಾಣೆ ಎಂದು ಮೂರು ಬಾರಿ ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಕಪಿಲಸಿದ್ಧ ಮಲ್ಲಿನಾಥಯ್ಯನ ದರುಶನವಾದರೆ ಸಾಕು ಕಾಮ ಎಂಬುವವ ಅಂದೂ ಇಲ್ಲ; ಇಂದೂ ಇಲ್ಲ.

**128**

**ಆಗಮಕ್ಕೆ ನೀನೆ ಕರ್ತನು ಬಸವಾ ಬಸವಾ ;**
**ಆಗಮವಿಡಿದ ಶಿವಭಕ್ತಿಗೆ ನೀನೆ ಕರ್ತನು ಬಸವಾ ಬಸವಾ ;**
**ಕರುಣಿ ಕಪಿಲಸಿದ್ಧ ಮಲ್ಲಿನಾಥಯ್ಯಾ, ಬಸವಾ.**

ದೇಹದಿಂದ ಹೊರಬಂದ ಪುಸ್ತಕಗಳು ಪುನಃ ದೇಹದ ಅರಿವಿಗೆ ಆಧಾರವಾಗಿ ನಿಂತಿವೆ ಎಂದರೆ ಸೋಜಿಗವಲ್ಲವೇ? ದೇಹದಿಂದಲೇ ಪೂಜೆಗೊಳ್ಳುತ್ತಲಿವೆ ಎಂದರೆ ಸೋಜಿಗವಲ್ಲವೇ. ಇದೊಂದು ಅರಿವಿನ ಆಟ. ಅರಿವು ಮರೆವಾಗಿ ಮರೆವೇ ಅರಿವನ್ನು ಕಾಡುವ ಅರಿವಿನ ಆಟ!

ಭಗವದ್ಗೀತೆಗೂ ಮುನ್ನ ಅರಿವಿನ ಗೀತೆ ಇರಲಿಲ್ಲವೆ? ಕುರಾನ್-ಬೈಬಲ್‌ಗಳಿಗೂ ಮುನ್ನ ಅರಿವಿನ ಗೀತೆ ಇರಲಿಲ್ಲವೆ ? ಅರಿವೇ ಬಿಂದುವಿನಲ್ಲಿ ಅಡಗಿ; ಗರ್ಭಕ್ಕೆ ಚಿಮ್ಮಿ; ಅರಿವಿನ ಜಲ ಬಿಂದುವೇ ರಕ್ತ ಮೂಳೆ ಮಾಂಸವಾಗಿ, ಮಜ್ಜಾ ಮೇದಸ್ಸು ಆಗಿ; ಇವು ಸೋರದಂತೆ ಸುಂದರವಾದ ಚರ್ಮದ ಕವಚವಾಯಿತು; ತನುವೆಂದು ಹೆಸರು ಪಡೆಯಿತು. ಅರಿವು ನೋಡುವುದಕ್ಕೆ ಕಣ್ಣಾಯಿತು. ಕೇಳುವುದಕ್ಕೆ ಕಿವಿಯಾಯಿತು. ಮುಟ್ಟುವುದಕ್ಕೆ ಸ್ಪರ್ಶವಾಯಿತು. ಮೂಸಿಸುವುದಕ್ಕೆ ಅರಿವಿನ ಪರಿಮಳವಾಯಿತು. ರುಚಿಸುವುದಕ್ಕೆ ಪ್ರಸಾದವಾಯಿತು.

ಕಣ್ಣು ಕಿವಿ ಮೂಗು ಚರ್ಮ ನಾಲಿಗೆಯ ಮೇಲೆ ಮರೆವು ನಾಟ್ಯವಾಡಿ ಅರಿವನ್ನೇ ಹಿಂದೆ ತಳ್ಳಿತು. ಅಜ್ಞಾನ ಅಧಿಕವಾಗಿ ತನುವಿಗೆ ಸಂಕಟ ಉಂಟಾದಾಗ; ಪುನಃ ಜ್ಞಾನ ಅಜ್ಞಾನವನ್ನು ಹಿಂದಿಕ್ಕಲು; ವೇದ ಆಗಮ ಉಪನಿಷತ್ತುಗಳಿಗೆ ಜನ್ಮ ನೀಡಿತು. ತನ್ನನ್ನು ತಿಳಿಯುವಂತೆ ಅಜ್ಞಾನಕ್ಕೆ ಪ್ರೇರಣೆ ನೀಡಿತು.

ತನುವಿನಲ್ಲಿ ತನ್ಮಯವಾದ ಜ್ಞಾನಕ್ಕೆ ಸಿದ್ಧರಾಮ ಶಿವಯೋಗಿಗಳು 'ಬಸವಾ' ಎಂದು ಹೆಸರಿಟ್ಟು ಕರೆದರು. ಬಸವಣ್ಣನವರು ಈ ಜ್ಞಾನಕ್ಕೆ 'ಸಂಗಯ್ಯ' ಎಂದು ಹೆಸರಿಟ್ಟು ಕರೆದರು.

ಬಸವಣ್ಣ ಬೇರೆ ಅಲ್ಲ ; ತನುವಿನಲ್ಲಿ ತನ್ಮಯವಾದ ಜ್ಞಾನ ಬೇರೆ ಅಲ್ಲ. ಹಾಗೆಯೇ ಸಿದ್ಧರಾಮ ಶಿವಯೋಗಿ ಬೇರೆ ಅಲ್ಲ ; ತನುವಿನಲ್ಲಿ ತನ್ಮಯವಾದ ಜ್ಞಾನ ಬೇರೆ ಅಲ್ಲ.

ಮರೆವಿನಿಂದ ಅರಿವನ್ನು ಕಂಡುಕೊಂಡು ಆ ಅರಿವೇ ತಾವಾದವರು ಶಿವಶರಣರು. ಶಿವಭಕ್ತಿಗೆ ಕಾರಣಕರ್ತರಾದವರು ಶರಣರು. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಶಿವನಿಗೆ ಭಕ್ತಿ ಮಾಡಿ ಅ ಅರಿವು ತಾವೇ ಆದವರು ಶರಣರು. ಈ ಅರಿವಿನ ಸೂತ್ರವನ್ನು ವಚನಗಳ ಮೂಲಕ ಶರಣರು ಸಾರಿದರೆ; ಕುರಾನ್ ಮೂಲಕ ಪೈಗಂಬರರು ಸಾರಿದರು. ಬೈಬಲ್ ಮೂಲಕ ಕ್ರಿಸ್ತ ಸಾರಿದರು. ಭಗವದ್ಗೀತೆ ಮೂಲಕ ಕ್ರಿಷ್ಣ ಸಾರಿದ. ಬುದ್ಧ ಮಹಾವೀರ ಸಕಲ ದಾಸವರೇಣ್ಯರು ಕೂಡಾ ಅರಿವಿಗೆ ಹೋಗುವ ಸೂತ್ರಗಳನ್ನು ತಾಡೋಲೆ ಕಾಗದ ಕಲ್ಲಿನಲ್ಲಿ ಕೆತ್ತಿ ; ತನುವಿನ ಲೋಕಕ್ಕೆ ಉಪಕಾರವನ್ನೇ ಮಾಡಿದ್ದಾರೆ.

ಅರಿವಿನ ಕಾಯಕ ಮಾಡಿದ ಬಸವಣ್ಣನನ್ನು ಸಿದ್ಧರಾಮ ಶಿವಯೋಗಿಗಳು ಅರಿವೇ

ಬಸವಣ್ಣನೆಂದು ಸ್ಮರಿಸಿದ್ದಾರೆ.

**129**

**ಆಗಮಜ್ಞಾನಿ ಅಜ್ಞಾನಿಯಯ್ಯಾ**
**ನಿಯಮಜ್ಞಾನಿ ನೀಚದೇಹಿಯಯ್ಯಾ**
**ಶೀಲಜ ಸಂಕಲ್ಪ ದೇಹಿಯಯ್ಯಾ**
**ನಿಮ್ಮನರಿದ ಜ್ಞಾನಿ ಏನಾಗುಣವನರಿಯನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ದೇಹದಲ್ಲಿ ಸಂಗಮವಾದ ಜ್ಞಾನವನ್ನು ಬಿಟ್ಟು ; ದೇಹವನ್ನು ಆವರಿಸಿದ ಮನ, ದೇಹವನ್ನೇ ಹಿಡಿದು; ದೇಹದಿಂದಲೇ ಹೊರಗೆ ಬಂದ ಆಗಮ ಉಪನಿಷತ್‌ಗಳನ್ನು; ಶಾಸ್ತ್ರ ಪುರಾಣಗಳನ್ನು ಅಭ್ಯಾಸ ಮಾಡಿ; ಜ್ಞಾನಿ ಪಂಡಿತ ಶಾಸ್ತ್ರಿ ಎನ್ನಿಸಿಕೊಳ್ಳುತ್ತದೆ.

ವೇದ ಆಗಮ ಉಪನಿಷತ್‌ಗಳನ್ನು; ಶಾಸ್ತ್ರ ಪುರಾಣಗಳನ್ನು ಪ್ರವಚನ ಮಾಡುತ್ತ ಹಲವಾರು ದೇಹಗಳನ್ನು ತಲೆದೂಗಿಸಿ; ಆ ದೇಹಗಳಿಂದ ಸಂಭಾವನೆ ಪಡೆದು; ತಾನು ಬದುಕುತ್ತದೆ. ದೇಹದಿಂದ ಹೊರ ಬಂದ ಜ್ಞಾನ; ದೇಹಕ್ಕೆ ಹೊಟ್ಟೆ ಹೊರೆಯಲು ಸಾಧ್ಯವಾಯಿತೇ ಹೊರತು; ದೇಹ, ತನಗೆ ತಾನು ಜ್ಞಾನಿ ಎನ್ನಿಸಿಕೊಳ್ಳಲಿಲ್ಲ.

ಆಗಮ ಶಾಸ್ತ್ರಗಳನ್ನು ಕಲಿತು; ಆ ಆಗಮಗಳನ್ನು ತಾನು ಇತರರಿಗೆ ಹೇಳಲು ಬಂತೇ ಹೊರತು; ಆಗಮದಲ್ಲಿದ್ದಂತೆ ತನಗೆ ನಡೆಯಲು ಬರಲಿಲ್ಲ. ಒಂದು ವೇಳೆ ಕೇಳಿದವನು ಪಾಲಿಸಿಯಾನು; ಹೇಳುವವನು ಪಾಲಿಸಲು ಸಾಧ್ಯವಾಗುವುದಿಲ್ಲ.

ಆಗಮ ಜ್ಞಾನಿ; ಆಗಮದಲ್ಲಿ ಹೇಳುವಂತೆ ವೇಷ ಹಾಕುತ್ತಾನೆ. ಕೇಳುಗರು ತನ್ನ ಮೇಲೆ ಪ್ರಭಾವ ಬೀರುವಂತಹ ಸಂಪ್ರದಾಯಗಳನ್ನು ಆಚರಿಸುತ್ತಾನೆ. ಜ್ಞಾನಿಯಂತೆ ಸಹಜವಾಗಿರಲು ಸಾಧ್ಯವಾಗುವುದಿಲ್ಲ.

ಆಗಮ ಜ್ಞಾನಿ ಆಚರಿಸುವ ನಿಯಮ ಆತನನ್ನೇ ನೀಚನನ್ನಾಗಿಸುತ್ತದೆ. ಹಾದರದಿಂದ ನೋಡುತ್ತಾನೆ. ಅತ್ಯಂತ ಆದರದಿಂದ ಬರಮಾಡಿಕೊಂಡು ಮಧುರವಾದ ನುಡಿಗಳನ್ನು ನುಡಿಯುತ್ತಾನೆ. ನೋಡಿದಂತೆ ನುಡಿಯುವುದಿಲ್ಲ; ನುಡಿದಂತೆ ನೋಡುವುದಿಲ್ಲ. ನೋಡಿ ನುಡಿದಂತೆ ಇರುವುದಿಲ್ಲ.

ಡಾಂಭಿಕ ಜ್ಞಾನಿ ಆಚರಿಸುವ ಶೀಲ; ಅದು ತಾನು ಹಾಕಿದ ವೇಷವೇ ಹೊರತು ನಿಜವಲ್ಲ ಎಂದು ತನಗೆ ತಿಳಿದಿದೆ.

ಆಗಮದಲ್ಲಿದ್ದ ಜ್ಞಾನ ಅಂಗದಿಂದಲೇ ಬಂದದ್ದು. ತಾನು ಕಲಿತ ಅಕ್ಷರಗಳು ತನ್ನನ್ನು ಓದುವಂತೆ ಮಾಡಿತು. ಓದಿದ ಮನ ಅಂಗಕ್ಕೆ ವೇಷ ಹಾಕಿ; ಪ್ರವಚನ ಮಾಡಿ; ವ್ಯವಹಾರ ಮಾಡಿತು. ಅಂಗದಲ್ಲಿ ಸಂಗಮವಾದ ಜ್ಞಾನ ; ಕಾಗದದಲ್ಲಿದ್ದ ಆಗಮ ಜ್ಞಾನ ಒಂದೇ ಎಂದು ಮನ ತಿಳಿಯಲಿಲ್ಲ. ಓದಿ ಕೆಟ್ಟ ಕೂಚು ಭಟ್ಟ ಎಂದು ಓದಿದ್ದನ್ನೇ ಹೇಳಿತು.

ಓದಿದ ಓದು ಹೇಳಲು ಬರುತ್ತದೆಯೇ ಹೊರತು ನಡೆಯಲು ಬರುವುದಿಲ್ಲ. ಕೇಳುಗರಿಗೆ ಹೀಗೆ ನಡೆದುಕೊಂಡು ಮುಕ್ತಿ ಹೊಂದಬೇಕೆಂದು ಹೇಳುತ್ತಾ; ಮನ ತಾನು ಮಾತ್ರ ಹಾಗಿರದೆ; ಸದಾ ಹಾದರದ ಸುಖ ಅನುಭವಿಸುತ್ತದೆ. ದೇಹಕ್ಕೆ ಶಾಸ್ತ್ರಿಯ ವೇಷ ಹಾಕಿ ಶೀಲ ಸಂಪನ್ನನೆಂದು ಅನ್ನಿಸಿಕೊಳ್ಳುತ್ತದೆ.

ಆಗಮದಲ್ಲಿರುವ ಸುಂದರವಾದ ಮಾತುಗಳನ್ನು ಆಡುತ್ತದೆ. ನುಡಿದಂತೆ ನಡೆಯುವುದಿಲ್ಲ. ನುಡಿದಂತೆ ನೋಡುವುದಿಲ್ಲ. ನೋಡಿದಂತೆ ನುಡಿದರೆ ತಾನು ಪರಮ ನೀಚ ಎನ್ನಿಸಿಕೊಳ್ಳುವುದರಲ್ಲಿ ಸಂದೇಹವೇ ಇಲ್ಲ.

ಅಂಗವನ್ನೇ ಉಪಕರಣ ಮಾಡಿಕೊಂಡು; ಆ ಅಂಗದಲ್ಲಿ ಮಹಾಜ್ಞಾನಿ ಒಬ್ಬ ಸಂಗಮವಾಗಿದ್ದಾನೆ. ಅದೇ ಅಂಗವನ್ನು ಮನವೆಂಬ ಅಜ್ಞಾನಿ ಆವರಿಸಿಕೊಂಡಿದ್ದಾನೆ. ಆಗಮ ಉಪನಿಷತ್ತುಗಳು, ಶಾಸ್ತ್ರ ಪುರಾಣಗಳು ಭಗವದ್ಗೀತೆ, ಬೈಬಲ್, ಕುರಾನ್‌ಗಳು ಅಂಗದಲ್ಲಿ ಸಂಗಮವಾದ ಮಹಾಜ್ಞಾನಿಯಿಂದ ಹೊರಬಂದಿವೆ. ದೇಹದಿಂದಲೇ ಹೊರಬಂದ ಈ ಗ್ರಂಥಗಳನ್ನು ಮನ ಓದುತ್ತದೆ. ಅಂಗಕ್ಕೆ ವೇಷ ಧರಿಸಿ ನಿಯಮ ಜ್ಞಾನಿ ಎನ್ನಿಸಿಕೊಳ್ಳುತ್ತದೆ.

ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನಿ; ಮನವೆಂಬ ಅಜ್ಞಾನಿಯನ್ನು ಪರಮ ನೀಚ, ಅವಗುಣಿ ಎಂದು ನಿಂದಿಸುತ್ತಾನೆ. ನುಡಿದಂತೆ ನಡೆಯದ ವಂಚಕ, ನುಡಿದಂತೆ ನೋಡಲು ಬಾರದ ನಯವಂಚಕ. ಅಂಗದಲ್ಲಿರುವ ಸತ್ಯವನ್ನು, ಅಂಗಕ್ಕೆ ಬೋಧೆ ಮಾಡಿ; ''ಅಂಗದೊಂದಿಗೆ ವ್ಯವಹರಿಸುವ ದುರ್ಗುಣಿ ನೀನು'' ಎಂದು ಮನಕ್ಕೆ ತನಗೆ ತಾನೇ ಗೊತ್ತಾಗುತ್ತದೆ.

ಆಗಮ ಜ್ಞಾನಿ ಅಜ್ಞಾನಿಯೂ ಹೌದು. ನೀಚ ದೇಹಿಯೂ ಹೌದು. ಶೀಲ ಮಾಡುವ ಸಂಕಲ್ಪ ದೇಹಿಯೂ ಹೌದು. ದುರ್ಗುಣಿಯೂ ಹೌದು.

ಅಂಗದಲ್ಲಿಯೇ ಸಂಗಮವಾದ ಜ್ಞಾನವನ್ನೇ ಹಿಡಿದ ಮನ ಸ್ವತಹ ಜ್ಞಾನಿಯೇ ಆಗುತ್ತದೆ. ಅದಕ್ಕೆ ಆಗಮ ಉಪನಿಷತ್ತುಗಳು ಬೇಡ. ಶಾಸ್ತ್ರ ಪುರಾಣಗಳು ಬೇಡ. ಬೈಬಲ್ ಭಗವದ್ಗೀತೆ ಕುರಾನ್‌ಗಳು ಬೇಡ. ಇವೆಲ್ಲವುಗಳನ್ನು ಹೊರತಂದ ಮಹಾಜ್ಞಾನವನ್ನೇ ಮನ ಹಿಡಿದಾಗ ಆ ಮನ ಘನಮನವಾಗುತ್ತದೆ. ಸಕಲ ಅವಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

ಹಾದರದಿಂದ ನೋಡುವ ಅಜ್ಞಾನದ ಕುರುಡು ಕಣ್ಣಿನ ಶಸ್ತ್ರಚಿಕಿತ್ಸೆಯನ್ನು ಮತ್ತಾರಿಂದಲಾದರೂ ಮಾಡಲು ಸಾಧ್ಯವೆ? ಕಣ್ಣಿನಲ್ಲಿಯೇ ಸಂಗಮವಾದ ಮುಕ್ಕಣ್ಣನ ಹೊರತಾಗಿ!

**130**

**ಆಗಮದ ಅನು ನಿಯಮದ ಸಂದೇಹ, ಯೋಗದ ಬ್ರಾಂತು**
**ಕ್ರೀಯ ಸಂಕಲ್ಪ, ನಷ್ಟದ ಚಿಂತೆ**
**ಈ ಪಂಚ ಮಹಾಪಾತಕವುಳ್ಳಾತ ಭಕ್ತಿಯ ನಿಯಮಿಗನಲ್ಲ.**
**ಚಿಂತೆ, ಸಂಕಲ್ಪ, ಭ್ರಾಂತು, ಸಂದೇಹ,**
**ಅನುವಿನ ಗುಣವಳಿದು ತಾನಾದಡೆ,**
**ತಾನೇ ನಿತ್ಯ ಕಾಣಾ, ಕಪಿಲಸಿದ್ಧ ಮಲ್ಲಿನಾಥಾ.**

ಮರ ಪರಿಪೂರ್ಣ. ಮೂರು ಕಾಲಗಳಲ್ಲಿಯೂ ಬಾಧೆಯಿಲ್ಲದೆ ಆನಂದದಿಂದ ತನ್ನ ಸ್ವರೂಪವನ್ನು ನೋಡುಗರಿಗೆ ತೋರಿಸುತ್ತದೆ. ಚಳಿಗಾಲದಲ್ಲಿ ತನ್ನ ಸಕಲ ಎಲೆಗಳನ್ನು ಕಳಚಿಕೊಂಡು ಎಲುಬಿನ ಹಂದರದಂತೆ ಒಣಗಿ ಋಷಿಯಂತೆ ನಿಲ್ಲುತ್ತದೆ. ಕಡು ಬೇಸಿಗೆಯಲ್ಲಿ ತನ್ನ ಜಪದ ಫಲ ಸಿಕ್ಕು ಪರಮಾತ್ಮ ಒಲಿದನೇನೊ ಎನ್ನುವ ತೆರದಿ ಮೈತುಂಬ ಚಿಗುರುತ್ತದೆ. ಹೂ ಬಿಟ್ಟು ಮಿಡಿಕಾಯಿಯಾಗಿ ಬಲಿತು ಹಣ್ಣಾಗುತ್ತದೆ. ಆ ಹಣ್ಣಿನಲ್ಲಿ ಮರ ತನ್ನ ಸರ್ವಸ್ವವನ್ನು

ಬೀಜದಲ್ಲಿ ಬಚ್ಚಿಟ್ಟು ಧನ್ಯತೆಯನ್ನು ಮೆರೆಯುತ್ತದೆ. ತೊಟ್ಟು ಬಿಟ್ಟು ಕಳಚಿ ಕೆಳಗೆ ಬೀಳಿಸುತ್ತದೆ. ಅದರ ಸಿಪ್ಪೆ ತಿಂದು ಬೀಜ ಎಲ್ಲಿ ಚೆಲ್ಲಿದರೇನು? ಮರದ ಸಂತಾನ ಮತ್ತೆ ವೃದ್ಧಿಯಾಗುತ್ತದೆ. ಮಳೆಗಾಲದಲ್ಲಿ ಮೈತುಂಬಿ ಸಕಲರನ್ನೂ ಕೈಮಾಡಿ ಕರೆಯುತ್ತದೆ. ಪಶು ಪಕ್ಷಿ ಕೀಟಗಳಿಗೆ ಆಶ್ರಯ ನೀಡಿ ತನ್ನ ತತ್ವವನ್ನು ಮೆರೆದು ಭೂಮಿಗೆ ಶುಭ ಸಂದೇಶ ನೀಡುತ್ತದೆ.

ಮರ ಯಾವ ಆಗಮ ಉಪನಿಷತ್ತುಗಳನ್ನು ಓದುವುದಿಲ್ಲ. ತಾನು ಮರವಾಗಿದ್ದು ಮತ್ತೊಂದು ಮರಕ್ಕೆ ಬೋಧಿಸುವುದಿಲ್ಲ. ತಾನು ಒಣಗಿದಾಗ ಮತ್ತೊಂದು ಮರದ ಎಲೆಗಳನ್ನು ತಾನು ಕೀಳುವುದಿಲ್ಲ. ತಾನು ಚಿಗುರಿದಾಗ ಮತ್ತೊಂದು ಮರಕ್ಕೆ ತನ್ನ ಎಲೆಗಳನ್ನು ಕಟ್ಟುವುದಿಲ್ಲ. ತಾನು ಹೂ ಬಿಟ್ಟಾಗ ಆ ಹೂಗಳನ್ನು ಮತ್ತೊಂದು ಗಿಡಕ್ಕೆ ಕಟ್ಟುವುದಿಲ್ಲ. ತಾನು ಕಾಯಿ ಬಿಟ್ಟು ಹಣ್ಣಾದಾಗ ಮತ್ತೊಂದು ಮರ ಬಂಜೆಯೆಂದು ತಾನು ಕನಿಕರ ತೋರುವುದಿಲ್ಲ.

ಬೇರು ಕಾಂಡ ಟೊಂಗೆ ಚಿಗುರುಗಳಲ್ಲಿ ಎಲೆಗಳಲ್ಲಿ ಹೂ ಸಂಗಮವಾಗಿದೆ. ವಸಂತ ಬಂದಾಗ ತಂತಾನೆ ಅರಳುತ್ತದೆ. ತನ್ನ ಸಹಜ ಪ್ರವೃತ್ತಿಯೊಂದಿಗೆ ನಿಸರ್ಗದಲ್ಲಿ ಅರಳಿ ನಿಲ್ಲುತ್ತದೆ. ಇಂತಹ ಸುಂದರವಾದ ಸಹಜ ಪ್ರವೃತ್ತಿವುಳ್ಳ ಮರವನ್ನು ಬುದ್ಧ ತನ್ನ ತೆರೆದ ಕಣ್ಣುಗಳಿಂದ ನೋಡಿದ. ಇದು ವೃಕ್ಷವಾದರೆ ಇದರಂತೆ ಇರುವ ಸಕಲ ತನುಗಳು ಕೂಡಾ 'ಬೋಧೀ ವೃಕ್ಷ'ಗಳೇ ಆಗಿವೆ ಎಂದು ಮೈಮರೆತು ಮಹದಾನಂದದಿಂದ ನುಡಿದ.

ಮರ ನಿಂತಲ್ಲಿಯೇ ನಿಂತು ಸಹಜಾನಂದವನ್ನು ಹೊಂದಿದರೆ; ತನು ಬೇರಿಲ್ಲದ ಮರ. ಮಾತನಾಡುವ ಮರ. ಮಾತಿನಿಂದ ತನ್ನ ಆನಂದವನ್ನು ಹೊರ ಹಾಕುವ ಬೋಧೀ ಮರ; ಬೋಧೀ ವೃಕ್ಷ!

ಮರದಂತೆ ತನು ಕೂಡಾ ಚಿಂತಿಸಬೇಕಿಲ್ಲ. ಸಂಕಲ್ಪ ಮಾಡಬೇಕಿಲ್ಲ. ಭ್ರಮೆಯಿಂದ ಬಳಲಬೇಕಿಲ್ಲ. ಸಂದೇಹ ಪಡಬೇಕಿಲ್ಲ. ಯಾವ ಗುಣಗಳನ್ನು ಕಲಿಯಬೇಕಿಲ್ಲ. ಏಕೆಂದರೆ ಮರದಂತೆ ತನು ಕೂಡಾ ನಿರ್ಗುಣಿ. ನಿಶ್ಚಿಂತೆಯಿಂದ ಸದಾ ಸಂತೋಷದಿಂದ ಇರಬೇಕಾದ ಬೋಧೀ ವೃಕ್ಷ ಆದರೆ ಚಿಂತಿತನಾಗಿದೆ. ಸಂಕಲ್ಪ ವಿಕಲ್ಪಗಳನ್ನು ಹೊತ್ತುಕೊಂಡು ಭ್ರಾಂತಿಯಿಂದ ಬಳಲುತ್ತದೆ. ಸಂದೇಹದ ಮಡುವಿನಲ್ಲಿ ಬಿದ್ದು ಪಶುವಿನಂತೆ ಕಾಲು ಬಡಿಯುತ್ತಲಿದೆ.

ವೇದ ಆಗಮ ಉಪನಿಷತ್ತುಗಳನ್ನು; ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಓದಿ ಜ್ಞಾನಿಯಾಗಲು ಹೊರಟಿದೆ. ಅವು ತನ್ನ ತನುವಿನಿಂದಲೇ ಹೊರಬಂದ ಫಲಪುಷ್ಪಗಳೆಂದು ತಿಳಿಯಲು ಸಾಧ್ಯವಾಗದಷ್ಟು ಅಜ್ಞಾನವನ್ನು ತನು ತನಗೆ ತಾನೇ ಹೇರಿಕೊಂಡಿದೆ.

ಮರದಲ್ಲಿದ್ದ ಹೂ ಮರದಲ್ಲಿ ಹೇಗೆ ಅರಳಿತೋ ಹಾಗೆಯೇ ತನುವಿನಲ್ಲಿ ಸಂಗಮವಾದ ಜ್ಞಾನದ ಹೂ ತನುವಿನಿಂದಲೇ ಸಹಜವಾಗಿ ಅರಳುತ್ತದೆ.

ತಾನು ಓದುವ ಆಗಮ ಉಪನಿಷತ್ತುಗಳು ಜ್ಞಾನದ ಹೂಗಳಾದರು; ಹೂಗಳೆಂದು ಅವುಗಳನ್ನು ತನುವಿಗೆ ಕಟ್ಟಿಕೊಳ್ಳುವಂತಿಲ್ಲ. ತನುವಿನಲ್ಲಿಯೇ ತನ್ಮಯವಾದ ಜ್ಞಾನದ ಹೂ ತನುವಿನಿಂದಲೇ ತಂತಾನೆ ಸಹಜವಾಗಿ ಅರಳಬೇಕು. ಆ ಅರಳುವಿಕೆಯನ್ನು ತನುವೇ ನೋಡಿ ಮೈಮರೆತು ಮರದಂತೆ ಆನಂದಿಸಬೇಕು. ಕಪಿಲಸಿದ್ಧ ಮಲ್ಲಿನಾಥನೇ ತಾನಾಗಬೇಕು. ಇದು ಶರಣರ ಆಶಯ. ಸಕಲ ಜ್ಞಾನಿಗಳ ಆಶಯ.

**131**

**ಆಗಮ ವಿಚಾರ ಅಪ್ರಮಾಣ, ನಮೋ ಬಸವಾ ಬಸವಾ,**

**ನಮೋ ಜಯತು ಜಯತು ಕರುಣಾಕರ,**
**ಪಾಹಿಮಾಂ ಬಸವಾ ಬಸವಾ,**
**ಮಾರ್ಗವಳಿಯ ನಿಯಮಾಚಾರ ಸಮಯಭಕ್ತ ನಮೋ ಬಸವಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬಸವನನ್ನು ಯಾರೂ ಪ್ರಮಾಣಿಸುವಂತಿಲ್ಲ. ಆತ ಜಗದಗಲ ಮುಗಿಲಗಲ ಮಿಗೆಯಗಲ. ತನುವಿನಗಲಕ್ಕೆ ಬಂದು ತನುವಿನಲ್ಲಿಯೇ ಚುಳುಕಾದ ವಿರಾಟ ಸ್ವರೂಪಿ. ಆತನ ಚರಣ ಕಮಲಗಳು ಪಾತಾಳದಿಂದ ಅತ್ತತ್ತ. ಆತನ ಶ್ರೀಮುಕುಟ ಬ್ರಹ್ಮಾಂಡದಿಂದಲೂ ಅತ್ತತ್ತ. ಆತನಿಗೆ ನಮೋ ನಮೋ. ಜಯತು ಕರುಣಾಕರ. ಪಾಹಿಮಾಂ ಬಸವಾ ಬಸವಾ.

ಯಾರ ಗಮನಕ್ಕೂ ನಿಲುಕದ ಅಗಮ್ಯನು ಬಸವದೇವ. ಯಾರೂ ಪ್ರಮಾಣಿಸಲು ಸಾಧ್ಯವಾಗದ ಅಪ್ರಮಾಣನು ಬಸವದೇವ. ಅಪ್ರತಿಮನು ಬಸವ ದೇವ. ಯಾರ ಗೋಚರಕ್ಕೂ ಬರದ ಅಗೋಚರನು ಬಸವದೇವ. ಕರಸ್ಥಲದಲ್ಲಿ ಚುಳುಕಾದ ಬಸವದೇವ. ಕರಕ್ಕೆ ಪ್ರಕಟವಾಗಿ ಕರವನ್ನು ಉದ್ಧರಿಸಿದ ಬಸವದೇವ.

ಮಾರ್ಗ ತೋರಿ ಮಾರ್ಗವಳಿದ ಬಸವದೇವ. ನಿಯಮಾಚಾರಿ ಸಮಯಭಕ್ತ ಬಸವದೇವನಿಗೆ ನಮೋ ನಮೋ.

**132**

**ಆಜ್ಯಲೋಕದಲ್ಲಿ ಅಬಲೆ ಅಮೃತಕೊಡನನೆ ಹೊತ್ತು**
**ಸದಮಲಜ್ಞಾನಿಯಾಗಿ ತಂ ರೂಪಿನಾ**
**ದಾಯೆ ದಾಯವ ನುಂಗಿ**
**ಬಣ್ಣ ಬಣ್ಣವ ನುಂಗಿ**
**ಸರದಿ ಸರದಿಯ ಮೇಲೆ ಉತ್ಕೃಷ್ಟದಾ,**
**ಐಲೋಕದಿಂ ಮೇಲೆ ಆ ಕೊಡನನಿಳುಹಲ್ಕೆ**
**ಕೊಡನೊಡೆದು ಅತ್ಯಂತ ಪ್ರವಾಹದಾ ನುಡಿಯ ಗಡಣವ ಮೀರಿ**
**ಅಕ್ಷರದ್ವಯದಲಿ ಮೃಡನೊಡನೆ ಓಲಾಡಿದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿಗೆ ತಾನು ಶ್ರೀಮಂತ ಎನ್ನುವುದು ಗೊತ್ತಾಗುತ್ತಿಲ್ಲ. ಅಮೃತದ ಕೊಡನ ಹೊತ್ತು ಸದಮಲಜ್ಞಾನಿಯಾಗಿಯೇ ಇರಬೇಕಾಗಿದ್ದ ತನು ಅಬಲೆಯಾಗಿ ಅಲಿಯುತ್ತಿರುವುದು ದುರ್ದೈವದ ಸಂಗತಿ.

ಇಡೀ ಬ್ರಹ್ಮಾಂಡವನ್ನೇ ತನ್ನ ಆಲಿಯ ಗರ್ಭದಲ್ಲಿಟ್ಟುಕೊಂಡು ಅದರ ಸೌಂದರ್ಯವನ್ನು ಅನುಭವಿಸುವ ಶ್ರೀಮಂತಿಕೆ ಕಣ್ಣಿಗೆ ಇದ್ದರೂ; ಕಣ್ಣಿನಲ್ಲಿಯೇ ಕುರುಡುತನ ಹುಟ್ಟಿದೆ. ತನ್ನ ಕುರುಡುತನ ತನ್ನ ಶ್ರೀಮಂತಿಕೆಯ ಲಾಭವನ್ನೇ ನುಂಗಿ ಹಾಕಿದೆ.

ಶಬ್ದ ಸೃಷ್ಟಿ ಮಾಡಿ, ಆ ಶಬ್ದವನ್ನು ನಿಃಶಬ್ದವನ್ನಾಗಿಸಿ ಅರಿವಿನಿಂದ ಕೇಳುವ ನಿಃಶಬ್ದ ಬ್ರಹ್ಮನೆನ್ನಿಸಿಕೊಂಡರೂ ಶಬ್ದವನ್ನು ಕೇಳಲು ಬಾರದ ಕಿವುಡುತನ ತನುವಿಗೆ ಬಂದೊದಗಿದೆ.

ಅರಿವಿನ ಪರಿಮಳ ಮಾತ್ರ ಮೂಸಿಸಿ; ಸುಗಂಧ ದುರ್ಗಂಧ ಎಂಬ ಅಜ್ಞಾನವನ್ನು ಸೋಸಿ ಮೂಸುವ ಶಕ್ತಿ ಮೂಗಿಗೆ ಇದ್ದರೂ ತನುವಿನ ಶ್ರೀಮಂತಿಕೆಯಿಂದ ತನು ಬಹುದೂರ ಸರಿದಿದೆ.

ಸಿಹಿ ಕಹಿ ಒಗರು ಹುಳಿ ಸಪ್ಪೆ ಕ್ಷಾರ ಉಪ್ಪು ಕಾರ ಮುಂತಾದ ಲವಣಗಳನ್ನು ಪ್ರಸಾದ ಮಾಡಿಕೊಳ್ಳುವ ಶಕ್ತಿ ನಾಲಿಗೆಗಿದ್ದರೂ ನಾಲಿಗೆಯಲ್ಲಿ ವಾಸ ಮಾಡಿದ ಅರಿವಿನ ದರ್ಶನ ನಾಲಿಗೆಗೆ ಆಗದಿರುವುದು ನಾಲಿಗೆಯ ದುರ್ದೈವವೇ ಸರಿ.

ತನ್ನನ್ನು ತಾನು ಮುಟ್ಟಿಕೊಂಡರೆ ತನುವಿಗೆ ಯಾವ ಬಾಧೆಯೂ ಇಲ್ಲ. ಆಗ ಅದು ಶಿವಮಯ. ಸಹಜ. ತನ್ನನ್ನು ತನ್ನಂತೆಯೇ ಇರುವ, ತನ್ನಂತಹದೇ ಪದಾರ್ಥ ತುಂಬಿದ ಇತರ ತನು ಮುಟ್ಟಿದರೆ ತನುವಿನ ಚರ್ಮಕ್ಕೆ ರೋಗ; ತನುವಿಗೆ ರೋಗ. ಕಾಮ ಉದ್ರೇಕಗೊಂಡು ತನು ತನುವನ್ನೇ ಹರಿದು ತಿನ್ನುತ್ತದೆ. ತನುವಿನ ಸಹಜ ಸಂಪತ್ತಿನಿಂದ ತನು ಬಹುದೂರವಾಗಿ ರಕ್ಕಸನೆಂದು ಕರೆಯಿಸಿಕೊಳ್ಳುತ್ತದೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದ ಐಲೋಕದ ಸಂಪತ್ತು ತನುವಿನಲ್ಲಿ ಭರಿತವಾಗಿದ್ದರೂ; ಐಲೋಕ ಸಂಪದ್ಭರಿತ ಅಮೃತದ ಕೊಡನೆಂದು ಶರಣರಿಂದ ಕರೆಯಿಸಿಕೊಂಡಿದ್ದರೂ; ಕೊಡದ ಸಂಪತ್ತು ಕೊಡಕ್ಕೆ ಗೊತ್ತಿಲ್ಲದೆ ಹೋಗಿದೆ.

ಅಜ್ಞಾನದ ಕೊಡ ಹೊಡೆದು, ಪ್ರವಾಹ ಉಕ್ಕಿ, ನುಡಿಗಡಣವ ಮೀರಿ, ಅಕ್ಷರದ್ವಯದ ಅಕ್ಷರೋತ್ತಮನೆಂಬ ಅರಿವಿನ ಶಿವನೊಡನೆ ಓಲಾಡಿದಾಗ ಕಪಿಲಸಿದ್ಧ ಮಲ್ಲಯ್ಯನೇ ತಾನಾಗುತ್ತಾನೆ.

**133**

**ಆ ಜ್ಞಾನಸಿದ್ಧನ ಆನಂದ ಸ್ಥಾನದಲ್ಲಿ ಕಂಡೆ,**
**ಒಪ್ಪಿರ್ದ ಶುದ್ಧ ಸಿಂಹಾಸನಾರೂಢನಾಗಿ,**
**ಒಪ್ಪಿರ್ದ ಅಪರ ಮಧ್ಯ ಪೂರ್ವವೆಂಬ**
**ಹೋಬಳಿಗೆ ತಾನೆ ಹೊಲಬಿಗನಾಗಿ,**
**ಬಂದವರನೊಳಕೊಂಡು ಬಹವರನ ಕರೆವುತ್ತ ,**
**ಬಾರದವರನೇಡಿಸುತ್ತ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಅಜ್ಞಾನಭರಿತವಾಗಿ ಇದ್ದಾನು.**

ಸದಾ ಆನಂದ ; ಪರಮಾನಂದದಲ್ಲಿರುವ ಜ್ಞಾನ ಕಾಯ ಒಂದಿದೆ. ಸ್ಥೂಲ ಕಾಯ ಒಂದಿದೆ. ಸ್ಥೂಲ ಕಾಯವನ್ನು ಬಳಕೆ ಮಾಡಿ ಮನ ಬಂದಂತೆ ದಣಿಸುವ ಸೂಕ್ಷ್ಮಕಾಯ ಒಂದಿದೆ. ಹೀಗೆ ಕಾಣುವ ಸ್ಥೂಲ ಕಾಯದಲ್ಲಿ ಎರಡು ಕಾಯಗಳಿವೆ.

ಕಾಯಕ್ಕೆ ಕಾಯು ಪರಿಚಯವಿದೆ. ಮನೋ ಕಾಯುವೂ ಪರಿಚಯವಿದೆ. ಜ್ಞಾನಕಾಯದ ಪರಿಚಯ ಕಾಯಕ್ಕಿಲ್ಲ; ಹಾಗೆಯೇ ಮನೋಕಾಯಕ್ಕೂ ಇಲ್ಲ.

ಮೂರು ಕಾಯಗಳಲ್ಲಿ ಸದಾ ಆನಂದ ಸ್ಥಾನದಲ್ಲಿರುವುದೇ ಜ್ಞಾನಕಾಯ. ಇದನ್ನು ಶರಣರು ಕೈಲಾಸವೆಂದು ಕರೆದಿದ್ದಾರೆ. ಈ ಕಾಯದಲ್ಲಿ ಜ್ಞಾನಸಿದ್ಧ ವಾಸ ಮಾಡುತ್ತಾನೆ. ಈತ ಸದಾ ಸಿಂಹಾಸನಾರೂಢನಾಗಿರುತ್ತಾನೆ. ಬ್ರಹ್ಮಪೀಠವನ್ನು ಅಲಂಕರಿಸಿರುತ್ತಾನೆ.

ಮನೋಕಾಯ ಭ್ರಮಾಕಾಯ. ಇಲ್ಲಿ ಭ್ರಮೆ ತನ್ನ ಸುಳ್ಳು ಸಿಂಹಾಸನದ ಮೇಲೆ ಕುಳಿತು ಮನ ಬಂದಂತೆ ಕಾಯದೊಂದಿಗೆ ರಾಜ್ಯಭಾರ ಮಾಡುತ್ತದೆ. ಹೀಗಾಗಿ ಕೈಲಾಸವೆಂದೇ

ಕರೆಯಿಸಿಕೊಳ್ಳಬೇಕಾದ ಕಾಯ ಹಲವಾರು ಸುಖ ದುಃಖಗಳ ಹೆಸರು ಪಡೆದು ಸದಾ ದುಃಖದಲ್ಲಿ ಮುಳುಗೇಳುತ್ತದೆ.

ಜ್ಞಾನಸಿದ್ಧನ ಸಿಂಹಾಸನವೆಂದರೆ ಅದು ಜಗದಗಲ ಮುಗಿಲಗಲ. ಅಲ್ಲಿಗೆ ಹುಡುಕುತ್ತಾ ಹೋದವರಿಗೆ ವಿಶೇಷ ಸ್ಥಾನಮಾನಗಳುಂಟು. ಜ್ಞಾನಸಿದ್ಧ ಬಂದವರನ್ನು ಆದರದಿಂದ ಅಪ್ಪಿಕೊಳ್ಳುತ್ತಾನೆ. ಬರದವರನ್ನು ಕರೆಯುತ್ತಾನೆ. ಬಾರದವರಿಗೆ ಸುಖ-ದುಃಖಗಳ ಬಾಧೆಯನ್ನುಂಟು ಮಾಡುತ್ತ ತನ್ನೆಡೆಗೆ ಬರಲು ಪ್ರೇರಣೆ ನೀಡುತ್ತಾನೆ.

ಕಾಯ ಒಂದೇ ಆಗಿ ಕಂಡರೂ ಅವು ಮೂರು. ಈ ಮೂರು ಕಾಯಗಳನ್ನು ಸೃಷ್ಟಿ ಮಾಡಿದಾತನೇ ಜ್ಞಾನಸಿದ್ಧ. ಕಾಯದೊಳಗೆ ಸಂಗಮವಾದ ಅರಿವಿನ ಲಿಂಗನೂ ತಾನೆ. ಕಾಯಕ್ಕೆ ಅಂಟಿದ ಮನವೆಂಬ ಮಾಯವೂ ತಾನೇ. ಇವೆರಡನ್ನೂ ಹೊತ್ತುಕೊಂಡು ಯಾರಿಗೂ ಕಂಡುಬರದೆ ಕಂಡುಬರುವ ಕಾಯವೂ ಆತನೇ ಆಗಿದ್ದಾನೆ.

ಕಾಯದಲ್ಲಿ ಜ್ಞಾನವೂ ಭರಿತವಾಗಿದೆ. ಹಾಗೆಯೇ ಅಜ್ಞಾನವೂ ಭರಿತವಾಗಿದೆ. ಜ್ಞಾನ ಸಿದ್ಧನ ಪರಿಚಯವಾದ ಮನ ಮಾತ್ರ ತನ್ನ ಕಾಯದ ಮಾಯವನ್ನು ಕಳೆದುಕೊಂಡು ಪರಮಾನಂದದ ಸ್ಥಾನ ಪಡೆದುಕೊಳ್ಳುತ್ತದೆ. ಜ್ಞಾನಸಿದ್ಧನ ಸಿಂಹಾಸನಕ್ಕೆ ವಾರಸುದಾರನಾಗುತ್ತಾನೆ.

**134**

**ಆ ಜ್ಞಾನಸಿದ್ಧನನರ್ಚಿಸಿಹೆನೆಂದೆಂಬೆ,**
**ಆದಿ ಅಕ್ಷರದ ಪವಣೆಂತುಟು ?**
**ಮುನ್ನ ಮುವತ್ತಾರು ತನ್ನ ಸ್ಥಲದೊಳಗೊಪ್ಪಿ**
**ಇನ್ನು ನಾ ನೀನೆಂದೆಂಬ ಸಂದಿಲ್ಲವಯ್ಯಾ .**
**ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನ**
**ಮಂಗಳದ ಬಯಲೊಳಗೆ ಬೆಳಗುತಾನೆ.**

ತನುವಿನಲ್ಲಿ ತನ್ಮಯವಾದ ಸತ್ಯಕ್ಕೆ ಜ್ಞಾನಸಿದ್ಧ ಎಂದು ಹೆಸರಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು. ಹಾಗೆಯೇ ಆತನನ್ನು ಅರ್ಚಿಸಿ ಪೂಜಿಸುವ ಕಲೆಯನ್ನೂ; ಆತನೊಂದಿಗೆ ಮಾತನಾಡುವ ಕಲೆಯನ್ನು ಕೂಡಾ ಕರಗತ ಮಾಡಿಕೊಂಡಿದ್ದಾರೆ.

ಜ್ಞಾನಸಿದ್ಧನನ್ನು ಕಂಡುಕೊಳ್ಳಲು; ಆತನನ್ನು ಸಾಕ್ಷಾತ್ಕಾರ ಮಾಡಿಕೊಂಡು ಆತನ ದರ್ಶನಭಾಗ್ಯ ಪಡೆಯಲು; ಅಕ್ಷರಗಳನ್ನು ಕಲಿಯುವ ಅವಶ್ಯಕತೆಯಿಲ್ಲ. ವೇದ ಆಗಮ ಉಪನಿಷತ್‌ಗಳನ್ನು ಅಭ್ಯಸಿಸುವ ಅವಶ್ಯಕತೆಯೂ ಇಲ್ಲ.

ಜ್ಞಾನಸಿದ್ಧನೆಂಬ ಆತ; ಮನವೆಂಬ ನಾನು ತನುವಿನಲ್ಲೇ ಇರುವ ಗುಟ್ಟಿನ ಸೂತ್ರವನ್ನು ಗುರುದೇವ ಹೇಳಿದ ಮೇಲೆ; ನಾನು ನನ್ನ ತನುವಿನಲ್ಲಿಯೇ ಇರುವ ಆತನನ್ನು ಅರ್ಚಿಸಿದೆ. ಆತನಿಗೆ ಜ್ಞಾನ ಸಿದ್ಧ ಎಂಬ ಹೆಸರನ್ನಿಟ್ಟು ಭಕ್ತಿಯಿಂದ ಕೂಗಿದೆ. ಆ ಕೂಗಿಗೆ ಓ ಗೊಟ್ಟ ಆತ ಸಂದಿಲ್ಲದಂತೆ ತನುವಿನಲ್ಲಿಯೇ ಪ್ರಕಟವಾದ.

ನಾನು ನೀನೆನ್ನುವುದನ್ನು ಕೂಡಾ ಅಳಿದ. ಅಂಗದಲ್ಲಿಯೇ ಅನಂಗಧಾರಣ ಮಾಡಿದ ಕಪಿಲಸಿದ್ಧ ಮಲ್ಲಿನಾಥನೇ ತಾನಾಗಿ ಮಂಗಳದ ಬೆಳಗೊಳಗೆ ಬೆಳಗಿಂಗೆ ಬೆಳಕಾಗಿ ಬೆಳಗಿದ. ತ್ರಿಕೂಟ ಸಂಗಮನಾಥನೇ ತಾನಾದ.

135

**ಆ ಜ್ಞಾನಸಿದ್ಧನ ನರ್ಚಿಸೇನೆಂದರೆ ಎಂತರ್ಚಿಸಲಹುದಯ್ಯ ?**
**ಐವೆರಡನತಿಗಳೆದಲ್ಲದೆ, ಮೂರಾರ ಜರಿದಲ್ಲದೆ,**
**ಏಳೆಂಟನತಿಗಳೆದಲ್ಲದೆ, ಆರಾರ ಮೀರಿದಲ್ಲದೆ,**
**ಎಂತರ್ಚಿಸಲಹುದಯ್ಯ ? ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ,**
**ಆನಂದವನೆಯ್ದಿದ ಆಜ್ಞಾಸಿದ್ಧರಿಗಲ್ಲದೆ**
**ಎಂತರ್ಚಿಸಲಹುದಯ್ಯಾ ?**

ಮನುಷ್ಯ, ತಾನು ಮಾಡಿದ ದೇವರನ್ನು ಅರ್ಚಿಸುತ್ತಾನೆ, ಪೂಜಿಸುತ್ತಾನೆ. ಆ ದೇವರಿಗೆ ಆಲಯ ನಿರ್ಮಿಸುತ್ತಾನೆ. ತನ್ನಂತೆಯೇ ವಸ್ತ್ರಾಭರಣಗಳನ್ನು ಉಡಿಸುತ್ತಾನೆ. ಛತ್ರಿ ಚಾಮರಗಳನ್ನು ಬೀಸುತ್ತಾನೆ. ತನ್ನಂತೆಯೇ ಮದುವೆ ಮಾಡುತ್ತಾನೆ. ಶೋಬಾನೆ ಪದ ಹಾಡಿ ಕಲ್ಯಾಣೋತ್ಸವ ಮಾಡುತ್ತಾನೆ.

ಮನುಷ್ಯ ಮಾಡಿದ ದೇವರನ್ನು ಮನುಷ್ಯನಿಗೆ ಪೂಜಿಸಲು ಬರುತ್ತದೆಯೇ ಹೊರತು; ಮನುಷ್ಯನನ್ನು ಮಾಡಿದ ದೇವರನ್ನು ಮನುಷ್ಯ ಪೂಜಿಸಲು ಅರಿಯ.

ಮನುಷ್ಯ ಮಾಡಿದ ದೇವರು ಮನುಷ್ಯನಲ್ಲಿಯೇ ಇದ್ದಾನೆ. ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆಯಲ್ಲಿದ್ದಾನೆ. ಹೆಣ್ಣಿನಲ್ಲಿದ್ದಾನೆ; ಗಂಡಿನಲ್ಲಿದ್ದಾನೆ. ಸರ್ವಾಂಗದಲ್ಲಿದ್ದಾನೆ.

ನೋಡುವ ಕಣ್ಣಲ್ಲಿದ್ದು; ಹಾದರದ ನೋಟವನ್ನು ಖಂಡಿಸಿ; ತನ್ನ ಕಣ್ಣಿಂದ ಹೀಗೆ ನೋಡೆಂದು ದೃಶ್ಯದ ಮೂಲಕವೇ ದೃಶ್ಯದಿಂದಲೇ ನುಡಿದು ದೃಶ್ಯಕ್ಕೆ ಹೇಳುತ್ತಾನೆ. ಜ್ಞಾನದ ದೃಶ್ಯವನ್ನು; ತನ್ನ ಅಜ್ಞಾನ ದೃಶ್ಯ ಅಳಿಯುವ ಮೂಲಕ ಪೂಜಿಸಲು ಬರುತ್ತದೆ. ಕಣ್ಣೊಳಗೆ ಮುಕ್ಕಣ್ಣನ ಕಣ್ಣುಂಟು. ಆದರೂ ಕಣ್ಣಿಗೆ ಕಾಣಲು ಸಾಧ್ಯವಾಗುತ್ತಿಲ್ಲ.

ಕಿವಿಯೊಳಗೆ ಆತನ ಅರಿವಿನ ಕಿವಿಯುಂಟು ಕೇಳಲು ಸಾಧ್ಯವಾಗುತ್ತಿಲ್ಲ. ಜಿಹ್ವೆಯೊಳಗೆ ಆ ಜ್ಞಾನಸಿದ್ಧನ ಜಿಹ್ವೆಯುಂಟು ರುಚಿಸಲು ಸಾಧ್ಯವಾಗುತ್ತಿಲ್ಲ. ಮೂಗಿನೊಳಗೊಂದು ಆ ಜ್ಞಾನಸಿದ್ಧನ ಮೂಗುಂಟು ಆತನ ಮೂಗಿನಿಂದ ಅರಿವಿನ ಪರಿಮಳ ಮೂಸಿಸಲು ಸಾಧ್ಯವಾಗುತ್ತಿಲ್ಲ. ಚರ್ಮದೊಳಗೊಂದು ಆ ಜ್ಞಾನಸಿದ್ಧನ ಚರ್ಮಉಂಟು ಸ್ಪರ್ಶಿಸಲು ಸಾಧ್ಯವಾಗುತ್ತಿಲ್ಲ. ಈ ಐದನ್ನು ಅತಿಗಳೆದಲ್ಲದೆ ಜ್ಞಾನಸಿದ್ಧನ ಅರ್ಚಿಸಲು ಬರುವುದಿಲ್ಲ.

ಸಾತ್ವಿಕ ರಾಜಸ ತಾಮಸ ಗುಣಗಳುಂಟು. ಈ ಮೂರೂ ಗುಣಗಳನ್ನು ಜರಿದಲ್ಲದೆ ನಿರ್ಗುಣಿ ಜ್ಞಾನಸಿದ್ಧನ ಅರ್ಚಿಸಲು ಬರುವುದಿಲ್ಲ. ಮನುಷ್ಯನನ್ನು ಮಾಡಿ, ಮನುಷ್ಯನೊಳಗೇ ಇದ್ದು, ಮನುಷ್ಯ ತಪ್ಪಿದಂತೆಲ್ಲ ಮನುಷ್ಯನಿಗೇ ಪಾಠ ಮಾಡುವ ಜ್ಞಾನ ಸಿದ್ಧನಾತ! ಅಂತಹ ಜ್ಞಾನಸಿದ್ಧನನ್ನು ಮನುಷ್ಯನಿಗೆ ಅರ್ಚಿಸಲು ಬರುವುದಿಲ್ಲ. ಏಕೆಂದರೆ ಮನುಷ್ಯ; ಮನುಷ್ಯ ಮಾಡಿದ ದೇವರನ್ನೇ ಅರ್ಚಿಸುತ್ತಾನೆ. ತನ್ನನ್ನು ಮಾಡಿ ತನ್ನಲ್ಲಿಯೇ ಇದ್ದ ದೇವರನ್ನು ಪೂಜಿಸಲು ಮರೆತಿದ್ದಾನೆ.

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಮೀರಿದಲ್ಲದೆ, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಕಳೆದುಕೊಂಡಾಗ ಮಾತ್ರ ಜ್ಞಾನಸಿದ್ಧನ ಅರ್ಚಿಸಲು ಬರುತ್ತದೆ.

ಜ್ಞಾನಸಿದ್ಧನೆಂದರೆ, ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನದೇವ. ಆತನ ಆನಂದವನ್ನು ಪಡೆದ ಶರಣರಿಗಲ್ಲದೆ; ಜ್ಞಾನಸಿದ್ಧರಿಗಲ್ಲದೆ, ಉಳಿದವರಿಗೆ ಅರ್ಚಿಸಲು ಸಾಧ್ಯವೆ ಎಂದು ಸಿದ್ಧರಾಮ ಶಿವಯೋಗಿಗಳು ಪ್ರಶ್ನಿಸುತ್ತಾರೆ.

ಸಕಲ ಓದುಗರೂ ಆ ಜ್ಞಾನಸಿದ್ಧನ ಪೂಜಿಸಿ ಧನ್ಯರಾಗಬೇಕೆಂಬ ಹಿರಿಯಾಸೆಯಿಂದ ವಚನದಲ್ಲಿರುವ ಗುಟ್ಟು ತಾವೇ ರಟ್ಟು ಮಾಡಿದ್ದಾರೆ.

**136**

**ಆ ಜ್ಞಾನಸಿದ್ಧನರ್ಚಿಸುವ ಆನಂದಮಯ**
**ಶರಣರ ಧ್ಯಾನ ಮೌನ ಸಮಾಧಿಗಳ್ಳೇಗೆಂದೊಡೆ ;**
**ಪ್ರಸಾದವ ಬಯಸಿ ಪರವನರಿಯದಿಹುದೆ ಧ್ಯಾನ ;**
**ಶಿವನಲ್ಲದೆ ಅತಃಪರವಿಲ್ಲೆಂದು**
**ಅನ್ಯರ ಕೂಡೆ ನುಡಿಯದಿಪ್ಪುದೆ ಮೌನ ;**
**ವ್ರತವಾರರಲ್ಲಿ ತದ್ಗತವಾಗಿಪ್ಪುದೀಗ ಸಮಾಧಿ,**
**ಇಂತಪ್ಪುದೀಗ ಶಿವಯೋಗ.**
**ಇಂತಪ್ಪವರ ತೋರು, ನಿನ್ನರ್ಚನೆಯನೊಲ್ಲೆ ;**
**ಅವರ ಗಡಣ ಸಂಗಮಾತ್ರದಲ್ಲಿ ನಿನ್ನ ಪದವಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತಾನು ಮಾಡಿದ ದೇವರನ್ನು ಅರ್ಚಿಸುವುದು ಅರ್ಚನೆಯಲ್ಲ. ತನ್ನನ್ನು ಸೃಷ್ಟಿ ಮಾಡಿ, ತನ್ನ ತನುವಿನಲ್ಲಿಯೇ ಸಂಗಮವಾಗಿ, ತಾನು ತಪ್ಪಿದಲ್ಲಿ, ತನಗೆ ಪಾಠ ಮಾಡುವ ಜ್ಞಾನಸಿದ್ಧನ ಅರ್ಚಿಸಿ ಮಹದಾನಂದದಲ್ಲಿ ಇರುವುದೇ ಧ್ಯಾನ; ಮೌನ ; ಸಮಾಧಿ.

ನೋಡಿದ ನೋಟ ತನುವನ್ನು ಹಾದರಕ್ಕೆ ಕರೆದುಕೊಂಡು ಹೋಗದೆ ಕಣ್ಣಿನ ಅಜ್ಞಾನ ಕಣ್ಣಿನಲ್ಲಿರುವ ಜ್ಞಾನಸಿದ್ಧನಿಗೆ ಪ್ರಸಾದವಾಗುವುದೇ ಮೌನ. ಅದೇ ಧ್ಯಾನ.

'ಶಿವ' ಎಂಬುವವನು ಹೊರಗಿಲ್ಲ. ಶಿವನೆಂದರೆ ಜ್ಞಾನ. ಆತ ಜಲಜನಕವನ್ನು ಆಮ್ಲಜನಕವನ್ನು ಸೃಷ್ಟಿ ಮಾಡಿದ; ಅವೆರಡನ್ನು ಕೂಡಿಸಿ; ಅದರಲ್ಲಿ ತಾನು ಕೂಡಿ ಜೀವ ಜಲಬಿಂದುವಾಗಿಸಿದ. ಆ ಜಲಬಿಂದುವೇ ತಂದೆಯ ಮೂಲಕ ಗರ್ಭ ಪ್ರವೇಶ ಮಾಡಿ ; ರಕ್ತ ಮಾಂಸ ಮೂಳೆ ಮಜ್ಜೆ ಮೇದಸ್ಸು ಆಗಿ ಅವು ಸೋರದಂತೆ ಚರ್ಮದ ಕವಚ ಮಾಡಿದ. ಇಡೀ ತನುವಿನಲ್ಲಿ ಜ್ಞಾನಸಿದ್ಧ ತನ್ಮಯವಾದ. ಗರ್ಭದಿಂದ ಹೊರಬಂದು 'ಶಿವ' ಎಂದು ಕರೆಯಿಸಿಕೊಂಡ.

ಶಿವನೇ ತಾನಾಗಿದ್ದರೂ; ಶಿವನನ್ನೇ ಮರೆತು ಶಿವನನ್ನು ಆರಾಧಿಸುವ ಮನವೆಂಬ ಮರೆವನ್ನು 'ಶಿವ' ತನುವಿನಲ್ಲಿಯೇ ಸೃಷ್ಟಿ ಮಾಡಿದ. 'ಶಿವ'ನೆಂದರೆ ಜ್ಞಾನ. ಶಿವನೆಂದರೆ ಅರಿವು. ಆ ಅರಿವೇ ಸಾಕ್ಷಾತ್ ಪರಬ್ರಹ್ಮ. ಇಂತಹ ಶಿವನಲ್ಲದೆ ಅತಃಪರವಿಲ್ಲೆಂದು ಅನ್ಯರ ಕೂಡ ನಡೆಯದಿಪ್ಪುದೇ ಮೌನ; ಧ್ಯಾನ; ಸಮಾಧಿ. ಇದೇ ಶಿವಯೋಗ.

ಇಂತಹ ಶಿವನನ್ನು ಅರಿತ ಜ್ಞಾನಿಗಳನ್ನು ಮಹಾಜ್ಞಾನಿಗಳನ್ನು, ಶಿವಶರಣರನ್ನು ಎನಗೆ ತೋರು. ಇನ್ನು ನಿನ್ನ ಅರ್ಚನೆಯನೊಲ್ಲೆ. ನಾನು ಮಾಡಿದ ದೇವನನ್ನು ನಾನು ಅರ್ಚಿಸುವುದೆಂದರೆ ಇದು ನನಗೆ ಬಾಲ್ಯಾವಸ್ಥೆ. ಮಗು ಗೊಂಬೆ ಮಾಡಿ ಅದನ್ನೇ ದೇವರೆಂದು ಅರ್ಚಿಸಿದಂತೆ. ಇನ್ನು ನನಗೆ ಈ ಅರ್ಚನೆ ಬೇಡ. ಜ್ಞಾನ ಸಿದ್ಧನನ್ನು ಅರ್ಚಿಸಿ ಪೂಜಿಸಿ ಜ್ಞಾನವೇ ತಾನಾದ ಶರಣನ ಮನೆ ಬಾಗಿಲ ಕಾಯ್ದು ಬದುಕುವೆ. ಕಪಿಲಸಿದ್ಧ ಮಲ್ಲಿಕಾರ್ಜುನಾ.

137

**ಆಜ್ಞೆಯನು ಮೀರಿಪ್ಪುದಾನತದ ಸಂಬಂಧ,**
**ತಾನು ಅಜಲೋಕದಲಿ ನಿತ್ಯ ಸುಖಿಯೆ,**
**ಸ್ವಾನುಭಾವೈಕ್ಯದಲಿ ಆನತದ ಸಂಬಂಧ.**
**ಸೋಮರೀತಿಯ ದೀಪ್ತಿ**
**ಸಾಮಜನೊಡನಾಟ ನಾಮಲೀಯನ ಕೂಟ**
**ಕಾಮ್ಯಾರ್ಥಿಗಳಿಗಿಲ್ಲ ಕಪಿಲಸಿದ್ಧ ಮಲ್ಲಿಕಾರ್ಜುನನು.**

ತನುವಿನ ಇರುವಿಕೆಯೇ ವಿಚಿತ್ರ. ತನುವಿನೊಳಗೆ ನಡೆಯುವ ಸಂಘರ್ಷ; ತನುವಿನ ತೋರಿಕೆ; ಅದು ಬಾಹ್ಯದಲ್ಲಿ ಕಂಡು ಬರುವ ರೀತಿ. ಹೀಗೆ ಒಂದಕ್ಕೊಂದು ಸಂಬಂಧವಿಲ್ಲದಂತೆ ಬದುಕಿ; ತನ್ನ ಬದುಕನ್ನು ಸಾರ್ಥಕ್ಯಗೊಳಿಸಿಕೊಳ್ಳದೆ; ತನು ತನ್ನ ಬದುಕನ್ನು ಮುಗಿಸಿಕೊಳ್ಳುತ್ತದೆ.

ತನು; ಬಂಧು ಬಳಗಕ್ಕೆ ನೆರೆಹೊರೆಯವರಿಗೆ ಗೆಳೆಯರಿಗೆ ತಾನು ಕಾರ್ಯನಿರ್ವಹಿಸುವ ಸಹುದ್ಯೋಗಿಗಳಿಗೆ; ಇಡೀ ಲೋಕಕ್ಕೆ; ಹಾಗೂ ತನು ಹುಟ್ಟಿ ಬಂದ ಜಾತಿ, ಮತ, ಪಂಥ ಧರ್ಮಕ್ಕೆ; ಲೋಕದ ದೃಷ್ಟಿಯಲ್ಲಿರುವ ಬಾಹ್ಯ ದೇವರಿಗೆ ಭಕ್ತನಾಗಿ ಕಾಣಬಹುದು. ಅತ್ಯಂತ ಶ್ರೀಮಂತ ವಿನಯ ಶೀಲನಾಗಿ ಕಾಣಬಹುದು. ಆದರೆ ತನುವಿನೊಳಗೆ ಏನು ನಡೆದಿದೆ ಎನ್ನುವ ಮಾಹಿತಿ ತನುವಿಗೆ ಲಭ್ಯವಾಗದಿದ್ದರೆ ಅದು ಶ್ರೀಮಂತ ತನುವಲ್ಲ. ಭ್ರಮಾ ಲೋಕದ ತನು.

ತನು ಬ್ರಹ್ಮಲೋಕಕ್ಕೆ ಸಂಬಂಧಪಟ್ಟದ್ದು. ಅದು ಸುಖೀಲೋಕ. ಆ ಲೋಕದಲ್ಲಿ ಬ್ರಹ್ಮ ವಾಸ ಮಾಡುತ್ತಾನೆ. ಆದರೆ ಮನ ತನುವಿನೊಂದಿಗೆ ಭ್ರಮಾಲೋಕದಲ್ಲಿ ವಾಸ ಮಾಡುತ್ತಲಿದೆ. ಹೀಗಾಗಿ ತಾನು ಇರುವ ಇರುವಿಕೆಯನ್ನು ಸದಾ ಪ್ರಶ್ನಿಸುತ್ತ; ತಾನು ಇರಬೇಕಾದ ಬ್ರಹ್ಮನ ಇರುವಿಕೆಯೊಂದಿಗೆ ಸದಾ ಸಂಘರ್ಷ ನಡೆಯುತ್ತಲಿದೆ.

ಬ್ರಹ್ಮನ ಆಜ್ಞೆಯನು ಮೀರಿ ಭ್ರಮಾಲೋಕದಲ್ಲಿ ವಿಹರಿಸುವ ತನು ಮಹಾ ಭಕ್ತನಿರಬಹುದು. ಜಗದ್ಗುರುವೇ ಆಗಿರಬಹುದು; ಪಂಡಿತ ಶಾಸ್ತ್ರಿ ಉತ್ತಮ ಅಧಿಕಾರಿಯೇ ಆಗಿರಬಹುದು ಆದರೂ ಅದು ಸುಖಿ ಅಲ್ಲ.

ಸುಖ ಎನ್ನುವುದು ತಾನು ಸಂಗ್ರಹ ಮಾಡಿಕೊಂಡ ಲೋಹದಲ್ಲಿಲ್ಲ; ಕರೆನ್ಸಿಯಲ್ಲೂ ಇಲ್ಲ; ಹೊಲ ಮನೆ ಪದವಿ ಅಧಿಕಾರದಲ್ಲಿಯೂ ಇಲ್ಲ. ಗುರು ಮತ್ತು ಭಕ್ತನ ಸ್ಥಾನದಲ್ಲಿಯೂ ಇಲ್ಲ.

ತನುವಿನ ಸ್ವಾನುಭವಕ್ಕೆ ಮಾರು ಹೋಗಿ, ಆ ಸ್ವಾನುಭವದಲ್ಲಿಯೇ ಮಿಂದು, ಅಲ್ಲಿಯೇ ಐಕ್ಯನಾದ ಮನಕ್ಕೆ ನಿಜಸುಖ ಪ್ರಾಪ್ತಿಯಾಗುತ್ತದೆ. ಆ ಸ್ವಾನುಭವಕ್ಕೆ ವಂದಿಸಿ, ಆ ಸ್ವಾನುಭವಕ್ಕೆ ಶರಣು ಹೋದ ಶರಣನೇ ನಿಜಸುಖಿ. ನಿಜಸುಖಿ ಎಂದರೆ ಬೇರಲ್ಲ ಶರಣನೆಂದರೆ ಬೇರಲ್ಲ ಆತ ಅಜಲೋಕದ ನಿಜಸುಖಿ; ನಿತ್ಯಸುಖಿ.

ತನು ತನ್ನ ಬಾಹ್ಯ ಲೋಕದ ಅಜ್ಞಾನದ ಹೆಸರು ಕಳೆದುಕೊಂಡರೆ ಸಾಕು ಅದು ಅರಿವಿನ ಕನ್ನಡಿಯಂತಾಗುತ್ತದೆ. ಆ ಕನ್ನಡಿಯೊಳಗೆ ಕರಿ ಅಡಗಿದುದು ಕನ್ನಡಿಗೆ ಕಂಡು ಬರುತ್ತದೆ. ಜಗದಗಲ ಮುಗಿಲಗಲವಿದ್ದ ಸೋಮಶೇಖರ ತನುವಿನಗಲಕ್ಕೆ ಬಂದು ಚುಳುಕಾದದ್ದು ಸ್ವಾನುಭವಕ್ಕೆ ಬರುತ್ತದೆ.

ಸಾಮಜನೊಡನಾಟ ನಾಮಲೀಯನ ಕೂಟ ಕಾಮ್ಯಾರ್ಥಿಗಳಿಗಿಲ್ಲ ಕಪಿಲಸಿದ್ಧ

ಮಲ್ಲಿಕಾರ್ಜುನನು. ಅರಿವಿನ ಈ ನಿಜಸುಖ, ನಿತ್ಯಸುಖ ಸ್ವಾನುಭವಿಗಳಿಗೆ ಮಾತ್ರ ಸಾಧ್ಯ. ಲೋಕಾನುಭವಿಗಳಿಗಲ್ಲ!

**138**

**ಆಚಾರ ಪ್ರಾಣವಾದಡೆ ಅನ್ಯಕ್ಕೆರಗದಿರಬೇಕು.**
**ಪ್ರಾಣಲಿಂಗ ಸಂಬಂಧಿಯಾದ ಬಳಿಕ ಕಾಯಕ್ಕಳಿವಿಲ್ಲದಿರಬೇಕು.**
**ಐಕ್ಯನಾದ ಬಳಿಕ ಸಕಲ ನಿಷ್ಕಲದಲ್ಲಿ ಪೂರ್ಣನಾಗಿರಬೇಕು.**
**ಇನಿತು ಉಳ್ಳಡೆ ಅವನೈಕ್ಯ ,**
**ಅಲ್ಲದಿದ್ದಡೆ ಆತನಭ್ಯಾಸಿ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ**
**ಇಂಥವರನೊಲಿವ ಅಂಥವರನೊಲ್ಲ.**

ಪ್ರಾಣವೆಂದರೆ ಜೀವವಲ್ಲ. ಜೀವಕ್ಕೆ ಆಧಾರವಾದ ಜೀವ. ಪ್ರಾಣಕ್ಕೆ ಆಧಾರವಾದ ಪ್ರಾಣ. ಅದಕ್ಕೆ ಹುಟ್ಟಿಲ್ಲ, ಸಾವಿಲ್ಲ. ಜೀವವನ್ನು ಸೃಷ್ಟಿಸಿ ಅದಕ್ಕೆ ಆಧಾರವಾಗಿದೆ. ಅದು ಲಿಂಗ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಪ್ರಾಣಲಿಂಗ ಎಂದು ಕರೆದಿದ್ದಾರೆ.

ಪ್ರಾಣವೂ ಇದೆ. ಆ ಪ್ರಾಣಕ್ಕೆ ಸಂಬಂಧವಾದ ಲಿಂಗವೂ ಇದೆ, ಕಾಯವೂ ಇದೆ. ಕಾಯಕ್ಕೆ ಸಂಬಂಧವಾದ ಅಕಾಯವೂ ಇದೆ. ಕಾಯಕ್ಕೆ ಅಳಿವುಂಟು. ಅಕಾಯಕ್ಕೆ ಅಳಿವಿಲ್ಲ.

ಕಾಯ ನಿರ್ಜೀವವಾದಾಗ; ಅಂದರೆ ಅಕಾಯ ಕಾಯವನ್ನು ತಳ್ಳಿದಾಗ, ಕಾಯ ಜಡವಾಗುತ್ತದೆ. ಜಡ ಕಾಯವನ್ನು ನೋಡಿದ ಕಾಯಗಳು ಕಾಯ ಹೋಯಿತು ಎನ್ನುತ್ತಾರೆ. ಜಡ ಕಾಯ ಭೂಮಿಗೆ ಬಿದ್ದಿದೆ; ಆದರೂ ಕಾಯ ಹೋಯಿತು ಅನ್ನಲು ಕಾರಣವೇನು? ಹೋದ ಕಾಯ ಆವುದು? ಇದ್ದು ಜಡವಾದ ಕಾಯ ಆವುದು?

ಕಾಯ ಇದ್ದಾಗ ಕಾಯದಲ್ಲಿದ್ದ ಅಕಾಯವನ್ನು ನೋಡಲು ಇತರ ಕಾಯಗಳಿಗೆ ಸಾಧ್ಯವಾಗಲಿಲ್ಲ. ಇದ್ದ ಕಾಯಕ್ಕೂ ಸಾಧ್ಯವಾಗಲಿಲ್ಲ. ಜಡ ಕಾಯ ಕೆಳಗೆ ಬಿದ್ದಾಗ ಮಾತ್ರ ಕಾಯ ಹೋಯಿತು ಎನ್ನುತ್ತಾರೆ. ಹೀಗೆ ಅನ್ನುವ ಮಾತು ಮಾತ್ರ ಉಳಿದಿದೆ. ಕಾಯ ಇದ್ದಾಗ ಕಾಯದಲ್ಲಿದ್ದ ಅಕಾಯವನ್ನು ನೋಡುವುದು ಮರೆತು ಹೋಗಿದೆ ಅಂದಂತಾಗಲಿಲ್ಲವೆ? ಮರೆತು ಹೋದ ಅಕಾಯವನ್ನು ಮತ್ತೆ ನೋಡಬೇಕೆನ್ನುವ ಬಯಕೆ ಬತ್ತಿ ಹೋಗಿದೆ. ಹೀಗಾಗಿ ಕಾಯಕ್ಕೆ ಅಳಿವುಂಟು; ಅಕಾಯಕ್ಕೆ ಅಳಿವಿಲ್ಲ.

ಕಾಯದಲ್ಲಿ ಕಾಯವನ್ನು ಆವರಿಸಿದ ಮನೋಕಾಯ ಒಂದಿದೆ. ಕಾಯದಲ್ಲಿ ಸಂಗಮವಾದ ಅಕಾಯ ಒಂದಿದೆ. ಕಾಯ ಇರುವಾಗಲೇ ಮನೋಕಾಯದ ಮೂಲಕ ಕಾಯದಲ್ಲಿಯೇ ಸಂಗಮವಾದ ಅಕಾಯಕ್ಕೆ ಎರಗಬೇಕು. ಏಕೆಂದರೆ ಅದು ಆಚಾರಕಾಯ. ಅಗೋಚರದ ಆಚಾರ ಕಾಯ. ಪ್ರಾಣಕ್ಕೆ ಪ್ರಾಣವಾದ ಪ್ರಾಣಲಿಂಗಿ ಕಾಯ. ಅರಿವಿನ ಕಾಯ. ಮಹಾಜ್ಞಾನದ ಕಾಯ. ಸಾಕ್ಷಾತ್ ಶಿವಕಾಯ. ಮನೋಕಾಯ ಅಗೋಚರ ಆಚಾರದ ಅಕಾಯದಲ್ಲಿ ಐಕ್ಯನಾಗಬೇಕು. ಆಗ ಕಾಯ ಪರಿಪೂರ್ಣಕಾಯವಾಗುತ್ತದೆ.

ಹೀಗೆ ಮಾಡಲು ಸಾಧ್ಯವಾದ ಮನೋಕಾಯವೇ ಅಂದರೆ ಮನುಷ್ಯನೇ ಸಮರ್ಥ. ಅವನನ್ನೇ ಶರಣರು ಐಕ್ಯ ಎಂದು ಕರೆದಿದ್ದಾರೆ.

ಹೀಗೆ ಸಾಧ್ಯವಾಗದಿದ್ದರೆ ಅವನು ಅಭ್ಯಾಸಿ. ಕಪಿಲಸಿದ್ಧ ಮಲ್ಲಿಕಾರ್ಜುನ ಇಂಥವರಿಗೊಲಿವ; ಅಂಥವರನೊಲ್ಲ.

**139**

**ಆಚಾರ ಪ್ರಾಣವಾದ ಬಳಿಕ ಅನ್ಯಕ್ಕೆರಗದಿರಬೇಕು.**
**ಅರಿಷಡ್ವರ್ಗಂಗಳು ಒಳಗಾದ ಕರಣಂಗಳ ಕರವಾಗಿ ಅರ್ಚಿಸಬೇಕು.**
**ಆತನೀಗ ಲಿಂಗೈಕ್ಯ .**
**ಆತನೀಗ ಪಾದೋದಕ ಪ್ರಮಾಣನರಿದಾತ.**
**ಭಕ್ತಿಯ ತಾತ್ಪರಿಯವನರಿದಾತ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿ ತಾತ್ಪರ್ಯವಾದಾತ.**

ಆಚಾರಗಳು ಎರಡು. ಒಂದು ಗೋಚರದ ಆಚಾರವಾದರೆ ಮತ್ತೊಂದು ಅಗೋಚರದ ಆಚಾರ. ಗೋಚರದ ಆಚಾರ ಸಕಲರಿಗೂ ಕಾಣುತ್ತದೆ. ಅಗೋಚರದ ಆಚಾರ ತನಗೆ ಮಾತ್ರ ಕಾಣುತ್ತದೆ.

ಸ್ನಾನ ಸಂಧ್ಯಾವಂದನೆಗಳನ್ನು ಮಾಡುವುದು; ಜಪತಪಾದಿಗಳನ್ನು ಮಾಡುವುದು. ಉಪವಾಸ ಮಾಡುವುದು. ರುದ್ರಾಭಿಷೇಕ, ಜಲಾಭಿಷೇಕ, ಕ್ಷೀರಾಭಿಷೇಕಗಳನ್ನು ಮಾಡಿ ದೇವರಿಗೆ ಪ್ರದಕ್ಷಿಣೆ ಹಾಕುವುದು, ದೀಡ ನಮಸ್ಕಾರ ಹಾಕಿ, ಜ್ಯೋತಿ ಹೋರುವುದು. ಇವು ಗೋಚರದ ಆಚಾರಗಳು.

ಹಾದರದಿಂದ ನೋಡಿ ಗೌರವದಿಂದ ಮಾತನಾಡುವುದು, ದ್ವೇಷ ಅಸೂಯೆಗಳಿಂದ ನೋಡಿ, ಆದರದಿಂದ ಬರಮಾಡಿಕೊಳ್ಳುವುದು ನೋಡುವುದಕ್ಕೆ ಇರುವುದಕ್ಕೆ ತೋರುವುದಕ್ಕೆ ತನಗೆ ತಾನೇ ಬೇರೆ ಬೇರೆಯಾಗಿ ಕಂಡುಬಂದರೂ; ತಾನು ಹಾಗಲ್ಲವೆಂದು ಸಮಾಜಕ್ಕೆ ಮುಖವಾಡ ಧರಿಸಿ ತೋರುವುದು. ಇದು ಗೋಚರದ ಆಚಾರಿಯ ಲಕ್ಷಣ.

ಅಗೋಚರದ ಆಚಾರ ಹಾಗಲ್ಲ. ಅದು ಪ್ರಾಣಕ್ಕೆ ಪ್ರಾಣವಾದ ಪ್ರಾಣ. ಅಗೋಚರದ ಆಚಾರವೇ ಪ್ರಾಣಕ್ಕೆ ಪ್ರಾಣದಾನ ಮಾಡಿ ಆ ಪ್ರಾಣದಲ್ಲಿ ಪ್ರಾಣಲಿಂಗವಾಗಿ ಸಂಗಮವಾಗಿದೆ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಆಚಾರ ಪ್ರಾಣವಾದ ಬಳಿಕ ಅನ್ಯಕ್ಕೆರಗದಿರಬೇಕು ಎಂದಿದ್ದಾರೆ.

ಅಗೋಚರದ ಆಚಾರ, ಮನಕ್ಕೆ ವೇದ್ಯವಾದ ಬಳಿಕ. ಆ ಮನ ತನ್ನ ಸಕಲ ಗೋಚರದ ಆಚಾರಗಳನ್ನು ಕಳಚಿಕೊಳ್ಳುತ್ತದೆ. ಅಗೋಚರದ ಆಚಾರದಲ್ಲಿ ಮನ ಸಂಗಮವಾಗಿ ತನ್ನ ಕರಣಂಗಳೆಲ್ಲ ಲಿಂಗ ಕಿರಣಂಗಳಾಗಿ ಮಾರ್ಪಡುತ್ತವೆ. ಅರಿವಿನ ಲಿಂಗದಲ್ಲಿ ಮನ ಐಕ್ಯವಾಗಿ ಲಿಂಗೈಕ್ಯ ಎನ್ನಿಸಿಕೊಳ್ಳುತ್ತದೆ.

ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳು, ಸಪ್ತವ್ಯಸನಗಳು ಅಷ್ಟಮದಗಳು ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನ ಶ್ರೀಚರಣಕ್ಕೆರಗಿ ಧನ್ಯತೆಯನ್ನು ಮೆರೆಯುತ್ತವೆ.

ಅರಿವಿನ ಮಲ್ಲಯ್ಯನಿಗೆ ಭಕ್ತಿ ಮಾಡಿ ಭಕ್ತಿಯ ತಾತ್ಪರ್ಯವನರಿಯುತ್ತದೆ. ಆ ಅರಿವಿನೊಂದಿಗೆ ಕೂಡಿ ಆ ಅರಿವೇ ತಾನಾಗುತ್ತದೆ. ಈ ಆಚಾರದ ಅರಿವಿನ ಸುಖ ಯಾರಿಗೂ ಕಂಡು ಬರುವುದಿಲ್ಲ. ಆ ಅರಿವಿನ ಸುಖದ ಅನುಭವ ತನಗೆ ಮಾತ್ರ ಆಗುತ್ತದೆ.

**140**

**ಆಚಾರ ಪ್ರಾಣವಾದ ಬಳಿಕ**

**ಅನಾಹತವಿದೆಂದರಿಯಬೇಕು.**
**ಅನಾಹತವಿದೆಂದರಿದ ಬಳಿಕ,**
**ಶುದ್ಧ ಸಿದ್ಧ ಪ್ರಸಿದ್ಧವಿದೆಂದರಿಯಬೇಕು.**
**ಶುದ್ಧ ಸಿದ್ಧ ಪ್ರಸಿದ್ಧವಿದೆಂದರಿದ ಬಳಿಕ**
**ಸರ್ವವೂ ತಾನೆಯಾಗಿರಬೇಕು.**
**ಸರ್ವವೂ ತಾನೆಯಾದ ಬಳಿಕ ಅಪ್ಪುದೊಂದರಿದುಂಟೆ ?**
**ಕಪಿಲಸಿದ್ಧ ಮಲ್ಲಿಕಾರ್ಜುನ ಆತನು ಸ್ವಾತಂತ್ರನಲ್ಲದೆ.**

ಯಾವ ವಸ್ತುವಿನಿಂದ ಸಕಲ ಪ್ರಪಂಚವೂ ಸೃಷ್ಟಿಯಾಗಿದೆಯೊ ಅದು ಭೇದಿಸಲು ಬಾರದ ವಸ್ತು. ಆ ವಸ್ತುವೇ ಪ್ರಾಣವಾದ ಬಳಿಕ, ಆ ವಸ್ತುವೇ ಪ್ರಾಣಕ್ಕೆ ಪ್ರಾಣವಾದ ಬಳಿಕ ಅದು ಶುದ್ಧವೂ ಹೌದು. ಅದು ತನಗೆ ತಾನೇ ಸಿದ್ಧ ವಸ್ತುವೂ ಹೌದು. ಅದು ಪ್ರಸಿದ್ಧವೂ ಹೌದು.

ಭೂಮಿಯನ್ನು ಭೇದಿಸಲು ಬರುತ್ತದೆ. ಏಕೆಂದರೆ ಅದು ಭೇದಿಸಲು ಬಾರದ ವಸ್ತುವಿನಿಂದ ಜನ್ಮ ತಳೆದಿದೆ. ವಾಯುವನ್ನು ಭೇದಿಸಲು ಬರುತ್ತದೆ; ಅದು ಭೇದಿಸಲು ಬಾರದ ವಸ್ತುವಿನಿಂದ ಜನ್ಮ ತಳೆದಿದೆ. ಅಗ್ನಿಯನ್ನು ಭೇದಿಸಲು ಬರುತ್ತದೆ; ಅದು ಭೇದಿಸಲು ಬಾರದ ವಸ್ತುವಿನಿಂದ ಜನ್ಮ ತಳೆದಿದೆ. ಜಲವನ್ನು ಭೇದಿಸಲು ಬರುತ್ತದೆ; ಅದು ಕೂಡಾ ಭೇದಿಸಲು ಬಾರದ ವಸ್ತುವಿನಿಂದ ಜನ್ಮ ತಳೆದಿದೆ. ಬಯಲನ್ನು ಮಾತ್ರ ಭೇದಿಸಲು ಬರುವುದಿಲ್ಲ. ಏಕೆಂದರೆ ಅದು ಭೇದಿಸಲು ಬಾರದ ವಸ್ತು. ಅದು ಶುದ್ಧ ಸಿದ್ಧ ಪ್ರಸಿದ್ಧ.

ಜಲಜನಕ ಆಮ್ಲಜನಕವನ್ನು ಸೃಷ್ಟಿಮಾಡಿ; ಅವೆರಡನ್ನೂ ಒಂದು ಮಾಡಿ; ಜಲಕ್ಕೆ ಜನ್ಮ ನೀಡಿದ ಮೂಲ ವಸ್ತುವೇ ಬಯಲು. ಜಲವನ್ನು ಗಟ್ಟಿಯಾಗಿಸಿ, ಖನಿಜ ಕಲ್ಲು ಬಂಡೆಗೆ ಜಲ ಚರ ಉರುಗ ಕೀಟಾದಿಗಳಿಗೆ, ಗಿಡ ಮರ ಬಳ್ಳಿ ಪಶು ಪಕ್ಷಿಗಳಿಗೆ ಜನ್ಮ ನೀಡಿ ಅವೆಲ್ಲವುಗಳನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಆಶ್ರಯ ನೀಡಿದ ಮೂಲ ವಸ್ತುವೇ ಬಯಲು. ಹೀಗಾಗಿ ಅದು ಶುದ್ಧ ಸಿದ್ಧ ಪ್ರಸಿದ್ಧ.

ತಾನು ಸೃಷ್ಟಿ ಮಾಡಿದ ಸಕಲ ಪ್ರಪಂಚವನ್ನು; ಅಂದರೆ ಇಡೀ ಬ್ರಹ್ಮಾಂಡವನ್ನೂ ಪರಮಾನಂದದಿಂದ ನೋಡುವ ಬಯಕೆಯಿಂದಾಗಿ ಮನುಕುಲದ ತನುವಿಗೆ ಜನ್ಮ ನೀಡಿದ ಮೂಲ ವಸ್ತುವೇ ಬಯಲು!

ಬಯಲು ತನುವಿಗೆ ಜನ್ಮ ನೀಡಿ; ತನುವಿನ ತನುವಾಗಿ ತನುವಿನಲ್ಲಿಯೇ ತನ್ಮಯವಾಯಿತು. ಮನದ ಮನವಾಗಿ ಮನದಲ್ಲಿಯೇ ತನ್ಮಯವಾಯಿತು. ಪ್ರಾಣದ ಪ್ರಾಣವಾಗಿ ಪ್ರಾಣದಲ್ಲಿಯೇ ತನ್ಮಯವಾಯಿತು. ಜಿಹ್ವೆಯ ಜಿಹ್ವೆಯಾಗಿ ಜಿಹ್ವೆಯಲ್ಲಿಯೇ ತನ್ಮಯವಾಯಿತು. ನೇತ್ರದ ನೇತ್ರವಾಗಿ ನೇತ್ರದಲ್ಲಿಯೇ ತನ್ಮಯವಾಯಿತು. ಕಿವಿಯ ಕಿವಿಯಾಗಿ ಕಿವಿಯಲ್ಲಿಯೇ ತನ್ಮಯವಾಯಿತು. ಘ್ರಾಣದ ಘ್ರಾಣವಾಗಿ ಘ್ರಾಣದಲ್ಲಿಯೇ ತನ್ಮಯವಾಯಿತು. ತ್ವಕ್ಕಿನ ತ್ವಕ್ಕಾಗಿ ತ್ವಕ್ಕಿನಲ್ಲಿಯೇ ತನ್ಮಯವಾಯಿತು. ಭಾವದಲ್ಲಿ ನಿರ್ಭಾವವಾಗಿ ಭಾವದಲ್ಲಿಯೇ ತನ್ಮಯವಾಯಿತು. ಹೀಗೆ ಭೇದಿಸಲು ಬಾರದ ಶುದ್ಧ ಸಿದ್ಧ ಪ್ರಸಿದ್ಧದ ಪ್ರಸಾದವೇ ತನು!

ಶುದ್ಧ ಸಿದ್ಧ ಪ್ರಸಿದ್ಧ ತನುವಿದೆಂದು ಅರಿತ ಬಳಿಕ ಸರ್ವವೂ ತಾನೇ ಆಗಿರಬೇಕು. ಸರ್ವವೂ ತಾನೇ ಆದ ಬಳಿಕ ಇನ್ನು ಆಗುವುದುಂಟೇನು? ಭೇದಿಸಲು ಬಾರದ ಆ ಮೂಲ ವಸ್ತುವೇ ತಾನು. ಆತ ಸ್ವತಂತ್ರ.

ಬಯಲು ಬಯಲನ್ನೇ ಬಿತ್ತಿದೆ. ಬಯಲು ಬಯಲನ್ನೇ ಬೆಳೆದಿದೆ. ಬಯಲು ಬಯಲಾಗಿದೆ. ನೋಡಲು ಹೋದರೆ ನೋಡುವುದು ನೋಡಿಕೊಳ್ಳುವುದು ಕೂಡಾ ಬಯಲೇ ಆಗಿದೆ. ಬಯಲು ಜೀವನ ಬಯಲು ಭಾವನೆ ಬಯಲು ಬಯಲಾಗಿದೆ. ಬಯಲನ್ನು ಬಯಲೆಂದು ಪೂಜಿಸಿದ ಬಯಲು ಮುನ್ನವೇ ಬಯಲಾಗುತ್ತದೆ.

ಇದು ಬಯಲ ಆಟ. ಆಚಾರವೇ ಪ್ರಾಣಕ್ಕೆ ಪ್ರಾಣವಾದ ಬಯಲಿನ ಆಟ. ಭೇದಿಸಲು ಬಾರದ ಬಯಲ ಆಟ. ಶುದ್ಧ ಸಿದ್ಧ ಪ್ರಸಿದ್ಧದ ಪ್ರಸಾದದ ಆಟ. ಸರ್ವವೂ ತಾನೇ ಎಂದು ಅರಿದ ಪ್ರಭುವಿನ ಬಯಲಾಟ !

**141**

**ಆಚಾರವಿಚಾರ, ಗುರುವಿಚಾರ, ಲಿಂಗವಿಚಾರ,**
**ಸರ್ವವಿಚಾರ ತಿಳುಹಿದವರು ನೀವೆ.**
**ನುಡಿದಂತೆ ನಡೆವಲ್ಲಿ ಭೇದದ ಅನುಭವ ಮಾಡಿ ಹೇಳುವವರು ನೀವೆ,**
**ಈ ನುಡಿಗಡಣವು ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ ಸೊಗಸದು,**
**ಕೇಳಾ ಪ್ರಭುವೆ.**

ತನುವಿಗೆ ಆಚಾರ ಮಾಡಲು ಶಕ್ತಿ ಬಂದದ್ದು ಅರಿವಿನಿಂದಲೇ. ವಿಚಾರ ಮಾಡುವ ಶಕ್ತಿ ಬಂದದ್ದು ಅರಿವಿನಿಂದಲೇ. ಗುರುದೇವನ ವಿಚಾರ ಬಂದದ್ದು ಅರಿವಿನಿಂದಲೇ. ಲಿಂಗವಿಚಾರ ಶಕ್ತಿ ಬಂದದ್ದು ಕೂಡಾ ಅರಿವಿನಿಂದಲೇ. ಅರಿವು ಎಂದರೆ ತನುವಿನ ಅರಿವು ಅಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ತನುವಿನಿಂದ ಬಂದದ್ದು.

ಮನವೆಂಬ ಸೂಕ್ಷ್ಮ ತನುವುಳ್ಳ ನನಗೆ ಅರಿವೆಂಬ ಗುರುದೇವರು ಸರ್ವವಿಚಾರ ತಿಳುಹಿದರು. ತನುವು, ಮನವೆಂಬ ನನಗೆ ಹಾಗೂ ಅರಿವೆಂಬ ಗುರುದೇವನಿಗೆ ಉಪಕರಣವಾಯಿತು.

ಸ್ಥೂಲ ತನು ಒಂದು ವಿಶ್ವ ವಿದ್ಯಾಲಯ. ಸೂಕ್ಷ್ಮತನುವೇ ವಿದ್ಯಾರ್ಥಿ. ಅರಿವೆಂಬ ಗುರುದೇವನೇ ಅಧ್ಯಾಪಕ. ಈತನ ಆಚಾರ ಅಗೋಚರದ ಆಚಾರ. ಅಗೋಚರದ ವಿಚಾರ. ಈ ಗುರುದೇವ ಬೋಧಿಸಿದ ಬೋಧೆಯಂತೆ ನಡೆಯಬೇಕಾದರೆ ಶಿಷ್ಯನಿಗೆ ಬಲಬೇಕು. ಬೋಧೆ ಕೇಳುವ ಛಲಬೇಕು.

ಗುರುದೇವ ಬೋಧಿಸಿದ ಆಚಾರ ಸರ್ವರಿಗೂ ಕಾಣುವುದಿಲ್ಲ. ಏಕೆಂದರೆ ಅದು ಆತನ ಅಗೋಚರದ ಆಚಾರ. ನಾನು ನೋಡುವ ನನ್ನ ನೋಟದಲ್ಲಿಯ ಹಾದರದ ಅಜ್ಞಾನವನ್ನು ಆತ ಖಂಡಿಸುತ್ತಾನೆ. ತನುವನ್ನು ತನುವಿನಂತೆಯೇ ನೋಡಲು ಆತ ನನಗೆ ಬೋಧಿಸುತ್ತಾನೆ.

ತನುವೆಂದರೆ ಹೆಣ್ಣಲ್ಲ ಅದು ಗಂಡೂ ಅಲ್ಲ. ತನುವಿನಲ್ಲಿ ಗುರುದೇವ ತನ್ಮಯವಾಗಿದ್ದಾನೆ. ಹೀಗಾಗಿ ತನು ಗುರುದೇವನಿದ್ದ ಮನೆ. ನೋಡುವ ಕಣ್ಣಿನಲ್ಲಿ ಗುರುದೇವನಿದ್ದಾನೆ. ನೋಡಲ್ಪಡುವ ತನುವಿನಲ್ಲೂ ಗುರುದೇವನಿದ್ದಾನೆ. ಗುರುದೇವನನ್ನು ಗುರುದೇವನಾಗಿ ನೋಡಬೇಕು. ಅರಿವಿನ ತನುವನ್ನು ಅರಿವಿನಿಂದ ನೋಡಬೇಕು. ಇದು ಗುರುದೇವನ ವಿಚಾರ. ಇದು ಗುರುದೇವ ಬೋಧಿಸಿದ ಆಚಾರ. ಇದು ಲಿಂಗವಿಚಾರ. ಹೀಗೆ ಸರ್ವವಿಚಾರ ತಿಳಿಸಿದವನು ಗುರುದೇವನೇ ಆಗಿದ್ದಾನೆ.

ಗುರುದೇವನಿದ್ದ ತನುವಿಗೆ, ಗುರುವೇಷದ ಅವಶ್ಯಕತೆಯಿಲ್ಲ. ವೇಷ ವೇಶಿಗೆ ಸಮವೆಂದು ಗುರುದೇವ ವೇಷಹಾಕಿದ ತನುವನ್ನು ಖಂಡಿಸುತ್ತಾನೆ. ಖಾವಿ ಹಾಕಿ ರುದ್ರಾಕ್ಷಿ

ಧರಿಸಿ ಹಣೆಗೆ ವಿಭೂತಿ ಬಳಿದು ಕೈಯಲ್ಲಿ ಕಮಂಡಲವಿಡಿದು ತಲೆಗೆ ಕಿರೀಟ ಧರಿಸಿದ ವೇಷಧಾರಿ ಮನವನ್ನು ಅರಿವೆಂಬ ಗುರುದೇವ ಹತ್ತಿರ ಬರಗೊಡುವುದಿಲ್ಲ. ಅವನೇನಿದ್ದರೂ ವೇಷಧಾರಿಯೇ ಹೊರತು; ಅರಿವೆಂಬ ಗುರುದೇವನನ್ನು ಅರಿತು ಆ ಗುರುದೇವ ಹೇಳಿದಂತೆ ನಡೆಯಲು ಬಾರದವ. ಆ ಗುರುದೇವನೇ ತಾನು ಆಗದವ. ಗೋಚರದ ಆಚಾರದವ. ಗೋಚರಕ್ಕೆ ಬರುವ ವಿಚಾರದವ. ಕಣ್ಣಿಗೆ ಕಾಣುವ ಲಿಂಗವಿಚಾರದವ.

ಹೀಗೆ ಗೋಚರಕ್ಕೆ ಬರುವ ಆಚಾರವನ್ನು ಖಂಡಿಸುವ ಅಗೋಚರ ಗುರುವಿನ ವಿಚಾರ ವೇಷ ಹಾಕಿದ ಗುರುವಿಗೆ ಗೊತ್ತಾದರೆ ಸಾಕು ಗುರು ಹಾಕಿದ ಸಕಲ ವೇಷಗಳೆಲ್ಲ ಕಳಚಿ ಬೀಳುತ್ತವೆ.

ಸಕಲ ತನುಗಳಲ್ಲಿಯೂ ಅರಿವೆಂಬ ಗುರುದೇವ ಸಂಗಮವಾಗಿದ್ದಾನೆ. ಆತ ಅಗೋಚರ. ಆತನ ಬೋಧೆ ಆಲಿಸುವ ಶಿಷ್ಯ ಕೂಡಾ ಅಗೋಚರ. ತನು ಮಾತ್ರ ಗೋಚರ. ಅರಿವೆಂಬ ಅಗೋಚರ ಗುರುದೇವ, ಮನವೆಂಬ ಅಗೋಚರ ಶಿಷ್ಯ ವಾಸ ಮಾಡಿದ ಮನೆಯೇ ತನು.

ಮನವೆಂಬ ಶಿಷ್ಯನಿಗೆ ಅರಿವೆಂಬ ಗುರುದೇವ ಸಚ್ಚ್ಯಾರಿತ್ರ್ಯದಿಂದ ನೋಡುವುದನ್ನು ಕಲಿಸುತ್ತಾನೆ. ನೋಡಿದಂತೆ ನುಡಿಯುವುದನ್ನು ಹೇಳಿ ಕೊಡುತ್ತಾನೆ. ಕೇಳುವುದನ್ನು, ಮೂಸಿಸುವುದನ್ನು, ಮುಟ್ಟುವುದನ್ನು, ರುಚಿಸುವುದನ್ನು ತಿಳುಹಿಸುತ್ತಾನೆ. ಶಿಷ್ಯನಿಗೆ ಅನುಭವ ಆಗುವಂತೆ ಗುರುದೇವ ಹೇಳಿಕೊಡುತ್ತಾನೆ.

ಅರಿವೆಂಬ ಗುರುದೇವ ಹೇಳಿದಂತೆ ಮನವೆಂಬ ಶಿಷ್ಯ ತನುವಿನ ಮೂಲಕ ನಡೆದುಕೊಂಡ ತನುವೇ ಸತ್ಯ ತನು. ಸಾಕ್ಷಾತ್ಕಾರ ಮಾಡಿಕೊಂಡ ತನು. ಆ ತನು ಪ್ರಪಂಚದ ವಿಶ್ವವಿದ್ಯಾಲಯವಾಗಿ ಬೆಳಗುತ್ತದೆ. ಈ ಶಕ್ತಿ ಸಕಲ ತನುಗಳಲ್ಲಿಯೂ ಇದೆ. ಮನಕ್ಕೆ ತನ್ನ ನಿಜ ಗುರುದೇವನನ್ನು ಕಾಣುವ ಬಯಕೆಯಾಗಬೇಕು. ಆಗ ತನುವಿನ ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡು ಎಂಬ ಅಜ್ಞಾನ ತನುವಿನ ಜ್ಞಾನದ ಬೆಂಕಿಗೆ ಬಿದ್ದು ಸುಟ್ಟು ಹೋಗುತ್ತದೆ.

**142**

**ಆತನೆನ್ನ ನೆನೆವನಾಗಿ ನೆನೆವೆ ;**
**ಆತನೆನಗೆ ಕೂಪನಾಗಿ ಕೂಪೆ.**
**ಹತ್ತಿದಡೆ ಹರಿಯ ಕಾಣೆ, ಬಿಚ್ಚಿದಡೆ ಬೇರೆ ಕಾಣೆ.**
**ಇಂತೊಬ್ಬರೊಬ್ಬರನು ನೆರೆದು ತಾನು ತಾನಾಗಿದ್ದ,**
**ಕಪಿಲಸಿದ್ಧ ಮಲ್ಲಿನಾಥ ದೇವರ ದೇವ.**

ಅಂಗವೆನ್ನುವುದು ಗಂಡಲ್ಲ. ಹೆಣ್ಣೂ ಅಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಅಂಗವೊಂದಿದೆ; ಆ ಅಂಗವೇ ಲಿಂಗಯ್ಯ. ಅರಿವಿನ ಕಪಿಲಸಿದ್ಧ ಮಲ್ಲಿನಾಥಯ್ಯ. ಆತ ದೇವ; ದೇವರ ದೇವ.

ಅಂಗವನ್ನು ಆವರಿಸಿದ ಮನವೊಂದಿದೆ. ಆ ಮನವೇ ಹೆಣ್ಣು. ದೇವನ ಸಖಿ. ಅರಿವಿನ ದೇವರು ಸಖನಾದರೆ ಮನವೆಂಬ ಹೆಣ್ಣು ಸಖಿ.

ಆತನು ಎನ್ನ ನೆನೆವನಾಗಿ ನಾನು ಆತನನ್ನು ನೆನೆವೆ; ಆತನು ಎನಗೆ ಸಖನಾದರೆ ನಾನು ಆತನಿಗೆ ಸಖಿ. ನಾವಿಬ್ಬರೂ ಒಂದೇ. ಎರಡೆನ್ನಲು ಹೋದರೆ ಬಿಚ್ಚಿ ನೋಡಲು ಬರುವುದಿಲ್ಲ. ಬಿಚ್ಚಲು ಹೋದರೆ ಬೇರೆನ್ನಲು ಬರುವುದಿಲ್ಲ. ಎರಡೆಂದರೆ ಒಂದಾಗಿ ಕಾಣುತ್ತದೆ. ಒಂದೆಂದರೆ

ಎರಡಾಗಿ ಕಾಣುತ್ತದೆ. ಹೀಗೆ ಒಬ್ಬರು ಒಬ್ಬರನು ಬೆರೆದು ಒಂದಾಗಿದ್ದಾರೆ.

ಕಾಯವನ್ನೇ ಕೈಲಾಸವಾಗಿಸಿಕೊಂಡು ಅರ್ಧನಾರೀಶ್ವರರಾಗಿ ಅಂಗದಲ್ಲಿಯೇ ಅರಿವಿನ ಸಂಸಾರ ಹೂಡಿದ್ದಾರೆ.

**143**

**ಆತ ಬಂದಾನಂದ ಅಕ್ಷರ ದೀಕ್ಷೆಯನು**
**ಗೋಪ್ಯತರದಿಂದದನು ಸಂಭವಿಸಲು,**
**ಖ್ಯಾತ ಮೂವತ್ತಾರು ಬೆರಸಿ ಬೆರೆಯದ ತತ್ವ,**
**ಆ ಗುರುವ ಪಾಲಿಸಿದ ಶಿಷ್ಯ ಜ್ಯೋತಿರ್ಮಯನೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಂಡುಕೊಂಡ ಗುರುದೇವನು ಬಂದು, ಆನಂದದಿಂದ ಹತ್ತಿರಕ್ಕೆ ಕರೆದು 'ಓಂನಮಃ ಶಿವಾಯ' ಎಂಬ ಅಕ್ಷರ ದೀಕ್ಷೆಯನು ಗೋಪ್ಯದಿಂದ ಭೋದಿಸುತ್ತಾನೆ.

ಗುರುದೇವನ ಭೋದೆಯನ್ನು ಆಲಿಸಿದ ಶಿಷ್ಯ 'ಓಂನಮಃ ಶಿವಾಯ' ಎಂದು ಅಕ್ಷರ ಉಸುರದೆ 'ಓಂನಮಃಶಿವಾಯ'ವೇ ತಾನಾಗಿ ಅಕ್ಷರೋತ್ತಮನ್ನೆನ್ನಿಸಿಕೊಂಡಲ್ಲಿ ಗುರುದೇವನ ಆಜ್ಞೆ ಪಾಲಿಸಿದ ಶಿಷ್ಯನಾಗುತ್ತಾನೆ. ಜ್ಯೋತಿರ್ಮಯನಾಗುತ್ತಾನೆ. ಖ್ಯಾತ ಮೂವತ್ತಾರು ಬೆರಸಿ ಬೆರೆಯದ ತತ್ವವೇ ತಾನಾಗುತ್ತಾನೆ.

ಕಾಯ, ಇಪ್ಪತ್ತೈದು ಆತ್ಮ ತತ್ವಗಳನ್ನು ಒಳಗೊಂಡಿದೆ. ಹತ್ತು ವಿದ್ಯಾ ತತ್ವಗಳನ್ನು ಒಳಗೊಂಡಿದೆ. ಶಿವತತ್ವದಿಂದ ಒಡಗೂಡಿ 'ಓಂ ನಮಃ ಶಿವಾಯ' ಎಂಬ ಷಡಕ್ಷರಿಯೇ ತಾನಾಗಿದೆ.

ಶಿವ ಜಗನ್ಮಯನು. ಮೂವತ್ತಾರು ತತ್ವಗಳಿಗೂ ಅತ್ತತ್ತ ನಿಂದವನು. ನಾದ ಬಿಂದು ಕಲೆಗಳಿಗೆ ಅತೀತನು.

ಜಲದಲ್ಲಿ ಸೂರ್ಯನ ಬಿಂಬ ಕಂಡು ಸೂರ್ಯವಿಕೃತನೆಂದು ಹೇಳಲು ಹೇಗೆ ಬರುವುದಿಲ್ಲವೋ ಹಾಗೆಯೇ ಶಿವನಿಗೆ ಜಗದ ಸ್ಥಿತಿಗತಿ ಇಲ್ಲ.

ಶಿವ ಸಂಗಮವಾದ ಅಂಗ; ವಿಕಾರ ಹೊಂದಿದರೂ ಶಿವನಿಗೆ ಸಂಬಂಧವಿಲ್ಲದೆ ಆತ ಸದಾ ಶಿವಮಯವಾಗಿಯೇ ಇರುತ್ತಾನೆ. ಶರೀರದಲ್ಲಿ ಭಕ್ತ ಪ್ರಾಣರೂಪವಾಗಿದ್ದರೆ ಶಿವ ಪ್ರಾಣಕ್ಕೆ ಆಧಾರವಾದ ಪ್ರಾಣಲಿಂಗಿಯಾಗಿರುತ್ತಾನೆ.

ಭಕ್ತನಿಗೆ ಶಿವನ ಬಯಕೆಯಾದರೆ ತತ್ತ್ವಗಳ ಮೂಲಕ ತಲುಪಿ ಕಾಯದಲ್ಲಿ ಜ್ಞಾನಕಾಯನಾಗಿ ಕಲಾಸ್ವರೂಪನಾಗಿ ಶಿವನನ್ನು ತಲುಪುವನು.

ಹೀಗೆ ಭಕ್ತ ದೇಹಿಕ ಶಿವನೆಂದು ಕರೆಯಿಸಿಕೊಂಡು ಆ ಕಾಯದಲ್ಲಿಯೇ ನೆಲೆಸಿರುವನು ಎಂದು ಆದಯ್ಯ ಶರಣರು ವೈಜ್ಞಾನಿಕವಾಗಿ ಹೇಳಿದ್ದಾರೆ. ಸಿದ್ಧರಾಮ ಶಿವಯೋಗಿಗಳು ಅನುಮೋದಿಸಿದ್ದಾರೆ.

**144**

**ಆತ್ಮ ತೇಜದಿಂದ ಹಣೆಗಣ್ಣ ತೆಗೆದಲ್ಲಿ,**

**ಆತ್ಮಘಟವಳಿದವಂಗೆ,**
**ಕಾಲಕಣ್ಣ ತೆಗೆದು ಹಣೆಗಣ್ಣ ಮುಚ್ಚಿದೆನೆಂಬ**
**ಅಹಂಕಾರವಡಗಿಯಲ್ಲದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗಕ್ಕೊಳಗಲ್ಲ.**

ಹಣೆಗಣ್ಣು ಎಂದರೆ ಜ್ಞಾನದ ಕಣ್ಣು. ಅಜ್ಞಾನವೆಂಬ ಅಹಂಕಾರವನ್ನು ಸುಡುವ ಕಣ್ಣು. ಕಣ್ಣಿನ ಅಜ್ಞಾನ ಸುಟ್ಟ ನಂತರವೇ ಕಣ್ಣಿಗೆ ಹಣೆಗಣ್ಣು ಪರಿಚಯವಾಗುತ್ತದೆ.

ಆತ್ಮ ಸಾಕ್ಷಾತ್ಕಾರ ಮಾಡಿಕೊಂಡಾತನಿಗೆ ಕಾಯವಿಲ್ಲ. ಅಹಂಕಾರದ ಕಾಯ; ಕಾಯ ಇರುವಾಗಲೇ ಜ್ಞಾನ ಕಾಯದ ಮೂಲಕ ಅಜ್ಞಾನ ಕಾಯ ಅಗ್ನಿಗೆ ಆಹುತಿಯಾಗುತ್ತದೆ. ಹೀಗೆ ಅಜ್ಞಾನದ ಕಾಯ ಕಳೆದುಕೊಂಡಾತನ ಕಾಲಕಣ್ಣು ತೆಗೆದು ಹಣೆಗಣ್ಣ ಮುಚ್ಚಿದೆನೆಂದು ಹೇಳುವ ಕಾಯದ ಅಹಂಕಾರ ಅಡಗದಿದ್ದರೆ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ ಒಳಗಲ್ಲ.

ಸಿದ್ಧರಾಮ ಶಿವಯೋಗಿಗಳು ಈ ಮಾತನ್ನು ಪ್ರಭುದೇವರನ್ನು ಕುರಿತು ಹೇಳಿದಂತಿದೆ. ಜನ ನೀರಿನ ದಾಹ ತಣಿಸಿಕೊಳ್ಳಲು ಸಿದ್ಧರಾಮ ಶಿವಯೋಗಿಗಳು ಕೆರೆ ಕುಂಟೆಗಳನ್ನು ನಿರ್ಮಿಸಿ; ಅರವಟ್ಟಿಗೆಗಳನ್ನಿಟ್ಟು ಪರೋಪಕಾರದ ಕೆಲಸಗಳನ್ನು ಮಾಡುತ್ತಿರುವಾಗ ಪ್ರಭುದೇವರು ಈ ಕಾಯಕವನ್ನು ಖಂಡಿಸುತ್ತಾರೆ. ಮಳೆಯೇ ಬಾರದಿದ್ದರೆ ಅರವಟ್ಟಿಗೆಗಳು ಕಟ್ಟಿದ ಕೆರೆಕಟ್ಟೆಗಳು ವ್ಯರ್ಥವಲ್ಲವೆ ? ಮಾಡಿದೆನೆಂಬ ಅಹಂಕಾರ ನಿನ್ನನ್ನು ಕಾಡುತ್ತಿದೆ. 'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ' ಎನ್ನುವ ಮಾತನ್ನು ನೆನಪಿಸಿ; ಉರಿಗಣ್ಣನ್ನು ಮುಚ್ಚಲು ಸಿದ್ಧರಾಮ ಶಿವಯೋಗಿಗಳ ಕಾಲ ಕಣ್ಣನ್ನು ಒತ್ತುತ್ತಾರೆ.

ಅಹಂಕಾರ ನೆತ್ತಿಗೇರಿ ಕಣ್ಣು ಬೆಂಕಿಯ ಉಂಡೆಗಳಾದಾಗ; ಖಡ್ಗ ಕೈಗೆ ಬರುತ್ತದೆ. ಇದು ಅಹಂಕಾರದ ಗುಣಧರ್ಮ. ಆ ಸಿಟ್ಟಿಗೆ ಕಾರಣವಾದ ಮನುಷ್ಯ ಪಾದಕ್ಕೆರಗಿದರೆ ಸಾಕು ಕೈಯಲ್ಲಿದ್ದ ಖಡ್ಗ ಕೆಳಗೆ ಜಾರುತ್ತದೆ. ನೆತ್ತಿಯಲ್ಲಿದ್ದ ಸಿಟ್ಟು ಅಹಂಕಾರ ಕ್ಷಣಾರ್ಧದಲ್ಲಿ ತಣ್ಣಗಾಗುತ್ತದೆ.

ಈ ಸೂತ್ರವನ್ನು ಅಲ್ಲಮಪ್ರಭುಗಳು ಸಿದ್ಧರಾಮ ಶಿವಯೋಗಿಗಳಿಗೆ ಬಳಸಿದಂತೆ ಕಂಡು ಬರುತ್ತದೆ. ಇದರ ಪ್ರಸ್ತಾಪ ಪುರಾಣಗಳ ಕತೆಯಲ್ಲಿ ತೇಲಿಬಂದಿದೆ.

ಸಿದ್ಧರಾಮ ಶಿವಯೋಗಿಗಳನ್ನು ಅಲ್ಲಮಪ್ರಭುದೇವರು ಭೇಟಿಯಾಗುವ ಮುಂಚೆಯೇ ಅವರು ಜ್ಞಾನಿಗಳಾಗಿದ್ದರು ಎಂಬುದು ಅವರ ಈ ವಚನದಿಂದ ಸ್ಪಷ್ಟವಾಗುತ್ತದೆ.

ಆತ್ಮಘಟವಳಿದವಂಗೆ, ಕಾಲಕಣ್ಣ ತೆಗೆದು ಹಣೆಗಣ್ಣ ಮುಚ್ಚಿದೆನೆಂಬ ಅಹಂಕಾರವಡಗಿಯಲ್ಲದೆ, ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೊಳಗಲ್ಲ, ಎಂದು ಪ್ರಸ್ತಾಪಿಸಿದ್ದಾರೆ.

ಆತ್ಮ ತೇಜದಿಂದ ತೆರೆದ ಕಣ್ಣು ಅಜ್ಞಾನವನ್ನು ಮಾತ್ರ ಸುಡುತ್ತದೆ. ಅಜ್ಞಾನ ಹೊತ್ತ ಕಾಯವನ್ನು ಸುಡುವುದಿಲ್ಲ. ಶಿವ ಹಣೆಗಣ್ಣು ತೆರೆದು ಕಾಮನನ್ನು ಸುಟ್ಟನೇ ಹೊರತು ಮನ್ಮಥನನ್ನು ಸುಡಲಿಲ್ಲ. ಅಜ್ಞಾನವನ್ನು ಸುಡುವ ಶಕ್ತಿ ಹಣೆಗಣ್ಣಿಗಿದೆಯೆ ಹೊರತು ಅಹಂಕಾರದ ಕಣ್ಣಿಗಿಲ್ಲ.

ಅಹಂಕಾರದ ಘಟವನ್ನೇ ಅಳಿದುಕೊಂಡವನಿಗೆ; ಕಾಲಕಣ್ಣ ತೆಗೆದು ಹಣೆಗಣ್ಣ ಮುಚ್ಚಿದೆ ಎನ್ನುವುದು ಸರಿಯಾದ ಮಾತಲ್ಲ. ಇದು ಜ್ಞಾನಿಯಿಂದ ಹೊರಬಂದ ಮಾತಲ್ಲ. ಅಂತಹ ಕಾಯಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನ ಒಲಿಯುವವನಲ್ಲ.

ಕಣ್ಣಿನ ಅಜ್ಞಾನವನ್ನು ಕೊಂದು ಹಾಕಲು ಕಾಲ ಕಣ್ಣನ್ನು ಒತ್ತಬಹುದು. 'ಕೂಡಲಸಂಗಮದೇವಾ ನಿಮ್ಮ ಚರಣಕಮಲದಲ್ಲಿ ಆನು ತುಂಬಿ' ಎನ್ನುವ ಸೂತ್ರವನ್ನು

ಬಸವಣ್ಣನವರು ಬಳಸಿದ್ದಾರೆ.

ಕ್ರೋಧದಿಂದ ಕಣ್ಣು ಕೆಂಡದ ಉಂಡೆಗಳಾಗಿ ಅಗ್ನಿಯನ್ನು ಚೆಲ್ಲಿದರೆ ; ಕಾಲಲ್ಲಿರುವ ಕಣ್ಣು ಕರುಣಾರಸವನ್ನೇ ಚಿಮ್ಮುತ್ತಿರುತ್ತದೆ. ಸಿಟ್ಟಿಗೆ ಗುರಿಯಾದ ವ್ಯಕ್ತಿಯ ನೆತ್ತಿ ಚರಣಕಮಲಗಳಿಗೆರಗಿದರೆ ಸಾಕು ಕಾಲಲ್ಲಿರುವ ಕರುಣಾರಸ ನೆತ್ತಿಗೆ ಚಿಮ್ಮಿ ಅಹಂಕಾರಿಯನ್ನು ಶಾಂತಗೊಳಿಸುತ್ತದೆ. ಇದು ದೇಹದಲ್ಲಿರುವ ಸಂಪತ್ತು. ದೇಹದ ಸಂಪತ್ತು ಸಕಲ ದೇಹಗಳಿಗೂ ದಕ್ಕುವಂತಾಗಬೇಕು. ದೇಹದ ವಿವೇಕ ಜಾಗೃತವಾಗಬೇಕು. ಸ್ವಯಂ ಜ್ಞಾನದ ಕ್ರಾಂತಿ ದೇಹದಲ್ಲಿಯೇ ಮೊಳಗಬೇಕು.

**145**

**ಆದ್ಯಕ್ಷರದ ಭೇದವ,**
**ನಾದದಾಮೋದದ ಆನಂದವ,**
**ನಾನು ನೀನೆಂಬ ಸಂದು ಸವೆದ ಭೇದವ,**
**ಅದನೇನೆಂಬೆನಯ್ಯಾ? ಅದು ವಾಙ್ಮನಸಾಗೋಚರವ.**
**ಅದು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನೀ ಬಂದು ತೋರಿ**
**ನೀ ಸಾಕ್ಷಿಯಾಗಿ ನೀನೆಯೆಂಬೆ.**

ತನುವಿನಲ್ಲಿಯೇ ಇದ್ದು, ತನುವಿನಲ್ಲಿಯೇ ಸಂಗಮವಾಗಿ, ತನುವನ್ನು ಸೋಂಕದೆ, ತನುವನ್ನು ಬೆಳಗುವ ಮಹಾಬೆಳಗು ನೀನು. ತನುವಿನಿಂದಲೇ ಅಕ್ಷರವನ್ನು ಸೃಷ್ಟಿಸಿದ ಅಕ್ಷರಬ್ರಹ್ಮ ನೀನು. ಅಕ್ಷರೋತ್ತಮ ನೀನು. ಅಕ್ಷರದಲ್ಲಿ ಅರಿವಿದ್ದರೂ ಆ ಅರಿವನ್ನು ತಿಳಿಯದಂತೆ ಮರೆವು ಸೃಷ್ಟಿಸಿದವನೂ ನೀನೆ.

ತನುವಿನಲ್ಲಿ ನಾದ ತುಂಬಿ ಆ ನಾದದ ಮೋದದಿಂದ ತಲೆದೂಗುವ ಆನಂದವನ್ನು ಸೃಷ್ಟಿಸಿದವನು ನೀನು. ನಿನ್ನ ಲೀಲೆ ಅನಂತ.

ನಾನೇ ಎಲ್ಲ ಎನ್ನುವ ಅಹಂಕಾರಿಗೆ ಅಹಂಕಾರವನ್ನು ಸೃಷ್ಟಿಸಿದವನು ನೀನೆ. ನೀನಿದ್ದ ಶರೀರ ನಿನ್ನನ್ನು ಸುಡದೆ ತನ್ನನ್ನೇ ಸುಡುವಂತೆ ಮಾಡಿದ ನಿಪುಣನು ನೀನು.

ನಾನು ನೀನೆಂಬ ಭೇದವನ್ನು ಸೃಷ್ಟಿಸಿ ಅದರಲ್ಲಿ ನೀನು ಕಳೆದು ಹೋದ ಜಾಣ ನೀನು. ನಾನು ನೀನೆಂಬ ಭೇದವನ್ನು ಅಳಿದು ಅವೆರಡನ್ನೂ ಕೂಡಿಸಿ ಏಕವಾದ ಅಪ್ರತಿಮ ಲಿಂಗ ನೀನು.

ನೀನಿಕ್ಕಿದ ತೊಡಕನ್ನು ನೀನಿಕ್ಕಿದ ಭೇದವನ್ನು ಭೇದಿಸಲುಂಟೆ? ಅದು ವಾಙ್ಮನಸಾಗೋಚರ! ಅದು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ. ನೀ ಬಂದು ನೀನೇ ತೋರಿ ನೀನೆ ಸಾಕ್ಷಿಯಾಗಿ ನಿಂದಲ್ಲಿ ನೀನೆಯೆಂಬೆ.

**146**

**ಆದ್ಯಕ್ಷರದ ಭೇದವನರಿದೆನೆಂಬ ಯೋಗಿ ನೀ ಕೇಳಾ:**
**ಆದಿಗೆ ಅನಾದಿ ಅಂತ್ಯವಾಗಿಪ್ಪುದು,**
**ನಿತ್ಯವು ತಾ ನಿನಗರಿಯ ಬಪ್ಪುದೆ ?**

**ಆದಿಯ ನಾದದ ಆಮೋದವನು**
**ಭೇದಿಸಿ ಹಿಡಿದಾತ ಸಾಧಕ ಸಿದ್ಧನೆ ?**
**ಅಲ್ಲ . ಆತ ಸುಸಿದ್ದ !**
**ಕಪಿಲಸಿದ್ದ ಮಲ್ಲಿಕಾರ್ಜುನನಲ್ಲಿ,**
**ಅನಾಹತ ಬ್ರಹ್ಮದಲ್ಲಿ ಆಂದೋಳನು.**

ಬ್ರಹ್ಮನನ್ನು ಅರಿಯಲು, ಬ್ರಹ್ಮನಿಂದಲೇ ಸೃಷ್ಟಿಯಾದ ಮನ; ವೈಮರೆತು; ಭ್ರಮೆಯ ಸುಖ ಭ್ರಮೆಯ ದುಃಖದ ರುಚಿಯನ್ನು ಸವಿಯುತ್ತ ತನುವಿನೊಂದಿಗೆ ಕಾಲ ಕಳೆಯುತ್ತಲಿದೆ. ಲೋಕದ ರುಚಿ ಸಾಕಾದಾಗ ಲೋಕವನ್ನು ಸೃಷ್ಟಿಮಾಡಿದ ಆದ್ಯಕ್ಷರದ ಅಕ್ಷರೋತ್ತಮನನ್ನು ಅರಿಯಲು ಬಯಸುತ್ತದೆ. ಆತನನ್ನು ಅರಿಯಲು ಹೋದ ಮನ ಘನಮನವಾಗಿ ಅಲ್ಲಿಯೇ ಉಳಿಯುತ್ತದೆ.

ಅಕ್ಷರ ಆದಿಯಾದರೆ; ಅಕ್ಷರೋತ್ತಮ ಅನಾದಿ. ಅಕ್ಷರ ಕಲಿತರೆ ಪಂಡಿತನಾಗುತ್ತಾನೆ. ಶಾಸ್ತ್ರಿಯಾಗುತ್ತಾನೆ. ಅಕ್ಷರ ಸೃಷ್ಟಿ ಮಾಡಿದ ಅಕ್ಷರೋತ್ತಮನನ್ನು ಅರಿತರೆ ಆತನ ನಾದದ ಆಮೋದವನ್ನು ಅಂದರೆ ಅರಿವಿನ ಸಿಹಿಯನ್ನು ಭೇದಿಸಿ ಹಿಡಿದ ಸಾಧಕನಾಗುತ್ತಾನೆ. ಸಿದ್ಧನಾಗುತ್ತಾನೆ. ಸುಸಿದ್ಧನಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ. ಆದಿ ಅನಾದಿಯಿಂದತ್ತತ್ತಲಿರುವ ಅನಾಹತ ಬ್ರಹ್ಮನಲ್ಲಿ ಲೀನವಾಗುತ್ತಾನೆ.

**147**

**ಆದ್ಯಕ್ಷರದ್ವಯವು ಅಜಲೋಕದ**
**ಹೆಸರಿಡಲಿಕಳವಲ್ಲ. ಹೆಸರುಗೆಟ್ಟಾ ಸೀಮೆ ಪಸರಿಸುತಿಕ್ಕು.**
**ಮತ್ತಾನಂದದ ಹೆಸರಿಡುವ ಸೀಮೆಯನು ಗುರುವಾಗಿ ಪಸರಿಸಲು,**
**ವಸುಧೆ ಕಂಡಿತು ಒಂದು ಲಿಂಗರೂಪ.**
**ಆನಂದರೂಪ ಕಪಿಲಸಿದ್ಧ ಮಲ್ಲಿಕಾರ್ಜುನಾ**
**ಸೀಮೆಯೊಳಗಡಗಿಪ್ಪನಂತ ಬ್ರಹ್ಮಾಂಡವು.**

ಅಕ್ಷರಕ್ಕೆ; ಅಕ್ಷರವನ್ನು ಸೃಷ್ಟಿ ಮಾಡಿದ ಅಕ್ಷರೋತ್ತಮನಿಗೆ ಬ್ರಹ್ಮನೆಂದು ಬ್ರಹ್ಮಲೋಕದ ಒಡೆಯನೆಂದು ಹೆಸರಿಟ್ಟು ಕರೆಯುವುದಕ್ಕೂ ಸಾಧ್ಯವಾಗುವುದಿಲ್ಲ. ಏಕೆಂದರೆ ಆತ ಸಕಲ ಹೆಸರುಗಳನ್ನು ಕೆಡಿಸಿಕೊಂಡಾತ. ಹೆಸರಿಲ್ಲದಾತ.

ಮಹದಾನಂದದಲ್ಲಿ ವಿರಮಿಸುವ ಆತನನ್ನು ಅವ್ಯಕ್ತ ಗುರುವೆಂದು ಹೆಸರಿಟ್ಟು ಕರೆಯಲು ವಸುಧೆ ಕಂಡಿತು ಒಂದು ಲಿಂಗರೂಪ.

ಪರಮಾನಂದ ರೂಪಿ ಕಪಿಲಸಿದ್ಧ ಮಲ್ಲಿಕಾರ್ಜುನದೇವನು 'ಕರಿಯು ಕನ್ನಡಿಯೊಳಗೆ ಅಡಗಿದಂತೆ' ಇಡೀ ಬ್ರಹ್ಮಾಂಡವೆಲ್ಲ ಅಂಗದಲ್ಲಿ ಲಿಂಗವಾಗಿ ಸಂಗಮವಾಗಿದೆ. ಸರ್ವಾಂಗ ಲಿಂಗಾಂಗವಾಗಿ ನಿಂತಿದೆ.

ಪರಮಾನಂದದ ಪ್ರೇಮರಸಭರಿತವಾದ ಅಂಗ, ಅಂಗವನ್ನು ಆವರಿಸಿದ ಮನ ಅರಿವಿನ ಅಂಗವನ್ನು ಮರೆತುದಕ್ಕಾಗಿ ಅಂಗ ಮತ್ತೆ ಮತ್ತೆ ಜನನಕ್ಕೆ ಮರಣಕ್ಕೆ ತುತ್ತಾಗುತ್ತಲಿದೆ.

**148**

**ಆದ್ಯರ ವಚನಕ್ಕೆ,**
**ಅಷ್ಟಾವರಣದ ಸಂಗನಬಸವಯ್ಯನ ವಚನವ ಕೇಳಿ**
**ಪದ್ಮಿನಿಯಲ್ಲಿ ಬೆರೆದ ಕಾಮಿಯಂತೆ,**
**ಎರೆದು ನಿದ್ರಿಪ ಬಾಲನಂತೆ,**
**ಕಾಯವ ದಣಿಸಿದ ಕೃಷೀವಲನ ನಿದ್ರೆಯಂತೆ**
**ಪರವಶನಾದೆ ಕಾಣಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವಚನವೆಂದರೆ ಪರಮಾನಂದ. ಅದು ತನುವಿನ ಮೂಲದಿಂದ ಅರಳಿದ ಬ್ರಹ್ಮ ಕಮಲ. ಅದರಲ್ಲಿಯೂ ಆದ್ಯರ ವಚನ! ಆದ್ಯರ ವಚನವನ್ನು ಬಸವಣ್ಣನವರು ಹೆಜ್ಜೇನಿನಂತೆ ಸವಿದು ಆನಂದ ಪಟ್ಟಿದ್ದಾರೆ. ಅಂತಹ ಬಸವಣ್ಣನವರ ಅಷ್ಟಾವರಣದ ವಚನವನ್ನು ಕೇಳಿ ಸಿದ್ಧರಾಮ ಶಿವಯೋಗಿಗಳು ಪರವಶವಾಗಿದ್ದಾರೆ.

ಕೊಳದಲ್ಲಿ ಅರಳಿದ ಕಮಲ, ಬಹುದೂರದಲ್ಲಿದ್ದ ದುಂಬಿಗೆ ತನ್ನ ಮಕರಂದವನ್ನು ಗಾಳಿಯ ಮೂಲಕ ಕಳಿಸಿ ತನ್ನತ್ತ ಬರಮಾಡಿಕೊಳ್ಳುತ್ತದೆ. ದುಂಬಿಗಾಗಿಯೇ ಅರಳಿನಿಂತ ಕಮಲ, ತನ್ನ ಅಮೃತಸಮಾನವಾದ ಮಕರಂದವನ್ನು ಉಣಬಡಿಸುತ್ತದೆ. ಉಣಿಸುವಲ್ಲಿ ಕಮಲ ಮಗ್ನ ಉಣ್ಣುವಲ್ಲಿ ದುಂಬಿ ಮಗ್ನ. ಹೀಗೆಯೇ ಸೂರ್ಯಾಸ್ತವಾಗುತ್ತದೆ. ಕಮಲ ತನಗರಿಯದಂತೆ ತನ್ನ ಪಕಳೆಗಳನ್ನು ಮುಚ್ಚಿಕೊಳ್ಳುತ್ತದೆ. ದುಂಬಿ ಕಮಲದಲ್ಲಿಯೇ ಉಳಿದು ಚಿರನಿದ್ರೆಗೆ ಶರಣು ಹೋಗುತ್ತದೆ; ಪದ್ಮಿನಿಯಲ್ಲಿ ಬೆರೆದ ಕಾಮಿಯಂತೆ !

ಸಂಗನಬಸವಯ್ಯನ ವಚನವ ಕೇಳಿ ಸಿದ್ಧರಾಮ ಶಿವಯೋಗಿಗಳು ಎರೆದು ನಿದ್ರಿಸುವ ಬಾಲಕನಂತೆ ಮಹದಾನಂದದಲ್ಲಿ ಲೀನವಾದರು. ಕಾಯ ದಣಿಸಿದ ಕೃಷಿಕನಂತೆ ನಿದ್ರಿಸಿ ವಚನದ ಪರಮಾನಂದಕ್ಕೆ ಪರವಶನಾದೆ ಎಂದು ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ಹೇಳಿಕೊಂಡಿದ್ದಾರೆ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನೊಂದಿಗೆ ಹೇಗೆ ಮಾತನಾಡಬಹುದು ಎಂಬ ಗುಟ್ಟನ್ನು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಗುಟ್ಟಾಗಿಯೇ ಹೇಳಿದ್ದಾರೆ. ಶರಣರ ವಚನಗಳನ್ನು ಓದುತ್ತಾ ಓದುತ್ತಾ ತನ್ನರಿವಿನೊಂದಿಗೆ ತಾನೇ ಮಾತನಾಡುತ್ತಾ ಆ ಅರಿವಿನಲ್ಲಿ ತಾನು ಲೀನವಾಗಿ ಆ ಅರಿವೇ ತಾನಾಗುವುದನ್ನು ಕಲಿತುಕೊಳ್ಳುವವನೇ ಜಾಣ ಓದುಗ !

**149**

**ಆದಿ ಅಕ್ಷರದ ಭೇದವನರಿಯದವರ**
**ಎಂತಯ್ಯಾ ಭಕ್ತರೆಂದೆಂಬೆ ?**
**ಆನಂದ ತನುಮನಕರಸ್ಥಳದ ಬಹಳವರಿಯದವರಿಗೆ**
**ನೀನೇಕೊಲಿವೆಯಯ್ಯಾ ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸ್ಥೂಲ ಅಂಗ, ಸೂಕ್ಷ್ಮ ಅಂಗ, ಜ್ಞಾನಾಂಗ ಎಂದು ಮೂರು ಅಂಗಗಳು ಉಂಟು. ಸೂಕ್ಷ್ಮ ಅಂಗ, ಜ್ಞಾನಾಂಗಗಳು ಎರಡೂ ಸ್ಥೂಲ ಅಂಗದಲ್ಲಿ ಸಂಗಮಗೊಂಡಿವೆ. ಹೀಗೆ ಕಾಣುವ

ಸ್ಥೂಲಾಂಗದ ಭೇದವನು ಕಂಡು ಹಿಡಿದವನೇ ಭಕ್ತ.

ಸೂಕ್ಷ್ಮ ಅಂಗ ಸ್ಥೂಲ ಅಂಗದಲ್ಲಿ ಸಂಗಮವಾಗಿ ಅನೇಕ ಸುಖ ದುಃಖಗಳನ್ನು ಉಂಡು; ಪಂಡಿತ ಪಾಮರ ಶಾಸಕ ಸಚಿವ ಅಧಿಕಾರಿ ಜವಾನ ಕಳ್ಳ ಸಾತ್ವಿಕ ಎಂಬ ಹಣೆಪಟ್ಟಿ ಕಟ್ಟಿಕೊಂಡು ಪಡಬಾರದ ದುಃಖ ಸುಖಗಳನ್ನು ಅನುಭವಿಸಿದ ಸೂಕ್ಷ್ಮಅಂಗ, ಜ್ಞಾನಾಂಗದಲ್ಲಿ ಪ್ರವೇಶ ಮಾಡಿದರೆ ಸಾಕು ತನು ಅದುವರೆಗೆ ಅನುಭವಿಸಿದ ಸುಖ ದುಃಖಗಳೆಲ್ಲ ನೆಲಕ್ಕೆ ಉರುಳುತ್ತವೆ. ಅಂಗ ಅರಿವಿನ ಮಹಾಲಿಂಗವಾಗಿ ಪರಮಾನಂದವನ್ನು ಅನುಭವಿಸುತ್ತದೆ.

ಜ್ಞಾನಾಂಗ ಸೂಕ್ಷ್ಮಾಂಗವನ್ನು ಅಂಗದಲ್ಲಿಯೇ ಸೃಷ್ಟಿ ಮಾಡಿ ಅಂಗದೊಂದಿಗೆ ಸುಖ ದುಃಖ ಉಣ್ಣಲು ಅನುವು ಮಾಡಿತ್ತು. ಪುನಃ ಸೂಕ್ಷ್ಮಾಂಗ ಜ್ಞಾನ ಅಂಗಕ್ಕೆ ಮೊರೆ ಹೋದಾಗ ಸೂಕ್ಷ್ಮಾಂಗದ ಅಜ್ಞಾನವನ್ನು ಜ್ಞಾನಾಂಗವೇ ಕೊಲೆ ಮಾಡಿತು. ಸೂಕ್ಷ್ಮಾಂಗ ಜ್ಞಾನಾಂಗವಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

ಸೂಕ್ಷ್ಮಾಂಗ ಆದಿ ಅಕ್ಷರದ ಭೇದವನು ತಂತಾನೇ ಅರಿಯಿತು. ಆನಾದಿಯಿಂದಲೂ ಅತ್ತತ್ತಲಿರುವ ಅಕ್ಷರೋತ್ತಮನಿಗೆ ಭಕ್ತನಾಯಿತು. ಜ್ಞಾನಾಂಗದಿಂದಲೇ ಹುಟ್ಟಿದ ಸೂಕ್ಷ್ಮಾಂಗ ಪುನಃ ಜ್ಞಾನಾಂಗದಲ್ಲಿಯೇ ಬೆರೆತು ಜ್ಞಾನಾಂಗವೇ ತಾನಾಯಿತು.

**150**

**ಆದಿ ಅಕ್ಷರದಾನು ಭೇದಕ್ಕೆ ಅರಿಯನು,**
**ಆದರಿಂದಲಾದ ಬಿಂದುಗಳೆಲ್ಲ ಅನ್ನರೂಪು.**
**ಆಮೋದದಕ್ಷರದ ಭೇದವನು**
**ಅರುಹಿದಾತನೆ ಗುರುವಕ್ಕು**
**ಅಯ್ಯಾ, ಶ್ರೀ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವೇದ ಆಗಮ ಉಪನಿಷತ್ತು ಪುರಾಣಗಳನ್ನು ಭಗವದ್ಗೀತೆಯನ್ನು ಹಿಂದಿನವರು ಪಾಂಡಿತ್ಯ ಪ್ರದರ್ಶನಕ್ಕಾಗಿ ವಾದಕ್ಕಾಗಿ ಬಳಸುತ್ತಿದ್ದರು. ಶಂಕರಾಚಾರ್ಯರು ಮಂಡನ ಮಿಶ್ರರನ್ನು ವಾದ ಮಾಡಿ ಸೋಲಿಸಿದ ಕತೆ ಪ್ರಚಲಿತದಲ್ಲಿದೆ.

ಅರಿವಿನ ಸಾಹಿತ್ಯ ಕೂಡ ಮನದ ಅಜ್ಞಾನಕ್ಕೆ ಬಳಕೆಯಾಗುತ್ತದೆಯೇ ಹೊರತು ಮನ ತಾನು ಘನ ಮನನಾಗಬೇಕೆಂದು ಮನಕ್ಕೆ ಹೊಳೆಯದೆ ಹೋಗುತ್ತದೆ. ಮನ ಅರಿವಿನ ಅಕ್ಷರೋತ್ತಮನಿಗೆ ದಾಸನಾಗಬೇಕು.

ಅರಿವಿನ ಜಲಬಿಂದುಗಳೆಲ್ಲ ಅನ್ನರೂಪು. ಆ ಅರಿವಿನ ಜಲ ಬಿಂದುವಿನಿಂದಲೇ ಸಕಲ ಪಶು ಪಕ್ಷಿಗಳು ಜನ್ಮ ತಳೆದವು. ಗಿಡ ಮರ ಬಳ್ಳಿ ಜಲಚರಗಳು ಉರಗ ಕೀಟಗಳು ಜನ್ಮ ತಳೆದವು. ಆ ಅರಿವಿನ ಜೀವ ಜಲಬಿಂದುವೇ ಗರ್ಭ ಹೊಕ್ಕು ಅರಿವಿನ ಅಂಗವಾಯಿತು. ಅಕ್ಷರೋತ್ತಮನಾಗಿ ಹೊರಗೆ ಬಂದು ಅರಿವಿನ ಅಕ್ಷರಗಳನ್ನು ಅರಿವಾಗಲೆಂದೇ ರಚಿಸಿದ.

ಈ ಅರಿವಿನ ಸಿಹಿಯನ್ನು ಉಂಡು ಅರಿವೇ ಆದ ಗುರುದೇವ ಅಂಗಕ್ಕೆ ಅರಿವಾಗಲೆಂದೇ ಅರಿವಿನ ಸಿಹಿಯನ್ನು ಅರುಹಿದ. ಹೀಗೆ ಅಕ್ಷರೋತ್ತಮನನ್ನು ಅಂಗಕ್ಕೆ ಪರಿಚಯ ಮಾಡಿದಾತನೇ ಗುರುವಾದ. ಈ ಗುರುದೇವನನ್ನು ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥನೆಂದು ಕರೆದಿದ್ದಾನೆ ಶಿದ್ಧರಾಮ ಶಿವಯೋಗಿ.

ಈತನಿಗೆ ಇಡೀ ಪ್ರಪಂಚವೇ ಅನ್ನರೂಪು. ಸಕಲ ಬಿಂದುಗಳೆಲ್ಲ ಅನ್ನ ರೂಪು. ಎಲ್ಲಿ ನೋಡಿದರೂ ಪಕ್ವಾನ್ನಗಳಿಂದ ತುಂಬಿದ ಅಡಿಗೆ ಮನೆಯೇ ಗೋಚರಿಸುತ್ತದೆ.

ಭೂಮಿಯ ಮೇಲೆ ಬಿದ್ದ ಜೀವ ಜಲಬಿಂದುವಿನಿಂದ ಬೆಳೆದ ಹುಲ್ಲು ನೋಡಿದ. ಬೃಹದಾಕಾರವಾದ ಆನೆ ಹುಲ್ಲು ತಿನ್ನುವುದನ್ನು ನೋಡಿದ. ಆ ಹುಲ್ಲು ಕರಗಿ ಆನೆಯಾಗುವುದನ್ನು ನೋಡಿದ. ಹುಲಿಗೆ ಅನ್ನವಾದ ಚಿಗರೆ ಹುಲಿಯೇ ತಾನಾದುದನ್ನು ನೋಡಿದ. ಚಿಗರೆಯನ್ನು ಹುಲಿ ಕೊಂದು ತಿನ್ನಲಿಲ್ಲ. ಬದಲಾಗಿ ಚಿಗರೆಯೇ ಹುಲಿಗೆ ಅನ್ನವಾಯಿತು; ತಾನು ಹುಲಿಯಾಗಬೇಕೆಂಬ ಬಯಕೆಯಿಂದ. ಉತ್ಕಟ ಇಚ್ಛೆಯಿಂದ. ಹೀಗಾಗಿ ಇಡೀ ವಿಶ್ವವೇ ಅನ್ನದ ಮನೆ; ಅಡಿಗೆ ಮನೆ. ಎಲ್ಲಿ ನೋಡಿದರೂ ಅಡಿಗೆ ನಡೆದಿದೆ. ಇದು ಅಕ್ಷರೋತ್ತಮನ ಅಡಿಗೆ.! ಅನ್ನಂ ಬ್ರಹ್ಮ. ಅನ್ನವೇ ಬ್ರಹ್ಮವಾಯಿತು.

ಅಕ್ಷರೋತ್ತಮನಿಕ್ಕಿದ ತೊಡಕನ್ನು ಭೇದಿಸಿ ನೋಡುವ ಕಣ್ಣುಬೇಕು. ಹೀಗೆ ನೋಡಿದಾತನೇ ಗುರುದೇವ. ಈ ಆನಂದವನ್ನು ತಿಳಿಹೇಳಿದಾತನೇ ಗುರು ಎನ್ನಿಸಿಕೊಳ್ಳುತ್ತಾನೆ.

**151**

**ಆದಿ ಅಕ್ಷರವನು ಆರೈದು ತೋರಿದಿರಿ**
**ಓರಂತೆ ಎನ್ನ ಸದುಹೃದಯನೆನಿಸಿ**
**ನಾದಬಿಂದು ಕಳೆಗಳನೆನ್ನ ಆದಿಕರದೊಳಗಿಟ್ಟು**
**ಅಭೇದ್ಯ ಪರಮಾನಂದ ಸತ್ಯರೂಪ ನಿತ್ಯಾನಂದ**
**ಶ್ರೀಗುರು ಚೆನ್ನಬಸವಣ್ಣನುನ್ನತವನಾರು ಬಲ್ಲರು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವನ್ನು ಅಳಿದಿರಿ. ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನನ್ನು ಐದು ಮುಖಗಳಲ್ಲಿ ತೋರಿದಿರಿ. ಕಣ್ಣಿನ ಅಜ್ಞಾನವನ್ನು ಕಣ್ಣಿನ ಜ್ಞಾನದ ಮೂಲಕ ಕಳೆದು ಕಣ್ಣಲ್ಲಿಯೇ ಅರಿವಿನ ಬ್ರಹ್ಮಾಂಡವನ್ನು ತೋರಿದಿರಿ. ಕಿವಿಯ ಅಜ್ಞಾನವನ್ನು ಕಿವಿಯ ಜ್ಞಾನದ ಮೂಲಕ ಕಳೆದು ನಿಃಶಬ್ದ ಬ್ರಹ್ಮನನ್ನು ಪರಿಚಯಿಸಿದಿರಿ.

ಮೂಗಿನ ಸುಗಂಧ ದುರ್ಗಂಧವನ್ನು ಮೂಗಿನಲ್ಲಿರುವ ಜ್ಞಾನದ ಮೂಲಕ ಕಳೆದು ಅರಿವಿನ ಪರಿಮಳವನ್ನು ಘ್ರಾಣಕ್ಕೆ ಪರಿಚಯಿಸಿದಿರಿ. ಚರ್ಮದ ಅಜ್ಞಾನವನ್ನು ಚರ್ಮದ ಜ್ಞಾನದ ಮೂಲಕ ಕಳೆದು ಚರ್ಮದಲ್ಲಿಯ ಮಹಾಜ್ಞಾನವ ಚರ್ಮದಲ್ಲಿಯೇ ತೋರಿದಿರಿ. ನಾಲಿಗೆಯ ಅಜ್ಞಾನವನ್ನು ನಾಲಿಗೆಯ ಮೂಲಕ ಕಳೆದು ನಾಲಿಗೆಗೆ ನಾಲಿಗೆಯ ಮಹಾಜ್ಞಾನವನ್ನು ಪರಿಚಯಿಸಿದಿರಿ. ಆದಿ ಅಕ್ಷರವನ್ನು ಆರೈದು ತೋರಿದಿರಿ. ಓರಂತೆ ಎನ್ನ ಸಹೃದಯನೆನ್ನಿಸಿದಿರಿ.

ನಾದಬಿಂದು ಕಳೆಗಳನ್ನು ಆದಿಯಿಂದಲೂ ಬಂದ ನನ್ನ ಅಂಗದೊಳಗೇ ಇಟ್ಟು ಅಂಗಕ್ಕೆ ಅನಾದಿಯಿಂದತ್ತತ್ತಲಾದ ಅರಿವಿನ ಲಿಂಗವನ್ನು ಪರಿಚಯಿಸಿದಿರಿ. ನಾದಬಿಂದು ಕಲೆಗಳಿಗೆ ಅತೀತನಾದ ಅರಿವಿನ ಮಲ್ಲಯ್ಯನನ್ನು ಅಂಗದಲ್ಲಿಯೇ ತೋರಿದಿರಿ.

ನೀನು ಅಭೇದ್ಯನು. ಪರಮಾನಂದನು. ಸತ್ಯರೂಪ ನಿತ್ಯಾನಂದನು. ಶ್ರೀಗುರು ಚೆನ್ನಬಸವಣ್ಣನು. ನಿನ್ನ ಉನ್ನತವನು ಯಾರು ಬಲ್ಲರು ತಂದೆಯೇ. ಕಪಿಲಸಿದ್ಧ ಮಲ್ಲಿಕಾರ್ಜುನನೇ.

152

**ಆದಿ ಅಕ್ಷರವನು ಭೇದಿಸುವ ಭಕ್ತರನು**
**ಆನಂದದಿಂದವರ ನೀನೆಂದೆಂಬೆ**
**ಧ್ಯಾನ ಜಪದಿಂದವರ ಆನಂದವಂ ನೆನೆವೆ**
**ಕಾರುಣ್ಯಾಕರನೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನು ಆದಿಯಾದರೆ, ತನುವಿಂಗೆ ತನುವಾಗಿ, ತನುವಿನ ಆಧಾರವಾದ ಅಕ್ಷರೋತ್ತಮ ಅನಾದಿ; ಆತ ಅನಾದಿಯಿಂದತ್ತತ್ತ.

ತನುವೆಂದರೆ ಸಾಮಾನ್ಯವಲ್ಲ. ಅದು ತಾನೇ ಸೃಷ್ಠಿ ಮಾಡಿದ ಬಾಹ್ಯ ಜಗತ್ತಿಗೆ ಮರುಳಾಗಿ ತನು ಸಾಮಾನ್ಯವೆನ್ನಿಸಿಕೊಂಡಿದೆ. ಒಮ್ಮೆ ತನುವೇ, ತನುವನ್ನು ಆವರಿಸಿದ ಮನವನ್ನು, ತನುವಿನಲ್ಲಿ ತನ್ಮಯವಾದ ಅಕ್ಷರೋತ್ತಮನನ್ನು ನೋಡಿದರೆ ಸಾಕು ಅದು ಅಪ್ರಮಾಣವಾಗಿ ಕಾಣುತ್ತದೆ. ತನಗೆ ತಾನೇ ಜಗದಗಲ ಮುಗಿಲಗಲವಾಗಿ ಕಾಣುತ್ತದೆ.

ಪಾತಾಳದಿಂದಲೂ ಅತ್ತತ್ತ ಚಾಚಿಕೊಂಡ ತನುವಿನ ಶ್ರೀ ಚರಣದ ದರುಶನ ತನುವಿಗೆ ಆಗುತ್ತದೆ. ಬ್ರಹ್ಮಾಂಡದಿಂದತ್ತತ್ತಲೂ ಚಾಚಿಕೊಂಡ ತನುವಿನ ಶ್ರೀ ಮುಕುಟದ ದರುಶನ ತನುವಿಗೆ ಆಗುತ್ತದೆ. ಅಪ್ರತಿಮಲಿಂಗವೇ ತನುವಿನಲ್ಲಿ ಚುಳುಕಾದುದು, ತನುವಿನ ಗೋಚರಕ್ಕೆ ಬರುತ್ತದೆ.

ತನುವನ್ನು, ತನುವಿನಿಂದ ಹೊರಬಂದ ಅಕ್ಷರವನ್ನು, ಅಕ್ಷರಗಳನ್ನು ಚೆಲ್ಲಿದ ತನುವನ್ನು, ತನುವಿಗೂ ಅಕ್ಷರಕ್ಕೂ ಆಧಾರವಾದ ಅಕ್ಷರೋತ್ತಮನನ್ನು ತನುವಿನಲ್ಲಿಯೇ, ತನುವಿನ ಮೂಲಕ ಭೇದಿಸಿದವನೇ ಭಕ್ತ.

ಅಂತಹ ಭಕ್ತರ ಬಾಗಿಲ ಕಾಯ್ದು ಬದುಕುವೆ ಎಂದು ಶರಣರು ನುಡಿದಿದ್ದಾರೆ. ಸಿದ್ಧರಾಮ ಶಿವಯೋಗಿಗಳು ಅಂತಹ ಭಕ್ತರನ್ನು ಆನಂದಿಂದ ನೆನೆವೆನು ಎನ್ನುತ್ತಾರೆ. ಅವರ ದರುಶನದ ಅಪೇಕ್ಷೆ ಹೊತ್ತು ಅವರ ಬರುವಿಕೆಗಾಗಿ ಧ್ಯಾನ ಮಾಡುವೆ. ಜಪ ಮಾಡುವೆ.

ಕಾರಣ್ಯಾಕರನೆ ನಿನ್ನ ಭೇದಿಸಿದ ಭಕ್ತರನ್ನು ನೀನೇ ಎಂಬೆ. ನಿನಗೂ ಅವರಿಗೂ ಅವಿನಾಭಾವ ಸಂಬಂಧ. ಹೀಗಾಗಿ ಆನಂದದಿಂದವರ ನೀನೆಂದೆಂಬೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಅವರಲ್ಲಿ ಕಾಣುವೆ ಕರುಣಾಕರನೇ.

153

**ಆದಿನಿರಾಳ, ಮಧ್ಯನಿರಾಳ, ಊರ್ಧ್ವನಿರಾಳ ಅಂತೆ ನಿನ್ನ ಪರಿಯಯ್ಯಾ.**
**ಅನಾಮಯಶೂನ್ಯನೆಂದು ಹೊಗಳುತ್ತೈದಾರೆ ನಿನ್ನ ಹಲಬರು,**
**ನೀನು ಭಕ್ತಕಾರಣ ಪರಶಿವಮೂರ್ತಿಯೆಂಬುದನರಿಯರಾಗಿ.**
**ಎಲೆ ಅಯ್ಯಾ, ಸುಚಿತ್ತವಾದ ಲೋಕಂಗಳಲ್ಲಿ ನೀನು**
**ಉರುತರ ನಿತ್ಯನೆಂಬುದನರಿಯರು ಕಾಣಾ ಎಲೆ ಅಯ್ಯಾ,**
**ಅಯ್ಯ ನಿನ್ನ ಅನಾಹತ ಪಟ್ಟಣದಲ್ಲಿ**
**ಶೂನ್ಯಕಾಯನೆಂಬ ಮಹಾಗಣೇಶ್ವರನ ಮನೆಯಲ್ಲಿ**
**ಪದನಾಶನೆಂಬ ಯೋಗಿಯಾಗಿ ಬಂದು,**

**ಫಲಕ್ಕೆ ಬಿತ್ತಲಿದ್ದ ಬೀಜಂಗಳ ನೀನು ಸಂಗ್ರಹಿಸಿ**
**ಸ್ವಯಂಪಾಕವ ಮಾಡಿ,**
**ಆತ ಕಿಂಕಿಲದಿಂ ಸದ್ಭಾವವೆಂದೆಂಬ ಪರಿಯಾಣದಲ್ಲಿ**
**ಅಷ್ಟಪಾದಂಗಳನುಳ್ಳ ಆಧಾರವಂ ತಂದಿಟ್ಟು**
**ಮಥಿತ ಮರ್ಧನ, ಸುಚಿತ್ತ ಸುಗುಣಂಗಳೆಂಬ**
**ಓಗರವಂ ತಂದು ಎನಗೆ ಬಡಿಸಲಾಗಿ,**
**ನಿತ್ಯವೆಂಬ ದೀಪ್ತಿಯ ಬೆಳಗಿನಲ್ಲಿ**
**ಸುಚಿತ್ತದಿಂ ಆರೋಗಣೆಯಂ ಮಾಡಿ,**
**ರೇತೋದಾರನೆಂಬ ಗಣೇಶ್ವರ**
**ಲೆಕ್ಕ ಮೂವತ್ತಾರು ಸಾವಿರ ಪಟ್ಟಣಂಗಳಲ್ಲಿ**
**ಪ್ರವೇಶಿಸಿ ಬಂದ ಕಾಲದಲ್ಲಿ,**
**ನಿನ್ನ ಸುಮತಿ ಪ್ರಸನ್ನತೆ ಪರಿಣಾಮ ಪ್ರಯೋಗವೆಂಬ**
**ಪ್ರಸಾದ ಸ್ವೀಕಾರಂ ಮಾಡಲ್ಕಾಗಿ,**
**ಆತನ ಮೂರರಿಂ ಮೇಲೆ**
**ಹತ್ತರಿಂದೊಳಗೆ ಇದ್ದಂಥ ಹಲವೆಲ್ಲವೂ ಏಕೀಭವಿಸಿದವು.**
**ಆತ ನಿತ್ಯನಾದ, ಆತ ಫಲಕ್ಕೆ ಪದಕ್ಕೆ ಭವಕ್ಕೆ**
**ತುರೀಯ ಸಿದ್ಧತ್ವಮುಸಿಯನೆಯ್ದೆ**
**ಸಂದು ಹರಿದ, ಹಂಗು ಹರಿದ,**
**ಆನಂದವೆಂಬ ಶ್ವೇತಜಲದಲ್ಲಿ**
**ಚಂದ್ರಕಾಂತದ ಮಂಟಪವನಿಕ್ಕಿ,**
**ಅರ್ಚನೆ ಪೂಜನೆ ವ್ಯವಹರಣೆಯೆಂಬವನತಿಗಳೆದು**
**ಶುದ್ಧಲಿಂಗಾರ್ಚನೆಯಂ ಮಾಡಿ**
**ಸುಖಸಂಯೋಗದಲ್ಲಿ ಎರಡಿಲ್ಲದೆ ಮೂರ್ಛಿತವೋಗೈದಾನೆ**
**ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆದಿ ಮಧ್ಯ ಊರ್ಧ್ವ ನಿರಾಳನೆಂದು, ಅನಾಮಯ ಶೂನ್ಯನೆಂದು, ತತ್ವ ಬಲ್ಲವರು ನಿನ್ನನ್ನು ಹೊಗಳುತ್ತಿದ್ದಾರೆ. ನೀನು ಭಕ್ತಕಾರಣ ಪರಶಿವಮೂರ್ತಿಯೆಂಬುದನು ಅರಿಯರು. ಎಲೆ ಅಯ್ಯಾ , ನೀನು ಸುಚಿತ್ತವೆಂಬ ಎದೆಯಂಗಳದಲ್ಲಿ ಪವಡಿಸಿದವನು, ನಿತ್ಯನು ಎಂಬುದನು ಅರಿಯರು.

ಎಲೆ ಅಯ್ಯಾ, ನಿನ್ನ ವಾಸ, ಕಾಯವೆಂಬ ಕೈಲಾಸದ ಪಟ್ಟಣದಲ್ಲಿ, ಶೂನ್ಯಕಾಯನೆಂಬ ಗಣೇಶ್ವರನ ಮನೆಯಲ್ಲಿ, ಪದನಾಶನೆಂಬ ಯೋಗಿಯಾಗಿ ಬಂದು, ಫಲಕ್ಕೆ ಬಿತ್ತಲಿದ್ದ ಬೀಜಂಗಳನು ನೀನು ಸಂಗ್ರಹಿಸಿ ಸ್ವಯಂ ಪಾಕವ ಮಾಡಿದಾತ ನೀನು.

ತನುವೆಂಬ ಪರಿಯಾಣದಲ್ಲಿ ದುರ್ಭಾವ-ಭಾವವನ್ನು ಕಳೆದು ಸದ್ಭಾವದಿಂದ ಮಥನಿಸಿ, ಸುಚಿತ್ತ ಸುಗುಣಗಳೆಂಬ ಬಾನವನ್ನು ತಂದು ಎನಗೆ ಬಡಿಸಿದ ಪರಮಾತ್ಮ ನೀನು.

ನಿತ್ಯವೆಂಬ ದೀಪ್ತಿಯ ಬೆಳಗಿನಲ್ಲಿ ಸುಚಿತ್ತದಿಂದ ಆರೋಗಣೆಯ ಮಾಡಿ, ರೇತೋದಾರನೆಂಬ ಗಣೇಶ್ವರನು ಲೆಕ್ಕ ಮೂವತ್ತಾರು ಸಾವಿರ ಪಟ್ಟಣಂಗಳುಳ್ಳ-ಖ್ಯಾತಿ-ಪಡೆದ

ತನುವಿನಲ್ಲಿ ಪ್ರವೇಶಿಸಿ ಬಂದವನು ನೀನು.

ಸುಮತಿ ಪ್ರಸನ್ನತೆ ಪರಿಣಾಮ ಪ್ರಯೋಗವೆಂಬ ಪ್ರಸಾದ ಸ್ವೀಕಾರ ಮಾಡಲಾಗಿ, ಸಾತ್ವಿಕ ರಾಜಸ ತಾಮಸ ಗುಣಗಳನ್ನು ಅತಿಗಳೆದು, ಹತ್ತರಿಂದೊಳಗೆ ಇದ್ದಂಥ ಭೂಮಂಡಲವೆಲ್ಲವೂ ಏಕೀಭವಿಸಿದವು.

ಕಾಯವೆಂಬ ಕೈಲಾಸದೊಳಗೆ ಚುಳುಕಾಗಿ ಬೆಳಗಿದ ಆತ ನಿತ್ಯನಾದ. ಆತ ಫಲಕ್ಕೆ ಪದಕ್ಕೆ ಜನನ ಮರಣಗಳಿಗೆ ತುರೀಯಸಿದ್ಧನಾದ. ತತ್ವಮಸಿಯನೆಯ್ದು ಸಂದು ಹರಿದ. ಹಂಗುಹರಿದ.

ಸದಾ ಪರಮಾನಂದವೆಂಬ ಶುಭ್ರ ಶ್ವೇತಜಲದಲ್ಲಿ ಚಂದ್ರಕಾಂತದ ಮಂಟಪವನು ಇಕ್ಕಿ ಅರ್ಚನೆ ಪೂಜನೆ ವ್ಯವಹರಣೆಯೆಂಬವನು ಅತಿಗಳೆದನು. ಶುದ್ಧ ಅರಿವಿನ ಲಿಂಗಾರ್ಚನೆಯನು ಮಾಡಿ ಸುಖ ಸಂಯೋಗದಲ್ಲಿ ಎರಡಿಲ್ಲದೆ ಧ್ಯಾನಮಗ್ನನಾಗಿದ್ದಾನೆ; ಕಪಿಲಸಿದ್ಧ ಮಲ್ಲಿಕಾರ್ಜುನನು.

**154**

**ಆದಿ ಮಧ್ಯಾವಸಾನದ ನಾದ ಭವಿಸಿತಯ್ಯ**
**ಬ್ರಹ್ಮನಾದವೆ ಆನಂದವಾಗಿ. ಆಮೋದದಾ ನಾದ**
**ನಿನ್ನ ಆದಿಯ ರೂಪಾಗಲಿಕೆ ನಾನು ಬೆರಗಾದೆ ಕಂಡಾ.**
**ಅಭೇದ್ಯನೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿಮ್ಮ ನಾಮದಲ್ಲಿ ಲೀಯವಾದೆ.**

ಭ್ರಮೆ ಅಂದರೆ ಇಲ್ಲದ್ದು. ಬ್ರಹ್ಮ ಎಂದರೆ ಇದ್ದದ್ದು. ಇಲ್ಲದ ವಸ್ತುವಿಗೆ ಇದ್ದ ವಸ್ತುವಿನ ಮರೆವಾಗಿದೆ. ಇದ್ದ ವಸ್ತುವಿನ ಅರಿವಾಗುವುದೇ ಆನಂದ. ಆಮೋದದ ಆನಂದ ನಾದ.

ತನುವನ್ನು ಮನವೆಂಬ ಭ್ರಮೆ ಆವರಿಸಿಕೊಂಡಿದೆ ; ತನುವಿನಲ್ಲಿಯೇ ಬ್ರಹ್ಮ ತನ್ಮಯವಾಗಿದೆ. ಭ್ರಮೆಗೆ ಭ್ರಮೆಯ ಅರಿವಾಗುತ್ತದೆಯೇ ಹೊರತು ಬ್ರಹ್ಮನ ಪರಿಚಯವಾಗುವುದು ಜಟಿಲ.

ಭ್ರಮೆ ಎಂದರೆ ಭ್ರಮೆಗೆ ಬಲುಸುಖ. ಹೀಗಾಗಿ ಕ್ಷಣ ಕ್ಷಣಕ್ಕೂ ಭ್ರಮೆ ಭ್ರಮಾ ಸುಖವನ್ನು ಬಯಸುತ್ತಾ ಹೋಗುತ್ತದೆ. ಸುಖ ಸಿಗದೆ ಹೋದರೆ ದುಃಖಿಸುತ್ತದೆ. ಪುನಃ ಸುಳ್ಳು ಸುಖದತ್ತ ಮುಂದುವರೆದು ಆ ಸುಖ ಅನುಭವಿಸಲು ದಾರಿ ಮಾಡಿಕೊಳ್ಳುತ್ತದೆ.

ತನು ಬ್ರಹ್ಮ ಪೀಠದ ಮೇಲೆ ಕುಳಿತಿದ್ದರೂ; ಬ್ರಹ್ಮನೇ ತಾನಾಗಿದ್ದರೂ ತನುವಿಗೆ ತಾನು ಬ್ರಹ್ಮನೆಂಬ ಅರಿವಿಲ್ಲ. ಏಕೆಂದರೆ ತನು ಭ್ರಮೆಯ ಕೈಗೊಂಬೆ. ಬ್ರಹ್ಮನಿಂದ ಸೃಷ್ಟಿಯಾದ ಭ್ರಮೆ ತನ್ನ ಅಜ್ಞಾನದ ಭ್ರಮಾ ಮುಸುಕನ್ನು ಬ್ರಹ್ಮನಿಗೆ ಹೊದಿಸಿ ತನುವನ್ನ ತನ್ನ ಹಿಡಿತಕ್ಕೆ ತೆಗೆದುಕೊಂಡು ಭ್ರಮಾ ಸುಖದ ಸವಿಯನ್ನು ತನುವಿನ ಮೂಲಕ ಉಣ್ಣುತ್ತದೆ.

ತನ್ನನ್ನು ತಾನು ಅರಿಯದ ಮುನ್ನ ಅರಿವು ಎನ್ನುವ ಬ್ರಹ್ಮ ತನುವಿನಲ್ಲಿಯೇ ತನ್ಮಯವಾಗಿದೆ. ತನ್ನನ್ನು ತಾನು ಅರಿಯಲು ಆರಂಭಿಸಿದಾಗ ಅರಿವು ಎನ್ನುವ ಬ್ರಹ್ಮ ತನುವಿನಲ್ಲಿಯೇ ತನ್ಮಯ ಎಂದು ತನಗೆ ಅರಿವಾಗುತ್ತದೆ. ತನುವಿನಲ್ಲಿಯೇ ತನ್ಮಯವಾದ ಆ ಅರಿವು ತನಗೆ ಕರಿಗೊಂಡ ಬಳಿಕ ತಾನೇ ಆ ಅರಿವು ಎಂದು ತನಗೆ ಅರಿವಾಗುತ್ತದೆ. ಆಗ ತನಗೆ ತಾನೇ 'ಅಹಂ ಬ್ರಹ್ಮಾಸ್ಮಿ' ಎಂಬ ಬ್ರಹ್ಮನಾದ ಪರಮಾನಂದದಿಂದ ಹೊರ ಚಿಮ್ಮುತ್ತದೆ.

ಆ ಪರಮಾನಂದದ ನಾದ ಆಮೋದಕ್ಕೆ ನಾನು ಬೆರಗಾದೆ ಕಂಡಾ ಕಪಿಲಸಿದ್ಧ ಮಲ್ಲಿಕಾರ್ಜುನನೇ

ನೀನು ಅಭೇದ್ಯನು ಎಂದು ಹೃದಯ ತುಂಬಿ ನುಡಿದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**155**

**ಆದಿ ಮಧ್ಯಾವಸಾನವನರಿಯದೆ**
**ನಾನು ಭಕ್ತ, ನಾನು ಜಂಗಮವೆಂದು ನುಡಿವ**
**ಉದ್ದೇಶದ ಬರುಬಾಯ ಭುಂಜಕರ ನಾನೇನೆಂಬೆನಯ್ಯಾ .**
**ಆದಿಯನರಿದಡೆ ಗುರುಕರಜಾತನೆಂಬೆ ;**
**ಮಧ್ಯವನರಿದಡೆ ಜಂಗಮ ಸಹಚಾರಿಯೆಂಬೆ ;**
**ಅವಸಾನವನರಿದಡೆ ಮಹಾಲಿಂಗೈಕ್ಯನೆಂಬೆ.**
**ಇಂತೀ ತ್ರಿವಿಧವನರಿದಡೆ ತೂರ್ಯನೆಂಬೆ.**
**ಅರಿವರತು ಮರಹು ನಷ್ಟವಾದಡೆ**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ತಾನೆಂಬೆ.**

ಕಾಯವೇ ಕೈಲಾಸ. ಇದು ಹೇಗೆ ಕೈಲಾಸ ಎಂಬುದನ್ನು ಕಾಯ ಕಾಯದಿಂದಲೇ ಅರಿಯಬೇಕು. ಕಾಯ ಕಾಯವನ್ನು ಅರಿಯುವುದು ಬಿಟ್ಟು ಎಲ್ಲವನ್ನೂ ಅರಿಯುತ್ತದೆ. ಹೀಗಾಗಿ ಕಾಯಕ್ಕೆ ಸುಖ ದುಃಖಗಳು ಉಂಟಾಗುತ್ತವೆ. ಸುಖ ದುಃಖಗಳ ಹೊರತಾದ ಪರಮಸುಖದಿಂದ ಕಾಯ ವಂಚನೆಗೆ ಒಳಗಾಗುತ್ತದೆ.

ಕಾಯದ ಅರಿವನ್ನು ಅಕ್ಷರಗಳ ಮೂಲಕ ಅರಿತು ಕಾಯ, ಕಾಯಕ್ಕೆ ಭಕ್ತನ ವೇಷ, ಜಂಗಮನ ವೇಷ ಧರಿಸಿ, ಕಾಯವನ್ನು ಆವರಿಸಿದ ಮನವೆಂಬ ಮಾಯೆ ತಾನು ಭಕ್ತ, ತಾನು ಜಂಗಮ ಎಂದು ನುಡಿಯುತ್ತದೆ. ಇದು ಬರುಬಾಯ ಭುಂಜಕರ ನುಡಿ ಎಂದು ಸಿದ್ಧರಾಮ ಶಿವಯೋಗಿಗಳು ಜರಿದು ನುಡಿದಿದ್ದಾರೆ.

ಆದಿಯಿಂದ ಬಂದ ಕಾಯವನ್ನು ಆವರಿಸಿದ ಮನವೆಂಬ ಮಾಯೆಯ ಮೂಲಕ; ಅನಾದಿಯಿಂದತ್ತತ್ತಲೂ ಕಾಯದಲ್ಲಿ ಸಂಗವುವಾದ ಗುರುದೇವನನ್ನು ಅರಿತಡೆ ಗುರುಜಾತನೆಂಬೆ; ಜಂಗಮ ಸಹಚಾರಿಯೆಂಬೆ. ಆ ಗುರುದೇವನ ಚರಣಕಮಲದಲ್ಲಿ ಲೀನವಾದಡೆ ಲಿಂಗೈಕ್ಯನೆಂಬೆ. ಇಂತೀ ತ್ರಿವಿಧವನು ಅರಿತವನೆ ತೂರ್ಯ.

ಅರಿವರಿತು ಮರೆವು ನಷ್ಟವಾದವನೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು.

**156**

**ಆದಿಯಕ್ಷರದಂತೆ ಆದವು ನಿನ್ನಹಾಗೆ**
**ಆಮೋದದಾಹಾರವಯ್ಯ**
**ಹುಟ್ಟುಗೆಟ್ಟ ಭವನೆ ಕೇಳಾ ಅಯ್ಯಾ .**
**ನೀನು ಹುಟ್ಟಿದಡೆ ಲಜ್ಜೆ ನಿನಗೆ.**
**ಮುಕ್ತಿಪುದಾ ಲೋಕದಲ್ಲಿ ಹುಟ್ಟಿದೆಯಾದಡೆ**
**ನಿಷ್ಠೆ ನಿನ್ನ ಹೊರೆವುದು.**

**ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನೀ ಹೊತ್ತ ಹೊರೆಯನಿಳುಹುವರಿಲ್ಲ.**

ಅಣು ರೇಣು ತೃಣ ಕಾಷ್ಟದಲ್ಲಿ ದೇವರಿದ್ದಾನೆಂದು ತನಗೆ ಮಾತಿನಿಂದ ತಿಳಿದಿದೆ. ಸಕಲ ತನುಗಳಲ್ಲಿಯೂ ದೇವರಿದ್ದಾನೆಂದು ಕೂಡಾ ತಿಳಿದಿದೆ. ಆದರೂ ತನ್ನನ್ನು ತಾನು ಆರಾಧಿಸಿಕೊಳ್ಳುತ್ತಿಲ್ಲ. ಸಕಲ ತನುವಿನೊಳಗೆ ತನ್ಮಯವಾದ ದೇವರನ್ನು ಆರಾಧಿಸುವುದು ತನಗೆ ತಿಳಿದಿಲ್ಲ.

ಹುಟ್ಟು ಸಾವುಗಳಿಲ್ಲದ ದೇವರು ನನ್ನನ್ನು ಹುಟ್ಟಿಸಿ, ನನ್ನೊಳಗೇ ಇದ್ದು, ತಾನಿದ್ದ ಬಗೆಯನ್ನು ನನಗೆ ಹೇಳಿದರೂ; ನನಗೆ ದೇವರಿದ್ದ ವಿಷಯ ಖಚಿತವಾಗಿ ತಿಳಿಯುತ್ತಿಲ್ಲ. ಬಾಲ್ಯ ಯೌವ್ವನ ಮುಪ್ಪು ಕಳೆದು ಸಾವು ಸಮೀಪಿಸಿದರೂ ಆತ ಹೇಳುವುದು ಬಿಟ್ಟಿಲ್ಲ ; ಹೇಳುವ ಆತ ಯಾರೆಂದು ನನಗೆ ತಿಳಿಯುತ್ತಿಲ್ಲ. ತಿಳಿಯುವವರೆಗೆ ನನ್ನನ್ನು ಪುನಃ ಹುಟ್ಟಿಸುವುದು ಬಿಟ್ಟಿಲ್ಲ. ಹುಟ್ಟುಗೆಟ್ಟ ಭವನು ಆತ. ಹುಟ್ಟು ಸಾವುಗಳನ್ನು ಹೊಂದಿದ ಲಜ್ಜೆಗೇಡಿ ನಾನು.

ನನ್ನೊಳಗಿದ್ದು ನಾನು ನೋಡುವಾಗ; ನನಗೆ ನೋಡುವುದನ್ನು ಕಲಿಸುವ ಆತನನ್ನು ನಾನು ಒಮ್ಮೆಯೂ ನೋಡಲಿಲ್ಲ. ನನಗೇ ಅಸಹ್ಯ ಬರುವಂತೆ ನಾನು ನೋಡುತ್ತೇನೆ. ನನ್ನ ನೋಟ ಖಂಡಿಸಿ; ನೀನು ಹೀಗೆ ನೋಡಬೇಡ; ಒಮ್ಮೆ ನನ್ನ ಕಣ್ಣುಗಳಿಂದ ನೋಡು ಎಂದು ತನ್ನ ನೋಟದ ಮೂಲಕ ನೋಡಲು ಹೇಳಿದ ಪಾಠ ಅದ್ಭುತ.

ನನ್ನ ಕಣ್ಣಲ್ಲಿ ಆತ ಕಣ್ಣಾಗಿ ನನ್ನ ಕಣ್ಣಲ್ಲಿಯೇ ಆತ ಸಂಗಮವಾಗಿದ್ದಾನೆ. ಕಣ್ಣಲ್ಲಿ ಕಣ್ಣಿಟ್ಟು ಕಣ್ಣಾಗಿ ಕಾಯುತ್ತಿದ್ದಾನೆ. ಆದರೂ ನನ್ನ ಕಣ್ಣಿಗೆ ಆತ ಕಾಣುವುದೇ ಇಲ್ಲ. ಬಾಲ್ಯದಲ್ಲಿ ಹುಡುಗಾಟದ ಕಣ್ಣು, ಯೌವ್ವನದಲ್ಲಿ ಕಾಮದ ಕಣ್ಣು, ಮುಪ್ಪಿನಲ್ಲಿ ಬಾಲ್ಯ ಯೌವ್ವನ ಮುಪ್ಪನು ಅನುಭವಿಸಿದ ಅಜ್ಞಾನದ ಕುರುಡು ಕಣ್ಣು. ಈ ಕಣ್ಣಿಗೆ ಕಣ್ಣಿನಲ್ಲಿಯೇ ಇದ್ದ ಮುಕ್ಕಣ್ಣನ ಕಣ್ಣು ಗೋಚರಕ್ಕೆ ಬರಲೇ ಇಲ್ಲ.

ಹೀಗೆಯೇ ಕಿವಿಯಲ್ಲಿ ಕಿವಿಯಾಗಿ, ಚರ್ಮದಲ್ಲಿ ಚರ್ಮವಾಗಿ, ಘ್ರಾಣದಲ್ಲಿ ಘ್ರಾಣವಾಗಿ, ಜಿಹ್ವೆಯಲ್ಲಿ ಪಾಠ ಮಾಡುವ ಅರಿವೆಂಬ ಗುರುದೇವನಿದ್ದರೂ ಆತನ ಪಾಠ ಕೇಳಿ ಆತ ಹೇಳಿದಂತೆ ನಡೆಯಲು ಬಾರದ ಅಜ್ಞಾನಿ ನಾನು.

ಹುಟ್ಟೇ ಇಲ್ಲದ ಗುರುದೇವನೇ, ಆದಿಕಾಲದಲ್ಲಿಯೇ ತನುವಿಗೆ ಜನ್ಮ ನೀಡಿ, ನಿನ್ನಂತೆ ಮಾಡಿಕೊಳ್ಳಬೇಕೆಂದು ಹಟತೊಟ್ಟು, ನೀನು ಅದರಲ್ಲಿ ಸಂಗಮವಾಗಿ ಪಾಠ ಮಾಡಿದರೂ ನಾನು ನಿನ್ನಂತಾಗಲು ಒಲ್ಲೆ.

ಪರಮಾನಂದ ಪರಮ ಹಂಸನ ಆಮೋದದಾಹಾರವನ್ನು ತನುವಿನಲ್ಲಿಟ್ಟು ಹುಟ್ಟುಗೆಟ್ಟ ಅಭವನು ನೀನು. ನೀನು ಹುಟ್ಟಿದಡೆ ಲಜ್ಜೆ ನಿನಗೆ. ನನ್ನ ಕಾಯುವ ನಿಷ್ಠೆಯ ಕಾಯಕ ನಿನಗೆ. ನನಗೆ ನಿನ್ನ ಸುಖ ಗೊತ್ತಿಲ್ಲ; ನಿನಗೆ ನನ್ನ ಸುಖ ದುಃಖ ಬೇಕಿಲ್ಲ. ಆದರೂ ಕಾಲಾನು ಕಾಲದಿಂದಲೂ ಕಾಯದಲ್ಲಿಯೇ ಇದ್ದು ಕಾಯವನು ಕಾಯುವ ಶಿಕ್ಷೆ ನಿನಗೆ ! ಕಾಯಕ್ಕೆ ಜನ್ಮ ನೀಡಿ ಕಾಯದಲ್ಲಿಯೇ ಇದ್ದು ಕಾಯವನ್ನೇ ಕಾಯುವ ದನಗಾಯಿ ನೀನು. ಹೀಗಾಗಿ ನಿನ್ನನ್ನು ಪಶುಪತಿ ಎಂದು ಕರೆದರು.

ಬಸವಣ್ಣನವರು ''ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ತಂದೆ ನಿನ್ನ ಬಯ್ಯದಂತೆ ಮಾಡು'' ಎಂದು ಗೋಗರೆದರು.

ಕಪಿಲಸಿದ್ಧ ಮಲ್ಲಿನಾಥಯ್ಯಾ , ನೀ ಹೊತ್ತ ಹೊರೆಯನು ಇಳುಹುವರಿಲ್ಲ ತಂದೆ ಎಂದು ಸಿದ್ಧರಾಮ ಶಿವಯೋಗಿಗಳು ಕನಿಕರದ ಮಾತನ್ನೇ ಆಡಿದ್ದಾರೆ. ಅವರ ಈ ಮಾತನ್ನು ತಿಳಿದವನೇ ಧನ್ಯ!

157

**ಆದಿಯಕ್ಷರ ಸೊಮ್ಮಿನಾನತದ ಭೇದವನು**
**ನಾದಮಧ್ಯದೊಳಗೆ ಭೇದಿಸಿತ್ತು .**
**ಆದ್ಯಂತ ಶೂನ್ಯ ಕಪಿಲಸಿದ್ಧ ಮಲ್ಲೇಶ್ವರನ**
**ಆಮೋದದಾ ಮನೆಯಲಿತ್ತು ತೋರೆ.**

ಕಾಯವೆಂದರೆ ಸಾಮಾನ್ಯವಲ್ಲ. ಅರಿವಿನ ಈಶ್ವರ ವಾಸ ಮಾಡಿದ ಕೈಲಾಸವದು. ಕಾಯವನ್ನು ಆವರಿಸಿದ ಮನವೆಂಬ ಮಾಯೆಗೆ ಈ ವಿಚಾರ ತಿಳಿಯದ್ದರಿಂದ; ಕಾಯವನ್ನು ಮಾಯವೆಂಬ ರಕ್ಕಸ ರಾಜ್ಯ ಭಾರ ಮಾಡುತ್ತಲಿದೆ.

ಕಾಯವನ್ನು ಆವರಿಸಿದ ಮನವೆಂಬ ಮಾಯೆಗೆ ಈಶ್ವರನ ದರುಶನವಾದರೆ ಸಾಕು ಆ ಮಾಯೆಯೇ ಮಾಹೇಶ್ವರಿಯಾಗಿ ಮಾರ್ಪಟ್ಟು ಶಿವನನ್ನು ವರಿಸುತ್ತಾಳೆ. ಅವರಿಬ್ಬರೂ ಅರ್ಧನಾರೀಶ್ವರರಾಗಿ ಕಾಯವನ್ನೇ ಕೈಲಾಸ ಮಾಡಿಕೊಂಡು ಪರಮಾನಂದದಿಂದ ಕಾಲ ಕಳೆಯುತ್ತಾರೆ.

ಕಾಯವೆಂದರೆ ಆನಂದದ, ಪರಮಾನಂದದ ಅರಿವಿನ ಅರಮನೆ. ಇದರಲ್ಲಿ ಅರಿವಿನ ಅಮೃತವಿದೆ. ಈ ಅಮೃತವನ್ನು ಕುಡಿಯಲು ಅರಿಯದವನು ರಕ್ಕಸನಾದ. ಈ ಅರಿವಿನ ಅಮೃತ ಪಾನ ಮಾಡಿದವನು ದೇವರು ಎನ್ನಿಸಿಕೊಂಡ.

ಶರಣರಿಗೆ ಕಾಯ ಕೈಲಾಸವಾಗಿ ತೋರಿತು. ಹೀಗಾಗಿ ಸಕಲ ಕಾಯಗಳನ್ನು ಗೌರದಿಂದ ಕಂಡರು. ಕಾಯಕ್ಕೆ ಕಾಯದಿಂದಲೇ ಬಾಗಿ ಶರಣು ಶರಣಾರ್ಥಿ ಎಂದರು. ಇದು ಕಪಿಲಸಿದ್ಧ ಮಲ್ಲಯ್ಯನ ವಾಸಸ್ಥಾನ.

158

**ಆದಿಯ ಬೀದಿಯಲಿದ್ದು**
**ತನುವಿನ ತನುಗುಣಮಂ ಮರೆದು**
**ಇರುಳು ಹಗಲೆಂದರಿಯದೆ**
**ಎಂದಿಂಗೆ ಎಂದು ನಿಮ್ಮೊಡಗೂಡಿ**
**ಬೇರಾಗದೆಂದಿಪ್ಪೆನೊ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆದಿಯಿಂದಲೂ ಬಂದ ತನುವನ್ನು, ತನುವನ್ನು ಆವರಿಸಿದ ಮನ ಅರಿಯದೇ ಇದ್ದಾಗ; ತನುವಿನಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನ ತನುವಿನ ಬೆನ್ನು ಬಿದ್ದಿದ್ದ. ನಾನು ಸೃಷ್ಟಿ ಮಾಡಿದ ಮನ ನನ್ನನ್ನು ತಿಳಿಯುತ್ತಿಲ್ಲವಲ್ಲ ಎಂದು ಹಗಲಿರುಳು ಚಿಂತಿಸುತ್ತಿದ್ದ. ನನ್ನನ್ನು ಬರ ಸೆಳೆದು ಅಪ್ಪಿಕೊಂಡು ತನ್ನಂತೆಯೇ ಮಾಡಬೇಕೆಂಬ ತವಕ ಆತನಿಗಿತ್ತು .

ಗುರುದೇವನ ಅಂತಃಕರಣದಿಂದಾಗಿ ಮನವೆಂಬ ನಾನು ತನುಗುಣವೆಂಬ ಅಜ್ಞಾನವನ್ನು ಮರೆತೆ. ತನುವಿನಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನ ಆದಿ ಹಿಡಿದು ಬೀದಿಗೆ ಬಿದ್ದೆ. ಹಗಲಿರುಳೆಂದರಿಯದೆ ಇಂದು ದೊರೆತಾನೊ ನಾಳೆ ದೊರೆತಾನೊ ಎಂದು ಹಲಬುತ್ತ ಹಾದಿ ಕ್ರಮಿಸಿದೆ.

ಅಂದು ಆತ ನನಗೆ ಬೇಕಾಗಿರಲಿಲ್ಲ. ಆತನಿಗೆ ನಾನು ಬೇಕಾಗಿದ್ದೆ. ಹೀಗಾಗಿ ಆತ ನನ್ನ

ಬೆನ್ನು ಬಿದ್ದ.

ಆತ ಯಾರೆಂದು ನನಗೆ ಇಂದು ಗೊತ್ತಾಗಿದೆ. ಆದರೆ ಇಂದು ಆತ ನನಗೆ ಸಿಗುತ್ತಿಲ್ಲ. ನಾನು ಆತನ ಬೆನ್ನು ಬಿಡುತ್ತಿಲ್ಲ. ಆತನಿಂದ ನಾನು ದೂರುವಿಲ್ಲ. ನನ್ನಿಂದ ಆತ ದೂರವಿಲ್ಲ. ಇಬ್ಬರೂ ಒಂದೇ ತನುವಿನ ಮನೆಯಲ್ಲಿ ವಾಸಮಾಡಿದ್ದೇವೆ. ಆದರೂ ಒಬ್ಬರಿಗೊಬ್ಬರ ದರುಶನವಿಲ್ಲ. ವಿರಹದ ವೇದನೆಯಲ್ಲಿ ಅಂದು ಆತ ಬಳಲಿದ. ಅದೇ ವಿರಹದ ವೇದನೆಯಲ್ಲಿ ಇಂದು ನಾನು ಬಳಲುತ್ತಲಿದ್ದೇನೆ.

ಆತ ನನಗೆ ಗುರುದೇವನೂ ಹೌದು; ನಾನು ಆತನಿಗೆ ಶಿಷ್ಯನೂ ಹೌದು. ಆತ ನನಗೆ ಪ್ರಿಯಕರನೂ ಹೌದು; ನಾನು ಆತನಿಗೆ ಪ್ರೇಯಸಿಯೂ ಹೌದು. ನನಗೆ ಆತ ದೇವರೂ ಹೌದು ನಾನು ಆತನಿಗೆ ಭಕ್ತನೂ ಹೌದು.

ನಾನು ಆದಿಯಾದರೆ ಆತ ಅನಾದಿ. ಹೀಗೆ ಇರುಳು ಹಗಲೆಂದರಿಯದೆ ಎಂದಿಂಗೆ ಆತನನ್ನೊಡಗೂಡಿ ಬೇರಾಗದೆಂದಿಪ್ಪೆನೂ ಎಂಬ ದುಗುಡ ನನ್ನನ್ನು ಕಾಡುತ್ತಲಿದೆ. ಬಾ ಅಪ್ಪಿಕೊ ಮಲ್ಲಿಕಾರ್ಜುನನೇ ಎಂದು ಕೈ ಮಾಡಿ ಕರೆಯುತ್ತಲಿದ್ದೇನೆ.

**159**

**ಆದಿಯಾಧಾರವಿಲ್ಲದಂದಿನ ಪ್ರಸಾದ;**
**ಅಗಮ್ಯ ಅಗೋಚರ ಅಪ್ರಮಾಣವೆಂದೆನಿಸುವ ಪ್ರಸಾದ;**
**'ಅಣೋರಣೀಯಾನ್ ಮಹತೋ ಮಹೀಯಾನ್'**
**ಎಂದೆನಿಸುವ ಪ್ರಸಾದ ;**
**'ನಿಜತ್ವ ಪ್ರಾಣಸಿರ್ಮಲಂ' ಎಂದೆನಿಸುವ ಪ್ರಸಾದ ;**
**'ಶಿವೈಕ್ಯಂ ಸುಖಸಂಬಂಧಂ' ಎಂದೆನಿಸುವ ಪ್ರಸಾದ ;**
**'ಪರಮಾತ್ಮೇತ್ಯಯಂ ರುದ್ರಃ' ಎಂದೆನಿಸುವ ಪ್ರಸಾದ ;**
**'ಅಕ್ಷರಾತ್ಮಾಶಿವಂ ಸೂತ್ರಂ' ಎಂದೆನಿಸುವ ಪ್ರಸಾದ ;**
**ಇನಿತಪ್ಪ ಪರಮಸುಖದ ಪರಮ ಪ್ರಸಾದವು ಒಂದಾಗಿ ,**
**ನಿತ್ಯಮುತ್ತೈದೆಯ ಭಾವದಲ್ಲಿ ಶುದ್ಧವಾಯಿತಯ್ಯಾ ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ .**

ತನುವೆಂಬುದು 'ಬಯಲ ಬೀಜ' ಈ ಬೀಜ, ತಂದೆಯ ಮುಖಾಂತರ ತಾಯಿ ಗರ್ಭಕ್ಕೆ ಪ್ರವೇಶ ಮಾಡಿತು. ತಾಯಿ ಗರ್ಭದ ಮುಖಾಂತರ ಭೂಮಿಗೆ ಪ್ರವೇಶ ಮಾಡಿತು. ಹೀಗಾಗಿ ತನುವಿನ ಮೂಲ ತಂದೆ ತಾಯಿಗಳೆಂದರೆ ಬಯಲು.

ಬಯಲು ಯಾರಿಂದಲೂ ಜನ್ಮ ಪಡೆದಿಲ್ಲ. ಅದಕ್ಕೆ ಹುಟ್ಟಿಲ್ಲ; ಸಾವೂ ಇಲ್ಲ. ಹುಟ್ಟು ಸಾವುಗಳಿಲ್ಲದ ಬಯಲ ಪ್ರಸಾದದಿಂದ ಜನ್ಮ ತಳೆದ ತನು ಅದು ಅಗಮ್ಯ ಅಗೋಚರ ಅಪ್ರಮಾಣ ಪ್ರಸಾದ. ಅಣೋರಣಿಯಾನ್ ಮಹತೋ ಮಹಿಯಾನ್. ನಿಜತತ್ವ; ಅದು ಪ್ರಾಣಕ್ಕೆ ಪ್ರಾಣವಾದುದು. ಸರ್ವಾಂಗದಲ್ಲಿ ಲಿಂಗವಾಗಿ ಸಂಗಮವಾಗಿ ಸಂಗಮನಾಥನೆನ್ನಿಸಿಕೊಂಡ ಶಿವೈಕ್ಯ ಸಂಬಂಧ; ಸುಖ ಸಂಬಂಧ ಎಂದೆನಿಸುವ ಪ್ರಸಾದ.

ಗುರುದೇವನು ಮಹಾದೇವನು ಸದಾಶಿವನು ಪರಮಾತ್ಮನು ರುದ್ರನು ಎಂದೆನಿಸುವ ಪ್ರಸಾದ.

ಅಂಗದ ಮೂಲಕ ಅಕ್ಷರಗಳನ್ನು ಸೃಷ್ಟಿಸಿ ಅಕ್ಷರ ತಾನಾಗದೇ ಅಕ್ಷರೋತ್ತಮನೆನ್ನಿಸಿಕೊಂಡ ಮಹಾಪ್ರಸಾದ.

ಇಂತಹ ಪರಮ ಸುಖದ ಪರಮಾತ್ಮ ಸುಖದ ಪರಮ ಪ್ರಸಾದವು ಒಂದಾಗಿ ಅದರ ಅನುಭವವು ತನಗಾಗಿ ಅದು ತಾನೇ ಆಗಿ ನಿತ್ಯ ಮುತ್ತೈದೆ ಎಂದೆನ್ನಿಸಿಕೊಂಡ ಶುದ್ಧ ಪ್ರಸಾದ. ಕಪಿಲಸಿದ್ಧ ಮಲ್ಲಿಕಾರ್ಜುನನ ಪರಮಪ್ರಸಾದ.

**160**

**ಆದಿರುದ್ರನೆಂಬಾತನ ಭೇದಿಸಿಹೆನೆಂದೆಂಬಡೆ**
**ವಾದಿಗಳಿಗಾಗದು ಕಂಡಾ.**
**ಸಾಧಾರಣತನುವ ಕಳೆದು ಭೇದಿಸುವ ರೀತಿಯರಿವು**
**ಮಾಧವಗೀಧವನೆಂಬವರು ಅನಾದಿಬ್ರಹ್ಮವನರಿಯರು**
**ಕಪಿಲಸಿದ್ಧ ಮಲ್ಲಿಕಾರ್ಜುನದೇವಾ.**

ವೇದ ಉಪನಿಷತ್ ಆಗಮ ಭಗವದ್ಗೀತೆ ಬೈಬಲ್ ಕುರಾನ್‌ಗಳು ತನುವಿನಿಂದಲೇ ಬಂದ ತತ್ವಗಳು. ತನುವಿನ ತತ್ತ್ವ ತನುವಿಗೆ ಪರಿಚಯವಾಗಲಿ ಎಂಬ ಹಿರಿಯ ಉದ್ದೇಶದಿಂದ ಅಕ್ಷರ ರೂಪ ಧರಿಸಿದವು. ಅಕ್ಷರೋತ್ತಮನ ಪರಿಚಯಕ್ಕಾಗಿ ಅಕ್ಷರ ರೂಪ ಧರಿಸಿದವು. ಆದರೆ ವೇದ ವಾದಿಗಳಿಗೆ ಅಸ್ತ್ರಗಳಾದವು. ನುಡಿಯುವುದಕ್ಕೆ ಉತ್ತಮ ಸರಕುಗಳಾದವು. ನಡೆಯಲು ಅಧಮನನ್ನಾಗಿಸಿದವು. ತನುವಿನ ಅಜ್ಞಾನವನ್ನು ನಾಶ ಮಾಡದಾದವು. ಅಜ್ಞಾನ ನಾಶ ಮಾಡುವ ಆದಿ ರುದ್ರನೆಂಬಾತನನ್ನು ಭೇದಿಸಿ ಹಿಡಿಯಲು ವಾದ ಮಾಡುವ ಮನಕ್ಕೆ ಸಾಧ್ಯವಾಗಲೇ ಇಲ್ಲ.

ಬ್ರಹ್ಮ ವಿಷ್ಣು ರುದ್ರನೆಂಬುವವರು ದೇವರಲ್ಲ. ತನುವೇ ವಿಷ್ಣು. ಮನವೇ ಬ್ರಹ್ಮ. ಮನದಿಂದ ಹುಟ್ಟಿದ ಅಜ್ಞಾನವನ್ನು ಸಂಹಾರ ಮಾಡುವಾತನೇ ರುದ್ರ. ಈ ಶಕ್ತಿ ತನು ತಿಳಿಯಲೆಂದು. ಅಕ್ಷರ ರೂಪದಲ್ಲಿ ತತ್ತ್ವ ರಚಿಸಿದರೆ, ತನು, ತನುವಿನ ತತ್ತ್ವವನ್ನೇ ವಾದಕ್ಕೆ ಬಳಸಿಕೊಂಡು ವ್ಯಾಧಿಯಾಯಿತು.

ತನುವೆಂದರೆ ಸಾಧಾರಣವಲ್ಲ. ಅದು ಅಸಾಧಾರಣ. ಅದರ ಸಾಮಾನ್ಯತನವನ್ನು ಕಳೆದು ಅದರ ಆಳಕ್ಕಿಳಿದು ನೋಡಿದರೆ ತನುವಿನ ಸತ್ಯ ದರುಶನ ತನುವಿಗಾಗುತ್ತದೆ.

ಅವತಾರ ಪುರುಷನೆಂದೆನಿಸಿಕೊಂಡ ಮಾಧವಗೀಧವರಿಗೆ ತನುವಿನಲ್ಲಿ ತನ್ಮಯಾದ ಅರಿವು ತಿಳಿಯದು. ಏಕೆಂದರೆ ಮಾಧವ ಗೀಧವ ಎನ್ನುವವರು ಯಾರೂ ಇಲ್ಲ. ತನುವಿನ ಅವತಾರ ತನುವಿಗೆ ತಿಳಿಯಲೆಂದು ಋಷಿಮುನಿಗಳು ಮಾಧವನ ಪಾತ್ರವನ್ನು ಅಕ್ಷರಗಳ ಮೂಲಕ ರಚಿಸಿದರು. ಆದರೆ ತನು, ತನುವಿನಲ್ಲಿ ತನ್ಮಯವಾದ ತತ್ತ್ವವನ್ನು ತಿಳಿಯದೆ ಮಾಧವ ಗೀಧವರನ್ನು ಆರಾಧಿಸಿದರೆ, ಆರಾಧಿಸಿದ ತನು ತನ್ನನ್ನು ತಾನು ತಿಳಿಯಲು ಸಾಧ್ಯವೆ? ತಿಳಿಯದು. ಹೀಗಾಗಿ ಮಾಧವ ಗೀಧವರೆಂಬವರು ತನುವಿನಲ್ಲಿಯೇ ತನ್ಮಯವಾದ ಅನಾದಿ ಬ್ರಹ್ಮನನ್ನು ಅರಿಯರು ಎಂದು ಸಿದ್ಧರಾಮ ಶಿವಯೋಗಿಗಳು ಸ್ಪಷವಾಗಿ ನುಡಿದಿದ್ದಾರೆ.

**161**

**ಆದಿ ವಿರಳದಲ್ಲಿ, ಪೂರಕ ಮಣಿಯಲ್ಲಿ,**

**ಕಂಜ ಕರ್ಣವರನಾದಿ ಪುರನ ತಟಾಕದಲ್ಲಿ**
**ಆರೂಢದಲಾ ನೀನಾದೆ ಅಭೇದ್ಯನೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ಆರರಿಂದಲನಿಮಿಷನಾದೆ.**

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ಆರರಿಂದಲಾದವನು. ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೆ ಎಂಬ ಆರು ಮೆಟ್ಟಿಲುಗಳನ್ನು ದಾಟಿದ ಮೇಲೆ ಸಹಸ್ರವೆಂಬ ಬ್ರಹ್ಮಕಮಲ ಅರಳಿದೆ. ಅಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಅನಿಮಿಷನು ವಿರಾಜಮಾನನಾಗಿದ್ದಾನೆ.

ತನು ಆದಿಯಿಂದ ಬಂದುದು. ಆ ತನುವಿನಲ್ಲಿ ಅನಾದಿಯು ಅತ್ತತ್ತಲಿಂದ ಬಂದ ಅನಿಮಿಷನು ಸಂಗಮವಾಗಿದ್ದಾನೆ. ಆದಿಯಿಂದ ಬಂದ ತನುವಿಗೆ ಆಧಾರವಾಗಿದ್ದಾನೆ. ತನುವಿಗೆ ಜನ್ಮವಿತ್ತು ಆ ತನುವಿಗೆ ಆಧಾರ ತಾನೇ ಆಗಿ ಆ ತನುವಿನಲ್ಲಿಯೇ ತನ್ಮಯವಾಗಿದ್ದಾನೆ.

ತನುವಿಗೆ ಆಧಾರವಾದ ಸ್ವಾಧಿಷ್ಠಾನ ಮೂರ್ತಿಯೇ ಅನಿಮಿಷನೆಂಬ ಹೆಸರು ಪಡೆದು ತನುವಿನಲ್ಲಿಯೇ ಸಂಗಮವಾಗಿದ್ದಾನೆ. ಮಣಿಯ ಬೆಳಗಿನಲ್ಲಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತ ಮಣಿಪೂರಕ ಎಂಬ ಹೆಸರು ಪಡೆದಿದ್ದಾನೆ.

ತನುವಿನಲ್ಲಿದ್ದು, ತನುವ ಸೋಂಕದೆ, ತನುವಿಗೆ ಆಧಾರವಾಗಿ ತನುವಿನ ಆಸೆಯಿಲ್ಲದೆ ನಿರಾಸೆಯಿಂದ ತನುವನ್ನು ಬೆಳಗುವ ಅನಾಹತನೆನ್ನಿಸಿಕೊಂಡು ತನುವಿನಲ್ಲಿಯೇ ಸಂಗಮವಾಗಿದ್ದಾನೆ.

ಅಲ್ಲ ಅಹುದು ಎಂಬುದನು ಅತಿಗಳೆದು, ಪಾಪಪುಣ್ಯಗಳನ್ನು ಕಳೆದು ತನುವನು ಶುದ್ಧೀಕರಿಸಿ ವಿಶುದ್ಧಿಯೆಂಬ ಹೆಸರು ಪಡೆದು ತನುವಿನಲ್ಲಿಯೇ ತನ್ಮಯವಾಗಿದ್ದಾನೆ.

ಜೀವ ಜಲಬಿಂದುವಿನಿಂದಾದುದೇ ತನು. ತನುವಿನಂತೆಯೇ ಸಕಲ ಜೀವಿಗಳು ಜೀವಜಲಬಿಂದುವಿನಿಂದಲೇ ಜನ್ಮ ಪಡೆದಿವೆ. ಇದನ್ನು ತಿಳಿದು ಪರಮಾನಂದದಿಂದ ಜೀವಿಸುವ ಶಕ್ತಿ ತನುವಿಗೆ ಮಾತ್ರ ಇದೆ. ಹೀಗಾಗಿ ಸರ್ವ ಜೀವಿಗಳಲ್ಲಿ ದಯವನ್ನುಳ್ಳದೆ ಆಜ್ಞೆ. ಹೀಗೆ ಆರು ತತ್ತ್ವಗಳಿಂದ ನಿರ್ಮಾಣವಾದ ತನುವಿನ ಸಹಸ್ರದ ಬ್ರಹ್ಮಕಮಲದಲ್ಲಿ ಅನಿಮಿಷನೆಂಬ ಮಹಾಜ್ಞಾನಿ ಪವಡಿಸಿದ್ದಾನೆ. ತಿಳಿಯಲು ಇಚ್ಛಿಸುವ ಸಕಲ ತನುಗಳಿಗೂ, ತನುವನ್ನು ಆವರಿಸಿದ ಮನದ ಮೂಲಕ ತನ್ನ ವೃತ್ತಾಂತವನ್ನು ತಿಳಿಸುತ್ತಾನೆ. ತನ್ನ ಕತೆ ತಾನೇ ತಿಳಿಯಲು ಬಯಕೆಯಾದ ಮನವೇ ಧನ್ಯ!

**162**

**ಆಧಾರದಿಂದಿಡಲು ವೇಧೆವರಿಯಿತ್ತಯ್ಯ**
**ಸಾಧಿಸುತ್ತೈತೆ ಸಕಲ ನಿಃಕ್ರಿಯವ.**
**ಆದಿ ಅಕ್ಷರವನು ಭೇದಿಸಿತ್ತಡೆ ಅದನು**
**ರೂಪು ಮಾಡಿದ ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆದಿಯಿಂದಲೂ ಬಂದ ತನುವಿಗೆ ಆಧಾರವಾಗಿ; ಆಧಾರವಾದ ಆ ಪರವಸ್ತುವನು ಸಾಧಿಸುವ ಕೀಲವನೂ ಆ ತನುವಿನಲ್ಲಿಟ್ಟು ರೂಪು ಮಾಡಿದ್ದಾನೆ; ಕಪಿಲಸಿದ್ಧ ಮಲ್ಲಿಕಾರ್ಜುನ.

ಆದಿಯಿಂದ ಬಂದ ತನುವಿಗೆ ಆಧಾರವಸ್ತುವೇ ಮೂಲವೆಂದು ತನುವಿಗೆ ತಿಳಿಯದಂತೆ ಮಾಡಿದ್ದಾನೆ. ತನುವನ್ನು ಆವರಿಸಿದ ಮನಕ್ಕೆ; ತನುವಿನಲ್ಲಿಯೇ ಸಂಗಮವಾದ ; ತನುವಿಗೆ

ಆಧಾರವಾದ; ತನುವನ್ನು ಸೋಂಕದೆ ತನುವನ್ನು ಬೆಳಗಿಂಗೆ ಬೆಳಗಾಗಿ ಬೆಳಗುವ ಪರವಸ್ತುವನ್ನು ತಿಳಿಯದಂತೆ ಮಾಡಿದ್ದಾನೆ.

ಮನುಕುಲವನ್ನು ಸೃಷ್ಟಿಸಿದ ಪರವಸ್ತು ಮಾನವನಲ್ಲಿ ಸಂಗಮವಾಗಿದ್ದರೂ ಮನಕ್ಕೆ ಅರಿಯದಂತೆ ಮಾಡಿ ತನುವಿನಲ್ಲಿಯೇ ಅವಿತಿದ್ದಾನೆ.

ತನುವು ರೂಪದಿಂದ ವ್ಯಕ್ತ ಎನ್ನಿಸಿಕೊಂಡರೆ; ತನುವಿಗೆ ಆಧಾರವಾದ ಅಕ್ಷರೋತ್ತಮನು ನಿರೂಪನು. ಆತ ಕಾಣುವುದಿಲ್ಲ; ಅವ್ಯಕ್ತನಾಗಿದ್ದಾನೆ. ರೂಪವನ್ನು ಆವರಿಸಿದ ಮನವೆಂಬ ಶಿಷ್ಯ ಕೂಡಾ ಅವ್ಯಕ್ತನಾಗಿದ್ದಾನೆ.

ರೂಪವನ್ನು ಹಿಡಿದು ಸುಖ ದುಃಖಗಳನ್ನು ಅನುಭವಿಸುವ ಶಿಷ್ಯ; ರೂಪಕ್ಕೆ ಆಧಾರವಾದ ಒಡಲೊಡೆಯನೊಂದಿಗೆ ಬೆರೆತರೆ ಸಾಕು ಆತ ಆದಿ ಅಕ್ಷರವನ್ನು ಭೇದಿಸಿ ಅಕ್ಷರೋತ್ತಮನನ್ನು ಸಾಧಿಸಿದಂತಾಗುತ್ತಾನೆ.

ಗುರುದೇವನೂ ನಿರೂಪನೇ. ಶಿಷ್ಯನೂ ನಿರೂಪನೆ. ರೂಪು ಭೇದಿಸಿ ನಿರೂಪದ ಸುಖ ಉಂಡ ಶಿಷ್ಯ ರೂಪು ಮಾಡಿದ ಮಹಾಮಹಿಮನಾಗುತ್ತಾನೆ.

'ಬಯಲ ರೂಪು ಮಾಡಬಲ್ಲಾತನೇ ಶರಣ! ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ. ಆ ಬಯಲ ರೂಪು ಮಾಡಲರಿಯದಿರ್ದಡೆ ಎಂತು ಶರಣನೆಂಬೆ? ಆ ರೂಪು ಬಯಲ ಮಾಡಲರಿಯದಿರ್ದಡೆ ಎಂತು ಲಿಂಗಾನುಭಾವಿಯೆಂಬೆ ? ಈ ಉಭಯವ ಒಂದಾಗಿ ಅರಿದಡೆ ನಿಮ್ಮಲ್ಲಿ ತೆರಹುಂಟೇ ಕೂಡಲಸಂಗಮದೇವಾ?'

ರೂಪಿಗೆ ಆಧಾರವಾದದ್ದೇ ಬಯಲು. ಬಯಲೇ ಬೀಜವಾಗಿ, ಬಿಂದುವಾಗಿ ಗರ್ಭದಲ್ಲಿ ಹೊಕ್ಕು ರೂಪಾಗಿದೆ. ರೂಪು ತಾನು ಬಂದ ಜಾಗವನ್ನೇ ಮರೆತು ಹೋಗಿದೆ ; ರೂಪವನ್ನು ಆವರಿಸಿದ ಮನವೂ ಬಯಲೇ. ರೂಪಕ್ಕೆ ಆಧಾರವಾದದ್ದೂ ಬಯಲೇ.

ಮನವೆಂಬ ಅವ್ಯಕ್ತನು ಶಿಷ್ಯನಾಗಿ ಅರಿವೆಂಬ ಅವ್ಯಕ್ತ ಗುರುದೇವನೊಂದಿಗೆ ಸಂಗ ಮಾಡಿದಾಗ ರೂಪು ನಿರೂಪಾಗುತ್ತದೆ. ಸಕಲ ರೂಪುಗಳು ನಿರೂಪವಾಗಿಯೇ ಕಾಣುತ್ತವೆ.

**163**

**'ಆಧಾರಾಧೇಯ ಧರ್ಮಕೂಲಂ' ನಮೋ, ಬಸವ ಬಸವಾ.**
**'ಸ್ವಾದು ಸಜ್ಜನ ಸಮಯಾಚಾರಂ' ನಮೋ, ಬಸವ ಬಸವಾ.**
**'ಪ್ರಾಣಲಿಂಗ ಸಂಬಂಧಿತಂ' ನಮೋ, ಬಸವ ಬಸವಾ.**
**'ಕಪಿಲಸಿದ್ಧ ಮಲ್ಲಿನಾಥಂ' ನಮೋ, ಬಸವ ಬಸವಾ.**

ಲೋಕ ಆಚರಿಸುತ್ತಿರುವ ಧರ್ಮ ಧರ್ಮವಲ್ಲ. ಲೋಕ ಆಚರಿಸುತ್ತಿರುವ ಆಚಾರ ಆಚಾರವಲ್ಲ. ಲೋಕ ತಿಳಿದುಕೊಂಡಿರುವ ಪ್ರಾಣ ಪ್ರಾಣವಲ್ಲ.

ಪ್ರಾಣದ ಭೀತಿಯಿಂದ ಆಚರಿಸುತ್ತಿರುವ ಧರ್ಮ; ಧರ್ಮ ಹೇಗಾದೀತು? ಪ್ರಾಣದ ಭಯದಿಂದ ಆಚರಿಸುತ್ತಿರುವ ಆಚಾರ ಆಚಾರ ಹೇಗಾದೀತು?

ಬಸವಾದಿ ಶರಣರು ಆಚರಿಸುತ್ತಿರುವ ಧರ್ಮವೇ ಧರ್ಮ. ಬಸವಾದಿ ಶರಣರು ಆಚರಿಸುತ್ತಿರುವ ಆಚಾರವೇ ಆಚಾರ. ಅದು ಅರಿವಿನ ಲಿಂಗಾಚಾರ. ಅಗೋಚರದ ಆಚಾರ.

ಲೋಕದ ಗೋಚರಕ್ಕೆ ಬಾರದ ಆಚಾರ.

ಸಕಲ ತನುಗಳಲ್ಲಿ ಧರ್ಮ ಆಧಾರವಾಗಿದೆ. ಧರ್ಮವಿಲ್ಲದ ತನುವೇ ಇಲ್ಲ. ಧರ್ಮವೇ ತನುವಿಗೆ ಆಧಾರ. ಅದು ಬಿಂದುವಿನೊಂದಿಗೆ ಬಂದು ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿದೆ. ಇವು ಸೋರದಂತೆ ಸುಂದರವಾದ ಚರ್ಮದೊಂದಿಗೆ ತನುವನ್ನು ಹೆಣೆದುಕೊಂಡು ತನುವಾಗಿದೆ. ತನುವಿಗೆ ಆಧಾರವಾಗಿದೆ; ಧರ್ಮ ಎಂದು ಹೆಸರು ಪಡೆದಿದೆ.

ಇಂತಹ ತನುವಿನ ಧರ್ಮಕ್ಕೆ ಸಿದ್ಧರಾಮ ಶಿವಯೋಗಿಗಳು ಬಸವ ಧರ್ಮ ಎಂದು ಹೆಸರಿಟ್ಟು ಕರೆದಿದ್ದಾರೆ.

ತನು ಹುಟ್ಟಿದಂದಿನಿಂದ ತನುವಿಗೆ ಧರ್ಮವಿದೆ. ಧರ್ಮ ತನುವಿಗೆ ಆಧಾರವಾಗಿದೆ. ಆದರೂ ತನು ತನುವಿನ ಧರ್ಮ ತಿಳಿಯದೇ ತನುವಿಗೆ ಆಧಾರವಾದ ಧರ್ಮ ತಿಳಿಯದೆ; ತನು ತಾನೇ ಮಾಡಿಕೊಂಡ ಧರ್ಮವನ್ನು ಧರ್ಮವೆಂದು ಆಚರಿಸುತ್ತಲಿದೆ.

ಹಿಂದು, ಮುಸಲ್ಮಾನ, ಕ್ರೈಸ್ತ, ಬೌದ್ಧ, ಜೈನ, ಫಾರ್ಸಿ ಮುಂತಾದ ಧರ್ಮಗಳು ತನುವಿಗೆ ಆಧಾರವಾದ ಧರ್ಮಗಳಲ್ಲ. ಈ ಧರ್ಮಗಳಿಲ್ಲದಿದ್ದರೂ ತನು ಬದುಕುತ್ತದೆ; ಉಸಿರಾಡುತ್ತದೆ. ಆದರೆ ತನುವಿಗೆ ಆಧಾರವಾಗಿ; ತನು ಉಸಿರಾಡಲು ಕಾರಣವಾಗಿ; ತನುವನ್ನು ಬೆಳಗುತ್ತ, ತನು ಸೋಂಕದೆ, ತನುವಿನಲ್ಲಿಯೇ ಸಂಗಮವಾಗಿ; ತನುವಿಗೆ ಪಾಠ ಮಾಡುತ್ತ, ರುಚಿಕರವಾದ ಸ್ವಾದಿಷ್ಟವಾದ ಮಾತುಗಳ ಮೂಲಕ ತನುವಿಗೆ ಬೋಧೆ ಮಾಡುತ್ತ ತನುವನ್ನು ಬುದ್ಧನನ್ನಾಗಿಸಿದ ತನುವಿನಲ್ಲಿ ತನ್ಮಯವಾದ ಧರ್ಮವೇ ತನುವಿಗೆ ಆಧಾರವಾದ ಧರ್ಮ.

ತನುವನ್ನು ಮಹಾವೀರನನ್ನಾಗಿಸಿದ ಧರ್ಮವೇ ತನುವಿಗೆ ಆಧಾರವಾದ ಧರ್ಮ. ತನುವನ್ನು ಪೈಗಂಬರನನ್ನಾಗಿಸಿದ ಧರ್ಮವೇ ತನುವಿನ ಧರ್ಮ. ತನುವನ್ನು ಕ್ರಿಸ್ತ ಹಾಗೂ ಕ್ರಿಷ್ಣನನ್ನಾಗಿಸಿದ್ದೇ ತನುವಿನ ಧರ್ಮ.

ತನುವನ್ನು ಬಸವನನ್ನಾಗಿಸಿದ್ದೇ ತನುವಿನ ಧರ್ಮ. ಇಂತಹ ಧರ್ಮವನ್ನು ತನುವಿನಲ್ಲಿಯೇ ತನುವಿನ ಮೂಲಕ ಕಂಡು ಹಿಡಿದು ಅಗೋಚರದ ಆಚಾರದ ಮೂಲಕ ಲೋಕಕ್ಕೆ ಸರಳವಾಗಿ ಹೇಳಿಕೊಟ್ಟ ಬಸವರಸರಿಗೆ ನಮೋ ನಮೋ.

ತನುವಿನ ಧರ್ಮ ತನುವಿಗೆ ತನುವಾಗಿದೆ. ಪ್ರಾಣಕ್ಕೆ ಪ್ರಾಣವಾಗಿದೆ; ಪ್ರಾಣಲಿಂಗಿ ಎಂದೆನಿಸಿಕೊಂಡ ಧರ್ಮ ಸರ್ವಾಂಗದಲ್ಲಿ ಲಿಂಗವಾಗಿ ಲಿಂಗಾಂಗ ಎನ್ನಿಸಿಕೊಂಡಿದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥನೇ ತಾನೆನ್ನಿಸಿಕೊಂಡ ಬಸವ ಧರ್ಮಕ್ಕೆ; ಬಸವರಸರಿಗೆ ನಮೋ, ಬಸವ ಬಸವಾ ಎಂದು ಸಿದ್ಧರಾಮ ಶಿವಯೋಗಿಗಳು ಹೃದಯ ತುಂಬಿ ಹಾಡಿದ್ದಾರೆ. ಈ ಎಲ್ಲ ಜ್ಞಾನಿಗಳು ತನುವಿನ ಧರ್ಮವನ್ನು ತನುವಾಗಿಯೇ ತನುವಿನ ಮೂಲಕ ಪಾಲಿಸಿದವರು. ಬಾಹ್ಯ ಧರ್ಮದ ಗೊಡವಿಗೆ ಹೋಗದವರು.

**164**

**ಆಧಾರಸ್ಥಾನದಲ್ಲಿ ಅನಿಮಿಷ ಲಿಂಗವನು**
**ವಾಯದ ಕರದಲ್ಲಿ ಭೇದ ಮಾಡಿ,**
**ಆಧಾರ ಸ್ಥಾನದಲ್ಲಿ ಒಳಹೊಕ್ಕಡದು ತಾನು**
**ವಾಯದಕರ ನಿತ್ಯಕರವಯ್ಯಾ.**

**'ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಸೋಹಂ ಪದಾರ್ಥಕ್ಕೆ ಬೀಜ ತಾನು.**

ಬೀಜ ವೃಕ್ಷವನ್ನು ಹೇಗೆ ಅಡಗಿಸಿಕೊಂಡಿದೆಯೊ ಹಾಗೆಯೇ ತನುವಿನಲ್ಲಿ ಅರಿವಿನ ಲಿಂಗಯ್ಯ ತನುವಿಗೆ ಆಧಾರವಾಗಿ ಸಂಗಮವಾಗಿದ್ದಾನೆ. ಆತನನ್ನು ತನುವಿನಲ್ಲಿಯೇ ತನುವನ್ನು ಆವರಿಸಿದ ಮನದಿಂದಲೇ ಹುಡುಕಬೇಕು. ಹುಡುಕಿ ಒಳಹೊಕ್ಕು ಆತನಿಗೆ ಶರಣು ಹೋಗಬೇಕು. ಆಗ ಕರ ಮಹಾಜ್ಞಾನದ ಬ್ರಹ್ಮ ಕಮಲವಾಗಿ ಅರಳುತ್ತದೆ.

ಅರಿವಿನ ಮಹಾಲಿಂಗವನ್ನು ಅಡಗಿಸಿಕೊಂಡದ್ದಕ್ಕಾಗಿಯೇ ಅಂಗಕ್ಕೆ ಬೆಲೆ! ಹೀಗಾಗಿ ಮಹಾಲಿಂಗಕ್ಕೆ ಅಂಗ ಬೀಜವಾಗಿದೆ. ಬ್ರಹ್ಮಾಂಡವನ್ನೇ ಅವ್ಯಕ್ತ ಬೀಜ ರೂಪದಲ್ಲಿ ಅಡಗಿಸಿಕೊಂಡಿದೆ. ಮರದ ಸಕಲ ಗುಣಗಳನ್ನು ಬೀಜದಲ್ಲಿ ಅಡಕ ಮಾಡಿ, ಮರ ತೊಟ್ಟು ಬಿಟ್ಟು ಬೀಜ ಹೊತ್ತ ಫಲವನ್ನು ಕೆಳಗೆ ಚೆಲ್ಲುತ್ತದೆ. ಬೀಜ ಹೊತ್ತ ಫಲದಲ್ಲಿ ಮರ ಅಡಕವಾದದ್ದು ಮರಕ್ಕೆ ವೇದ್ಯವಾದ ಮೇಲೆಯೇ ಅದು ತೊಟ್ಟು ಬಿಟ್ಟು ಭೂಮಿಗೆ ಬೀಳಿಸುತ್ತದೆ. ಇದು ಸಹಜ.

ಪ್ರತಿ ಅಂಗದಲ್ಲಿ ಲಿಂಗ ತನ್ಮಯವಾಗಿ ಅಡಕವಾಗಿದ್ದರೂ ಅಂಗವನ್ನು ಆವರಿಸಿದ ಮನಕ್ಕೆ ಅಂಗದಲ್ಲಿ ಲಿಂಗವಿದೆ ಎನ್ನುವ ಮಾಹಿತಿ ಇರುವುದಿಲ್ಲ. ಇದು ಲಿಂಗಯ್ಯನನ್ನೇ ಹೊತ್ತ ಅಂಗದ ದುರ್ದೈವ.

ಸೋಹಂ ಪದಾರ್ಥಕ್ಕೆ ಬೀಜ ತಾನು ಅಂದರೆ ಪರಮಾತ್ಮನೆಂಬ ಪದಾರ್ಥಕ್ಕೆ ಅಂಗ ಬೀಜವಾಗಿದ್ದರೂ ಅಂಗಕ್ಕೆ ಅರಿವಿಲ್ಲದೆ ತನ್ನ ಆಯುಷ್ಯವನ್ನು ವ್ಯರ್ಥ ಕಳೆದುಕೊಳ್ಳುತ್ತದೆ.

ತನ್ನನ್ನು ತಾನು ಅರಿಯದ ಮುನ್ನವೂ ಅರಿವು ತನುವಿನಲ್ಲಿ ತನ್ಮಯವಾಗಿದೆ. ತನ್ನನ್ನು ತಾನು ಅರಿದ ಬಳಿಕ ಅರಿವು ತನ್ಮಯವೆಂದು ತನುವಿಗೆ ತಿಳಯುತ್ತದೆ. ತನುವಿನಲ್ಲಿ ತನ್ಮಯವಾದ ಅರಿವೇ ತನುವಿನ ಹಿಡಿತಕ್ಕೆ ಬಂದಾಗ ತನು ''ಅಹಂ ಬ್ರಹ್ಮಾಸ್ಮಿ'' ಎಂದು ಆನಂದದಿಂದ ಕುಣಿದಾಡುತ್ತದೆ. ಆ ಪರಮಾತ್ಮನನ್ನು ಹೊತ್ತ ಬೀಜ ತಾನೇ ಎಂದು ತನುವಿಗೆ ಅರಿವಾಗುತ್ತದೆ.

**165**

**ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ**
**ವಿಶುದ್ಧಿ ಆಜ್ಞೆ ಎಂದೆಂಬರು**
**ಈ ಆರ ಬಲ್ಲಡೆ ನೀವು ಹೇಳಿರೇ.**
**ಆದಿಯನುಳ್ಳುದೆ ಆಧಾರ ;**
**ಆಧಾರವ ಕೂಡಿಪ್ಪುದೆ ಸ್ವಾಧಿಷ್ಠಾನ ;**
**ಮಣಿಯ ಬೆಳಗಿನಲ್ಲಿಪ್ಪುದೆ ಮಣಿಪೂರಕ ;**
**ಆಸೆಯಿಲ್ಲದುದೆ ಅನಾಹತ ;**
**ಅಲ್ಲ ಅಹುದೆಂಬುದನತಿಗಳೆಯದಿಹುದೆ ವಿಶುದ್ಧಿ ;**
**ಸರ್ವ ಜೀವಂಗಳಲ್ಲಿ ದಯವನುಳ್ಳದೆ ಆಜ್ಞೆ ;**
**ಇಂತಪ್ಪುದೀಗ ಶಿವಯೋಗ.**
**ಉಳಿದ ಅಭ್ಯಾಸ ಯೋಗಿಗಳ ಕಂಡು ನಗುತಿರ್ದೆನಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೆ ಎಂಬ ಆರು ಚಕ್ರಗಳನ್ನು ತನುವಿನಲ್ಲಿ ಹೆಸರಿಸಿದ್ದಾರೆ. ಆಧಾರ ನಂತರದಲ್ಲಿ ಬರುವುದೇ ಸ್ವಾಧಿಷ್ಠಾನ. ಈ ಮೂಲಕ ಮಣಿಪೂರಕ ಚಕ್ರಕ್ಕೆ ಪ್ರಯಾಣ ಬೆಳೆಸಿ ಅನಾಹತ ತಲುಪಿ; ವಿಶುದ್ಧಿ ಮೂಲಕ ಆಜ್ಞೆ ಚಕ್ರಕ್ಕೆ ತಲುಪಿ ಸಹಸ್ರದಲ್ಲಿ ವಿರಮಿಸಬೇಕು ಎನ್ನುವ ಶಾಸ್ತ್ರ ಒಂದಿದೆ.

ತೆಲುಗು ಪ್ರಾಂತದಲ್ಲಿ ಬ್ರಹ್ಮಯ್ಯ ಎಂಬ ಜ್ಞಾನಿಯೊಬ್ಬರು ಇದ್ದರು. ಇವರು ತಮ್ಮ ಪ್ರವಚನದಲ್ಲಿ ಚಕ್ರಗಳ ಮೂಲಕ ಪರಬ್ರಹ್ಮ ದರ್ಶನ ಮಾಡುವ ಸುಳಿವನ್ನು ನೆರೆದ ಸಭಿಕರಿಗೆ ವಿವರಿಸುತ್ತಿದ್ದರು. ಆ ಸಂದರ್ಭದಲ್ಲಿ ಒಬ್ಬ ಕುಡುಕ ಜ್ಞಾನಿಗಳ ಪ್ರವಚನಕ್ಕೆ ಪ್ರಭಾವಿತನಾಗಿ ಮನೆಗೆ ಹೋಗಿ ಮಲಗಿ ನಿದ್ರಿಸುತ್ತಿದ್ದ ಹೆಂಡತಿಯನ್ನು ಕುಡುಗೋಲಿನಿಂದ ಕತ್ತರಿಸಿ ಶರೀರದಲ್ಲಿ ಆರು ಚಕ್ರಗಳನ್ನು ಹುಡುಕ ಹತ್ತಿದ. ಅವನಿಗೆ ಒಂದು ಚಕ್ರದ ದರ್ಶನವೂ ಶರೀರದಲ್ಲಿ ಆಗಲೇ ಇಲ್ಲ. ಬದಲಾಗಿ ಹೆಂಡತಿ ಸತ್ತು ಹೋದಳು. ಅವನು ಅಳುತ್ತ ಗುರುದೇವನ ಹತ್ತಿರ ಹೋಗುತ್ತಾನೆ. ಗುರುದೇವ ಅವನ ಅಜ್ಞಾನಕ್ಕೆ ಮರುಗುತ್ತಾನೆ. ಅವನ ಭಕ್ತಿಗೆ ಮೆಚ್ಚುಗೆ ವ್ಯಕ್ತಪಡಿಸಿ ಹೆಂಡತಿಯನ್ನು ಪುನಃ ಬದುಕಿಸುತ್ತಾನೆ. ಇದು ವೀರಬ್ರಹ್ಮೇಂದ್ರಸ್ವಾಮಿಯ ಒಂದು ಸಿನಿಮಾದಲ್ಲಿ ಬರುವ ಪವಾಡ.

ಸಿನಿಮಾ ನಿರ್ದೇಶಕರಿಗೆ ಜ್ಞಾನಿಗಳನ್ನು ವೈಜ್ಞಾನಿಕವಾಗಿ ತೋರಿಸಲು ಬರುವುದಿಲ್ಲ. ಪವಾಡದ ಮೂಲಕವೇ ಚಿತ್ರೀಕರಿಸುತ್ತಾರೆ. ಪವಾಡ ಸತ್ಯವಲ್ಲ. ಜ್ಞಾನಿಗಳು ಹಾಗೆ ಮಾಡುವುದಿಲ್ಲ. ಹಾಗೆ ಮಾಡಿದವನು ಜ್ಞಾನಿಯೇ ಅಲ್ಲ. ದಂತ ಕತೆಗಳ ಮೂಲಕ ಜ್ಞಾನಿಯನ್ನು ವೈಭವೀಕರಿಸುವುದು ತಪ್ಪೆಂದು ಜನಕ್ಕೆ ತಿಳಿಯುವುದೇ ಇಲ್ಲ. ಇದು ಸಕಲ ದೇಶಗಳಲ್ಲಿಯೂ ನಡೆಯುತ್ತದೆ. ಜ್ಞಾನವನ್ನು ಒಂದು ವಿಜ್ಞಾನದಂತೆ ಸರಳವಾಗಿ ಹೇಳುವ ಜ್ಞಾನಿಗಳ ಅವಶ್ಯಕತೆ ಇದೆ. ಅದು ಎಂದು ಈಡೇರುತ್ತದೋ ಕಾದು ನೋಡಬೇಕು.

ಈ ಆರೂ ಚಕ್ರಗಳನ್ನು ದೇಹದ ಯಾವ ಭಾಗದಲ್ಲಿ ಹುಡುಕಿದರೂ ಸಿಕ್ಕುವುದಿಲ್ಲ. ಸ್ವತಃ ಮನವೇ ಒಂದು ಚಕ್ರ. ತಾನೇ ಚಕ್ರವ್ಯೂಹವನ್ನು ರಚಿಸಿಕೊಂಡು ಅದರ ಸುಳಿಯಲ್ಲಿ ತಾನೇ ಸಿಕ್ಕಿದೆ. ಆ ಚಕ್ರವ್ಯೂಹದ ಸುಳಿಯಿಂದ ಪಾರಾಗಲು ತನಗೆ ಸಾಧ್ಯವಾಗುತ್ತಿಲ್ಲ. ಹೀಗಾಗಿ ಭ್ರಮೆಯಿಂದ ಆರು ಚಕ್ರಗಳನು ಹೆಸರಿಸಿ; ಒಂದೊಂದು ಚಕ್ರವನ್ನು ಒಂದೊಂದು ಸ್ಥಾನದಲ್ಲಿರಿಸಿ ಆ ಸ್ಥಾನದ ಮೂಲಕ ಮತ್ತೊಂದು ಸ್ಥಾನಕ್ಕೆ ಪ್ರಯಾಣ ಬೆಳೆಸಿ ನೆತ್ತಿಯಲ್ಲಿರುವ ಆಜ್ಞೆಗೆ ತಲುಪುವ ಒಂದು ಭ್ರಮಾಸೂತ್ರವನ್ನು ಮನ ಕಂಡುಕೊಂಡಿದೆ. ಹಾಗೆ ತಲುಪಿ ತಾನು ಜ್ಞಾನಿಯಾಗುವ ಮಾರ್ಗವನ್ನು ಶಾಸ್ತ್ರದ ಮೂಲಕ ಇತರರಿಗೆ ಬೋಧಿಸುತ್ತದೆ. ಇದೊಂದು ಭ್ರಮೆ ಎಂದು ಶರಣರು ಖಚಿತವಾಗಿ ಸಾರಿದ್ದಾರೆ. ಹಾಗೆ ಚಕ್ರಗಳ ಮೂಲಕ ಶರಣರು ಪ್ರಯಾಣಿಸಲು ಹೋಗಿ ವಿಫಲರಾಗಿ ಇದು ಭ್ರಮೆಯೆಂದು ಅವರೇ ಖಚಿತವಾಗಿ ಹೇಳಿದ್ದಾರೆ.

ಅಂಗದಲ್ಲಿ ಅರಿವೆಂಬ ಲಿಂಗವಿದೆ. ಅಂಗವನ್ನು ಮನವೆಂಬ ಸೂಕ್ಷ್ಮಾಂಗ ಆವರಿಸಿಕೊಂಡಿದೆ. ಹೀಗೆ ಅಂಗ ತ್ರಿಕೂಟ ಸಂಗಮ ಎನ್ನಿಸಿಕೊಂಡಿದೆ. ಸುಳ್ಳು ಸಂಸಾರದ ಚಕ್ರವ್ಯೂಹದಲ್ಲಿ ಸಿಲುಕಿಕೊಂಡ ಮನಕ್ಕೆ ಅರಿವಾದರೆ ಸಾಕು; ತನಗೆ ಯಾವ ಅಭ್ಯಾಸದ ಅವಶ್ಯಕತೆಯೂ ಇಲ್ಲ.

**166**

**ಆಧೇಯಾಧಾರವಿಲ್ಲದಂದಿನ ಶ್ರೀವಿಭೂತಿಯನೆನ್ನ**
**ಲಲಾಟದಲ್ಲಿ ಪಟ್ಟವ ಕಟ್ಟಿದನಯ್ಯಾ , ಎನ್ನ ತಂದೆ ಬಸವಣ್ಣನು.**

**ಆ ವಿಭೂತಿಯನೆನ್ನಂಗದಲ್ಲಿ ಧರಿಸಿದಲ್ಲದೆ**
**ಲಿಂಗಾರ್ಚನೆ ಮಾಡೆನಯ್ಯಾ.**
**ಆ ವಿಭೂತಿಯನಾಗಮಸ್ಥಾನವನರಿದು ಧರಿಸಿ**
**ನಿಮ್ಮಡಿಯ ನಂಬಿದೆನಯ್ಯಾ.**
**'ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಆತ್ಮವನ್ನು ಬಿಟ್ಟು ತನುವಿಲ್ಲ. ತನುವಿಗೆ ಆಧಾರವಾದಾತ ಅರಿವೆಂಬ ಗುರುದೇವ. ತನುವನ್ನು ಆವರಿಸಿದ ಮನವೇ ಶಿಷ್ಯ. ಮನವೆಂಬ ಶಿಷ್ಯ ಅರಿವೆಂಬ ಗುರುದೇವನನ್ನು ಅರಿಯದಿದ್ದರೆ ತನು ನರಕಕ್ಕೆ ಭಾಜನ. ಅದು ಸೆಗಣೆಗೆ ಸಮ. ಇಂತಹ ಸೆಗಣೆಯನ್ನು ಕುರುಳು ಮಾಡಿ ಒಣಗಿಸಿ ಸುಟ್ಟು ವಿಭೂತಿಯನ್ನಾಗಿಸಿ, ಹಣೆಗೆ ಧರಿಸಿ ಅರಿವಿನ ಪಟ್ಟ ಕಟ್ಟುತ್ತಾನೆ ಗುರುದೇವ.

ಎನ್ನ ಅಜ್ಞಾನವೆಂಬ ಸೆಗಣೆಯನ್ನು ಸುಟ್ಟು ವಿಭೂತಿಯನ್ನಾಗಿಸಿ ಬಸವಣ್ಣ ಎನ್ನ ಲಲಾಟದಲ್ಲಿ ಪಟ್ಟವ ಕಟ್ಟಿದ ಕಾರಣ ಆತ ಎನಗೆ ತಂದೆ. ಹಡೆದ ತಂದೆ ಮಾಂಸ ಪಿಂಡಕ್ಕೆ ಜನ್ಮ ಕೊಟ್ಟರೆ ಪಡೆದ ತಂದೆ ಜ್ಞಾನ ಕಾಯಕ್ಕೆ ಜನ್ಮ ಕೊಡುತ್ತಾನೆ. ಹೀಗಾಗಿ ಜ್ಞಾನ ಕಾಯವನ್ನು ಹಡೆದ ತಂದೆಯನ್ನು ಸಿದ್ಧರಾಮ ಶಿವಯೋಗಿಗಳು ಹಡೆದ ತಂದೆ ಎನ್ನ ತಂದೆ ಬಸವಣ್ಣ ಎಂದು ಕರೆದಿದ್ದಾರೆ.

ಆ ವಿಭೂತಿಯೆನ್ನಂಗದಲ್ಲಿ ಧರಿಸಿದಲ್ಲದೆ ಲಿಂಗಾರ್ಚನೆ ಮಾಡೆನಯ್ಯಾ :

ವಿಭೂತಿಯನ್ನು ಹಣೆಗೆ ಅಂಗದ ನಾನಾ ಭಾಗಗಳಿಗೆ ಧರಿಸಬಹುದು. ಆದರೆ ಅಂಗದಲ್ಲಿ ಅಂದರೆ ಅಂಗದೊಳಗೆ ಧರಿಸುವುದು ಜಟಿಲ. ಹಣೆಗೆ ಧರಿಸುವ ವಿಭೂತಿ ತೋರಿಕೆಯದು. ತಾನು ಲಿಂಗಾಯತ ಎಂದು ತೋರಿಸುವುದಕ್ಕಾಗಿ ಹಣೆಗೆ ವಿಭೂತಿ ಧರಿಸುತ್ತಾರೆ. ಸಿದ್ಧರಾಮ ಶಿವಯೋಗಿಗಳು ಹೇಳುವ ವಿಭೂತಿಯೇ ಬೇರೆ. ಅಜ್ಞಾನವೆಂಬ ಸೆಗಣೆಯ ಗುಣವುಳ್ಳ ಮನೋಕಾಯವನ್ನು ಸುಟ್ಟು ವಿಭೂತಿಕಾಯವನ್ನಾಗಿ ಮಾಡಿಕೊಂಡು ಆ ಕಾಯದ ಮೂಲಕ ಎಚ್ಚರದಿಂದ ನೋಡುವುದು. ಎಚ್ಚರದಿಂದ ಮುಟ್ಟುವುದು. ಎಚ್ಚರದಿಂದ ಮೂಸಿಸುವುದು. ಎಚ್ಚರದಿಂದ ಸ್ಪರ್ಶಿಸುವುದು. ಎಚ್ಚರದಿಂದ ರುಚಿಸುವುದು. ಎಚ್ಚರದಿಂದ ಕೇಳುವುದು. ಹೀಗೆ ಮಾಡುವುದೇ ಅಂಗದ ಲಿಂಗಾರ್ಚನೆ ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಮನೋಕಾಯವೆಂಬುದು ಅರಿವೆಂಬ ಗುರುದೇವನ ಮೂಲಕ ಜನ್ಮ ಪಡೆದಿದ್ದರೂ ಅದು ತಾನು ಬಂದ ಜಾಗವನ್ನೇ ಮರೆತಿದೆ. ಅದರ ಆಗಮ ಸ್ಥಾನವನರಿದು ವಿಭೂತಿಯ ಧರಿಸಿ ಗುರುದೇವನ ಅಡಿದಾವರೆಗಳಿಗೆರಗಿದಾಗ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**167**

**ಆನಂದದಗ್ನಿಯ ಆನು ತರಹೋದರೆ**
**ಸಾಧಿಸಿದವಯ್ಯ ಎನ್ನ ಕರ್ಮಂಗಳು,**
**ಭೇದಿಸಿದವಯ್ಯ ಎನ್ನ ಕರಣಂಗಳು,**
**ಆಮೋದಾವಾದವಯ್ಯ ಎನ್ನ ಅವಯವಂಗಳು.**
**ಆನಂದ ಸ್ಥಾನದ ಆದ್ಯಕ್ಷರಂಗಳ ಭೇದಿಸಿಹೆನೆಂದರೆ**
**ಅದು ಸಾಧ್ಯವಿಲ್ಲ.**
**ಆಧಾರದ ಆನತದ ಭೇದವನರಿದಾತ ಸಾಧಿಸಿದನ್ನೆ**

**ಎನ್ನ ಕಪಿಲಸಿದ್ಧ ಮಲ್ಲೇಶ್ವರನ.**

ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವುಗಳನ್ನು ಕರಣಂಗಳು ಎಂದು ಕರೆಯುತ್ತಾರೆ. ಇಲ್ಲಿ ಆನಂದವೂ ಇದೆ; ಅಗ್ನಿಯೂ ಇದೆ. ಸುಖವೂ ಇದೆ; ದುಃಖವೂ ಇದೆ. ಹಾಗೆಯೇ ಪರಮಾನಂದವೂ ಸಂಗಮವಾಗಿದೆ.

ನೋಡುವಾಗ ಕಣ್ಣಿನಲ್ಲಿ ಸುಖವೂ ಉಂಟಾಗುತ್ತದೆ; ದುಃಖವೂ ಉಂಟಾಗುತ್ತದೆ. ನೋಡುವಾಗ ಸುಖವಾಗುತ್ತದೆ. ನೋಡಿದ ನೋಟ ಹಾದರದ ನೋಟ; ಅದು ಸುಖವಲ್ಲ ಎಂದು ದುಃಖದ ಸಂದೇಶವನ್ನು ನೋಟದ ಮೂಲಕವೇ ನೀಡುತ್ತದೆ. ನೋಡುವಾಗ ಸುಖವಾದರೂ ದುಃಖವೇ ದುಃಖವಾದರೂ ದುಃಖವೇ. ನೋಡುವ ನೋಟವನ್ನು ನೋಟದ ಮೂಲಕ ಭೇದಿಸಲು ಹೋದಾಗ ಆ ನೋಟಕ್ಕೆ ಪರಮಾನಂದದ ನೋಟ ಗೋಚರಕ್ಕೆ ಬರುತ್ತದೆ. ಅದು ಆನಂದ ಅಗ್ನಿ. ಅಜ್ಞಾನದ ನೋಟವನ್ನು ಸುಟ್ಟು ಭಸ್ಮವಾಗಿಸುವ ಅಗ್ನಿ. ಈ ಅಗ್ನಿಯ ಆನಂದ ನೋಡಲು ಹೋದ ನೋಟಕ್ಕೆ ಪ್ರಾಪ್ತಿಯಾಗುತ್ತದೆ. ಸದಾ ಹಾದರದ ಸುಖ ದುಃಖಗಳನ್ನು ಅನುಭವಿಸುವ ಕಾಮದ ಕಣ್ಣಿಗೆ ಮುಕ್ಕಣ್ಣನ ಕಣ್ಣು ಪರಿಚಯವಾಗುತ್ತದೆ. ಕಾಮದ ಕಣ್ಣು ಮುಕ್ಕಣ್ಣನ ಉರಿಗಣ್ಣಿಗೆ ಆಹುತಿಯಾಗಿ ಮನ್ಮಥನ ಕಣ್ಣು ಮಾತ್ರ ಉಳಿಯುತ್ತದೆ. ಈ ಕಣ್ಣಿನಿಂದ ಕಣ್ಣಿಗೆ ಕೇಡಿಲ್ಲ. ಏಕೆಂದರೆ ಕಣ್ಣಿನ ಪೊರೆ ಸುಟ್ಟುಕೊಂಡು ಜ್ಞಾನದ ಕಣ್ಣಲ್ಲಿ ಕಣ್ಣು ಸಂಗಮವಾಗಿದೆ.

ಇಡೀ ದೇಹಕ್ಕೆ ಜ್ಞಾನ ಕಣ್ಣಿನ ಆಮೋದದ ಆನಂದವನ್ನು ಅನುಭವಿಸುತ್ತದೆ. ಅದು ಸಕಲ ಕಣ್ಣುಗಳಿಗೂ ಸಾಧ್ಯವಾಗುವುದಿಲ್ಲ. ಯಾವ ಕಣ್ಣಿಗೆ ಕಣ್ಣಲ್ಲಿಯೇ ಇರುವ ಅಜ್ಞಾನವನ್ನು ನಷ್ಟ ಮಾಡಿಕೊಳ್ಳಬೇಕೆಂಬ ಬಯಕೆಯಾಗುತ್ತದೆಯೋ ಆ ಕಣ್ಣು ಮಾತ್ರ ಕಣ್ಣಲ್ಲಿಯೇ ಸಂಗಮವಾದ ಜ್ಞಾನದ ಕಣ್ಣನ್ನು ಹುಡುಕಲು ಹೋಗುತ್ತದೆ.

ಕಣ್ಣಿಗೆ ಆಧಾರವಾದ ಮುಕ್ಕಣ್ಣನ ಕಣ್ಣಿನ ದರ್ಶನ ಪಡೆಯಲು ಬಯಕೆಯಾದಾಗ ಕಣ್ಣಿಗೆ ಮಾತ್ರ ಆ ದಿವ್ಯದರ್ಶನ ಸಾಧ್ಯವಾಗುತ್ತದೆ. ಕಣ್ಣಲ್ಲಿಯೇ ನಡೆಯುವ ಚಮತ್ಕಾರದ ಭೇದವನು ಅರಿದು ಭೇದಿಸಿದ ಕಣ್ಣೇ ಜಾಣಕಣ್ಣು. ಬೇಡದ ಅಜ್ಞಾನದ ಕಣ್ಣನ್ನು ಶಿವನಿಗೆ ಅರ್ಪಿಸಿ ಶಿವನ ಕಣ್ಣನ್ನು ಪಡೆದ ಕಣ್ಣಪ್ಪನ ಕಣ್ಣೆಂದು ಹೆಸರು ಪಡೆಯುತ್ತದೆ.

ಕಾಯದ ಸಕಲ ಅವಯವಗಳೂ ಈ ಸೂತ್ರದ ಮೂಲಕ ಅಜ್ಞಾನವನ್ನು ಕಳೆದುಕೊಂಡರೆ ಸಾಕು– ಆ ಕಾಯವೇ ಕೈಲಾಸವೆನ್ನಿಸಿಕೊಳ್ಳುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜನನೇ ತಾನಾಗುತ್ತದೆ.

**168**

**ಆನಂದದ ಬ್ರಹ್ಮನಲಿ ತಾನೊಂದು ರೂಪಾಗಿ**
**ತಾನು ತನ್ನೊಳಗೆ ತುರಿಯಾತುರಿಯದ**
**ಭಾನುವಿನ ಉದಯದೊಳು ಆನತವು ಕಮಳಕ್ಕೆ**
**ಸ್ವಾನುಭೂತ್ಯೆಕ್ಯದೊಳು ತನುಲಿಂಗದ**
**ಸೀಮೆಯನು ಪರದಲ್ಲಿ ಭಾವವನು ಮನದಲ್ಲಿ**
**ಆನತದ ದೀಕ್ಷಿತಾ ತನುತ್ರಯದಲಿ**
**ನಾಮದರ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬವನ**
**ಕಾಮ್ಯಾರ್ಥದಲಿ ತಾನು ಕಾಣಲರಿದು.**

ತನುವನ್ನು ತನುವೆಂದು ನೋಡಲು ಸಾಧ್ಯವಾಗದಷ್ಟು ಅಜ್ಞಾನ ತನುವಿನಲ್ಲಿ ತುಂಬಿದೆ. ತನುವಿನಲ್ಲಿಯ ಆನಂದ ತನುವಿಗೆ ಸ್ವೀಕರಿಸಲು ಸಾಧ್ಯವಾಗುತ್ತಿಲ್ಲ. ತನುವಿನಲ್ಲಿ ಸದಾ ಪರಮಾನಂದದ ಬ್ರಹ್ಮರಸ ಉಕ್ಕಿ ಹರಿಯುತ್ತಿದೆ ಎಂದು ತನುವಿಗೆ ಗೊತ್ತಾಗುತ್ತಿಲ್ಲ.

ಬ್ರಹ್ಮರಸ ಪಾನ ಮಾಡಿ ಪರಮಾನಂದದಲ್ಲಿ ಸದಾ ಲೀನವಾದ ತನುವಿನ ಸಹಾಯದಿಂದ ತನು ತನ್ನ ದುಃಖ ನಿವಾರಿಸಿಕೊಳ್ಳಬೇಕು. ಅಂತಹ ಗುರುರೂಪದ ತನು ತನುವಿಗೆ ಲಭ್ಯವಾಗಬೇಕು. ಆಗ ತನುವು, ತನುವಿನಲ್ಲಿಯೆ ತನುತ್ರಯದ ಸಂಪತ್ತನ್ನು ತನುವಿಗೆ ತೋರಿಸುತ್ತದೆ.

ಸದಾ ಆನಂದ ಬ್ರಹ್ಮದಲ್ಲಿ ಲೀನವಾದ ತನುವೊಂದು ಇದೆ. ಅದು ನಿರೂಪು. ಈ ನಿರೂಪ ತನುವನ್ನು ಹೊತ್ತುಕೊಂಡ ತನುವೊಂದಿದೆ. ಇದು ರೂಪವುಳ್ಳದ್ದು. ಈ ರೂಪವುಳ್ಳ ತನುವನ್ನು ಆವರಿಸಿಕೊಂಡ ಮತ್ತೊಂದು ತನು ಇದೆ. ಇದು ಕೂಡ ನಿರೂಪು. ಇದನ್ನು ಸೂಕ್ಷ್ಮ ತನುವೆಂದು ಹೆಸರಿಸಲಾಗಿದೆ. ಹೀಗೆ ತನು ತನುತ್ರಯವೆಂದು ಹೆಸರಿಸಿಕೊಂಡಿದೆ.

ಸ್ಥೂಲ ತನುವನ್ನು ಆವರಿಸಿಕೊಂಡ ಸೂಕ್ಷ್ಮ ತನು, ಸ್ಥೂಲ ತನುವಿನ ಸಂಗ ಬಿಟ್ಟು ಆನಂದ ಬ್ರಹ್ಮ- ತನುವಿನ ಸಂಗ ಮಾಡಿದಾಗ, ಸೂಕ್ಷ್ಮತನು ಪರಮಾನಂದವನ್ನು ಅನುಭವಿಸಿ, ಆನಂದ ಬ್ರಹ್ಮವೇ ತಾನಾಗುತ್ತದೆ.

ಸೂರ್ಯನ ಉದಯ ಕಿರಣಗಳಿಂದ ಅರಳಿದ ಕಮಲ, ಆ ಕಿರಣಗಳ ಸುಖ ಉಣ್ಣುತ್ತಾ ಇಡೀ ದಿನ ಕಳೆದಂತೆ ಮನ ತನ್ನ ಸಂಪೂರ್ಣ ಆಯುಷ್ಯವನ್ನು ಬ್ರಹ್ಮಾನಂದ ಅನುಭವಿಸುತ್ತಾ ಆ ಬ್ರಹ್ಮನಲ್ಲಿಯೇ ಐಕ್ಯವಾಗುತ್ತದೆ.

ತನುವಿನ ನಡೆ ನಾಮ ಕಳೆದುಕೊಂಡು ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ನಿಜ ನಾಮದ ಕಾಮ್ಯಾರ್ಥ ಸುಖವನ್ನು ಪಡೆಯುತ್ತದೆ.

**169**

**ಆನಂದಲೋಕದಲಿ ತಾನೊಂದು ರೂಪಾಗಿ**
**ಸಾನಂದವನು ಬೆಳೆಸಿ ಹಲವರೊಳು**
**ಹಲವು ಬಣ್ಣದ ಹಕ್ಕಿ ಶೂನ್ಯವ ನುಂಗಿದ**
**ಕುರುಹಿಲ್ಲದ ಯೋಗಕ್ಕೆ ನೆಲೆ ಮುನ್ನಿಲ್ಲ.**
**ಅನಿಮಿಷನೆಂಬಾತನ ಕರಸ್ಥಲದಲ್ಲಿ ಸಕಲಯೋಗವಡಗಿತ್ತು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಯಲು ತಾನು ರೂಪಾಗಿ ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು, ಪರಮಾನಂದದಿಂದ ಕಣ್ತುಂಬ ನೋಡಿ, ಆನಂದ ಪಡಬೇಕೆಂಬ ಬಯಕೆ ಹೊತ್ತು, ತನುವಾಗಿದೆ. ಬಣ್ಣ ಬಣ್ಣದ ಹಕ್ಕಿಯಂತೆ ಭೂಮಂಡಲವನ್ನು ವ್ಯಾಪಿಸಿದೆ. ಬಯಲು ಬೀಜವಾಗಿ ಆ ಬೀಜವನ್ನು ಬಯಲಲ್ಲೇ ಬಿತ್ತಿ, ಬಯಲು ಬಯಲನ್ನೇ ಬೆಳೆದಿದೆ.

ಬೀಜ ವೃಕ್ಷ ನ್ಯಾಯದಂತೆ, ಬಯಲ ಬೀಜ, ಬಯಲನ್ನೇ ಗರ್ಭದಲ್ಲಿಟ್ಟುಕೊಂಡು ಬಯಲ ವೃಕ್ಷವಾಗಿ, ತನು ಎಂಬ ಹೆಸರು ಪಡೆದು, ಹೆಸರಿಲ್ಲದ, ಬೇರಿಲ್ಲದ, ಬೋಧೀ ವೃಕ್ಷವಾಗಿ ಬೋಧೆ ಮಾಡುತ್ತ, ಮಾಡಿದ ಆ ಬೋಧೆಯನ್ನು ಬೋಧೆಯಂತೆಯೇ ಆಲಿಸುತ್ತ ಶೂನ್ಯ ನುಂಗಿ ಶೂನ್ಯದಲ್ಲಿಯೇ ಸುಳಿದಾಡುತ್ತಲಿದೆ.

ಕುರುಹಾಗಿ ಕಂಡರೂ ಕಾಣುವ ಕುರುಹಿನಲ್ಲಿ ಅರಿವೇ ಭರಿತವಾಗಿದೆ. ಆ ಅರಿವು ಕುರುಹಿನ ಸಂಗ ಮಾಡಿಲ್ಲ. ಆದರೂ ಕುರುಹಿನಲ್ಲಿಯೇ ಇದೆ. ಕುರುಹಿಂಗೆ ಆಧಾರವಾಗಿದೆ. ಕುರುಹು ಸೋಂಕದೆ ಕುರುಹನ್ನೇ ಬೆಳಗುತ್ತಲಿದೆ. ಆ ಅರಿವು ಗುರುದೇವನಾಗಿ ಕಾಣುವುದಕ್ಕಾಗಿ ಕುರುಹಾಗಿದೆ.

ಕುರುಹಿನಲ್ಲಿ ಅರಿವೆಂಬ ಗುರುದೇವನೇ ಸಂಗಮವಾಗಿದ್ದಾನೆ. ಆತನ ಗರ್ಭದಲ್ಲಿ ಸಕಲ ಯೋಗಗಳೂ ಉಪನಿಷತ್ತು ಬೈಬಲ್ ಭಗವದ್ಗೀತೆಗಳು ಅಡಗಿವೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನೇ ಅಡಗಿದ್ದಾನೆ.

**170**

**ಆನಂದವೆಂಬ ತರತರಂಗಳಲಿ**
**ಒಡನೆ ಆಡಿದೆನಯ್ಯಾ .**
**ಆಡಿದ ಚಿತ್ರವು ವಿಚಿತ್ರವಾಯಿತಯ್ಯ,**
**ನಿನ್ನ ಕೂಟದ ಸಂಗಮು ಆರರಲ್ಲಿ ಮೀರದಿದ್ದ ಕಾರಣ**
**ಎನಗೆ ಸಮನಿಸಿತು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ .**

ಕೈಲಾಸವೇ ತಾನಾಗಬೇಕಾದ ಕಾಯದ ಆಟ ಒಂದಲ್ಲ ಎರಡಲ್ಲ. ನಾನಾ ವಿಧದ ಆಟ! ಸುಖದ ಆಟ. ದುಃಖದ ಆಟ. ಭಿತ್ತಿಯಲ್ಲೂ ಬರೆದ ನಾನಾ ಚಿತ್ರದ ವಿಚಿತ್ರ ಆಟ. ಮಸಿಯನ್ನು, ಬರೆದ ಕುಂಚವನ್ನು, ವಿಚಿತ್ರವಾಗಿ ಚಿತ್ರ ತೋರುವ ಭಿತ್ತಿಯನ್ನು, ಭಿತ್ತಿಯಲ್ಲಿ ಬರೆದ ಕಲಾವಿದನನ್ನು ಮೈಮರೆಸುವ ವಿಚಿತ್ರ ಆಟ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿನ್ನ ಕೂಟದ ಸಂಗಮದಿಂದ ಸಕಲವೂ ಮರೆತು ಸಮನಿಸಿತ್ತು ತಂದೆ.

ನಿನ್ನ ಕೂಟದ ಸಂಗಮ ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೆ ಎಂಬ ಆರು ತತ್ವಗಳನ್ನು ಮೀರದಿದ್ದ ಕಾರಣ ನಿನ್ನ ದರುಶನ ಎನಗೆ ಸಮನಿಸಿತ್ತು ನೋಡಾ.

ಪರಮಾನಂದವೆಂಬ ತರತರಂಗಗಳಲ್ಲಿ ಒಡನೆ ಆಡಿದೆನಯಾ. ಆಡಿದ ಚಿತ್ರವು ವಿಚಿತ್ರವಾಗಿ ಕೆಟ್ಟಿತ್ತಯ್ಯಾ. ನಿನ್ನ ಕೂಟದ ಸಂಗದಿಂದಾಗಿ.

**171**

**ಆನಂದ ಸ್ಥಳದಲ್ಲಿ ಊರ್ಧ್ವ ಕಂಜಕನ್ನಿಕೆಗೆ**
**ಇಂದುವಿನ ಕೊಡನ ಹೊತ್ತಾಡುತ್ತೈದಾಳೆ.**
**ಮೂಲಪಟ್ಟಣದಲ್ಲಿ ಮೂವರಿಗೆ ರತಿಯ ಹುಟ್ಟಿಸುತ್ತೈದಾಳೆ.**
**ಅಪರಪಟ್ಟಣದಲ್ಲಿ ಹಲವರಿಗೆ ಆಶ್ರಯವಾಗಿ ಐದಾಳೆ.**
**ಮಧ್ಯಮ ಪಟ್ಟಣದಲ್ಲಿ ಮಹಾಮಹೀಶ್ವರರಿಗೆ**
**ಮಹದಾಶ್ರಯವಾಗಿ ಐದಾಳೆ.**
**ಇಂತು ಪಟ್ಟಣ ಹದಿನೆಂಟಕ್ಕೆ ಸೀಮೆ ಇಪ್ಪತ್ತೈದು,**
**ಗ್ರಾಮ ಮೂವತ್ತಾರು ಸಂಯೋಗವೆಂಬ ನಗರಿಯಲ್ಲಿ**
**ನಿತ್ಯಸಾನಂದನೆಂಬಾತ ಕುಳ್ಳಿದ್ದು,**

**ಪಟ್ಟಣ ಹದಿನೆಂಟರ ವ್ಯಾಪ್ತಿಯ**
**ತಳವಾರರೆಂಟು ಮಂದಿಯ**
**ಗ್ರಾಮ ಬಂಧನೆಯ ಮಾಡಲೀಯದೆ**
**ಸುಚಿತ್ತದಿಂ ನಡೆಸುತ್ತೈದಾನೆ.**
**ನೆನೆವ ಮನಸ್ಸಿನಲ್ಲಿ ಅವಿತಥವಿಲ್ಲದೆ**
**ಚಿತ್ತವೃತ್ತಿಯನ್ನರಿತು ಮಹಾಲೋಕದಲ್ಲಿಪ್ಪ**
**ಮುನ್ನೂರ ಮೂವತ್ತಮೂರು ಕುಲದುರ್ಗಂಗಳಂ ಪಾಟಿಸಿ**
**ಸುಯಿಧಾನಿಯಾಗಿರುತ್ತೈದಾನೆ.**
**ಅಜಲೋಕದಲ್ಲಿ, ಶುದ್ಧಸಂಯೋಗ ಸಂಗಮವೆಂಬ ಗೃಹದಲ್ಲಿ.**
**ಮೂಲಕ ಮುಕ್ತಕಾ ರುದ್ರಕ ಅನುಮಿಷಕ**
**ಆಂದೋಳಕ ವಿಚಿತ್ರಕ ಸಕಲ ಮುಕ್ಯಕ್ಕ, ಸಾನಂದ ಸತ್ಯಕ್ಕ**
**ಇಂತಪ್ಪ ಮಹಾಸ್ತ್ರೀಯರ ಚಿತ್ತಕ್ಕೆ**
**ಸಗುಣವಪ್ಪುದನೊಂದನೆ ಕೂಡಿ ಭೋಗಿಸುತ್ತೈದಾನೆ.**
**ಅವರು ಸ್ತ್ರೀಯರು, ತಾ ಪುರುಷನಾಗಿ ಕೂಡುತ್ತೈದಾನೆ, ಅವಿತಥವಿಲ್ಲದೆ.**
**ಆ ಕೂಟದ ಸುಖವನು ಶಿಶು ಬಲ್ಲ.**
**ಶಿಶುವಿನ ಜನನವನು ಅವ್ವೆ ಬಲ್ಲಳು.**
**ಅವ್ವೆಯ ಇಚ್ಛಾ ಮಾತ್ರದಲ್ಲಿದ್ದು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ**
**ತ್ರೈಲಿಂಗಕ್ಕೆ ಮೂಲವಾದಳವ್ವೆ.**

ತನುವೆಂಬುದೊಂದು ಜಲಸಾಗರ. ಜೀವಜಲಬಿಂದುವೇ ಗರ್ಭದಲ್ಲಿ ಹೊಕ್ಕು, ಜಲಸಾಗರವಾಗಿ ಚರ್ಮದ ಕವಚ ಹೊಂದಿ ಹೊರ ಬಂದು ಅರಳಿ ನಿಂತಿದೆ. ರಕ್ತವಾದದ್ದು ಜಲ, ಅಸ್ತಿಯಾದದ್ದು ಜಲ, ಮಾಂಸ ಮಜ್ಜೆ ಮೇದಸ್ಸು ಆದದ್ದು ಜಲ, ನಖ ಶಿಖೆಯಾದದ್ದು ಜಲ. ಜಲ ಸೋರದಂತೆ ಸುಂದರವಾದ ಕೋಮಲವಾದ ಚರ್ಮ ಹೊಲಿದುಕೊಂಡಿದ್ದು ಕೂಡಾ ಜಲದಿಂದಲೇ.

ಜಲರಾಶಿಯಲ್ಲಿ ಅರಳಿದ ತಾವರೆಯ ಕನ್ಯೆಯೇ ತನು. ಜಲದಿಂದಲೇ ಮಣ್ಣು. ಜಲದಿಂದಲೇ ತಾವರೆ. ಜಲದಲ್ಲಿ ಹುಟ್ಟಿ, ಜಲವನ್ನು ಉಂಡು, ಜಲದಲ್ಲಿ ನಿಂತು, ಜಲ ತಾಗಿಸಿಕೊಳ್ಳದೆ ಸೂರ್ಯನಿಗೆ ಮುಖ ಮಾಡಿ, ಊರ್ಧ್ವ ಮುಖಿ ಎನ್ನಿಸಿಕೊಂಡು ಪೂರ್ಣ ಚಂದ್ರನಂತೆ ಹೊಳೆಯುತ್ತಾ ತಾವರೆ ಅರಳಿ ನಿಂತಿದೆ.

ಸ್ಥೂಲ ತನು ಎಂದು ಹೆಸರು ಪಡೆದ ತಾವರೆಯ ಕನ್ಯೆ ತನ್ನ ಮೂಲ ಪಟ್ಟಣದಲ್ಲಿ ನಿಂತು ಸ್ಥೂಲ ಸೂಕ್ಷ್ಮ ಕಾರಣ ಎಂಬ ತನುಗಳಿಗೆ ರತಿಯ ಹುಟ್ಟಿಸುತ್ತೈದಾಳೆ.

ಸೂಕ್ಷ್ಮ ತನುವೆಂಬ ಅಪರ ಪಟ್ಟಣದಲ್ಲಿ ನಿಂತು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಸಪ್ತ ವ್ಯಸನಗಳು ಅಷ್ಟ ಮದಗಳಿಗೆ ಆಶ್ರಯ ನೀಡಿದ್ದಾಳೆ.

ತನುವಿನ ಮೂಲಕ ಬುದ್ಧ ಮಹಾವೀರ ಬಸವಾದಿ ಶರಣರು ದಾಸವರೇಣ್ಯರು, ಕ್ರಿಸ್ತ, ಕ್ರಿಷ್ಣ, ಪೈಗಂಬರರಿಗೆ ಆಶ್ರಯ ನೀಡಿ ಹೌದೆನ್ನಿಸಿಕೊಂಡಿದ್ದಾಳೆ. ಮಹಾ ಮಾಹೇಶ್ವರರಿಗೆ ಮಹದಾಶ್ರಯ ನೀಡಿ ಭೇಷ್ ಎನ್ನಿಸಿಕೊಂಡಿದ್ದಾಳೆ.

ಇಂತು ಪಟ್ಟಣ ಹದಿನೆಂಟಕ್ಕೆ ಸೀಮೆ ಇಪ್ಪತ್ತೈದು :

ತನುವೆಂಬ ಪಟ್ಟಣ: ನಿಧನ, ನಿದ್ರೆ, ಚಿಂತೆ, ಲಜ್ಜೆ, ಕ್ಷುಧೆ, ತೃಷೆ, ವಿಷಯ, ಆಧಿ, ವ್ಯಾಧಿ, ಉದ್ಯೋಗ, ದಾಹ, ಶೋಷ, ರತಿ, ಸ್ವೇದ, ಕೋಪ, ಶೋಕ, ಭ್ರಮೆ, ಭಯದಿಂದ ಕೂಡಿದ ತನುವಿಗೆ ಇಪ್ಪತ್ತೈದು ಸೀಮೆಗಳಿವೆ :

ಗುದ, ಗುಹ್ಯ, ಪಾದ, ಪಾಣಿ, ವಾಕ್ಕು ಇವು ಪಂಚ ಕರ್ಮೇಂದ್ರಿಯಗಳು. ಶಬ್ದ, ಸ್ಪರ್ಶ, ರೂಪು, ರಸ, ಗಂಧ. ಇವು ಪಂಚ ತನ್ಮಾತ್ರಗಳು. ಜಿಹ್ವೆ, ನೇತ್ರ, ತ್ವಕ್ಕು, ಘ್ರಾಣ, ಶ್ರೋತ್ರ. ಇವು ಶಬ್ದಾದಿ ವಿಷಯಗಳು.

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಇವು ಪಂಚವಾಯುಗಳು. ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ ಇವು ಆಕಾಶ ತತ್ವಗಳು ಹೀಗೆ ತನುಗಳೆಂಬ ಪಟ್ಟಣಕ್ಕೆ ಸೀಮೆ ಇಪ್ಪತ್ತೈದು.

ಈ ಇಪ್ಪತ್ತೈದು ತತ್ತ್ವಗಳೊಂದಿಗೆ ವಿದ್ಯಾತತ್ವ ಹತ್ತು, ಶಿವತತ್ವ ಒಂದು ಸೇರಿ ಗ್ರಾಮ ಮೂವತ್ತಾರು ಸಂಯೋಗವೆಂಬ ನಗರಿಯಲ್ಲಿ ನಿತ್ಯ ಸತ್ಯಾನಂದನೆಂಬಾತ ಕುಳಿತಿರುವನು.

ಪಟ್ಟಣ ಹದಿನೆಂಟರ ವ್ಯಾಪ್ತಿಯ ತಳವಾರರೆಂಟು ಮಂದಿಯ ಗ್ರಾಮ ಬಂಧನೆಯ ಮಾಡಲೀಯದೆ ನಿತ್ಯ ಸಾನಂದನೆಂಬ ಪರಮಾತ್ಮನು ಕಾಯವೆಂಬ ಕೈಲಾಸವನ್ನು ಸುಚಿತ್ತದಿಂದ ನಡೆಸುತ್ತಿರುವನು.

ಕಾಯದ ಚಿತ್ತ ವೃತ್ತಿಯನ್ನರಿತು ಕಾಯವಿರುವತನಕ ಅಂದರೆ ತಾನು ಕಾಯದಲ್ಲಿರುವ ತನಕ ಸಮಾಧಾನಿಯಾಗಿ ಕಾಯುವನ್ನು ಆವರಿಸಿದ ಮಾಯೆಯನ್ನು ಕಾಯುತ್ತ ಮಹದಾನಂದದಲ್ಲಿರುತ್ತಾನೆ.

ಅಷ್ಟ ಮದಗಳನ್ನು ಕಳೆದುಕೊಂಡ ಅಷ್ಟ ಸ್ತ್ರೀಯರೊಂದಿಗೆ ಸಂಗ ಮಾಡುತ್ತ ತಾನು ಮಹಾಪುರುಷನಾಗಿ ಆ ಸ್ತ್ರೀಯರೊಂದಿಗೆ ಭೋಗಿಸುತ್ತಾನೆ. ಆ ಕೂಟದ ಸುಖವು ಬರೀ ಸುಖವಲ್ಲ. ಕೂಡದಗಲದ ಕೂಟದ ಸುಖ. ಅಂತಹ ಸುಖವನು ಶಿಶು ಬಲ್ಲ. ಶಿಶುವಿನ ಜನನವನು ಅವ್ವೆ ಬಲ್ಲಳು. ಅಂತಹ ಅವ್ವೆಯ ಇಚ್ಛಾ ಮಾತ್ರದಲ್ಲಿದ್ದು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ತ್ರೈಲಿಂಗಕ್ಕೆ ಮೂಲವಾದಳವ್ವೆ.

ಸತಿಪತಿಗಳಿಬ್ಬರು ಶಿಶುವಾಗುವ ಆ ಪರಮ ಸುಖವನ್ನು ನೀಲಮ್ಮ ತಾಯಿ ಹೀಗೆ ಬಣ್ಣಿಸಿದ್ದಾಳೆ :

ಸತಿ ಎನ್ನಬಹುದೆ ಬಸವನು ಎನಗೆ? ಪತಿ ಎನ್ನಬಹುದೆ ಬಸವನನು ಆನು? ಬಸವ ಎನಗೆ ಶಿಶುವಾದ. ಆನು ಬಸವಂಗೆ ಶಿಶುವಾದೆ ! ಇದು ಸತಿ–ಪತಿಗಳು ಒಂದಾದ ಭಕ್ತಿ ಅಂದರೆ ಸತಿಯೂ ತಾನೆ. ಪತಿಯೂ ತಾನೆ !

**172**

**ಆನಂದಸ್ಥಾನ ಅಪರಸ್ಥಾನ ಮಧ್ಯಮಸ್ಥಾನದ**
**ಭೇದಂಗಳ ಹೇಳುವೆ :**
**ಆನಂದಕ್ಕೆ ಅನೇಕ ಪರಿಯ ಬಣ್ಣ,**
**ಅರುವತ್ತೆಸಳಿನ ಕಮಳ,**

**ಹದಿನಾರಕ್ಷರ ವಿಪರೀತ,**
**ಬಹುಶ್ರುತನೆಂಬಾತನಧಿದೇವತೆ.**
**ಅಪರ ಸ್ಥಾನದಲ್ಲಿ ಅಕ್ಷರವೆರಡರ ಸಿಂಹಾಸನ,**
**ಆದಿಮಧ್ಯ ಸ್ಥಾನವಿಲ್ಲದ ಕಮಲವೊಂದು ಎಸಳು ಎರಡು**
**ಅಪರಸ್ಥಾನಕ್ಕೆ ಅಜಲೋಕಪರಿಯಂತ ವೇಧಿಸುತಿಪ್ಪ ಕಮಳ**
**ಶುದ್ಧ, ಸ್ಪಟಿಕ ಸಂಕಾಶವರ್ಣ**
**ಅವ್ವೆಯ ಆಂದೋಳದ ಕ್ರಿಯಾಕರ**
**ತತ್ವಮಸಿಯೆಂಬ ನೀಲಾಸಂಗಮ.**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಅಧಿದೇವತೆ.**

ಕಾಯದಲ್ಲಿ ಕಾಯಗಳೆರಡುಂಟು. ಕಾಯ ಕಾಣುತ್ತದೆ. ಕಾಯಗಳೆರಡು ಕಾಣುವುದಿಲ್ಲ. ಕಾಣದ ಕಾಯಗಳೆರಡು ಕಾಣುವ ಕಾಯಕ್ಕೆ ಮಾತ್ರ ಕಾಣುತ್ತದೆ. ಅನ್ಯ ಕಾಯಗಳಿಗೆ ಕಾಣುವುದಿಲ್ಲ.

ಸದಾ ಪರಮಾನಂದವನ್ನು ಉಣ್ಣುವ ಕಾಯ ಒಂದಾದರೆ ಮತ್ತೊಂದು ಅಪರಸ್ಥಾನದ ಕಾಯ. ಮಗದೊಂದು ಮಧ್ಯಮಸ್ಥಾನದ ಕಾಯ. ಪರಮಾನಂದ ಕ್ಕೆ ಪರಿಪರಿಯ ಬಣ್ಣ ಸದಾ ವಸಂತ. ಅರವತ್ತೆಸಳಿನ ಬ್ರಹ್ಮಕಮಲ. ಹದಿನಾರಕ್ಷರ. ಅಆಇಈಉಊಋಎಏಐಒಓಔ ಅಂಅಃ ಅದರ ವರ್ಣಶ್ವೇತ ವರ್ಣ. ಅದಕ್ಕೆ ಅಧಿದೇವತೆ ಸದಾಶಿವನು ಎಂದು ಅಲ್ಲಮಪ್ರಭುಗಳು ಹೇಳಿದ್ದಾರೆ. ಬಹುಶ್ರುತನೆಂಬಾತನು ಅಧಿದೇವತೆ ಎಂದು ಸಿದ್ಧರಾಮ ಶಿವಯೋಗಿಗಳು ಹೇಳುತ್ತಾರೆ. ಯಾರು ಹೇಳಿದರೂ ಸತ್ಯ ಒಂದೇ. ಶಬ್ದ ಬೇರೆ ಬೇರೆ.

ಅಪರಸ್ಥಾನದಲ್ಲಿ ಅಕ್ಷರವೆರಡರ ಸಿಂಹಾಸನ, ಆದಿ ಮಧ್ಯಸ್ಥಾನವಿಲ್ಲದ ಕಮಲವೊಂದು; ಎಸಳು ಎರಡು. ಅಪರಸ್ಥಾನಕ್ಕೆ ಅಜಲೋಕಪರಿಯಂತ ವೇಧಿಸುತಿಪ್ಪ ಕಮಳ ಶುದ್ಧ ಸ್ಪಟಿಕ ಸಂಕಾಶವರ್ಣ ಅವ್ವೆಯ ಆಂದೋಳನದ ಕ್ರಿಯಾಕರ ತತ್ತ್ವಮಸಿಯೆಂಬ ನೀಲಾಸಂಗಮ. ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಅಧಿದೇವತೆ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದರೆ:

ಭ್ರೂಮಧ್ಯ ಸ್ಥಾನದಲ್ಲಿ ಆಜ್ಞಾಚಕ್ರ, ಮನವೆಂಬ ಮಹಾಭೂತ, ತಮಂಧಕಾರ, ದ್ವಿದಳ ಪದ್ಮ, ಅಲ್ಲಿ ಇಹ ಅಕ್ಷರವೆರೆಡು ಹಂ, ಕ್ಷಂ. ಅದರ ವರ್ಣ ಮಾಣಿಕ್ಯ ವರ್ಣ, ಅದಕ್ಕೆ ಅಧಿದೇವತೆ ಶ್ರೀಗುರು ಎಂದು ಅಲ್ಲಮಪ್ರಭುಗಳು ಹೇಳಿದ್ದಾರೆ.

ಉನ್ಮನಿ ಜ್ಯೋತಿ ಬ್ರಹ್ಮರಂಧ್ರದ ಮೇಲೆ, ಸಹಸ್ರದಳ ಪದ್ಮ, ಅಲ್ಲಿ ಅಮೃತವಿಹುದು, ಅಲ್ಲಿ 'ಓಂ'ಕಾರ ಸ್ವರೂಪವಾಗಿ ಮಹೇಶ್ವರ ಲಿಂಗವು ಸದಾ ಸನ್ನಿಹಿತನು.

ಕಾಯದ ಭ್ರಮೆ ಕಳೆದುಕೊಂಡು ಬ್ರಹ್ಮರಸಪಾನ ಮಾಡುವ ಯಾತ್ರೆ ಸಕಲ ಕಾಯಗಳ ಕಾಯಕವಾಗಬೇಕು ಎಂಬ ಕಳಕಳಿ ಶರಣರದು.

**173**

**ಆನಂದ ಸ್ಥಾನದಲ್ಲಿ ಅರ್ಪಿತವಾರರಲ್ಲಿ ಅರ್ಪಿಸುವ ಭೇದ;**
**ಅನಿಮಿಷವೆಂಬ ಆನಂದಸ್ಥಾನದಲ್ಲಿ ನಿತ್ಯಾರ್ಪಿತದ ತೃಪ್ತಿಯ ಭೇದ;**
**ಸಂಯೋಗ ಸಮನಿಸಿ ಅರ್ಪಿಸುವ ಮುಖದಲ್ಲಿ ಆರುವಿಧದಾನಂದ.**
**ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕು ಪಂಚೇಂದ್ರಿಯಂಗಳ**

**ಭೇದವಲ್ಲದೆ, ಲಿಂಗಪ್ರಾಣವ ಮಾಡಿ ನಿಜಪ್ರಸಾದವ ನೆಲೆಗೊಳಿಸುವ ಭೇದ;**
**ಅರುವತ್ತುನಾಲ್ಕು ಅನುಬಂಧಂಗಳಿಂದವೆ**
**ನೂರೆಂಟು ಕರಣಂಗಳಲ್ಲಿ ಸ್ವಾದಿಸುವ ಸುಖಿಸುವ**
**ಭೇದವನಾರು ಬಲ್ಲರಯ್ಯಾ?**
**ದೀಕ್ಷೆಯಲ್ಲಿ ದಿವ್ಯಜ್ಞಾನಿ, ಶಿಕ್ಷೆಯಲ್ಲಿ ಸಮ್ಯಗ್‌ಜ್ಞಾನಿ,**
**ಸ್ವಾನುಭಾವದಲ್ಲಿ ತಾನೆ ರೂಪು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಅವಗ್ರಹಿಸಿದ ಪ್ರಸನ್ನ ಪ್ರಸಾದಿಯ**
**ಅರು ಬಲ್ಲರಯ್ಯಾ, ನೀನು ನಿನ್ನ ಶರಣರಲ್ಲದೆ?**

ತನುವಿನ ಐದು ಜ್ಞಾನೇಂದ್ರಿಯಗಳಲ್ಲಿ ಪರಮಾನಂದವೇ ಭರಿತವಾಗಿದೆ. ಹಾಗೆಯೇ ಅಲ್ಲಿಯೇ ತನುವನ್ನು ಭಂಗಪಡಿಸುವ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಕೂಡಾ ಜನಿಸಿವೆ.

ಐದು ಜ್ಞಾನೇಂದ್ರಿಯಗಳಲ್ಲಿ ಸಂಗಮವಾದ ಅನಿಮಿಷನೆಂಬ ಅವಿರಳ ಜ್ಞಾನ ಪರಿಚಯವಾದರೆ ಸಾಕು ಮನ ತನಗೆ ಒದಗಿಬಂದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗಗಳನ್ನು ಅಲ್ಲಿಯೆ ಅರ್ಪಿಸಿ ಆನಂದ ಪಡುತ್ತದೆ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಅರಿಷಡ್ವರ್ಗಗಳು ಇತರರಿಂದಾಗಿ ತನುವಿನಲ್ಲಿ ಹುಟ್ಟುವುದಿಲ್ಲ. ಅವು ತನುವಿನಲ್ಲಿಯೇ ಹುಟ್ಟಿ ತನುವಿಗೆ ಸುಖ ದುಃಖಗಳನ್ನು ನೀಡಿ; ತನುವಿನಲ್ಲಿಯೇ ಸುಪ್ತವಾಗುತ್ತವೆ. ಹೀಗೆ ಸುಪ್ತವಾಗುವ ಪುನಃ ಚೈತನ್ಯಗೊಳ್ಳುವ ಇಂದ್ರಿಯಗಳು ಜ್ಞಾನೇಂದ್ರಿಯಗಳ ಮೂಲಕ ಪರಿಪೂರ್ಣವಾಗಿ ಇಲ್ಲವಾಗುತ್ತವೆ.

ಹೊರಗಿನಿಂದ ಪ್ರಚೋದಿಸುವ ಕಾಮಾದಿ ಅರಿಷಡ್ವರ್ಗಗಳು ಜ್ಞಾನಕ್ಕೆ ಪ್ರಸಾದವಾಗುತ್ತವೆ. ಹಾಗೆಯೇ ನೂರೆಂಟು ಕರಣಂಗಳಲ್ಲಿ ಸ್ವಾಧಿಸುವ ಸುಖಿಸುವ ಭೇದವನು ಭೇದಿಸುವ ಈ ಕಲೆ ಕರಗತವಾದ ಬಳಿಕ ತನುವಿನಲ್ಲಿ ಹುಟ್ಟಿದ ಅಜ್ಞಾನ ತನುವಿನ ಜ್ಞಾನಕ್ಕೆ ಪ್ರಸಾದವಾಗುವುದು ತನಗೆ ಗೋಚರವಾಗುತ್ತದೆ.

ತನುವಿನಲ್ಲಿ ಹುಟ್ಟಿದ ಅಜ್ಞಾನ ತನುವಿನಲ್ಲಿ ಸಂಗಮವಾದ ಜ್ಞಾನಕ್ಕೆ ತುತ್ತಾಗುತ್ತದೆ. ಹೀಗೆ ತನುವಿನ ಅಜ್ಞಾನವನ್ನು ಉಣ್ಣುವ ತನುವಿನಲ್ಲಿಯೇ ಸಂಗಮವಾದ ಪ್ರಸನ್ನ ಪ್ರಸಾದಿಯನ್ನು ಒಲಿಸಿಕೊಳ್ಳುವ ಈ ಶಿಕ್ಷಣ ಶರಣರಿಗೆ ಸಾಧ್ಯವಾಗುತ್ತದೆ.

ತನುವಿನಲ್ಲಿ ಹುಟ್ಟಿದ ಅಜ್ಞಾನವನ್ನು ತನುವಿನ ಮೂಲಕ ತಿಳಿಯಲು ಹೋದ ಸಕಲ ತನುಗಳಿಗೂ ಕೂಡಾ ಸಾಧ್ಯವಾಗುತ್ತದೆ.

**174**

**ಆನಂದ ಸ್ಥಾನದಲ್ಲಿ ಶುದ್ಧಧವಳ ಮನೆಯಲ್ಲಿ,**
**ನಿತ್ಯ ಜಾಗರವ ಮಾಡುವ ಅವ್ವೆ ನೀ ಕೇಳಾ.**
**ಬಂದವರ ಬಲ್ಲ ಹೋದವರ ಬಲ್ಲ**
**ಬಂದವರು ಬರಿದೆ ಹೋದರು**

**ಭವಕ್ಕೆ ಹೇತುವಾಗಿ ಕಪಿಲಸಿದ್ಧಮಲ್ಲಿಕಾರ್ಜುನಯ್ಯನ ಕಾಣದೆ.**

ಸ್ಥೂಲ ತನುವಿಗೆ ಆಧಾರವಾದ ಅವ್ಯಕ್ತ ತನುವೊಂದು ಇದೆ. ಇದು ಸದಾ ಪರಮಾನಂದದ ತನು. ಶುದ್ಧ ಧವಳ. ಸದಾ ಪರಿಶುದ್ಧ ಬೆಳಗು. ನಿತ್ಯ ಜಾಗರ, ಹಗಲು ಕೂಡಾ ಬೆಳಗುತ್ತದೆ. ಇರುಳು ಕೂಡಾ ಬೆಳಗುತ್ತದೆ. ಹಗಲಿರುಳೆನ್ನದೆ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ. ಸೂರ್ಯನ ಬೆಳಗನ್ನು ನಾಚಿಸುವಂದದಿ ಬೆಳಗುತ್ತದೆ.

ಬೆಳಗಿಂಗೆ ಬೆಳಗಾಗಿ ಬೆಳಗುವ ಅವ್ಯಕ್ತ ತನುವೇ ತಾನು ಬೆಳಗುವುದಕ್ಕಾಗಿ; ಬೆಳಗುವ ಬೆಳಕು ಸಕಲರಿಗೂ ಕಾಣುವುದಕ್ಕಾಗಿ ತನುವೊಂದನ್ನು ಸೃಷ್ಟಿ ಮಾಡಿತು. ಅದಕ್ಕೆ ಸ್ಥೂಲ ತನುವೆಂದು ತನುವುಳ್ಳವರಿಂದ ಕರೆಯಿಸಿಕೊಂಡಿತು. ಈ ಸ್ಥೂಲ ತನುವನ್ನು ಮನವೆಂಬ ಅವ್ವೆ ಸ್ವಾಧೀನ ಪಡಿಸಿಕೊಂಡಳು.

ಪರಮಾತ್ಮನ ದಯೆಯಿಂದ ಹುಟ್ಟಿದ ತನುವನ್ನು ಅವ್ವೆ ಆಳಹತ್ತಿದಳು. ಇದನ್ನು ತನ್ನ ಸ್ವಾಧೀನ ಪಡಿಸಿಕೊಳ್ಳಬೇಕೆಂಬ ಹಟತೊಟ್ಟ ರಾಜ ಮಹಾರಾಜರು ಸ್ಥೂಲ ತನುವಿನ ಮೇಲೆ ಯುದ್ಧ ಸಾರಿದರು.

ಮನವೆಂಬ ಅವ್ವೆ ಸಕಲರನ್ನು ಬಲ್ಲಳು. ತನು ಹುಟ್ಟಿದಂದಿನಿಂದ ಆಕೆಯು ತನ್ನ ಒಡೆತನ ಬಿಟ್ಟಿಲ್ಲ. ಬಂದವರನ್ನು ಬಲ್ಲಳು. ಹೋದವರನ್ನು ಬಲ್ಲಳು. ಬಂದವರು ಬರಿಗೈಲಿ ಬರಿದೆ ಹೋದರು. ಭವಕ್ಕೆ ಹೇತುವಾಗಿ.

ತನುವನ್ನು ಬೆಳಗುವ ಪರಮಾತ್ಮನನ್ನು ಕಾಣುವ ಗುರಿ ಇಲ್ಲದವರು ಸೋತು ಸುಣ್ಣವಾದರು. ಶರಣರು ಮಾತ್ರ ಅವ್ವೆಯನ್ನು ರಮಿಸಿದರು; ಯಾಮಾರಿಸಿದರು. ಅವರಿಗೆ ಸಾಮ್ರಾಜ್ಯ ಬೇಡವಾಗಿತ್ತು. ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕಿನೆಡೆಗೆ ಶರಣರ ಚಿತ್ತ ನೆಟ್ಟಿತ್ತು. ತನುವನ್ನು ಹಿಂದಿಕ್ಕಿ ತನುವನ್ನು ಬೆಳಗುವ ಬೆಳಕಿನತ್ತ ನಡೆದರು. ಅವರ ಹೋರಾಟಕ್ಕೆ ಜಯ ದೊರೆಯಿತು. ಅವ್ವೆ ಸತಿಯಾದಳು. ಬೆಳಗಿಂಗೆ ಬೆಳಗುವ ಬೆಳಕು ಪತಿಯಾದ.

ಶರಣ ಸತಿ ಎನ್ನಿಸಿಕೊಂಡ; ಬೆಳಗುವ ಲಿಂಗ ಶರಣನಿಗೆ ಪತಿ ಎನ್ನಿಸಿಕೊಂಡ. ಸತಿ ಪತಿಗಳಿಬ್ಬರೂ ಕಾಯವನ್ನೇ ಕೈಲಾಸ ಮಾಡಿಕೊಂಡು ಕಾಯದಲ್ಲಿಯೇ ಸಂಸಾರ ಹೂಡಿದರು. ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕಂಡು ಧನ್ಯನಾದೆ ಎಂದು ಸತಿ ಕುಣಿ ಕುಣಿದಾಡಿದಳು. ಬೆಳಕನ್ನು ಕಂಡು ಬೆಳಕೇ ತಾನಾದಳು.

**175**

**ಆನತದಲಾನಂದ ಆದಿ ಆಧಾರದಲಿ**
**ಸಾಧಿಸುವ ಪರಬ್ರಹ್ಮದಾನಂದವ**
**ತೋರಿಸಿದ ಗುರು ಕಪಿಲಸಿದ್ಧ ಮಲ್ಲೇಶ್ವರನ**
**ತೋರಿಸಿದ ಗುರು ಮತ್ತೆ ಅಪ್ರಮೇಯನೈ.**

ತನುವಿಗೆ ಪರಮಾನಂದವನ್ನು ಉಂಟು ಮಾಡುವುದು ಅವ್ಯಕ್ತ ತನುವು. ಇದು ತೋರುವ ತನುವಿಗೆ ಆಧಾರವಾದುದು. ತನುವನ್ನು ಆವರಿಸಿದ ಮನಕ್ಕೆ ಪರಮಾನಂದದ ಅವ್ಯಕ್ತ ತನುವನ್ನು ನೋಡುವ ಬಯಕೆ ಉಂಟಾದಾಗ ಸದ್ಗುರು ದೇವ ಕೈಹಿಡಿದು ತೋರಿಸುತ್ತಾನೆ.

ತೋರಿಸುವ ಗುರು ಬೇರೆ ಅಲ್ಲ; ತನಗೆ ತೋರುವ ಪರಮಾನಂದವೂ ಬೇರಲ್ಲ. ಅದು ಅಪ್ರತಿಮ. ಅಪ್ರಮೇಯ. ಅದು ಜಗದಗಲ ಮುಗಿಲಗಲ. ಪಾತಾಳದಿಂದಲೂ ಬ್ರಹ್ಮಾಂಡದಿಂದಲೂ ಅತ್ತತ್ತ. ಅಂತಹ ಅಪ್ರಮಾಣ ವಸ್ತು ತನ್ನ ತನುವಿನಲ್ಲಿ ಸಂಗಮವಾದುದನ್ನು ಗುರುದೇವ ತನಗೆ ತೋರಿಸುತ್ತಾನೆ.

ತನುವಿನಲ್ಲಿಯೇ ಸಂಗಮವಾದ ಪರಬ್ರಹ್ಮದ ಆನಂದವನ್ನು ತನುವಿನ ಭ್ರಮೆ ಕಳೆದುಕೊಂಡ ತನುವಿಗೆ ಮಾತ್ರ ಸಾಧ್ಯವಾಗುತ್ತದೆ. ತನುವನ್ನು ಆವರಿಸಿದ ಮನದ ಭ್ರಮೆ ಕಳೆದುಕೊಂಡ ಮನಕ್ಕೆ ಮಾತ್ರ ಸಾಧ್ಯವಾಗುತ್ತದೆ.

**176**

**ಆನರಿಯೆನಯ್ಯಾ, ಪಶು ನಂಬುವಂತೆ ನಂಬುವೆ.**
**ನೀನು ಕೊಂದಲ್ಲಿ ಸಾವೆ, ಆನರಿಯೆನಯ್ಯಾ,**
**ನೀನು ಕಾಯ್ದಲ್ಲಿ ಬದುಕುವೆ, ಆನರಿಯೆನಯ್ಯಾ .**
**ಪಶು ನಂಬುವಂತೆ ನಂಬುವೆ, ಶಿಶು ಬೇಡುವಂತೆ ಬೇಡುವೆ.**
**ಅರಿವಿಲ್ಲದವನಲ್ಲಿ ಅರಿವ ನೀನರಸುವರೆ?**
**ನೀನರಿಯೆಂದಡರಿವೆ, ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯನ.**

ನೋಡಿ ಸುಖಿಸುವೆ; ನೋಡಲು ಬಾರದ್ದಕ್ಕಾಗಿ; ನೋಡಿ ಹಾದರ ಮಾಡುವ ಪಶು ನಾನಯ್ಯ. ಹಾದರದಿಂದ ನೋಡಿದೆ; ಸುಖವಾಯಿತು. ಎಚ್ಚರದಿಂದ ನುಡಿದೆ ಸುಖವಾಯಿತು! ನೋಡಿದಂತೆ ನುಡಿಯದ ಪಶು ನಾನಯ್ಯಾ .

ನೋಡುವ ನೋಟ ತಪ್ಪೆಂದು ನನಗೆ ನನ್ನಿಂದಲೇ ತಿಳಿಯಿತು. ನನ್ನ ನೋಟಕ್ಕೂ ನನ್ನ ಮಾತಿಗೂ ಒಂದಕ್ಕೊಂದು ಸಂಬಂಧವಿಲ್ಲ ಎಂದು ನನಗೆ ನನ್ನಿಂದಲೇ ತಿಳಿಯಿತು. ಆದರೂ ನನ್ನ ನೋಟ, ನನ್ನ ಮಾತು ನನ್ನನ್ನೇ ನಂಬುವಂತೆ ಮಾಡಿತು. ನನ್ನ ಈ ತಪ್ಪನ್ನು ನಾನೇ ನಂಬುವಂತೆ ಮಾಡಿಕೊಂಡ ಪಶು ನಾನು. ಈ ಪಶು ಪ್ರವೃತ್ತಿಯ ಸುಖವನ್ನು ಅನುಭವಿಸುವಂತೆ ಈ ಪಶುವಿಗೆ ವರ ನೀಡಿದ ದಾನಿ ಕೂಡಾ ನೀನೆ ತಂದೆ.

ನೀನು ಕೊಂದಲ್ಲಿ ಸಾಯುವೆ, ಆನರಿಯೆನಯ್ಯಾ, ನೀನು ಕಾಯ್ದಲ್ಲಿ ಬದುಕುವೆ, ಆನರಿಯೆನಯ್ಯಾ. 'ಬಡುಪಶು ಪಂಕದಲ್ಲಿ ಬಿದ್ದಡೆ ಕಾಲ ಬಡಿವುದಲ್ಲದೆ ಮತ್ತೇನ ಮಾಡಬಲ್ಲುದು', ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ, ತಂದೆ ನಿನ್ನ ಬಯ್ಯದಂತೆ ಮಾಡು.

ವಿಷಯವೆಂಬ ಹಸುರನ್ನು ತಿನ್ನಲು ಬೇಲಿ ಹಾರಿ ಹೋದಾಗ ಹೊಲದ ಮಾಲೀಕ ಬಂದು ಹಿಡಿದು ಹೊಡೆಯದ ಮುನ್ನ ಈ ಪಶು ಯಾರಿಗೆ ಹುಟ್ಟಿದ್ದು ಎಂದು ಬಯ್ಯುತ್ತಾನೆ. ಪಶು ನಾನು; ಪಶು ಪತಿ ನೀನು. ನಾನು ನಿನಗೆ ಹುಟ್ಟಿದ ಕೂಸು. ನನ್ನ ಹಡೆದ ತಂದೆ ನೀನು. ಮಾಲೀಕ ನನ್ನ ಹಿಡಿದು ಹೊಡೆಯದ ಮುನ್ನ ನನ್ನನ್ನು ಹಡೆದ ನಿನ್ನನ್ನು ಬಯ್ಯುತ್ತಾನೆ. ತಂದೆಯೇ ನಿನ್ನ ಬಯ್ಯದಂತೆ ಮಾಡು.

ಪಶು ನಾನು, ಪಶು ಪತಿ ನೀನು. ಪಶು ನಂಬುವಂತೆ ನಂಬುವೆ. ಪಶು ಬೇಡುವಂತೆ ಬೇಡುವೆ. ಅರಿವಿಲ್ಲದ ಈ ಪಶುವಿನಲ್ಲಿ ಅರಿವ ಹುಡುಕುವರೆ? ನೀ ಕೊಟ್ಟ ಅರಿವನ್ನೇ ಬಳಸಿದೆ. ನೀ ಅರಿಯೆಂದಡೆ ಅರಿವೆ. ನನ್ನನ್ನು ನಾನು ಅರಿಯುವೆ. ನನ್ನನ್ನು ಅರಿಯಿಸಲು ಕಾರಣವಾದ

ನಿನ್ನನ್ನು ಅರಿಯುವೆ, ಇಡೀ ಬ್ರಹ್ಮಾಂಡವನ್ನೂ ಅರಿಯುವೆ. ನೀನು ಅರಿಯೆಂದಡೆ ಅರಿವೆ.

177

**ಆ ನಿಮ್ಮ ನೆನೆಯಲು ಪೋಪೆನೆಂದಡೆ**
**ತಾನೆನ್ನ ಕೈವಿಡಿದು ಇದ್ದೆಸೆಗಂ ಕೈದೋರ್ಪಳು.**
**ಈ ಆಸೆಯಿಂದವೆ ನಿಮ್ಮೆಡೆಗಾಣೆನು.**
**ಈ ಆಸೆಯಂಬವಳನೆಂದಿಂಗೆ ನೀಗಿ,**
**ಎಂದು ನಿಮ್ಮನೊಡಗೂಡಿ ಬೇರಾಗದೆಂದಿಪ್ಪೆನು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನೆ; ನಾನು ನಿಮ್ಮ ನೆನೆಯುವುದಕ್ಕಾಗಿ ತನುವಿನೊಳಗೆ ಹೋಗಬೇಕೆಂದಾಗಲೇ ಮನವೆಂಬ ಮಾಯೆ ನನ್ನ ಕೈಹಿಡಿದು ಹೊರಗೆ ತೋರಿಸುವಳು. ಹೊರಗಿನ ಸುಖದಲ್ಲಿ ನನ್ನನ್ನು ಅದ್ದಿ ತೆಗೆಯುವಳು. ಈ ಆಸೆಯಿಂದಾಗಿ ಅನಂತ ಜನ್ಮ ಕಳೆದರೂ ನಾನು ನಿಮ್ಮನ್ನು ಕಾಣಲು ಸಾಧ್ಯವಾಗುತ್ತಿಲ್ಲ.

ಆಶೆಯುಳ್ಳ ನಾನು ಮನವೆಂಬ ಮಾಯೆಯ ಆಧಾರದಲ್ಲಿರುವುದರಿಂದ; ಆಶೆಯ ಮನದ ಕೊನೆಯಲ್ಲಿರುವ ನಿನ್ನನ್ನು ನಿನ್ನ ಮಹಾಜ್ಞಾನದ ರುಚಿಯನ್ನು ಅರಿಯಲು ನನಗೆ ಸಾಧ್ಯವಾಗುತ್ತಿಲ್ಲ.

ಆಶೆಯಲ್ಲಿದ್ದವನ ತಲೆಯನರಿದು ಕರೆದುಕೊಂಡು ಹೋಗು ತಂದೆ. ನಿಮ್ಮ ಪಾದಕ್ಕೆರಗಿ ಬೇರಾಗದಂತೆ ಇರಿಸು ನನ್ನಯ್ಯ ಕಪಿಲಸಿದ್ಧಮಲ್ಲಿಕಾರ್ಜುನದೇವ; ದೇವರ ದೇವ ನೀನು.

178

**ಆನೀ ಲೋಕದ ಹರಕೆಯ ಹರಸೆನಯ್ಯಾ.**
**ಆನೀ ಲೋಕದ ಕೊಡ ಬೇಡೆನಯ್ಯಾ.**
**ಆನು ಘನ ಹರಸುವೆ.**
**ಎನಗೆ ನಿಮ್ಮನೆ ಬೇಡಿಹ ಘನವ ಹರಸುವೆ.**
**ಎನಗಿಂತಪ್ಪ ಕೊಡಕೊಡುವುದು ಇಲ್ಲದಿದ್ದೊಡೊಲ್ಲೆ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ವಾರಿಕಲ್ಲ ಕೊಡನ ತುಂಬಾ ಮುತ್ತು ಮಾಣಿಕ್ಯವು ತುಂಬಿವೆ. ಎತ್ತುವವರು ಇಲ್ಲದೆ ಸಖಿಯನು ಅರಸುತಿಪ್ಪೆ. ಮನದ ತನುವಿನಲ್ಲಿ; ಆ ತನುವಿನ ಮನದಲ್ಲಿ; ಮನ ಮೇರೆದಪ್ಪಿ ತನಗೆ ತಾನು ಎತ್ತಿಕೊಂಡಡೆ ಉಕ್ಕಿ ಹರಿದಿತ್ತಾ ಅಜಗಣ್ಣನ ಯೋಗ ಎಂದು ಮಸರಕಲ್ಲಿನ ಮುಕ್ತಾಯಕ್ಕ ಹೇಳುತ್ತಾಳೆ.

ಜಲಬಿಂದು ಗರ್ಭಕ್ಕೆ ಹರಿದು, ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಸುಂದರವಾದ ಚರ್ಮದೊಂದಿಗೆ ಹೆಪ್ಪುಗಟ್ಟಿ ಹೊರಗೆ ಬಂದಿದೆ. ಹೀಗಾಗಿ ತನುವನ್ನು ವಾರಿಕಲ್ಲ ಕೊಡ ಎಂದು ಶರಣರು ಕರೆದಿದ್ದಾರೆ. ಈ ಕೊಡದ ತುಂಬಾ ಸಕಲವನ್ನೂ ಬೆಳಗುವ ಅರಿವಿನ

ಮುತ್ತು ಮಾಣಿಕ್ಯಗಳು ತುಂಬಿವೆ. ಲೋಕಕ್ಕೆ ಜಲದಿಂದಾದ ಮುತ್ತು ಮಾಣಿಕ್ಯಬೇಕು. ಜಲದಿಂದಲೇ ಗಟ್ಟಿಯಾಗಿ ಸಕಲವನ್ನೂ ಅರಿವಿನಿಂದಲೇ ನೋಡಿ ಕೇಳಿ ಮುಟ್ಟಿ ರುಚಿಸಿ ಘ್ರಾಣಿಸುವ ಮುತ್ತು ಯಾರಿಗೂ ಬೇಡ.

ಭೂಮಿ ಹೇಮ ಕಾಮಿನಿ ಇವು ಜಗಕ್ಕೆ ಇಕ್ಕಿದ ಕೇಡು; ನಿನ್ನದು ಎಂಬುದು 'ಜ್ಞಾನರತ್ನ'. ಇದನ್ನು ಕೆಡಗೊಡದೆ ಅಲಂಕರಿಸಿದೆಯಾದಡೆ ನಿನ್ನಂತಹ ಸಿರಿವಂತರು ಯಾರೂ ಇಲ್ಲ ಎಲೆ ಮನವೆ ಎಂದು ಪ್ರಭುಗಳು ಮನಕ್ಕೆ ಪಾಠ ಮಾಡಿದ್ದಾರೆ. ಆದರೂ ಮನ ಕೇಳಬೇಕಲ್ಲ !

ಲೋಕದ ಬೇಡಿಕೆಯನ್ನು ತಾನು ತಿರಸ್ಕರಿಸಿ; ತನುವಿನಲ್ಲಿ ತನ್ಮಯವಾದ 'ಜ್ಞಾನರತ್ನ'ವನ್ನು ಅಲಂಕರಿಸಿದರೆ ತನ್ನಂತಹ ಸಿರಿವಂತರು ಯಾರೂ ಇಲ್ಲ ಎಂಬ ಸತ್ಯ ಮನಕ್ಕೆ ಗೊತ್ತಾದಾಗಲೇ ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ಹುಡುಕತೊಡಗುತ್ತದೆ.

ಲೋಕ ಬೇಡುವ ಕೊಡ ನನಗೆ ಬೇಡ. ಆ ಕೊಡವನ್ನು ನಾನು ಬೇಡಲಾರೆ. ಏಕೆಂದರೆ ನನಗೆ ನಿನ್ನ ಆಶೀರ್ವಾದವಾಗಿದೆ. ಹೀಗಾಗಿ ನಾನು ಘನವನ್ನೇ ಬೇಡುವೆ. ನೀವು ನನಗೆ ನಾನು ಬೇಡಿದ ಘನವನ್ನೇ ಹರಸಿ ಆಶೀರ್ವದಿಸಿ. ನೀವು ನನಗೆ ಕೊಟ್ಟರೆ ಮುತ್ತು ಮಾಣಿಕ್ಯ ಭರಿತವಾದ ಕೊಡವನ್ನು ಕೊಡಿ. ಲೋಕ ಆಸೆ ಮಾಡಿದ ಕೊಡ ನನಗೆ ಬೇಡವೆಂದು ಸಿದ್ಧರಾಮ ಶಿವಯೋಗಿಗಳು ಸ್ಪಷ್ಟವಾಗಿ ಅರಿವಿನ ಶಿವನಲ್ಲಿ ಬೇಡಿಕೆ ಇಟ್ಟಿದ್ದಾರೆ.

**179**

**ಆನು-ನೀನು ಎಂಬ ಭೇದವುಳ್ಳನ್ನಬರ**
**ಎಂತಪ್ಪುದಯ್ಯಾ ಶಿವಭಕ್ತಿ ?**
**ಸಂದು ಸಂಶಯ ಒಂದಾಗದನ್ನಕ್ಕರ**
**ಎಂತಪ್ಪುದಯ್ಯಾ ಸಮಯಭಕ್ತಿ ?**
**ಆಯತರಲ್ಲದೆ ಸ್ವಾಯತರಲ್ಲ,**
**ಸ್ವಾಯತರಲ್ಲದೆ ಸಂಬಂಧಿಗಳಲ್ಲ ,**
**ಸಂಬಂಧಿಗಳಿಗಲ್ಲದೆ ಸದಾಚಾರವಿಲ್ಲ,**
**ಸದಾಚಾರಿಗಳಿಗಲ್ಲದೆ ಸ್ವಾನುಭಾವವಿಲ್ಲ,**
**ಸ್ವಾನುಭಾವಿಗಳಿಗಲ್ಲದೆ ನೀ ಸಿಕ್ಕೆ.**
**ಸೂರೆಯೆ ಎಲ್ಲರಿಗೆ ಸದಾಚಾರದ ಮಾತು ?**
**ಸೂರೆಯೆ ಎಲ್ಲರಿಗೆ ಗಣಾಚಾರದ ಮಾತು ?**
**ಸೂರೆಯೆ ಎಲ್ಲರಿಗೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿಮ್ಮ ಶರಣ ಬಸವಣ್ಣಂಗಲ್ಲದೆ.**

ತನುವಿನ ಕಣ ಕಣದಲ್ಲಿ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಆ ಗುರುದೇವನು ಮಹಾದೇವನೂ ಆಗಿದ್ದಾನೆ. ಸದಾ ಶಿವನೂ ಆಗಿದ್ದಾನೆ. ಸಾಕ್ಷಾತ್ ಪರಬ್ರಹ್ಮನೂ ಆತನೇ ಆಗಿದ್ದಾನೆ. ಹೀಗಿದ್ದೂ ದೇವರನ್ನೂ, ಗುರುದೇವನನ್ನೂ ಹೊರಗೆ ಪೂಜಿಸುತ್ತೇನೆ, ಆತನಿಗೆ ಆಲಯ ನಿರ್ಮಿಸಿ ಉತ್ಸವ ಮಾಡುತ್ತೇನೆ. ನಾನು ಬೇರೆ ನೀನು ಬೇರೆ ಎಂಬ ಭೇದ ನನ್ನಲ್ಲಿ ಗಟ್ಟಿಯಾಗಿ ಉಳಿದಿದೆ. ನೀನಾದರೊ ನನಗೆ ಜನ್ಮ ನೀಡಿ; ನಾನು ತಪ್ಪು ನಡೆಯಬಾರದು, ತಪ್ಪಿ

ನುಡಿಯಬಾರದು; ತಪ್ಪಿ ನೋಡಬಾರದು; ತಪ್ಪಿ ಮುಟ್ಟಬಾರದು ಎಂದು ನನ್ನಲ್ಲಿಯೇ ಸಂಗಮವಾಗಿರುವಿ ನನ್ನ ಕೈಹಿಡಿದು ನಡೆಸಲೆಂದು!

ನನ್ನನ್ನು ಹಡೆದು; ನನ್ನಲ್ಲಿಯೇ ಸಂಗಮವಾದ ನಿನ್ನನ್ನು ಮರೆತು; ನಾನು ಮಾಡಿದ ದೇವರನ್ನು ನಾನು ಆರಾಧಿಸುತ್ತಿರುವೆ. ನನ್ನಲ್ಲಿಯೇ ಇದ್ದು, ನನ್ನಲ್ಲಿಯೇ ಒಂದಾಗಿ ನನ್ನಂತೆಯೇ ಇರುವ ನಿನ್ನನ್ನು ಮರೆತು, ಕಲ್ಲಲ್ಲಿ ಮಾಡಿದ ದೇವರನ್ನು ನನ್ನ ದೇವರೆಂದು ಆರಾಧಿಸುವ ನನಗೆ ಎಂತಪ್ಪುದಯ್ಯಾ ಶಿವಭಕ್ತಿ? ಸಂದು ಸಂಶಯ ಒಂದಾಗದನ್ನಕ್ಕರ.

ನನ್ನಲ್ಲಿಯೇ ಸಂಗಮವಾದ ನಿನ್ನನ್ನು ನಾನು ಆಯತ ಮಾಡಿಕೊಳ್ಳದಿದ್ದರೆ ನಾನು ಸ್ವಾಯತನಲ್ಲ. ಸ್ವಾಯತನನ್ನಾಗಿ ಮಾಡಿಕೊಳ್ಳದಿದ್ದರೆ ನೀನು ನನ್ನಲ್ಲಿದ್ದು ನನಗೆ ಸಂಬಂಧಿಯಲ್ಲ. ಹೀಗಾಗಿ ನನ್ನಲ್ಲಿ ಸದಾಚಾರವಿಲ್ಲ. ನೀನಿದ್ದೂ ನೀನಿಲ್ಲದಂತೆ ಇರುವ ನಾನು ಸ್ವಾನುಭಾವಿಯಲ್ಲ.

ಸ್ವಾನುಭಾವಿಗೆ ಅಲ್ಲದೆ ನೀನು ಸಿಕ್ಕುವುದಿಲ್ಲ. ನೀನಿದ್ದೂ ನಿನ್ನನ್ನು ಕಾಣದ ದೇಹ ಸಿನೆಬಂಜೆ, ನೀನಿಲ್ಲದೆ ನಾನಾಡುವ ಮಾತು ಸದಾಚಾರದ ಮಾತಲ್ಲ; ಗಣಾಚಾರದ ಮಾತೂ ಅಲ್ಲ. ಅದು ಮುಖವಾಡದ ಮಾತು. ನೀನಿದ್ದೂ ನಿನ್ನ ಪಾತ್ರ ಧರಿಸುವ ಮೂರ್ಖ ನಾನು. ಮೂರ್ಖರಿಗೆ ನೀನೊಲಿಯಲು ಸಾಧ್ಯವೆ? ನಿಮ್ಮ ಶರಣ ಬಸವಣ್ಣಂಗಲ್ಲದೆ! ಆತ ತನ್ನಲ್ಲಿಯೇ ಸಂಗ ಮಾಡಿದ ಸಂಗಯ್ಯನನ್ನು ಒಲಿಸಿಕೊಂಡ ಮಹಾವೀರ!

**180**

**ಆನು ಭಕ್ತನೆಂಬೆ.**
**ಹೊರ ಹಚ್ಚೆ ಒಳ ಬೊಳ್ಳೆಯಾನಯ್ಯಾ.**
**ತನುಮನಭಕ್ತಿ ಇನಿಸಿಲ್ಲ**
**ನಿಮಗಾನು ಮಚ್ಚಲರಿಯೆ ಕಂಡಯ್ಯಾ.**
**ಬೇರೆ ಬಲ್ಲವರಿಗೆ ಎಲೆಯ ಬಣ್ಣಿಸುವಂತೆ**
**ನಿಮಗಾನು ಮಚ್ಚಿದರೆ ಗತಿಯೊಳವೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಭಕ್ತನೆಂದು ಕರೆದಿದ್ದಾರೆ. ತನುವನ್ನು ಗುರುವೆಂದು ಕರೆದಿದ್ದಾರೆ. ತನುವನ್ನು ಶರಣ ಸಂತ ಮಹಾಪುರುಷನೆಂದು ಕರೆದಿದ್ದಾರೆ. ತನುವನ್ನೇ ಕಳ್ಳ ಶ್ರೀಮಂತ ಬಡವ ಮೋಸಗಾರ ಭ್ರಷ್ಟಾಚಾರಿ ಶಾಸಕ ಸಚಿವನೆಂದು ರಾಜ ಪ್ರಧಾನಿ ಸೈನಿಕನೆಂದು ಕರೆದಿದ್ದಾರೆ. ಇವೆಲ್ಲ ಮನ ತನುವಿಗೆ ಹಾಕುವ ಪಾತ್ರಗಳು.

ತನುವೆಂದರೆ ತನುವೇ ಹೊರತು, ತನುವನ್ನು ತನುವನ್ನಾಗಿ ನೋಡಿ, ತನುವೆಂದು ಮಾತನಾಡಿಸಿದರೆ ಸಾಕು. ತನುವನ್ನು ಈ ಎಲ್ಲ ಹೆಸರುಗಳಿಂದ ಕರೆಯುವ ಅವಶ್ಯಕತೆಯಿಲ್ಲ. ತನುವನ್ನು ಹಾಗೆ ಕರೆಯಲು, ಹಾಗೆ ಕರೆಯಿಸಿಕೊಳ್ಳಲು ಕಾರಣವಾದುದು ಮನ. ಮನಕ್ಕೆ ತಿಳಿಯದ್ದಕ್ಕಾಗಿ ತನುವಿಗೆ ವಿಶೇಷ ಗೌರವ; ಮನಕ್ಕೆ ತಿಳಿಯದ್ದಕ್ಕಾಗಿ ತನುವಿಗೆ ತಿರಸ್ಕಾರ.

ತನುವನ್ನೇ ತನುವು ಗೌರವಿಸಿ, ತನುವನ್ನೇ ತನುವು ತಿರಸ್ಕರಿಸುವುದೆಂದರೇನು? ತನುವಿಗೆ ತನುವನ್ನು ಆವರಿಸಿದ ಮನಕ್ಕೆ ತಿಳಿಯಬೇಡವೆ? ತಾನೂ ತನುವೇ, ತನ್ನಿಂದ ತಿರಸ್ಕಾರಕ್ಕೆ, ಗೌರವಕ್ಕೆ ಪಾತ್ರವಾದುದೂ ತನುವೇ ಆಗಿದೆ. ಏನೀ ತನುವನ್ನು ಆವರಿಸಿದ ಮನದ ಮಾಯೆ.

ತನು ಒಂದು ತನುವನ್ನು ಹೊಗಳುತ್ತದೆ. ತನು ಮತ್ತೊಂದು ತನುವನ್ನು ತೆಗಳುತ್ತದೆ. ಗೌಡರ ಮನೆಯ ದನ, ಶಾಸಕರ ಮನೆಯ ದನ, ಅಧಿಕಾರಿ, ಜವಾನ, ರೈತನ ಮನೆಯ ದನಗಳನ್ನು ಮೇಯಲು ಹೊರಗೆ ಬಿಟ್ಟಾಗ ಅವು ಸಾಲಾಗಿ ಹೋಗುತ್ತವೆ. ಸಾಲಾಗಿ ಬಂದು ಆಯಾ ಮನೆಗಳನ್ನು ಸೇರುತ್ತವೆ. ದನ ಮರ ಜಲಚರ ಉರಗಗಳಿಗಿಲ್ಲದ ಬಾಧೆ ತನುವಿಗೆ ಏಕೆ ಬಂತು? ಇದನ್ನು ಅರಿವಿನ ತನು ಎನ್ನಲು ಸಾಧ್ಯವೆ? ಇದಕ್ಕೆ ಕಾರಣ ಮನ. ತನುವನ್ನು ಆವರಿಸಿದ ಮನ.

ಗಿಡ ಮರ ಬಳ್ಳಿ ಪಶು ಪಕ್ಷಿ ಉರಗ ಜಲಚರಗಳು ಪ್ರಾಣಿಗಳು ಜಗಳ ಕಾಯುವುದಿಲ್ಲ. ಏಕೆಂದರೆ ಅವುಗಳಿಗೆ ಮನವಿಲ್ಲ. ಸಹಜವಾಗಿವೆ. ತನುವನ್ನು ಆವರಿಸಿದ ಮನಕ್ಕೆ ಜ್ಞಾನವಿಲ್ಲ. ಹೀಗಾಗಿ ಅದು ಸಹಜವಲ್ಲ. ಇತರರನ್ನು ನೋಡಿ ಭಕ್ತನಾಗುತ್ತದೆ. ಇತರರನ್ನು ನೋಡಿ ಕಳ್ಳ ಭ್ರಷ್ಟಾಚಾರಿಯಾಗುತ್ತದೆ. ಹಾದರ ಮಾಡಿ ಸುಖಪಡುತ್ತದೆ. ಹಾಗೆಯೇ ದುಃಖಪಡುತ್ತದೆ. ಸುಖದುಃಖಗಳನ್ನು ಮನ ತನುವಿನ ಮೂಲಕ ಪಡುತ್ತದೆ. ತನು ಮನಕ್ಕೆ ಒಂದು ಉಪಕರಣವಾಗಿ ಬಳಕೆ ಆಗಿದೆ. ಏಕೆಂದರೆ ಮನಕ್ಕೆ ಜ್ಞಾನವಿಲ್ಲ.

ತನುವಿನಲ್ಲಿ ಜ್ಞಾನ ಸಂಗಮವಾಗಿದೆ. ಮನ ಮಾಡಿದ ತಪ್ಪನ್ನು ತಪ್ಪೆಂದು ಹೇಳಿ ನಿಲ್ಲಿಸಿದರೂ ಕೂಡಾ ಮನ ನಿಲ್ಲುವುದಿಲ್ಲ. ಹೀಗಾಗಿ ಮನ ತನಗೆ ಬೇಕಾದ ದೇವರನ್ನು ಕಲ್ಲಿನಲ್ಲಿ ಕಟೆದು, ಆ ದೇವರಿಗೆ ಆಲಯ ನಿರ್ಮಿಸಿ ಹೊನ್ನಿನ ಕಳಶವನಿಟ್ಟು, ವಸ್ತ್ರಾಭರಣಗಳನ್ನು ತೊಡಿಸಿ, ಆ ಕಲ್ಲನ್ನೇ ದೇವರೆಂದು ಆರಾಧಿಸಿ ತನುವಿನ ಮೂಲಕ ಭಕ್ತಿ ಮಾಡಿ ಭಕ್ತನೆನ್ನಿಸಿಕೊಳ್ಳುತ್ತದೆ.

ಮನ ತನುವಿನಲ್ಲಿಯೇ ಇದ್ದ ಜ್ಞಾನವೆಂಬ ಶಿವನನ್ನು ಆರಾಧಿಸಿ ಆ ಜ್ಞಾನವೇ ತಾನಾದಾಗ ನಿಜ ಭಕ್ತನಾಗುತ್ತದೆ. ಇಲ್ಲದಿದ್ದರೆ ಒಳಗೆ ಹುಳುಕು ಹೊರಗೆ ಭಕ್ತಿಯ ವೇಷ. ಇದು ಪಾತ್ರವೆಂದು ತನಗೆ ಅರಿವಾದರೂ ಕೂಡಾ ತನ್ನ ಮುಖವಾಡವನ್ನು ಕಳಚಿ ಕಿತ್ತೆಸೆಯುವುದಿಲ್ಲ.

ಭಗವದ್ಗೀತೆ ಕುರಾನ್ ಬೈಬಲ್‌ಗಳನ್ನು ಪಠಿಸಿದರೆ ಮನ ಭಕ್ತನಾಗುವುದಿಲ್ಲ; ಬದಲಾಗಿ ಅದರ ಅಜ್ಞಾನ ಅತಿಯಾಗುತ್ತದೆ. ತನುವಿನಲ್ಲಿ ಸಂಗಮವಾದ ಜ್ಞಾನದಿಂದಲೇ ಗ್ರಂಥಗಳು ಬಂದವು. ಜ್ಞಾನ ಎನ್ನುವುದು ತನುವಿನಲ್ಲಿಯೇ ಇದೆ. ತನುವನ್ನು ಆವರಿಸಿದ ಮನಕ್ಕೆ ಜ್ಞಾನದ ಸುಖ ಉಣ್ಣುವ ಬಯಕೆ ಆದಾಗಲೇ ಅದರ ಸಕಲ ಮುಖವಾಡಗಳೂ ಕಳಚಿ ಬೀಳುತ್ತವೆ. ಭಕ್ತ ಗುರು ಶಿಷ್ಯ ಅಧಿಕಾರಿ ಜವಾನ ಕಳ್ಳ ಹಾದರಿಗ ಎನ್ನುವ ವೇಷಗಳನ್ನು ಕಿತ್ತೊಗೆದು ತನುವನ್ನು ತನುವನ್ನಾಗಿಯೇ ನೋಡುತ್ತದೆ. ಸಹಜ ಜ್ಞಾನಿಯಾಗುತ್ತದೆ.

**181**

**ಆನೆಂಬ ಕುಸುಮಕ್ಕೆ ತಾನೆಂಬ ಮಧುಕರನು**
**ಭಾನುವಿನ ಉದಯದಲ್ಲಿ ವಿಕಸವಾಗಿ**
**ಸೋಮವೀಥಿಯ ಬೆಳಗಿ ಹೇಮಶೈಲದ ಉದಯ**
**ಕಾಮದಂಡಿಯ ಹಿಡಿದು ಮನೆಮನೆಗಳ**
**ಸೀಮೆಯನು ಸಂಬಂಧ ಗ್ರಾಮವನು ಮನೆಗಳನು**
**ಆನಳಿದು ಕಂಡೆನೈ ಹವಣು ಹಲವ.**
**ನಿಸ್ಸೀಮನಾ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಸೀಮೆಯನು ಕಾಬವರು ಹಲಬರಿಲ್ಲ.**

ತನು ಬ್ರಹ್ಮಕಮಲ. ಅದರಲ್ಲಿ ಸಂಗಮವಾದ ಪರಿಮಳವೇ ಪರಮಾತ್ಮನು. ಅರಿವಿನ ಸೂರ್ಯನಿಂದ ಅರಳಿ ಭಗವಂತನಲ್ಲಿಗೆ ಹೋಗುವ ದಾರಿ ತೋರುತ್ತಾ ನಿಸ್ಸೀಮನಾಗಿ ನಿಂತಿದೆ. ತಿಳಿಯದ್ದಕ್ಕಾಗಿ, ಸ್ವತಹ ಸ್ವಾನುಭವಕ್ಕೆ ಹೋಗಲು ಇಷ್ಟವಾಗದ್ದಕ್ಕಾಗಿ ಅದು ಕಾಮದಂಡಿಯಾಗಿದೆ.

ತನುಗಳೆಲ್ಲಾ ಒಂದೇ ಆದರೂ ಒಂದು ತನುವಿದ್ದಂತೆ ಮತ್ತೊಂದು ತನುವಿಲ್ಲ. ತನು ತನುವಿಗೂ ವ್ಯತ್ಯಾಸ. ಏಕೆಂದರೆ ನಾನು ಎಂಬ ಅಹಂಕಾರ ಐದು ಜ್ಞಾನೇಂದ್ರಿಯಗಳನ್ನು ಹೊದ್ದುಕೊಂಡಿರುವುದರಿಂದ ನಿರ್ಭಾವ ಒಂದೇ ಆಗಿದ್ದರೂ ಮನ ನಿರ್ಭಾವದತ್ತ ಪಯಣ ಬೆಳೆಸದ ಕಾರಣ ಅದು ಭಾವದಲ್ಲಿ ಉಳಿದಿದೆ. ಭಾವಿಸುವ ಭಾವ ಅರಳುವುದು ತಡವಿಲ್ಲ; ಅದು ಕೂಡಲೇ ಕೆರಳಿ ದುರ್ಭಾವಕ್ಕೆಳೆಸುವುದೂ ತಡವಿಲ್ಲ. ಮನಕ್ಕೆ ನಿಸ್ಸೀಮನ ಪರಿಚಯವಿಲ್ಲದ ಕಾರಣ ಅದು ಸೀಮೆಯಲ್ಲಿಯೇ ಉಳಿದಿದೆ ತನುವನ್ನು ಕಾಮದ ದಂಡಿಗೆಯನ್ನಾಗಿಸಿಕೊಂಡು. ಹೀಗಾಗಿ ಅರಿವೆಂಬ ಗುರುದೇವನನ್ನು ಕಾಣುವ ತವಕವುಳ್ಳ ತನು ತನುವನ್ನು ಆವರಿಸಿದ ಮನ ಅಲ್ಲೊಂದು ಇಲ್ಲೊಂದು ಮಾತ್ರ.

ಸಕಲ ತನುಗಳಲ್ಲಿಯೂ ಅರಿವೆಂಬ ಕಪಿಲಸಿದ್ಧ ಮಲ್ಲಿಕಾರ್ಜುನದೇವನು ವಾಸವಾಗಿದ್ದರೂ ಕೂಡಾ ತನುವನ್ನು ಆವರಿಸಿಕೊಂಡ ಮನ ಅರಿಷಡ್ವರ್ಗಗಳಿಗೆ ಎಳೆಸುವುದರಿಂದ ಅದಕ್ಕೆ ಪರಮಾತ್ಮನನ್ನು ನೋಡುವ ಬಯಕೆ ಇಲ್ಲ.

ಅರಿವೆಂಬ ಗುರುದೇವನನ್ನು ಕೂಡುವ ಬಯಕೆ ಹೊಂದಿದ ಮನ ಮಾತ್ರ ಘನಮನವಾಗುತ್ತದೆ. ಬ್ರಹ್ಮಕಮಲ ಅರಳಿ ಅರಿವಿನ ಮಕರಂದ ಬೀರುತ್ತದೆ. ಸಕಲ ತನುಗಳು ಕೂಡಾ ಗುರುದೇವನ ದರ್ಶನವಾದ ತನುವಿಗೆ ಬ್ರಹ್ಮಕಮಲ ಅರಳಿಸಿಕೊಂಡ ತನುಗಳಂತೆಯೇ ಕಾಣುತ್ತವೆ. ಏಕೆಂದರೆ ಅದು ತನ್ನ ಸೀಮೆಯನ್ನು ತಾನೇ ದಾಟಿ ನಿಸ್ಸೀಮನಾಗಿದೆ. ಕಪಿಲಸಿದ್ಧ ಮಲ್ಲಿಕಾರ್ಜುನ ತಾನೇ ಆಗಿದೆ.

**182**

**ಆನೆತ್ತ ಪರಬ್ರಹ್ಮದಿರುವೆತ್ತ ?**
**ಎಲೆ ಶಿವನೆ, ನೀನೆತ್ತಲೆನ್ನ ಕರನಿವಾಸವು.**
**ಆನತದ ಶ್ರೀಗುರು ಚೆನ್ನಬಸವಣ್ಣನಾಜ್ಞೆವಿಡಿದೀಗ**
**ನಾ ನಿಮ್ಮ ಹೋಬಳಿಯನರಿದೆನಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವಿನ ತನು ಎನ್ನಿಸಿಕೊಂಡರೂ ತನುವಿನ ಅರಿವು ತನುವಿಗೆ ಪರಿಚಯವಾಗಿಲ್ಲ. ತನುವಿನ ಅರಿವೇ ತನುವಿಗೆ ಮರೆವಾಗಿದೆ. ಸ್ವಾನುಭವ ದೂರವಾಗಿದೆ. ಕೇಳಿದ, ನೋಡಿದ, ಓದಿದ ಅರಿವೇ ಮುಂದೆ ಮುಂದೆ ಸಾಗಿದೆ ; ಅದು ಅರಿವಾದರೂ, ಭ್ರಮೆ ಎಂದು ಮನಕ್ಕೆ ತಿಳಿಯುತ್ತಿಲ್ಲ. ಹೀಗಾಗಿ, ಅರಿವೆಂಬ ಗುರುದೇವನೆ ನಿನ್ನನ್ನು ತಿಳಿಯಬೇಕಾದ ನಾನು ನಿನ್ನಿಂದಲೇ ಜನ್ಮ ಪಡೆದಿದ್ದರೂ ನಿನ್ನ ಮರೆತುದರಿಂದ ನಾನೆತ್ತ; ಪರಬ್ರಹ್ಮನೇ ಆದ ನೀನೆತ್ತ?

ಶಿವ ನೀನು. ನೀನು ಬೆಳಗುತ್ತಿರುವುದರಿಂದ ಈ ದೇಹ ಅರಳಿ ನಿಂತಿದೆ. ಆದರೆ ದೇಹವನ್ನು ಆವರಿಸಿದ ಮನಕ್ಕೆ ನೀನಿರುವುದೇ ತಿಳಿಯುತ್ತಿಲ್ಲ. ಶ್ರೀಗುರು ನಿನ್ನನ್ನು ಕುರಿತು ಮನವೆಂಬ ನನಗೆ ಪಾಠ ಮಾಡಿದ ಕಾರಣ ನೀನಿರುವ ಕೈಲಾಸ ನನಗೆ ಪರಿಚಯವಾಯಿತು.

ಸ್ವಾನುಭಾವದಿಂದ ನೋಡಲಾಗಿ ಆ ಕೈಲಾಸವೇ ನನ್ನ ಕಾಯವೆಂದು ನನಗೆ ತಿಳಿಯಿತು.

ನನ್ನಲ್ಲಿಯೇ ಇರುವ ನಿನ್ನನ್ನು ನೋಡಲು ನನಗೆ ತಡವಾಯಿತು. ಶ್ರೀಗುರು ಕೃಪೆಯಿಂದ ನಿನ್ನನ್ನು ನೋಡಲು ನನಗೆ ಅನುವಾಯಿತು. ನಾನು ನಿನ್ನ ಹೋಬಳಿಯವನು.

**183**

**ಆನೆತ್ತ ಪರಮ ಸೂಕ್ಷ್ಮದ ನೆಲೆ ತಾನೆತ್ತ ?**
**ನಾನಾ ಗುಣದ ಅತ್ಯಧಿಕ ಲಿಂಗವನು**
**ಭಾನು ಮಂಡಲದೊಳಗೆ ನೆಲೆಗೊಳಿಸಿದಾತ**
**ಸುಜ್ಞಾನಭರಿತನಯ್ಯಾ ಚೆನ್ನಬಸವಣ್ಣ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪರಮ ಸೂಕ್ಷ್ಮದ ನೆಲೆ ನನ್ನ ತನುವಿನಲ್ಲಿಯೇ ಸಂಗಮಗೊಂಡಿದ್ದರೂ ನನಗೆ ಅದರ ಪರಿಚಯವಿಲ್ಲ. ನಾನೆತ್ತ ಪರಮ ಸೂಕ್ಷ್ಮದ ನೆಲೆ ಎತ್ತ ?

ತನು ಎಂಬುದು ಬರೀ ತನುವಲ್ಲ; ಅದು ಲಿಂಗ. ಸಾತ್ವಿಕ ರಾಜಸ ತಾಮಸ ಗುಣಗಳಿಂದ ಕೂಡಿರುವುದರಿಂದ ಪರಮ ಸೂಕ್ಷ್ಮದ ನೆಲೆಯ ದರುಶನ ತನುವಿಗೆ ಸಾಧ್ಯವಾಗಿಲ್ಲ; ಹಾಗೆಯೇ ತನುವನ್ನು ಆವರಿಸಿಕೊಂಡ ಮನಕ್ಕೂ ಸಾಧ್ಯವಾಗಿಲ್ಲ.

ಮೂರು ಗುಣಗಳಿಂದಾಗಿ ಅತ್ಯಧಿಕ ಗುಣಗಳನ್ನು ಹೊಂದಿದ ಲಿಂಗ ತನುವನ್ನು ನಿರ್ಗುಣಿಯನ್ನಾಗಿಸಿ ಗುಣಾತೀತನ ದರುಶನಕ್ಕಾಗಿ ಭಾನು ಮಂಡಲದೊಳಗೆ ಶ್ರೀಗುರು ಚೆನ್ನಬಸವಣ್ಣನು ನೆಲೆಗೊಳಿಸಿದ ಕಾರಣ ನನಗೆ ಕಪಿಲಸಿದ್ಧ ಮಲ್ಲಿಕಾರ್ಜುನನ ದರುಶನ ಸಾಧ್ಯವಾಯಿತು.

ಪರಮ ಜ್ಞಾನಿ, ಸುಜ್ಞಾನ ಭರಿತ ಚೆನ್ನಬಸವಣ್ಣ ತಂದೆ ನನ್ನನ್ನು ತನ್ನಂತೆ ಮಾಡಿಕೊಂಡ.

**184**

**ಆನೆತ್ತಲಯ್ಯಾ , ಕ್ರಿಮಿಕೀಟಕನಾಗಿ ಹುಟ್ಟುವನ ಹುಟ್ಟ ಕೆಡಿಸಿದೆ.**
**ಇನ್ನಹುದಾನೇನರಿದು ಹೇಳಾ, ಎಲೆ ಅಯ್ಯಾ .**
**ಶುದ್ಧ ಸಿದ್ಧ ಪ್ರಸಿದ್ಧವನು ತೋರಿ**
**ಪ್ರಾಪ್ತಭೋಕ್ತಭುಕ್ತಿಯೆಂಬುದಕ್ಕೆ ಹೊರಗು ಮಾಡಿದೆ.**
**ಇನ್ನು ನಾನೀನಪ್ಪುದೇನರಿದೈ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನ್ನನ್ನು ಮನುಷ್ಯನೆಂದು ಸಕಲರೂ ಗುರುತಿಸುತ್ತಾರೆ. ಏಕೆಂದರೆ, ಮನುಷ್ಯರಂತೆ ಅರಿವಿನ ಮಾಟ ತಾನು ಹೊಂದಿರುವುದರಿಂದ. ಆದರೆ ತಾನು ಮನುಷ್ಯನೇ ಹೇಗೆ ಎಂದು ತನ್ನನ್ನು ತಾನು ಪ್ರಶ್ನಿಸಿಕೊಂಡರೆ ಅಲ್ಲವೇ ಅಲ್ಲವೆಂದು ಉತ್ತರ ನನ್ನಿಂದಲೇ ಬರುತ್ತದೆ.

ತೋರುವುದಕ್ಕೆ ತಾನು ಮನುಷ್ಯನೇ ಹೊರತು ನನಗೆ ನಾನು ಮನುಷ್ಯನಲ್ಲ. ಬರೀ ಮುಖವಾಡ. ಒಳಗೊಂದು ವೇಷ, ಹೊರಗೊಂದು ವೇಷ. ಕ್ರಿಮಿಕೀಟಕಗಳಾದರೊ ಸಹಜವಾಗಿ

ಬದುಕುತ್ತವೆ; ನಾನು ಹಾಗಲ್ಲ. ಅವುಗಳಿಂದಲೂ ಅತ್ತತ್ತ. ಇಂತಹ ಅಜ್ಞಾನಿಯ ಹುಟ್ಟ ಕೆಡಿಸಿ ಜ್ಞಾನಿಯನ್ನಾಗಿಸಿದೆ ತಂದೆ. ಇನ್ನಹುದಾದುದನು ಏನು ಅರಿಯಲಿ ಹೇಳು ತಂದೆ.

ಶುದ್ಧ ಸಿದ್ಧ ಪ್ರಸಿದ್ಧವನು ತೋರಿದೆ. ಪ್ರಾಪ್ತ ಭೋಕ್ತ ಭುಕ್ತಿಯೆಂಬುದಕ್ಕೆ ಹೊರಗು ಮಾಡಿದೆ. ನಾನು ನೀನು ಎನ್ನುವ ಅಜ್ಞಾನವನ್ನು ಕಳೆದು ನಾನಿಲ್ಲದಂತೆ ಮಾಡಿದ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನ ನೀನು. ನಿನ್ನನರಿದು ಧನ್ಯನಾದೆನ್ನೈ.

**185**

**ಆನೆ ಮದಸೊಕ್ಕಿ ಮಾವತಿಗನನರಿಯದು ಕೇಳಿರಣ್ಣಾ.**
**ಮದವುಡುಗಿ ಬೆದರಿ ಇನ್ನೇವೆನಿನ್ನೇವೆನೆಂಬುದಯ್ಯಾ.**
**ಇದಕಂಕುಶವ ಹಿಡಿದಿದ್ದನಯ್ಯಾ,**
**ಎನ್ನ ಕಪಿಲಸಿದ್ಧ ಮಲ್ಲಿನಾಥ ಹಾ ! ಅಯ್ಯಾ !**

ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ತನುವನ್ನು ಆವರಿಸಿದ ಮನ ಮರೆತು ಹೋದಾಗ ಆ ತನು ಮದದಿಂದ ಸೊಕ್ಕಿದ ಮದ್ದಾನೆಯಂತೆ ಇಡೀ ಕಾಡನ್ನೇ ಘೀಳಿಡುವಂತೆ ಒದರುತ್ತದೆ. ಇಡೀ ನಾಡನ್ನೇ ಬೆದರಿಸುತ್ತದೆ. ಅದು ತನುವಿನಲ್ಲಿಯೇ ತನ್ಮಯವಾದ ಗುರುದೇವನನ್ನು ಮರೆತ ಫಲ. ಗುರುದೇವನ ಮಾತು ಕೇಳದ್ದಕ್ಕಾಗಿ ಕೈಲಾಸವೇ ಆಗಬೇಕಾದ ಕಾಯಕ್ಕೆ ಕಾಮದ ಮದ ಆವರಿಸಿಕೊಂಡಿದೆ.

ಆನೆಗೆ ಕಾಮದ ಮದ ಉಕ್ಕುವುದು ಸಹಜ. ಅದು ಪ್ರಾಣಿ. ಸಂತಾನ ಭಾಗ್ಯಕ್ಕಾಗಿ ಕಾಮದ ದ್ರವ್ಯ ಆನೆಯನ್ನು ಮೈಮರೆಸಿತು. ಇಡೀ ಕಾಡನ್ನೇ ನಡುಗುವಂತೆ ಮಾಡಿತು. ಆನೆ ಆನೆಯೊಂದಿಗೆ ಸಂಗಮವಾಗಲು ಕಾಮದ ದ್ರವ್ಯ ಉಡಗಿ ಆನೆ ನಾಚಿ ನೀರಾಯಿತು. ಮಾವುತನ ಅಂಕುಶಕ್ಕೆ ಬೆದರಿ ಬೆವರು ಸುರಿಸಿತು.

ಕಾಯದಲ್ಲಿ ಅರಿವು ಸಂಗಮವಾಗಿದೆ. ಕಾಯ ಮತ್ತೊಂದು ಕಾಯದೊಂದಿಗೆ ಕಾಮದಾಟಕ್ಕೆ ಸಜ್ಜಾಗುವುದು ಮತ್ತೊಂದು ಕಾಯಕ್ಕೆ ಜನ್ಮ ಕೊಡುವುದಕ್ಕಾಗಿ. ಆದರೆ ಜನ್ಮ ಕೊಡುವ ಒಂದು ಸುಸಂದರ್ಭವನ್ನೇ ಕಾಯ ಸುಖವೆಂದು ಭ್ರಮೆಯಿಂದಾಗಿ ತಿಳಿದುಕೊಂಡಿದೆ.

ಕಾಯ ಮತ್ತೊಂದು ಕಾಯಕ್ಕೆ ಜನ್ಮ ನೀಡುವ ಬೇಡಿಕೆ ಇಲ್ಲದಿದ್ದರೂ ಕಾಯ ಕಾಯದೊಂದಿಗೆ ಕಾಮ ಕೇಳಿ ಆಡುತ್ತದೆ. ಕಾಯದಲ್ಲಿ ಹುಟ್ಟಿದ ಅಜ್ಞಾನದ ಮದಕ್ಕೆ, ಯಾವ ಮಾವುತ ಅಂಕುಶ ಇಕ್ಕಬೇಕು ?

ಕಾಯಕ್ಕೆ ಜನ್ಮ ನೀಡುವ ಅವಶ್ಯಕತೆ ಕಾಯಗಳಿಗೆ ಇಲ್ಲದಿದ್ದರೂ ಕಾಯಗಳೆರಡೂ ಕಾಮ ಕೇಳಿಯಲ್ಲಿ ಭಾಗಿಯಾಗುತ್ತವೆ. ಇದು ಮೂರ್ಖತನವೆಂದು ಕಾಯವನ್ನು ಆವರಿಸಿದ ಮನಕ್ಕೆ ಅರಿವಾಗುವುದೇ ಇಲ್ಲ. ಮನದಿಂದಾಗಿ ಕಾಯದಲ್ಲಿ ಕಾಮ ಹುಟ್ಟುತ್ತದೆ. ಕಾಯದಲ್ಲಿ ಹುಟ್ಟಿದ ಕಾಮದ ದ್ರವ್ಯ ಕಾಯವೇ ಹೊರಚೆಲ್ಲಿ ಸುಖವಾಯಿತೆಂದು ಮನ ಭ್ರಮಿಸಿ ನಿಟ್ಟುಸಿರು ಬಿಡುತ್ತದೆ.

ಹೀಗಾಗಿ ಅಲ್ಲಮಪ್ರಭುಗಳು 'ಕಾಮಿನಿ ನಿನ್ನವಳಲ್ಲ' ಇದು ಜಗಕ್ಕೆ ಇಕ್ಕಿದ ವಿಧಿ ಎಂದರು. ಕಾಯದಲ್ಲಿಯೇ ಸಂಗಮವಾದ ಅರಿವಿನಿಂದ ಆಲೋಚನೆ ಮಾಡಿದಾಗ ಕಾಯದಿಂದಲೇ ಕಾಮದ ದ್ರವ್ಯ ಹೊರಬಂದು ಕಾಯ ದಣಿದು ಸುಖವಾಯಿತೆಂದು ಭ್ರಮಿಸುವ ಮನದ ಸುಳ್ಳು ನಾಟಕ ಅರಿವಿಗೆ ಹೊಳೆಯುತ್ತದೆ. ಆಗ ಕಾಮದ ಮದ ಉಡಗಿ ಮನ ಪ್ರಶಾಂತವಾಗಿ ಉಸಿರಾಡುತ್ತದೆ.

ಅರಿವೆಂಬ ಗುರುದೇವನ ಅಂಕುಶ ಮನವೆಂಬ ಮದ್ದಾನೆಗೆ ಬಿದ್ದಾಗಲೇ ಅದು ನಾಚಿ ನೀರಾಗುತ್ತದೆ. ಮನ ಗುರುದೇವನ ಚರಣಕ್ಕೆರಗಿ ಘನಮನವಾಗುತ್ತದೆ.

ಮನದಿಂದಾಗಿ ಕಾಯದಲ್ಲಿ ಆರು ಸರಣಿಯ ಅರಿಷಡ್ವರ್ಗಗಳು ಹುಟ್ಟಿ ; ಕಾಯದ ಆಶ್ರಯ ಪಡೆದು ಕಾಯವನ್ನೇ ಕನಿಷ್ಟ ಮಾಡಿತ್ತು. ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನ ಅಂಕುಶದಿಂದಾಗಿ ಕಾಯವನ್ನು ಆವರಿಸಿದ ಮನವೆಂಬ ಮಾಯೆ ಕಾಯದಲ್ಲಿಯೇ ಮಾಯವಾಯಿತು. ವಿಧಿ ಗುರುದೇವನ ವಶವಾಯಿತು.

**186**

**ಆನೆಯ ಕಾವವನ, ಆಡ ಕಾವವನ ಅಂತರವನರಿ ಕಂಡಾ.**
**ಕೋಡಗನ ಪರಿಯಲಿ ಕುಳ್ಳಿರಲು ನೀನು ಕಲಿ ಕಂಡಾ.**
**ಮರುಳಿನ ಮನದ ಪರಿಯನರಿ ಕಂಡಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ, ಕತ್ತಲೆಯೆಂಬುದ ಕಳೆ ಕಂಡಾ.**
**ಮಕ್ಕಳ ಮತವನರಿ ಕಂಡಾ.**

ಬೆಳಗಿಂಗೆ ಬೆಳಗಾಗಿ ಬೆಳಗಬೇಕಾದ ದೇಹ ಕತ್ತಲೆಗೆ ಗುರಿಯಾಗಿದೆ. ''ಬೆಳಕೂ ಇದೆ; ಕತ್ತಲೂ ಇದೆ; ಇದೇನು ಚೋದ್ಯವೊ'' ಎನ್ನುವಂತೆ ಆಗಿದೆ ದೇಹದ ಸ್ಥಿತಿ. ದೇಹ ಹೋತು ಇದ್ದಂತೆ. ಮನ ಮರ್ಕಟವಿದ್ದಂತೆ. ಮರ್ಕಟ ಮಾಡುವ ಅಜ್ಞಾನದ ಕೆಲಸಗಳೆಲ್ಲ ದೇಹದ ಮೂಲಕ ಕೋತಿ ಮಸರನ್ನ ತಿಂದು ಮೇಕೆ ಮೋತಿಗೆ ಒರಿಸಿದಂತೆ. ಕೋತಿ ಸಿಗುವುದಿಲ್ಲ ; ದೇಹಕ್ಕೆ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಹೀಗಿದೆ ದೇಹದ ಪರಿಸ್ಥಿತಿ. ಸಕಲರೂ ನಿರಪರಾಧಿ ದೇಹದತ್ತ ಬೆರಳು ತೋರಿಸಿ ಆ ದೇಹವನ್ನೇ ದಂಡಿಸುತ್ತಾರೆಯೇ ಹೊರತು ಅಪರಾಧ ಮಾಡಿದ ಕೋತಿಯನ್ನಲ್ಲ.

ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಇಬ್ಬರನ್ನು ಅರಿಯಲು ಹೇಳಿದ್ದಾರೆ. ಅವರ ಅಂತರವನ್ನು ಅರಿತು ಕೋಡಗನ ಪರಿಯಲಿ ಕುಳಿತುಕೊಳ್ಳುವುದನ್ನು ನೀನು ಕಲಿಕಂಡಾ ಎಂದಿದ್ದಾರೆ.

ದೇಹ ಮನಕ್ಕೆ ಉಪಕರಣವಾಗಿದೆ. ಆನೆಯನ್ನು ಪಳಗಿಸುವ ವಿಧಾನ ಮನಕ್ಕೆ ಕರಗತವಾಗಿದೆ. ದೇಹ ಆಡಿನಂತೆ ಮನಕ್ಕೆ ಬಳಕೆಯಾಗುತ್ತದೆ. ಕಳ್ಳ ಭ್ರಷ್ಟಾಚಾರಿ ಸುಳ್ಳು ಹಾದರದ ಸುಖವನ್ನು ತನುವಿನ ಮೂಲಕ ಉಂಡು ಅದು ನಾಪತ್ತೆಯಾಗುತ್ತದೆ. ಆಡಿನಂತೆ ಇರುವ ದೇಹ ಅಪರಾಧಿಯಂತೆ ಸಿಕ್ಕಿ ಹಾಕಿಕೊಳ್ಳುತ್ತದೆ. ದೇಹವನ್ನು ದೇಹವೇ ದಂಡಿಸುತ್ತದೆ. ದಂಡಿಸುವ ದೇಹ, ದಂಡನೆಗೆ ಒಳಗಾದ ದೇಹಗಳೆರಡಕ್ಕೂ ಮನ ಮಾಡಿದ ಅಪರಾಧ ಹೊಳೆಯುವುದೇ ಇಲ್ಲ. ಇದು ದೇಹದ ದುರ್ದೈವದ ಸಂಗತಿ. ಹೀಗಾಗಿ ಪುರಂದರ ದಾಸರು 'ಅಪರಾಧಿ ನಾನಲ್ಲ, ಅಪರಾಧ ಎನಗಿಲ್ಲ, ಕಪಟ ನಾಟಕ ಸೂತ್ರಧಾರಿ ನೀನು' ಎಂದು ಹಾಡಿದ್ದಾರೆ.

ದೇಹ ತಾನು ಯಾವ ಅಪರಾಧಗಳನ್ನು ಮಾಡದಿದ್ದರೂ ತಾನೇ ಮಾಡಿರುವುದಾಗಿ ಒಪ್ಪಿಕೊಳ್ಳುತ್ತದೆ. ಆದರೂ ಅಪರಾಧ ಮಾಡಿದ ಮನಕ್ಕೆ ಅರ್ಥವಾಗುವುದೇ ಇಲ್ಲ. ದೇಹಕ್ಕೆ ಪೆಟ್ಟು ಬಿದ್ದಂತೆಲ್ಲ ಮನಕ್ಕೆ ಬಲು ಸುಖ! ದೇಹಕ್ಕೆ ಸುಖವಾದರೂ ಮನಕ್ಕೆ ಸುಖ; ದೇಹಕ್ಕೆ ದುಃಖವಾದರೂ ಮನಕ್ಕೆ ಸುಖ. ಏಕೆಂದರೆ ಸುಖ ದುಃಖಗಳ ಸುಖವನ್ನು ಮನ ದೇಹದ ಮೂಲಕ ಅನುಭವಿಸುವುದರಿಂದ!

ಮನ ಆನೆಯನ್ನು ಪಳಗಿಸಿದರೂ ಅದಕ್ಕೆ ಮದವೇರಿದಾಗ ಮಾವುತನನ್ನು ಅವನ

ಅಂಕುಶವನ್ನು ಅದು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಮಾವುತನನ್ನು ಕೊಂದು ಬಿಡುತ್ತದೆ.

ಆಡಿನಂತೆ ಇರುವ ದೇಹದ ಸ್ಥಿತಿ ಹಾಗಲ್ಲ. ಸಕಲ ಅಪರಾಧಗಳನ್ನು ತಾನೇ ಮಾಡಿರುವುದಾಗಿ ಮಾಡದಿದ್ದರೂ ಒಪ್ಪಿಕೊಂಡು ದಂಡನೆಗೆ ಒಳಗಾಗುತ್ತದೆ. ಏಕೆಂದರೆ ದೇಹವೆಂಬುದು ದೇವಾಲಯ. ಅದರಲ್ಲಿ ಅರಿವಿನ ದೇವರು ವಾಸ ಮಾಡುತ್ತಿದ್ದಾನೆ. ದೇಹವನ್ನೇ ಪಶುವನ್ನಾಗಿಸಿ ದೇವರು ತನ್ನ ವಾಹನ ಮಾಡಿಕೊಂಡಿದ್ದಾನೆ. ಹೀಗಾಗಿ ಪಶುಪತಿ ಎಂದು ಹೆಸರು ಪಡೆದಿದ್ದಾನೆ. ಪಶುಗಳನ್ನು ಕಾಯುವ ದನಗಾಹಿ ಆತ.

'ಬಡಪಶು ಪಂಕದಲ್ಲಿ ಬಿದ್ದಡೆ ಕಾಲ ಬಡಿವುದಲ್ಲದೆ ಮತ್ತೇನ ಮಾಡಬಲ್ಲದು', ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ತಂದೆ ನಿನ್ನ ಬಯ್ಯದಂತೆ ಮಾಡು' ಎಂದು ಬಸವಣ್ಣನವರು ಹೇಳಿದ ಮಾತು, ಸಿದ್ಧರಾಮ ಶಿವಯೋಗಿಗಳು ಹೇಳಿದ ಮಾತು ಇಲ್ಲಿ ಸಾಮ್ಯವಾಗುತ್ತದೆ. ಓದುಗರು ಅಧ್ಯಯನಶೀಲರಾಗಿ ಆಲೋಚನೆಗೆ ತೊಡಗಿದಾಗ ದೇಹದ ಸ್ಥಿತಿಗತಿಗಳು ಅರ್ಥವಾಗುತ್ತವೆ. ಇಲ್ಲವಾದಲ್ಲಿ ಆ ಭಗವಂತನೇ ದೇಹದ ಸಹಾಯಕ್ಕೆ ಬರಬೇಕು.

ದೇಹಕ್ಕೆ ವಂಚನೆ ಮಾಡಿ, ದೇಹದಲ್ಲಿಯೇ ವಾಸ ಮಾಡಿ, ದೇಹವನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವ ಮರಳು ಮನದ ಮೋಸವನ್ನು ದೇಹ ಅರಿತು ಒಮ್ಮೆಯಾದರೂ ಮನವೆಂಬ ಮರ್ಕಟನಿಗೆ ಬುದ್ಧಿ ಕಲಿತು ಮನದ ಮೇಲೆ ಸವಾರಿ ಮಾಡಲು ಸಜ್ಜಾಗು ದೇಹವೇ ಎಂದು ದೇಹಕ್ಕೆ ಕಿವಿಮಾತು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಮನ ಕತ್ತಲು. ಅದು ತನುವನ್ನು ಯಾಮಾರಿಸಿ ಬೆಳಕಿನ ಮಾತು ಆಡುತ್ತದೆ. ಅದು ಬೆಳಕಲ್ಲವೆಂದು ದೇಹಕ್ಕೆ ತಿಳಿಯದು. ಮನವೆಂಬ ಮರ್ಕಟವನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳದೆ, ದೇಹವೆಂಬ ಆಡನ್ನು ಕಾಯುವ ಪಶುಪತಿಯ ಪರಿಚಯ ಮನಕ್ಕೆ ಆಗುತ್ತಿಲ್ಲ. ಮನ ದೇಹ ದೇವರು ಎಂಬ ತ್ರಿಕೋನದ ಮಕ್ಕಳ ಆಟ ದೇಹದಲ್ಲಿ ನಡೆದಿದೆ. ಇದು ದೇಹವನ್ನು ಆವರಿಸಿದ ಮನಕ್ಕೆ ಅರ್ಥವಾಗಬೇಕು. ಕೂಡಲೇ ಬೆಳಗಿಂಗೆ ಬೆಳಕಾಗಿ ಬೆಳಗುತ್ತದೆ.

**187**

**ಆಪ್ಯಾಯನವರತು ಪರಿಣಾಮ ನೆಲೆಗೊಂಡು**
**ಅರಿವರತು ಮರಹು ನಷ್ಟವಾದವರ**
**ಕುರುಹುಗೆಟ್ಟು ಪದವ ಮೀರಿ**
**ಸೀಮೆಯ ದಾಂಟಿದವರ ತಂದು ತೋರಾ, ಅಯ್ಯ ನಿಮ್ಮ ಧರ್ಮ.**
**ಎನ್ನ ಭವದ ಬೇರ ಹರಿವೊಡೆ**
**ತಂದು ತೋರಾ, ಇವರ ತಂದು ತೋರು.**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನನ ಹತ್ತೆ ಸಾರಿಸಾ ಬಸವಣ್ಣಾ .**

ಶರಣರು ಮಹಾಜ್ಞಾನಿಗಳು. ಅವರು ವಿಜ್ಞಾನಿಗಳು. ಭೌತಿಕ ವಿಜ್ಞಾನಿಗಳನ್ನು ಕಂಡು ಹಿಡಿಯುವುದು ಸುಲಭ. ಮಹಾಜ್ಞಾನಿಗಳೇ ತಾವಾಗಿ, ಜ್ಞಾನಿ ಆಗುವ ಬಗೆ ಬಗೆಯ ಸೂತ್ರ ಹೇಳಿಕೊಡುವ ವಿಜ್ಞಾನಿಗಳು ದೊರೆಯುವುದು ದುರ್ಲಭ.

ಜ್ಞಾನಿಗಳನ್ನು ಕಂಡು ಹಿಡಿಯುವದು ಮನುಷ್ಯನಿಗೆ ಸುಲಭದ ಕೆಲಸವಲ್ಲ. ಜ್ಞಾನಿಗಳಂತೆ ವೇಷ ಹಾಕಿದ ಜನ ಮನುಷ್ಯರಿಗೆ ಸಾಕಷ್ಟು ಸಿಕ್ಕುತ್ತಾರೆ. ಆದರೆ ಅವರು ವೇಷಧಾರಿಗಳೇ ಹೊರತು

ಜ್ಞಾನಿಗಳಲ್ಲ. ಜ್ಞಾನಿಗಳು ವೇಷ ಧರಿಸುವುದಿಲ್ಲ. ನಾನು ಜ್ಞಾನಿಯೆಂದು ಹೇಳಿಕೊಳ್ಳುವುದಿಲ್ಲ. ಆದರೆ ಅವರ ಮಾತುಗಳೆಲ್ಲ ಜ್ಞಾನದ ಸೂತ್ರಗಳೇ ಆಗಿರುತ್ತವೆ. ಅವರ ಇರುವಿಕೆಯೇ ಬೇರೆ.

ಜ್ಞಾನಿಗಳನ್ನು ಜ್ಞಾನಿ ಮಾತ್ರ ಕಂಡುಹಿಡಿಯಬಲ್ಲ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ''ಕುರುಹುಗೆಟ್ಟು ಪದವ ಮೀರಿ ಸೀಮೆಯ ದಾಟಿದವರ, ತಂದು ತೋರಾ ಅಯ್ಯಾ ನಿಮ್ಮ ಧರ್ಮ'' ಎಂದಿದ್ದಾರೆ.

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಕುರಿತು ಅರಿವರಿತು ಮರಹು ನಷ್ಟವಾದವರನ್ನು ಕಂಡು ಹಿಡಿಯಲು ನನಗೆ ಸಾಧ್ಯವಾಗುವುದಿಲ್ಲ. ಅಂಥ ಗುರುದೇವನನ್ನು ನನಗೆ ನೀನೇ ತೋರಿಸು ಗುರುದೇವನೇ ಎಂದು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

ನನ್ನ ಜನನ ಮರಣದ ಬಾಧೆಯ ಬೇರ ಕಿತ್ತೆಸೆಯಲು ಅವನಿಗೆ ಮಾತ್ರ ಸಾಧ್ಯ. ಆದರೆ ಅಂತಹ ಗುರುದೇವನು ಹೇಗಿರುತ್ತಾನೆ ಎಂದು ನನಗೆ ಗೊತ್ತಿಲ್ಲ. ಸ್ವರೂಪ ಜ್ಞಾನಿಗಳು ಮಾತ್ರ ಸ್ವರೂಪಜ್ಞಾನವನ್ನು ಮಾಡಿಸಬಲ್ಲರು. ಆದರೆ ಅವರು ಎಲ್ಲಿರುತ್ತಾರೆ? ಹೇಗಿದ್ದಾರೆ ಎಂದು ನನಗೆ ಗೊತ್ತಿಲ್ಲ ತಂದೆ, ನನ್ನ ಹತ್ತಿರ ಅವರನ್ನು ಸುಳಿಯುವಂತೆ ಮಾಡು ಭಗವಂತನೇ. ಕಪಿಲಸಿದ್ಧ ಮಲ್ಲಿಕಾರ್ಜುನನಾದ ನಿನ್ನ ದರುಶನವನ್ನು ಮಾಡಿಸಲು ಅವರಿಗೆ ಮಾತ್ರ ಸಾಧ್ಯವೆಂದು ನನಗೆ ತಿಳಿದಿದೆ. ಆದರೆ ಅವರ ದರುಶನ ಭಾಗ್ಯವನ್ನು ನೀನೇ ನನಗೆ ಕಲ್ಪಿಸು ತಂದೆಯೇ. ಏಕೆಂದರೆ ನನ್ನ ಹಡೆದ ತಂದೆ ನೀನು ಈ ಕೆಲಸ ನನಗೆ ಮಾತ್ರ ಸಾಧ್ಯ ಎಂದು ಪ್ರಾರ್ಥಿಸಿದ್ದಾರೆ.

**188**

**ಆಮೋದ ತುಂಬಿದ ಭೇದಂಗಳಂ ಭೇದಿಸಿ**
**ಮೋದದಿಂದೊಪ್ಪಿರ್ದ ಮಧ್ಯಮದಲಿ**
**ಆಧಾರ ಸ್ವಾದಿಷ್ಠ ಆನಂದ ಪಂಚಮದ**
**ತೋರಿಪ್ಪನತಿಶಯದ ವರ್ಗವಾರಾ,**
**ಮೀರಿಪ್ಪ ತತ್ವದಲಿ ತೋರಿಪ್ಪ ಬೊಮ್ಮದಲಿ**
**ತಾನು ತಲ್ಲೀಯ ಕಪಿಲಸಿದ್ಧ ಮಲ್ಲೇಶ್ವರನು.**

ಕಾಯವೇ ಕೈಲಾಸ, ಆದರೂ ಕಾಯಕ್ಕೆ ತಾನು ಕೈಲಾಸವೆಂದು ತಿಳಿದಿಲ್ಲ. ಕೈಲಾಸಕ್ಕೆ ಕೈಲಾಸವೆಂದು ತಿಳಿದರೆ ಅದನ್ನು ಕೈಲಾಸವೆನ್ನಲು ಸಾಧ್ಯವೆ? ಅಷ್ಟೊಂದು ಮುಗ್ಧವಾದುದು ಕೈಲಾಸ ಕಾಯ.

ಕಾಯವನ್ನು ಆವರಿಸಿದ ಮನ ಪಂಡಿತನಾಗಿ ಕಾಯದಲ್ಲಿ ಪಂಚ ಜ್ಞಾನೇಂದ್ರಿಯಗಳನ್ನು ಸೃಷ್ಟಿ ಮಾಡಿತು; ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂದು. ಆದರೂ ಕಾಯ ಅವು ನಾನೇ ಎನ್ನಲಿಲ್ಲ. ಪಂಚ ಜ್ಞಾನೇಂದ್ರಿಯಗಳಲ್ಲಿ ಜ್ಞಾನವೂ ಇದೆ; ಅಜ್ಞಾನವೂ ಇದೆ ಎಂದು ಜ್ಞಾನ-ಅಜ್ಞಾನಗಳನ್ನು ಬೇರ್ಪಡಿಸಿ ಹೇಳಿತು. ಆದರೂ ಕಾಯ ಅದಕ್ಕೆ ಉತ್ತರ ಕೊಡಲಿಲ್ಲ.

ಆಧಾರ ಸ್ವಾದಿಷ್ಠಾದಿ ಆರು ಚಕ್ರಗಳನ್ನು ಕಾಯದಲ್ಲಿ ಸೃಷ್ಟಿ ಮಾಡಿ ಅವುಗಳಿಂದ ಮುಕ್ತಿ ಪಡೆಯುವ ಸೂತ್ರವನ್ನು ಹೇಳಿತು ಮನ. ಆದರೂ ಕಾಯ ಮೌನದಿಂದಲೇ ಇದೆ. ಏಕೆಂದರೆ ಕಾಯ ಸ್ವತಹ ಕೈಲಾಸವೇ ಆಗಿದೆ.

ವ್ಯಾಸ ಮಹರ್ಷಿಗಳು ಕಾಯದಲ್ಲಿಯೇ ಪಾಂಡವರನ್ನು ಸೃಷ್ಟಿ ಮಾಡಿದರು;

ಕಾಯದಲ್ಲಿಯೇ ಕೌರವರನ್ನು ಸೃಷ್ಟಿ ಮಾಡಿದರು. ಕಾಯದಲ್ಲಿಯ ಮನವನ್ನು ದ್ರೌಪದಿಯನ್ನಾಗಿಸಿದರು. ಕಾಯದಲ್ಲಿಯೇ ನೆಲೆಮಾಡಿ ನಿಂತ ಅರಿವೆಂಬ ಗುರುದೇವನನ್ನು ಶ್ರೀಕೃಷ್ಣನನ್ನಾಗಿಸಿದರು. ಕಾಯವನ್ನೇ ರಥವನ್ನಾಗಿಸಿ ಮನವನ್ನೇ ಅರ್ಜುನನನ್ನಾಗಿಸಿ ಕಾಯದಿಂದಲೇ ಕಾಯಗಳೊಂದಿಗೆ ಯುದ್ಧದ ಸನ್ನಿವೇಶ ಸೃಷ್ಟಿ ಮಾಡಿದರು. ಆದರೂ ಕಾಯ ಅದೆಲ್ಲ ತಾನೇ ಎಂದು ಬಾಯ್ಬಿಟ್ಟು ಹೇಳಲೇ ಇಲ್ಲ. ಕಾಯ ಮೌನದಿಂದಲೇ ಇದೆ.

ಪಾಂಡಿತ್ಯದಿಂದ ಕಾಯ ಮನ ಅರಿವು ಎಂದು ಬೇರ್ಪಡಿಸಿ ಹೇಳಿದರೂ ಮೀರಿಪ್ಪ ತತ್ವದಲಿ ತೋರಿಪ್ಪ ಬೊಮ್ಮದಲಿ ತಾನು ತಲ್ಲೀಯ ಕಪಿಲಸಿದ್ಧ ಮಲ್ಲಿಕಾರ್ಜುನ.

ಕಾಯವೇ ತ್ರಿಕೂಟ ಸಂಗಮ. ಹೀಗಾಗಿ ಬಸವಣ್ಣನವರು 'ಕೂಡಲ ಸಂಗಮದೇವರು ನಗುತಿರ್ದನಯ್ಯಾ' ಎಂದು ಹೇಳಿದ್ದಾರೆ. ಮನ ಪಂಡಿತನಾಗಿ ಹಲವಾರು ಸೂತ್ರಗಳನ್ನು ರಚಿಸಿದರೂ ಪ್ರಶಾಂತವಾದ ಸ್ಥಳಕ್ಕೆ ತಾನೇ ಪಯಣಿಸಿ ಗಮ್ಯ ಸೇರಬೇಕಾಗಿದೆ.

ಪ್ರಯಾಣವೆಂದರೂ ಅಲ್ಲಿ ಪ್ರಯಾಣವೇ ಇಲ್ಲ. ಕಾಯ ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ. ಹೀಗೆ ಕಾಯ ತ್ರಿಕೂಟ ಸಂಗಮವೇ ಆಗಿರುವಾಗ ಯಾವುದು ಎಲ್ಲಿ ಸೇರಿ ಮುಕ್ತಿಯನ್ನು ಕಂಡುಕೊಳ್ಳಬೇಕು? ಇದು ಪರಮಾಶ್ಚರ್ಯದ ಸೋಜಿಗದ ಕಾಯಕ. ಕಾಯದ ಕಾಯಕ. ಮನ ಕಾಯವನ್ನು ಹಿಡಿದು ಕಾಯದ ಮೂಲಕ ಕಾಯದಲ್ಲಿಯೇ ಇರುವ ಕೈಲಾಸದ ಕಾಯಕ ಮಾಡಬೇಕಾಗಿದೆ. ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ತಲ್ಲೀಯವಾಗಲು.

**189**

**ಆಯತವಾದ ಆರು ಗ್ರಾಮಕ್ಕೆ ಅರುವರು**
**ತಳವಾರನಿಕ್ಕಿದ ನಮ್ಮರಸು.**
**ಅರಸಿಂಗೆ ಕಟ್ಟಿತ್ತು ತೊಟ್ಟಿಯ ಮುಖಸಾಲೆಯ ಮಂಟಪ.**
**ಆ ತಳವಾರರಿಗೆ ಕಟ್ಟಿತ್ತು ಕೈಸಾಲೆಯ ಮಂಟಪ.**
**ಆ ಒಬ್ಬೊಬ್ಬ ತಳವಾರಂಗೆ ಆರಾರು ಗೆಣೆಯರ ಕೂಡಿಸಿ ಕೊಡಲು,**
**ಆ ಗೆಣೆಯರು ತಮಗೊಬ್ಬೊಬ್ಬರಿಗೆ**
**ಆರಾರು ಖಖರ ಕೂಡಿಕೊಂಡ ಪರಿಯ ನೋಡಾ.**
**ಆ ಸಖರು ಆ ಗೆಣೆಯರೊಳಡಗಿ,**
**ಆ ಗೆಣೆಯರು ಆ ತಳವಾರರೊಳಡಗಿ,**
**ಆ ತಳವಾರರ ಕಂಡು ಅರಸು ತನ್ನ ಹೆಂಡತಿಯ**
**ತಬ್ಬಿಕೊಂಡು ಉರಿಯ ಪೊಗಲಾಗಿ,**
**ಎನ್ನ ಗಂಡ ಕಪಿಲಸಿದ್ಧ ಮಲ್ಲಿಕಾರ್ಜುನನ**
**ನಾ ಕೇಳಲು ಬಯಲ ಬಿತ್ತಿ ಎಂದನು.**

ಅರಿವಿನ ಗಂಡ ಕಪಿಲಸಿದ್ಧ ಮಲ್ಲಿಕಾರ್ಜುನನ ಆಟ ಒಂದೊಂದಲ್ಲ. ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ಪರಮಾನಂದದಿಂದ ವೀಕ್ಷಣೆ ಮಾಡಲು ಕಾಯವನ್ನು ಸೃಷ್ಟಿ ಮಾಡಿದ. ಆ ಕಾಯವನ್ನು ಆವರಿಸಿಕೊಂಡು ಕಾಯವನ್ನೇ ತನ್ನ ಸಾಮ್ರಾಜ್ಯವನ್ನಾಗಿ

ಮಾಡಿಕೊಂಡು ಕಾಯದೊಂದಿಗೆ ಮಾಯೆಯ ಅಜ್ಞಾನದ ಸುಖವನ್ನು ಅನುಭವಿಸಿ ವ್ಯರ್ಥ ಕಾಲ ಕಳೆಯುವ ಮಾಯೆ ಎಂಬ ಮನವುಳ್ಳ ಅರಸನನ್ನು ಸೃಷ್ಟಿ ಮಾಡಿದ.

ಕಾಯವೆಂಬುದು ಸಕಲ ಬ್ರಹ್ಮಾಂಡವನ್ನೇ ತನ್ನೊಳಗೆ ಅಡಗಿಸಿಕೊಂಡ ಕೈಲಾಸ. ಅದು ಆಯತವಾದ ಅರಿವಿನ ಸಂಪತ್ತುಳ್ಳ ಸಾಮ್ರಾಜ್ಯ. ಕಾಯವೆಂಬ ಅರಿವಿನ ಸಾಮ್ರಾಜ್ಯವನ್ನೇ ವಿಂಗಡಿಸಿ ಆರು ಗ್ರಾಮಗಳನ್ನಾಗಿಸಿ, ಆ ಆರು ಗ್ರಾಮಗಳಿಗೆ ತಳವಾರರನ್ನು ನೇಮಿಸಿ ಕೈಸಾಲೆ ಮಂಟಪ ತಳವಾರರಿಗೆ ಕೊಟ್ಟು, ತೊಟ್ಟಿಯ ಮುಖಸಾಲೆ ಮಂಟಪದಲ್ಲಿ ಅರಸ ನೆಲೆಸಿದ.

ಕಾಯ ಒಂದೇ. ಆರು ತಳವಾರರು. ಆರು ತಳವಾರರಿಗೆ ಆರಾರು ಗೆಣೆಯರ ಕೂಡಿಸಿ, ಆ ಗೆಳೆಯರು ಒಬ್ಬೊಬ್ಬರಿಗೆ ಆರಾರು ಸಖರು ಕೂಡಿಕೊಂಡ ಪರಿಯ ನೋಡಾ. ಅಂದರೆ ಒಂದು ಕಾಯದೊಳಗೆ ಮೂವತ್ತಾರು ತತ್ವಗಳನ್ನು ಹೆಣೆದು; ಆ ಮುವತ್ತಾರು ತತ್ವಗಳ ಮೂಲಕ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಪಡೆಯುವ ವಿಧಾನವನ್ನು ಮನಕ್ಕೆ ಬೋಧಿಸುವ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಈ ಬೆಡಗಿನ ವಚನದ ಮೂಲಕ ಇಲ್ಲಿ ವಿವರಿಸಿದ್ದಾರೆ.

ಆ ತಳವಾರರ ಕಂಡು, ಅರಸು ತನ್ನ ಹೆಂಡತಿಯ ತಬ್ಬಿಕೊಂಡು ಜ್ಞಾನಾಜ್ಞೆಯೆಂಬ ಉರಿಯ ಪೊಗಲಾಗಿ ಪುನಃ ಎನ್ನ ಅರಿವಿನ ಗಂಡ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೇಳಲಾಗಿ ಆತ ಬಯಲ ಬಿತ್ತಿ ಎಂದನು.

ಕಾಯ, ಬಯಲ ಬೀಜದಿಂದ ಹುಟ್ಟಿದ ಜ್ಞಾನದ ಮರ. ಬೀಜ ವೃಕ್ಷ ಸಂಬಂಧದಂತೆ. ಹೀಗಾಗಿ ಬುದ್ಧ ಇದನ್ನು ಬೋಧೀವೃಕ್ಷ ಎಂದು ಕರೆದ.

ಕಾಯವನ್ನು, ಕಾಯ ಆವರಿಸಿದ ಮನದಿಂದಲೇ ಕಾಯವನ್ನು ವೀಕ್ಷಿಸಿದಾಗ ಕಾಯ ಕೈಲಾಸದಂತೆ ಕಾಣುತ್ತದೆ. ಸಕಲ ಬ್ರಹ್ಮಾಂಡ ಕಾಯದಲ್ಲಿ ಚುಳುಕಾದುದು ಗೋಚರಕ್ಕೆ ಬರುತ್ತದೆ. ಮನಕ್ಕೆ ನೋಡುವ ಬಲಬೇಕು. ಹೀಗಾಗಿ ಅದು ಅನಿವಾರ್ಯವಾಗಿ ಮೂವತ್ತಾರು ತತ್ವಗಳ ಮೂಲಕ ಹೋಗಲು ಯತ್ನಿಸಿ ಆ ತತ್ವಗಳನ್ನು ಕೂಡಾ ಸುಟ್ಟು ಹಾಕಿ ಮನ ತಾನೂ ಇಲ್ಲವಾಗುತ್ತದೆ. ಆಗ ಕಾಯ; ಕಾಯದಲ್ಲಿ ಸಂಗಮವಾದ ಅರಿವೆಂಬ ಶಿವ ಮಾತ್ರ ಉಳಿದು; ಕಾಯ ಕೈಲಾಸವಾಗುತ್ತದೆ. ಸಿದ್ಧರಾಮ ಶಿವಯೋಗಿಯೇ ತಾನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

ಎಮ್ಮ ಗಂಡನು ಏಕಾಂತಂಬೊಕ್ಕನು; ಬೇಗ ಬೇಗ ಹೊರನಡೆಯಿರಿ ಅಣ್ಣಗಳಿರಾ. ಒಬ್ಬರಿದ್ದರೂ ಸಹಿಸನು ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಮತ್ತೊಂದು ವಚನದಲ್ಲಿ ಹಾಡಿದ್ದಾರೆ.

ತಾನು ಸಖಿಯಾಗಿ, ಅರಿವೆಂಬ ಶಿವನನ್ನೇ ಸಖನನ್ನಾಗಿಸಿಕೊಂಡು; ಕಾಯವನ್ನೇ ಮನೆ ಮಾಡಿಕೊಂಡು ತನ್ನ ಅರಿಷಡ್ವರ್ಗಗಳೆಂಬ ಅಜ್ಞಾನಿ ಸಹೋದರರನ್ನು ಮನೆಯಿಂದ ಆಚೆ ಕಳುಹಿಸುವ ಸರಳ ಸೂತ್ರವನ್ನು ಮತ್ತೊಂದೆಡೆ ಹೇಳಿದ್ದಾರೆ.

ಕಾಯ ತನ್ನದೇ. ಕಾಯದಲ್ಲಿಯೇ ಸಂಗಮವಾದ ಜ್ಞಾನವೂ ತನ್ನದೇ. ಕಾಯವನ್ನು ಆವರಿಸಿದ ಅಜ್ಞಾನವವೂ ತನ್ನದೇ. ಹೀಗೆ ಸಾಕ್ಷಿಯಾಗಿ ನೋಡಿಕೊಂಡು; ಅಜ್ಞಾನವನ್ನು ಹೊರಗೆ ಹಾಕುವ ಯತ್ನವನ್ನು ತಾನೇ ಮಾಡಿಕೊಳ್ಳಬೇಕು. ಇದು ಸಕಲ ಶರಣರ ಆಶಯ. ಇದೊಂದು ಸ್ವಯಂ ಜ್ಞಾನ ಕ್ರಾಂತಿ. ತನಗೆ ತಾನೇ ಕಡ್ಡಾಯವಾಗಿ ಪಾಲ್ಗೊಳ್ಳಲೇಬೇಕಾದ ಸ್ವಯಂ ಕ್ರಾಂತಿ.

**ಆಯಿತ್ತಾಯಿತ್ತು ಫಲವಿಲ್ಲದ ವೃಕ್ಷ,**
**ಆಯಿತ್ತಾಯಿತ್ತು ಪದವಿಲ್ಲದ ಫಲ,**
**ಆಯಿತ್ತಾಯಿತ್ತು ಸೀಮೆಯ ಮೀರಿದ ಸಂಬಂಧ,**
**ಆಯಿತ್ತಾಯಿತ್ತು ಅನ್ವಯದಲ್ಲಿ ಆಂದೋಳ,**
**ಆಯಿತ್ತಾಯಿತ್ತು ನಿತ್ಯದಲ್ಲಿ ಭಕ್ತಿ,**
**ಆಯಿತ್ತಾಯಿತ್ತು ಭಕ್ತಿಯಲ್ಲಿ ವೈರಾಗ್ಯ**
**ಆಯಿತ್ತಾಯಿತ್ತು ವೈರಾಗ್ಯದಲ್ಲಿ ಅನುಗುಣ,**
**ಆಯಿತ್ತಾಯಿತ್ತು ಅನುಗುಣದಲ್ಲಿ ಸ್ವಾನುಭಾವದ ಸಕಲಭಕ್ತಿ .**
**ಸಕಲಭಕ್ತಿಯಿಂದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ಸಂಯೋಗ ಬಸವಣ್ಣಂಗೆ.**

ಫಲ ಪದವಿಲ್ಲದ ವೃಕ್ಷದಲ್ಲಿ ಸೀಮೆಯ ಮೀರಿದ ನಿಸ್ಸೀಮ ಸಂಬಂಧ ಉಂಟಾಗಿದೆ. ಇದು ಮನದ ಅರಿವಿನ ಸ್ವಯಂಕ್ರಾಂತಿಯಿಂದಾಗಿ; ಆಂದೋಲನದಿಂದಾಗಿ ಸ್ವಯಂ ತನುವಿನಲ್ಲಿ ಶುದ್ಧ ಸಿದ್ಧ ಪ್ರಸಿದ್ಧ ವಸ್ತು ಪ್ರಕಟವಾಗಿದೆ.

ತನುವಿನಲ್ಲಿ ತಂತಾನೆ ಭಕ್ತಿ ಉಂಟಾಗಿದೆ. ಸಕಲ ತನುಗಳನ್ನು ನೋಡಿ, ನೋಡಿದ ಸಕಲ ತನುಗಳಿಗೂ ತಾನು ಅತ್ಯಂತ ಕಿರಿಯನಾಗಿ ಶರಣು ಶರಣಾರ್ಥಿಯೆಂದು ತನ್ನ ಭಕ್ತಿಯನ್ನು ಸಮರ್ಪಿಸುತ್ತದೆ.

ತಾನು ಆಸೆ ಮಾಡಿದ ವಸ್ತುಗಳಲ್ಲಿ ತನಗೆ ವೈರಾಗ್ಯ ಹುಟ್ಟಿ ಆ ಸಕಲ ವಸ್ತುಗಳನ್ನು ತೃಣ ಸಮಾನವಾಗಿ ನೋಡುತ್ತಲಿದೆ. ಯಾವ ವಸ್ತುಗಳ ಮೇಲೆಯೂ ಮನಕ್ಕೆ ಆಸೆಯಿಲ್ಲ. ಹೀಗಾಗಿ ಆ ವಸ್ತುಗಳನ್ನು ಮನ ಆಸೆಗಣ್ಣಿನಿಂದ ನೋಡಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಮಾಯದ ಮನದ ಕಣ್ಣು ಮಾಯವಾಗಿ ಮುಕ್ಕಣ್ಣನ ಕಣ್ಣು ಕಣ್ಣಲ್ಲಿಯೇ ಪ್ರಕಟವಾಗಿದೆ.

ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತನಿಗಲ್ಲ ಎನ್ನುವ ಮಾತು ತನುವಿನಲ್ಲಿ ಸಿದ್ಧವಾಗಿದೆ. ತನು ಸಾತ್ವಿಕ ರಾಜಸ ತಾಮಸ ಗುಣಗಳನ್ನು ಕಳೆದುಕೊಂಡಿದೆ. ಅಲ್ಲಿ ನಿರ್ಗುಣದ ಬುಗ್ಗೆ ಪ್ರಕಟವಾಗಿರುವುದರಿಂದ ವೈರಾಗ್ಯ ಹುಟ್ಟಿದೆ. ಸದ್ಗುಣಿಯಾಗಿದೆ. ಸಕಲ ಗುಣಗಳನ್ನು ಹೊರಚೆಲ್ಲಿದ ತನು ಅನುಗುಣಿಯಾಗಿದೆ.

ತನುವಿನ ಮೂಲಕ ನಿರ್ಗುಣ ಹೊರಚಿಮ್ಮಿ ಅದರಲ್ಲಿ ಸ್ವಾನುಭಾವದ ಬ್ರಹ್ಮರಸ ಉತ್ಪನ್ನವಾಗಿದೆ. ನವರಸಗಳ ಫಲ ಪದವಿಗಳನ್ನು ಕಳೆದುಕೊಂಡ ತನುವಿಗೆ ಬ್ರಹ್ಮರಸದ ಫಲ ದೊರೆತಿದೆ. ಬ್ರಹ್ಮ ಪದವಿ ತಂತಾನೆ ದೊರೆತಿದೆ.

ಮನ ಬ್ರಹ್ಮರಸ ಸುಖ ಮರೆತುದರಿಂದಾಗಿ ಭ್ರಮಾ ಫಲದ ಬೆನ್ನು ಬಿದ್ದಿತ್ತು. ತನು ಅದನ್ನು ಅನುಸರಿಸಿತ್ತು. ಮನಕ್ಕೆ ಅರಿವೆಂಬ ಗುರುದೇವನ ದರುಶನ ಭಾಗ್ಯ ದೊರೆತುದಕ್ಕಾಗಿ ತನ್ನ ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮನಾಯಿತು. ಫಲಪದವಿಲ್ಲದ ಬ್ರಹ್ಮಫಲದ ಪರಮ ಸುಖವನ್ನು ಅನುಭವಿಸುತ್ತ ಸ್ವಾನುಭಾವದ ಸಕಲ ಭಕ್ತಿ ಬಸವಣ್ಣನವರಿಗೆ ಆಯಿತ್ತು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ನಿರ್ಗುಣಿಯೆಂಬ ಸ್ವಾನುಭಾವದಿಂದಲೇ ಮನಕ್ಕೆ ಜನ್ಮ ದೊರೆತಿದ್ದು; ಪುನಃ ನಿರ್ಗುಣಿಯೆಂಬ ಸ್ವಾನುಭಾವದಿಂದಲೇ ಮನದ ಭ್ರಮೆ ಕಳಚಿ ಬೀಳುತ್ತದೆ. ತಂತಾನೇ ಪ್ರಯೋಗಕ್ಕೆ ಒಡ್ಡಿಕೊಂಡ ಮನಗಳ ಸಕಲ ತನುಗಳಿಗೂ ಈ ಕಾಯಕ ಸಿದ್ಧಿಯಾಗುತ್ತದೆ.

**191**

**ಆಯಿತ್ತಾಯಿತ್ತು ಗುರುಸ್ವಾಯತ ;**
**ಆಯಿತ್ತಾಯಿತ್ತು ಲಿಂಗ ನಿಜನಿಷ್ಠೆ ;**
**ಆಯಿತ್ತಾಯಿತ್ತು ಜಂಗಮದರಿವು ಸಂಭಾಷಣೆ ;**
**ಆಯಿತ್ತಾಯಿತ್ತು ಪ್ರಸಾದದ ರುಚಿಭೋಗ ;**
**ಆಯಿತ್ತಾಯಿತ್ತು ಸಯವಾದ ಭಕ್ತಿ ಜ್ಞಾನ ವೈರಾಗ್ಯದ ನಿರಿಗೆ.**
**ಆಯಿತ್ತಾಯಿತ್ತು ಸರ್ವಾಚಾರ ಸಂಪತ್ತಿನ ಸೌಖ್ಯವೆನಗೆ**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವಾ**
**ನೀವು ಗುರುಮೂರ್ತಿಯಾದ ಕಾರಣ.**

ದೇಹ ಒಂದು ಅದ್ಭುತವಾದ ಚಮತ್ಕಾರ ಉಳ್ಳ ನಿಜ ದೇವಾಲಯ. ದೇಹದಲ್ಲಿ ಕೈಹಿಡಿದು ನಡೆಸುವ ಗುರುದೇವನಿದ್ದಾನೆ. ಲಿಂಗಯ್ಯನು ಇದ್ದಾನೆ. ಜಂಗಮವೂ ಇದೆ. ಅದ್ಭುತವಾದ ಪ್ರಸಾದದ ಶಕ್ತಿಯೂ ಇದೆ. ಭಕ್ತಿಯೂ ಇದೆ. ಜ್ಞಾನವೂ ಇದೆ. ವೈರಾಗ್ಯವೂ ಇದೆ. ದೇಹ ಸರ್ವಾಚಾರದ ಸಂಪತ್ತುಳ್ಳ ಸೌಖ್ಯದ ಖಣಿ. ಹಾಗೆಯೇ ಅದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು. ದೇಹ ಇದೆಲ್ಲ ಆಗಿ ನಿಜದ ನಿವಾಸವಾಗಿ ತೋರುವುದು ಮನಕ್ಕೆ ಆಸೆಯಾದಾಗ.

ಮನಕ್ಕೆ ಆಸೆಯಿಲ್ಲದ ನಿಮಿತ್ಯ ದೇಹದಲ್ಲಿ ಗುರುದೇವನಿದ್ದರೂ ಅದು ಗುರುದೇವನನ್ನು ಹೊರಗೆಯೇ ನೋಡುತ್ತದೆ. ದೇಹದಲ್ಲಿಯೇ ಸಂಗಮವಾದ ಗುರುದೇವ ಕೈಮಾಡಿ ಕರೆದು ಅರಿವಿನ ಅಮೃತ ಉಣಿಸಲು ಸಿದ್ಧನಾದುದು ಮನಕ್ಕೆ ಹೊಳೆಯುವುದೇ ಇಲ್ಲ.

ಸ್ವತಹ ದೇಹವೇ ಲಿಂಗವಾಗಿದ್ದರೂ ಮನಕ್ಕೆ ತಿಳಿಯದ್ದಕ್ಕಾಗಿ ಲಿಂಗದ ಮೇಲೆ ಮತ್ತೊಂದು ಲಿಂಗ ಹಾಕಿ, ಲಿಂಗದಿಂದಲೇ ಲಿಂಗವನ್ನು ಪೂಜಿಸುತ್ತದೆ.

ಮನದ ಅಜ್ಞಾನಕ್ಕೆ ನೇಣಿನ ಕುಣಿಕೆ ಬಿಗಿಯುವ ಜಂಗಮನು ಅಂಗದಲ್ಲಿ ಸಂಗಮವಾಗಿ ಮನದೊಂದಿಗೆ ಸಂಭಾಷಣೆ ಮಾಡುತ್ತಿದ್ದರೂ ನಿಜ ಜಂಗಮನನ್ನು ಅರಿಯಲು ಮನಕ್ಕೆ ಸಾಧ್ಯವಾಗುತ್ತಿಲ್ಲ; ಜಾತಿ ಜಂಗಮನನ್ನು ಪೂಜಿಸುವುದು ಬಿಡುತ್ತಿಲ್ಲ.

ಪ್ರಸಾದವೆಂದರೆ ಕೇವಲ ಭೋಜನ ಮಾತ್ರ ಅಲ್ಲ. ನೋಡುವ ಅಜ್ಞಾನದ ನೋಟ ಜಂಗಮನಿಗೆ ಅರ್ಪಿತವಾಗಿ ಪ್ರಸಾದವಾಗಬೇಕು. ಅಜ್ಞಾನದ ಸ್ಪರ್ಶ, ಅಜ್ಞಾನದ ರುಚಿ, ಅಜ್ಞಾನದ ಶಬ್ದ, ಅಜ್ಞಾನದ ವಾಸನೆ ನಿಜ ಜಂಗಮನಿಗೆ ಅರ್ಪಿಸುವ ಕಲೆ ಮನಕ್ಕೆ ಕರಗತವಾದಾಗಲೇ ಅದು ಪ್ರಸಾದವಾಗುತ್ತದೆ. ಇಲ್ಲದಿದ್ದರೆ ದೇಹ ಉಂಡ ಅಜ್ಞಾನದ ಊಟ ದೇಹದಲ್ಲಿಯೇ ಸಂಗ್ರಹವಾಗಿ ದೇಹವೆಂಬ ದೇವಾಲಯ ಕೊಳೆತು ನಾರುತ್ತದೆ.

ಮನ ಈ ಎಲ್ಲ ಅಜ್ಞಾನವನ್ನು ದೇಹದಲ್ಲಿಯೇ ದೇಹದ ಜ್ಞಾನದ ಮೂಲಕ ಸಾಕ್ಷಿಯಾಗಿ ನೋಡಿದಾಗ ಅಜ್ಞಾನ ಜ್ಞಾನಾಗ್ನಿಯಲ್ಲಿ ಸುಟ್ಟು ಭಸ್ಮವಾಯಿತು. ಆಗ ಮನ ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನಕ್ಕೆ ಕೈಮುಗಿದು ಭಕ್ತಿ ಮಾಡಿತು. ಅಜ್ಞಾನದ

ಕೆಲಸಗಳಿಗೆ ಹೋಗದಂತೆ ವೈರಾಗ್ಯ ತಾಳಿ, ಅಜ್ಞಾನದ ನಿರಿಗೆ ತಂತಾನೆ ಬಿಚ್ಚಿ ಹೋಯಿತು.

ಗುರು ಲಿಂಗ ಜಂಗಮ ಪ್ರಸಾದದ ಸರ್ವಾಚಾರ ಸಂಪತ್ತಿನ ಸುಖ ಮನಕ್ಕೆ ಲಭ್ಯವಾಗಿ ಮನ ಘನ ಮನವಾಯಿತು.

ಅಂಗದಲ್ಲಿ ಅರಿವೆಂಬ ಗುರು ಸ್ವಾಯತವಾದುದು ಮನಕ್ಕೆ ತಿಳಿಯಿತು. ಲಿಂಗ ಸ್ವಾಯತವಾದುದು ತಿಳಿಯಿತು. ಜಂಗಮ ತನ್ನೊಂದಿಗೆ ಸಂಭಾಷಣೆ ಮಾಡುತ್ತಿರುವುದನ್ನು ಮನ ಅರಿಯಿತು. ಜ್ಞಾನೇಂದ್ರಿಯಗಳ ಪ್ರಸಾದ ರುಚಿ ಭೋಗದ ಅರಿವು ಮನಕ್ಕಾಯಿತು. ವೈರಾಗ್ಯದ ನಿರಿಗೆ ಉದುರಿ ಮನ ಜ್ಞಾನಕ್ಕೆ ಭಕ್ತಿ ಮಾಡಿತು. ಸರ್ವಾಚಾರ ಸಂಪತ್ತಿನ ಸೌಖ್ಯ ದೊರೆತು ಮನವೇ ಮಲ್ಲಿಕಾರ್ಜುನನಾಯಿತು.

**192**

**ಆಯಿತ್ತಾಯಿತ್ತು ಮನದಂತೆ ಮಂಗಳ ;**
**ಆಯಿತ್ತಾಯಿತ್ತು ನೆನೆದಂತೆ ಕುರುಹು ;**
**ಆಯಿತ್ತಾಯಿತ್ತು ಸೀಮೆಯಳವಟ್ಟ ಸಂಬಂಧ ;**
**ಆಯಿತ್ತಾಯಿತ್ತು ಸ್ವಾನುಭಾವ ಸ್ವಯವಾದ ದೀಕ್ಷೆ ;**
**ಆಯಿತ್ತಾಯಿತ್ತು ಕಪಿಲಸಿದ್ಧ ಮಲ್ಲಿಕಾರ್ಜುನಾ**
**ನಿಮ್ಮಲ್ಲಿ ಸಂದು ಸವೆದು ಒಂದಾದ ನಿರ್ವಾಣವು.**

ಮನ ಘನದಲ್ಲಿ ಸವೆದಾಗಲೇ ಮನ ಘನಮನವಾಗುತ್ತದೆ. ಮನ ಕಾಯದ ಮೂಲಕ ಬಾಹ್ಯ ಸುಖಕ್ಕಾಗಿ ಅನಂತ ಜನ್ಮಗಳ ಕಾಲ ಸವೆ ಸವೆದು ಸುಣ್ಣವಾಯಿತು. ಆದರೂ ಕಾಯ ಕಠಿನ ಕರಗಲಿಲ್ಲ. ಕಂದಲಿಲ್ಲ ; ಕುಗ್ಗಲಿಲ್ಲ. ಏಕೆಂದರೆ ಕಾಯ ಭಗವಂತನ ಪ್ರಸಾದ. ಅರಿವಿನ ಕುರುಹು. ಅದು ಲಿಂಗ. ಹೀಗಾಗಿ ಮನ ಕಾಯವನ್ನು ಬಳಸಿಕೊಂಡರೂ, ಮನವೇ ಅಪರಾಧಿ ; ತಾನು ನಿರಪರಾಧಿ ಎಂದೂ ಮನದ ಮೇಲೆ ಆರೋಪ ಹೊರಿಸಲೇ ಇಲ್ಲ. ಹೀಗಾಗಿ ಮನಕ್ಕೆ ಅರಿವಾಗಿ; ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನತ್ತ ಪಯಣ ಬೆಳೆಸಿತು. ತನ್ನ ಸೀಮೆಯನ್ನು ದಾಟಿ ನಿಸ್ಸೀಮ ಸುಖವನ್ನು ಅನುಭವಿಸಲು ಭರದಿಂದ ಮುನ್ನುಗ್ಗಿತು. ಪರಮಾನಂದದ ಸುಖವನ್ನು ಅನುಭವಿಸುತ್ತಾ ಆಯಿತ್ತಾಯಿತ್ತು ಸೀಮೆಯಳವಟ್ಟ ಸಂಬಂಧ ಎಂದು ಉದ್ಗಾರ ಮಾಡಿತು. ಸುಖದಿಂದ ಕುಣಿಕುಣಿದಾಡಿತು.

ಆಯಿತ್ತಾಯಿತ್ತು ಮನದಂತೆ ಮಂಗಳ; ಆಯಿತ್ತಾಯಿತ್ತು ನೆನೆದಂತೆ ಕುರುಹು; ಆಯಿತ್ತಾಯಿತ್ತು ಸ್ವಾನುಭಾವ ಸ್ವಯವಾದ ದೀಕ್ಷೆ.

ಇಲ್ಲಿ ಮನಕ್ಕೆ ದೀಕ್ಷೆಯನ್ನು ಯಾರೂ ಕೊಡಲಿಲ್ಲ. ಮನಕ್ಕೆ ಅರಿವಾದಾಗಲೇ ಅರಿವೆಂಬ ಗುರುದೇವನ ಚರಣಕಮಲಗಳಿಗೆ ಎರಗಿ ತನಗೆ ತಾನೇ ಆ ಗುರುದೇವನಿಂದ ದೀಕ್ಷೆ ತೆಗೆದುಕೊಳ್ಳುತ್ತದೆ. ತನುವಿನಲ್ಲಿದ್ದ ಗುರುದೇವನಿಗೆ ತಾನೇ ಗುಲಾಮನಾಗುತ್ತದೆ. ಆ ಗುರುದೇವನಿಗೆ ತಾನೇ ಶಿಷ್ಯನಾಗುತ್ತದೆ. ತನುವಿನಲ್ಲಿದ್ದು ಆ ತನುವಿಗೆ ಕೀಟಲೆ ಮಾಡಿ ಬಾಧೆ ಪಡಿಸಿದ ಆ ತನುವನ್ನೇ ಕುರುಹನ್ನಾಗಿಸಿಕೊಂಡು ಆ ಕುರುಹಿನ ಸಹಾಯದಿಂದ ಅರಿವೆಂಬ ಗುರುದೇವನಿಂದ ದೀಕ್ಷೆ ಪಡೆಯುತ್ತದೆ. ಅದೇ ಸ್ವಾನುಭಾವದ ದೀಕ್ಷೆ. ತನಗೇ ತಾನೇ ಸ್ವಯವಾದ ದೀಕ್ಷೆ. ಸಕಲ ಸಂದುಗಳು ಸವೆದು ಅಜ್ಞಾನದ ಕೊಂಡಿ ಕಳಚಿ ತಾನು ಪರಮಾತ್ಮನಲ್ಲಿ ಒಂದಾದ ನಿರ್ವಾಣವು!

ಆಗ ತನಗೆ ತಾನೇ ಬ್ರಹ್ಮಜ್ಞಾನಿಯೆಂದು ಪರಮ ಸಂತೋಷದಿಂದ ಹೇಳಿಕೊಳ್ಳಲು ಸಾಧ್ಯವಾಗುತ್ತದೆ. ತನಗೆ ನಿರ್ವಾಣವಾಯಿತೆಂದು ಖಚಿತವಾಗಿ ಹೇಳಲು ಸಾಧ್ಯವಾಗುತ್ತದೆ. ಈ ಭಾಗ್ಯ, ಈ ಶಿಕ್ಷಣ ಸಕಲ ತನುಗಳಿಗೂ ದೊರೆಯುತ್ತದೆ. ಆದರೆ ಮನಕ್ಕೆ ನಿರ್ವಾಣ ಹೊಂದಬೇಕೆಂಬ ಇಚ್ಛೆ ಆದಾಗ ಮಾತ್ರ ಸಾಧ್ಯವಾಗುತ್ತದೆ. ಮನ ಮಂಗಳಕರವಾಗಿ ಬೆಳಗುತ್ತದೆ.

**193**

**ಆಯಿಸ ಬಗುಸೆಯ ಬಲವು ತಮಗಿಲ್ಲ ಕೇಳಿರಣ್ಣಾ.**
**ತಮ್ಮ ಬಲ ಅವಕುಂಟು ಕೇಳಿರಣ್ಣಾ.**
**ಆಯಿಸ ತನಗಿನಿಸೆಂಬುದಿಲ್ಲ ಕೇಳಿರಣ್ಣಾ.**
**ಬಗುಸೆ ತನಗಿನಿಸೆಂಬುದಿಲ್ಲ ಕೇಳಿರಣ್ಣಾ.**
**ಕೇಳಿರಣ್ಣಾ, ಅಣ್ಣಾ, ಅಣ್ಣಾ ಕೇಳಿರಣ್ಣಾ.**
**ಕಪಿಲಸಿದ್ಧ ಮಲ್ಲಿನಾಥಯ್ಯ ನಿಸ್ಸೀಮ ಕೇಳಿರಣ್ಣಾ.**

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಾ. ಭಗವಂತನೇ ಅರಿವೆಂಬ ಗುರುದೇವನೇ ಅರಿಷಡ್ವರ್ಗಗಳು, ಅಷ್ಟ ಮದಗಳು, ಸಪ್ತವ್ಯಸನಗಳು ನೀವು ಆಗೆಂದರಾದವು. ಆನೆಯ ಬಲ ಅವುಗಳಿಗೆ ನಿನ್ನಿಂದಾಗಿ ಬಂತು. ನಿನ್ನ ಬಲ ಆ ಕುನ್ನಿಗಳಿಗೆ ಬರಬಹುದು. ಆದರೆ ಅವುಗಳ ಬಲ ನಿನಗಿನಿತು ಇಲ್ಲ ನೋಡಯ್ಯಾ.

ಮನ್ಮಥ ಕಾಮದ ಹೂ ಬಾಣ ಬಿಟ್ಟ; ನಿನ್ನ ಕಣ್ಣ ಜ್ಞಾನಾಗ್ನಿಯ ಮೂಲಕ ಕಾಮನನ್ನು ಸುಟ್ಟು ಮನ್ಮಥನನ್ನು ಬದುಕಿಸಿದ ಮುಕ್ಕಣ್ಣ ನೀನು. ಶುದ್ಧ ಸಿದ್ಧ ಪ್ರಸಿದ್ಧ ಜ್ಞಾನಿ ನೀನು. ನಿನ್ನ ಜ್ಞಾನದ ಬಲ ಅವಕುಂಟು. ಅವುಗಳು ಪಡುವ ಆಸೆ ಅಜ್ಞಾನ ನಿನಗಿನಿತಿಲ್ಲ ನೋಡಯ್ಯಾ.

ಮನ ಪಡುವ ಆಸೆ ನಿನಗಂಟಿಸಿಕೊಳ್ಳದೆ; ನೀನು ತನುವಿಗಂಟದೆ ತನುವನ್ನು ಬೆಳಗುವ, ಬೆಳಗಿಂಗೆ ಬೆಳಗಾಗಿ ಬೆಳಗುವ ಗುರುದೇವ ನೀನು.

ಕಪಿಲಸಿದ್ಧ ಮಲ್ಲಿಕಾರ್ಜುನದೇವ ನಿಸ್ಸೀಮನು.

**194**

**ಆರು ಕಂಡು ಕೈಯೆತ್ತಿ ಮುಗಿದರೆ**
**ನಾನು ಮುಗಿವೆನಾಗಿ, ಅದೇನು ಕಾರಣವೆಂದರೆ**
**ಅವರ ನಿಟಿಲತಟದ ಭ್ರೂಮಧ್ಯದಲ್ಲಿ**
**ಕಪಿಲಸಿದ್ಧ ಮಲ್ಲಿಕಾರ್ಜುನನಿಪ್ಪನಾಗಿ**
**ಅವರರಿಯರು ನಾ ಬಲ್ಲೆನಾಗಿ ಕೈ ಮುಗಿವೆನು.**

ಆಧ್ಯಾತ್ಮದ ಗೋಷ್ಠಿಗಳಲ್ಲಿ ಕುಳಿತರೆ ಆನಂದವಾಗುತ್ತದೆ. ಆಧ್ಯಾತ್ಮದ ಪುಸ್ತಕಗಳನ್ನು ಓದಿದರೆ ಸಂತೋಷವಾಗುತ್ತದೆ. ಆದರೆ ಅನುಭವಕ್ಕೆ ಬರುವುದಿಲ್ಲ. ಚರ್ಚೆ ಮಾಡುವುದಕ್ಕೆ ಬಂದರೂ ಅದರಲ್ಲಿ ಅರ್ಥವಿರುವುದಿಲ್ಲ.

ಆಧ್ಯಾತ್ಮವೆಂದರೆ ಶುದ್ಧ ಜ್ಞಾನ. ಪ್ರಸಿದ್ಧ ಜ್ಞಾನ. ಅದು ಸಿದ್ಧರಸ. ಸಕಲ ತನುಗಳಲ್ಲಿಯೂ

ಸಂಗಮವಾಗಿದೆ. ಅದನ್ನು ಪಡೆದುಕೊಳ್ಳುವುದಕ್ಕಾಗಿ ಮನಕ್ಕೆ ಬಯಕೆಯಾಗಬೇಕು. ಆಗ ಆಧ್ಯಾತ್ಮದ ಚರ್ಚೆ ಸ್ವಲ್ಪ ಮಟ್ಟಿಗೆ ತನಗೆ ಸೂತ್ರವಾಗಲು ಸಾಧ್ಯ. ಭಗವದ್ಗೀತೆ ಬೈಬಲ್ ಕುರಾನ್ ತ್ರಿಪಿಟಿಕ ಜಿನಗ್ರಂಥಗಳು ಕೂಡಾ ತನಗೆ ಸೂತ್ರದ ರೂಪದಲ್ಲಿ ಉಪಯುಕ್ತವಾಗಲು ಸಾಧ್ಯವಾಗುತ್ತದೆ. ಆಗ ತನುವಿನಲ್ಲಿ ಹಿಂದೂ ಮುಸಲ್ಮಾನ ಕ್ರೈಸ್ತ ಬೌದ್ಧ ಝುರಾತುಷ್ಟ ಎನ್ನುವ ಅಜ್ಞಾನ ತಂತಾನೆ ತೊಲಗುತ್ತದೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವು ತನುವಿನ ಜ್ಞಾನದ ಮಹಾದ್ವಾರಗಳಾಗುತ್ತವೆ. ತನುವಿನಲ್ಲಿಯೇ ಸಂಗಮವಾದ ಜ್ಞಾನವನ್ನು ತನುವನ್ನು ಆವರಿಸಿದ ಮನ ತನುವಿನಿಂದಲೇ ಪಡೆದು ಮನ ಘನಮನವಾಗುತ್ತದೆ.

ಮನ ಮಹಾದೇವನಾಗುತ್ತದೆ. ತನುವಿನ ಜ್ಞಾನವನ್ನು ತನುವೇ ಬಳಕೆ ಮಾಡಿಕೊಂಡ ತನುವಿಗೆ ಕೇವಲ ತನ್ನಂತೆಯೇ ಇರುವ ಜ್ಞಾನ ತನು ಕಾಣುತ್ತದೆಯೇ ಹೊರತು ಅದು ಹೆಣ್ಣಾಗಿ ಗಂಡಾಗಿ ಕಾಣುವುದಿಲ್ಲ. ಜಾತಿ ಮತ ಪಂಥಗಳಿಂದ ನೋಡುವುದಿಲ್ಲ. ಸಕಲ ತನುಗಳಲ್ಲಿಯೂ ಅರಿವೆಂಬ ಗುರುದೇವ ವಾಸವಾಗಿದ್ದು ಕಂಡು ಬರುತ್ತದೆ. ಆ ಗುರುದೇವನಿಗೆ ಕೈ ಮುಗಿದು ಧನ್ಯನಾಗುತ್ತದೆ. ಹೀಗಾಗಿ ಬಸವಣ್ಣ ''ಎನಗಿಂತ ಕಿರಿಯರಿಲ್ಲ'' ಎಂದ. ಇದು ಬಾಯಿ ಮಾತಲ್ಲಿ ಹೇಳಿದ ಮಾತಲ್ಲ. ಅನುಭವದಿಂದ ಅನುಭವಿಸಿ ಸ್ವಾನುಭಾವದಿಂದ ನುಡಿದ ಮಾತು. ಆ ಮಾತಿನಲ್ಲಿ ಏನೆಲ್ಲ ಮರ್ಮ ಅಡಗಿದೆ. ಬಸವಣ್ಣನವರು ನುಡಿದಂತೆ ಸಕಲ ತನುಗಳು ಕೂಡಾ ನುಡಿಯಬಹುದು. ಆದರೆ ಆ ನುಡಿ ತನ್ನ ಅನುಭವಕ್ಕೆ ತಂದುಕೊಳ್ಳಬೇಕಾದರೆ ಜನ್ಮಗಳೇ ಕಳೆಯುತ್ತವೆ.

ತನುವಿನ ನಿಟಿಲತಟದ ಭ್ರೂಮಧ್ಯದಲ್ಲಿ ಇದ್ದ ಜ್ಞಾನವನ್ನು ತನುವನ್ನು ಆವರಿಸಿದ ಮನದಿಂದಲೇ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಇದು ಸಿದ್ಧರಾಮ ಶಿವಯೋಗಿಗಳ ಸೂತ್ರ.

ಬುದ್ಧ ಈ ಜ್ಞಾನವನ್ನು ತನುವಿನಲ್ಲಿರುವ ಮಧ್ಯಬಿಂದು ಎಂದು ಕರೆದರು. ಯಾರು ಯಾವ ಹೆಸರಿನಿಂದ ಕರೆದರೂ ಅದು ಜ್ಞಾನವೇ ಆಗಿದೆ. ಸಂತ ಪೈಗಂಬರರು ಆ ಮಹಾಜ್ಞಾನವನ್ನು ಅಲ್ಲಾ ಎಂದು ಕರೆದರು. ಸಂತ ಕ್ರಿಸ್ತನು ಆ ಮಹಾಜ್ಞಾನವನ್ನು ಗಾಡ್ ಎಂದು ಕರೆದ. ಶ್ರೀಕೃಷ್ಣ ಅದನ್ನು ತಾನೇ ಎಂದು ಕರೆದುಕೊಂಡ. ಹೀಗೆಯೇ ಅಂಬಿಗರ ಚೌಡಯ್ಯ ಶರಣರು ಕೂಡಾ ಆ ಮಹಾಜ್ಞಾನಕ್ಕೆ ನಿಜಶರಣ ಅಂಬಿಗರ ಚೌಡಯ್ಯ ಎಂದು ಹೆಸರಿಟ್ಟು ಕರೆದರು.

ಏನೆಲ್ಲ ಪ್ರಯತ್ನ ಮಾಡುವ ಮನುಷ್ಯನಿಗೆ ತನ್ನಲ್ಲಿಯೇ ಇರುವ ಸ್ವಾನುಭಾವದ ಸ್ವಸುಖದ ಸಂಪತ್ತನ್ನು ತಾನೇ ಪಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಮನುಷ್ಯ ಮನುಷ್ಯನ ಮೇಲೆ ಮುಖವಾಡದ ಕರುಣೆ ಕನಿಕರ ತೋರುತ್ತಾನೆಯೇ ಹೊರತು ಅದು ನಿಜವಲ್ಲ. ಹಾಗೆಂದು ತನಗೆ ತಾನೇ ಆಲೋಚನೆ ಮಾಡಿದರೆ ಕೂಡಲೇ ಹೊಳೆಯುತ್ತದೆ.

**195**

**ಆರನಾದಡೆಯೂ ಅಣ್ಣಾ ಎನಲಾರೆನು**
**ಆರನಾದಡೆಯೂ ಅಯ್ಯಾ ಎನಲಾರೆನು,**
**ನೀನು ಜಗಕೊಡೆಯ, ನಾನು ನಿನ್ನ ಅಯ್ಯಾ ಎಂಬೆನು.**
**ಎನಗಾರೂ ಇಲ್ಲದ ಕಾರಣ, ನೀವೆ ಗತಿ**
**ಶರಣು ಹೊಕ್ಕೆ, ಕರುಣಿಸು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನೆ ಗತಿಯಾದಾಗ, ಎನಗೆ ತಂದೆ ತಾಯಿ ಬಂಧುವಾದಾಗ ಮತ್ತೊಬ್ಬರನ್ನು ಅಣ್ಣ ಎನಲು ಬರುವುದಿಲ್ಲ. ಮತ್ತೊಬ್ಬರನ್ನು ಅಯ್ಯಾ ಎನ್ನಲು ಬರುವುದಿಲ್ಲ. ಏಕೆಂದರೆ ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನೇ ಜಗಕ್ಕೆ ಒಡೆಯನು. ಆತನೇ ಎನಗೆ ಅಯ್ಯನೂ ಅಗಿದ್ದಾನೆ. ಆತನೆ ಎನಗೆ ಅಣ್ಣನು ಆಗಿದ್ದಾನೆ. ಹೀಗಾಗಿ ಆತನನ್ನೇ ನಾನು ಅಯ್ಯಾ ಎಂಬೆನು. ಆತನನ್ನೇ ನಾನು ಅಣ್ಣಾ ಎಂಬೆನು. ಆತನೇ ಎನಗೆ ಗತಿ–ಮತಿ. ಎನಗಾರೂ ಇಲ್ಲದ ಕಾರಣ.

ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲ ಸಂಗಮದೇವಾ, ಹಾಲಲ್ಲಾದರೂ ಅದ್ದು, ನೀರಲ್ಲಾದರೂ ಅದ್ದು ನಿನ್ನ ಧರ್ಮ. ಬಸವಣ್ಣನವರ ಈ ಸೂತ್ರ, ಸಿದ್ಧರಾಮ ಶಿವಯೋಗಿಗಳ ಸೂತ್ರ ಒಂದೇ ಆಗಿದೆ.

**196**

**ಆರ ಮುನ್ನತಿಗಳೆದು ತೋರಿದ್ದ ಸೀಮೆಯನು.**
**ಆರನೊಯ್ಯೆದಲ್ಕೆ ಏಳೆಂಟನತಿಗಳೆದು**
**ತೋರಿರ್ದನೆರಡರಲಿ ಮುಕ್ಕ್ಯಂಗನೆ.**
**ಸಂಗಸುಖವನೆ ಅಳಿದು ಹಂಗುಹರಿದಿಹ ಬ್ರಹ್ಮ**
**ಅಂಗನೆಯ ಅಕ್ಷರತ್ರಯದ ಕಂಗಳಲ್ಲಿ**
**ಏವುಂಟು ಕಾನನದಲೋಲಾಡಿ**
**ಲಿಂಗ ನಿಮ್ಮ ಬೆರಸಿದ ಕಪಿಲಸಿದ್ಧ ಮಲ್ಲೇಶ್ವರಾ.**

ಬ್ರಹ್ಮಜ್ಞಾನವೆಂದರೆ ಭ್ರಮೆಯನ್ನು ಕಳೆದುಕೊಳ್ಳುವುದು. ಮೂಲತಃ ತನುವಿನಲ್ಲಿ ಭ್ರಮೆಯಿಲ್ಲ. ಇಲ್ಲದ ಭ್ರಮೆ ತನುವಿನಲ್ಲಿ ಅರಿಷಡ್ವರ್ಗಗಳಾಗಿ, ಸಪ್ತ ವ್ಯಸನಗಳಾಗಿ, ಅಷ್ಟ ಮದಗಳಾಗಿ ಅಮರಿಕೊಂಡಿದೆ. ಜ್ಞಾನೇಂದ್ರಿಯಗಳನ್ನು ಕೂಡಾ ಭ್ರಮೆ ಮುತ್ತಿಕ್ಕಿ ಅವುಗಳ ಕೆಲಸ ಅವು ಮಾಡದಂತಾಗಿವೆ.

ಬ್ರಹ್ಮಜ್ಞಾನದಿಂದ ಮಾತ್ರ ಭ್ರಮೆ ತೊಲಗುತ್ತದೆ. ಭ್ರಮೆಯೆಂದರೆ ಮನಕ್ಕೆ ಸುಖ. ಮನವೇ ಬ್ರಹ್ಮನ ಸನ್ನಿಧಿಗೆ ಹೋಗಿ ಆ ಬ್ರಹ್ಮನಿಗೆ ಶರಣು ಹೋಗಬೇಕು. ಅಂದಾಗ ಮಾತ್ರ ಮನಕ್ಕೆ ಮುತ್ತಿಗೆ ಹಾಕಿದ ಸಕಲ ಭ್ರಮೆಗಳು ಕರಗಿ, ಮನ ಘನಮನವಾಗುತ್ತದೆ.

ಈ ಸಂಗತಿಯನ್ನು ಕಂಡುಕೊಂಡ ಮನ ಬ್ರಹ್ಮನಿಗೆ ಶರಣಾಗದೆ, ಬ್ರಹ್ಮಜ್ಞಾನವನ್ನು ಸಂಪಾದನೆ ಮಾಡಿಕೊಳ್ಳುತ್ತದೆ. ಮನ ತನುವಿನೊಂದಿಗೆ ಲೀಲಾಜಾಲವಾಗಿ ಬ್ರಹ್ಮಜ್ಞಾನದ ಮಾತನಾಡಿದರೂ ಮನದ ಭ್ರಮೆ ತೊಲಗುವುದಿಲ್ಲ. ಬದಲಾಗಿ ಬ್ರಹ್ಮಜ್ಞಾನದ ಭ್ರಮೆ ಮನಕ್ಕೆ ಆವರಿಸಿಕೊಂಡು ಮತ್ತಷ್ಟು ಭ್ರಮಿತನಾಗುತ್ತದೆ. ತಾನು ಸಂಪಾದನೆ ಮಾಡಿಕೊಂಡ ಬ್ರಹ್ಮಜ್ಞಾನ ತನುವಿನ ಉಪ ಜೀವನಕ್ಕೆ ಬಳಕೆಯಾಗುತ್ತದೆ. ತನುವಿಗೆ ಬಂದ ಆಪತ್ಕಾಲದ ಸುಖದುಃಖಗಳನ್ನು ಮನಕ್ಕೆ ಕಳೆದುಕೊಳ್ಳಲು ಬರುವುದಿಲ್ಲ. ಏಕೆಂದರೆ ತಾನು ಸಂಪಾದನೆ ಮಾಡಿಕೊಂಡ ಬ್ರಹ್ಮಜ್ಞಾನ ಅದು ತನ್ನ ತನುವಿನಲ್ಲಿಯೇ ಇದ್ದ ಜ್ಞಾನವಲ್ಲ. ಭಗವದ್ಗೀತೆ, ಬೈಬಲ್, ಕುರಾನ್‌ಗಳಿಂದ, ತತ್ವಪದಗಳಿಂದ ದಾಸವರೇಣ್ಯರ, ಶರಣರ ವಚನಗಳಿಂದ ಎರವಲು ಪಡೆದದ್ದು. ಹೀಗಾಗಿ ತನುವಿನ ಆಪತ್ಕಾಲಕ್ಕೆ ಎರವಲು ಬ್ರಹ್ಮಜ್ಞಾನ ಸಹಾಯ ಮಾಡುವುದಿಲ್ಲ.

ಪುಸ್ತಕಗಳಲ್ಲಿರುವ ಸಕಲ ಜ್ಞಾನಗಳು ದೇಹದಿಂದಲೇ ಬಂದವುಗಳಾಗಿವೆ. ಅವೆಲ್ಲ ಮನ

ಜ್ಞಾನಕ್ಕೆ ಹೋಗುವ ನೀಲನಕ್ಷೆಗಳೇ ಹೊರತು ಮತ್ತೇನೂ ಅಲ್ಲ. ಅಂಗದಲ್ಲಿ ಸಂಗಮವಾದ ಜ್ಞಾನವನ್ನು ಮನ ಮುಕ್ತಂಗನೆಯಾಗಿ, ಅಂದರೆ ತನಗಂಟಿದ ಸಕಲ ಭ್ರಮೆಗಳನ್ನು ಕಳೆದುಕೊಂಡು ಮಹಾಜ್ಞಾನವೆಂಬ ಬ್ರಹ್ಮನನ್ನು ಕೂಡಬೇಕು.

ಸೂರ್ಯನ ಬೆಳಕಿನಿಂದ ಹುಟ್ಟಿದ ಕತ್ತಲು ಪುನಃ ಸೂರ್ಯನ ಬೆಳಕಿನಿಂದಲೇ ತೊಲಗಿದಂತೆ, ಜ್ಞಾನದ ಬೆಳಕಿನಿಂದ ಹುಟ್ಟಿದ ಮನದ ಕತ್ತಲು ಪುನಃ ಜ್ಞಾನದ ಬೆಳಕಿನಿಂದಲೇ ತೊಲಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

**197**

**ಆರರಲ್ಲಿ ಅನಿಮಿಷವು, ಮೂರರಲ್ಲಿ ಮುಕ್ತಿ**
**ತೋರುವ ಪ್ರಾಪಂಚು ಸೀಮೆಯಲಿ ಗಾರಪ್ಪ ವರ್ಗವನು**
**ಮೀರಿಪ್ಪ ಸೀಮೆಯ ತೋರಿಪ್ಪ ಅತಿಶಯದ ತತ್ವಂಗಳನು**
**ಸೊಮ್ಮಿನ ಹಮ್ಮಿನ ಕರ್ಮದ ಕ್ರೀಯವನು**
**ನಿಃಕರ್ಮವೊಳಗಾದ ಸಾದಾಖ್ಯವಾ**
**ಅವ್ವೆಯ ಮನದಲಿ ಆನಂದ ಸಾತ್ವಿಸಲು**
**ತಾನೊಂದು ರೂಪಾಗಿ ತೋರುತಿರಲು**
**ಅಯ್ಯನಜಲೋಕದಲಿ ಒಯ್ಯನಕ್ಷರದ್ವಯದ**
**ಸ್ವೇಯ ಹೇಯಯೆಂಬ ಬೀಜಂಗಳ**
**ಡಮರುಗದ ಸಿಂಹಾಸನದೊಳಗಿಪ್ಪ**
**ಕೇಶರದ ಹಲವು ಬಣ್ಣದಲಿಪ್ಪ**
**ಅಣುಮಾತ್ರ ಮಥನದಲ್ಲಿ**
**ಮಥನಿಸುವ ಕಥನದಿಚ್ಛೆಯ ನೋಡ,**
**ಸುಚಿತ್ತದಿಂದರ್ಚಿಸೈ ಕಪಿಲಸಿದ್ಧ ಮಲ್ಲೇಶ್ವರನ.**

ಕಾಯದಲ್ಲಿ ಸಹಜವಾದ ಜ್ಞಾನವಿದೆ. ಮನ ಕಾಯ ಬಿಟ್ಟು ಹೊರಗೆ ಸುಳಿಯದೆ ಕಾಯದೊಳಗೆ ಹುಡುಕಾಡಿದರೆ ಕಾಯದಲ್ಲಿಯೇ ಸಂಗಮವಾದ ಸಹಜ ಜ್ಞಾನ ಕಾಯಕ್ಕೆ ದೊರೆಯುತ್ತದೆ. ಮನ ಆ ಜ್ಞಾನದಲ್ಲಿ ಸಂಗಮವಾಗಬೇಕು. ಆಗ ಕಾಯ ತಂತಾನೆ ಸಹಜ ಕಾಯವಾಗುತ್ತದೆ. ಪರಿಪೂರ್ಣ ಅರಿವಿನ ಕಾಯವಾಗುತ್ತದೆ.

ಆಧಾರ ಸ್ವಾಧಿಷ್ಠಾನಾದಿ ಆರು ಚಕ್ರಗಳ ಮೂಲಕ ಸಹಜ ಜ್ಞಾನಕ್ಕೆ ಪ್ರವೇಶ ಮಾಡಬಹುದು. ಸ್ಥೂಲ ಸೂಕ್ಷ್ಮ ಕಾರಣ ಕಾಯಗಳನ್ನು ವಿವರವಾಗಿ ತಿಳಿದುಕೊಂಡು ಸೂಕ್ಷ್ಮ ಕಾಯದ ಮೂಲಕ ಸ್ಥೂಲ ಕಾಯದಲ್ಲಿ ಸಂಗಮವಾದ ಕಾರಣ ಕಾಯದಲ್ಲಿ ಪ್ರವೇಶ ಮಾಡಿ ಕೂಡಲೇ ಸಹಜ ಜ್ಞಾನಿಯಾಗಬಹುದು.

ಆದರೆ ಪ್ರಪಂಚ (ಕಾಯ)ದಲ್ಲಿ ತೋರುವ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳ ಸಪ್ತ ವ್ಯಸನಗಳ ಅಷ್ಟ ಮದಗಳ ಸೀಮೆಯನ್ನು ದಾಟುವ ಎದೆಗಾರಿಕೆ ಸೂಕ್ಷ್ಮ ಕಾಯಕ್ಕೆ ಬೇಕಾಗುತ್ತದೆ.

ಕುರಾನ್ ಭಗವದ್ಗೀತೆ ಬೈಬಲ್ ತ್ರಿಪಿಟಿಕ ಜಿನಗ್ರಂಥಗಳನ್ನು ಪಠಿಸಿ ಆಯಾ ಧರ್ಮಕ್ಕೆ

ಒಳಗಾದ ಮನ ಕಾಯದ ಧರ್ಮವನ್ನೇ ಮರೆತಿದೆ. ಆಯಾ ಧರ್ಮದ ಅಹಂಕಾರ, ಆಯಾ ಧರ್ಮದಲ್ಲಿರುವ ತತ್ವದ ಆನಂದ ಮನ ಆಸ್ವಾದಿಸುವುದರಿಂದ ತನ್ನದೇ ಆದ ಭ್ರಮಾ ಲೋಕವನ್ನು ನಿರ್ಮಾಣ ಮಾಡಿಕೊಂಡಿದೆ.

ಕಾಯದ ಅಣುಅಣುವಿನಲ್ಲಿಯೂ ಅಜ್ಞಾನ ಆವರಿಸಿದೆ. ಕಾಯದ ಅಣು ಅಣುವಿನಲ್ಲಿಯೂ ಜ್ಞಾನ ಸಂಗಮವಾಗಿದೆ. ಅಣುರೂಪದಲ್ಲಿರುವ ನಿರೂಪದ ನಿಜ ಜ್ಞಾನವು ಅಣುರೂಪಕ್ಕೆ ಮುಸುಕಿರುವ ಮನದಿಂದಲೇ ಅರಿತಾಗ ಅವ್ವೆಯ ಮನದಲ್ಲಿ ಆನಂದ ಸಾತ್ವಿಸುವುದು ತಡವಾಗುವುದಿಲ್ಲ. ಅಣುವಿನಲ್ಲಿ ಘನ ಸಂಗಮವಾಗಿದೆ; ಅಣುವನ್ನು ಮನ ಆವರಿಸಿದೆ. ಈ ಮನದಿಂದಲೇ ಘನದಲ್ಲಿ ಸಂಗಮವಾದಾಗ ಮಥನಕ್ಕೆ ಒಳಪಟ್ಟು ಮನ ಘನಮನವಾಗುತ್ತದೆ.

ಅಣುಮಾತ್ರ ಮಥನದಲ್ಲಿ ಮಥನಿಸುವ ಕಥನದಿಚ್ಛೆಯ ನೋಡ, ಸುಚಿತ್ತದಿಂದರ್ಚಿಸೆ ಕಪಿಲಸಿದ್ಧ ಮಲ್ಲಿಕಾರ್ಜುನನ:

ಸಮುದ್ರ ಮಥನದಲ್ಲಿ ಅಮೃತ ಹುಟ್ಟಿದಂತೆ; ಅಣು ಅಣುವಿನ ಮಥನದಲ್ಲಿ ಅರಿವಿನ ಮಲ್ಲಯ್ಯ ಹುಟ್ಟುತ್ತಾನೆ. ಆತ ಸಕಲ ಅಜ್ಞಾನಗಳ ಹುಟ್ಟನಡಗಿಸುವ ಸರದಾರನು.

**198**

**ಆರಾದಡೆನ್ನುವನು ಹೊಗಳಿದುದನು**
**ಆ ಕಾಲದಲ್ಲಿಯೆ ನೆನವುತಿಪ್ಪುದು.**
**ಆ ಕಾಲದಲ್ಲಿ ಎನ್ನ ಜರಿದವರ**
**ಆ ಕಾಲದಲ್ಲಿ ಪ್ರಾಣವಧೆ ಮಾಡಿಹೆನೆಂಬುದು.**
**ಅಯ್ಯೋ, ಸಂಸಾರ ಮಾಯಾ ಮನಕಂಜುವೆನು,**
**ಅಯ್ಯ ನೀ ಕೂಡಿಕೊ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಯಾರಾದರೂ ಹೊಗಳಿದರೆ ಸುಖವಾಗುತ್ತದೆ. ಯಾರಾದರೂ ಜರಿದರೆ ದುಃಖವಾಗುತ್ತದೆ. ಆತ್ಮಹತ್ಯೆಗೆ ಇಲ್ಲ ಪ್ರಾಣವಧೆಗೆ ಮನ ಸಿದ್ಧವಾಗುತ್ತದೆ.

ಹೊಗಳಿದರೆ ಕಾಯ ಇರುವವರೆಗೂ ಹೊಗಳಿದ ಕಾಯವನ್ನು ಸ್ಮರಿಸಿಕೊಂಡು ಸುಖಿಸುತ್ತದೆ. ಸಕಲ ಕಾಯಗಳ ಮುಂದೆ ತನ್ನ ಪ್ರತಾಪವನ್ನು ಮೆರೆಯುತ್ತದೆ.

ತೆಗಳಿದರೆ ತೆಗಳಿದ ನುಡಿಗಳನ್ನು ಮೆಲುಕು ಹಾಕುತ್ತ ಆ ನುಡಿಗಳ ಮೂಲಕವೇ ಆ ನುಡಿಗಳನ್ನು ಖಡ್ಗ ಮಾಡಿಕೊಂಡು ತನಗೆ ತಾನೇ ಕಾಯ ದುಃಖಕ್ಕೆ ಒಳಗಾಗುತ್ತದೆ. ತೆಗಳಿದ ಕಾಯವನ್ನು ಖಡ್ಗದಿಂದ ಇರಿಯುವ ಅಗ್ನಿ ಕಾಯದಿಂದಲೇ ಹುಟ್ಟಿ ಕಾಯವನ್ನೇ ಸುಡುತ್ತದೆ.

ಏನೀ ಕಾಯಕ್ಕೆ ಮುಸುಕಿದ ಮನವೆಂಬ ಮಾಯೆಯ ಸಂಸಾರ. ಈ ಮನವೆಂಬ ಮಾಯೆಯನ್ನು ಕಳೆದುಕೊಂಡು ಸಹಜನಾಗಬೇಕೆಂಬ ಕಿಂಚಿತ್ತೂ ಚಿಂತೆಯಿಲ್ಲದೆ; ಕಾಯ ಹೊಗಳಿದಾಗ ಸುಖಿಸಿ, ತೆಗಳಿದಾಗ ದುಃಖಿಸಿ ಸುಖ ದುಃಖಗಳ ಘೋರ ಸಂಕಟದಲ್ಲಿ ಕಾಯ ಕಾಲ ಕಳೆದು ಅಕಾಲ ಮೃತ್ಯುವಿಗೆ ಒಳಗಾಗುತ್ತದೆ.

ಕಾಯ ನೂರು ವರುಷ ಬದುಕಿದ ಮಾತ್ರಕ್ಕೆ ಪರಿಪೂರ್ಣ ಕಾಯ ಎನ್ನಿಸಿಕೊಳ್ಳುವುದಿಲ್ಲ. ಕಾಯಕ್ಕಂಟಿದ ಮಾಯಾ ಪ್ರಪಂಚವನ್ನು ಕಾಯದಿಂದಲೇ ಕಳೆದುಕೊಂಡು ಸಹಜವಾಗಿ ಬದುಕಿದ ಕಾಯ ಮಾತ್ರ ಪರಿಪೂರ್ಣ ಕಾಯ ಸಹಜ ಕಾಯ ಎಂದು ಕರೆಯಿಸಿಕೊಳ್ಳುತ್ತದೆ.

ಸಿದ್ಧರಾಮ ಶಿವಯೋಗಿಗಳು, ಕಾಯದಲ್ಲಿ ಸಂಗಮವಾದ ಪರಿಪೂರ್ಣ ಸಹಜ ಜ್ಞಾನಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಹೆಸರಿಟ್ಟು ಕರೆದು ಅಯ್ಯಾ ನೀ ಬಂದು ಎನ್ನ ಕಾಯದಲ್ಲಿ ಕೂಡಿಕೊ ಎಂದು ಪ್ರಾರ್ಥಿಸಿದ್ದಾರೆ.

**199**

**ಆರೂ ಕಾಣಬಾರದ ಪ್ರಸಾದ ಅಡಕವಾಯಿತ್ತು**
**ಅರುಹಿನಲ್ಲಿ ಚೆನ್ನಬಸವಣ್ಣಾ.**
**ಈ ಪ್ರಸಾದವ ನಿಮ್ಮ ಸುಳುಹಿನಲ್ಲಿ ತೋರಿದೊ,**
**ನಿಮ್ಮ ನೆನಹಿನಲ್ಲಿ ತೋರಿದೊ ?**
**ತೋರುವ ಪ್ರಸಾದ ತೋರದೆ ಹೋಯಿತ್ತೆಂಬುದೇನಯ್ಯಾ ,**
**ಚೆನ್ನಬಸವಣ್ಣಾ ?**
**ಕಾಯವಿಡಿದ ಪ್ರಸಾದ ಕರಣಂಗಳಿಗೆ**
**ಹೋಯಿತ್ತೆಂಬುದೇನಯ್ಯಾ, ಚೆನ್ನಬಸವಣ್ಣಾ ?**
**ಲಾಭಕ್ಕೆ ವ್ಯವಹರಿಸಲು ನಷ್ಟವಾಗಿದೆ ;**
**ಈ ನಷ್ಟ ತುಷ್ಟಿಯ ಕೂಡಿಕೊಂಡು**
**ನಿನ್ನಲ್ಲಿ ನೀ ಪ್ರಸಾದಿಯಾಗಯ್ಯಾ .**
**ಕಪಿಲಸಿದ್ಧ ಮಲ್ಲಿನಾಥಯ್ಯಾ ,**
**ನಿಮ್ಮ ಧರ್ಮದಲ್ಲಿ ಚೆನ್ನಬಸವಣ್ಣನಿಂದ ನಿಜ ಪ್ರಸಾದಿಯಾದೆನಾಗಿ**
**ನಿಮ್ಮ ಹರಿಯ ಕೊಂದೆ.**

ಅರುಹಿನಲ್ಲಿ ಅಡಕವಾದ ಪ್ರಸಾದ ಆರೂ ಕಾಣಬಾರದ ಪ್ರಸಾದ. ಕಣ್ಣಲ್ಲಿ ಕಂಡುಬರುವ ಹಾದರದ ಅಜ್ಞಾನ ಕಣ್ಣಲ್ಲಿಯೇ ಸಂಗಮವಾದ ಅರುಹಿನ ದೃಶ್ಯಕ್ಕೆ ಪ್ರಸಾದವಾದುದು ಯಾರಿಗಾದರೂ ಕಾಣಲು ಬರುತ್ತದೆಯೆ? ಅದು ಸಾಧ್ಯವಾಗದ ಮಾತು. ತನ್ನ ಕಣ್ಣಲ್ಲಿ ಅರಿವಿನ ಪ್ರಸಾದ ತನ್ನ ಅಜ್ಞಾನವನ್ನು ನುಂಗಿ ಜೀರ್ಣಿಸಿಕೊಂಡಿತ್ತು. ಈ ಸುಳುಹು ಕಣ್ಣಲ್ಲಿ ಹೊಳೆದರೆ ಸಾಕು; ನೆನಹಿನಲ್ಲಿ ಬಂದರೆ ಸಾಕು ಅಜ್ಞಾನದ ದೃಶ್ಯ ಜ್ಞಾನಕ್ಕೆ ಬಲಿಯಾಗುವುದು.

ಸಕಲ ತನುಗಳಿಗೂ ತೋರುವ ಪ್ರಸಾದವಿದು. ಆದರೆ ಗುರುದೇವನು ಅರುಹಿನ ಸುಳುಹು ನೀಡದಿದ್ದರೆ ತೋರಿಬರುವುದಿಲ್ಲ. ಆದರೆ ತೋರದೆ ಹೋಯಿತ್ತು ಎನ್ನಲೂ ಬರುವುದಿಲ್ಲ. ಕಾಯವಿಡಿದ ಅಕಾಯ ಪ್ರಸಾದ ಕಾಯಕ್ಕೂ ಕಾಯದ ಕರಣಂಗಳಿಗೂ ಆನೆಯ ಬಲ ತಂದಿದೆ. ಮನ, ಲಾಭಕ್ಕೆ ವ್ಯವಹರಿಸಿದುದಕ್ಕಾಗಿ ಅದು ಮನದ ಸುಳುಹಿಗೆ ದಕ್ಕಲಿಲ್ಲ. ಆದರೇನಾಯಿತು ಈ ನಷ್ಟ ತುಷ್ಟಿಯ ಕೂಡಿಕೊಂಡು ಕಾಯಕ್ಕೆ ಪ್ರಸಾದವಾಗಿ ಮಾರ್ಪಟ್ಟಿದೆ.

ಕಾಯದಲ್ಲಿಯೇ ಸಂಗಮವಾದ ಅರಿವಿನ ಪ್ರಸಾದ ಕಾಯವನ್ನು ಆವರಿಸಿದ ಮನಕ್ಕೆ ಇಚ್ಛೆಯಾದರೆ ಸಾಕು ಮನ ಅರುಹಿನ ಪ್ರಸಾದದಲ್ಲಿ ಬೆರೆತು ಪ್ರಸಾದಿಯೇ ಆಗುತ್ತದೆ.

ಕಪಿಲಸಿದ್ಧ ಮಲ್ಲಿನಾಥಯ್ಯಾ, ನಿಮ್ಮ ಧರ್ಮದಲ್ಲಿ ಚೆನ್ನಬಸವಣ್ಣನಿಂದ ನಿಜಪ್ರಸಾದಿಯಾದೆನಾಗಿ ನಿಮ್ಮ ಹರಿಯ ಕೊಂದೆ :

ಇದು ಸಿದ್ಧರಾಮ ಶಿವಯೋಗಿಗಳ ಅದ್ಭುತವಾದ ಸೂತ್ರ. ಇಡೀ ಮಾನವ ಕುಲವನ್ನೇ

ಅರಿವಿನ ಕುಲವನ್ನಾಗಿಸುವ ಸೂತ್ರ.

ಸ್ಥೂಲ ಸೂಕ್ಷ್ಮ ಕಾರಣ ಕಾಯಗಳೆಂದು ಜ್ಞಾನಿಗಳು ಕಾಯವನ್ನು ಗುರುತಿಸುತ್ತಾರೆ. ಸ್ಥೂಲಕಾಯ 'ಹರಿ'ಯದ್ದಾದರೆ ಸೂಕ್ಷ್ಮಕಾಯ 'ಬ್ರಹ್ಮ'ನದು. ಕಾರಣ ಕಾಯ 'ಹರ'ನದ್ದು.

ಮನ ಭ್ರಮೆಗೆ ಒಳಪಟ್ಟಿರುವುದರಿಂದಾಗಿ ಬ್ರಹ್ಮನ ಪರಿಚಯ ಮನಕ್ಕೆ ಆಗುವುದಿಲ್ಲ. ಹರನ ಪ್ರಸಾದ ಮನಕ್ಕೆ ಸಿಕ್ಕರೆ ಸಾಕು ಸಂಪೂರ್ಣ ಶರಣು ಹೋಗುತ್ತದೆ. ಶರಣನೇ ತಾನಾಗುತ್ತದೆ. ಅರಿವಿನ ಧರ್ಮ ಪಾಲಿಸುತ್ತ ನಿಜ ಪ್ರಸಾದಿಯಾಗಿ ಮನೋಕಾಯ ತನ್ನ ಅಜ್ಞಾನವನ್ನು ಕೊಲ್ಲುವ ಹರನ ಅರಿವಿನ ಧರ್ಮವನ್ನು ಮಾತ್ರ ಪಾಲಿಸುತ್ತದೆ. ಈ ಸೂತ್ರ ಚೆನ್ನಬಸವಣ್ಣನಿಂದ ಎನಗೆ ಸಾಧ್ಯವಾಯಿತ್ತೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**200**

**ಆರು ತನ್ನಯ ರೂಪು ಆಗಬಲ್ಲಾತ ಗುರು**
**ಆರರಿಮ್ಮೀರಿ ಆನಂದಮಯವ ತೋರಿ**
**ಆರೇಳೆಂಟ ಗಾರು ಮಾಡದವರ್ಗ**
**ಆನಂದಮಯರೂಪ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿಷಡ್ವರ್ಗಗಳಾದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಸಪ್ತ ವ್ಯಸನಗಳು ಅಷ್ಟ ಮದಗಳು ಕಾಯದಲ್ಲಿಯೇ ಹುಟ್ಟಿ ಕಾಯವನ್ನೇ ಸುಖ ದುಃಖಗಳಿಗೆ ಈಡು ಮಾಡುತ್ತಲಿದೆ. ಏಕೆಂದರೆ ಆರು ಏಳು ಎಂಟನ್ನು ಮೀರಿದ ಗಾರುಡಿಯ ಅರಿವಿನ ವಿದ್ಯೆಯನ್ನು ಅರಿಯದಿದ್ದಕ್ಕಾಗಿ ಕಾಯ ಕರ್ರನೆ ಕುಂದುತ್ತದೆ.

ರೂಪು ಎನ್ನುವುದು ಬಯಲ ಬೀಜದ ವೃಕ್ಷ. ಬೀಜ ಬಯಲು ಇದ್ದಾಗ ಆ ಬೀಜದಿಂದ ಅಂಕುರಿಸಿದ ವೃಕ್ಷವೂ ಬಯಲೇ ಆಗಿರಬೇಕಲ್ಲ. ಕಾಯವೆಂಬ ರೂಪವನ್ನು ಮನವೆಂಬ ಅಕಾಯ ಆವರಿಸಿದೆ. ಜ್ಞಾನವೆಂಬ ಅಕಾಯ ಕಾಯದಲ್ಲಿ ಸಂಗಮವಾಗಿದೆ.

ಜ್ಞಾನವೆಂಬ ಅಕಾಯಕ್ಕೆ ಕಾಯ ಮಾಧ್ಯಮವಾದಾಗ ಅದು ಗುರು ಕಾಯವಾಗುತ್ತದೆ. ಮನವೆಂಬ ಅಕಾಯಕ್ಕೆ ಕಾಯ ಮಾಧ್ಯಮವಾದಾಗ ಆರು ಏಳು ಎಂಟು ಅಜ್ಞಾನದ ರೂಪಗಳನ್ನು ತೋರುತ್ತದೆ. ಅಂದರೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಕಾಯದಿಂದಲೇ ಪ್ರಕಟಿಸುತ್ತದೆ. ಸಪ್ತ ವ್ಯಸನಗಳನ್ನು ಅಷ್ಟಮದಗಳನ್ನು ಕೂಡಾ ಕಾಯದಿಂದಲೇ ಪ್ರಕಟಿಸುತ್ತದೆ.

ಕಾಯದಲ್ಲಿ ಸಂಗಮವಾದ ಜ್ಞಾನ ಕಾಯ ಕಾಯದಲ್ಲಿಯೇ ಉಳಿಯುತ್ತದೆ. ಕಾಯವೆನ್ನುವುದು ಜ್ಞಾನ ಕಾಯಕ್ಕೆ ಸಂಬಂಧಪಟ್ಟ ಆನಂದಮಯ ರೂಪು. ಅದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿದೆ. ಆರು ಏಳು ಎಂಟು ರೂಪುಗಳನ್ನು ಕೂಡಾ ತನ್ನಂತೆಯೇ ಮಾಡಿಕೊಳ್ಳುವ ಶಕ್ತಿ ಆತನಿಗಿದೆ.

**201**

**ಆರು ಸೀಮೆಯೊಳಗೆ ಅನ್ಯವಪ್ಪುದೆ ಹೇಳಾ,**
**ಆರರಿಂದರಿವ ನಾ ಐಕ್ಯಪದವ**
**ಮೂರೊಂದು ಮಾಡಿದ**

**ಆನು ಮುಮ್ಮಲಕೆ ದೂರವ್ಯೆ ,**
**ಮೂವತ್ತಾರ ಮೀರುವೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಧಾರಾದಿ ಆರು ಚಕ್ರಗಳಿಂದ ಕೂಡಿದ ದೇಹವೆಂಬ ಈ ಸೀಮೆಯೊಳಗೆ ಅರಿವೆಂಬ ಗುರುದೇವನ ಸಂಪತ್ತು ಬಿಟ್ಟು ಅನ್ಯವಿಲ್ಲ. ದೇಹವೆಂಬ ದೇವಾಲಯವನ್ನು ಆವರಿಸಿದ ಮನ ಅರಿವೆಂಬ ಗುರುದೇವನ ಚರಣ ಕಮಲಗಳಿಗೆ ಎರಗಿ ಅರಿವೇ ತಾನಾಗುವ, ಆ ಅರಿವಿನಲ್ಲಿ ತಾನು ಐಕ್ಯನಾಗುವ ದಾರಿಯನ್ನು ಆಧಾರ ಸ್ವಾಧಿಷ್ಠಾನಾದಿ ಆರು ತತ್ವಗಳಿಂದಲೇ ಕಂಡುಕೊಳ್ಳಬೇಕು.

ಸ್ಥೂಲಕಾಯ, ಸೂಕ್ಷ್ಮಕಾಯ, ಕಾರಣ ಕಾಯವೆಂಬ ಮೂರು ಕಾಯಗಳನ್ನು ಒಂದು ಮಾಡಿದಾಗಲೇ ಇಪ್ಪತ್ತೈದು ಆತ್ಮ ತತ್ವಗಳನ್ನು ಹತ್ತು ವಿದ್ಯಾ ತತ್ವಗಳನ್ನು ಹಾಗೂ ಒಂದು ಶಿವತತ್ವವನ್ನು ಹೊಂದಿದ ಕಾಯ ಕೈಲಾಸವಾಗುವುದು.

ಅರಿವೆಂಬ ಶಿವನು ಜಗನ್ಮಯನು, ಮೂವತ್ತಾರು ತತ್ವಗಳಿಗೆ ಮೀರಿದವನು. ನಾದ ಬಿಂದು ಕಲೆಗಳಿಗೆ ಅತೀತನಾದವನು.

ಮೂವತ್ತಾರು ತತ್ವಗಳು ಕಾಯದ ಬ್ರಹ್ಮಕಮಲವಾಗಿ ಅರಳಿ ಅರಿವೆಂಬ ಶಿವನು ಅದಕ್ಕೆ ದೇಹಿಯಾಗಿ ಇರುವನು. ಸಿದ್ಧರಾಮ ಶಿವಯೋಗಿಗಳ ಈ ಸೂತ್ರ ಕಂಡುಕೊಂಡ ಮನವೇ ಧನ್ಯ.

**202**

**ಆರೂಢದ ಮನದಲ್ಲಿ ನೀನೆ ನಿಂದ ಕಾರಣ**
**ತೋರುವ ಶಿವಜ್ಞಾನದ ದೀಪ್ತಿ ಬಸವಣ್ಣನಯ್ಯಾ .**
**ತೋರುವ ಬೀರುವ ಐಕ್ಯದ ಭಕ್ತಿ ಬಸವಣ್ಣನದಯ್ಯಾ ,**
**ನಿಜದಲ್ಲಿ ನಿಂದು ನಿರ್ವಯಲಾಯಿತ್ತಯ್ಯಾ**
**ಬಸವಣ್ಣನ ಕರುಣದಿಂದ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಹುಟ್ಟಿದಂದಿನಿಂದ ಮನ ರೂಢಿಯಲ್ಲಿದೆ. ನೆರೆಹೊರೆಯವರ ರೂಢಿ, ತಂದೆ ತಾಯಿಗಳ ರೂಢಿ, ಕುಟುಂಬದ ರೂಢಿ, ಬಂಧು ಬಳಗದ ರೂಢಿ. ಹೀಗೆ ಸಕಲ ರೂಢಿಗಳನ್ನು ಸಂಗ್ರಹಿಸಿಕೊಂಡು ಮನ ತನುವಿನ ಮೂಲಕ ತಾನು ಕಲಿತ ರೂಢಿಯಿಂದ ಸುಖಿಸುತ್ತದೆ; ದುಃಖಿಸುತ್ತದೆ.

ಮನದ ರೂಢಿ ತಪ್ಪಬೇಕಾದರೆ ಅದಕ್ಕೆ ಆರೂಢನ ದರುಶನವಾಗಬೇಕು. ಯಾವ ರೂಢಿಗಳೇ ಇಲ್ಲದ ಆರೂಢ ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಮನ ಆತನ ಚರಣ ಕಮಲಗಳಿಗೆರಗಿದರೆ ಸಾಕು ಆರೂಢನೇ ತಾನಾಗುತ್ತದೆ. ರೂಢಿಗತವಾದ ಮನದಲ್ಲಿ ಸಕಲ ರೂಢಿಗಳನ್ನು ಕೆಡಿಸಿ ಆರೂಢ ನಿಲ್ಲುತ್ತಾನೆ.

ಆರೂಢನೆಂದರೆ ಸಾಕ್ಷಾತ್ ಶಿವ. ಅರಿವಿನ ಶಿವ. ಆ ಶಿವನಿಗೆ ಸಿದ್ಧರಾಮ ಶಿವಯೋಗಿಗಳು ಬಸವಣ್ಣನೆಂದು ನಾಮಕರಣ ಮಾಡಿದ್ದಾರೆ. ಏಕೆಂದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನೆಂಬ ಸದಾ ಬೆಳಗುತ್ತಿರುವ ದೀಪ್ತಿಯನ್ನು ಸಿದ್ಧರಾಮ ಶಿವಯೋಗಿಗಳಿಗೆ ತೋರಿಸಿದವರು ಬಸವಣ್ಣನಾದುದರಿಂದ ಆ ದೀಪ್ತಿಗೆ ಬಸವಣ್ಣನೆಂದು ಕರೆದರು.

ಸಕಲ ಅಂಗಗಳಲ್ಲಿಯೂ ಬೆಳಗಿಂಗೆ ಬೆಳಕಾಗಿ ಬೆಳಗುವ ದೀಪ್ತಿಯಿದೆ. ಅದನ್ನು ಆಯಾ

ಅಂಗಗಳಿಗೆ ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ. ಕಂಡುಕೊಳ್ಳುವ ಬಯಕೆಯೂ ಆಗುತ್ತಿಲ್ಲ. ಬಸವಣ್ಣನಂತೆ ತೋರುವವರೂ ಇಲ್ಲ. ಇದ್ದರೂ ಕೂಡಾ ಬಯಕೆಯಾದ ಅಂಗಗಳಿಗೆ ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ.

ತೋರುವ ಬೀರುವ ಐಕ್ಯದ ಭಕ್ತಿ ಬಸವಣ್ಣನದಯ್ಯಾ, ನಿಜದಲ್ಲಿ ನಿಂದು ನಿರ್ವಯಲಾಯಿತ್ತಯ್ಯಾ, ಬಸವಣ್ಣನ ಕರುಣದಿಂದ ಕಪಿಲಸಿದ್ಧ ಮಲ್ಲಿನಾಥಯ್ಯಾ.

**203**

**ಆರೂಢದೈಕ್ಯದಲ್ಲಿ ಆನು ನೀನಪ್ಪೆ ಹೇಳಾ.**
**ತೋರಿಪ್ಪೆ ಬ್ರಹ್ಮಾಂಡದ ಮೇಲೆ ನಿನ್ನ ಸಂಯೋಗವ.**
**ವಿಕಲವಿಯೋಗದಲ್ಲಿ ಸಕಲ ನೀನೆ ಆನಾದೆನು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಅರಿವೆಂಬ ಗುರುದೇವನೆ, ಮಹಾದೇವನೆ, ಸದಾಶಿವನೆ, ಸಾಕ್ಷಾತ್ ಪರಬ್ರಹ್ಮನೆ ನೀನು ಆರೂಢನೆ ಆಗಿರುವಿ. ಸಕಲ ರೂಢಿಗತನಾದ ನಾನು ಆರೂಢನೆಂಬ ನಿನ್ನಲ್ಲಿ ಐಕ್ಯನಾದೆ. ನನ್ನ ಸಕಲ ರೂಢಿಗಳನ್ನು ನಿನ್ನ ಜ್ಞಾನಾಗ್ನಿಯಲ್ಲಿ ಹಾಕಲಾಗಿ ಸುಟ್ಟು ಬೂದಿಯಾದವು. ಆಗ ನಾನು ನೀನಾದೆ.

ಬ್ರಹ್ಮಾಂಡಕ್ಕೆ ಒಡೆಯ ನೀನು. ಒಡಲೊಡೆಯ ನೀನು. ನೀನು ನನ್ನಲ್ಲಿ ಚುಳುಕಾಗಿರುವುದರಿಂದ ನೀನೇ ನಾನಾದೆನು. ನಿನ್ನ ಸಂಯೋಗದಿಂದಾಗಿ ನಿನ್ನಲ್ಲಿ ನಾನಿರುವೆನೋ ನನ್ನಲ್ಲಿ ನೀನಿರುವೆಯೋ ಎಂಬುದನ್ನು ತಿಳಿಯದಂತಾದೆನು.

ಒಡಲನ್ನು ಸೃಷ್ಟಿ ಮಾಡಿ, ಒಡಲೊಳಗೆ ಸಂಗಮವಾಗಿ, ಒಡಲ ಮೂಲಕ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ, ಒಡಲರಿಯದಂತೆ ಒಡಲೊಳಗಿದ್ದು ಒಡಲ ಬೆಳಗುವ ಒಡಲೊಡೆಯ ನೀನು. ಒಡಲನ್ನಾವರಿಸಿದ ಮನಕ್ಕೆ ಗೊತ್ತಾಗದಂತೆ ಮಾಡಿದೆ. ಆಗ ಅದು ಘನಮನವಾಯಿತು. ಮನಕ್ಕೆ ಗೊತ್ತಾಗದಿದ್ದರೇನಂತೆ ಮನವನ್ನು ಸೃಷ್ಟಿ ಮಾಡಿದ ಮಹದೇವ ನೀನಲ್ಲವೆ?

ತೃಣದ ಬೆನ್ನು ಬಿದ್ದು ಮನಕ್ಕೆ ಮಹಾದೇವನ ಪರಿಚಯವಾದರೆ ಸಾಕು ತೃಣ ಮರೆತು ಮಹದೇವನ ಬೆನ್ನು ಬೀಳುವುದು. ಆಗ ಅದು ಕೂಡಾ ಮಹಾದೇವನೇ ತಾನಾಗುವುದು. ಕಪಿಲಸಿದ್ಧ ಮಲ್ಲಯ್ಯನೇ ತಾನಾಗುವುದು.

**204**

**ಆರೂಢದೈಕ್ಯವನು ತೋರಬಲ್ಲಡೆ**
**ಪರಮ ಜ್ಯೋತಿರ್ಮಯನುವಪ್ಪ**
**ಪ್ರಸಾದಲಿಂಗವನು ಅಜಾತನರುಹಿದ**
**ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವೆಂದರೆ ಅಜಾತನು ಅರುಹಿದ ಪ್ರಸಾದಲಿಂಗ. ತಂದೆ ತಾಯಿಗಳು ಮಾಂಸ ಪಿಂಡಕ್ಕೆ ಜನ್ಮ ಕೊಟ್ಟರು. ತಾವು ಹಡೆದದ್ದು ಅಜಾತಲಿಂಗವೆಂದು ಅವರಿಗೆ ಗೊತ್ತಿಲ್ಲ. ತನುವೆಂಬ ಅಜಾತಲಿಂಗವನ್ನು ಗರ್ಭದಲ್ಲಿ ಧರಿಸಿದ್ದೇನೆಂದು ತಾಯಿಗೆ ಗೊತ್ತಿಲ್ಲ. ನನ್ನ ಮುಖಾಂತರ

ಬೀಜದ ರೂಪದಲ್ಲಿ ಜ್ಯೋತಿರ್ಮಯನೇ ಆದ ಪ್ರಸಾದಲಿಂಗವನ್ನು ತನ್ನ ಸತಿಯ ಗರ್ಭಕ್ಕೆ ಕಳುಹಿಸಿದೆನೆಂದು ತಂದೆಗೂ ಗೊತ್ತಿಲ್ಲ.

ತಂದೆ ತಾಯಿಗೆ ಗೊತ್ತಾಗಿ ಬೀಜರೂಪದ ಜ್ಯೋತಿರ್ಮಯನೇ ಆದ ಆ ಪ್ರಸಾದಲಿಂಗವನ್ನು ಗರ್ಭದಲ್ಲಿ ಧರಿಸಿದ್ದರೆ ತಂದೆ ತಾಯಿ ಹುಟ್ಟುವ ಮಗು ಧನ್ಯರೇ ಆಗುತ್ತಿದ್ದರು.

ಅರಿಷಡ್ವರ್ಗಗಳ ರೂಢಿ, ಸಪ್ತವ್ಯಸನಗಳ ರೂಢಿ, ಅಷ್ಟಮದಗಳ ರೂಢಿ ತಂದೆ ತಾಯಿಗಳಿಗೆ ಇರುವುದರಿಂದ, ಪರಮ ಜ್ಯೋತಿರ್ಮಯನು ಸಂಗಮವಾದ ಬೀಜರೂಪದ ಆ ರೂಢಿಯ ಪ್ರಸಾದ ಲಿಂಗವನ್ನು ತಂದೆ ತನಗರಿಯದಂತೆ ತಾಯಿ ಗರ್ಭಕ್ಕೆ ತಳ್ಳುವನು.

ಏಕೆಂದರೆ ಗರ್ಭದಲ್ಲಿ ಧರಿಸಿದ್ದು ಅಜಾತನ ಪ್ರಸಾದಲಿಂಗವೆಂದು ಗುರುದೇವ ತಿಳಿ ಹೇಳಲಿಲ್ಲ. ಸಮರ್ಥ ಗುರುದೇವನ ಹತ್ತಿರ ತಂದೆ ತಾಯಿಗಳಾದವರು ತಿಳಿದುಕೊಳ್ಳಲು ಹೋಗಲಿಲ್ಲ. ಹೀಗಾಗಿ ಹುಟ್ಟಿದ ಮಗು ಅಜಾತನೇ ಆಗಿದ್ದರೂ ಅದು ತಾವು ಹಡೆದ ಮಗುವೆಂದು ತಂದೆ ತಾಯಿ ಭಾವಿಸುತ್ತಾರೆ. ಹಡೆದವರು ನನ್ನ ತಂದೆ ತಾಯಿಗಳೆಂದು ಮಗು ಭಾವಿಸುತ್ತದೆ.

ತಂದೆ ತಾಯಿಗಳ ರೂಢಿ ಅಂದರೆ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಮನಕ್ಕೆ ಆವರಿಸಿ, ಮನ ತನುವನ್ನು ಆವರಿಸಿ ಪ್ರಸಾದ ತನುವನ್ನು ಮನ ಸುಖ ದುಃಖಗಳಿಗೆ ಈಡು ಮಾಡುತ್ತದೆ.

ನೋಡಿದಾಗ, ಮುಟ್ಟಿದಾಗ, ಕೇಳಿದಾಗ, ಮೂಸಿಸಿ ರುಚಿಸಿದಾಗ ಆಗುವ ಸುಖದುಃಖಗಳನ್ನು ರೂಢಿಗತವಾದ ಮನಕ್ಕೆ ತನುವಿನಲ್ಲಿಯೇ ಸಂಗಮವಾದ ಆರೂಢನು ಮುಟ್ಟಿ ತೋರಿದಡೂ ಮನಕ್ಕೆ ಎಚ್ಚರ ಆಗುವುದೇ ಇಲ್ಲ. ಅಜಾತನು ತಿಳಿ ಹೇಳುವ ಪ್ರಸಾದ ಲಿಂಗವನ್ನು ಮನ ಗಮನಿಸುವುದೇ ಇಲ್ಲ. ಗಮನಿಸಿದರೆ ಸಾಕು ಪರಮ ಜ್ಯೋತಿರ್ಮಯನೇ ತಾನಾಗುತ್ತದೆ. ಗುರು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುವುದು.

**205**

**ಆರೂಢದೈಕ್ಯವನು ತೋರಿಪ್ಪ ಸೀಮೆಯನು**
**ಮೀರಿಪ್ಪುದೊಂದು ಬಿಂದುರೂಪು.**
**ಬಿಂದುಗಳು ಕಳೆಗಳನು ಸಂಧಿಸುವ ಭೇದವನು**
**ಚಂದ್ರಮಂಡಲದಲ್ಲಿಯೊಪ್ಪಿ ತೋರೆ**
**ಆನಂದದಕ್ಷರಂಗಳ ಛಂದವಿದೆಂದಡೆ**
**ಹಿಂದುಮುಂದುಗೆಡುವ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಯಲ ಬಿಂದುವೊಂದು ಬಿಂದುವನು ಸಂಧಿಸಿ ಚಂದ್ರಮಂಡಲದಲ್ಲಿ ನಕ್ಷತ್ರದಂತೆ ಭೂಮಿಯ ಮೇಲೆ ಪರಮಾನಂದದಿಂದ ಛಂದದಿ ಬೆಳಗುತ್ತಲಿವೆ. ಬೆಳಗುವ ನಕ್ಷತ್ರಕ್ಕೆ ಮಾತ್ರ ಬೆಳಗುವ ಸಕಲ ನಕ್ಷತ್ರಗಳೂ ಗೋಚರಿಸುತ್ತವೆ.

ಅರಿಷಡ್ವರ್ಗಗಳ ಸಪ್ತವ್ಯಸನಗಳ ಅಷ್ಟಮದಗಳ ರೂಢಿಯಲ್ಲಿರುವ ದೇಹವಾದರೇನಂತೆ ಅದು ಬೆಳಗುವುದು ಅದಕ್ಕೆ ಕಾಣುವುದಿಲ್ಲ.

ರೂಢಿ ತಪ್ಪಿ ಸೀಮೆ ಮೀರಿ ನಿಸ್ಸೀಮನಾದ ಆರೂಢನು ಬೆಳಗುವ ಸೂರ್ಯನನ್ನು ಬೆಳಗುತ್ತ ಹೊಳೆಯುವನು.

**206**

**ಆರೆನಯ್ಯೋ ಭವನೆ ಗಾರುಗೆಡಿಸಿತ್ತೆನ್ನ**
**ಕಾಣುತೊಡನಂಜಿ ಕೊಕ್ಕರಿಸಿತು.**
**ಕಾರುಣ್ಯಾಕರನೆ, ಕಪಿಲಸಿದ್ಧ ಮಲ್ಲೇಶ್ವರನೆ**
**ಮಾಯಾವಿದಾರಣನೆ ಸಲಹು ತಂದೆ.**

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ, ಸಪ್ತ ವ್ಯಸನಗಳು, ಅಷ್ಟಮದಗಳು ನನ್ನನ್ನು ಗಾರುಗೆಡಿಸಿ ಕಾಡುತ್ತಲಿವೆ. ಕಾರುಣ್ಯಾಕರನೆ ಕಪಿಲಸಿದ್ಧ ಮಲ್ಲೇಶ್ವರನೆ ಮಾಯಾ ವಿದಾರಣನೆ ಸಲಹು ತಂದೆ. ಹುಟ್ಟಿಸಿದ ನೀನು ಸಲುಹಿದರೆ ಮಾತ್ರ ಬದುಕುವೆ.

ನನ್ನನ್ನು ಹುಟ್ಟಿಸುವಾಗ ಆರು ಏಳು ಎಂಟೆಂಬ ಕಷ್ಟಗಳನ್ನು ತನುವಿನಲ್ಲಿಟ್ಟು ಹೊಲಿದು ಕಳುಹಿಸಿರುವಿ. ಅವು ನನ್ನನ್ನು ಕೊಕ್ಕರಿಸಿ ಕುಳ್ಳಿರಿಸಿವೆ. ಹುಟ್ಟಿಸಿದ ನಿನ್ನನ್ನೇ ಮರೆಯುವಂತೆ ಮಾಡಿವೆ.

''ಆಸೆ ಆಮಿಷ ತಾಮಸ ಹುಸಿ ವಿಷಯ ಕುಟಿಲ ಕುಹಕ ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಿಗೆ ಮೇಲಿಂದತ್ತ ತೆಗೆದು ಕಳೆಯಯ್ಯಾ. ಅದೇಕೆಂದಡೆ : ನಿಮ್ಮತ್ತಲೆನ್ನ ಬರಲೀಯವು. ಇದು ಕಾರಣ, ಇವೆಲ್ಲವ ಕಳೆದು ಎನ್ನ ಪಂಚೈವರ ಭಕ್ತರ ಮಾಡು ಕೂಡಲಸಂಗಮದೇವಾ'' ಎಂದು ಬಸವಣ್ಣನವರು ಸಿದ್ಧರಾಮ ಶಿವಯೋಗಿಯಂತೆಯೇ ಹಡೆದ ತಂದೆಯನ್ನು ಬೇಡಿಕೊಂಡಿದ್ದಾರೆ.

**207**

**ಆರೆನಯ್ಯೋ ಶಿವನೆ ತೆರಹುಗೆಡಿಸುತ್ತಲಿದೆ**
**ಕುರುಹೆಂದು ತೋರಿದಿರಿ ಎನ್ನ ನೀವು.**
**ಉಸುರದಂತಿದ್ದರೆ ನರಕಕ್ಕೆ ಒಯ್ದಿತ್ತು**
**ಶಶಿಧರ ಕಾಯಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವಿನ ಲಿಂಗಯ್ಯ ಅಂಗದಲ್ಲಿ ತೆರಹಿಲ್ಲದಂತೆ ಸಂಗಮವಾಗಿದ್ದರೂ ಅಂಗವನ್ನು ಆವರಿಸಿದ ಮನ ತೆರಹುಗೆಡಿಸುತ್ತಲಿದೆ. ಈ ಮನದಿಂದಲೇ ಉಂಟಾದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ತೆರಹುಗೊಳಿಸುತ್ತಲಿವೆ. ಸಪ್ತ ವ್ಯಸನಗಳು, ಅಷ್ಟಮದಗಳು ನನ್ನನ್ನು ದಾರಿ ತಪ್ಪಿಸುತ್ತಲಿವೆ ಶಿವನೆ.

ಅರಿವೆಂಬ ಗುರುದೇವನೆ ನನ್ನನ್ನು ನೀವು ಕುರುಹೆಂದು ತೋರಿದಿರಿ, ಇನ್ನು ತಾಳೆನು ತಂದೆ ನೀನೆ ಅಟ್ಟಿದ ಈ ಮನದ ಉಪಟಳವನ್ನು.

ನಿನ್ನ ಪ್ರಸಾದವೆಂಬ ಈ ಕುರುಹನ್ನು; ನೀನು ವಾಸ ಮಾಡಿದ ಕಾಯವೆಂಬ ಈ ಕೈಲಾಸವನ್ನು ಮನ ತನ್ನ ಮನ ಬಂದಂತೆ ಬಳಿಸಿ ನನ್ನನ್ನು ನರಕಕ್ಕೆ ಅಟ್ಟುತ್ತಲಿದೆ ತಂದೆ. ತಾಳಲಾರೆ ನಾನು ಈ ಮನದ ಉಪಟಳವನ್ನು.

ಮೌನವನ್ನು ಮುರಿದು ಹೇಳುವೆ ತಂದೆ, ಶಶಿಧರನೆ ನೀನು ಹಡೆದ ಈ ಕಾಯವನ್ನು ನೀನೆ ಕಾಯಯ್ಯ ಮನದಿಂದ ಎನ್ನನ್ನು ಮುಕ್ತನನ್ನಾಗಿಸು ಶಿವನೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.

208

**ಆರೇನು ಮಾಡಿದುದನಂತಿರೆ,**
**ಅಂತಕ್ಕು ಇಂತಕ್ಕು ಯೆಂತಕ್ಕುಯೆನಬೇಡ,**
**ಚಿಂತಿಸದಿರು ಎಲೆ ಮನವೆ,**
**ಅಂತಕಹರ ಕಪಿಲಸಿದ್ಧ ಮಲ್ಲಿನಾಥಯ್ಯ**
**ಮಾಡಿದಂತಲ್ಲದೆ ತಾನು ಅಪ್ಪುದಿಲ್ಲ.**

ಎಲೆ ಮನವೆ ನೀನು ಶಿವನ ರಾಣಿ ಸಾಕ್ಷಾತ್ ಶಿವೆ. ಶಿವನ ಬೆಳಕಿನ ಕಿರಣಗಳಿಂದ ಬಂದವಳು ನೀನು. ಶಿವನನ್ನು ಮರೆತುದಕ್ಕಾಗಿ ನಿನ್ನನ್ನು ನೀನು ಮರೆತಿರುವಿ. ನಿನ್ನನ್ನು ನೀನು ಮರೆತುದಕ್ಕಾಗಿ ನೀನು ಮೋಸಕ್ಕೆ ಒಳಗಾಗಿರುವಿ. ಹೀಗಾಗಿ ನೀನು ನಿನ್ನನ್ನು ಅಂತು ಇಂತು ಎಂತೆಂದು ದೂಷಿಸುವರು. ಸಕಲರ ದೂಷಣೆಗೆ ಒಳಗಾದ ಎಲೆ ಮನವೆ ಅಂತು ಇಂತು ಎಂತೆಂದು ಚಿಂತಿಸದಿರು. ಅಂತಕಹರ ಕಪಿಲಸಿದ್ಧ ಮಲ್ಲಿಕಾರ್ಜುನದೇವ ನಿನ್ನ ಕೈ ಹಿಡಿದೆತ್ತಿಕೊಳ್ಳುವನು. ಆತ ಮಾಡಿದಂತಲ್ಲದೆ ತಾನು ಅಪ್ಪುದಿಲ್ಲ.

209

**ಆರೇನೆಂದಡೂ ಓರಂತಿಪ್ಪುದೆ ಸಮತೆ.**
**ಆರು ಜರಿದವರೆನ್ನ ಮನದ ಕಾಳಿಕೆಯ**
**ಕಳೆದರೆಂಬುದೆ ಸಮತೆ.**
**ಆರು ಸ್ತೌತ್ಯವ ಮಾಡಿಹರೆನ್ನ ಜನ್ಮಜನ್ಮದ**
**ಹಗೆಗಳೆಂಬುದೆ ಸಮತೆ,**
**ಇಂತು ಗುರುಕಾರುಣ್ಯ.**
**ಮನವಚನಕಾಯದಲ್ಲಿ ಅವಿತಥವಿಲ್ಲದಿರ್ದಡೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿನ್ನವರ ನೀನೆಂಬುದೆ ಸಮತೆ.**

ಸಮಾನತೆಯ ಜ್ಞಾನವನ್ನು ರೂಢಿ ಮಾಡಿಕೊಳ್ಳಲು ಬರುವುದಿಲ್ಲ. ಹಾಗೆ ರೂಢಿಸಿಕೊಂಡು ತನ್ನಂತೆಯೇ ಸಮಾನತೆಯಿಂದ ನೋಡಲು ಹೋದರೆ ಮನ ಒಮ್ಮೆ ಎಚ್ಚರವಿದ್ದು ಮತ್ತೊಮ್ಮೆ ಎಚ್ಚರ ತಪ್ಪುತ್ತದೆ.

ಸಮಜ್ಞಾನ ತನುವಿನಲ್ಲಿಯೇ ಸಂಗಮವಾಗಿದೆ. ಅಸಮ ಸ್ಥಿತಿಯಲ್ಲಿರುವ ಮನ ಸಮಾನತೆಯ ಜ್ಞಾನದಲ್ಲಿ ಲೀನವಾಗಬೇಕು. ಆಗ ಹೊಗಳುವ ಮಾತುಗಳಿಗೆ ತನು ಅರಳುವುದಿಲ್ಲ. ತೆಗಳುವ ಮಾತುಗಳಿಗೆ ತನು ಕೆರಳುವುದಿಲ್ಲ.

ಸು-ಶಬ್ಧ, ಕು-ಶಬ್ದವೆಂಬುವು ಶಬ್ದದ ಮೂಲಕ ಸೃಷ್ಟಿಯಾಗಿವೆ. ಮನದ ಅಜ್ಞಾನದಿಂದಾಗಿ ಶಬ್ದ ಕೇಳಿದ ತನು ಅರಳುತ್ತದೆ. ಅಜ್ಞಾನದಿಂದಾಗಿ ತನು ಕೆರಳುತ್ತದೆ ಎಂದು ತನಗೆ ತಾನೇ ಗೊತ್ತಾಗುತ್ತದೆ.

ಸ್ತುತಿ ನಿಂದೆಗಳಿಗೆ ಹಿಗ್ಗುವುದಿಲ್ಲ, ಕುಗ್ಗುವುದಿಲ್ಲ. ಗುರು ಕಾರುಣ್ಯದಿಂದ ಮನ ವಚನ

ಕಾಯ ಒಂದಾಗಿರುವುದರಿಂದ ತನ್ನಂತೆ ಸಕಲರೂ ಎಂಬುದು ತನಗೆ ಗೊತ್ತಾಗಿರುವುದರಿಂದ, ತನುವಿನ ಸಮತೆಯ ತತ್ವ ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಒಲಿತಿರುವುದರಿಂದ ಜರಿದವರನ್ನು ಹೊಗಳಿದವರನ್ನು ಸಮಾನತೆಯಿಂದ ನೋಡಲು ಸಾಧ್ಯವಾಗುತ್ತದೆ.

**210**

**ಆ ಲಿಂಗವತ್ಯಂತ ಉನ್ನತೋನ್ನತವಪ್ಪ**
**ಭಾವಿಸುವ ಭಾವಕ್ಕೆ ಇಂಬುಗೊಡನು**
**ಆವಾವ ಪರಿಯಲ್ಲಿ ನೋಡಿ ಕೂಡುವಡವರ್ಗೆ**
**ನಾಮವಿಲ್ಲದ ರೂಪಿನಿರವು ಇಲ್ಲ**
**ಶ್ರೀಗುರು ಚೆನ್ನಬಸವಣ್ಣನಾಜ್ಞೆಯಲಿ**
**ಎನ್ನ ಕರಸ್ಥಳಕ್ಕೆ ನಾಮರೂಪಾದೆಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಗದ ಪ್ರತಿ ತನುವಿಗೂ ನಾಮವಿದೆ. ಅದು ರೂಪದಿಂದ ಕೂಡಿದೆ. ಆ ರೂಪಕ್ಕೊಂದು ಹೆಸರಿದೆ. ರೂಪಕ್ಕೂ ಹೆಸರಿಗೂ ಸಂಬಂಧವಿಲ್ಲದಿದ್ದರೂ ಹೆಸರೇ ರೂಪಕ್ಕೆ ಪ್ರಧಾನವಾಗಿದೆ.

ತನುವೆಂದರೆ ಹೆಣ್ಣಲ್ಲ ಹಾಗೆಯೇ ಗಂಡೂ ಅಲ್ಲ. ಆದರೂ ಹೆಣ್ಣೆಂದು ಗಂಡೆಂದು ಕರೆಯಿಸಿಕೊಂಡಿದೆ. ಹೆಣ್ಣು ಗಂಡು ಎನ್ನುವ ತನು ಹೆಸರಿನಿಂದ ಕರೆಯಿಸಿಕೊಳ್ಳುತ್ತದೆ. ಹೆಸರು ಹುಟ್ಟಿನೊಂದಿಗೆ ಬಂದುದಲ್ಲ. ಹುಟ್ಟಿದ ನಂತರ ತನುವಿಗೆ ನಾಮಕರಣ ಮಾಡಲಾಗಿದೆ. ನಾಮಕರಣ ಮಾಡಿಕೊಂಡ ತನುವನ್ನೇ ಪೀಠ ಮಾಡಿಕೊಂಡು ಹೆಸರು ಸರ್ವಾಧಿಕಾರಿಯಂತೆ ತನುವನ್ನು ಆಳುತ್ತದೆ.

ಹೆಸರನ್ನು ಗೌರವದಿಂದ ಕರೆದರೆ ತನು ಅರಳುತ್ತದೆ. ಅಗೌರವದಿಂದ ಕರೆದರೆ ಕೆರಳುತ್ತದೆ. ಕರೆಯಲೆಂದು, ಗುರುತಿಸಲೆಂದು ತನುವಿಗೆ ಇಟ್ಟ ಹೆಸರೇ ತನುವಿಗೆ ಪ್ರಧಾನವಾಗಿದೆ.

ಹೆಸರು ಅಧಿಕಾರಿಯಾಗಿದೆ, ಪದವೀಧರನಾಗಿದೆ. ವೈದ್ಯ ಶಾಸಕ ಸಚಿವ ಪೀಠಾಧಿಪತಿಯಾಗಿದೆ. ಗುರುವಾಗಿದೆ; ಶಿಷ್ಯನಾಗಿದೆ. ಕಳ್ಳನಾಗಿದೆ, ಭ್ರಷ್ಟಾಚಾರಿಯಾಗಿದೆ. ಭಿಕ್ಷುಕನಾಗಿದೆ, ಶ್ರೀಮಂತನಾಗಿದೆ. ಏನೀ ಹೆಸರಿನ ಮಹಿಮೆ.

ನಿರಾಳ ಕೂಸಿಂಗೆ ಬೆಣ್ಣೆಯನಿಕ್ಕಿ ಹೆಸರನಿಟ್ಟು ಕರೆದವರಾರೋ; ಅಕಟಕಟಾ ಶಬ್ದದ ಲಜ್ಜೆಯ ನೋಡಾ ಎಂದು ಪ್ರಭುದೇವರು ಹೆಸರಿಟ್ಟು ಕರೆಯಿಸಿಕೊಳ್ಳುವ ದೇಹಗಳಿಗೆ ಎಚ್ಚರಿಕೆಯ ಸೂತ್ರವನ್ನು ನೀಡಿದ್ದಾರೆ.

ತನುವಿಗೆ ಇಟ್ಟ ಹೆಸರನ್ನು ಮನ ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ತನುವಿನ ಜುಟ್ಟು ಹಿಡಿದು ಅಲ್ಲಾಡಿಸುತ್ತದೆ. ತನುವನ್ನು ಅರಳಿಸುತ್ತದೆ; ತನುವನ್ನು ಕೆರಳಿಸುತ್ತದೆ. ಆ ಹೆಸರು ತಾನಲ್ಲ; ಆ ಹೆಸರಿನ ಭ್ರಮೆ ತನಗಿಲ್ಲ ಎನ್ನುವುದನ್ನು ಸಂಪೂರ್ಣ ಮರೆತು ಹೋಗಿದೆ.

ತನುವಿನಲ್ಲಿ ಸಂಗಮವಾದ ಅರಿವಿಗೆ ಯಾರೂ ಹೆಸರಿಟ್ಟು ಕರೆದಿಲ್ಲ. ಆ ಅರಿವೆಂಬ ಗುರುದೇವನಿಗೆ ಹೆಸರಿಟ್ಟು ಕರೆಯುವ ಶಕ್ತಿ ಯಾರಿಗಿದೆ ? ಅದು ನಿರಾಳ ಕೂಸು. ಅದು ಜಗದಗಲ ಮುಗಿಲಗಲ. ಅದು ಮಿಗೆಯಗಲ, ಪಂಚಭೂತಗಳನ್ನೇ ತನ್ನ ಗರ್ಭದಲ್ಲಿಟ್ಟುಕೊಂಡ ನಿರಾಳ ಕೂಸಿಗೆ ಹೆಸರಿಟ್ಟು ಕರೆಯಲು ಸಾಧ್ಯವೆ? ಅದರ ಶ್ರೀಚರಣ ಪಾತಾಳದಿಂದತ್ತತ್ತ. ಅದರ

ಶ್ರೀಮುಕುಟ ಬ್ರಹ್ಮಾಂಡದಿತ್ತತ್ತ. ಅದು ಅಗಮ್ಯ, ಅಪ್ರಮಾಣ. ಅದು ಅಪ್ರತಿಮ ಲಿಂಗವೂ ಆಗಿದೆ. ಅಂತಹ ಲಿಂಗ (ಕರಸ್ಥಲದಲ್ಲಿ) ಸರ್ವಾಂಗದಲ್ಲಿ ಬಂದು ಚುಳುಕಾಗಿದೆ. ಬಸವಣ್ಣನವರು ಅಂತಹ ಲಿಂಗಕ್ಕೆ ಸಾಕ್ಷಾತ್ ಕೂಡಲಸಂಗಯ್ಯ ಎಂದು ಕರೆದರು.

ಶ್ರೀಗುರು ಚೆನ್ನಬಸವಣ್ಣನ ಆಜ್ಞೆಯಲಿ ಎನ್ನ ಕರಸ್ಥಳಕ್ಕೆ ನಾಮರೂಪಾದೆಯಯ್ಯಾ ಕಪಿಲಸಿದ್ದ ಮಲ್ಲಿಕಾರ್ಜುನಾ:

ಚೆನ್ನಬಸವಣ್ಣನ ಆಜ್ಞೆಯಿಂದಾಗಿ ಎನ್ನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಾದ ಆ ಭಗವಂತನನ್ನು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಎಂದು ಹೆಸರಿಟ್ಟು ಕರೆಯಲು ಸಾಧ್ಯವಾಯಿತು. ಎನ್ನಂಗಕ್ಕೆ ಇಟ್ಟ ಹೆಸರು ಹೆಸರಿಲ್ಲದಾಯಿತು.

ಅಂಗವೆಂದರೆ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಪ್ರಸಾದ. ಅದಕ್ಕೆ ಹೆಸರಿಟ್ಟು ಕರೆಯುವುದೆಂದರೇನು?, ಅಕಟಕಟಾ ಶಬ್ದದ ಲಜ್ಜೆಯ ನೋಡಾ. ನಿರಾಳ ಕೂಸಿಂಗೆ ಬೆಣ್ಣೆಯ ನಿಕ್ಕಿ ಯಾರಾದರೂ ಹೆಸರನಿಟ್ಟು ಕರೆಯಲು ಸಾಧ್ಯವೆ? ಗುರುದೇವನಿಗೆ ಮಾತ್ರ ಸಾಧ್ಯವೆಂದು ಸಿದ್ಧರಾಮ ಶಿವಯೋಗಿಗಳು ಸದ್ಗುರು ಚೆನ್ನಬಸವಣ್ಣನನ್ನು ನೆನೆದಿದ್ದಾರೆ.

**211**

**ಆವ ಕಳೆಯೆಂಬುದು ನೀನೆಯಾದೆ, ಬಸವಲಿಂಗವೆ.**
**ಮುಕ್ತಿಗೆ ಮೂಲಸ್ವರೂಪು ನೀನಾಗಿ ನಿಂದ ರೂಪು.**
**ನಿನ್ನಲ್ಲಿಯೆ ತಲ್ಲೀಯವಾಯಿತ್ತು, ಬಸವಗುರುವೆ.**
**ನಿಯಮಾಚಾರದ ರೂಪು ನಿನ್ನಲ್ಲಿಯೇ ತಲ್ಲೀಯವಾಯಿತ್ತಯ್ಯಾ ,**
**ಕಪಿಲಸಿದ್ಧ ಮಲ್ಲಿನಾಥನ ಗುರು ಬಸವಾ.**

ಒಂದು ಸ್ವರದಲ್ಲಿ ಸಪ್ತಸ್ವರಗಳ ನಾದ ಬಿಂದು ಕಳೆಗಳು ಹುಟ್ಟಿದವು. ಅವೆಲ್ಲವುಗಳ ಉಗಮವೂ ನೀನೆ ಆಗಿ ಅವುಗಳ ಅತ್ತತ್ತ ನೀನೇ ನಿಂದೆ ಬಸವಲಿಂಗವೆ ಎಂದು ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನಿಗೆ ಬಸವಲಿಂಗ, ಬಸವಗುರು, ಗುರುಬಸವಾ ಎಂದು ಮನದಣಿಯ ಹಾಡಿದ್ದಾರೆ.

ಬಸವರಸರು ಜಗದ ಸಕಲ ತನುಗಳು ಮುಕ್ತಿಹೊಂದಲು ಸರಳವಾದ ಸೂತ್ರ ಕಂಡು ಹಿಡಿದರು. ಮುಟ್ಟಿ ತಟ್ಟಿ ನುಡಿದು ತನುವನ್ನು ತೋರುತ್ತಾ ತನುಗಳ ಮುಕ್ತಿಗೆ ಸೋಪಾನವಾದರು. ಅವರನ್ನು ಎಷ್ಟು ಕೊಂಡಾಡಿದರೂ ಸಾಲದು.

ತನುವಿನ ಮೂಲಸ್ವರೂಪ ಅರಿವೇ ಆಗಿದೆ. ಆ ಅರಿವನ್ನು ತಿಳಿಯಬೇಕಾದ ಮನಕ್ಕೆ ಮರೆವು ಆಗಿರುವುದರಿಂದ, ಮನದ ಮೈದಡವಿ, ಪುನಃ ಮೂಲಸ್ವರೂಪಕ್ಕೆ ಮರಳಲು ನಾನಾ ಸೂತ್ರಗಳನ್ನು ರಚಿಸಿದರು. ಭವಿ ಮನವನ್ನು ಭಕ್ತಮನವನ್ನಾಗಿಸಿದರು. ಗುರುವನ್ನಾಗಿಸಿದರು. ಪ್ರಸಾದವನ್ನಾಗಿಸಿದರು. ಐಕ್ಯನನ್ನಾಗಿಸಿದರು. ಇದು ಸಾಮಾನ್ಯ ಮಾತಲ್ಲ. ಸಾಮಾನ್ಯ ಕಾಯಕವಲ್ಲ. ಕಾಯ ಕೈಲಾಸವೇ ತಾನಾಗುವ ಕಾಯಕ.

ಕಾಯದ ಕಾಯಕದಲ್ಲಿ ಕಾಯವೇ ನಿರತವಾಗಿ ಆ ಕಾಯವೇ ಕೈಲಾಸವಾಗಲು ನಿಯಮಾಚಾರಗಳನ್ನು ರೂಪಿಸಿದರು.

ಕಾಯ ಮುಕ್ತಿ ಹೊಂದಲು ಅದಕ್ಕೆ ಆಚಾರಗಳನ್ನು ಹೇರುವುದು ಗಮನಿಸಿದ್ದೇವೆ. ಆದರೆ ಬಸವರಸರು ಅಗೋಚರದ ಆಚಾರದ ಮೂಲಕ ಕಾಯವನ್ನೇ ಕೈಲಾಸವಾಗಿಸಿದರು.

ನೋಡುವ ಕಣ್ಣಿನಲ್ಲಿ ಅಗೋಚರದ ಆಚಾರ ಲಿಂಗವನ್ನು ಕಟ್ಟಿದರು. ಕೇಳುವ ಕಿವಿಯಲ್ಲಿ ಅಗೋಚರದ ಆಚಾರಲಿಂಗವನ್ನು ಧರಿಸಿದರು. ಮೂಸಿಸುವ ಮೂಗು, ರುಚಿಸುವ ನಾಲಿಗೆಯಲ್ಲಿ, ಸ್ಪರ್ಶಿಸುವ ಚರ್ಮದಲ್ಲಿ ಅಗೋಚರ ಆಚಾರ ಲಿಂಗವನ್ನು ಧರಿಸಿ ಯಾರ ಕಣ್ಣಿಗೂ ಕಾಯದ ಆಚಾರ ಗೋಚರವಾಗದಂತೆ; ಕಾಯದ ಕಣ್ಣಿಗೆ ಮಾತ್ರ ಆಚಾರದ ಅರಿವು ಆಗುವಂತೆ ಬೋಧಿಸಿದರು.

ಬೋಧೆಗೆ ಒಳಗಾದ ಕಾಯ ಇತರ ಕಾಯಗಳನ್ನು ತನ್ನಂತೆಯೇ ನೋಡಿತು. ಅದಕ್ಕೆ ಹೆಣ್ಣು ಗಂಡುಗಳು ಕಾಣಲೇ ಇಲ್ಲ. ಕಾಯದಲ್ಲಿ ಸಂಗಮವಾದ ಅರಿವಿನ ಸಂಗಯ್ಯ ಗಂಡಾದ. ಕಾಯವನ್ನು ಆವರಿಸಿದ ಮನ ಹೆಣ್ಣಾಯಿತು. ಕಾಯವನ್ನೇ ಮನೆ ಮಾಡಿಕೊಂಡು ಗಂಡ ಹೆಂಡತಿ ಸಂಸಾರ ಹೂಡಿದರು. ಸತಿಪತಿಗಳು ಒಂದಾದರು. ಒಂದಾದ ಕಾಯ ಅರಿವಿನ ಶಿವನಿಗೆ ಇಷ್ಟವಾಯಿತು. ಸಾಯುವ ಮುನ್ನವೆ ಐಕ್ಯವಾಯಿತು. ಸಾಯುವ ಮುನ್ನವೇ ಪ್ರಸಾದ ಕಾಯವಾಯಿತು. ಕಾಯದ ಗೋಚರದ ಆಡಂಬರಗಳು ಯಾರಿಗೂ ಕಾಣಲಿಲ್ಲ. ಕಾಯ ಆಲಯ ಸುತ್ತಲಿಲ್ಲ. ಕಾಯವೇ ಶಿವಾಲಯವಾಯಿತು.

**212**

**ಆವ ಕೆಲಸ ಕೆಲಸದಲೆಲ್ಲಾ ತಾನೆ ಸಿಂಹಾಸನಗೊಂಡಿಪ್ಪನಯ್ಯಾ.**
**ಕೆಲಸದ ತಲೆಯಲ್ಲಿ ಕೆಲಸ ಪೂರಣೆಗೊಂಬ ಅವರ ಶರೀರಕ್ಕೆ**
**ಸಂಪನ್ನ ಮನದಿಂದ ಹಿಂಗ,**
**ಕಪಿಲಸಿದ್ಧ ಮಲ್ಲಿನಾಥಯ್ಯನಾ.**

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಯಾವ ಕೆಲಸದಲ್ಲಿ ತೊಡಗಿದರೂ ಕೂಡಾ ಧುತ್ತೆಂದು ಅರಿವೆಂಬ ಗುರುದೇವ ಬಂದು ನಿಲ್ಲುತ್ತಾನೆ. ಕಾಯ ತೊಡಗುವ ಕಾಯಕದ ಒಳಿತು ಕೆಡಕುಗಳನ್ನು ಅರುಹುತ್ತಾನೆ.

ಕಾಯದಲ್ಲಿ ಕಾಯದಂತೆಯೇ ಇರುವ ಅಕಾಯವೊಂದು ಸಂಗಮವಾಗಿದೆ. ಅದುವೇ ಗುರುದೇವನ ಕಾಯ. ಈ ಕಾಯ ಅನ್ಯ ಕಾಯಗಳಿಗೆ ಕಾಣುವುದಿಲ್ಲ. ಹಾಗೆಯೇ ಕಾಯವನ್ನು ಆವರಿಸಿದ ಮನವೆಂಬ ಕಾಯವೊಂದಿದೆ. ಈ ಕಾಯವನ್ನು ಹಿಡಿದು ಕಾಯಕ ಮಾಡಲು ತೊಡಗುತ್ತದೆ. ಇದನ್ನು ಕಾಯಕವೆನ್ನುವಂತಿಲ್ಲ; ಕೆಲಸವೆನ್ನಬಹುದು.

ಗುರುದೇವನ ಸಾಕ್ಷಾತ್ಕಾರಕ್ಕಾಗಿ ಸವಿಸುವ ಕಾಯವನ್ನು ಶರಣರು ಕಾಯಕವೆಂದು ಕರೆದಿದ್ದಾರೆ. ಕಾಯದ ಭೋಗಕ್ಕಾಗಿ ಸವಿಸುವ ಕಾಯವನ್ನು ಲೋಕ ಕೆಲಸ ಎಂದು ಕರೆದಿದೆ. ಸಕಲ ಕಾಯಗಳಿಗೂ ಕೆಲಸ ಗೊತ್ತು. ಗುರುದೇವನ ಸಾಕ್ಷಾತ್ಕಾರಕ್ಕಾಗಿ ಹಗಲಿರುಳು ಹಂಬಲಿಸುವ ಕಾಯಕ್ಕೆ ಮಾತ್ರ ಕಾಯಕವೆಂದರೇನೆಂದು ಗೊತ್ತಾಗುತ್ತದೆ.

''ಅಟ್ಟೆಯ ಚುಚ್ಚುವ ಮೊಳೆಯ ಮೊನೆಯಲ್ಲಿ ಪ್ರತ್ಯಕ್ಷವಾದ ಶಿವನನ್ನು ಕಂಡು, ಇತ್ತಲೇಕೆ ಬಂದೆಯಯ್ಯಾ'' ಎಂದು ಶರಣರು ಪ್ರಶ್ನಿಸಿದ್ದಾರೆ. ಇದು ಕಾಯಕವಲ್ಲ; ಕಾಯದ ಉಪಜೀವನಕ್ಕಾಗಿ ಮಾಡುವ ಕೆಲಸ. ಇಲ್ಲಿ ನಿನ್ನ ಕೆಲಸವಿಲ್ಲ. ನಿನ್ನನ್ನು ಕಾಣಬೇಕೆಂಬ

ತವಕದಲ್ಲಿದ್ದವರಿಗೆ ಪ್ರತ್ಯಕ್ಷನಾಗು. ಅವರು ನಿನಗೆ ಸತ್ಕಾರ ಮಾಡುತ್ತಾರೆ ಎಂದು ನಿರ್ದಾಕ್ಷಿಣ್ಯದಿಂದ ನುಡಿದಿದ್ದಾರೆ.

ಮನೋಕಾಯ ಗುರುದೇವನ ಕಾಯದಲ್ಲಿ ಸಂಪನ್ನಗೊಂಡಾಗ ಕಾಯದ ಕೆಲಸ ನಿಂತು ಹೋಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**213**

**ಆವನಾಗಿ ಒಬ್ಬನು ಅವಿಚಾರದಿಂದ**
**ಶಿರಸ್ಸಿನ ಮೇಲೆ ಕೈದುವಿಕ್ಕುಗೆಯ,**
**ಮೇಣು ಗಂಧಾಕ್ಷತೆ ಪುಷ್ಪದಲ್ಲಿ ಪೂಜೆ ಮಾಡುಗೆಯ ;**
**ಪೂಜೆ ಮಾಡಿದಡೆ ಮನ**
**ವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಪೊದ್ದಿಪ್ಪುದು ಹೇಳಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅವಿಚಾರಿ ಮನ ವಿಚಾರವುಳ್ಳ ಶಿರದ ಮೇಲೆ ವಕ್ಕರಿಸಿದೆ. ಸುವಿಚಾರಿಗಳು ಹೊರಬರದಂತೆ ತನ್ನ ಇಚ್ಛೆಯನ್ನು ಇಡೀ ತನು ಪಾಲಿಸುವಂತೆ ಶಿರವನ್ನೇ ಕಾರಾಗೃಹವನ್ನಾಗಿಸಿಕೊಂಡು ತನುವಿನಲ್ಲಿಯೇ ವಕ್ಕರಿಸಿದೆ.

ಮಲ್ಲಿಕಾರ್ಜುನನ ಶಿಖರವೆನ್ನಿಸಿಕೊಂಡ ಅರಿವಿನ ಶಿರದಲ್ಲಿ ತನ್ನ ಅಹಂಕಾರವನ್ನು ತುಂಬಿದೆ. ಸಕಲ ತನುಗಳಲ್ಲಿ ಅರಿವೆಂಬ ಶಿವ ತನ್ಮಯವಾಗಿದ್ದರೂ ಶಿರದಲ್ಲಿದ್ದ ಮನಕ್ಕೆ ಶಿವನ ದರುಶನ ಭಾಗ್ಯ ಇಲ್ಲದುದರಿಂದ ಅದು ಸಕಲ ತನುಗಳನ್ನು ತನ್ನಂತೆ ಸಮತಾ ಗುಣದಿಂದ ನೋಡಲು ಬರುತ್ತಿಲ್ಲ.

ಶಿರದಲ್ಲಿದ್ದ ಮನದ ಅವಿಚಾರದಿಂದಾಗಿ ತನ್ನಂತೆಯೇ ಇರುವ ಕಾಯವನ್ನು ಕಾಮದಿಂದ ಕ್ರೋಧದಿಂದ ಮದ ಮತ್ಸರದಿಂದ ಲೋಭದಿಂದ ನೋಡುತ್ತಾ ತನಗೆ ತಾನೆ ಅಜ್ಞಾನದ ಬೆಂಕಿ ಹಚ್ಚಿಕೊಂಡು ಜ್ಞಾನದಿಂದ ಬಹುದೂರವಾಗಿದೆ.

ಪಂಚ ಜ್ಞಾನೇಂದ್ರಿಯಗಳನ್ನು ಹಾವಿನಂತೆ ಆವರಿಸಿಕೊಂಡ ಮನವನ್ನು ಜ್ಞಾನಿಗಳು ಹಾಲೆರೆದು ಆರಾಧಿಸಿದರು. ಹೀಗಾಗಿ ಹಾವಿಗೆ ಹಾಲೆರೆಯುವ ನಾಗಪಂಚಮಿ ಹಬ್ಬವಾಗಿ ಮಾರ್ಪಟ್ಟಿತು.

ಹುತ್ತವೆಂದರೆ ದೇಹ. ದೇಹವೆಂಬ ಹುತ್ತಕ್ಕೆ ಬಡಿದರೆ ಮನವೆಂಬ ಹಾವು ಸಾಯುವುದಿಲ್ಲ. ಅದಕ್ಕೆ ಹಾಲೆರೆಯುವ ಮೂಲಕ ಪಳಗಿಸಿ ಕೊರಳಲ್ಲಿ ಧರಿಸಿಕೊಂಡವನೇ ಶಿವ, ಆತ ನಾಗಾಭರಣ. ನಾಗಭೂಷಣನೆಂದು ಕರೆಯಿಸಿಕೊಂಡ. ಅಜ್ಞಾನದ ಹಾವಿನ ವಿಷವನ್ನು ಕಂಠದಲ್ಲಿ ಧರಿಸಿಕೊಂಡು ನೀಲಕಂಠನೆಂದು ಹೆಸರು ಪಡೆದ.

ಮನ ಶಿವನ ಸಂಗಾತಿಯಾಗಿ ಶಿವೆ ಎನ್ನಿಸಿಕೊಂಡಿತು. ಪರಮೇಶ್ವರನ ಸಂಗಾತಿಯಾಗಿ ಪಾರ್ವತಿ ಎನ್ನಿಸಿಕೊಂಡು ಸಮತಾಗುಣ ಮೆರೆಯಿತು. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಸಂಗ ಮಾಡಿ ಅರ್ಧನಾರೀಶ್ವರನೆನ್ನಿಸಿಕೊಂಡಿತು. ಅರಿವಿನ ಶಿವನ ಸಂಗ ಮಾಡಿದ ಮನ ಘನಮನವಾಗಿ ಸಮತಾಗುಣ ಮೆರೆಯಿತು.

ಗುಣವುಳ್ಳ ಮನಕ್ಕೆ ಸಮತಾಗುಣ ಬರುವುದು ಸಾಧ್ಯವಿಲ್ಲ. ಅರಿವೆಂಬ ಶಿವನು ತ್ರಿಗುಣಾತೀತನು ಆದುದರಿಂದ ಆತನ ಸಂಗ ಮಾಡಿದ ಮನ ಸಕಲ ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಯಿತು. ಸಮತಾ ಗುಣಗಳನ್ನು ಮರೆಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**214**

**ಆವನಾಗಿ ಒಬ್ಬನು ಕರವ ಪಿಡಿದು ಒಡಗೊಂಡು ಒಯ್ದು**
**ಒಳ್ಳಿತ್ತನಾದಡೂ ನೀಡುಗೆಯ,**
**ಮೇಣು ಮಣ್ಣನಾದಡೂ ನೀಡುಗೆಯ ;**
**ನೀಡಿದಡೆ ಮನವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಪೊದ್ದಿಪ್ಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಅರಿವಿನ ಶಕ್ತಿಯಿದೆ. ಅರಿವು ಸ್ವಾಧೀನ ಮಾಡಿಕೊಂಡ ಕಾಯ ಕಾಯದ ಕೈಹಿಡಿದು ಕಾಯಕ್ಕೆ ಒಳಿತು ಮಾಡಬಹುದು; ಅಥವಾ ವೇಷ ಹಾಕಿದ ಕಾಯ ಕೆಡಕು ಮಾಡಬಹುದು; ಆದರೂ ಒಳಿತು ಕೆಡಕುಗಳಿಂದ ಕಾಯಕ್ಕೆ ಯಾವ ಲಾಭವೂ ಇಲ್ಲ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೊಂದಿಗೆ ಸಂಗಮವಾಗಿ ಸಮತತ್ವವನ್ನು ಅನ್ಯ ಕಾರ್ಯಗಳಿಂದ ಹೊಂದದು. ಸ್ವತಹ ಮನೋಕಾಯ ಅರಿವಿನ ಕಾಯವನ್ನು ಹೊದ್ದುಕೊಳ್ಳಬೇಕು. ಅಂದಾಗಲೇ ಮನೋಕಾಯದ ಯಾತ್ರೆ ಪರಿಪೂರ್ಣವಾಗುವುದು.

ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ :

ಮನೋಕಾಯದಲ್ಲಿ ಗುಣವಿದೆ. ಅದು ಆಗಾಗ ದುರ್ಗುಣವಾಗಿ ಪರಿವರ್ತಿತವಾಗಿ ಪರಿವರ್ತನೆಗೊಳ್ಳುತ್ತದೆ. ಹಾಗೆಯೇ ಗುಣವೇ ಸಾತ್ವಿಕದ ಮುಖವಾಡ ಧರಿಸಿ ಸಕಲ ಕಾಯಗಳನ್ನು ತನ್ನತ್ತ ಸೆಳೆಯುತ್ತದೆ. ಇದು ಸಮತಾ ಗುಣವಲ್ಲ.

ಸಮತಾ ಗುಣವೆಂದರೆ ಸಹಜ ಗುಣ. ಇದ್ದಂತೆ ಇರುವಂತಹದ್ದು. ಗುಣ, ದುರ್ಗುಣವಾಗಿ ಮಾರ್ಪಾಡು ಆಗದೇ ಇರುವಂತಹದ್ದು. ಇಂತಹ ಸಹಜ ಗುಣ; ಸಹಜ ಕಾಯದಲ್ಲಿ ಮಾತ್ರ ಇದೆ. ಮನೋಕಾಯದೊಂದಿಗೆ ಸಿದ್ಧರಾಮ ಶಿವಯೋಗಿ ಸಹಜ ಕಾಯವನ್ನು ಪ್ರಾರ್ಥಿಸುತ್ತಿದ್ದಾನೆ.

ತಂದೆಯೇ, ಕಪಿಲಸಿದ್ಧ ಮಲ್ಲಿಕಾರ್ಜುನ ದೇವನೇ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ. ಅರಿವೆಂಬ ಗುರುದೇವನೆ ನೀನು ನನ್ನನ್ನು ನಿನ್ನಂತೆ ಎಂದು ಮಾಡಿಕೊಳ್ಳುವೆ ಹೇಳಾ ಎಂದು ಅರಿವಿನ ಶಿವನೊಂದಿಗೆ ಮಾತನಾಡಿದ್ದಾರೆ.

**215**

**ಆವನಾಗಿ ಒಬ್ಬನು ನಾಸ್ತಿಕವನಾಡಿ ನಗುತಿಪ್ಪುದನು ತಾ ಕೇಳಿ,**

**ಮತ್ತಾವನಾಗಿ ಬಂದು ಪೇಳ್ದಡೆ,**
**ಮನ ವಿಚ್ಛಂದವಾಗದೊಂದೆಯಂದದಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಪೊದ್ದಿಪ್ಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನಾಸ್ತಿಕನು ಒಬ್ಬನು ಅಂಗದಲ್ಲಿ ಸಂಗಮವಾಗಿದ್ದಾನೆ. ಆತನಿಗೆ ಯಾವ ಅವಶ್ಯಕತೆಯೂ ಇಲ್ಲ. ಯಾರ ಅವಶ್ಯಕತೆಯೂ ಇಲ್ಲ, ಆಸ್ತಿಕನೊಬ್ಬನು ಅಂಗವನ್ನು ಆವರಿಸಿದ್ದಾನೆ; ಆತನ ವ್ಯವಹಾರ ಅಂಗದೊಂದಿಗೆ ಬಂಧಿಯಾಗಿದೆ. ಅಂಗವನ್ನು ಹಿಡಿದು ಅನ್ಯದೈವವನ್ನು ಪೂಜಿಸುತ್ತಾನೆ. ಅಂಗವನ್ನು ಹಿಡಿದು ಪರ ಸತಿಯನ್ನು ನೆನೆಯುತ್ತಾನೆ. ಅಂಗವನ್ನು ಹಿಡಿದು ಹೊನ್ನು ಹೆಣ್ಣು ಮಣ್ಣು ವಿಷಯಾಸಕ್ತಿಗೆ ಆಸಕ್ತನಾಗಿದ್ದಾನೆ.

ಆಸ್ತಿಕನ ಆಸೆ ಆಮಿಷಗಳನ್ನು ನೋಡಿ ನಾಸ್ತಿಕನು ನಗುತ್ತಿದ್ದಾನೆ. ಆಸ್ತಿಕನಿಗೆ ಆಸೆ ಆಮಿಷಗಳಿಂದ ಸುಖವೂ ಉಂಟು. ದುಃಖವೂ ಉಂಟು. ಆಸ್ತಿಕನ ಸುಖದುಃಖಗಳು ನಾಸ್ತಿಕನಿಗೆ ಸಂಬಂಧವಿಲ್ಲ. ಅವನಿಗೆ ಅಳುವು ಆದರೆ ನಾಸ್ತಿಕನಿಗೆ ಬರೀ ನಗುವು ಮಾತ್ರ! ಏಕೆಂದರೆ ನಾಸ್ತಿಕನಿಗೆ ಸಮತಾಗುಣ; ಸಹಜ ಗುಣ. ಆಸ್ತಿಕನು ನೋಡುವ ಆಸೆಕಣ್ಣುಗಳು ನಾಸ್ತಿಕನಿಗೆ ಇಲ್ಲ. ಈತ ಮುಕ್ಕಣ್ಣ! ಆಸ್ತಿಕ ನೋಡುವ ಕಣ್ಣಿನೊಳಗೆ ಇಪ್ಪ ಕಣ್ಣಪ್ಪ ಕಣ್ಣಿನ ಕಣ್ಣಪ್ಪ !

ಆಸ್ತಿಕನಿಗೆ ಕಾಣುವುದು ನಾಸ್ತಿಕನಿಗೆ ಕಾಣುವುದಿಲ್ಲ. ನಾಸ್ತಿಕನಿಗೆ ಕಾಣುವುದು ಆಸ್ತಿಕನಿಗೆ ಕಾಣುವುದಿಲ್ಲ. ಆಸ್ತಿಕ ನಾಸ್ತಿಕನನ್ನು ಲೋಕ ಹೊರಗೆ ನೋಡುತ್ತದೆ. ಜ್ಞಾನಿ ಪ್ರತಿ ದೇಹದಲ್ಲಿಯೂ ನಾಸ್ತಿಕನನ್ನು ನೋಡುತ್ತಾನೆ; ಹಾಗೆಯೇ ಆಸ್ತಿಕನನ್ನು ನೋಡುತ್ತಾನೆ.

ನಾಸ್ತಿಕ ಆಸ್ತಿಕರ ಜುಗಲ್ಬಂದಿ ಕಾಯದಲ್ಲಿ ಏರ್ಪಟ್ಟಾಗಲೇ ಆಸ್ತಿಕ ನಾಸ್ತಿಕನನ್ನು ಆರಾಧಿಸಿ ನಾಸ್ತಿಕನೇ ತಾನಾಗುತ್ತಾನೆ. ಆಗ ಆತ ಆಸ್ತಿಕನೂ ಅಲ್ಲ; ನಾಸ್ತಿಕನೂ ಅಲ್ಲ. ಲೋಕಕ್ಕೆ ಇವರಿಬ್ಬರ ಪರಿಚಯವಿಲ್ಲದ್ದರಿಂದ ತಾನು ಆಸ್ತಿಕನೆಂದು ಆಲಯಕ್ಕೆ ಹೋಗಿ ಪರದೈವವನ್ನು ಆರಾಧಿಸುತ್ತಾನೆ. ಸ್ವದೈವವನ್ನು ಮರೆಯುತ್ತಾನೆ.

ಸ್ವದೈವದಲ್ಲಿ ನಾಸ್ತಿಕತೆಯಿದೆ. ಸಮತಾ ಗುಣವಿದೆ. ನಿರ್ಗುಣವಿದೆ. ಸಮತಾ ಗುಣ ಬಳಕೆ ಮಾಡುವುದರಿಂದ ಸಾತ್ವಿಕ ರಾಜಸ ತಾಮಸ ಗುಣಗಳು ಉದುರಿ ಬೀಳುತ್ತವೆ. ತಂತಾನೆ ಸಮತಾಗುಣ ಬಳಕೆಯಾಗುತ್ತದೆ.

ಇಡೀ ತನುವನ್ನು ನಿರ್ಗುಣ ಹೊದ್ದುಕೊಂಡು ತ್ರಿಗುಣಗಳು ನಿರ್ನಾಮವಾಗಿ ತನು ಸಮತಾ ಗುಣಿಯಾಗುತ್ತದೆ. ಕಪಿಲಸಿದ್ದ ಮಲ್ಲಿಕಾರ್ಜುನನೇ ತಾನಾಗುತ್ತದೆ.

**216**

**ಆವನಾಗಿ ಒಬ್ಬನು ನಿಡುಮುಳ್ಳಿನ ಮೇಲೆ ಪೊರಳ್ಚುಗೆಯ,**
**ಮೇಣು ಹಂಸೆಯ ಹಾಸಿನ ಮೇಲೆ ಪೊರಳ್ಚುಗೆಯ,**
**ಪೊರಳ್ಚಿದಡೆ ಮನ ವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಪೊದ್ದಿಪ್ಪುದು ಹೇಳಾ,**

**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನ ಮನೆಯ ಮಂಚದ ಮೇಲೆ ಮುಳ್ಳಿನ ಹಾಸಿಗೆಯೂ ಇದೆ. ಹಂಸೆಯ ಹಾಸಿಗೆಯೂ ಇದೆ. ಮುಳ್ಳಿನ ಹಾಸಿಗೆಯ ಮೇಲೆ ಹೊರಳಿದವನಿಗೆ ಸುಖವೂ ಉಂಟು ದುಃಖವೂ ಉಂಟು. ಸುಖ ದುಃಖಗಳೆರಡೂ ದು:ಖವೇ ಎನ್ನುವುದು ಮುಳ್ಳಿನ ಹಾಸಿಗೆಯ ಮೇಲೆ ಹೊರಳಿದವನಿಗೆ ತಿಳಿಯುವುದಿಲ್ಲ.

ಹಂಸೆಯ ಹಾಸಿಗೆ ಮುಳ್ಳಿನ ಹಾಸಿಗೆಯಂತಲ್ಲ. ಈ ಹಾಸಿಗೆ ಮೇಲೆ ಹೊರಳಿದವನಿಗೆ ಸಹಜ ಸುಖ. ಇದು ಸುಖವಲ್ಲ; ದುಃಖವೂ ಅಲ್ಲ. ಸುಖ ದುಃಖಗಳಿಗೆ ಮೀರಿದ ಪರಮ ಸುಖ.

ಅದು ಸಮತಾ ಗುಣ. ಗುಣ ದುರ್ಗುಣಗಳನ್ನು ಕಳೆದುಕೊಂಡ ಸಮತಾ ಗುಣ. ಸಾತ್ವಿಕ ರಾಜಸ ತಾಮಸ ಗುಣಗಳನ್ನು ಕಳೆದುಕೊಂಡ ಸಮತಾ ಗುಣ. ಅದು ನಿರ್ಗುಣ.

ಮುಳ್ಳಿನ ಹಾಸಿಗೆಯ ಮೇಲೆ ಉರುಳಿ ಸುಖ ದುಃಖಗಳನ್ನು ಭೋಗಿಸುವ ಮನವೇ ಸಮತಾ ಗುಣವನ್ನು ಆಯ್ಕೆ ಮಾಡಿಕೊಳ್ಳಬೇಕು. ಸಮತಾ ಗುಣದ ಹಾಸಿಗೆಯ ಮೇಲೆ ಮುಳ್ಳಿಲ್ಲ. ಅದು ಹಾಲಿನಲ್ಲಿ ಬೆರೆತ ನೀರನ್ನು ಬಿಟ್ಟು ಹಾಲನ್ನು ಮಾತ್ರ ಸ್ವೀಕರಿಸುವ ಹಂಸೆ. ಇದು ಮಹಾಜ್ಞಾನದ ಹಂಸೆ. ಇದು ತಾನಾಗಿಯೇ ಬಂದು ಹೊದಿಯುವುದಿಲ್ಲ. ಇದನ್ನು ಹೊದ್ದು ಆನಂದ ಪಡುವ ಬಯಕೆ ಉಂಟಾದಾಗಲೇ ಈ ಹಂಸೆಯ ಪರಿಚಯವಾಗುತ್ತದೆ.

ಮನ ವಿಚ್ಛಂದವಾಗದೆ ಸಮತಾ ಗುಣದ ಹೊದಿಕೆಯನ್ನು ಹೊದ್ದು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**217**

**ಆವನಾಗಿ ಒಬ್ಬನು ಪಿಡಿದೊಯ್ದು ಕಾಳಕೂಟ ವಿಷವನೆರುಗೆಯ**
**ಮೇಣು ಪಾಯಸಾಮೃತವನೆರುಗೆಯ.**
**ಎರೆದಡೆ ಮನವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಪೊದ್ದಿಪ್ಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ತನುವನ್ನು ಸೃಷ್ಟಿಮಾಡಿ, ಅದರೊಳಗೆ ನೀನಿದ್ದರೂ ನೀನಾರೆಂದು ತನುವಿಗೆ ಅರಿಯಲು ಸಾಧ್ಯವಾಗುತ್ತಿಲ್ಲ. ನಿನ್ನನ್ನು ಅರಿಯದಿದ್ದಕ್ಕಾಗಿ ತನುವಿಗೆ, ತನುವನ್ನು ಕಂಡರೆ ಆಗುತ್ತಿಲ್ಲ.

ಒಂದು ತನು, ತನುವಿಗೆ ಕಾಳಕೂಟ ವಿಷ ನೀಡಿ ದ್ವೇಷ ಮಾಡಿದರೆ ಮತ್ತೊಂದು ತನು ತನುವಿಗೆ ಪಾಯಾಸಾಮೃತ ನೀಡಿ ಗೌರವಿಸುತ್ತದೆ.

ವಿಷ ನೀಡಿದರೇನು? ಪಾಯಸಾಮೃತ ನೀಡಿದರೇನು? ಎರಡೂ ಒಂದೇ. ಆದರೂ ತಿಳಿಯುತ್ತಿಲ್ಲ. ಏಕೆಂದರೆ ತನುವಿನಲ್ಲಿ ಸಮತಾಗುಣ ವಿಲ್ಲ. ಕಾಯದಲ್ಲಿ ಅಕಾಯನಾಗಿ ನೀನಿರುವಿ. ನಿನ್ನ ಅಕಾಯದಲ್ಲಿ ಮಾತ್ರ ಸಮತಾ ಗುಣವಿದೆ.

ಕಪಿಲಸಿದ್ದ ಮಲ್ಲಿಕಾರ್ಜುನನೇ, ಆ ನಿನ್ನ ಸಮತಾಗುಣ ನನ್ನನೆಂದು ಬಂದು ಹೊದ್ದುವುದು

ಹೇಳಾ ತಂದೆ ? ನಾನು ನಿನ್ನ ಸಮತಾಗುಣಕ್ಕಾಗಿ ಕಾಯುತ್ತಿದ್ದೇನೆ. ಏಕೆಂದರೆ ನಿನ್ನ ಸಮತಾಗುಣ ಕಾಳಕೂಟ ವಿಷವನ್ನು, ಅಮೃತದ ಪಾಯಸವನ್ನು ಸಮಾನ ದೃಷ್ಟಿಯಲ್ಲಿ ಸ್ವೀಕರಿಸುತ್ತದೆ.

ಎರಡೂ ದ್ರವ್ಯ ರೂಪದ ಪ್ರಸಾದವೆಂದು ನಿನ್ನ ಸಮತಾಗುಣಕ್ಕೆ ಮಾತ್ರ ತಿಳಿಯುತ್ತದೆ. ನನ್ನ ತನುವನ್ನು ಹೊದ್ದ ಅಜ್ಞಾನವೆಂಬ ಮನಕ್ಕೆ ಈ ವಿಷಯ ತಿಳಿಯುವುದಿಲ್ಲ. ಹೀಗಾಗಿ ಅದು ಕಾಳಕೂಟ ವಿಷವೆಂದು ಪಾಯಸಾಮೃತವೆಂದು ಹೆಸರಿಟ್ಟು ಕರೆದಿದೆ. ಅದಕ್ಕಾಗಿಯೇ ಒಬ್ಬನನ್ನು ದ್ವೇಷಿಸುತ್ತದೆ. ಮತ್ತೊಬ್ಬನನ್ನು ಪ್ರೀತಿಸುತ್ತದೆ. ಇದು ಮನದ ಕೆಲಸ. ಈ ಮನದ ಹಚ್ಚಡವನ್ನು ಎಸೆದು, ನಿನ್ನ ಸಮತಾಗುಣವನ್ನು ಎನ್ನ ತನುವಿಗೆ ಹೊದ್ದು ನಿನ್ನಂತೆ ಮಾಡಿಕೊ ಎನ್ನಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಾ ನಿನ್ನ ಚರಣ ಕಮಲಕ್ಕೆರಗಿ ಸದಾ ನಿನ್ನ ದಾಸಾನುದಾಸನಾಗಬೇಕೆಂಬ ಬಯಕೆಯನ್ನು ಈ ತನುವಿಗೆ ಹುಟ್ಟಿಸು ತಂದೆ.

**218**

**ಆವನಾಗಿ ಒಬ್ಬನು ಬಾಯಿಗೆ ಬಂದಂತೆ ಬೈಗೆಯ,**
**ಮೇಣುವಾತ ಬಂದು ಸ್ತುತಿಸುಗೆಯ.**
**ಮನವಿಚ್ಛಂದವಾಗದೊಂದೆಯಂದದಲಿಇಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಪೊದ್ದಿಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪುಣ್ಯ ಪಾಪವೆಂಬವು ತಮ್ಮ ಇಷ್ಟವು ಕಂಡಿರೆ : 'ಅಯ್ಯಾ' ಎಂದಡೆ ಸ್ವರ್ಗ; 'ಎಲವೊ' ಎಂದಡೆ ನರಕ! 'ದೇವಾ, ಭಕ್ತ ಜಯಾ ಜೀಯಾ' ಎಂಬ ನುಡಿಯೊಳಗೆ ಕೈಲಾಸಮೈದುವುದೆ ಕೂಡಲ ಸಂಗಮದೇವಾ ಎಂಬ ಅದ್ಭುತವಾದ ರಹಸ್ಯಮಯವಾದ ಸೂತ್ರವನ್ನು ಬಸವಣ್ಣನವರು ಮನುಕುಲಕ್ಕಾಗಿ ಕರುಣಿಸಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ಕೂಡಾ ಈ ಸೂತ್ರವನ್ನು ಹಿಡಿದು ಈ ಕೆಳಗಿನಂತೆ ಹೇಳಿದ್ದಾರೆ:

ಆವನಾದರೂ ಒಬ್ಬನು ಬಾಯಿಗೆ ಬಂದಂತೆ ಬೈದರೆಯೂ ಹೊಗಳಿದರೂ ಮನ ವಿಚ್ಛಂದವಾಗದೆ ಒಂದೇ ಅಂದದಲಿ ಇಪ್ಪಂತಪ್ಪ ನಿಮ್ಮದು ಒಂದು ಸಮತಾಗುಣ ಎನ್ನನು ಎಂದು ಬಂದು ಹೊದಿಯುವುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

'ಅಯ್ಯಾ' ಎಂದಡೆ ತನುವಿಗೆ ಸ್ವರ್ಗ, 'ಎಲವೊ' ಎಂದಡೆ ತನುವಿಗೆ ನರಕ. ಇವೆರಡೂ ಶಬ್ದಗಳೇ ಆಗಿವೆ. ಇವೆರಡೂ ಶಬ್ದಗಳಿಂದ ತನುವಿನಲ್ಲಿ ರಸಾಯನಿಕ ಕ್ರಿಯೆ ಉಂಟಾಗಿ ಸುಖವಾಗುತ್ತದೆ; ಹಾಗೆಯೇ ದುಃಖವಾಗುತ್ತದೆ. ಅರಿವು ಮಾತ್ರ ಆಗುವುದಿಲ್ಲ.

ಶಬ್ದದಲ್ಲಿ ಅರಿವು ಮಾತ್ರ ಇದೆ. ಕು-ಶಬ್ದ, ಸು-ಶಬ್ದಗಳೆಂದು ಮನ ವಿಂಗಡಿಸಿಕೊಂಡು ಕೇಳುವುದರಿಂದ ತನುವಿನಲ್ಲಿ ಸುಖ ದುಃಖಗಳು ಉಂಟಾಗುತ್ತವೆ. ಪ್ರಾಣಿಗಳಿಗೆ ಶಬ್ದ ಕೇಳುವ ಜ್ಞಾನವಿಲ್ಲ. ಮನುಷ್ಯನಿಗೆ ಮಾತ್ರ ಶಬ್ದ ಕೇಳುವ ಜ್ಞಾನವಿದೆ. ಆದರೂ ಕೂಡಾ ಶಬ್ದವನ್ನು ಶಬ್ದದಲ್ಲಿರುವ ಅರಿವಿನಿಂದ ಕೇಳುವ ಶಕ್ತಿ ತನುವಿನಲ್ಲಿಯೇ ಉಳಿದು, ಮನದಲ್ಲಿ ಸಂಗ್ರಹ ಮಾಡಿಕೊಂಡ ಶಬ್ದದ ಮೂಲಕ ಕೇಳುವುದರಿಂದ, ಆ ಶಬ್ದ ತನುವನ್ನು ಕಲಕಿ. ತನುವಿನಲ್ಲಿ ಸುಖ

ದುಃಖಗಳ ತರಂಗಗಳನ್ನು ಎಬ್ಬಿಸುತ್ತದೆ.

ಉದಾ : 'ಕತ್ತೆ' ಎನ್ನುವ ಶಬ್ದದಲ್ಲಿ ಅರಿವು ಇದೆ. ಕತ್ತೆ ಎಂದರೆ, ಒಂದು ಪ್ರಾಣಿಯನ್ನು ಗುರುತಿಸುವುದಕ್ಕಾಗಿ ಮನುಷ್ಯ 'ಕತ್ತೆ' ಎನ್ನುವ ಹೆಸರನ್ನು ಅದಕ್ಕೆ ಇಟ್ಟಿದ್ದಾನೆ. ಅದು ಮೂಲತಃ 'ಕತ್ತೆ' ಅಲ್ಲ. ಕತ್ತೆಗೆ 'ಕತ್ತೆ' ಎಂದು ಕೂಗಿದರೆ ಅದಕ್ಕೆ ಸಿಟ್ಟು ಬರುವುದಿಲ್ಲ.

ಕತ್ತೆಗೆ 'ಕತ್ತೆ' ಎಂದು ಹೆಸರಿಟ್ಟ ಮನುಷ್ಯ ಅದೇ ಶಬ್ದದಿಂದ ಮನುಷ್ಯನನ್ನು ಹೊಗಳುತ್ತಾನೆ; ತೆಗಳುತ್ತಾನೆ.

ಉದಾ: ಹುಡುಗ ಇದ್ದರೆ ಹೀಗಿರಬೇಕು; 'ಕತ್ತೆ' ದುಡಿದಂತೆ ದುಡಿಯುತ್ತಾನೆ. ಎಂದು 'ಕತ್ತೆ' ಶಬ್ದವನ್ನು ಹುಡುಗನಿಗೆ ಬಳಸಿದಾಗ ; ಆ ಹುಡುಗನಿಗೆ 'ಕತ್ತೆ' ಶಬ್ದ, ಸುಖದ ತರಂಗಗಳನ್ನು ಉಂಟು ಮಾಡುತ್ತದೆ. ಹೀಗಾಗಿ ಸಂತೋಷವಾಗುತ್ತದೆ.

ನೀನು 'ಕತ್ತೆ' ಇದ್ದೀಯಾ, ಮನುಷ್ಯ ಇದ್ದೀಯಾ? ಎಂದು 'ಕತ್ತೆ' ಶಬ್ದವನ್ನು ಬಳಸಿದಾಗ ಆ 'ಶಬ್ದ' ಅವನಿಗೆ ದುಃಖದ ತರಂಗಗಳನ್ನು ಉಂಟು ಮಾಡುತ್ತದೆ. ಶಬ್ದದಲ್ಲಿರುವ ಅರಿವು ಮರೆವು ಮಾಡಿಕೊಂಡು ಕೇಳುವುದರಿಂದ ಒಂದೇ ಶಬ್ದದಿಂದ ಸುಖ ದುಃಖಗಳ ತರಂಗಗಳನ್ನು ಮನ ತನುವಿನಲ್ಲಿ ಉಂಟು ಮಾಡುತ್ತದೆ. ಅರಿವಿನಿಂದ ಕೇಳುವುದನ್ನು ಮನ ಮರೆಯಿಸಿ ಬಿಡುತ್ತದೆ.

ಶಬ್ದದಲ್ಲಿ ಅರಿವಿದೆ ಎನ್ನುವುದು ಅರಿವಿಗೆ ಮಾತ್ರ ಗೊತ್ತಿದೆ. ಮನಕ್ಕೆ ಗೊತ್ತಿಲ್ಲ. ಅರಿವು ಎಂದರೆ ಸಾಮಾನ್ಯವಲ್ಲ; ಅದು ಸಾಕ್ಷಾತ್ ಗುರುದೇವ; 'ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಸಿದ್ಧರಾಮ ಶಿವಯೋಗಿಗಳು ಆ ಅರಿವನ್ನು ಕರೆದಿದ್ದಾರೆ. ಬಸವಣ್ಣ ತನುವಿನಲ್ಲಿ ತನ್ಮಯವಾದ ಆ ಅರಿವನ್ನು 'ಕೂಡಲಸಂಗಮದೇವಾ' ಎಂದು ಹೆಸರಿಟ್ಟು ಕರೆದಿದ್ದಾರೆ.

'ಅಯ್ಯಾ' ಎಂದಡೆ ಸ್ವರ್ಗಸುಖ ತನುವಿನಲ್ಲಿ ಉಂಟಾಗುತ್ತದೆ ಎಂದರೆ ಅದು ತನುವಿನ ಅಜ್ಞಾನವಲ್ಲವೆ? 'ಎಲವೊ' ಎಂದಡೆ ನರಕದ ಬಾಧೆ ತನುವಿನಲ್ಲಿ ಉಂಟಾಗುತ್ತದೆ ಎಂದರೆ ಅದು ತನುವಿನ ಅಜ್ಞಾನವಲ್ಲವೆ? ಶಬ್ದವನ್ನು ಜ್ಞಾನದಿಂದ ಕೇಳುವ ಶಕ್ತಿ ಅರಿವಿನಲ್ಲಿ ಇದೆ. ಮನದಲ್ಲಿ ಇಲ್ಲ.

'ದೇವಾ, ಭಕ್ತ, ಜಯಾ, ಜೀಯಾ' ಎಂದು ಹೊಗಳಿ ನುಡಿಯುವ ನುಡಿಯಲ್ಲಿ ಕೈಲಾಸವಿದೆಯಾ? ಶಬ್ದದಿಂದಲೇ ಹೊಗಳಿ ತೆಗಳಿ ನುಡಿಯುವ ನುಡಿಯನ್ನು ಒಮ್ಮೆಯಾದರೂ ಅರಿವಿನಿಂದ ಕೇಳಿ ನೋಡು. ಪ್ರತಿ ಶಬ್ದದಲ್ಲಿಯೂ ಅರಿವಿದೆಯೆಂದು ಹೊಳೆಯುತ್ತದೆ. ಶಬ್ದಕ್ಕೆ ಲೇಪನವಾದ ಮರೆವು ಮರೆಯಾಗುತ್ತದೆ. ಆಗ ತನುವಿನಲ್ಲಿ ಸುಖ ದುಃಖಗಳ ತರಂಗಗಳು ಉಂಟಾಗುವುದಿಲ್ಲ.

ಶಬ್ದವನ್ನು ಅರಿವಿನಿಂದ ಕೇಳುವ ಶಕ್ತಿ ಅರಿವಿಗೆ ಮಾತ್ರ ಇದೆ; ಮನಕ್ಕೆ ಇಲ್ಲ. ಹೀಗಾಗಿ ಮನವನ್ನೇ ಭಕ್ತನನ್ನಾಗಿಸಿ, ಅರಿವನ್ನೇ ಗುರುದೇವನನ್ನಾಗಿಸಿ ಆ ಗುರುದೇವನಿಗೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ನಾಮಕರಣ ಮಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ತನುವನ್ನು ಮನೆ ಮಾಡಿಕೊಂಡು; ಮನವೇ ತಾವಾಗಿ; ತನುವಿನಲ್ಲಿಯೇ ಇರುವ ಅರಿವೆಂಬ ಗುರುದೇವನನ್ನು ಪ್ರಾರ್ಥಿಸುತ್ತಾ ''ಹೇ ಗುರುದೇವನೇ, ಶಬ್ದವನ್ನು ಅರಿವಿನಿಂದ ಕೇಳುವ ಶಕ್ತಿ ನಿನಗೆ ಮಾತ್ರ ಇದೆ. ಸುಖ ದುಃಖಗಳನ್ನು ಉಂಟು ಮಾಡದೆ ಸಮತೆಯಿಂದ ಕೇಳುವ ಸಮತಾ ಗುಣ ನಿನ್ನಲ್ಲಿ ಮಾತ್ರ ಇದೆ. ಆ ಸಮತಾಗುಣದ 'ಅರಿವಿನ' ಹೊದಿಕೆಯನ್ನು ಮನವೆಂಬ ನನಗೆ ಹೊದಿಸಿ ನನ್ನ ಅಜ್ಞಾನವನ್ನು ದೂರ ಮಾಡು ತಂದೆ ಎಂದು ಭಕ್ತಿಯಿಂದ ಬೇಡಿದ್ದಾರೆ.

**219**

**ಆವನಾನೊಬ್ಬನು ತಗುಳ್ದಟ್ಟಿ ಕಲ್ಲುಗುಂಡಿನಲ್ಲಿಡುಗೆಯ**
**ಮೇಣು ಪೂವಿನಲ್ಲಿಡುಗೆಯ.**
**ಇಟ್ಟಡೆ ಮನ ವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಪೊದ್ದಿಪ್ಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನವೇ ಹೀಗೆ. ಭೂಮಿಯ ಮೂಲಕ ಅರಳಿದ ಕಲ್ಲು; ಭೂಮಿಯ ಮೂಲಕವೇ ಅರಳಿದ ಹೂ! ಮನಕ್ಕೆ ಒಂದು ಕಲ್ಲಾದರೆ ಮತ್ತೊಂದು ಹೂ. ಕಲ್ಲಗುಂಡಿ ಮನಕ್ಕೆ ದುಃಖ ನೀಡಿದರೆ ಹೂವಿನ ರಾಶಿ ಸುಖ ನೀಡುತ್ತದೆ.

ಕಲ್ಲಲಿ ಅರಳಿದ ಮೂರ್ತಿಯನ್ನು ಮನ ದೇವರೆಂದು ಭ್ರಮೆಯಿಂದ ಭಾವಿಸಿ ಅದಕ್ಕೆ ಹೂವಿನ ಮೂಲಕ ಪೂಜಿಸುತ್ತದೆ. ಅದೇ ಕಲ್ಲಿನ ತುಂಡು ತನುವಿಗೆ ಸಿಡಿದರೆ ಮನ ವಿಚಲಿತವಾಗುತ್ತದೆ. ವಿಕೃತವಾಗುತ್ತದೆ. ಹೂ ಬಡಿದರೆ ತನುವಿಗೆ ಸುಖವಾಗುತ್ತದೆ.

ಸುಖ ದುಃಖಗಳನ್ನು ಕಳೆದುಕೊಂಡು ಅವೆರಡನ್ನೂ ಅರಿವಿನಿಂದ ಸ್ವೀಕರಿಸುವ ಸಮತಾಗುಣ ಕೂಡಾ ತನುವಿನಲ್ಲಿ ಸಂಗಮವಾಗಿದೆ. ಮನ ವಿಚಲಿತಗೊಳ್ಳುವ ಜಾಡನ್ನೇ ಹಿಡಿದು ತನುವಿನಲ್ಲಿಯೇ ಹುಡುಕಿದಾಗ ಅದಕ್ಕೆ ಸಮತಾಗುಣದ ನಿರ್ಗುಣ ಸಂಪತ್ತು ಸಿಗುತ್ತದೆ.

ಅದು ಅರಿವಿನ ಗಣಿ ; ಸಮತಾಗುಣವೆಂಬ ನಿರ್ಗುಣದ ತವನಿಧಿ. ಅದನ್ನು ಅದಕೂ ಇದಕೂ ಎದಕೂ ಬಳಸಬಹುದು. ಬಳಸಿದಂತೆಲ್ಲಾ ಹೊರ ಬರುವ ಅಮೃತದ ಬುಗ್ಗೆ ಅದು.

ದೇವರ ದಾಸೀಮಾರ್ಯರು ಆ ನಿಧಿಯನ್ನು ಪಡೆದು ತವನಿಧಿಯ ದಾಸೀಮಾರ್ಯರೆಂದು ಕರೆಯಿಸಿಕೊಂಡರು. ಬೇಡಿದವರಿಗೆ ಬೇಡಿದ್ದನ್ನು ಆ ತವನಿಧಿಯಿಂದಲೇ ನೀಡಿದರು.

ಮನ ವಿಚಲಿತಗೊಳ್ಳದಂತೆ ಹೆಳವನನ್ನಾಗಿಸುವ ಶಕ್ತಿ ಆ ಸಮತಾ ಗುಣವೆಂಬ ನಿರ್ಗುಣಕ್ಕೆ ಇದೆ. ಹೀಗಾಗಿ ಆ ಸಮತಾಗುಣವೆಂಬ ನಿರ್ಗುಣ ವಸ್ತುವನ್ನು ಸಿದ್ಧರಾಮ ಶಿವಯೋಗಿಗಳು ''ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ'' ಎಂದು ಹೆಸರಿಟ್ಟು ಕರೆದರು. ನಿಮ್ಮ ಒಂದು ಸಮತಾಗುಣದ ನಿರ್ಗುಣಿ ಹಚ್ಚಡದ ಹೊದಿಕೆಯನ್ನು ಮನವೆಂಬ ಅಜ್ಞಾನಿ ತನುವಿಗೆ ಹೊದಿಸು ತಂದೆ ಎಂದು ಮನವಿ ಮಾಡಿಕೊಂಡರು.

**220**

**ಆವಾವ ಕಾಲದೊಳು ದೇವಪೂಜೆಯ ಮಾಡು,**
**ಮಾಡುವ ಸುಖವೆ ನೀನೆಯಯ್ಯಾ .**
**ಜೀವ ಕಾಯಕ್ಕೆ ನೀ ಚೇಷ್ಟಿತನಾದೆಯಯ್ಯಾ ,**
**ಕಪಿಲಸಿದ್ಧ ಮಲ್ಲಿನಾಥಾ.**

ಕಾಯದೊಂದಿಗೆ ಜೀವ ಹೊಲಿಗೆ ಹಾಕಿಕೊಂಡಿದೆ. ಕಾಯವನ್ನು ಜೀವವನ್ನು ಮನ ಆವರಿಸಿಕೊಂಡು, ಕಾಯದೊಂದಿಗೆ ಮನ ಚೇಷ್ಟೆಯಲ್ಲಿ ತೊಡಗಿದೆ. ಕಾಯದಲ್ಲಿ ಅರಿವೆಂಬ

ಗುರುದೇವ ಸಂಗಮುಗೊಂಡಿದ್ದಾನೆ.

ಮನವೆಂಬ ಮಗುವಿನ ಚೇಷ್ಟೆಯನ್ನು ಗುರುದೇವ ತಡೆಯುತ್ತಾ ಮನಕ್ಕೆ ಸದಾ ಪಾಠ ಮಾಡುತ್ತಾನೆ. ಆ ಗುರುದೇವನು ಮಹಾದೇವನೂ ಆಗಿದ್ದಾನೆ ; ಸದಾಶಿವನೂ ಆಗಿದ್ದಾನೆ; ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ. ಮನ ಗುರುದೇವನನ್ನು ಆರಾಧಿಸದೆ, ತನ್ನಿಂದಲೇ ನಿರ್ಮಿಸಲ್ಪಟ್ಟ ದೇವರ ಆರಾಧನೆಯಲ್ಲಿ ತೊಡಗಿದೆ. ಆಲಯ ನಿರ್ಮಿಸಿ ದೇವರ ಪೂಜೆಯನ್ನು ಮಾಡುತ್ತದೆ. ಹೀಗೆ ಮಾಡುವುದರಿಂದ ಮನಕ್ಕೆ ಸುಖ, ಕಾಯಕ್ಕೂ ಸುಖ.

ಅನಂತ ಕಾಲಗಳಿಂದಲೂ ಆಲಯ ನಿರ್ಮಿಸಿ ಕಾಯ ಕಾಯವನ್ನು ಆವರಿಸಿದ ಮನ ದೇವರ ಪೂಜೆಯನ್ನು ಮಾಡುತ್ತಾ ಸುಖ ಅನುಭವಿಸುತ್ತಾ ಬಂದಿದೆ.

ದೇವರನ್ನು ಕಲ್ಲಿನಲ್ಲಿ, ಲೋಹದಲ್ಲಿ, ಚಿತ್ರದಲ್ಲಿ ಬರೆದಾಗಲೂ ಮನಕ್ಕೆ ಸುಖ. ಆ ದೇವರನ್ನು ಪೂಜಿಸಿ ಆರಾಧಿಸಿದಾಗಲೂ ಮನಕ್ಕೆ ಸುಖ.

ಜೀವದ ಕಾಯದ ಬೆಸುಗೆಯನ್ನು ಕಾಯದಲ್ಲಿಯೇ ಹಾಕಿ, ಕಾಯದ ಸುತ್ತ ಮನವನ್ನು ಇಳಿಯಬಿಟ್ಟು, ಕಾಯದ ಮನದ ಚೇಷ್ಟೆಯನ್ನು ಸಮತಾಗುಣದಿಂದ ನೋಡುವ ಚೇಷ್ಟಿತ ನೀನಾದೆಯಯ್ಯಾ.

ಕಾಯ ನಿನ್ನದು. ಮನವೂ ನಿನ್ನದು. ಕಾಯಕ್ಕೆ ಹೊಲಿದುಕೊಂಡ ಜೀವವೂ ನಿನ್ನದು. ನಿನಗೆ ಸಾಕಾದಾಗ ಕಾಯವನ್ನು, ಕಾಯವನ್ನು ಆವರಿಸಿದ ಮನವನ್ನು, ಕಾಯಕ್ಕೆ ಹೊಲಿದುಕೊಂಡ ಜೀವವನ್ನು ಒದ್ದು ಹೋಗುವಿ. ಆಗ ಕಾಯ ನಿರ್ಜೀವವಾಗುವುದು. ನಿರ್ಜೀವ ಕಾಯವನ್ನು ಕಾಯಗಳು ಶವ ಎಂದು ಕರೆಯುವವು. ಕಾಯ ಹೋಯಿತು ಎಂದು ಹೇಳುವವು.

ಕಾಯವಿದ್ದರೂ ಜೀವವಿಲ್ಲದ ಕಾಯವನ್ನು ಕಾಯ ಹೋಯಿತು ಎಂದು ಹೇಳುವರು. ಅಂದರೆ ಹೋದದ್ದು ಶಿವಕಾಯವಾಗಿರಬೇಕಲ್ಲ! ಕಾಯವಿದ್ದಾಗ ಶಿವಕಾಯವನ್ನು ಪೂಜಿಸಲು, ಆರಾಧಿಸಲು, ಗೌರವದಿಂದ ನಮಿಸಲು ಕಾಯಕ್ಕೆ ಕಾಯವನ್ನು ಆವರಿಸಿದ ಮನಕ್ಕೆ ಸಾಧ್ಯವಾಗಲಿಲ್ಲ. ಕಾಯವನ್ನು ಶಿವ ಬಿಟ್ಟು ಹೋದಾಗ ಕಾಯ ಹೋಯಿತು ಎನ್ನುವುದನ್ನು ಬಿಡಲಿಲ್ಲ. ಶಬ್ದದಿಂದ ನುಡಿಯುವ ಕಾಯಕ್ಕೆ ಆ ಶಬ್ದ ಸುಖದ ಅನುಭವವೇ ಇಲ್ಲ.

ಜೀವಕ್ಕೆ ಕಾಯಕ್ಕೆ ಕಾಯವನ್ನು ಆವರಿಸಿದ ಮನಕ್ಕೆ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನು ಅರಿವಿನ ದರುಶನ ನೀಡದೆ ಅವುಗಳ ಚೇಷ್ಟೆಯನ್ನು ನೋಡುತ್ತಾ ಒಮ್ಮೆ ದೂರ ಸರಿಯುತ್ತಾನೆ. ಕಾಯದ ಈ ಆಟ ಅನಂತ ಕಾಲಗಳಿಂದಲೂ ನಡೆಯುತ್ತಲೇ ಬಂದಿದೆ.

ಅರಿವಿನ ದರುಶನದ ಸುಖ ಪಡೆಯಬೇಕೆಂಬ ಕಾತುರ ಮನದಲ್ಲಿ ಉಂಟಾದಾಗ ತಾನು ನಿರ್ಮಿಸಿದ ದೇವರ ಪೂಜೆ ದೂರವಾಗುತ್ತದೆ. ತನ್ನನ್ನು ನಿರ್ಮಾಣ ಮಾಡಿದ ಅರಿವೆಂಬ ಗುರುದೇವನ ಪೂಜೆಯ ಸುಖ ಅಧಿಕವಾಗುತ್ತದೆ.

**221**

**ಆವಾವ ದೆಸೆಗೆ ಬಾಯ ಬಿಟ್ಟು ಅರಸಿ ಕಾಣದೆ ಕಂಗೆಡುತ್ತಿದ್ದೆನಯ್ಯಾ.**
**ದೇವಾ, ಈ ಬಾಯ ಬಿಡುವುದ ಮಾಣಿಸಿ,**
**ಎನಗೆ ಪರಮಪ್ರಸಾದವ ಕರುಣಿಸಿ ರಕ್ಷಿಸಯ್ಯಾ ;**
**ಕಪಿಲಸಿದ್ಧ ಮಲ್ಲಿನಾಥಯ್ಯಾ, ನಿಮ್ಮ ಧರ್ಮವಯ್ಯಾ .**

ನಿನ್ನಿಂದಲೇ ಹುಟ್ಟಿದ ನಾನು ನಿನ್ನನ್ನು ಕಾಣದೆ ನಿನಗಾಗಿ ಬಾಯ ಬಿಟ್ಟು ಅರಸಿ ಕಂಗೆಡುತ್ತಿದ್ದೇನೆ ತಂದೆ. ದೇವಾ, ಈ ಬಾಯ ಬಿಡುವುದ ಮಾಣಿಸಿ ಎನಗೆ ನಿನ್ನ ದರುಶನ ನೀಡಿ, ಪರಮಪ್ರಸಾದವ ಕರುಣಿಸಿ ರಕ್ಷಿಸಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯಾ, ನಿಮ್ಮ ಧರ್ಮವಯ್ಯಾ.

ನಿನ್ನಿಂದಲೇ ಹುಟ್ಟಿದ ನಾನು ನಿನ್ನದೇ ಆದ ಧರ್ಮವನ್ನು ಪಾಲಿಸಬೇಕಿತ್ತು. ಆದರೆ ನಾನು ನಿನ್ನ ಧರ್ಮವನ್ನು ಪಾಲಿಸಲಿಲ್ಲ. ಅದಕ್ಕಾಗಿಯೇ ನನಗೆ ಈ ದುರ್ದೆಸೆ. ನಿನ್ನ ಧರ್ಮ ಬೆಳಕಿನ ಧರ್ಮ. ಸತ್ಯ ಧರ್ಮ. ನಿನ್ನಿಂದಲೇ ಹುಟ್ಟಿದ ನಾನು ಆಯ್ಕೆ ಮಾಡಿಕೊಂಡಿದ್ದು ಕತ್ತಲ ಧರ್ಮ.

ಹೀಗಾಗಿ ನಿನ್ನಿಂದಲೇ ಹುಟ್ಟಿದ ನಾನು ; ನೀನಿದ್ದಲ್ಲಿ ನಾನಿಲ್ಲ. ನನ್ನನ್ನು ನೀನೇ ಹಡೆದಿದ್ದರೂ ನಾನಿದ್ದಲ್ಲಿ ಬಂದು ನೀನು ನನಗೆ ನಿನ್ನ ದರುಶನ ಭಾಗ್ಯ ಕಲ್ಪಿಸುತ್ತಿಲ್ಲ.

ನನಗೂ ನಿನಗೂ ಬಹಳ ದೂರದ ಅಂತರವಿಲ್ಲ. ನಿಮ್ಮ ಧರ್ಮದ ಕುಡಿ ನಾನು. ಆದರೂ ನಿಮ್ಮ ಬೆಳಕಿನ ಧರ್ಮವನ್ನು ಅಂದರೆ ಸತ್ಯದ ಧರ್ಮವನ್ನು ಪಾಲಿಸಲು ನನಗೆ ಸಾಧ್ಯವಾಗುತ್ತಿಲ್ಲ.

ನಿಮ್ಮ ದರುಶನ ಆಗುವವರೆಗೆ ನಾನು ಎಂದೂ ಬೆಳಕಾಗಲ್ಲ; ನಿಮ್ಮ ಸತ್ಯವನ್ನು ಪಾಲಿಸಲು ನನಗೆ ಸಾಧ್ಯವಾಗುವುದಿಲ್ಲ. ನಿನ್ನಿಂದ ಹುಟ್ಟಿದ ನಾನು ನಿನ್ನ ದರುಶನವಾಗುವುದೊಂದೆ ತಡ; ನಿನ್ನಲ್ಲಿ ನಾನು ಸಂಗಮವಾಗಿ; ನಿನ್ನ ಬೆಳಕಿನಲ್ಲಿ ಬೆಳಕಾಗಿ ಕಳೆದುಹೋಗುವೆ ತಂದೆ.

ನಿನ್ನ ಬೆಳಕಿನ ಪರಮಪ್ರಸಾದ ನನಗೆ ಕರುಣಿಸಿ ನನ್ನನ್ನು ರಕ್ಷಿಸಯ್ಯಾ ಭಗವಂತನೆ. ನಿನ್ನಿಂದಲೇ ಸೃಷ್ಟಿಯಾದ ನನಗೆ ನಿನ್ನಂತೆಯೇ ನೋಡಲು ಬರುವುದಿಲ್ಲ. ನನ್ನ ಕಣ್ಣು ಕುರುಡು ಕಣ್ಣು. ಕಂಡರೂ ಏನೇನೋ ಕಾಣುತ್ತದೆ. ನನ್ನಂತೆಯೇ ಇರುವ ಚರ್ಮವನ್ನು ನೋಡಿ ನನ್ನ ಕಣ್ಣಲ್ಲಿ ಕಾಮ ಹುಟ್ಟುತ್ತದೆ. ಅದು ನನಗೆ ಸಿಕ್ಕದಿದ್ದಲ್ಲಿ ಕ್ರೋಧ ಹುಟ್ಟುತ್ತದೆ. ಅದು ನನಗೆ ಸಿಕ್ಕರೆ ಲೋಭ ಹುಟ್ಟುತ್ತದೆ. ಆ ವಸ್ತುವಿನ ಮೇಲೆ ಮೋಹ ಹುಟ್ಟುತ್ತದೆ; ಅಂತಹ ವಸ್ತು ನನ್ನಲ್ಲಿ ಮಾತ್ರ ಇದೆ ಎಂಬ ಮದ ಹುಟ್ಟಿ ನನ್ನ ತನುವನ್ನು ಘಾಸಿಗೊಳಿಸುತ್ತದೆ. ಅಂತಹ ವಸ್ತು ಬೇರೆ ತನುವಿನಲ್ಲಿ ಕಂಡರೆ ಸಾಕು ಮತ್ಸರ ಹುಟ್ಟಿ ಆ ತನುವಿನ ಮೇಲೆ ಯುದ್ಧ ಸಾರುತ್ತದೆ.

ಕಣ್ಣು ಒಂದೇ. ಆ ಒಂದೇ ಕಣ್ಣಿನಲ್ಲಿ ನನ್ನ ಕಣ್ಣೂ ಇದೆ. ನಿನ್ನ ಕಣ್ಣೂ ಇದೆ. ಕಣ್ಣು ಎರಡೂ ಕಣ್ಣುಗಳಿಗೆ ಆಶ್ರಯ ನೀಡಿದೆ. ನಾನು ಕಾಮದ ಕಣ್ಣಿನಿಂದ ನೋಡುವೆ. ನೀನು ಪ್ರೇಮದ ಕಣ್ಣಿನಿಂದ ಸಕಲರನ್ನು ನಿನ್ನಂತೆಯೇ ನೋಡುವೆ. ಹೀಗಾಗಿ ಜ್ಞಾನಿಗಳು ನಿನ್ನನ್ನು ಮುಕ್ಕಣ್ಣ ಎಂದು ಕರೆದರು. ನನ್ನನ್ನು ಕುರುಡುಗಣ್ಣು ಎಂದು ಕರೆದರು.

ಮನ್ಮಥ ತನ್ನ ಕಣ್ಣಿನ ಮೂಲಕ ನಿನ್ನನ್ನು ತನ್ನಂತೆಯೇ ಮಾಡಿಕೊಳ್ಳಲು ಕಾಮದ ಹೂಬಾಣವನ್ನು ಬಿಟ್ಟ. ಆ ಕಾಮನನ್ನು ನಿನ್ನ ಕಣ್ಣಿನಿಂದ ಸುಟ್ಟು ಬೂದಿಮಾಡಿದ ಪರಮಾತ್ಮ ನೀನು. ಮನ್ಮಥನಿಗೆ ನಿನ್ನ ಪ್ರಸಾದ ನೀಡಿ ನಿನ್ನಂತೆ ಮಾಡಿಕೊಂಡ ಮುಕ್ಕಣ್ಣ ನೀನು.

ಮನ್ಮಥನ ಅಜ್ಞಾನವನ್ನು ಕೊಂದು, ಮನ್ಮಥನನ್ನು ನಿನ್ನಂತೆ ಮಾಡಿಕೊಂಡೆ. ಹಾಗೆಯೇ ನನ್ನ ಅಜ್ಞಾನವನ್ನು ಕೊಂದು ನಿನ್ನ ಜ್ಞಾನ ಪ್ರಸಾದವನ್ನು ಎನಗೆ ಕರುಣಿಸಿ ನನ್ನನ್ನು ನಿನ್ನಂತೆಯೇ ಮಾಡಿಕೊ ತಂದೆ.

ನಾನು ನಿನ್ನ ದರುಶನಕ್ಕಾಗಿ ಹಗಲಿರುಳೆನ್ನದೆ ಕಾದು ಕಾದು ಸುಸ್ತಾಗಿದ್ದೇನೆ, ನಿನಗಾಗಿ ಹುಡುಕಿ ಹುಡುಕಿ ಬಾಯ ಬಿಟ್ಟು ಕಂಗೆಡುತ್ತಿದ್ದೇನೆ. ದೇವಾ, ಈ ಬಾಯ ಬಿಡುವುದು ಮಾಣಿಸು ತಂದೆ. ಎನಗೆ ನಿನ್ನ ಪರಮ ಪ್ರಸಾದವ ಕರುಣಿಸಿ ರಕ್ಷಿಸಯ್ಯಾ. ನಿನ್ನ ಬೆಳಕಿನ ಧರ್ಮವನ್ನು ಕತ್ತಲ ಮೇಲೆ ಚೆಲ್ಲಿ ರಕ್ಷಿಸಯ್ಯಾ; ಕಪಿಲಸಿದ್ಧ ಮಲ್ಲಿನಾಥಯ್ಯಾ.

**ಆವಾವ ಭಾವದಲ್ಲಿ ನಿಮ್ಮನಲ್ಲದೆ ನಾನರಿಯದಿದ್ದೆನಯ್ಯಾ ,**
**ದೇವ ದೇವಾ, ಕಾಯಯ್ಯಾ ಕಾಯಯ್ಯಾ .**
**ಕರುಣಿ ಕರುಣಿ, ಕೃಪಾವಲ್ಲಭ ಗುರುವೆ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ .**

ತನುವಿನಲ್ಲಿರುವ ಅರಿವು ಮನಕ್ಕೆ ಮರೆವಾದುದರಿಂದ ತನು ಒಮ್ಮೆ ಸಾತ್ವಿಕ ಪಾತ್ರದಲ್ಲಿ, ಮತ್ತೊಮ್ಮೆ ರಾಜಸಿಗನ ಪಾತ್ರದಲ್ಲಿ, ಮಗದೊಮ್ಮೆ ತಾಮಸಿಗನ ಪಾತ್ರದಲ್ಲಿ ಕಾಣಿಸಿಕೊಳ್ಳುತ್ತದೆ.

ಹಿಂದೆ ಸಾತ್ವಿಕರಿದ್ದರು ಇಂದು ಹೀಗಾಗಿದ್ದಾರೆ, ಹಿಂದೆ ರಾಜಸಿಗರಿದ್ದರು ಇಂದು ಹೀಗಾಗಿದ್ದಾರೆ, ಹಿಂದೆ ತಾಮಸಿಗರಾಗಿದ್ದರು ಇಂದು ಹೀಗಾಗಿದ್ದಾರೆ ಎಂದು ತನುವನ್ನು ಕುರಿತು ತನುಗಳೇ ಮಾತನಾಡುತ್ತವೆ.

ನಾನು ಹೇಗಿದ್ದೇನೆ? ನಾನು ಹೀಗಿರಲು ಕಾರಣವೇನು? ನನ್ನಲ್ಲಿ ದುರಾಲೋಚನೆಗಳು ಏಕೆ ಬರುತ್ತವೆ? ಸದಾ ನಾನು ಸದ್ಭಾವದಿಂದಿರಲು ಸಾಧ್ಯವಿಲ್ಲವೆ ಹೇಗೆ? ನನ್ನಲ್ಲಿ ಮನುಷ್ಯತ್ವದ ಗುಣಗಳು ಏಕೆ ಬತ್ತಿಹೋಗತ್ತಲಿವೆ? ನಾನು ಸರಿಯಿಲ್ಲವೆಂದು ನನಗೆ ನನ್ನಿಂದಲೇ ತಿಳಿಯುತ್ತಿದ್ದರೂ ನಾನು ಸರಿಯಾಗಿ ಇರಲು ನನ್ನಿಂದ ಏಕೆ ಸಾಧ್ಯವಾಗುತ್ತಿಲ್ಲ. ನಾನು ಸರಿಯಿಲ್ಲವೆಂದು ನನಗೆ ಹೇಳುತ್ತಿರುವವರು ಯಾರು? ನನ್ನಂತೆ ಇರುವ ಅರಿವಿನ ಮನುಷ್ಯ ನನ್ನಲ್ಲಿಯೇ ಒಬ್ಬ ಇರಬೇಕಲ್ಲ ಎಂದು ನನಗೆ ಏಕೆ ತಿಳಿಯುತ್ತಿಲ್ಲ. ನಾನು ಹಾಕಿಕೊಂಡ ಮುಖವಾಡ ನಾನೇ ಹರಿದು ಹಾಕಿ ನನಗೆ ಪಾಠವ ಮಾಡುವ ಆ ಅರಿವಿನ ಮನುಷ್ಯನಲ್ಲಿ ನಾನು ಲೀನವಾಗಬೇಕಲ್ಲ ಎಂದು ನನಗೆ ಗಟ್ಟಿಯಾದ ಸದ್ಭಾವ ಏಕೆ ಬರುತ್ತಿಲ್ಲ ಎಂದು ತನಗೆ ತಾನೇ ಪ್ರಶ್ನಿಸಿಕೊಳ್ಳುತ್ತಾ ತನಗೆ ಪಾಠಮಾಡುವ ಆ ಅರಿವಿನ ಮನುಷ್ಯನಲ್ಲಿ ಸರಿದರೆ ಸಾಕು ಆ ಅರಿವಿನ ಮನುಷ್ಯನೇ ತಾನಾಗಲು ಸಾಧ್ಯ .

ಆಗ ನನ್ನಿಂದ ಮರೆವಾದ ನನ್ನ ಅರಿವು ನನಗೆ ಲಭ್ಯವಾಗಿ; ನನ್ನ ಸಕಲ ದುರ್ಭಾವಗಳು ತಂತಾನೆ ನನ್ನಿಂದ ಉದುರಿ ಬೀಳುತ್ತವೆ. ತನುವಿನಲ್ಲಿಯೇ ಸಂಗಮವಾದ ನಿರ್ಭಾವ ತಂತಾನೆ ಬಳಕೆಗೆ ಸಿದ್ಧವಾಗುತ್ತದೆ.

ಆವಾವ ಭಾವದಲ್ಲಿ ನಿಮ್ಮನಲ್ಲದೆ ನಾನರಿಯೆನಯ್ಯಾ ದೇವಾ ದೇವಾ, ಕಾಯಯ್ಯಾ :

ನನ್ನ ಭಾವದಲ್ಲಿ ಬದಲಾವಣೆಗಳುಂಟು. ನಿರ್ಭಾವದಲ್ಲಿ ಬದಲಾವಣೆಗಳಿಲ್ಲ. ನಿರ್ಭಾವ ಎನ್ನುವುದು ನನ್ನದಲ್ಲ. ನನ್ನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನದು. ನಾನು ಬದಲಾದಾಗ ನನ್ನಲ್ಲಿಯೇ ಸಂಗಮವಾದ ಆತ ನನಗೆ ಪಾಠ ಮಾಡುತ್ತಾನೆ. ನಾನು ಆತನಲ್ಲಿ ಸಂಗಮವಾದಾಗ ನನ್ನ ಭಾವ ನನ್ನಿಂದಲೇ ಉದುರಿಬಿದ್ದು ನಿರ್ಭಾವ ಮಾತ್ರ ಉಳಿಯುತ್ತದೆ.

ಕಲ್ಲು ನೋಡುವ ಕಣ್ಣಿಗೆ ನಿರ್ಭಾವ ಸಹಾಯ ಮಾಡುತ್ತದೆ. ಆಗ ಕಣ್ಣು ಗುರುದೇವನ ಕಣ್ಣಾಗಿ, ಮುಕ್ಕಣ್ಣನ ಕಣ್ಣಾಗಿ ಕಲ್ಲಲ್ಲಿರುವ ನನ್ನನ್ನೇ ನೋಡುತ್ತದೆ. ಈ ಕಣ್ಣನ್ನು ಕಣ್ಣಲ್ಲಿಯೇ ಇರುವ ನಿರ್ಭಾವದ ಕಣ್ಣೆಂದು ಜ್ಞಾನಿಗಳು ಹೆಸರಿಟ್ಟು ಕರೆಯುತ್ತಾರೆ.

ಕಲ್ಲಲ್ಲಿ ಮಸೀದಿ ಕೆತ್ತಿದಾಗ ಕಣ್ಣು ಭಾವದಿಂದ ಅರಳಿ ಮುಸಲ್ಮಾನನಾಗುತ್ತದೆ. ಮತ್ತೊಂದು ಕಣ್ಣು ದುರ್ಭಾವದಿಂದ ಕೆರಳಿ ಹಿಂದುವಾಗುತ್ತದೆ; ಹಾಗೆಯೇ ಕೆರಳಿ ಕ್ರಿಶ್ಚಿಯನ್,

ಬೌದ್ಧ, ಜೈನನಾಗುತ್ತದೆ. ಆಲಯ ನಿರ್ಮಿಸಿದಾಗ ಹಿಂದು ಎನ್ನುವ ರೋಗ ಕಣ್ಣಿಗೆ ಬಡಿದು ಅರಳುತ್ತದೆ; ಉಳಿದವುಗಳನ್ನು ನೋಡಿ ಕೆರಳುತ್ತದೆ. ಕಲ್ಲಿನಲ್ಲಿ ಚರ್ಚ್ ಕೆತ್ತಿದಾಗ ತಾನು ಕ್ರಿಶ್ಚಿಯನ್ ಎಂದು ಅರಳುತ್ತದೆ; ಆಲಯ ಮಸೀದಿ ನೋಡಿ ಕೆರಳುತ್ತದೆ.

ಭಾವದಿಂದ ಅರಳಿ, ದುರ್ಭಾವದಿಂದ ಕೆರಳುವ ಕಣ್ಣುಗಳಿಗೆ ಕಣ್ಣಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ಕಣ್ಣುಗಳಿಗೆ ನಿರ್ಭಾವದ ಪಾಠ ಮಾಡುತ್ತಾನೆ:

ಕಲ್ಲು ನೋಡಿದ ಕಣ್ಣುಗಳು ಭಾವದಿಂದ ಅರಳಿರಲಿಲ್ಲ; ದುರ್ಭಾವದಿಂ ದ ಕೆರಳಿರಲಿಲ್ಲ. ಸಕಲ ಕಣ್ಣುಗಳಿಗೂ ಕಲ್ಲು ಕಲ್ಲಾಗಿಯೇ ಕಂಡಿತು. ಏಕೆಂದರೆ ಕಣ್ಣು ಅರಿವೆಂಬ ಗುರುದೇವನ ಕಣ್ಣಿನಿಂದ ನೋಡಿತು. ಕಲಾವಿದ ಕಲ್ಲಲ್ಲಿ ಮಸೀದಿ ಅರಳಿಸಿದಾಗ ಕಣ್ಣಲ್ಲಿರುವ ಅರಿವಿನ ನಿರ್ಭಾವದ ಕಿರಣಗಳು ಹಿಂದೆ ಸರಿದು; ಮುಸಲ್ಮಾನ ಎಂಬ ಭಾವದ ಕಿರಣಗಳು ಮಸೀದಿಯ ಮೇಲೆ ಬಿದ್ದು; ಕಣ್ಣು ತಾನು ಮುಸಲ್ಮಾನನೆಂಬ ಭಾವದ ಕಿರಣಗಳನ್ನು ತನುವಿನ ಮೇಲೆ ಚೆಲ್ಲಿತು.

ಮುಸಲ್ಮಾನ, ಹಿಂದು, ಕ್ರೈಸ್ತ, ಬೌದ್ಧ, ಜೈನ, ಫಾರ್ಸಿ, ಸಿಕ್ ಎಂದು ನೋಡುವ ಭಾವ ದುರ್ಭಾವದ ಕಿರಣಗಳನ್ನು ಹೊರಚೆಲ್ಲುವ ಕಣ್ಣುಗಳು ಕಲ್ಲು ನೋಡಿದರೆ ಸಾಕು ನಿರ್ಭಾವದ ಕಿರಣಗಳನ್ನು ಚೆಲ್ಲುತ್ತವೆ. ಕಲ್ಲು ಎಂದು ಸತ್ಯವನ್ನೇ ನುಡಿಯಲು ಕಣ್ಣು ತನುವಿಗೆ ಆದೇಶ ನೀಡುತ್ತದೆ.

ಮಸೀದಿ, ಆಲಯ, ಚರ್ಚ್, ಬಸದಿ, ಮಂದಿರ ಕೆತ್ತಿದರೇನು? ಅದು ಕಲ್ಲಲ್ಲವೆ? ಆವಾವ ಭಾವದಿಂದ ನೋಡದೆ ನಿರ್ಭಾವದ ಕಿರಣಗಳನ್ನು ಚೆಲ್ಲಿ ಅರಿವಿನ ಭಾವದಿಂದ ನೋಡಿದರೆ ಕಣ್ಣಿಗೆ ಮಸೀದಿ, ಆಲಯ, ಚರ್ಚ್, ಬಸದಿಗಳು ಕಾಣುವುದೇ ಇಲ್ಲ; ಬರೀ ಕಲ್ಲು ಮಾತ್ರ ಕಾಣುತ್ತದೆ.

ಆವಾವ ಭಾವದಲ್ಲಿ ನೋಡುವುದನ್ನು ನಾನು ಅರಿಯೆನಯ್ಯಾ. ನಿಮ್ಮ ಅರಿವಿನ ಭಾವದಿಂದ ಮಾತ್ರ ನೋಡುವ ನೋಟವನ್ನು ಎನಗೆ ಕರುಣಿಸಿ ಕಾಯಯ್ಯಾ. ಕರುಣಾಮಯನೇ, ಕೃಪಾವಲ್ಲಭನೇ ಶ್ರೀಗುರುವೆ ಕೃಪಾವಲ್ಲಭನೇ ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನನ್ನು ಬೇಡುವ ಸೂತ್ರವನ್ನು ಓದುಗರಿಗೆ ನೀಡಿದ್ದಾರೆ. ಶರಣರ ಕರುಣೆ ಅಪಾರ!

**223**

**ಆವುದರಲಾದಡೇನು ನೀನು ?**
**ನೀನು ಮಹಾಸಮರ್ಥನಯ್ಯಾ**
**ಧನದಲ್ಲಿ ಗುಣದಲ್ಲಿ ಹೆಂಪಿನ ಹೆಸರಲಿ ಹಿರಿಯನು ನೀನಯ್ಯಾ .**
**ಅಯ್ಯಾ, ನೀನೆಲ್ಲರಲ್ಲಿ ಸಂಪನ್ನನಯ್ಯಾ ,**
**ಎನ್ನ ಕಪಿಲಸಿದ್ಧ ಮಲ್ಲೇಶ್ವರದೇವರ ದೇವ.**

ಕಳ್ಳ, ಬಂದಿಕಾರ, ಹಾವಾಡಿಗ, ಹಾದರಿಗ, ಬಂಟ, ಓಲೆಯಕಾರ ಆದಡೇನು? ನೀ ಮುಂತಾಗಿ ಬಂದ ಭಕ್ತರ ನೀ ಎನ್ನದಿದ್ದಡೆ, ಅದೇ ದ್ರೋಹ! ನಡೆ ನುಡಿ ಹುಸಿಯುಂಟಾದಡೆ, ಕೂಡಲಸಂಗನ ತೋರಿದ ಚನ್ನಬಸವಣ್ಣನಾಣೆ!

ಆವ ದೇಹವಾದರೇನು? ಆ ದೇಹದಲ್ಲಿದ್ದ ನೀನು ಮಹಾ ಸಮರ್ಥನಯ್ಯಾ. ಧನದಲ್ಲಿ ಗುಣದಲ್ಲಿ ಹೆಸರಿನಲ್ಲಿ ಹಿರಿಯನು ನೀನು ಅಯ್ಯಾ, ಸಕಲ ದೇಹಗಳಲ್ಲಿ ನೀನು ಸಂಪನ್ನನಯ್ಯಾ ಹೀಗಾಗಿ ಶರಣರು ನಿನ್ನನ್ನು ಕಪಿಲಸಿದ್ಧ ಮಲ್ಲೇಶ್ವರ ದೇವರ ದೇವನೆಂದು ಕರೆದಿದ್ದಾರೆ. ಸಾಕ್ಷಾತ್

ಕೂಡಲಸಂಗಯ್ಯನೆಂದು ಕರೆದಿದ್ದಾರೆ.

ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆ ಇರಲಿ ಅವರನ್ನು ಲಿಂಗವೆಂಬೆ, ಸಂಗನೆಂಬೆ, ಕೂಡಲ ಸಂಗಮದೇವಾ, ಅವರ ಮುಖಲಿಂಗಿಗಳೆಂಬೆ ಎಂದು ಬಸಬಣ್ಣನವರು ನುಡಿದಿದ್ದಾರೆ.

ಮನುಷ್ಯ ಮನುಷ್ಯನನ್ನು ನೋಡುವ ನೋಟ; ಮನುಷ್ಯನಾಗಿ ಮನುಷ್ಯನನ್ನು ಮಹಾ ಮನುಷ್ಯನಂತೆಯೇ ನೋಡುವ ನೋಟ; ಈ ನೋಟ ನೋಟದಲ್ಲಿಯೇ ಬಚ್ಚಿಟ್ಟುಕೊಂಡಿದೆ. ಹೀಗೆ ನೋಡಿ ಆನಂದ ಪಡಬೇಕೆಂದು ಬಯಕೆಯಾದ ಕಣ್ಣಿಗೆ ಕಣ್ಣಲ್ಲಿಯೇ ಮರೆಯಾದ ಅರಿವಿನ ನೋಟ ಸಾಕ್ಷಾತ್ಕಾರವಾಗುತ್ತದೆ. ಇದನ್ನೇ ಕಣ್ಣಲ್ಲಿರುವ ಕಣ್ಣಿನ ಕಣ್ಣು, ಮುಕ್ಕಣ್ಣನ ಕಣ್ಣು ಎಂದು ಶರಣರು ಕರೆದಿದ್ದಾರೆ.

ಶರಣರು, ಕಣ್ಣಲ್ಲಿರುವ ಅರಿವಿನ ಕಣ್ಣನ್ನು ಕಣ್ಣಿನ ಮೂಲಕ ಸಾಕ್ಷಾತ್ಕಾರ ಮಾಡಿಕೊಂಡವರು. ಹೀಗಾಗಿ ಸಕಲರನ್ನು ಮಹಾ ಮಾನವರಾಗಿ ಕಂಡು, ಅವರಿಗೆ ಶರಣು ಶರಣಾರ್ಥಿ ಎಂದು ತಲೆ ಬಾಗಿದರು.

ಯಾವ ತನುವಾದರೇನು ಅ ತನುವಿನಲ್ಲಿ ಅರಿವೆಂಬ ಗುರುದೇವ ತನ್ಮಯನಾಗಿದ್ದಾನೆ. ಅರಿವಾದ ತನುವಾಗಿ, ಬುದ್ಧನೇ ತಾನಾದ ತನುವಿಗೆ, ಸ್ವರೂಪಜ್ಞಾನವಾದ ತಂತ್ರಜ್ಞಾನಿ ತನುವಿಗೆ ಸಕಲ ತನುಗಳು ಜ್ಞಾನಿ ತನುಗಳಾಗಿ ಕಾಣುತ್ತವೆ. ಅರಿವೆಂಬ ಗುರುದೇವನಾದ ಆ ಭಗವಂತನೇ ವಾಸ ಮಾಡಿದ ತನುಗಳಾಗಿ ಕಾಣುತ್ತವೆ. ಹೀಗಾಗಿ ಬುದ್ಧನಾದವನು, ಶರಣನಾದವನು ಪ್ರತಿ ಮಾನವನನ್ನು ಮಹಾದೇವನಂತೆ ಕಾಣುವನು. ಆ ಮಹಾದೇವನಿಗೆ ಶರಣು ಹೋಗಿ ಶರಣು ಶರಣಾರ್ಥಿ ಎಂದು ತಲೆಬಾಗಿ ನಮಿಸುವನು. ಇದು ತಂತ್ರಜ್ಞಾನಿಯಾಗಿ ನೈಪುಣ್ಯತೆ ಹೊಂದಿದ ಶರಣರ ಕಾಯಕ!

ಮನುಷ್ಯ ತನ್ನಲ್ಲಿಯೇ ಸಂಗಮವಾದ ಅರಿವನ್ನು ತನ್ನ ಮನದ ಮೂಲಕ ಸಾಕ್ಷಾತ್ಕಾರ ಮಾಡಿಕೊಂಡಾಗ ಮನ ಘನಮನವಾಗುತ್ತದೆ. ಇದು ಸಕಲ ಮನುಷ್ಯರಿಗೂ ಸಾಧ್ಯ ಎಂದು ಸಿದ್ಧರಾಮ ಶಿವಯೋಗಿಗಳು, ಬಸವಾದಿ ಶರಣರು, ದಾಸವರೇಣ್ಯರು ಸೂತ್ರಗಳ ಮೂಲಕ ಪ್ರತಿಪಾದಿಸಿದ್ದಾರೆ. ಪ್ರತಿ ಮನುಷ್ಯ ತನ್ನ ಅರಿವನ್ನು ತಾನೇ ಸಾಕ್ಷಾತ್ಕರಿಸಿಕೊಳ್ಳುವ ಬಗೆಯನ್ನು ತಮ್ಮ ವಚನಗಳ ಮೂಲಕ ಗಟ್ಟಿಯಾಗಿ ಮನಸ್ಸಿಗೆ ನಾಟುವಂತೆ ಹೇಳಿದ್ದಾರೆ.

'ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯಾ' ಮನ ತನುವನ್ನು ಹಿಡಿದು ಕಳುವು, ಹಾದರ, ಕೊಲೆ ಮಾಡಿದರೆ ಸರಕಾರ ಸಮಾಜ ಮನಕ್ಕೆ ಶಿಕ್ಷೆ ಕೊಡಬೇಕೋ ಅಥವಾ ನಿರಪರಾಧಿ ತನುವಿಗೆ ಶಿಕ್ಷೆ ಕೊಡಬೇಕೋ? ಪ್ರತಿ ತನುವಿನಲ್ಲಿಯೂ ಅರಿವೆಂಬ ಗುರುದೇವನಿದ್ದಾನೆ. ತನು ಗುರುದೇವನಿಗೆ ಸೇರಿದ ಸಂಪತ್ತು. ತನುವಿಗೆ ಶಿಕ್ಷೆ ಕೊಡುವುದೆಂದರೆ ಹುತ್ತವನ್ನು ಬಡಿದಂತೆ!

ಮನಕ್ಕೆ ಜ್ಞಾನಿ ಮಾತ್ರ ಶಿಕ್ಷೆ ಕೊಡಬಲ್ಲ. ಸರಕಾರ, ಸಮಾಜ ತನುವಿಗೆ ಮಾತ್ರ ಶಿಕ್ಷೆ ಕೊಡುತ್ತದೆ. ಇವೆರಡೂ ತನುವನ್ನು ನೋಡುತ್ತವೆಯೇ ಹೊರತು ಮನವನ್ನು ನೋಡುವುದಿಲ್ಲ. ಮನಕ್ಕೆ ಶಿಕ್ಷಣ ಕೊಡುವ ಶಕ್ತಿ ಸರಕಾರಕ್ಕೆ ಸಮಾಜಕ್ಕೆ ಇನ್ನೂ ಬಂದಿಲ್ಲ. ಅದು ರೂಢಿಯಲ್ಲಿಯೂ ಇಲ್ಲ.

ತನ್ನ ತಾನರಿಯದ ಮುನ್ನ ತನ್ಮಯವಾದ ಅರಿವು. ತನ್ನ ತಾನು ಅರಿದ ಬಳಿಕ ಅರಿವು ತನ್ಮಯವೆಂದು ಅರಿತ ಅರಿವು. ತನ್ನಲ್ಲಿರುವ ಆ ಅರಿವೇ ಕರಿಗೊಂಡ ಬಳಿಕ ತಾನೇ ಸಾಕ್ಷಾತ್ ಸೌರಾಷ್ಟ್ರ

ಸೋಮೇಶ್ವರಾ ಎಂದು ಆದಯ್ಯ ಶರಣರು ಅರಿವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಸೂತ್ರವನ್ನು ಹೇಳಿದ್ದಾರೆ. ಅರಿವು ಸಾಕ್ಷಾತ್ಕಾರ ಮಾಡಿಕೊಂಡ ತನು ಮಾತ್ರ ಮನಕ್ಕೆ ಶಿಕ್ಷಣ ಕೊಡಲು ಸಾಧ್ಯ. ಸಕಲ ತನುಗಳನ್ನು ಗುರುದೇವನಿದ್ದ ತನುಗಳೆಂದು ನೋಡಲು ಸಾಧ್ಯವಾಗುತ್ತದೆ.

ಅಯ್ಯಾ, ನೀನೆಲ್ಲರಲ್ಲಿ ಸಂಪನ್ನನಯ್ಯಾ, ಎನ್ನ ಕಪಿಲಸಿದ್ಧ ಮಲ್ಲೇಶ್ವರ ದೇವರ ದೇವಾ ಎಂದು ಸಿದ್ಧರಾಮ ಶಿವಯೋಗಿಗಳು ಪ್ರತಿ ತನುವನ್ನು ನೋಡಿ ಹೀಗೆ ಹಾಡಿದ್ದಾರೆ.

**224**

**ಆವುದಾನೊಂದು ಭಕ್ತಿ ಬಸವಣ್ಣನದಯ್ಯಾ .**
**ಆವುದಾನೊಂದು ಯುಕ್ತಿ ಬಸವಣ್ಣನದಯ್ಯಾ .**
**ಆವುದಾನೊಂದು ಯೋಗ ಬಸವಣ್ಣನದಯ್ಯಾ .**
**ಕಪಿಲಸಿದ್ಧ ಮಲ್ಲಿನಾಥಯ್ಯಾ .**

ಬಸವಣ್ಣನವರು ಕಲ್ಯಾಣದಲ್ಲಿ ಕೈಕೊಂಡ ಉತ್ಕ್ರಾಂತಿಯಲ್ಲಿ ಏಳುನೂರಾ ಎಪ್ಪತ್ತು ಜನ ಸ್ವರೂಪ ಜ್ಞಾನಿಗಳಾಗಿ ಈ ಬ್ರಹ್ಮಾಂಡವನ್ನು ಬೆಳಗಿದರು. ಇದು ಸಾಮಾನ್ಯ ಮಾತಲ್ಲ! ಶ್ರೀ ಕೃಷ್ಣನ ಕಾಲದಲ್ಲಿ ಅರ್ಜುನ ಸಖಿಯಾಗಿ ಯುದ್ಧ ಗೆದ್ದನೇ ಹೊರತು ಜ್ಞಾನಿಯಾಗಲಿಲ್ಲ. ರಾಧೆ ಪ್ರೇಯಸಿ ಎನ್ನಿಸಿಕೊಂಡಳು. ಎಲ್ಲಿಯೂ ಪ್ರಕಟಗೊಳ್ಳಲಿಲ್ಲ. ಪಾಂಡವರು ಸಾತ್ವಿಕರೆನ್ನಿಸಿಕೊಂಡರು; ಜ್ಞಾನಿಗಳಾಗಲಿಲ್ಲ.

ಜನಕ ಮಹಾರಾಜ ಚಕ್ರವರ್ತಿಗಳಾಗಿದ್ದರೂ ಮಹಾಜ್ಞಾನಿಗಳೆನ್ನಿಸಿಕೊಂಡರು. ಅವರು ಜ್ಞಾನಯಜ್ಞವನ್ನು ಕೈಕೊಂಡರು. ಅವರ ಗರಡಿಯಲ್ಲಿ ಪಳಗಿದ ಶುಕಮುನಿ ಮಹಾಜ್ಞಾನಿ ಎನ್ನಿಸಿಕೊಂಡ. ಗೌತಮ ಬುದ್ಧ, ಮೋಗ್ಲಿಯಾನಾ, ಕಾಶ್ಯಪ, ಅಹಿಂಸಕ (ಅಂಗುಲಿಮಾಲ) ಮುಂತಾದ ಜ್ಞಾನಿಗಳಿಗೆ ಹೊಸ ಜನ್ಮ ನೀಡಿದ. ಆತನ ಸೂತ್ರ ಪ್ರಧಾನವಾದ ಜ್ಞಾನ ಸಾಹಿತ್ಯ ಪ್ರಪಂಚದಾದ್ಯಂತ ಹಬ್ಬಿತು.

ಮಹಾವೀರ ತೀರ್ಥಂಕರೆನ್ನಿಸಿಕೊಂಡು ಕಠಿಣವಾದ ಸಹಜ ಮಾರ್ಗವನ್ನು ತುಳಿದ. ಅನುಯಾಯಿಗಳಿಗೆ ಬೆತ್ತಲೆ ಜೀವನ ಸಂಪ್ರದಾಯವಾಯಿತೇ ಹೊರತು ಜ್ಞಾನಿಯಾಗಿ ಹೊರಹೊಮ್ಮುವುದು ಕಷ್ಟಸಾಧ್ಯವಾಯಿತು. ನಿಜಗುಣ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು ಮಹಾಜ್ಞಾನಿಗಳು. ಅವರ ಜ್ಞಾನ ಸಾಹಿತ್ಯ ಕನ್ನಡ ನೆಲದಲ್ಲಿ ಮನೆಮಾತಾಗಿದೆ. ಸಿದ್ಧಾರೂಢರು, ಗುರುನಾಥರೂಢರು ಮುಚಳಂಬದ ನಾಗಭೂಷಣ ಶಿವಯೋಗಿಗಳು ಡಬ್ಬೇರು ಮಡುವಿನ ವಿದ್ಯಾನಂದ ಶರಣರು ಮಹಾಜ್ಞಾನಿಗಳು. ಶುದ್ಧ ಸ್ವರೂಪ ಜ್ಞಾನಕ್ಕೆ ದಾರಿ ತೋರಿದ ಮಹಾನುಭಾವರು.

ದಾಸರು, ತತ್ತ್ವಪದಕಾರರು ಜ್ಞಾನ ಮಾರ್ಗದಲ್ಲಿ ತೋರಿದ ಅನೇಕ ಸೂತ್ರ ಪ್ರಧಾನವಾದ ಜ್ಞಾನ ಸಾಹಿತ್ಯವನ್ನು ನೆನೆಯಲೇಬೇಕು. ಅವರು ತೋರಿದ ಯುಕ್ತಿ ಮಾರ್ಗವನ್ನು ಈಗಲೂ ಅನುಸರಿಸುತ್ತಿರುವುದು ಅಲ್ಲಲ್ಲಿ ಕಂಡು ಬರುತ್ತಲಿದೆ.

ಕಲ್ಯಾಣದ ಜ್ಞಾನ ಕ್ರಾಂತಿ ಕಾಶ್ಮೀರದವರೆಗೂ, ಗುಜರಾತಿನವರೆಗೂ, ಅಫಘಾನಿಸ್ತಾನದವರೆಗೂ ಪಸರಿಸಿತ್ತು. ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಜ್ಞಾನವನ್ನು ಅರಸಿ ಕಲ್ಯಾಣಕ್ಕೆ ಬಂದರು. ಏಳುನೂರಾ ಎಪ್ಪತ್ತು ಜನ ಈ ಜ್ಞಾನ ಯಜ್ಞದಲ್ಲಿ ಸ್ವರೂಪ

ಜ್ಞಾನಿಗಳಾಗಿ ಬೆಳಗಿದರು. ಕೇವಲ ಮೂರು ದಶಕಗಳಲ್ಲಿಯೇ ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಮಹಾಜ್ಞಾನಿಗಳಾಗಿ ಪರಿವರ್ತನೆ ಹೊಂದಿದ್ದು ಪ್ರಪಂಚದಲ್ಲಿಯೇ ಮೊದಲೆಂದರೂ ತಪ್ಪಿಲ್ಲ.

ಕೋಟಿಗೊಬ್ಬ ಮಾತ್ರ ಸ್ವರೂಪಜ್ಞಾನಿಯಾಗಲು ಸಾಧ್ಯ ಎಂದು ಜ್ಞಾನಿಗಳೇ ಸಾರಿದ್ದಾರೆ. ಕೋಟಿಗೊಬ್ಬ ಶರಣ ಎಂದು ಶರಣರು ಕೂಡಾ ನುಡಿದಿದ್ದಾರೆ. ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಈ ಜ್ಞಾನ ಕಾಯಕದಲ್ಲಿ ತೊಡಗಿದಾಗ ಅವರಲ್ಲಿ ಏಳುನೂರಾ ಎಪ್ಪತ್ತು ಜನ ಸ್ವರೂಪಜ್ಞಾನಿಗಳಾಗಿ ಬೆಳಗಿದುದು ಒಂದು ಅದ್ಭುತವೇ ಸರಿ. ಕೋಟಿಗೊಬ್ಬ ಶರಣ ಎನ್ನುವ ಮಾತು ಸುಳ್ಳಾಗಿ ಎರಡುನೂರಾ ಐವತ್ತೈದು ಜನರಿಗೊಬ್ಬ ಶರಣ ಉದಯವಾದ.

ಇದಕ್ಕೆ ಕಾರಣ ಬಸವಣ್ಣನವರು ತನುವಿನಲ್ಲಿ ಸಂಗಮವಾದ ಜ್ಞಾನಕ್ಕೆ ಮಾಡಿದ ಭಕ್ತಿ ಮಾರ್ಗ. ಅವರು ಅನುಸರಿಸಿದ ಸರಳ ಯುಕ್ತಿ ಮಾರ್ಗ. ಅವರು ಅನುಸರಿಸಿದ ತಮ್ಮದೇ ಆದ ಯೋಗ ಮಾರ್ಗ! ಈ ಮಾರ್ಗಕ್ಕೆ ಕಾಶ್ಮೀರದ ಅರಸ, ಗುಜರಾತಿನ ಆದಯ್ಯ, ತಮಿಳುನಾಡಿನ ಚೆನ್ನಯ್ಯ, ತೆಲುಗಿನ ಬೊಮ್ಮಯ್ಯ, ಅಫಘಾನಿಸ್ತಾನದ ಮರುಳ ಶಂಕರರು ಮರುಳಾದರು. ಸಿದ್ಧರಾಮ ಶಿವಯೋಗಿಗಳು ಬಸವಣ್ಣನ ಭಕ್ತಿಗೆ, ಯುಕ್ತಿಗೆ, ಯೋಗಕ್ಕೆ ಕುಣಿ ಕುಣಿದಾಡಿದರು. ಆತನನ್ನು ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥ ಎಂದು ಕರೆದರು.

ಶರಣರ ಜ್ಞಾನ ಸಾಹಿತ್ಯ ಪುನಃ ಹರಿಹರ, ರಾಘವಾಂಕ, ಶೂನ್ಯ ಸಂಪಾದನೆಕಾರರನ್ನು ಬಿಟ್ಟರೆ ಶುದ್ಧ ಜ್ಞಾನಕ್ಕಾಗಿ ಮಾತ್ರ ಬಳಕೆ ಮಾಡಿದವರು ಅಪರೂಪಕ್ಕೆ ಅಲ್ಲಲ್ಲಿ ಕಾಣುತ್ತಾರೆ.

ಫ.ಗು.ಹಳಕಟ್ಟಿಯವರು, ಅಲ್ಲಲ್ಲಿ ಚದುರಿಹೋದ ವಚನಗಳನ್ನು ಒಂದೆಡೆ ಸಂಗ್ರಹಿಸಿದರು. ಈ ನೆಲದ ಸಾಹಿತಿಗಳು ವಚನ ರೂಪದ ಜ್ಞಾನ ಸಾಹಿತ್ಯವನ್ನು ತಮ್ಮ ಮೂಗಿನ ನೇರಕ್ಕೆ ಕೊಂಡೊಯ್ದು ಮೊಸರಿನಲ್ಲಿ ಕಲ್ಲು ಹುಡುಕಿದರು. ಇದಕ್ಕೆ ವಾರಸುದಾರರೇ ಆಗಬೇಕಾದ ವಿರಕ್ತರು ಮಠಗಳನ್ನು ಗಟ್ಟಿಗೊಳಿಸಿ ಶಾಲಾ, ಕಾಲೇಜುಗಳನ್ನು, ವಸತಿ ನಿಲಯ, ಪ್ರಸಾದ ನಿಲಯಗಳನ್ನು ತೆರೆದರು. ಕರ್ಮಯೋಗಿಗಳೆನ್ನಿಸಿಕೊಂಡು ಸ್ವರೂಪ ಜ್ಞಾನದ ಕಾಯಕದಿಂದ ಬಹುದೂರ ಸರಿದರು. ಗುರುಸ್ಥಲದ ಸಂಪ್ರದಾಯ ಗಟ್ಟಿಗೊಂಡು ಲಿಂಗಕಾಯ ಲಿಂಗಾಯತ ಜಾತಿಯಾಗಿ, ಧರ್ಮವಾಗಿ ಬದಲಾಯಿತು.

ಇಂತಹ ವಿಷಮ ಸನ್ನಿವೇಷದಲ್ಲೂ ಮುಚಳಂಬದ ಮಹಾಜ್ಞಾನಿ ನಾಗಭೂಷಣ ಶಿವಯೋಗಿಗಳ ಶಿಷ್ಯರಾಗಿ ಲಿಂಗಸೂಗೂರು ತಾಲೂಕಿನ ಡಬ್ಬೇರು ಮಡುವಿನ ಸದ್ಗುರು ಶ್ರೀ ವಿದ್ಯಾನಂದ ಶರಣರು ಮಹಾಜ್ಞಾನಿಗಳಾಗಿ ಬೆಳಗಿದರು. ಗುರುಗಳು ಭಗವದ್ಗೀತೆಯ ಮೂಲಕ ಬೋಧಿಸಿದರೆ, ಸದ್ಗುರು ವಿದ್ಯಾನಂದ ಶರಣರು ಶರಣರ ವಚನಗಳನ್ನೇ ಸೂತ್ರವನ್ನಾಗಿಸಿಕೊಂಡು ಬೆಳಗಿದರು. ಮನೆ ಮನೆಗೆ ಅಲೆದು ಶರಣರು ಬಿಟ್ಟುಹೋದ ಸ್ವರೂಪಜ್ಞಾನದ ವಚನ ಸೂತ್ರಗಳನ್ನೇ ಪ್ರಧಾನವನ್ನಾಗಿಸಿಕೊಂಡು ಬೋಧಿಸಿದರು.

ಬಸವಣ್ಣನ ಭಕ್ತಿ ಪಾಲಿಸಿದರು. ಬಸವಣ್ಣನ ಯುಕ್ತಿ ಪಾಲಿಸಿದರು. ಬಸವಣ್ಣನ ಯೋಗವನ್ನೇ ಪಾಲಿಸುತ್ತಾ ಸಕಲ ಶಿವಶರಣರನ್ನು ಅವರು ಮಾಡಿದ ಜ್ಞಾನಯಜ್ಞವನ್ನು ಅವರವರ ವಚನಗಳ ಮೂಲಕ ಸ್ವರೂಪಜ್ಞಾನಕ್ಕೆ ಹೋಗುವ ಬಗೆಯನ್ನು ಸಾವಿರಾರು ಶಿಷ್ಯರಿಗೆ ವಿವರಿಸಿದರು. ಸಕಲ ಶಿವಶರಣರ ವಚನಗಳಿಗೆ ಸಾವಿರಾರು ಪುಟಗಳಿಗಾಗುವಷ್ಟು ವ್ಯಾಖ್ಯಾನ ಬರೆದು ಪುನಃ ಶರಣರ ಸ್ವರೂಪಜ್ಞಾನದ ಉತ್ಕ್ರಾಂತಿಗೆ ಏಕಾಂಗಿ ವೀರರಾಗಿ ಹೋರಾಡಿದರು.

ಬುದ್ಧನ ಮಾತುಗಳಿಗೆ ಅಂಗುಲಿ ಮಾಲ ಮಾರುಹೋಗಿ ಬುದ್ಧನಾದಂತೆ ಶರಣರ ವಚನಗಳಿಗೆ ಕೂಡಲೇ ಮಾರುಹೋಗಿ ಮಾರಯ್ಯ ಉರಿಲಿಂಗ ಪೆದ್ದಿಗಳು

ಮಹಾಜ್ಞಾನಿಗಳಾದರು. ಶರಣರ ವಚನಗಳಲ್ಲಿ ಸ್ವರೂಪ ಜ್ಞಾನಕ್ಕೆ ಹೋಗುವ ಸರಳ ಸೂತ್ರಗಳಿವೆಯೇ ಹೊರತು ಇತಿಹಾಸವಿಲ್ಲ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಬಸವಣ್ಣನ ಭಕ್ತಿ, ಯುಕ್ತಿ, ಜ್ಞಾನದಲ್ಲಿ ಸಮಾಗಮವಾಗುವ ಯೋಗವನ್ನು ಕುರಿತು ಕೊಂಡಾಡಿದ್ದಾರೆ.

**225**

**ಆವುದೊಂದು ಸುಖವು ದೇವಾ,**
**ನಿಮ್ಮಿಂದ ಕಾಣಬಂದಿತ್ತಯ್ಯ.**
**ಇದನರಿದ ಮೇಲೆ, ಇನ್ನಾವ ಪರಿಯಲ್ಲಿ**
**ನಿಮ್ಮಡಿಯ ಬಿಡುವೆನೆ ?**
**ಅಯ್ಯಾ, ದೇವದೇವಾ, ಕರುಣಿಸಯ್ಯಾ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಅರಿವಿನ ಸುಖವು ಪರಮ ಸುಖವು. ಅದನ್ನು ಅಂತಿಂಥ ಸುಖವೆನ್ನಲು ಬರುವುದಿಲ್ಲ. ಅದು ಸ್ವಸುಖ. ಬಾಹ್ಯ ಸುಖ ಸುಖವಲ್ಲ. ದುಃಖಕ್ಕೀಡು ಮಾಡುವ ಸುಖ. ಈ ಸುಖ ಒಮ್ಮೆ ಸುಖವೆನ್ನಿಸುತ್ತದೆ. ಮತ್ತೊಮ್ಮೆ ದುಃಖವೆನ್ನಿಸುತ್ತದೆ.

ಪರಮ ಸುಖವೆಂದರೆ ಸುಖ ದುಃಖಗಳು ಮನದಿಂದ ಉದುರಿ ಬಿದ್ದಾಗ ಉಂಟಾಗುವ ಸುಖವೇ ಸಹಜ ಸುಖ. ಅದು ಪರಮ ಸುಖ.

ಮನ ತನುವನ್ನು ಹಿಡಿದು ಬಾಹ್ಯಸುಖವನ್ನು ಹುಡುಕುತ್ತಾ ಆ ಸುಖಕ್ಕಾಗಿ ಹಪಹಪಿಸುತ್ತಾ ತನುವನ್ನು ಮುಗ್ಗಲು ಮಾಡುವುದರ ಮೂಲಕ ಸುಖ ಅನುಭವಿಸುತ್ತದೆ. ಅದು ಮನಕ್ಕೆ ಸುಖವೇ ಹೊರತು ತನುವಿಗೆ ದುಃಖ. ತನುವಿನ ಮೂಲಕ ಉಂಟಾಗುವ ಸುಖ ಮನಕ್ಕೆ ಬಹು ಇಷ್ಟ.

ಮನ ತನುವನ್ನು ಆವರಿಸಿ ತನುವಿನ ಮೂಲಕ ಸುಖ ಪಡುತ್ತದೆ. ಇದು ಶುದ್ಧ ತಪ್ಪು ಏಕೆಂದರೆ ಮನ ಅನುಭವಿಸುವುದು ಸುಳ್ಳು ಸುಖ. ಉದಾ ಃ – ಲೋಹವೇ ಮನಕ್ಕೆ ಚಿನ್ನವಾಗಿ ಕಾಣುತ್ತದೆ. ಲೋಹವನ್ನು ಆವರಿಸಿದ ಬಣ್ಣ ಮನದ ಕಣ್ಣು ಕುಕ್ಕುತ್ತದೆ. ಹಳದಿ ಬಣ್ಣದ ಲೋಹಕ್ಕಾಗಿ ಮನ ಜೊಲ್ಲು ಸುರಿಸಿದರೆ ಕಪ್ಪು ಬಣ್ಣದ ಲೋಹಕ್ಕಾಗಿ ಮನ ಇಷ್ಟಪಡುವುದೆ? ಇಲ್ಲ. ಲೋಹ ಲೋಹವೇ ಆಗಿದೆ ಎನ್ನುವ ಸತ್ಯ ಮನಕ್ಕೆ ಹೊಳೆಯುವುದೇ ಇಲ್ಲ. ಹೀಗಾಗಿ ಹಳದಿ ಬಣ್ಣದ ಲೋಹ ಸಂಗ್ರಹಿಸಲು ಮನ ತನುವಿನ ಆಯುಷ್ಯವನ್ನೇ ವ್ಯಯಿಸುತ್ತದೆ.

ದುಡಿದು ಚಿನ್ನ ಸಂಗ್ರಹಿಸಿ ಶ್ರೀಮಂತನೆಂಬ ಹಣೆಪಟ್ಟಿ ತನುವಿಗೆ ಕಟ್ಟುತ್ತದೆ. ಚಿನ್ನ ಕಳುವು ಮಾಡಿ ಕಳ್ಳ ಎನ್ನುವ ಪಟ್ಟವನ್ನು ತನುವಿಗೆ ಕಟ್ಟಿ ಮನ ಸಂಭ್ರಮಿಸುತ್ತದೆ. ಚಿನ್ನಕ್ಕಾಗಿ ಯುದ್ಧ ಮಾಡಿ ಚಕ್ರವರ್ತಿ ಎಂಬ ಹಣೆಪಟ್ಟಿ ಕಟ್ಟಿ ಮನ ತನುವಿಗೆ ಸಾವು ನೋವುಗಳನ್ನು ಉಂಟು ಮಾಡುತ್ತದೆ.

ಹೀಗೆ ತನುವಿಗೆ ಸುಖವಾದರೂ ಮನಕ್ಕೆ ಸುಖ; ತನುವಿಗೆ ದುಃಖವಾದರೂ ಮನ ಸುಖಿಸಿ ಸಂಭ್ರಮಿಸುತ್ತದೆ. ಮನಕ್ಕೆ ಸತ್ಯದ ಸುಖ ಸಹಜ ಸುಖ ಹೊಳೆಯದೆ ಅನಂತ ಕಾಲದವರೆಗೆ ಸುಖವೆಂದರೇನೆಂದು ತಿಳಿಯದೆ ತನುವಿನ ಆಯುಷ್ಯವನ್ನು ವ್ಯರ್ಥ ಕಳೆಯುತ್ತದೆ.

ಮನ ಅರಿವಿನೊಂದಿಗೆ ಸಂಗಮವಾಗಿ ವಸ್ತುವನ್ನು ನೋಡಿದರೆ ವಸ್ತುವಿನ ಸತ್ಯ ಗೋಚರಕ್ಕೆ ಬರುತ್ತದೆ. ಆಗ ಹಳದಿ ಲೋಹವಾದರೇನು? ಕಪ್ಪು ಲೋಹವಾದರೇನು? ತನುವಿನಲ್ಲಿ ಸುಖ ದುಃಖಗಳನ್ನುಂಟು ಮಾಡದೆ, ಅದನ್ನು ಪಡೆಯಲು ಪ್ರಯತ್ನಿಸದೆ ಸುಮ್ಮನಾಗುತ್ತದೆ.

ಅರಿವೆಂಬ ಗುರುದೇವನೆ ನನ್ನ ತನುವಿನಲ್ಲಿಯೇ ಸಂಗಮವಾದ ನಿನ್ನಿಂದ ಈ ಸುಖವು ನನಗೆ ಕಾಣಬಂದಿತ್ತು. ಪರಮಾತ್ಮನೆ ಇದನ್ನು ಅರಿತ ಮೇಲೆ ನಾನು ನಿಮ್ಮ ಚರಣ ಕಮಲಗಳನ್ನು ಬಿಡುವುದಿಲ್ಲ. ಮನವೆಂಬ ನನಗೆ ನಿಮ್ಮ ಸತ್ಯ ದರ್ಶನದ ಸಾಕ್ಷಾತ್ಕಾರ ನೀಡಿ ಕರುಣಿಸಿದ ದೇವರ ದೇವ ನೀನು. ನನ್ನಲ್ಲಿಯೇ ಸಂಗಮವಾದ ಅರಿವಿನ ಸಿದ್ಧ ರಸದ ಬುಗ್ಗೆಯೇ ನೀನು. ಎನಗೆ ಬ್ರಹ್ಮರಸ ಪಾನ ಮಾಡಿಸಿ ಭ್ರಮೆಯನ್ನು ಕಳೆದ ಪರಮಾತ್ಮ ನೀನು ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

**226**

**ಆಸನ ಸ್ಥಿರವಾಗಿ ಆಧಾರವಮಂ ಬಲಿದು,**
**ಅಧೋಮುಖದ ವಾಯುವನೂರ್ಧ್ವಮುಖಕ್ಕೆ ತಿದ್ದಿ**
**ಅತ್ತಿತ್ತ ಒಲೆಯದೆ, ನೆಟ್ಟನೆ ಕುಳ್ಳಿರ್ದು,**
**ತೊಟ್ಟವೆ ಮಿಡುಕದೆ, ಅಟ್ಟೆಯ ಹಂಗಳಿದು,**
**ಕರವೆರಡ ತಿರ್ಯಕವಾಗಿರಿಸಿ,**
**ಶಿರವ ಸುಸರವಂ ಮಾಡಿ**
**ದಿನಕರ-ಹಿಮಕರ-ವಾಯುಸಖರ ಮೇಲೆ**
**ಶಿಖಿ, ಶಶಿ, ರವಿ ಕೋಟಿಕೋಟಿಯ**
**ಬೆಳಗಿನ ಸಿಂಹಾಸನದಲ್ಲಿ ಒಪ್ಪಿಪ್ಪ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ನೆನೆದು ಸುಖಿಯಾದೆನು.**

ತನುವಿನಲ್ಲಿ ಅರಿವಿನ ಶ್ರೀಮಂತಿಕೆ ಇದೆ. ತನುವನ್ನು ಮನ ಆವರಿಸಿಕೊಂಡಿದೆ. ತನುವಿನಲ್ಲಿ ಸಂಗಮವಾದ ಅರಿವಿನ ಶ್ರೀಮಂತಿಕೆಯನ್ನು ಮನದ ಮೂಲಕವೇ ಪಡೆಯಬೇಕಾಗಿದೆ. ಆದರೆ ಮನ ತನುವನ್ನು ತನ್ನ ಅಜ್ಞಾನದ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು ಸುಖಿಸುತ್ತಿರುವದರಿಂದ ಮನಕ್ಕೆ ಅರಿವೆಂಬ ಗುರುದೇವನ ಪರಿಚಯವಾಗುತ್ತಿಲ್ಲ. ಆತ ಶಿಖಿ, ಶಶಿ, ರವಿ ಕೋಟಿ ಕೋಟಿಯ ಬೆಳಗಿನ ಸಿಂಹಾಸನದಲ್ಲಿ ಒಪ್ಪದಿಂದ ಇಪ್ಪ. ಅಂತಹ ಪರಮಾತ್ಮನನ್ನ ಸಖನನ್ನಾಗಿ ಮಾಡಿಕೊಂಡು, ಮನ ಸುಖಿಯಾಗಬೇಕಾಗಿದೆ. ಆದರೆ ಮನಕ್ಕೆ ಆ ಗುರುದೇವನೊಂದಿಗೆ ಸಂಗಮವಾಗಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಆಸನದ ಸೂತ್ರವನ್ನು ಹೇಳಿದ್ದಾರೆ.

ತನುವನ್ನು ತನ್ನ ಸಾಮ್ರಾಜ್ಯವನ್ನಾಗಿಸಿಕೊಂಡ ಮನ ತನುವಿನ ಮೂಲಕ ಆಧಾರ ಚಕ್ರವನ್ನು ಬಲಿಸಿ ಅಧೋಮುಖದ ವಾಯುವನ್ನು ಊರ್ಧ್ವಮುಖಕ್ಕೆ ತಿದ್ದಿ, ಅತ್ತಿತ್ತ ಅಲುಗಾಡದೆ, ನೆಟ್ಟನೆ ಕುಳಿತುಕೊಂಡು ಆಲಿ ನಿಲ್ಲಿಸಿ ಅಟ್ಟೆಯ ಹಂಗಳಿದು ಶಿರವನ್ನು ಸುಸರವ ಮಾಡಿ ಸುಳಿದು ಸೂಸುವ ವಾಯುವನ್ನು ಗಮನಿಸುತ್ತಾ, ತನುವಿನಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ನೆನೆಯುತ್ತಾ ಸುಖಿಯಾಗುವ ಧ್ಯಾನ ಸೂತ್ರವನ್ನು ಓದುಗರಿಗೆ ನೀಡಿದ್ದಾರೆ.

**227**

**ಆಸೆಯೆಂಬವಳು ಆರನಾದಡೆಯೂ ತನ್ನತ್ತಲೆಳೆವಳು ನೋಡಾ,**

**ಈ ಆಸೆಯೆಂಬವಳು ಅವರಿವರೆನ್ನದೆ ಆರನಾದಡೆಯೂ**
**ಕೊಲಲಿಕೆ ಬಗೆವಳು.**
**ಈ ಆಸೆಯೆಂಬವಳಿಂದವೆ ನಿಮ್ಮಡಿಗಾಣದಿಪ್ಪೆ.**
**ಈ ಆಸೆಯೆಂಬವಳನೆಂದಿಂಗೆ ನೀಗಿ**
**ಎಂದು ನಿಮ್ಮನೊಡಗೂಡಿ ಬೇರಾಗದಂತಿಪ್ಪೆನೋ**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನವೇ ಹೀಗೆ, ಎಂತಹ ಹೆಸರುಳ್ಳ ತನುವನ್ನಾದರೂ ತನ್ನತ್ತ ಸೆಳೆಯುವುದು. ಅವರಿವರೆನ್ನದೆ ಆ ತನುವನ್ನೇ ಸಾಮ್ರಾಜ್ಯವನ್ನಾಗಿಸಿಕೊಂಡು ಆ ತನುವಿನ ಮೂಲಕ ಆಸೆಗಣ್ಣಿನಿಂದ ಒಮ್ಮೆ ಸುಖಿಸುತ್ತಾ, ಮತ್ತೊಮ್ಮೆ ದುಃಖಿಸುತ್ತಾ ಆ ತನುವನ್ನೇ ಕೊಲ್ಲುವಳು.

ತನುವನ್ನು ಹೆಣ್ಣು ಗಂಡು ಎಂದು ಗುರುತಿಸುವಂತಿಲ್ಲ. ತನುವನ್ನಾವರಿಸಿದ ಮನವೆಂಬ ಆಸೆಯುಳ್ಳವಳೇ ಹೆಣ್ಣು. ತನುವಿನಲ್ಲಿ ಸಂಗಮವಾದ ಮಹಾಜ್ಞಾನವೇ ಗಂಡು.

ಹೀಗೆ ತನು ಮನವೆಂಬ ಹೆಣ್ಣಿಗೆ ಜ್ಞಾನವೆಂಬ ಗಂಡಿಗೆ ಆಶ್ರಯವಾಗಿದೆ. ಹೆಣ್ಣು ಗಂಡಿನೊಂದಿಗೆ ಸಂಸಾರ ಹೂಡಿದಾಗ ಮನವೆಂಬ ಆಸೆಯುಳ್ಳವಳು ಅರಸಿಯಾಗುತ್ತಾಳೆ. ಜ್ಞಾನವೆಂಬ ಗಂಡು ಅರಸನಾಗುತ್ತಾನೆ. ಹೀಗೆ ಸತಿ ಪತಿ ಕೂಡಿದಾಗ ಮನದ ಆಸೆ ಹಿಂಗುತ್ತದೆ. ಆಸೆ ಹಿಂಗಿದ ಮನವೆಂಬ ಅರಸಿ ಅರಿವೆಂಬ ಅರಸನೊಂದಿಗೆ ಸಂಗಮವಾಗಿ ಬೇರಾಗದಂತೆ ಕಪಿಲಸಿದ್ಧ ಮಲ್ಲಿಕಾರ್ಜುನನು ತಾನಾಗುತ್ತದೆ.

**228**

**ಆಳುವ ಅರಸನಾ ಹೆಂಡತಿಯ ಹಾದರಗಿತ್ತಿಯೆಂದಡೆ**
**ಆಳುವ ಅರಸು ಕೈಕಾಲನು ತರಿಸದೆ ಬಿಡುವನೆ?**
**ಶರಣಸತಿ ಲಿಂಗಪತಿಯಪ್ಪ ಶಿವಭಕ್ತನ ಅಂತವನಿಂತವನೆಂದಡೆ,**
**ಅಘೋರ ನರಕದಲ್ಲಿಕ್ಕುವನವ್ವಾ, ನಮ್ಮ ಕಪಿಲಸಿದ್ಧ ಮಲ್ಲಿನಾಥ**

ಕಾಯವನ್ನೇ ಕೈಲಾಸ ಮಾಡಿಕೊಂಡು ಅರಿವಿನ ಅರಸ ಕಾಯದಲ್ಲಿ ವಿರಾಜಮಾನನಾಗಿದ್ದಾನೆ. ಕಾಯವನ್ನು ಆವರಿಸಿದ ಮನವೇ ಅರಿವಿನ ಅರಸನ ಅರಸಿಯಾಗಿದ್ದಾಳೆ. ಆದರೂ ಮನವೆಂಬ ಅರಸಿ ಅರಸನನ್ನು ಸಂಪೂರ್ಣ ಮರೆತು ಹೋಗಿದ್ದಾಳೆ. ಮನಕ್ಕೆ ತನ್ನ ಅರಸನ ಪರಿಚಯ ತನಗೇ ಇಲ್ಲದಂತಾಗಿದೆ. ಕೈಲಾಸವೇ ಆಗಬೇಕಾಗಿದ್ದ ಕಾಯವನ್ನು ತನ್ನ ವಶಕ್ಕೆ ತೆಗೆದುಕೊಂಡು ಮನವೆಂಬ ಅರಸಿ ಹಾದರಕ್ಕೆ ನಿಂತಿದ್ದಾಳೆ.

ಕಾಯ ಕಾಯವನ್ನು ಆಳುವುದೆಂದರೇನು? ಕಾಯ ಕಾಯಕ್ಕೆ ದಾಸನಾಗುವುದೆಂದರೇನು? ಕಾಯ ಕಾಯವನ್ನು ಹೆಣ್ಣೆಂದು ಗಂಡೆಂದು ಬೇರ್ಪಡಿಸುವುದೆಂದರೇನು? ಕಾಯ ಕಾಯವನ್ನು ಶ್ರೀಮಂತನೆಂದು, ಗುರುವೆಂದು, ಶಿಷ್ಯನೆಂದು ಗುರುತಿಸುವುದೆಂದರೇನು? ಕಾಯ ಕಾಯವನ್ನು ಧರ್ಮದಿಂದ ಜಾತಿ, ಮತ, ಪಂಥಗಳಿಂದ ಗುರುತಿಸಿ ಹೀಯಾಳಿಸುವುದೆಂದರೇನು? ಕಾಯ ಕಾಯದೊಂದಿಗೆ ಕಾಮದಿಂದ ಕ್ರೋಧದಿಂದ, ಲೋಭದಿಂದ, ಮೋಹ, ಮದ, ಮತ್ಸರದಿಂದ ಹರಿದು ತಿನ್ನುವುದೆಂದರೇನು? ಇದು ಹಾದರವಲ್ಲವೆ? ಕಾಯ ಕಾಯದೊಂದಿಗೆ ಹಾದರ

ಮಾಡುವುದು ಕಾಯದ ಕೆಲಸವಲ್ಲ. ಹೀಗೆ ಮಾಡುವ ಕಾಯವನ್ನು ಕಾಯದಿಂದಲೇ ಗುರುತಿಸಿ ನಿಂದೆ ಮಾಡುವುದೆಂದರೇನು? ಇದು ಕಾಯದ ಕಾಯಕವಲ್ಲ.

ಕಾಯ ಜಡ. ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಸಂಗ ಮಾಡಿ ನಾನಾ ಥರದ ಹಾದರ ಮಾಡುತ್ತದೆ. ಹೀಗಾಗಿ ಶರಣರು, ದಾಸರು, ತತ್ವಪದಕಾರರು ಮನವನ್ನು ಹಾದರಗಿತ್ತಿ ಎಂದು ಕರೆದಿದ್ದಾರೆ.

ಶರಣರು ಕಾಯವನ್ನು ಗುರುತಿಸಿ ಹಾದರಗಿತ್ತಿ ಎನ್ನಲಿಲ್ಲ. ಕಾಯವನ್ನಾವರಿಸಿದ ಮನವನ್ನು ಗುರುತಿಸಿ ಆ ಮನಕ್ಕೆ ಹಾದರಗಿತ್ತಿ ಎಂದು ಕರೆದರು.

ಮನ ಕಾಯದಲ್ಲಿ ಸಂಗಮವಾದ ಅರಿವಿನ ಅರಸನನ್ನು ವರಿಸಬೇಕಾಗಿತ್ತು. ಆತನನ್ನೇ ಗಂಡನನ್ನಾಗಿ ಮಾಡಿಕೊಳ್ಳಬೇಕಾಗಿತ್ತು. ತಾನು ಆತನಿಗೆ ಹೆಂಡತಿಯಾಗಬೇಕಾಗಿತ್ತು. ಆದರೆ, ಮನ ಕಾಯದೊಂದಿಗೆ ಸಂಗ ಮಾಡಿದುದಕ್ಕಾಗಿ ತಾನು ಶರಣರಿಂದ ಹಾದರಗಿತ್ತಿ ಎಂದು ಕರೆಸಿಕೊಂಡಿದೆ.

ಕಾಯ, ಕಾಯದ ಹಾದರ ಗುರುತಿಸುತ್ತದೆಯೇ ಹೊರತು ಕಾಯವನ್ನಾವರಿಸಿದ ಮನವೇ ಕಾಯದ ಹಾದರಕ್ಕೆ ಕಾರಣವೆಂದು ಮನಕ್ಕೆ ಹೊಳೆಯುವುದಿಲ್ಲ. ಮನ ತಾನು ಮಾಡಿದ ಹಾದರವನ್ನು ಕಾಯಕ್ಕೆ ಹೊರಿಸಿ ಕಾಯಕ್ಕೆ ಹಾದರದ ಹಣೆಪಟ್ಟಿ ಕಟ್ಟುತ್ತದೆ.

ಆಳುವ ಅರಸನ ಹೆಂಡತಿಯ ಹಾದರಗಿತ್ತಿಯೆಂದಡೆ ಆಳುವ ಅರಸ ಕೈಕಾಲನು ತರಿಸದೆ ಬಿಡುವನೆ?: ಇದು ಸೂಕ್ಷ್ಮಾತಿ ಸೂಕ್ಷ್ಮವಾದ ರಹಸ್ಯಮಯವಾದ ಸೂತ್ರ. ಮನಕ್ಕೆ ತನುವಿನಲ್ಲಿ ಸಂಗಮವಾದ ಅರಿವಿನ ಅರಸನೇ ತನ್ನ ಗಂಡನೆಂದು ತಾನು ಆ ಅರಸನ ಹೆಂಡತಿಯೆಂದು ಗೊತ್ತಿಲ್ಲದೇ ಇರುವುದರಿಂದ ತನುವನ್ನು ಆವರಿಸಿದ ಮನ ತನುವನ್ನು ಹಿಡಿದು ಮತ್ತೊಂದು ತನುವಿನೊಂದಿಗೆ ಹಾದರ ಮಾಡುತ್ತದೆ. ಈ ಹಾದರಕ್ಕೆ ಮನವೇ ಕಾರಣ. ಆದರೂ ಮನವನ್ನು ಏನೂ ಅನ್ನುವಂತಿಲ್ಲ. ಏಕೆಂದರೆ ಮನ ಸ್ವತಃ ಅರಿವಿನ ಅರಸನ ಹೆಂಡತಿ; ಸಾಕ್ಷಾತ್ ಲಿಂಗಯ್ಯನ ಹೆಂಡತಿ.

ಆಕೆಯನ್ನು ಹಾದರಗಿತ್ತಿ ಎಂದಡೆ ತನುವನ್ನು ಆಳುವ ಅರಿವಿನ ಅರಸ ಕಾಯವನ್ನೇ ಕೈಲಾಸವನ್ನಾಗಿಸಿಕೊಂಡು ಮನವನ್ನೇ ಅರ್ಧನಾರೀಶ್ವರಿಯನ್ನಾಗಿಸಿಕೊಂಡ; ಅರ್ಧನಾರೀಶ್ವರನೆಂದೇ ತನ್ನನ್ನು ಕರೆಯಿಸಿಕೊಂಡ. ಅಂತಹ ಅರಿವಿನ ಅರಸ, ಹಾದರಗಿತ್ತಿ ಎಂದವರ ಕೈಕಾಲನ್ನು ತರಿಸದೇ ಬಿಡುವನೇ?

ಮನವೆಂಬ ಕನ್ಯೆಗೆ ತಿಳಿಯುತ್ತಿಲ್ಲ. ಕಾಯಕ್ಕೆ ವಯಸ್ಸಾದರೇನಂತೆ ಮನ ಇನ್ನೂ ಕನ್ಯೆಯೇ ಆಗಿದ್ದಾಳೆ. ಮನದನ್ನೆಯನ್ನಾಗಿಸಿ ಕೊಳ್ಳಬೇಕಾದ ಅರಸನೇ ಆಕೆಯ ಹಾದರದ ಆಟವನ್ನು ಕನ್ಯೆಯ ಆಟವೆಂದೇ ತಿಳಿದು ಹುಸಿನಗೆಯಿಂದ ವೀಕ್ಷಿಸುವಾಗ ನಾನು ಹಾದರಗಿತ್ತಿ ಎಂದಡೆ ಅರಿವಿನ ಅರಸ ನನ್ನ ಕೈಕಾಲನ್ನು ತರಿಸದೆ ಬಿಡುವನೇ?

ಮನ ಅರಿವಿನ ಅರಸನಿಗೆ ಶರಣು ಹೋಗಿ ಶರಣ ಸತಿಯಾಗಿದೆ. ಅರಿವಿನ ಅರಸ ಲಿಂಗಯ್ಯನೆಂಬ ಪತಿಯಾಗಿದ್ದಾನೆ. ಶರಣ ಸತಿ ಲಿಂಗಪತಿಯೆಂಬ ಶಿವಭಕ್ತ ತನುವನ್ನು ಅಂತವ ನಿಂತವನೆಂದಡೆ ಅಘೋರ ನರಕದಲ್ಲಿಕ್ಕದೆ ಬಿಡುವನೇ? ಆತ ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥಯ್ಯ. ಮನವೆಂಬ ಕನ್ಯೆ ಆತನ ಹೆಂಡತಿ. ಅವರಿಬ್ಬರೂ ಕಾಯವನ್ನೇ ಕೈಲಾಸ ಮಾಡಿಕೊಂಡು ಕಾಯದಲ್ಲಿ ಸಂಸಾರ ಹೂಡಿದ್ದಾರೆ.

ಅಂಥವರನ್ನು ಅಂಥವನಿಂತವನೆನ್ನಲು ಸಾಧ್ಯವೇ? ಸಾಧ್ಯವಿಲ್ಲ. ಮನಕ್ಕೆ ತಿಳಿಯದಿದ್ದಕ್ಕಾಗಿ ಕಾಯವನ್ನು ಆವರಿಸಿದ ಮನ ಕಾಯವನ್ನು ನಿಂದಿಸುತ್ತಲಿದೆ.

ಈ ಸೂತ್ರ ತಿಳಿದು ಕಾಯವನ್ನು ಕೈಲಾಸ ಮಾಡಿಕೊಳ್ಳುವುದಕ್ಕಾಗಿಯೇ ಕಾಯ ಜನ್ಮ

ತಳೆದಿದೆ. ಇಂದಲ್ಲ ನಾಳೆ ತಿಳಿದೇ ತಿಳಿಯುತ್ತದೆ. ಸ್ವಲ್ಪ ತಡವಾಗಬಹುದು ಅಷ್ಟೇ.

**229**

**ಇಂತಪ್ಪ ಘನತರಲಿಂಗವ ಕರಸ್ಥಲದಲ್ಲಿ ಬಿಜಯಂಗೆಯ್ಸಿಕೊಂಡು**
**ಗುರು ತೋರಿದ ಸದ್ಭಕ್ತಿ ಕ್ರೀಯಲ್ಲಿರದೆ,**
**ಪಾದೋದಕ ಪ್ರಸಾದವ ಕೊಳ್ಳದೆ,**
**ಯೋಗವೆಂದು ಅದ್ವೈತವೆಂದು ಭಂಡನೆ ಬಳಸುತಿಪ್ಪ**
**ಮಿಟ್ಟಿಯ ಭಂಡರನೇನೆಂಬೆನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವೆಂದರೆ ನಿತ್ಯ ನಿರಂಜನ ಲಿಂಗ. ಅದು ರಂಜನೆಗೆ ಒಳಪಡುವ ವಸ್ತುವಲ್ಲ. ಆದರೂ ಮನ ಕಾಯವನ್ನು ಆವರಿಸಿರುವುದರಿಂದ ಕಾಯದ ಜೊತೆ ಸಂಗ ಮಾಡಿರುವುದರಿಂದ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ.

ಕರ ಎಂದರೆ ಅಂಗ. ಅಂಗದಲ್ಲಿ ಅರಿವಿನ ಲಿಂಗ ಸಂಗಮಗೊಂಡಿದೆ. ಅರಿವಿನ ಲಿಂಗವನ್ನು ತಿಳಿಯಬೇಕಾದ ಮನ ಅಂಗವನ್ನು ಆವರಿಸಿದೆ. ಇಂತಹ ಮನದ ಮೈದಡವಿ ಗುರುದೇವ ಅಂಗದಲ್ಲಿಯೇ ಸಂಗಮಗೊಂಡ ಅರಿವೆಂಬ ಗುರುದೇವನನ್ನು ಅಂಗದಲ್ಲಿ ಆವರಿಸಿದ ಮನಕ್ಕೆ ತೋರಿಸುತ್ತಾನೆ.

ಗುರುದೇವ ತೋರಿಸಿದ ಸದ್ಭಕ್ತಿ ಕ್ರಿಯೆಯಲ್ಲಿ ಇರದೇ ಮನ ಈ ಕಾಯಕವನ್ನು ಅನುಸರಿಸದೇ ಇರುವುದರಿಂದ ಅದಕ್ಕೆ ಪಾದೋದಕವೆಂದರೇನೆಂದು ಪ್ರಸಾದವೆಂದರೇನೆಂದು ತಿಳಿಯುತ್ತಿಲ್ಲ. ಹೀಗಾಗಿ ಮನಕ್ಕೆ ತಾನೇ ನಿರ್ಮಾಣ ಮಾಡಿಕೊಂಡ ಅಜ್ಞಾನವನ್ನು ತಾನೇ ಜೀರ್ಣಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನೋಡಿ, ಕೇಳಿ, ಮುಟ್ಟಿ, ಮೂಸಿಸಿ, ರುಚಿಸುವ ಕ್ರಿಯೆಯಲ್ಲಿ ಮನ ಸುಖ, ದುಃಖಗಳನ್ನು ಸೃಷ್ಟಿ ಮಾಡಿಕೊಳ್ಳುವುದರಿಂದ ಅದು ತನುವಿಗೆ ಪ್ರಸಾದವಾಗುತ್ತಿಲ್ಲ. ಪಾದೋದಕವಾಗುತ್ತಿಲ್ಲ, ಜ್ಞಾನೋದಕವಾಗುತ್ತಿಲ್ಲ.

ಕರ್ಮೇಂದ್ರಿಯಗಳಿಂದ ಭೋಗಿಸಿದ ಪದಾರ್ಥಗಳೆಲ್ಲ ತನುವಿನಲ್ಲಿಯೇ ಉಳಿದು ತನುವನ್ನೇ ಹಾವಾಗಿ ಕಚ್ಚುತ್ತಲಿವೆ.

ತನುವೆಂದರೆ ನಿತ್ಯ ನಿರಂಜನ. ಅದು ಅರಿವಿನ ತತ್ವದಿಂದ ಭರಿತವಾಗಿದೆ. ತನುವಿನಿಂದಲೇ ಹೊರಬಂದ ಅರಿವಿನ ಭಂಡಾರವನ್ನು ತನುವೇ ಬಳಸುವುದರಿಂದ ತನುವಿಗೆ ತನುವನ್ನು ಆವರಿಸಿದ ಮನಕ್ಕೆ ತಾನೇ ಅರಿವಿನ ಭಂಡಾರವೆಂದು ಹೊಳೆಯುತ್ತಿಲ್ಲ. ವೇದಗಳನ್ನು ಉಪನಿಷತ್ತುಗಳನ್ನು ಭಗವದ್ಗೀತೆ, ಬೈಬಲ್‌ಗಳನ್ನು ಗ್ರಂಥಸಾಹೇಬ ಖುರಾನನ್ನು ಬಳಸಿ ಹಗಲಿರುಳೆನ್ನದೆ ಪಠಿಸುತ್ತಲಿದೆ. ಅವು ತನುವಿನಿಂದ ಬಂದ ಭಂಡಾರಗಳೆಂದು ಭಂಡ ಮನಕ್ಕೆ ಅರಿವಾಗುತ್ತಿಲ್ಲ.

ಹೀಗಾಗಿ ಯೋಗವೆಂದು ಅದ್ವೈತವೆಂದು ಭಂಡವನೇ ಬಳಸುತ್ತಿಪ್ಪ ಮಿಟ್ಟೆಯ ಭಂಡರನೇನೆಂಬೆನೈಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನೆಂದು ಸಿದ್ಧರಾಮ ಶಿವಯೋಗಿಗಳು ತನುವನ್ನು ಆವರಿಸಿದ ಮನವನ್ನು ಎಚ್ಚರಿಸಿದ್ದಾರೆ.

**230**

**ಇಂತಪ್ಪ ಸತ್ಯಾರ್ಥವನರಿದು ಸರ್ವಪ್ರಪಂಚ ಮರೆದು**

**ಹಾಲುಳ್ಳಲ್ಲಿ ಹಬ್ಬವ ಮಾಡಿ, ಗಾಳಿ ಉಳ್ಳಲ್ಲಿ ತೂರಿಕೊಳ್ಳಿ !**
**ಬಳಿಕ ಅರಿಸಿದರುಂಟೆ ? ಪರಮ ಸುಖವು**
**ನಿಜಗುರು ಸ್ವತಂತ್ರ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ?**
**ಹರುಗೋಲ ಪಡೆದಲ್ಲಿ ತೊರೆಯ ದಾಂಟಿಕೊಳ್ಳಿರಣ್ಣಾ.**

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವಿನ ಸತ್ಯವನ್ನು ತಿಳಿದ ಬಳಿಕ, ಭೂತಕಾಲದ ತನುವಿನ ಸಕಲ ಪೂರ್ವಾಶ್ರಯಗಳನ್ನು ಅದರ ಪ್ರಪಂಚವನ್ನು ಮರೆಯಲೇಬೇಕು. ತನುವಿನಲ್ಲಿಯೇ ಸಂಗಮವಾದ ಅರಿವಿನ ಅಮೃತವನ್ನು ಉಂಡು ಅರಿವಿನ ಹಬ್ಬವನ್ನು ಮಾಡಲೇಬೇಕು. ಪೂರ್ವಾಶ್ರಯದ ಅಜ್ಞಾನವನ್ನು ಕಳಚಿಕೊಳ್ಳಲೇಬೇಕು.

ಅರಿವಿನ ಗಾಳಿ ಬೀಸಿದಾಗಲೇ ಮನ ತೂರಿಕೊಂಡು ಅಮೃತ ಸಮಾನವಾದ ಅರಿವಿನ ಊಟ ಉಣ್ಣದಿದ್ದರೆ ತನುವೇನು ಶಾಶ್ವತವಾಗಿ ಇರುವ ವಸ್ತುವೆ? ತನು ಹೋಗುವ ಮುನ್ನವೇ ತನುವಿನಲ್ಲಿಯೇ ಸಂಗಮವಾದ ಅರಿವಿನ ಅಡಿಗೆ ಉಣ್ಣುವುದು ಮನದ ಕೆಲಸವಾಗಬೇಕು. ಅಂದಾಗ ಮಾತ್ರ ಮನ ಘನಮನವಾಗುತ್ತದೆ. ತನುವಿನ ಆಯುಷ್ಯ ಮುಗಿದ ಬಳಿಕ ಹುಡುಕಿದರೆ ಸಿಗಲು ಸಾಧ್ಯವೇ ಪರಮ ಸುಖವು?

ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನೇ ಕಾಯಕ್ಕೆ ಜನ್ಮ ನೀಡಿದ. ಕಾಯವನ್ನು ಆವರಿಸಿದ ಮನಕ್ಕೂ ಜನ್ಮ ನೀಡಿದ. ಆ ಮನದಿಂದಲೇ ತನ್ನನ್ನು ತಿಳಿಯಲು ಮನಕ್ಕೆ ಪ್ರೇರಣೆ ನೀಡಿದ. ತನುವಿಗೆ ಅಂಟಿದ ಅಜ್ಞಾನದ ಸಾಗರವನ್ನು ಅರಿವಿನಿಂದ ದಾಟಲು ಸುಲಭವಾದ ಸೂತ್ರವನ್ನು ಹೆಣೆದ. ಕಾಯವನ್ನೇ ಹರಗೋಲಾಗಿಸಿಕೊಂಡು ದಣಿವಿಲ್ಲದೆ ಅಜ್ಞಾನದ ಸಾಗರ ದಾಟಿ ಅರಿವಿನ ಅಮೃತ ಉಣ್ಣಲು ಪ್ರೇರಣೆ ನೀಡಿದ.

ತನುವಿನ ಅಜ್ಞಾನವನ್ನು ಸಾರ್ವತ್ರಿಕ ಶಿಕ್ಷಣದಿಂದ ಕಳೆದುಕೊಳ್ಳಲು ಬರುವುದಿಲ್ಲ. ಶಿಕ್ಷಣದಲ್ಲಿ ನೀತಿ ಪಾಠಗಳಿವೆ. ಅವು ತನುವಿನಿಂದ ಹೊರಬಂದು ಪುಸ್ತಕದಲ್ಲಿ ಸಂಗ್ರಹಗೊಂಡಿವೆ. ಪುನಃ ತನುವಿನಲ್ಲಿ ಸಂಗ್ರಹಗೊಂಡು ಅಜ್ಞಾನಕ್ಕೆ ದಾರಿ ಮಾಡಿಕೊಡುತ್ತವೆ. ವೇದಿಕೆಗೆ ಮಾತ್ರ ಬಳಕೆಯಾಗುತ್ತವೆ.

ಮನದಿಂದಾಗಿ ತನುವಿಗೆ ಆಪತ್ಕಾಲ ಉಂಟಾದಾಗ ತನುವಿನಲ್ಲಿ ಸಂಗ್ರಹಗೊಂಡ ನೀತಿ ಶಿಕ್ಷಣ ತನುವಿನ ಸಹಾಯಕ್ಕೆ ಬರುವುದಿಲ್ಲ. ಅದೇನಿದ್ದರೂ ವೇದಿಕೆಗೆ ಮಾತ್ರ ಬಳಕೆಯಾಗುತ್ತದೆ. ತನುವನ್ನು ಆವರಿಸಿದ ಮನ ಯೋಚಿಸಬೇಕಾಗಿದೆ. ಅಂತರಾಳದ ಅರಿವಿನ ಸುಖ ಅನುಭವಿಸಿ ಸ್ವತಂತ್ರನಾಗಲೇಬೇಕಿದೆ.

ಕಾಯವಿದೆ. ಕಾಯದಲ್ಲಿ ಅರಿವು ಸಂಗಮವಾಗಿದೆ. ಕಾಯವನ್ನು ಮನ ಆವರಿಸಿದೆ. ಕಾಯ ಕಾಣುತ್ತದೆ. ಕಾಯವನ್ನು ಆವರಿಸಿದ ಮನೋಕಾಯ ಕಾಣುವುದಿಲ್ಲ. ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯವೂ ಕಾಣುವುದಿಲ್ಲ. ಸದ್ಗುರುವಿನ ದರುಶನದಿಂದಾಗಿ ಮನೋಕಾಯಕ್ಕೆ ಅರಿವಿನ ಕಾಯ ಕಾಣುತ್ತದೆ.

ಕಾಯ ಜಡ. ಇದು ಒಮ್ಮೆ ಇಲ್ಲವಾಗುತ್ತದೆ. ಇದಕ್ಕೆ ಸ್ವತಂತ್ರವಾದ ತನ್ನದೇ ಆದ ಶಕ್ತಿ ಇಲ್ಲ. ಅರಿವಿನ ಕಾಯದಿಂದಾಗಿ ಕಾಯ ಮತ್ತು ಮನೋಕಾಯ ಜನ್ಮ ಪಡೆದಿವೆ. ಮನೋಕಾಯಕ್ಕೆ ತಾನು ಯಾರು ಎಂದು ಅರಿವಾದಾಗ ಅದಕ್ಕೆ ಅರಿವೆಂಬ ಗುರುದೇವನ ಗಾಳಿ ಬೀಸುತ್ತದೆ. ಆ ಗುರುದೇವನಲ್ಲಿ ಮನೋಕಾಯ ಸಂಗಮವಾದಾಗ ಕಾಯ ಗುರು ಕಾಯವಾಗುತ್ತದೆ.

ಮನ ಇಂತಪ್ಪ ಸತ್ಯಾರ್ಥವನು ಅರಿತು, ಅಜ್ಞಾನದ ಸರ್ವ ಪ್ರಪಂಚವನ್ನು ಮರೆತು ಹೋಗುತ್ತದೆ, ಸುಖ ದುಃಖಗಳನ್ನು ಕೊಡವಿ ಅರಿವಿನ ಪರಮ ಸುಖವನ್ನು ಅನುಭವಿಸುತ್ತದೆ.

ಮನೋಕಾಯು, ಅರಿವೆಂಬ ಗುರುದೇವನ ಕೃಪೆಯಿಂದ, ಕಾಯುವನ್ನೇ ಹರಗೋಲಾಗಿಸಿಕೊಂಡು ಅಜ್ಞಾನದ ತೊರೆಯ ದಾಟುತ್ತದೆ.

**231**

**ಇಂತು ನಿನ್ನಯ ಭವದ ಚಿಂತೆಗೆಟ್ಟಿತು**
**ಬ್ರಹ್ಮ ನಿಶ್ಚಿಂತನಾದನೈ ,**
**ಸಕಲದಲ್ಲಿ ವಸ್ತು ಹಲವನು ಜರಿದು**
**ತತ್ತ್ವ ಮೂವತ್ತಾರ ವ್ಯರ್ಥವೆಂದೇ ಕಳೆದು,**
**ಸುಚಿತ್ತದಿಂದಾ ಮತ್ತೆ**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ತತ್ತ್ವ ತುರೀಯದೊಳಗೆ ಲೀಯವಾದೆ.**

ತತ್ತ್ವ ಎನ್ನುವುದು ಇಪ್ಪತ್ತೈದು ಅಲ್ಲ ; ಮೂವತ್ತಾರು ಅಲ್ಲ. ತತ್ತ್ವ ಎನ್ನುವುದು ಒಂದೇ. ಅದು ತನುವಿನಲ್ಲಿ ತನ್ಮಯವಾಗಿದೆ. ತನುವನ್ನು ಸೋಂಕದೆ ತನುವನ್ನು ಬೆಳಗುತ್ತದೆ. ತನುವಿಗೆ ಆಧಾರವಾಗಿದೆ. ತನುವಾಗಿ ತನುವಿಗೆ, ತನುವನ್ನು ಆವರಿಸಿದ ಸೂಕ್ಷ್ಮ ತನುವಿಗೆ ಅರಿವಿನ ಪಾಠ ಮಾಡುತ್ತಲಿದೆ.

ಅರಿವಿನ ಪಾಠ ಮಾಡುವ, ಅರಿವೆಂಬ ಗುರುದೇವನ ತನುವನ್ನು, ತನುವನ್ನು ಆವರಿಸಿದ ಸೂಕ್ಷ್ಮತನುವಿನ ಮೂಲಕ ತಿಳಿಯಬೇಕಿದೆ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ತನುವೇ ತತ್ತ್ವವೇತ್ತ ತನುವಾಗಿದೆ. ಮನವೆಂಬ ಸೂಕ್ಷ್ಮ ತನು ತನುವನ್ನು ಹಿಡಿದು ಇಪ್ಪತ್ತೈದು ತತ್ತ್ವಗಳನ್ನು ಮೂವತ್ತಾರು ತತ್ತ್ವಗಳನ್ನು ಕಲಿತು ತನುವಿನ ಜನನ ಮರಣಗಳ ಚಿಂತೆ ಬಿಡಲು ಸಾಧ್ಯವಿಲ್ಲ. ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವಿಲ್ಲ.

ತನುವಿನಲ್ಲಿಯೇ ತತ್ತ್ವ ಸಂಗಮವಾಗಿದ್ದರೂ ಕೂಡಾ, ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ತತ್ತ್ವವೇತ್ತ ತನುವಿನಲ್ಲಿ ಕೂಡುವುದು ಬಿಟ್ಟು, ತನುವಿನಿಂದಲೇ ಹೊರಬಂದ ತತ್ತತ್ವಗಳನ್ನು ಉರು ಹೊಡೆದು, ತಾನು ತತ್ತ್ವವೇತ್ತ ತನುವೆಂದು ಭ್ರಮೆಯಿಂದ ಕುಣಿಯುತ್ತದೆ. ಆ ಭ್ರಮೆಯಲ್ಲಿಯೇ ಮುಳುಗಿ ಪಂಡಿತನೆಂದು ಕರೆಯಿಸಿಕೊಳ್ಳುತ್ತದೆ. ಆದರೆ ತಾನು ಸ್ವತಃ ಚಿಂತೆಗೆಟ್ಟ ನಿಶ್ಚಿಂತ ತನುವಾಗುವುದಿಲ್ಲ. ಬ್ರಹ್ಮ ತನುವಾಗುವುದಿಲ್ಲ.

ತನು ಐದು ತತ್ತ್ವಗಳಿಂದ, ಇಪ್ಪತ್ತೈದು ತತ್ತ್ವಗಳಿಂದ, ಮೂವತ್ತಾರು ತತ್ತ್ವಗಳಿಂದ ಕೂಡಿದ ತನುವೆಂದು ಹಲವಾರು ತನುಗಳನ್ನು ತಲೆದೂಗುವಂತೆ ಒಪ್ಪಿಸಬಹುದೇ ಹೊರತು, ಅನುಭವದ ಮೂಲಕ ತಾನೇ ಆ ತತ್ತ್ವವೇತ್ತ ತನುವೆಂದು ಖಚಿತವಾಗಿ ಹೇಳಲು ಹಾಗು ತತ್ತ್ವದ ಆನಂದವನ್ನು ಅನುಭವಿಸಲು ಸಾಧ್ಯವಾಗುವುದಿಲ್ಲ.

ತನು ಒಂದೇ. ತನುವಿನ ತತ್ತ್ವ ಒಂದೇ. ತನುವನ್ನು ಆವರಿಸಿದ ಮನ ಒಂದೇ. ತನುವಿನ ತತ್ತ್ವವನ್ನು ತನುವನ್ನು ಆವರಿಸಿದ ಮನದಿಂದಲೇ ತಿಳಿದಾಗ ತತ್ತ್ವ ಮೂವತ್ತಾರು ವ್ಯರ್ಥವೆಂದೇ ಮನಕ್ಕೆ ಅರಿವಾಗುತ್ತದೆ. ತನುವಿನ ತತ್ತ್ವ ತಿಳಿಯಲು ಹೋದ ಮನವೇ ಘನಮನವಾಗುತ್ತದೆ.

ಸುಚಿತ್ತದಿಂದ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ತತ್ತ್ವ ತುರೀಯದೊಳಗೆ ಲೀಯವಾಗುತ್ತದೆ.

232

**ಇಂತು ಮಾಯೆಯ ಮುಖವ ಸತತಂ ಗೆಲುವಾತ**
**ನಿಶ್ಚಿಂತನಕ್ಕು ತಾನಿಹಪರದಲಿ,**
**ನಿಶ್ಚಿಂತ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಲ್ಲಿ**
**ಸತತಂ ಇಪ್ಪ ತಾನು ಆತನಾಗಿ.**

''ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರಣ್ಣಾ. ಸತ್ಯವ ನುಡಿವುದೇ ಸ್ವರ್ಗಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ''.

ಸದಾ ಸತ್ಯವನ್ನೇ ನುಡಿಯುವ ಕಾಯ ಕಾಯದಲ್ಲಿ ಸಂಗಮವಾಗಿದೆ. ಸದಾ ಮಿಥ್ಯವನ್ನೇ ನುಡಿಯುವ ಕಾಯ ಕಾಯವನ್ನು ಆವರಿಸಿದೆ. ಸ್ಥೂಲ ಕಾಯ ಇವೆರಡೂ ಕಾಯಗಳಿಗೆ ಉಪಕರಣವಾಗಿದೆ.

ಇಂತು ಮಾಯೆಯ ಮುಖವ ಸತತಂ ಗೆಲುವಾತ ನಿಶ್ಚಿಂತನಕ್ಕು ತಾನಿಹಪರದಲಿ: ಇಹ ಪರ ಎನ್ನುವ ಎರಡು ಶಬ್ದಗಳನ್ನು ಬಳಿಸಿದ್ದಾರೆ. ಇಹ ಎಂದರೆ ಮರ್ತ್ಯಲೋಕ; ಪರ ಎಂದರೆ ಸ್ವರ್ಗಲೋಕ.

ಸ್ಥೂಲ ಕಾಯದಲ್ಲಿ ಇಹಲೋಕದ ಕಾಯವೊಂದಿದೆ. ಇದು ಮಾಯಾಮುಖವುಳ್ಳ ಕಾಯ. ಹಾಗೆಯೇ ಪರಲೋಕದ ಕಾಯ ಒಂದಿದೆ. ಇದು ಸದಾ ನಿಶ್ಚಿಂತ ಕಾಯ.

ಸ್ಥೂಲ ಕಾಯವನ್ನು ಸದಾ ಚಿಂತೆಯಲ್ಲಿ ಮುಳಗಿಸಿ ಮಾಯಾ ಕೋಲಾಹಲವನ್ನುಂಟು ಮಾಡುವ ಕಾಯಕದಲ್ಲಿ ಮನೋಕಾಯ ತನ್ನನ್ನು ತೊಡಗಿಸಿಕೊಂಡಿದೆ. ಹಾಗೆಯೇ:

ಸ್ಥೂಲ ಕಾಯವನ್ನು ಸದಾ ನಿಶ್ಚಂತೆಯ ಕಾಯಕದಲ್ಲಿ ಕಾರಣಕಾಯ ತನ್ನನ್ನು ತೊಡಗಿಸಿಕೊಂಡಿದೆ.

ಸ್ಥೂಲ ಕಾಯದ ಮೇಲೆ ಸೂಕ್ಷ್ಮ ಕಾಯ ತನ್ನ ಮಾಯಾಮಯವಾದ ಬಲೆಯನ್ನು ಬೀಸಿ ತನ್ನ ವಶದಲ್ಲಿಟ್ಟುಕೊಂಡಿರುವುದರಿಂದ ಅದು ಸದಾ ಚಿಂತೆಯಲ್ಲಿರುತ್ತದೆ.

ಗಿಡ ಮರಗಳಿಗಿಲ್ಲದ ಚಿಂತೆ, ಪ್ರಾಣಿ ಪಶು ಪಕ್ಷಿಗಳಿಗಿಲ್ಲದ ಚಿಂತೆ, ಉರುಗ ಕೀಟ ಜಲಚರಗಳಿಗಿಲ್ಲದ ಚಿಂತೆ ಅರಿವಿನ ಕಾಯಕ್ಕೆ ಸುತ್ತಿಕೊಂಡಿದೆ. ಜ್ಞಾನದ ಮರ, ಬೋಧೀ ವೃಕ್ಷ ಎಂದು ಕರೆಯಿಸಿಕೊಂಡು ಬುದ್ಧನಂತೆ ಸದಾ ನಿಶ್ಚಿಂತೆಯಿಂದ ಸುಖಿಸಬೇಕಾದ ಕಾಯ ಮಾಯೆಯ ಬಲೆಯಲ್ಲಿ ಸಿಲುಕಿಕೊಂಡಿದೆ.

ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವು ಗಂಡಲ್ಲ ಹೆಣ್ಣೂ ಅಲ್ಲ. ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಇವು ಕೂಡಾ ಗಂಡಲ್ಲ ಹೆಣ್ಣೂ ಅಲ್ಲ. ಮನೋ ಕಾಯದ ಅಜ್ಞಾನದ ಮಾಯಾ ಬಲೆ ಸ್ಥೂಲಕಾಯದ ಮೇಲೆ ಚೆಲ್ಲಿ ಕಾಯವನ್ನು ಹೆಣ್ಣೆಂದು ಕರೆದುಕೊಂಡಿದೆ; ಕಾಯವನ್ನು ಗಂಡೆಂದು ಕರೆದುಕೊಂಡಿದೆ. ಶ್ರೀಮಂತ ಬಡವನೆಂಬ ಅಜ್ಞಾನ ಹೇರಿಕೊಂಡು ಅರಿವಿನ ಶ್ರೀಮಂತಿಕೆಯಿಂದ ಬಹುದೂರ ಉಳಿದು ತನಗೆ ತಾನೇ ವಂಚನೆಗೆ ಒಳಗಾಗಿದೆ.

ಮನೋ ಕಾಯಕ್ಕೆ ಅರಿವೆಂಬ ಗುರುದೇವನ ಕಾಯದ ದರುಶನವಾಗದಿದ್ದಕ್ಕಾಗಿ, ಮನೋಕಾಯ ಸ್ಥೂಲ ಕಾಯದ ಮೇಲೆ ತನ್ನ ಮಾಯದ ಬಲೆ ಬೀಸಿ ಸಿದ್ಧಾರ್ಥನನ್ನು, ವರ್ಧಮಾನನನ್ನು ರಾಜನನ್ನಾಗಿಸಿತು. ಇತರ ಕಾಯಗಳನ್ನು ಪ್ರಧಾನಿ, ಸೈನಿಕರನ್ನಾಗಿಸಿತು.

ಸೇವಕ, ಪ್ರಜೆಗಳನ್ನಾಗಿಸಿತು. ಒಂದು ಕಾಯವನ್ನು ಹೆಂಡತಿಯನ್ನಾಗಿಸಿತು; ಮತ್ತೊಂದು ಕಾಯವನ್ನು ಗಂಡನನ್ನಾಗಿಸಿತು. ಕಾಯಕ್ಕೆ ಜಾತಿ, ಮತ, ಪಂಥ ಧರ್ಮದ ಮಾಯಾ ಬಲೆಯನ್ನು ಬೀಸಿ ಸುಖ ದುಃಖಗಳನ್ನುಂಟು ಮಾಡಿತು. ಯುದ್ಧ ಸಾವು ನೋವುಗಳಿಂದ ಸದಾ ಜರ್ಜರಿತವಾದ ಕಾಯ, ಕಾಯದಿಂದಲೇ ದುಃಖ ಅನುಭವಿಸಿ, ಕಾಯದಿಂದಲೇ ಸುಳ್ಳು ಸುಖವನ್ನು ಸದಾ ಅನುಭವಿಸುತ್ತಾ ಕಾಯದಲ್ಲಿಯೇ ಇದ್ದ ಅರಿವಿನ ಕಾಯವನ್ನು ಮನೋಮಯವಾದ ಮಾಯಾ ಕಾಯ ಮರೆತೇ ಹೋಯಿತು.

ಸಿದ್ಧಾರ್ಥ ವರ್ಧಮಾನರಿಬ್ಬರೂ ರಾಜಕುಮಾರರು ಇವರಿಗೆ ಯಾವ ಕೊರತೆಯೂ ಇರಲಿಲ್ಲ. ಆದರೂ ಕಾಯವನ್ನು ಆವರಿಸಿದ ಮಾಯಮಯವಾದ ಮನದ ಉಪಟಳ ತಡೆಯಲು ಆಗಲಿಲ್ಲ. ಮನೋಕಾಯದಿಂದಲೇ ಬುದ್ಧಕಾಯದತ್ತ ಅಂದರೆ ಅರಿವೆಂಬ ಗುರುದೇವನ ಕಾಯದತ್ತ ಪಯಣಿಸಿದರು. ಆಗ ಸ್ಥೂಲಕಾಯವೇ ಬುದ್ಧಕಾಯವಾಗಿ ಪರಿವರ್ತನೆಯಾಯಿತು.

ಹಿಂದೆ ರಾಜಕುಮಾರರಾಗಿದ್ದರು. ಸಿದ್ಧಾರ್ಥ ವರ್ಧಮಾನ ಎಂದು ಕರೆಯಿಸಿಕೊಂಡರು. ಮಾಯಾ ಬಲೆಯನ್ನು ಕಿತ್ತೊಗೆದು ಬುದ್ಧಕಾಯದಲ್ಲಿ ಸಂಗಮವಾದರು. ಬುದ್ಧ ಮಹಾವೀರ ಎಂದು ಕರೆಯಿಸಿಕೊಂಡರು. ನಿಶ್ಚಿಂತರಾದರು. ಇಹಲೋಕದ ಮಾಯಾಕಾಯ, ಪರಲೋಕದ ನಿಶ್ಚಿಂತಕಾಯದಲ್ಲಿ ಒಂದಾಗಿ, ಸ್ಥೂಲಕಾಯವೇ ಬುದ್ಧಕಾಯವೆಂದು ಕರೆಯಿಸಿಕೊಂಡಿತು.

ಅರಿಷ್ಟಡ್ವರ್ಗಗಳು, ಸಪ್ತ ವ್ಯಸನಗಳು, ಅಷ್ಟಮದಗಳು ಉದುರಿ ಬಿದ್ದವು. ಇಹಪರದಲ್ಲಿ ನಿಶ್ಚಿಂತನಾದ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ.

ಸಕಲ ಕಾಯಗಳು ಅರಿವಿನ ಕಾಯವಾಗಿ ಪರಿವರ್ತನೆಗೊಳ್ಳುವುದಕ್ಕಾಗಿ ಜನ್ಮ ತಳೆದಿವೆ. ಆದರೆ ಮರೆವಿನ ಮಾಯಾಕಾಯದ ಸುಖ ದುಃಖಗಳಿಗೆ ತಮಗೆ ತಿಳಿಯದಂತೆ ತಾವೇ ಬಂಧಿಯಾಗಿವೆ.

ಬುದ್ಧ ಮಹಾವೀರ ಕ್ರಿಸ್ತ ಕ್ರಿಷ್ಣ ಪೈಗಂಬರ ಬಸವಾದಿ ಶರಣರು ದಾಸವರೇಣ್ಯರು ತತ್ತ್ವಪದಕಾರರು ಕಾಯವನ್ನೇ ಕೈಲಾಸ ಮಾಡಿಕೊಂಡು ನಿಶ್ಚಿಂತರಾದರು. ಇವರಂತೆ ಸಕಲ ಕಾಯಗಳೂ ನಿಶ್ಚಿಂತ ಕಾಯಗಳಾಗಲು ಸಾಧ್ಯ. ನಿಶ್ಚಿಂತ ಕಾಯಗಳನ್ನು ಆರಾಧಿಸಿದರೆ ಕಾಯ ನಿಶ್ಚಿಂತವಾಗಲು ಸಾಧ್ಯವಿಲ್ಲ. ಆಲಯಗಳನ್ನು ನಿರ್ಮಿಸಿ ಉತ್ಸವಗಳನ್ನು ಮಾಡಿದರೂ ನಿಶ್ಚಿಂತನಾಗಲು ಸಾಧ್ಯವಿಲ್ಲ . ಹಿಂದು ಮುಸಲ್ಮಾನ ಕ್ರೈಸ್ತ ಬೌದ್ಧ ಫಾರ್ಸಿ ಸಿಖ್ ಧರ್ಮ ಸ್ವೀಕರಿಸಿ ಜ್ಞಾನಿಯಾಗಲು ಸಾಧ್ಯವಿಲ್ಲ.

ಕಾಯ ಮಾಯಾ ಮುಖವನ್ನು ಕಳಚಿಕೊಂಡು ಅರಿವಿನ ಕಾಯಕದಲ್ಲಿ, ತನ್ನನ್ನು ತಾನು ತೊಡಗಿಸಿಕೊಂಡರೆ ಸಾಕು ನಿಶ್ಚಿಂತನಾಗುತ್ತದೆ. ಬುದ್ಧನೇ ತಾನಾಗುತ್ತದೆ.

**233**

**ಇಂತು ಹಲವು ಪರಿಯ ನಿಶ್ಚಿಂತರಪ್ಪರೈ ,**
**ಚಿಂತೆಗೆಟ್ಟಪ್ಪರಿಹಪರ ಲೋಕವಾ.**
**ನಿಶ್ಚಿಂತ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಸಚ್ಚಿದಾನಂದಮಯರಪ್ಪರಯ್ಯಾ .**

ಚಿಂತೆಗೆಟ್ಟವರು; ತಮ್ಮ ಚಿಂತೆಯನ್ನು ತಾವೇ ಕೆಡಿಸಿಕೊಂಡವರು. ತನುವನ್ನು ಆವರಿಸಿದ

ಮನವು, ತನುವನ್ನು ಹಿಡಿದು ಹಲವಾರು ಸುಖ ಬಯಸಿ ಸ್ಥೂಲ ತನುವಿಗೆ ಚಿಂತೆಯನ್ನು ಹೇರುತ್ತದೆ. ಮನ, ತಾನು ಬಯಸಿದ ವಸ್ತು ತನುವಿನ ಮೂಲಕ ತನಗೆ ಸಿಗುವವರೆಗೆ ತನುವಿಗೆ ಸಮಾಧಾನವಿಲ್ಲದಂತೆ ಮಾಡುತ್ತದೆ.

ವಸ್ತುವಿನ ಸತ್ಯ ಅರಿತರೆ; ವಸ್ತು ತನಗೆ ಬೇಕಿಲ್ಲ. ಆದರೆ ವಸ್ತುವಿನ ಮೇಲೆ ಬಯಕೆ ಮಾಡಿದ ಮನಕ್ಕೆ ವಸ್ತುವಿನ ಸತ್ಯ ಅರಿವಾಗುವುದಿಲ್ಲ. ವಸ್ತುವಿನ ಬಯಕೆ ತೀರುವುದಿಲ್ಲ. ಒಂದಾದ ನಂತರ ಮತ್ತೊಂದು ವಸ್ತುವನ್ನು ಬಯಸುತ್ತಾ, ಅದನ್ನು ತನುವಿನಿಂದ ಪಡೆದು ಮನ ಸುಖಿಸುತ್ತಾ ತನುವಿನ ಆಯುಷ್ಯವನ್ನು ಸದಾ ಚಿಂತೆಯಲ್ಲಿಯೇ ಕಳೆದು ತಾನು ಸುಖಿಸುತ್ತದೆ.

ತನುವಿನಲ್ಲಿಯೇ ಅರಿವಿನ ಕಾಯ ಒಂದಿದೆ. ಇದು ಮನದ ಬೇಡಿಕೆಯನ್ನು ಖಂಡಿಸಿ ಮನಕ್ಕೆ ಅರಿವಿನ ಪಾಠ ಮಾಡುತ್ತದೆ. ಆದರೂ ಮನ ಅರಿವಿನ ಮಾತನ್ನು ತಳ್ಳಿ ತನ್ನ ಬೇಡಿಕೆಯ ವಸ್ತುವನ್ನು ಪಡೆಯಲು ತನುವಿಗೆ ಚಿಂತೆ ಒಡ್ಡುತ್ತದೆ.

ಮನ ಅರಿವಿನ ತನುವಿನ ಮೂಲಕ ವಸ್ತುವನ್ನು ನೋಡಿದರೆ ವಸ್ತುವಿನ ಸತ್ಯ ಮನಕ್ಕೆ ಗೋಚರವಾಗಿ ಮನದ ಬೇಡಿಕೆ ಉದುರಿ ಬೀಳುತ್ತದೆ.

ಉದಾ : ಚಿನ್ನದ ಸತ್ಯ ಮನದ ಅರಿವಿಗೆ ಬಾರದಿದ್ದರೆ ಅದನ್ನು ಕೊಳ್ಳಲು ಹಗಲಿರುಳು ದುಡಿಯುತ್ತದೆ. ಕೊಂಡು ಶ್ರೀಮಂತನೆನ್ನಿಸಿಕೊಳ್ಳುತ್ತದೆ; ಚಿನ್ನ ಕೊಂಡು ಸದಾ ಸಂಗ್ರಹ ಮಾಡುವುದರಲ್ಲಿಯೇ ಮನ ತನುವನ್ನು ತೊಡಗಿಸುತ್ತದೆ.

ಚಿನ್ನ ಕೊಳ್ಳಲು ಅಶಕ್ತವಾದ ತನುವಿಗೆ ಕಳವು ಮಾಡಿ ಚಿನ್ನ ಪಡೆಯಲು, ಮನ ಪ್ರೇರಣೆ ನೀಡುತ್ತದೆ. ಮನ, ತನುವಿಗೆ ಚಿನ್ನದ ಆಸೆ ಸೃಷ್ಟಿ ಮಾಡಿ ಒಂದು ತನುವಿಗೆ ಶ್ರೀಮಂತನ ಹಣೆಪಟ್ಟಿ ಕಟ್ಟುತ್ತದೆ. ಮತ್ತೊಂದು ತನುವಿಗೆ ಕಳ್ಳನ ಹಣೆಪಟ್ಟಿ ಕಟ್ಟುತ್ತದೆ.

ಕದಿಯುವಾಗ ಅಡ್ಡಿಪಡಿಸಿದರೆ, ಶ್ರೀಮಂತನನ್ನು ಕೊಂದು ಕಳ್ಳ ಚಿನ್ನ ಪಡೆಯುತ್ತಾನೆ. ಕದಿಯುವಾಗ ಸಿಕ್ಕಿ ಬಿದ್ದರೆ ಶ್ರೀಮಂತ ಕಳ್ಳನನ್ನು ಕೊಲ್ಲುತ್ತಾನೆ. ವಸ್ತುವಿನ ಸತ್ಯ ತಿಳಿಯದಿದ್ದಕ್ಕಾಗಿ ಅರಿವಿನ ಎರಡೂ ತನುಗಳು ವ್ಯರ್ಥ ಪ್ರಾಣ ಕಳೆದುಕೊಳ್ಳುತ್ತವೆ.

ಮನ, ತನುವಿನಲ್ಲಿಯೇ ಇದ್ದ ಅರಿವನ್ನು ಬಳಕೆ ಮಾಡಿಕೊಂಡು ಚಿನ್ನ ನೋಡಿದರೆ; ಅದೊಂದು ಹಳದಿ ಬಣ್ಣದ ಲೋಹವಾಗಿ ಕಾಣುತ್ತದೆ ! ಕಪ್ಪು ಬಣ್ಣದ ಲೋಹವನ್ನು ಕಬ್ಬಿಣವೆಂದು ಹೇಗೆ ಮುಟ್ಟುವುದಿಲ್ಲವೋ; ಹಾಗೆಯೇ ಹಳದಿ ಬಣ್ಣದ ಲೋಹವೆಂದು ಅರಿವಿನ ಮೂಲಕ ಮನಕ್ಕೆ ಅರಿವಾಗಿ ತನುವಿನಲ್ಲಿ ರಸಾಯನಿಕ ಕ್ರಿಯೆಯನ್ನು ಸೃಷ್ಟಿ ಮಾಡುವುದಿಲ್ಲ.

ಮನ, ಕಪ್ಪು ಲೋಹವನ್ನು ಅಲಕ್ಷ ಮಾಡಿದಂತೆ, ಹಳದಿ ಬಣ್ಣದ ಲೋಹವನ್ನು ಅಲಕ್ಷ ಮಾಡುತ್ತದೆ. ರಾಜ ಸೈನಿಕರನ್ನು ಸಂಘಟಿಸಿ ಯುದ್ಧ ಮಾಡುವುದಿಲ್ಲ, ಕಳ್ಳ ಕಳುವು ಮಾಡುವುದಿಲ್ಲ. ಶ್ರೀಮಂತ ಚಿನ್ನ ಸಂಗ್ರಹ ಮಾಡುವುದಿಲ್ಲ. ಶ್ರೀಮಂತ, ರಾಜ, ಕಳ್ಳ, ಬಡವ ಎಂದು ಕರೆಯಿಸಿಕೊಳ್ಳುವ ಯಾವ ತನುಗಳೂ ಇರುವುದಿಲ್ಲ. ಹಲವಾರು ಪರಿಪರಿಯ ಚಿಂತೆಗಳೆಲ್ಲ ಉದುರಿ ಬಿದ್ದು ಸಕಲ ತನುಗಳೂ ನಿಶ್ಚಿಂತವಾಗುತ್ತವೆ.

ಇಹಪರ ಲೋಕವೆಂದು ಭಿನ್ನ ಭಿನ್ನ ದೃಷ್ಟಿಕೋನದಿಂದ ನೋಡದೆ ಸಕಲ ತನುಗಳು ವಸುದೈವ ಕುಟುಂಬಕಂ ಎಂಬ ಸೂತ್ರದಡಿಯಲ್ಲಿ ಪರಮಾನಂದದಿಂದ ಬದುಕುತ್ತವೆ.

ಮನದ ಚಿತ್ತ ಸತ್ಯದ ಮೇಲೆ ಬಿದ್ದು, ಆ ಸತ್ಯದಲ್ಲಿಯೇ ಚಿತ್ತ ಸಂಗಮವಾಗಿ, ಸಚ್ಚಿದಾನಂದಮಯವಾಗುತ್ತದೆ. ಸಕಲರೂ ಸಚ್ಚಿದಾನಂದಮಯರಪ್ಪರಯ್ಯ; ನಿಶ್ಚಿಂತ ಕಪಿಲಸಿದ್ಧ ಮಲ್ಲಿಕಾರ್ಜುನರೇ ತಾವಾಗಿ, ಎಂಬ ಸೂತ್ರವನ್ನು ಓದುಗರಿಗೆ ನೀಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**ಇಂದ್ರಿಯಾರ್ಪಣ ಸುಖಾರ್ಪಣವಾಯಿತ್ತಯ್ಯಾ**
**ಚೆನ್ನಬಸವಣ್ಣಾ ನಿಮ್ಮ ಅರಿವಿನಿಂದ;**
**ಇಂದ್ರಿಯಾರ್ಪಣ ನಿಜಾರ್ಪಣವಾಯಿತ್ತಯ್ಯಾ**
**ಚೆನ್ನಬಸವಣ್ಣಾ ನಿಮ್ಮ ಭಾವದಿಂದ;**
**ಇಂದ್ರಿಯಾರ್ಪಣ ಗುರುಮುಖಕ್ಕೆ ಯೋಗ್ಯವಾಯಿತ್ತಯ್ಯಾ**
**ಚೆನ್ನಬಸವಣ್ಣಾ ನಿಮ್ಮ ದಯದಿಂದ;**
**ಕಪಿಲಸಿದ್ಧ ಮಲ್ಲಿನಾಥಯ್ಯ, ನಿಮಗೆ ಚೈತನ್ಯ.**

ಇಂದ್ರಿಯಗಳಲ್ಲಿ ಇಂದ್ರಿಯಗಳೂ ಇವೆ; ಜ್ಞಾನೇಂದ್ರಿಯಗಳೂ ಇವೆ. ನೋಡುವ ದೃಶ್ಯದ ಮೂಲಕ ತನುವಿಗೆ ಸುಖವಾಗುತ್ತದೆ; ದುಃಖವಾಗುತ್ತದೆ; ದ್ವೇಷ, ಅಸೂಯೆ, ಸಿಟ್ಟು, ನಾಚಿಕೆ ಉಂಟಾಗುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ದೃಶ್ಯದ ಮೂಲಕ ತನುವಿನಲ್ಲಿ ಹರಿದು; ತನು ಕೆರಳುತ್ತದೆ ಅಥವಾ ತನುವಿನಲ್ಲಿ ಸುಖ ದುಃಖಗಳು ಉಂಟಾಗುತ್ತವೆ. ಇದು ಇಂದ್ರಿಯದ ಕೆಲಸ. ಕಿವಿ, ಮೂಗು, ಚರ್ಮ, ನಾಲಿಗೆಯ ಕೆಲಸ ಕೂಡಾ ಹೀಗೆಯೇ ಇರುತ್ತದೆ.

ಪಂಚೇಂದ್ರಿಯಗಳಲ್ಲಿ ಹುಟ್ಟಿದ ಅಜ್ಞಾನ ಆಲಯಗಳಿಗೆ ಸುತ್ತಿ ಕಳೆದುಕೊಳ್ಳಲು ಬರುವುದಿಲ್ಲ. ಸಾತ್ವಿಕನ ಮುಖವಾಡ ಧರಿಸಿ ನಾಟಕದ ಮಾತುಗಳನ್ನಾಡಿದರೆ ತೊಲಗುವುದಿಲ್ಲ. ಶಾಲಾ ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ಓದಿದರೂ ಇಂದ್ರಿಯಗಳ ಅಜ್ಞಾನ ತೊಲಗುವುದಿಲ್ಲ. ಅಷ್ಟೇಕೆ ಅಜ್ಞಾನ ಹೇಗೆ ಕಳೆದುಕೊಳ್ಳಬೇಕೆಂಬ ಚಿಂತನೆ ಕೂಡಾ ಆಯಾ ಇಂದ್ರಿಯಗಳಲ್ಲಿ ಹುಟ್ಟುವುದಿಲ್ಲ. ಗುರುವಿಗೆ ಶಿಷ್ಯನಾದರೂ ತೊಲಗುವುದಿಲ್ಲ; ಅನೇಕ ಶಿಷ್ಯರಿಗೆ ಗುರುವಾದರೂ ತೊಲಗುವುದಿಲ್ಲ. ಆಶ್ರಮ ಕಟ್ಟಿ ಮಠ ಬೆಳೆಸಿ ಪೀಠದ ಮೇಲೆ ಕುಳಿತರೂ ಇಂದ್ರಿಯಗಳ ಅಜ್ಞಾನ ತೊಲಗುವುದಿಲ್ಲ.

ಇಂದ್ರಿಯಗಳು ತಮ್ಮ ಅಜ್ಞಾನವನ್ನು ಜ್ಞಾನೇಂದ್ರಿಯಗಳಿಗೆ ಅರ್ಪಣೆ ಮಾಡುವ ಕಲೆ ಸಿದ್ಧಿಯಾದಾಗಲೇ, ಇಂದ್ರಿಯಗಳ ಅಜ್ಞಾನ ಜ್ಞಾನೇಂದ್ರಿಯಗಳಿಗೆ ಸುಖಾರ್ಪಣೆಯಾಗುತ್ತದೆ.

ಆಗ ಇಂದ್ರಿಯಗಳ ಮೂಲಕ ತನುವಿಗೆ ಸುಖ ಉಂಟಾಗುವುದಿಲ್ಲ; ದುಃಖವೂ ಉಂಟಾಗುವುದಿಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳೂ ಉಂಟಾಗುವುದಿಲ್ಲ.

ಕಣ್ಣು ಇಂದ್ರಿಯವನ್ನು ಹೊಂದಿದೆ: ಇದರ ಕೆಲಸ ಹೆಣ್ಣು-ಗಂಡು ಎಂದು ನೋಡಿ ದೇಹದಲ್ಲಿ ಕಾಮ ಸೃಷ್ಟಿ ಮಾಡುತ್ತದೆ. ಭೂಮಿ ಹೇಮ ಕರೆನ್ಸಿ ನೋಡಿ ದೇಹದಲ್ಲಿ ಪಡೆಯುವ ಆಸೆ ಸೃಷ್ಟಿ ಮಾಡುತ್ತದೆ. ಸಿಕ್ಕದಿದ್ದರೆ ದ್ವೇಷ ಅಸೂಯೆ ಕ್ರೋಧ ಸೃಷ್ಟಿ ಮಾಡುತ್ತದೆ. ಸಿಕ್ಕರೆ ಲೋಭ ಸೃಷ್ಟಿ ಮಾಡುತ್ತದೆ. ಮೋಹ, ಮದ ಸೃಷ್ಟಿ ಮಾಡುತ್ತದೆ. ತನಗೆ ಬೇಕಾದ ವಸ್ತು ಮತ್ತೊಬ್ಬರಿಗೆ ಸಿಕ್ಕರೆ ಮತ್ಸರ ಸೃಷ್ಟಿ ಮಾಡಿ ಇಡೀ ತನುವನ್ನು ಕ್ರೋಧಾಗ್ನಿಯ ಜ್ವಾಲೆಯಿಂದ ಬೇಯುವಂತೆ ಮಾಡುತ್ತದೆ.

ಕಣ್ಣು ಜ್ಞಾನೇಂದ್ರಿಯವನ್ನು ಕೂಡಾ ಹೊಂದಿದೆ: ಕಣ್ಣಿನ ಮೂಲಕ ನೋಡಿ ಸುಖಿಸುವ ಇಂದ್ರಿಯದ ಅಜ್ಞಾನವನ್ನು ಜ್ಞಾನೇಂದ್ರಿಯ ಅಲ್ಲಗಳೆದು ಅದರ ಅಜ್ಞಾನವನ್ನು ಅದಕ್ಕೆ ತೋರಿಸುವ ಮೂಲಕ ಪಾಠ ಮಾಡುತ್ತದೆ. ಕಣ್ಣಲ್ಲಿ ಇಂದ್ರಿಯ ಹಾಗೂ ಜ್ಞಾನೇಂದ್ರಿಯದ ಜುಗಲ್‌ಬಂದಿ ಸದಾ ನಡೆದಿರುತ್ತದೆ. ಇಂದ್ರಿಯದ ಮೂಲಕವೇ ಜ್ಞಾನೇಂದ್ರಿಯವನ್ನು ತಿಳಿದು ಇಂದ್ರಿಯವನ್ನು

ಜ್ಞಾನೇಂದ್ರಿಯಕ್ಕೆ ಅರ್ಪಣ ಮಾಡಬೇಕು. ಆಗ ಜ್ಞಾನೇಂದ್ರಿಯ ಮಾತ್ರ ಉಳಿಯುತ್ತದೆ.

ಮಹಾಜ್ಞಾನಿ ಚೆನ್ನಬಸವಣ್ಣನವರು ಅಜ್ಞಾನವನ್ನು ಜ್ಞಾನಕ್ಕೆ ಅರ್ಪಣ ಮಾಡುವ ಸೂತ್ರ ನನಗೆ ಅರುಹಿದರು ಎಂದು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ತಮ್ಮ ವಚನದ ಸೂತ್ರದ ಮೂಲಕ ಹೇಳಿಕೊಂಡಿದ್ದಾರೆ.

ಜ್ಞಾನ ಎಂದರೆ ಅರಿವು. ಅದು ಅಂಗದಲ್ಲಿಯೇ ಇದೆ. ಅರಿವನ್ನೇ ಗುರುದೇವನೆಂದು ಕರೆದಿದ್ದಾರೆ. ಅಂಗವನ್ನು ಆವರಿಸಿದ ಮನವೆಂಬ ಅಜ್ಞಾನ ಚೆನ್ನಬಸವಣ್ಣನವರು ಹೇಳಿದ ನಿರ್ಭಾವ ಸೂತ್ರದಿಂದಾಗಿ ಗುರುಮುಖಕ್ಕೆ ಯೋಗ್ಯವಾಯಿತು. ಅವರ ದಯದಿಂದಾಗಿ ಕಪಿಲಸಿದ್ಧ ಮಲ್ಲಿನಾಥಯ್ಯನಿಗೆ ಮನವೇ ಚೈತನ್ಯವಾಗಿ ನಾಟ್ಯಕ್ಕೆ ನಿಂತಿತು ಎಂದು ಸಿದ್ದರಾಮ ಶಿವಯೋಗಿಗಳು ಸಕಲರಿಗೂ ಜ್ಞಾನ ಮಾರ್ಗವನ್ನು ವಿವರಿಸಿದ್ದಾರೆ.

'ಅಯ್ಯಾ, ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯನೆಂಬ ವಾಹನವಾಗಿರ್ದೆ ಕಾಣಾ' ಎಂದು ಬಸವಣ್ಣನವರು ಹೇಳಿದಂತೆ ಸಿದ್ಧರಾಮ ಶಿವಯೋಗಿಗಳಿಗೆ ಚೆನ್ನಬಸವಣ್ಣನವರು ತಿಳಿಸಿದ್ದಾರೆ. ಅದೇ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಸಕಲ ಓದುಗರಿಗೂ ತಿಳಿ ಹೇಳಿದ್ದಾರೆ.

ಸಕಲ ಓದುಗರನ್ನು ತಮ್ಮಂತೆ ಮಾಡಿಕೊಳ್ಳಬೇಕೆಂಬ ಅಪಾರ ಕರುಣೆ ಶರಣರಿಗೆ ಇರುವುದರಿಂದ; ಸಕಲ ಅರಿವಿನ ಸೂತ್ರಗಳನ್ನು ಓದುಗರಿಗೆ ಹಂಚಿದ್ದಾರೆ. ಧಾವತಿಯಿಲ್ಲದೆ ಓದಿ ಅರಗಿಸಿಕೊಂಡು ಅರಿವಿನ ಮಾರ್ಗದಲ್ಲಿ ನಡೆದು ಆ ಅರಿವೇ ತಾನಾದ ಓದುಗನೇ ಧನ್ಯ. ಅದು ಓದುಗ ಶರಣರಿಗೆ ಮಾಡುವ ಉಪಕಾರ.

**235**

**ಇಂದಿಗೆ ನಿಮಿಷಕ್ಕೆ ಬರ್ದುಂಕದೆ ಹೋಗೆಯ ;**
**ಅನಂತಕಾಲ ಬರ್ದುಂಕುಗೆಯ ; ಬರ್ದುಂಕಿದಡೆ**
**ಮನ ವಿಚ್ಚಂದ ವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಒಂದು ನಿಮಿಷವಾದರೂ ತನುವನ್ನು ಆವರಿಸಿದ ಮನಕ್ಕೆ ಸಹಜವಾಗಿ ಬದುಕಲು ಬಾರದಿದ್ದರೆ ಅದನ್ನು ತನುವೆನ್ನಲು ಸಾಧ್ಯವೆ? ಅನಂತ ಕಾಲದವರೆಗೆ ಬದುಕಿದಡೇನು? ಮನ ವಿಚಲಿತವಾಗುತ್ತ ಬದುಕುವ ಬದುಕು ಅದು ಬದುಕಲ್ಲ.

ಸದಾ ವಿಚಲಿತಗೊಳ್ಳುವ ಮನ ತನುವನ್ನು ಆವರಿಸಿಕೊಂಡಿದ್ದರೆ; ಸದಾ ಪ್ರಶಾಂತವಾಗಿರುವ ಘನ ತನುವಿನಲ್ಲಿ ಸಂಗಮವಾಗಿದೆ. ಇದು ಸಮತಾಗುಣವನ್ನು ಹೊಂದಿದೆ. ಇದನ್ನು ನಿರ್ಗುಣವೆಂದು ಕೂಡಾ ಕರೆಯುತ್ತಾರೆ. ಈ ಗುಣ, ರಾಜಸ ತಾಮಸ ಸಾತ್ವಿಕ ಗುಣಗಳಿಂದ ಹೊರತಾದುದು. ಸಿದ್ಧರಾಮ ಶಿವಯೋಗಿಗಳು ಈ ನಿರ್ಗುಣವನ್ನು ಸಮತಾಗುಣವೆಂದು ಕರೆದಿದ್ದಾರೆ.

ಮನ, ಸಾತ್ವಿಕ ರಾಜಸ ತಾಮಸ ಗುಣಗಳನ್ನು ಹೊಂದಿದೆ. ಕ್ಷಣ ಕ್ಷಣಕ್ಕೂ ಊಸರವಳ್ಳಿಯಂತೆ ಬಣ್ಣ ಬದಲಾಯಿಸುತ್ತಾ ಬದುಕುತ್ತದೆ. ಒಮ್ಮೆ ಸಾತ್ವಿಕ ಗುಣದಿಂದ ದಾನ ಮಾಡಿದರೆ, ಮತ್ತೊಮ್ಮೆ ರಾಜಸ ಗುಣ ಹೊಂದಿ ದಾನ ಪಡೆದ ತನುವನ್ನು ಶಿಕ್ಷೆಗೆ ಗುರಿ

ಮಾಡುತ್ತದೆ. ಮಗದೊಮ್ಮೆ ತಾಮಸ ಗುಣ ಹೊಂದಿ ಅದೇ ತನುವಿನೊಂದಿಗೆ ಕುಡಿದು ಕುಣಿದು ಕುಪ್ಪಳಿಸುತ್ತಾ ಓಲಾಡುತ್ತದೆ.

ಘನ, ಹಾಗಲ್ಲ. ಸಾತ್ವಿಕ ರಾಜಸ ತಾಮಸ ಗುಣಗಳಿಂದ ಹೊರತಾದುದು. ಅದಕ್ಕೆ ಯಾವ ಗುಣವೂ ಇಲ್ಲ. ಹೀಗಾಗಿ ಅದು ನಿರ್ಗುಣ; ಸಮತಾ ಗುಣ.

ಘನ, ಸದಾ ಸಮತಾ ಗುಣದಿಂದ ಮನಕ್ಕೆ ಪಾಠ ಮಾಡುತ್ತದೆ. ಮನ, ದಾನ ಮಾಡಿ ತಾನು ದಾನಿ; ದಾನ ಪಡೆದ ತನು ಭಿಕ್ಷುಕ ಎಂದು ಬೀಗಿದಾಗ, ಘನ, ನಿನ್ನಂತೆಯೇ ಇರುವ ತನು ಭಿಕ್ಷುಕ ಹೇಗೆ? ನೀನು ದಾನಿ ಹೇಗೆ? ನೀನು ದಾನವೆಂದು ಕೊಟ್ಟ ವಸ್ತುಗಳು ನಿನ್ನವೆ? ಅವು ನೀನು ಭೂಮಿಯಿಂದ ಪಡೆದಿರುವೆ. ಭೂಮಿ ನಿನಗೆ ಭಿಕ್ಷೆ ಕೊಟ್ಟಂತಾಗಲಿಲ್ಲವೆ? ಜಲ ನಿನ್ನದಲ್ಲ; ನೆಲ ನಿನ್ನದಲ್ಲ; ನೆಲದ ಗರ್ಭದಲ್ಲಿದ್ದ ಹೇಮವೂ ನಿನ್ನದಲ್ಲ. ಗಾಳಿ ನಿನ್ನದಲ್ಲ ನಿನ್ನದೆನ್ನುವುದು ಏನೂ ಇಲ್ಲವೆಂದ ಮೇಲೆ; ನಿನ್ನಂತೆಯೇ ಇರುವ ತನುವಿಗೆ ನೀನು ಕೊಟ್ಟುದಾದರೂ ಏನು?

ಎಲೆ ಮನವೆ, ಕ್ಷಣ ಕ್ಷಣಕ್ಕೂ ತನುವನ್ನು ಘಾಸಿಗೊಳಿಸದೆ ಸಮತಾ ಗುಣದಿಂದ ಸಮಾಧಾನಿಯಾಗಿ ಬದುಕು. ತನು ಸಮತಾ ಗುಣವನ್ನು ಮೆರೆಯಲು ಬಂದ ಭಗವಂತನ ದಿವ್ಯ ಪ್ರಸಾದ. ಭಗವಂತನೆಂದರೆ ನೀನು ತಿಳಿದ ದೇವರಲ್ಲ. ನೀನೇ ಸೃಷ್ಠಿ ಮಾಡಿಕೊಂಡ ದೇವರು ದೇವರಲ್ಲ. ನಿನಗೆ ತಿಳಿಯದ್ದಕ್ಕಾಗಿ, ನಿನ್ನ ಭ್ರಮಾ ಭಯ ನಿವಾರಣೆಗಾಗಿ, ದೇವರನ್ನು ಕಲ್ಲಲ್ಲಿ ಕಟ್ಟಿಗೆಯಲ್ಲಿ ಮಣ್ಣಲ್ಲಿ ಲೋಹದಲ್ಲಿ ನಿರ್ಮಿಸಿಕೊಂಡೆ. ಇದರಿಂದ ನಿನ್ನ ಭಯ ಅಧಿಕವಾಯಿತೆ ಹೊರತು ಕಡಿಮೆಯಾಗಲಿಲ್ಲ.

ಎಲೆ ಮನವೆ, ಸಮತಾಗುಣವೇ ನಿನ್ನ ದೇವರು. ನೀನು ತನುವನ್ನು ಆವರಿಸಿಕೊಂಡಿರುವಿ; ನಿನ್ನ ದೇವರಾದ ಸಮತಾ ಗುಣ ತನುವಿನಲ್ಲಿಯೇ ಸಂಗಮವಾಗಿದೆ. ನಿನ್ನೊಂದಿಗೆ, ನಿನ್ನ ಪಕ್ಕದಲ್ಲಿಯೇ ಇದ್ದ ಸಮತಾ ಗುಣವೆಂಬ ದೇವರ ಹಚ್ಚಡವನ್ನು ನೀನು ಹೊದ್ದುಕೊಂಡು ಧನ್ಯನಾಗು. ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನಾಗು.

**236**

**ಇಂದೆನ್ನ ಮನದೊಡೆಯ ಬಂದ ತಾ ಕರಸ್ಥಲಕೆ,**
**ಹಿಂದು ಮುಂದಿಲ್ಲದ ಪದವನಿತ್ತ.**
**ಗಂಧವಾಸನೆ ಚಂದವೊಂದಾದ ಬಸವನ**
**ಬಂಧುವಾದೆನು ಗುರುವೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನುಷ್ಯ, ಪ್ರಪಂಚದ ಯಾವ ಮೂಲೆಯಲ್ಲಿದ್ದರೇನು? ದೇಹದ ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಒಂದೇ ರೀತಿಯ ಕಾಯಕದಲ್ಲಿ ತೊಡಗಿವೆ. ದೇಹದ ಮನಸ್ಸು ಜ್ಞಾನ ಕೂಡಾ ಒಂದೇ ಕಾಯಕದಲ್ಲಿ ತೊಡಗಿವೆ.

ಮನಸ್ಸು, ಜ್ಞಾನವನ್ನು ತಿಳಿಯದ್ದರಿಂದ ದೇಹದ ಸಂಬಂಧ ಬೆಳೆಸಿ ಪಾಪದ ಕಾಯಕದಲ್ಲಿ ,ಪುಣ್ಯದ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಹೀಗಾಗಿ ಒಂದು ಕಾಯ ಪುಣ್ಯದ್ದು, ಮತ್ತೊಂದು ಕಾಯ ಪಾಪದ್ದು ಎಂದು ಕಾಯವೇ ಕಾಯವನ್ನು ಗುರುತಿಸಿದೆ. ಸೊಲ್ಲಾಪುರದ ಸಿದ್ಧರಾಮ ಶಿವಯೋಗಿಗಳು ಕೂಡಾ ಪುಣ್ಯದ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಕೆರೆಗಳನ್ನು ಕಟ್ಟಿಸುವುದು, ಅರವಟ್ಟಿಗೆಗಳನ್ನು ಇಟ್ಟು ಗಂಜಿ ಕೇಂದ್ರಗಳನ್ನು, ದೇವಾಲಯಗಳನ್ನು ನಿರ್ಮಿಸುವುದು. ಇದು ಅವರ ಕಾಯಕವಾಗಿತ್ತು.

ಅಲ್ಲಮಪ್ರಭುಗಳು ಸಿದ್ಧರಾಮ ಶಿವಯೋಗಿಗಳ ಕಾಯಕವನ್ನು ಕಂಡು ಮರುಗಿದರು. ಮಳೆಯೇ ಬಾರದಿದ್ದರೆ ನೀನು ಕಟ್ಟಿದ ಕೆರೆ, ದೇವಾಲಯ, ಅರವಟ್ಟಿಗೆ ಗಂಜಿಕೇಂದ್ರಗಳು ಹಾಳು ಬೀಳುತ್ತವೆ. ಮನುಷ್ಯ ಮನುಷ್ಯನಿಗಾಗಿ ಏನೂ ಮಾಡಬೇಕಿಲ್ಲ. ಪುಣ್ಯ-ಪಾಪ ಎನ್ನುವ ರೋಗ ಮನುಷ್ಯನನ್ನು ಬೇತಾಳದಂತೆ ಬೆನ್ನು ಹತ್ತಿದೆ. ನೀನು ದಾನಿಯಲ್ಲ; ಉಳಿದವರು ಭಿಕ್ಷುಕರಲ್ಲ. ಕಾಯದಲ್ಲಿರುವ ಅರಿವಿನ ಸಂಪತ್ತು ಕಾಯಕ್ಕೆ ತಿಳಿಯದ್ದರಿಂದ ಮನಸ್ಸು ಕಾಯವನ್ನು ಹಿಡಿದು ಪುಣ್ಯ ಪಾಪದ ಕೆಲಸದಲ್ಲಿ ತೊಡಗಿದೆ.

ಕಾಯದಲ್ಲಿಯೇ ಇರುವ ಅರಿವಿನ ಕಾಯಕ ಒಂದಿದೆ. ಅದು ಕಲ್ಯಾಣದ ಬಸವಣ್ಣನ ನೇತೃತ್ವದಲ್ಲಿ ನಿರಂತರ ನಡೆಯುತ್ತಲಿದೆ. ಈ ಒಡ್ಡರ ಕಾಯಕವನ್ನು ಬಿಟ್ಟು ನನ್ನೊಂದಿಗೆ ಕಲ್ಯಾಣಕ್ಕೆ ನಡೆ; ಎಂದು ಪ್ರಭುದೇವರು ಸಿದ್ಧರಾಮ ಶಿವಯೋಗಿಗಳನ್ನು ಕಲ್ಯಾಣಕ್ಕೆ ಕರೆದುಕೊಂಡು ಹೋದರು.

ಅರಿವಿನ ಕಾಯಕದಲ್ಲಿ ತೊಡಗಿದ ಬಸವಣ್ಣ, ಚೆನ್ನಬಸವಣ್ಣ, ಮಡಿವಾಳ ಮಾಚಿದೇವ, ಹಡಪದ ಅಪ್ಪಣ್ಣ ಮುಂತಾದ ಶರಣರನ್ನು ಸಿದ್ಧರಾಮ ಶಿವಯೋಗಿಗಳಿಗೆ ಪರಿಚಯಿಸಿದರು. ಪಾಪ ಪುಣ್ಯದ ತನ್ನ ಕಾಯಕವೆತ್ತ ; ಶರಣರ ಅರಿವಿನ ಕಾಯಕವೆತ್ತ ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡು, ಶರಣರ ಅರಿವಿನ ಕಾಯಕದಲ್ಲಿ ಧುಮುಕಿದರು.

ಕಾಯವನ್ನು ಹಿಡಿದು ಪಾಪ-ಪುಣ್ಯದ ಕಾಯಕದಲ್ಲಿ ತೊಡಗಿದ ಮನ, ಕಾಯವನ್ನು ಸಡಿಲಿಸಿಕೊಂಡಿತು. ಕಾಯದಲ್ಲಿಯೇ ಸಂಗಮವಾದ ಅರಿವಿನ ಸಂಗ ಮಾಡಿತು. ಆ ಅರಿವು ಬರೀ ಅರಿವಾಗಲಿಲ್ಲ; ಆ ಅರಿವೇ ಗುರುವಾಯಿತು. ಆ ಅರಿವೇ ಮಹಾದೇವನಾಯಿತು. ಅರಿವೇ ಸದಾಶಿವನಾಯಿತು. ಆ ಅರಿವೇ ಸಾಕ್ಷಾತ್ ಪರಬ್ರಹ್ಮನಾಯಿತು. ಮನದೊಡೆಯ ಮಹಾದೇವನೇ ತಾನಾಗಿ ಕರಸ್ಥಲವೆಂಬ ಕಾಯವನ್ನು ವ್ಯಾಪಿಸಿತು.

ನುಡಿಯುವ, ಕೇಳುವ ಪದಗಳೆಲ್ಲ ಬ್ರಹ್ಮವಾದವು. ಹಿಂದಿನ ಅಜ್ಞಾನವೆಂಬ ಭೂತಕಾಲ, ಮುಂದಿನ ಅಜ್ಞಾನವೆಂಬ ಭವಿಷತ್ ಕಾಲಗಳು ಕರಗಿ ಹೋದವು. ಸುಗಂಧ-ದುರ್ಗಂಧಗಳು ಮಾಯವಾದವು. ಅರಿವಿನ ಪರಿಮಳ ಕಾಯವನ್ನು ವ್ಯಾಪಿಸಿಕೊಂಡಿತು. ಸಕಲ ಕಾಯಗಳು ಅಂದ ಚೆಂದ ಕುರೂಪಿಯಾಗಿ ಕಾಣಲಿಲ್ಲ ; ತನ್ನಂತೆಯೇ ಇರುವ ಪರಬ್ರಹ್ಮ ವಸ್ತುಗಳಾಗಿ ಕಂಡವು.

ಇಂದೆನ್ನ ಮನದೊಡೆಯ ಮಹಾದೇವ
ಎನ್ನ ಕಾಯವೆಂಬ ಕರಸ್ಥಲಕ್ಕೆ ಬಂದು
ಹಿಂದು ಮುಂದಿಲ್ಲದ ಪದವನಿತ್ತ.
ಗಂಧ ವಾಸನೆ ಚೆಂದ ವೊಂದಾದ ಬಸವನ
ಬಂಧುವಾದೆನು ಗುರುವೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.

ಚೆನ್ನ ಬಸವಣ್ಣನ ದಯದಿಂದ, ಮನದೊಡೆಯ ಮಹಾದೇವ ಇಂದೆನ್ನ ಕರಸ್ಥಲಕ್ಕೆ ಬಂದ. ಹಿಂದು ಮುಂದಿಲ್ಲದ ಪದವನಿತ್ತ. ಗಂಧವಾಸನೆ ಚಂದವೊಂದದ ಬಸವನ ಬಂಧುವಾದೆನು ಗುರುವೆ, ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಸ್ವರೂಪ ಜ್ಞಾನಿಗಳೇ ತಾವಾಗಿ ಹೃದಯ ತುಂಬಿ ಕುಣಿ ಕುಣಿದು ಹಾಡಿದ್ದಾರೆ.

**ಇಂಬಪ್ಪ ಶರಧಿಯ ಸಂಭ್ರಮದ ಮೊರಹಿನಲಿ**
**ಶಂಭುವೆ, ನಿನ್ನನೊಡಗೂಡಿದೆನಯ್ಯಾ .**
**ಬೇರೊಂದ ಕೇಳಿ, ಬೇರೊಂದ ಕಾಣೆ.**
**ಮಹಾ ಉಲುಹೆ ಒಡಮನೆಯಾದೆನಯ್ಯಾ.**
**ಅನಿಮಿಷನೆಂಬ ಶರಧಿಯ ಮಹಾ ಉಲುಹಿನಲಿ**
**ಉಲುಹುಗೆಟ್ಟೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ನೀನೆಂಬೆ ಸಮುದ್ರದಲಿ ಆನಿದ್ದೆನು.**

ಒಡಲು ಎನ್ನುವುದು ಜಲರಾಶಿಯಿಂದ ಗಟ್ಟಿಗೊಂಡ ಸಂಭ್ರಮದ ಸಮುದ್ರ. ಈ ಒಡಲಿಗೆ ಒಡಲೊಡೆಯನಿದ್ದಾನೆ. ಆತನನ್ನು ಸಿದ್ಧರಾಮ ಶಿವಯೋಗಿಗಳು ಶಂಭು ಎಂದು ಕರೆದಿದ್ದಾರೆ.

ಬಯಲು ಕಾಣುವುದಿಲ್ಲ. ಜಲಜನಕವೂ ಕಾಣುವುದಿಲ್ಲ. ಆಮ್ಲ ಜನಕವೂ ಕಾಣುವುದಿಲ್ಲ. ಕಾಣಬಾರದ ಜಲಜನಕದಲ್ಲಿ ಆಮ್ಲಜನಕ ವನ್ನು ಬೆರೆಸಿ; ಬಯಲು, ತಾನು ಒಳ ಹೊರಗೆನ್ನದಂತೆ ಸಂಗಮವಾಗಿ, ಜೀವಜಲವನ್ನಾಗಿಸಿತು. ಈ ಜೀವ ಜಲಬಿಂದುವೇ ಗರ್ಭದಲ್ಲಿ ಹೊಕ್ಕು ಸಂಭ್ರಮದ ಶರಧಿಯಾಯಿತು; ಒಡಲಾಯಿತು. ಈ ಒಡಲನ್ನು ಸೃಷ್ಟಿ ಮಾಡಿದ ಬಯಲೇ ಒಡಲೊಡೆಯನಾಗಿ ಶಂಭುವೆಂದು ಶರಣರಿಂದ ಕರೆಯಿಸಿಕೊಂಡ.

ಒಡಲೊಡೆಯನ ಅರಿವಿನ ಬೆಳಕಿನ ಕಿರಣಗಳಿಂದಲೇ ಮನ ಹುಟ್ಟಿ; ಒಡಲನ್ನು ಆವರಿಸಿಕೊಂಡಿತು. ನಾನು ಮನವೆಂದು ಹೆಸರು ಪಡೆದೆ. ಒಡಲೊಡೆಯ ನನ್ನಿಂದ ಭಗವಂತನೆಂದು ಹೆಸರು ಪಡೆದ.

ಅವನೆಂಬ ಸಂಭ್ರಮದ ಸಮುದ್ರದಲ್ಲಿ ನಾನಿದ್ದು ಅವನನ್ನೊಡಗೂಡಿ ಬೇರೊಂದ ಕೇಳದೆ, ಬೇರೊಂದ ಕಾಣದೆ ಅವನ ಅರಿವಿನ ಸಂಭ್ರಮದಲ್ಲಿ ನಾನು ಸಂಗಮವಾಗಬೇಕು. ಇದು ಮನದ ಕಾಯಕವಾಗಬೇಕು. ಆದರೆ

ಮನ ತನ್ನದೇ ಆದ ಬೇರೊಂದು ಅಜ್ಞಾನ ಲೋಕ ನಿರ್ಮಿಸಿ ಕೊಂಡಿದೆ. ಸಂಭ್ರಮದ ಶರದಿಯ ಒಡಲನ್ನು ಮನ ತನ್ನಂತೆ ಮಾಡಿಕೊಂಡು ತನ್ನದೇ ಆದ ದೇವರನ್ನು ತಾನೇ ಸೃಷ್ಟಿ ಮಾಡಿಕೊಂಡಿದೆ. ಆ ದೇವರಿಗೆ ಭವ್ಯವಾದ ಆಲಯಗಳನ್ನು ನಿರ್ಮಿಸಿಕೊಂಡಿದೆ. ಭ್ರಮೆಯಿಂದ ತಾನು ಮಾಡಿದ ದೇವರನ್ನು ಪೂಜಿಸುತ್ತಾ; ತನ್ನನ್ನು ಮಾಡಿದ ದೇವರನ್ನು ತಾನೇ ಮರೆತು ಹೋಗಿದೆ.

ಒಡಲಿಗೆ ಮನವೊಂದೇ ಪ್ರಮುಖವಲ್ಲ. ಅರಿವು ಅತ್ಯಂತ ಪ್ರಮುಖವಾದುದು. ಅದು ಗುರುತನದ ಜವಾಬ್ದಾರಿಯನ್ನು ಹೊತ್ತಿದೆ. ಗುರುದೇವನಾಗಿ ಸದಾ ಮನಕ್ಕೆ ಪಾಠ ಮಾಡುವುದನ್ನು ಮನ ಕೇಳಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಮನ ತಾನು ಜ್ಞಾನಿಯಾಗಿ ನೈಪುಣ್ಯತೆ ಪಡೆಯಬೇಕೆಂದು ಒಡಲಿನೊಂದಿಗೆ ಶಾಲಾ ಕಾಲೇಜುಗಳಿಗೆ ಹೋಗುತ್ತದೆ. ಭಗವದ್ಗೀತೆ, ಬೈಬಲ್, ಕುರಾನ್‌ಗಳ ಅಭ್ಯಾಸ ಮಾಡುತ್ತದೆ. ಆ ಎಲ್ಲ ಗ್ರಂಥಗಳು ಅರಿವಿನಿಂದ ಬಂದು, ಅರಿವಿಗೆ ಹೋಗುವ ದಾರಿಯನ್ನು ಹೇಳುತ್ತಲಿವೆ ಎಂದು ಮನಕ್ಕೆ ಮನವರಿಕೆಯಾಗುತ್ತಿಲ್ಲ. ಹೀಗಾಗಿ

ಭಗವದ್ಗೀತೆ, ಬೈಬಲ್, ಕುರಾನ್‌ಗಳನ್ನು ಪಠಣ ಮಾಡಿ ಒಡಲನ್ನೇ ಗುರುವೆಂದು

ಭಾವಿಸುತ್ತದೆ. ಒಡಲಲ್ಲೇ ಸಂಗಮವಾದ ಅರಿವೆಂಬ ಗುರುದೇವನನ್ನೇ ಮರೆತು ಹೋಗುತ್ತದೆ. ಗ್ರಂಥಗಳನ್ನು ಪಠಣ ಮಾಡಿ ಪಾಠ ಮಾಡುವ ಗುರುದೇವನಂತೆ ತಾನು ಕೂಡಾ ಒಡಲಿಗೆ ಗುರುವಿನ ವೇಷ ತೊಡಿಸಿ ಗುರುವಾಗುತ್ತದೆ.

ಒಂದು ಒಡಲಿಗೆ ಮತ್ತೊಂದು ಒಡಲು ಗುರುವಾಗಲು ಸಾಧ್ಯವಿಲ್ಲ. ಹಾಗೆಯೇ ಶಿಷ್ಯನಾಗಲು ಸಾಧ್ಯವಿಲ್ಲ. ಪ್ರತಿ ಒಡಲಲ್ಲಿ ಅರಿವೆಂಬ ಗುರುದೇವ ಸಂಗಮವಾಗಿದ್ದಾನೆ. ಪ್ರತಿ ಒಡಲನ್ನೂ ಮನ ಆವರಿಸಿದೆ. ಹೀಗೆ ಒಡಲನ್ನು ಆವರಿಸಿದ ಮನವೇ ಒಡಲಲ್ಲಿ ಸಂಗಮವಾದ ಗುರುದೇವನಿಗೆ ಶಿಷ್ಯನಾಗಬೇಕು. ಅಂದರೆ ಪ್ರತಿ ಒಡಲಿಗೂ ಅರಿವೆಂಬ ಗುರುದೇವನೇ ಒಡೆಯನಾಗಿದ್ದಾನೆ. ಮನ ಆ ಒಡೆಯನಿಗೆ ದಾಸನಾಗುವ ಶಿಕ್ಷಣವನ್ನು ಅರಿತಾಗಲೇ ಅದು ಅರಿವಿನ ಒಡಲೊಡೆಯನ ಒಡವೆಯಾಗುತ್ತದೆ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು, ಬೇರೊಂದು ಕೇಳೆನಯ್ಯಾ, ಬೇರೊಂದು ಕಾಣೆನಯ್ಯಾ ಶಂಭುವೆ, ನಿನ್ನ ನೊಡಗೂಡಿದೆನಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ, ನೀನೆಂಬ ಅರಿವಿನ ಸಮುದರದಲ್ಲಿ ನಾನಿದ್ದು ಧನ್ಯನಾದೆ ತಂದೆ ಎಂದಿದ್ದಾರೆ.

**238**

**ಇಚ್ಛಾ ಜ್ಞಾನ ಕ್ರಿಯಾಶಕ್ತಿ ನಿನ್ನಾಧೀನ ಕಂಡಯ್ಯಾ.**
**ಇಚ್ಛೈಸುವುದೇನು, ಶಕ್ತಿಯೊ ಶಿವನೊ? ಬಲ್ಲಡೆ ನೀವು ಹೇಳಿರೆ?**
**ಆನಂದಜಲದಲ್ಲಿ ಆಶ್ರಯವಾಗಿ ನಿತ್ಯಮಹೋತ್ಸವವನುಳ್ಳುದೇನು?**
**ಶಕ್ತಿಯೊ ಶಿವನೊ? ಬಲ್ಲಡೆ ನೀವು ಹೇಳಿರೆ?**
**ಬ್ರಹ್ಮಾಂಡಗಳು ಹಲವು ಕಂಪನವಪ್ಪಾಗ**
**ನಿಷ್ಕಂಪನವಾಗಿರಲುಳ್ಳುದೇನು?**
**ಶಕ್ತಿಯೊ ಶಿವನೊ? ಬಲ್ಲಡೆ ನೀವು ಹೇಳಿರೆ?**
**ಆನಂದಬ್ರಹ್ಮದಲ್ಲಿ ಆಂದೋಳವಾಗಿ ಅಕ್ಷರಬ್ರಹ್ಮವನ್ನೈದಿದ**
**ಆದಿಶಕ್ತಿಯ ಹೋಬಳಿ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ.**

ಪರಮಾನಂದ ಮಯವಾದ ಜಲರಾಶಿ ಗಟ್ಟಿಗೊಂಡು ಒಡಲಾಗಿದೆ. ಇದು ಇಚ್ಛಾಜ್ಞಾನ ಕ್ರಿಯಾಶಕ್ತಿಯುಳ್ಳದ್ದು. ಒಡಲಲ್ಲಿ ಇಚ್ಛಾಜ್ಞಾನ ಕ್ರಿಯಾಶಕ್ತಿಯೂ ಇದೆ. ಇದನ್ನು ತಿಳಿಯುವ ಆಸಕ್ತಿ ಉಳ್ಳ ಮನವೆಂಬ ಶಕ್ತಿ ಕೂಡಾ ಒಡಲನ್ನು ಆವರಿಸಿದೆ.

ಇಚ್ಛಾ ಜ್ಞಾನ ಕ್ರಿಯಾಶಕ್ತಿಯನ್ನು ಇಚ್ಛೈಸುವುದೇನು, ಶಕ್ತಿಯೊ ಶಿವನೊ? ಬಲ್ಲಡೆ ನೀವು ಹೇಳಿರೆ? ಎಂದು ಸಿದ್ಧರಾಮ ಶಿವಯೋಗಿಗಳು ಓದುಗರನ್ನು ಪ್ರಶ್ನಿಸಿದ್ದಾರೆ. ಹೀಗೆ ಓದುಗರನ್ನು ಪ್ರಶ್ನಿಸುತ್ತಾ ಆ ಪ್ರಶ್ನೆಯಲ್ಲಿಯೇ ಉತ್ತರವನ್ನಿಟ್ಟಿದ್ದಾರೆ.

ತಂದೆಯ ಮೂಲಕ ತಾಯಿ ಗರ್ಭಕ್ಕೆ ಪ್ರವೇಶಿಸುವ ಆನಂದಮಯ ಜಲವೇ ಜಲರಾಶಿಯಾಗಿ ಗಟ್ಟಿಗೊಂಡಿದೆ. ಒಡಲಾಗಿದೆ. ಇದು ಒಡಲು ಎಂದು ಒಡಲಿನಿಂದಲೇ ಕರೆಯಿಸಿಕೊಂಡಿದೆ. ಈ ಒಡಲಲ್ಲಿ ಇಚ್ಛಾಜ್ಞಾನ ಕ್ರಿಯಾಶಕ್ತಿ ಸಂಗಮವಾಗಿದೆ. ಇದನ್ನು ತಿಳಿಯುವ ಮನವೆಂಬ ಶಕ್ತಿ ಒಡಲನ್ನು ಆವರಿಸಿದೆ. ಈ ಶಕ್ತಿ ಜ್ಞಾನಶಕ್ತಿಯೊಂದಿಗೆ ಸಂಗ ಮಾಡಲು ಇಚ್ಛೈಸುತ್ತದೆ. ಜ್ಞಾನ ಶಿವನಾದರೆ ಮನ ಶಕ್ತಿಯಾಗಿ ಶಿವ-ಶಕ್ತಿ ಸಮಾಗಮವಾಗುತ್ತವೆ.

ಶಿವ-ಶಕ್ತಿಗಳೆರಡೂ ಆನಂದಮಯವಾದ ಒಡಲ ಜಲದಲ್ಲಿ ಆಶ್ರಯ ಪಡೆದು

ನಿತ್ಯಮಹೋತ್ಸವವನ್ನು ಆಚರಿಸುತ್ತದೆ. ಒಡಲು ಶಿವ ಮತ್ತು ಶಕ್ತಿಗೆ ಆಶ್ರಯ ನೀಡಿದ ಕೈಲಾಸವೆನ್ನಿಸಿಕೊಳ್ಳುತ್ತದೆ.

ಗಾಳಿ ಬಿರುಗಾಳಿಯಾಗಿ ಬೀಸಿ, ಅಗ್ನಿ ತನ್ನ ಕೆನ್ನಾಲಿಗೆ ಚಾಚಿ ಉರಿಯುವಾಗ, ಭೂಮಿ ಬಿರಿದು ಬೆಂಕಿ ಉಂಡೆಗಳನ್ನು ಉಗುಳುವಾಗ, ಗುಡುಗು ಸಿಡಿಲುಗಳಿಂದ ಸಮುದ್ರ ಉಕ್ಕಿ ಸುನಾಮಿ ಎದ್ದಾಗ ಇಡೀ ಬ್ರಹ್ಮಾಂಡದಲ್ಲಿಯೇ ಕಂಪನ ಉಂಟಾದಾಗ ಜ್ಞಾನದೇವನು ಒಡಲಲ್ಲಿ ನಿಷ್ಕಂಪನದಿಂದ ಏನೂ ಆಗಲಿಲ್ಲವೆಂಬಂತೆ ಪರಮಾನಂದದಲ್ಲಿರುವನು.

ಶಕ್ತಿ ಶಿವೆಯಾಗಿ ಆನಂದಮಯ ಶಿವನಲ್ಲಿ ಸಂಗಮವಾಗಿ ಆನಂದ ಮಯ ಜಲದೊಡಲನ್ನೇ ಆಶ್ರಯ ಮಾಡಿಕೊಂಡು ಅರ್ಧನಾರೀಶ್ವರನೆಂಬ ಹೆಸರು ಪಡೆದು ಪರಿಚಯಿಸಿಕೊಳ್ಳುತ್ತಾನೆ. ಈ ಹೆಸರು ಒಡಲಿಗೆ ಪರಿಚಯವಿದ್ದರೂ ಅನುಭವವಾಗದ ಒಡಲಿಗೆ ಇಚ್ಛೈಸುವ ಯೋಗವೂ ತಪ್ಪಿಹೋಗುತ್ತದೆ.

ಒಡಲು ಅರ್ಧನಾರೀಶ್ವರ ತಾನೇ ಆದರೂ ಅರ್ಧನಾರೀಶ್ವರನ ಕತೆ ಕೇಳಿ ಇದು ಪುರಾಣ ಎಂದು ಬಾಹ್ಯಾನಂದಪಟ್ಟು ಕೇಳುವ ಹೇಳುವ ಕಾಯಕದಲ್ಲಿ ಅನಂತಕಾಲದವರೆಗೆ ವ್ಯರ್ಥ ಪಯಣಿಸುತ್ತದೆ.

ಒಡಲೊಡೆಯ ಆನಂದ ಜಲದಲ್ಲಿ ಆಶ್ರಯ ಪಡೆದುಕೊಂಡಿದ್ದರೂ ಒಡಲನ್ನಾವರಿಸಿದ ಮನಕ್ಕೆ ಇಚ್ಛೈಸುವ ಭಾಗ್ಯ ಇಲ್ಲದಿದ್ದಕ್ಕಾಗಿ ಆನಂದ ಬ್ರಹ್ಮದ ಆಂದೋಳನ ಒಡಲಲ್ಲಿ ನಡೆಯುತ್ತಿಲ್ಲ.

ಒಡಲು, ಅಕ್ಷರ ಬ್ರಹ್ಮನು ಸಂಗಮವಾದ ಆದಿಶಕ್ತಿಯ ಹೋಬಳಿ; ಇದು ಕಪಿಲಸಿದ್ಧ ಮಲ್ಲಿಕಾರ್ಜುನನು ಸಂಗಮವಾದ ಆನಂದ ಜಲ.

**239**

**ಇಚ್ಛೆಯಲ್ಲಿ ನಡೆವ ಅಚ್ಚಿಗಬಡುವ ತುಚ್ಛರಿಗೆ**
**ಎಂತಪ್ಪುದಯ್ಯ ಶಿವಭಕ್ತಿ ?**
**ಸಾಕ್ಷಾತ್ ಇದು ನಿಶ್ಚಯವೆಂದರಿದು ನಂಬದನ್ನಬರ**
**ಮಾತಿನ ಬೂತುಗಳಿಗೆ, ಭ್ರಾಂತುಳ್ಳ ಚಿತ್ತರಿಗೆ**
**ನಿತ್ಯ ಶಿವಭಕ್ತಿ ಎಂತಪ್ಪುದಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನ್ನಿಚ್ಛೆಯಂತೆ ನಡೆದು ಅಚ್ಚಿಗ ಬಡುವ ತುಚ್ಛ ಮನಕ್ಕೆ ಅರಿವೆಂಬ ಗುರುದೇವನು ಒಲಿಯುವುದಿಲ್ಲ. ಆ ಗುರುದೇವನೇ ಸದಾಶಿವನೆಂದು ಮನ ಅರಿಯಲಾರದು. ಹೀಗಾಗಿ ಅರಿವೆಂಬ ಶಿವನ ಮೇಲೆ ಭಕ್ತಿ ಹುಟ್ಟಲು ಮನಕ್ಕೆ ಸಾಧ್ಯವಾಗುವುದಿಲ್ಲ.

ಶಿವನೆನ್ನುವ ದೇವರು ಯಾರೂ ಇಲ್ಲ. ಒಡಲಲ್ಲಿ ಸಂಗಮವಾದ ಅರಿವಿಗೆ ಪುರಾತನರು ಶಿವನೆಂದು ಹೆಸರಿಟ್ಟು ಕರೆದರು. ಒಡಲನ್ನು ಆವರಿಸಿದ ಮನವೇ ಅರಿವೆಂಬ ಶಿವನಿಗೆ ಭಕ್ತಿ ಮಾಡಬೇಕು. ಆ ಶಿವನನ್ನು ಒಲಿಸಿಕೊಳ್ಳಬೇಕು.

ಅರಿವೆಂಬ ಶಿವ ಇಲ್ಲದ ಒಡಲೇ ಇಲ್ಲ. ಸಕಲ ಒಡಲುಗಳಲ್ಲಿ ಶಿವ ಸಂಗಮವಾಗಿದ್ದಾನೆ. ಸಕಲ ಒಡಲುಗಳನ್ನು ಶಿವನನ್ನು ತಿಳಿಯುವುದಕ್ಕಾಗಿ ಮನ ಆವರಿಸಿಕೊಂಡಿದೆ. ಮನ ಅರಿವನ್ನು

ತಿಳಿಯದ್ದರಿಂದ, ಆ ಅರಿವಿನ ಸಂಗ ಮಾಡದ್ದರಿಂದ ಒಡಲು ಜ್ಞಾನವಿದ್ದೂ ಅಜ್ಞಾನಿ ಎನ್ನಿಸಿಕೊಂಡಿದೆ.

ಒಡಲು ಮನವೆಂಬ ಅಜ್ಞಾನಿಯ ಆದೇಶ ಪಾಲಿಸುವುದರಿಂದ ಅದು ತುಚ್ಛ ಎನ್ನಿಸಿಕೊಂಡಿದೆ. ಒಡಲು ಹೆಣ್ಣಲ್ಲ; ಗಂಡೂ ಅಲ್ಲ. ಮನ ತನ್ನ ಅಜ್ಞಾನವನ್ನು ಒಡಲಿಗೆ ಹೇರಿ ಒಡಲನ್ನೇ ಹೆಣ್ಣನ್ನಾಗಿಸಿದೆ; ಒಡಲನ್ನೇ ಗಂಡನ್ನಾಗಿಸಿದೆ. ಹೀಗಾಗಿ ಒಡಲು ಒಡಲಿನೊಂದಿಗೆ ಹಾದರ ಮಾಡುತ್ತದೆ. ಒಡಲು ಒಡಲನ್ನೇ ಹತ್ಯೆ ಮಾಡುತ್ತದೆ. ಒಡಲು ಒಡಲನ್ನೇ ದ್ವೇಷಿಸುತ್ತದೆ.

ಒಂದು ಒಡಲು ರಾಜನಾದರೆ; ಮತ್ತೊಂದು ಒಡಲು ಸೇವಕ! ಪ್ರಧಾನಿ ಮಂತ್ರಿ ಸೈನಿಕ ಸೇನಾಧಿಪತಿ, ಗುರು ಶಿಷ್ಯ ಹೀಗೆ ಒಡಲನ್ನು ವಿಂಗಡಿಸಿ ಒಡಲಿನ ಮೇಲೆ ಒಡಲೇ ಅಜ್ಞಾನದ ಸವಾರಿ ಮಾಡುತ್ತಲಿದೆ. ಗ್ರಾಮ ಹೋಬಳಿ ರಾಜ್ಯ ದೇಶ ಎಂದು ಮನ ಒಡಲಿನ ಮೂಲಕ ಭೂಮಿ ವಿಭಾಗಿಸಿಕೊಂಡಿದೆ. ಜಾತಿ-ಮತ ಪಂಗಡ ಧರ್ಮ ಎಂದು ಒಡಲು ಒಡಲನ್ನೇ ವಿಭಾಗಿಸಿಕೊಳ್ಳುವಂತೆ ಮನ ಒಡಲಿಗೆ ಪ್ರೇರಣೆ ನೀಡಿದೆ.

ಒಡಲಿನಲ್ಲಿ ಸಂಗಮವಾದ ಅರಿವಿನ ಧರ್ಮವನ್ನು ಬುದ್ಧ ಪಾಲಿಸಿದ. ಒಡಲುಗಳನ್ನೆಲ್ಲ ತನ್ನಂತೆಯೇ ಇರುವ ಒಡಲೆಂದು ತಿಳಿದ. ಹೀಗೆ ಅರಿವಿನ ಆನಂದದಲ್ಲಿರಬಹುದೆಂದು ಒಡಲುಗಳಿಗೆ ತಿಳಿಹೇಳಿದ.

ಬುದ್ಧ ಕ್ರಿಷ್ಣ ಕ್ರಿಸ್ತ ಪೈಗಂಬರ ಬಸವಾದಿ ಶರಣರನ್ನು ದಾಸವರೇಣ್ಯರನ್ನು ಮನ, ಒಡಲಿನ ಮೂಲಕ ಅವರ ಒಡಲನ್ನು ಪೂಜಿಸಿತು. ಆರಾಧಿಸಿತು. ಅವರಿಗೆ ಆಲಯಗಳನ್ನು ನಿರ್ಮಿಸಲು ಒಡಲಿಗೆ ಮನ ಆದೇಶ ನೀಡಿತೆ ಹೊರತು ಅರಿವಿಗೆ ಭಕ್ತನಾಗಿ ಅವರಂತೆ ಜ್ಞಾನಿಯಾಗಲು ಮನಕ್ಕೆ ಹೊಳೆಯಲೇ ಇಲ್ಲ.

ಒಡಲನ್ನು ಸದಾ ದುರ್ಬಳಕೆ ಮಾಡಿಕೊಳ್ಳುವ ತುಚ್ಛ ಮನಕ್ಕೆ ಒಡಲಾಳದಲ್ಲಿರುವ ಅರಿವಿನ ಮಾತು ಕೇಳಿ ಕಳವಳವಾಗಲೇ ಇಲ್ಲ. ತೀವ್ರವಾದ ವ್ಯಥೆ ಉಂಟಾಗಲೇ ಇಲ್ಲ. ಎತ್ತು ಏರಿಗೆ ಎಳೆದರೆ ಮನವೆಂಬ ಕೋಣ ಕೆರೆಗೆ ಎಳೆಯುವುದು ಮನಕ್ಕೆ ಭಾಸವಾಗಲೇ ಇಲ್ಲ. ಇಂತಹ ಅಜ್ಞಾನಿ ತುಚ್ಛ ಮನಕ್ಕೆ ಅರಿವಿನ ಮೇಲೆ ಭಕ್ತಿ ಎಂತಪ್ಪುದಯ್ಯಾ?

ಒಡಲೊಳಗಿದ್ದು, ಒಡಲಿಂಗೆ ಆಧಾರವಾಗಿ, ಒಡಲನ್ನು ಸೋಂಕದೆ ಸದಾ ಒಡಲನ್ನು ತನ್ನ ಅರಿವಿನ ಬೆಳಕಿನ ಮೂಲಕ, ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿವೆಂಬ ಶಿವನ ಮೇಲೆ ಒಡಲನ್ನು ಆವರಿಸಿದ ಮನಕ್ಕೆ ಎಂತಪ್ಪುದಯ್ಯಾ ಭಕ್ತಿ?

ಕಣ್ಣಿನ ಮೂಲಕ ಒಡಲನ್ನು ನೋಡಿ ಹಾದರ ಮಾಡುತ್ತದೆ. ಬಾಯಿಯ ಮೂಲಕ ಹಾದರದ ಮಾತುಗಳನ್ನಾಡುತ್ತದೆ. ನೋಡಿ ಹಾದರ ಮಾಡುವ, ನುಡಿಯುವ ಮೂಲಕ ಹಾದರದ ಮಾತುಗಳನ್ನು ಆಡುವ ತುಚ್ಛ ಮನಕ್ಕೆ ಅರಿವೆಂಬ ಶಿವನ ಮೇಲೆ ಎಂತಪ್ಪುದಯ್ಯ ಭಕ್ತಿ?

ನೋಡಿ ಹಾದರ ಮಾಡುವ ಮನದ ಕಣ್ಣು ಕಣ್ಣಲ್ಲಿಯೇ ಇದೆ. ನೋಡಿದ್ದು ತಪ್ಪೆಂದು ನೋಟದ ಮೂಲಕ ತಿಳಿ ಹೇಳಿದ ಅರಿವಿನ ಮುಕ್ಕಣ್ಣನ ಕಣ್ಣು ಕಣ್ಣಲ್ಲಿಯೇ ಇದೆ. ಸಾಕ್ಷಾತ್ ಇದು ತನಗೆ ನಿಶ್ಚಯವೆಂದು ಅರಿತು ನಂಬಿ ನಡೆಯದ ಭ್ರಾಂತುಳ್ಳ ಚಿತ್ತಮನದ ಕಣ್ಣಿಗೆ ಎಂತಪ್ಪುದಯ್ಯಾ ಶಿವಭಕ್ತಿ?

ಮನವೆಂಬ ಸೂಕ್ಷ್ಮಕಾಯದೊಂದಿಗೆ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಶಿವಕಾಯಕ್ಕೆ ಪಲ್ಲಟವಾಗಿ ಆ ಶಿವನಿಗೆ ಭಕ್ತಿ ಮಾಡದ ತುಚ್ಛ ಮನಕ್ಕೆ ಎಂತಪ್ಪುದಯ್ಯ ಭಕ್ತಿ ಎಂದು ಸಿದ್ಧರಾಮ ಶಿವಯೋಗಿಗಳು ಓದುಗರನ್ನು ಪ್ರಶ್ನಿಸಿದ್ದಾರೆ.

**ಇತ್ತವರಿಲ್ಲ ಹೆತ್ತವರಿಲ್ಲ ನಿನಗೆ**
**ಆದಿ ಶೂನ್ಯ ತಮಂಧನಾಗಿದ್ದೆ ನೀನಯ್ಯಾ.**
**ನೀ ಶಕ್ತಿ ಪೂರವಿಸಲಿಕೆ ಎಲ್ಲವಾಗಿದ್ದೆಯಯ್ಯಾ.**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ತಂದೆ ತಾಯಿ ತನುವಿಗೆ ಜನ್ಮ ಕೊಡುತ್ತಾರೆ. ತನುವಿನಲ್ಲಿ ಸಂಗಮವಾದ ಅರಿವಿಗೆ ಯಾರೂ ಜನ್ಮ ಕೊಡುವುದಿಲ್ಲ. ಅರಿವನ್ನು ತಿಳಿಯುವ ಮನಸ್ಸಿಗೆ ಅರಿವೇ ಜನ್ಮ ಕೊಟ್ಟು ಅದನ್ನು ಶಕ್ತಿ ಎಂದು ಕರೆಯಲು ತನುವಿಗೆ ಪ್ರೇರಣೆ ನೀಡಿದೆ. ಈ ಶಕ್ತಿಯೇ ಅರಿವನ್ನು ಗುರುದೇವನೆಂದು, ಮಹಾದೇವನೆಂದು, ಸದಾಶಿವನೆಂದು ಹೆಸರಿಟ್ಟು ಕರೆಯುವ ಮೂಲಕ ಆ ಶಿವನಿಗೆ ಭಕ್ತಿ ಮಾಡಿತು.

ಶಿವ ಮನಕ್ಕೆ ಶಕ್ತಿ ಧಾರೆ ಎರೆದ. ಆ ಶಕ್ತಿಯ ಮೂಲಕ ಮನ ಶಿವನನ್ನು ಆರಾಧಿಸಿ ಆ ಶಿವನಲ್ಲಿಯೇ ಸಂಗಮವಾಗಿ ಶಿವಶಕ್ತಿ ಎಂದು ಕರೆಯಿಸಿಕೊಂಡಿತು. ಅರ್ಧನಾರೀಶ್ವರನೆಂದು ಕರೆಯಿಸಿಕೊಂಡಿತು. ಹೀಗಾಗಿ

ಶಿವ ಯಾರ ಗರ್ಭದ ಮೂಲಕವೂ ಜನ್ಮ ತಾಳಲಿಲ್ಲ. ಆತನಿಗೆ ಹೆತ್ತವರಿಲ್ಲ. ಆತನನ್ನು ಹೊತ್ತವರೂ ಇಲ್ಲ; ಇತ್ತವರೂ ಇಲ್ಲ. ಆತ ಅನಾದಿಯಿಂದ ಅತ್ತತ್ತ. ಆತ ಅನಾದಿಯಲ್ಲಿಯೂ ಶೂನ್ಯ. ಆದಿಯಲ್ಲಿಯೂ ಶೂನ್ಯ.

ಅರಿವೆಂಬ ಗುರುದೇವನೇ ಸದಾಶಿವನಾಗಿ,ಆತ ಸೃಷ್ಟಿಮಾಡಿದ ಬ್ರಹ್ಮಾಂಡವನ್ನು ಆತನೇ ನೋಡಬೇಕೆಂದು ಆತನಿಗೆ ಬಯಕೆಯಾದಾಗ ಮನವೆಂಬ ಶಕ್ತಿಯನ್ನು ತನುವಿಗೆ ಪೂರೈಸಿದ. ಆ ಶಕ್ತಿಯ ಮೂಲಕ ತನುವಿಗೆ ಚೈತನ್ಯ ನೀಡಿದ. ಆ ಮನವೆಂಬ ಶಕ್ತಿಯ ಮೂಲಕ ತಾನು ಶಿವನೆಂದು ಕರೆಯಿಸಿಕೊಂಡ. ಶಿವಶಕ್ತಿಯಾದ. ತಾನು ಸೃಷ್ಟಿ ಮಾಡಿದ ತನುವಿನ ಕಣಕಣದಲ್ಲಿ ತಾನೇ ಸಂಗಮವಾದ ಶಿವಶಕ್ತಿಯ ಮೂಲಕ ತನ್ನಿಂದ ಸೃಷ್ಟಿಮಾಡಿದ ಇಡೀ ಬ್ರಹ್ಮಾಂಡವನ್ನು ತಾನೇ ನೋಡಿದ.

ಮನದ ಮೂಲಕ ಅರಿವೆಂಬ ಗುರುದೇವನನ್ನು ಸಾಕ್ಷಾತ್ಕರಿಸಿಕೊಂಡ ಬಸವಣ್ಣನವರು ಹೀಗೆ ಹೇಳುತ್ತಾರೆ:

ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ. ಆದಿವಿಡಿದು ಬಂದಾತನೆ ಭಕ್ತ, ಅನಾದಿವಿಡಿದು ಬಂದಾತನೆ ಜಂಗಮ. ಆದಿ ಗುರು, ಅನಾದಿ ಶಿಷ್ಯ. ಈ ಉಭಯ ಕುಳಸ್ಥಳವ ಬಲ್ಲಡೆ ಆತ ಲಿಂಗ ಸಂಬಂಧಿ ಕೂಡಲಸಂಗಮದೇವಾ.

ಇಡೀ ಬ್ರಹ್ಮಾಂಡವನ್ನು 'ಬಯಲು' ಸೃಷ್ಟಿ ಮಾಡಿದ್ದರೂ, ಅದು ತನುವಿನ ಮೂಲಕ ಪರಿಚಯವಾಗಿದೆ. ತನುವನ್ನು ಸೃಷ್ಟಿ ಮಾಡಿ, ತನುವಿನಲ್ಲಿಯೇ ಬಯಲು ಒಳ ಹೊರಗೆನ್ನದೆ ಸಂಗಮವಾಗಿದ್ದರೂ ಕೂಡಾ, ತನುವನ್ನು ಆವರಿಸಿದ ಮನದಿಂದಲೇ 'ಬಯಲು' ಪರಿಚಯವಾಗಿದೆ.

ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು 'ಬಯಲಿಗೆ' ತನುವಿನ ಮೂಲಕ ನೋಡಲು ಸಾಧ್ಯವಾಗಿದೆ. ಹೀಗಾಗಿ ಬಸವಣ್ಣನವರು ಆದಿಗುರು, ಅನಾದಿ ಶಿಷ್ಯ ಎಂದರು.

ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿದ್ದ 'ಬಯಲ' ದಾಸೋಹಿಯನ್ನು ಮನವೆಂಬ ಶಿಷ್ಯ ಕಂಡು ಹಿಡಿದುದರಿಂದ, ಶಿಷ್ಯ ಅನಾದಿಯಾದ. ಮನವೆಂಬ ಶಿಷ್ಯನನ್ನು ಅರಿವೆಂಬ ಗುರುದೇವ ಸೃಷ್ಟಿ ಮಾಡಿ ಅನಾದಿ ಎನ್ನಿಸಿಕೊಂಡಿದ್ದರೂ ಕೂಡಾ, ಗುರುದೇವನ ಪರಿಚಯ ಇಡೀ ಬ್ರಹ್ಮಾಂಡಕ್ಕೆ ಆದುದು ಶಿಷ್ಯನಿಂದ. ಆದುದ ಬಸವಣ್ಣನವರು ಶಿಷ್ಯನನ್ನೇ ಅನಾದಿ ಎಂದು ಕರೆದರು!

ಆದಿ ಶೂನ್ಯ ತಮಂಧನಾಗಿದ್ದ ನೀನು, ನಿನ್ನ ಶಕ್ತಿಮನಕ್ಕೆ ಪೂರೈಸಿ ತನುವಿನ ಮೂಲಕ ಬ್ರಹ್ಮಾಂಡವಾಗಿದ್ದೆಯಯ್ಯಾ; ಎಲ್ಲವೂ ನೀನೆ ಆಗಿದ್ದೆಯಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಹೃದಯ ತುಂಬಿ ಹಾಡಿದ್ದಾರೆ.

**241**

**ಇದಿರಿಂಗೆ ಕಿಂಕರನಾಗಿ ತನ್ನ ದೇಹಗುಣವಡಗಬಲ್ಲಡೆ,**
**ಅಲ್ಲಿರ್ಪ ಆ ಮಹಾಮಹಿಮನ ನಿಜವ ಕೂಡಿ**
**ಗಡಣದಲ್ಲಿರ್ಪಾತ್ಮನ ಕೂಡೆ ಆಡುತಿಪ್ಪನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವರು ಭಕ್ತದೇಹಿಕನಾಗಿ.**

''ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಶವಯ್ಯಾ''. ದೇವರು ದೇಹವಾಗಿ ಅವತರಿಸಿದ್ದಾನೆ. ಆ ದೇಹವನ್ನೇ ದೇವಾಲಯವನ್ನಾಗಿಸಿಕೊಂಡು ದೇಹದಲ್ಲಿಯೇ ಸಂಗಮವಾಗಿದ್ದಾನೆ. ದೇಹವನ್ನು ಆವರಿಸಿದ ಮನಕ್ಕೆ ದೇವರಿದ್ದ ವಿಷಯ ಬಲವಾಗಿ ಅನುಭವಕ್ಕೆ ಬಂದರೆ ಸಾಕು; ಆ ದೇವರಿಗೆ ಭಕ್ತನಾಗಿ ಕಿಂಕರನಾಗುತ್ತದೆ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತ ವ್ಯಸನಗಳು, ಅಷ್ಟ ಮದಗಳು, ಸಾತ್ವಿಕ ರಾಜಸ ತಾಮಸವೆಂಬ ದೇಹಗುಣಗಳು ಅಡಗುತ್ತವೆ.

ದೇಹಗುಣವಡಗಿದ ದೇಹಕ್ಕೆ; ದೇಹ ಕಂಡರೆ ಸಾಕು ಕಿಂಕರನಾಗುತ್ತದೆ. ದೇಹಗುಣವಡಗಿದ ದೇಹಕ್ಕೆ ದೇಹ ಕಾಣುವುದೇ ಇಲ್ಲ. ಹೆಣ್ಣು ಗಂಡು ಎಂಬ ಅಜ್ಞಾನ ಕಾಣುವುದಿಲ್ಲ. ಕಿಂಕರನಾದ ದೇಹಕ್ಕೆ ದೇಹದಲ್ಲಿಯೇ ಸಂಗಮವಾದ ಶಂಕರನೆಂಬ ಮಹಾಮಹಿಮ ಮಾತ್ರ ಕಾಣುತ್ತಾನೆ. ಆ ನಿಜ ಪರಮ ಆತ್ಮನನ್ನು ಕೂಡುತ್ತಾನೆ. ಆತನಿಗೆ ಭಕ್ತಿ ಮಾಡಿ ಆತನ ಪಾದಗಳಿಗೆ, ಹಣೆಮಣೆಯುತ್ತಾನೆ.

ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವರು ಭಕ್ತದೇಹಿಕನಾಗಿ :

ಪ್ರತಿ ದೇಹವೂ ದೇವರಿದ್ದ ದೇಹ; ಆದರೆ ಮನದ ಅನುಭವಕ್ಕೆ ಬರಬೇಕು ಎಂದು ಖಚಿತವಾಗಿ ಹೇಳಿದ ಸಿದ್ಧರಾಮ ಶಿವಯೋಗಿಗಳ ಸೂತ್ರಕ್ಕೂ; ಬಸವರಸರ ಈ ಸೂತ್ರಕ್ಕೂ ಸಾಮ್ಯವಿದೆ ಎಂಬುದನ್ನು ಗಮನಿಸಿ:

ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ? ಈ ಲೋಕದೊಳಗೆ ಮತ್ತೆ ಅನಂತ ಲೋಕ, ಶಿವಲೋಕ, ಶಿವಾಚಾರವಯ್ಯಾ. ಶಿವಭಕ್ತರಿದ್ಧ ಠಾವೇ ದೇವಲೋಕ, ಭಕ್ತನಂಗಳವೇ ವಾರಣಾಸಿ, ಕಾಯವೆ ಕೈಲಾಸ. ಇದು ಸತ್ಯ ಕೂಡಲಸಂಗಮದೇವಾ.

ಕಾಯವನ್ನು ಆವರಿಸಿದ ಮನ 'ಕಾಯಕ'ವನ್ನು ತಪ್ಪಾಗಿ ಅರ್ಥೈಸಿಕೊಂಡಿರುವುದರಿಂದ ಕಾಯವನ್ನು ಹಗಲಿರುಳೆನ್ನದೆ ದುಡಿಸುತ್ತದೆ. ಕೈಲಾಸವೇ ತಾನಾಗಬೇಕಾದ ಕಾಯ; ಕಳವು

ಭ್ರಷ್ಟಾಚಾರ ಹಾದರ ಅತ್ಯಾಚಾರ ಹತ್ಯಾಚಾರದಲ್ಲಿ ಹಗಲಿರುಳೆನ್ನದೆ ತೊಡಗುತ್ತದೆ. ಕಾಯ ಕಾಯದೊಂದಿಗೆ ದ್ವೇಷಿಸಿ, ಕಾಯ ಕಾಯದೊಂದಿಗೆ ಮದ ಮತ್ಸರ ಪಟ್ಟು; ಕಾಯ ಕೈಲಾಸವಾಗದೆ ಒಮ್ಮೆ ಇಲ್ಲವಾಗುತ್ತದೆ.

ಶರಣರ ಅನುಭಾವವೇ ಕಾಯಕ್ಕೆ ಕಾಯಕವಾದಾಗ ಕಾಯವೇ ಕೈಲಾಸವಾಗುತ್ತದೆ. ಸಕಲ ಕಾಯಗಳನ್ನು ಕಾಯ ಕೈಲಾಸದಂತೆ ನೋಡುತ್ತದೆ. ''ಗುರು ಉಪದೇಶ ಮಂತ್ರ ವೈದ್ಯ, ಜಂಗಮ ಉಪದೇಶ ಶಸ್ತ್ರ ವೈದ್ಯ ನೋಡಾ, ಭವರೋಗವ ಕಳೆವ ಪರಿಯ ನೋಡಾ, ಕೂಡಲಸಂಗನ ಶರಣರ ಅನುಭಾವ ಮಡಿವಾಳನ ಕಾಯಕದಂತೆ''

ಮಡಿವಾಳ ಮಾಚಿದೇವರು ವಸ್ತ್ರ ತೊಳೆಯಲಿಲ್ಲ ; ಕಾಯಕ್ಕೆ ಅಂಟಿದ ಅವಗುಣಗಳನ್ನು ತಮ್ಮ ಅನುಭಾವದ ಮೂಲಕ ತೊಳೆದರು. ಮನ ಮೃದುವಾಯಿತು. ಭಕ್ತನಾಯಿತು. ಕಾಯವೇ ಕೈಲಾಸವಾಯಿತು. ಸಕಲಕಾಯಗಳೂ ಕಾಯಕ್ಕೆ ಕೈಲಾಸವಾಗಿ ಕಂಡವು. ಕಾಯದಲ್ಲಿದ್ದ ದೇವರು ಭಕ್ತಕಾಯಕ್ಕೆ ದೇಹಿಕನಾಗಿ ಬೆಳಗಿದ!

**242**

**ಇದು ಪುಣ್ಯ, ಇದು ಪಾಪವೆನ್ನದೆ ಆಸೆ ಮಾಡುತಿಪ್ಪಳು.**
**ಆ ಆಸೆಯೆಂಬವಳಿಂದರೆ ನಿಮ್ಮಡೆಗಾಣದಿಪ್ಪೆನು.**
**ಈ ಆಸೆಯೆಂಬವಳನೆಂದಿಂಗೆ ನೀಗಿ,**
**ಎಂದು ನಿಮ್ಮನೊಡಗೂಡಿ ಬೇರಾಗದೆಂದಿಪ್ಪೆನೊ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಸೆ ಮಾಡುವ ಮನ ದೇಹವನ್ನು ಆವರಿಸಿದೆ. ಯಾವುದೇ ಆಸೆ ಇಲ್ಲದೆ, ಸದಾ ಆಸೆ ಮಾಡುವ ಮನಕ್ಕೆ ಪಾಠಮಾಡುವ ಸಹಜ ಅರಿವು ದೇಹದಲ್ಲಿ ಸಂಗಮವಾಗಿದೆ. ಮನ ಮತ್ತು ಅರಿವಿಗೆ ದೇಹ ಉಪಕರಣವಾಗಿದೆ.

ಇದು ಪುಣ್ಯ ಇದು ಪಾಪವೆನ್ನದೆ, ದೇಹವನ್ನು ತನ್ನ ವಶಕ್ಕೆ ತೆಗೆದುಕೊಂಡು ಮನಸ್ಸು ಸದಾ ದೇಹವನ್ನು ಹಿಡಿದು ಆಸೆ ಮಾಡುತ್ತದೆ.

ಅರಿವೆಂಬ ಗುರುದೇವನೆ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ಈ ಆಸೆಯೆಂಬ ಹಠಮಾರಿ ಹೆಣ್ಣಿನಿಂದಾಗಿ ನಿಮ್ಮತ್ತ ಬರಲು ನನಗೆ ಸಾಧ್ಯವಾಗುತ್ತಿಲ್ಲ. ನಿಮ್ಮ ಅರಿವಿನ ಪರಮ ಸುಖವನ್ನು ಉಣ್ಣಲು ನನಗೆ ಸಾಧ್ಯವಾಗುತ್ತಿಲ್ಲ ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

ಮನವೆಂಬ ಹಾದರದ ಹೆಣ್ಣಿನಿಂದ ನನಗೆ ಎಂದು ಬಿಡುಗಡೆಯಾಗುವುದೋ ಅರಿವೆಂಬ ಗುರುದೇವನಾದ ನಿಮ್ಮನ್ನು ನಾನು ಕೂಡಿ ಆ ಪರಮ ಸುಖದಲ್ಲಿಯೇ ಸಂಗಮವಾಗಿ ಬೇರಾಗದೆ ಎಂದಿಪ್ಪೆನೊ ಎಂದು ನನಗೆ ಸದಾ ನಿಮ್ಮದೆ ಚಿಂತೆಯಾಗಿದೆ ಗುರುದೇವನೆ.

ಪಾಪದ ಕೆಲಸ ಮಾಡಬಾರದು ಎಂದು ನನಗೆ ಗೊತ್ತಾಗುತ್ತದೆ. ಪುಣ್ಯದ ಕೆಲಸ ಮಾಡಿ ಅಹಂಕಾರಿಯಾದೆನೆಂದು ನನಗೆ ಗೊತ್ತಾಗುತ್ತದೆ. ಈ ಎರಡೂ ಕೆಲಸಗಳನ್ನು ಮನವೇ ದೇಹದ ಮೂಲಕ ಮಾಡಿಸಿತು ಎಂದು ಕೂಡಾ ನನಗೆ ಗೊತ್ತಾಗುತ್ತದೆ. ಪಾಪ-ಪುಣ್ಯವೆಂದರೆ ಮನಕ್ಕೆ ಸುಖ ಆ ಸುಖದಲ್ಲಿ ದೇಹ ಲೀಯವಾಗಿದೆ. ಆಗ ಮನಕ್ಕೆ ನಿನ್ನ ಅರಿವಿನ ಮಾತು

ಕೇಳಿಬರುವುದಿಲ್ಲ. ದೇಹದ ಸುಖ ತೀರಿದ ನಂತರ ಮನ, ನಿನ್ನ ಅರಿವಿನ ಮಾತನ್ನು ಕೇಳಿಸಿಕೊಳ್ಳುತ್ತದೆ. ನಿನ್ನ ಉಪದೇಶ ಮನಕ್ಕೆ ನಾಟುತ್ತದೆ. ತಾನು ಮಾಡಿದ್ದು ಪಾಪದ ಕೆಲಸವೆಂದು ನಿನ್ನಿಂದಾಗಿ ಮನಕ್ಕೆ ಅರಿವಾಗುತ್ತದೆ. ಆದರೆ ಮನದ ಸುಖ ನೀಗುವುದೇ ಇಲ್ಲ. ಅದು ಬದಲಾಗುವುದಿಲ್ಲ. ಬದಲಾಗುವ ಗುಣ ಮನಕ್ಕೆ ಇಲ್ಲ.

ಪುನಃ ಪುಣ್ಯ ಪಾಪದ ಸುಖದಲ್ಲಿ ಮನ, ದೇಹದೊಂದಿಗೆ ಸುಖಿಸುತ್ತದೆ. ದೇಹ ಇರುವವರೆಗೆ ನಿರಂತರ ಈ ಅಜ್ಞಾನದ ಕೆಲಸ ದೇಹದ ಮೂಲಕ ನಡೆಯುತ್ತಲೇ ಇರುತ್ತದೆ. ತಾನು ಮಾಡಿದ್ದು ಅಜ್ಞಾನದ ಕೆಲಸವೆಂದು ಮನಕ್ಕೆ ಜ್ಞಾನದ ಮೂಲಕ ತಿಳಿಯುತ್ತಲೇ ಇರುತ್ತದೆ. ಪುನಃ ಅಜ್ಞಾನದ ಕೆಲಸದಲ್ಲಿ ಭಾಗಿಯಾಗಬಾರದೆಂದು, ನಾನು ಬದಲಾಗಬೇಕೆಂದು ಮನ ತನಗೆ ತಾನೇ ಹೇಳಿಕೊಳ್ಳುತ್ತದೆ.

ಆದರೂ ಬದಲಾಗುವುದಿಲ್ಲ. ಬದಲಾಗುವ ಶಕ್ತಿ ಮನಕ್ಕೆ ಇಲ್ಲ. ಏಕೆಂದರೆ ಮನ ಎನ್ನುವುದು ಇಲ್ಲದ್ದು, ಅದು ಕತ್ತಲು. ಮರೀಚಿಕೆ, ಬಿಸಿಲುಗುದುರೆ! ಕತ್ತಲಲ್ಲಿ ಬಿದ್ದ ವಸ್ತುಗಳು ಹೇಗೆ ಕಾಣುವುದಿಲ್ಲವೊ ಹಾಗೆ ಮನಕ್ಕೂ ಕೂಡಾ ವಸ್ತುವಿನ ಸತ್ಯ ಅರಿವಾಗುವುದಿಲ್ಲ. ಹೀಗಾಗಿ ಮನ ದೇಹದೊಂದಿಗೆ ವಸ್ತುವಿನ ಮೂಲಕ ಸುಖಿಸುತ್ತದೆ; ವಸ್ತುವಿನ ಮೂಲಕ ದುಃಖಿಸುತ್ತದೆ. ಸುಖ ದುಃಖ, ಪಾಪ ಪುಣ್ಯವೆಂಬುದು ನಿರಂತರ ದೇಹದ ಮೂಲಕ ನಡೆಯುತ್ತಲೇ ಇರುತ್ತದೆ.

ದೇಹದಲ್ಲಿಯೇ ಸಂಗಮವಾದ ಅರಿವಿನ ದರ್ಶನ ಮನಕ್ಕೆ ಆದಾಗಲೇ, ಆ ಅರಿವಿನಲ್ಲಿ ಮನ ಸಂಗಮವಾಗುತ್ತದೆ. ಕತ್ತಲು ಬೆಳಕಿನಲ್ಲಿ ಸಂಗಮವಾಗಿ ಬೆಳಕೇ ಆದಂತೆ; ಮನ ಅರಿವಿನಲ್ಲಿ ಸಂಗಮವಾಗಿ ಅರಿವೇ ತಾನಾಗುತ್ತದೆ.

ಅರಿವೆಂದರೆ ಬೆಳಕು! ಅದು ಕೋಟಿ ಸೂರ್ಯರನ್ನು ಬೆಳಗುವ ಬೆಳಕು. ಮನವನ್ನು ಅರಿವಿಗೆ ಹೋಲಿಸುವಂತೆಯೇ ಇಲ್ಲ. ಕತ್ತಲನ್ನು ಸೂರ್ಯನ ಬೆಳಕಿಗೆ ಹೋಲಿಸಲು ಸಾಧ್ಯವೆ? ಹಾಗೆಯೇ ಇಂತಹ ಅರಿವನ್ನು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಕರೆದರು. ಬಸವಣ್ಣ ಕೂಡಲಸಂಗಮದೇವಾ ಎಂದ. ಸಿದ್ಧಾರ್ಥ ಬುದ್ಧ ಎಂದು ಕರೆದ.

ದೇಹದ ಮೂಲಕ ಮನ ನಿರಂತರ ಬಡತನ, ದರಿದ್ರತನ ಅನುಭವಿಸುತ್ತದೆ ಕಳ್ಳ, ಹಾದರಿಗ, ಕೊಲೆಗಡುಕ, ಅತ್ಯಾಚಾರಿ ಎಂದು ಕರೆಯಿಸಿಕೊಳ್ಳುತ್ತದೆ. ಇದು ಮನ ಆಸೆ ಮಾಡಿದ್ದಕ್ಕಾಗಿ ದೇಹಕ್ಕೆ ಬಂದ ಪ್ರತಿಫಲ. ಇದೆಲ್ಲ ದೇಹದಿಂದ ಹೊರಗಿದ್ದ ಬಾಹ್ಯವಸ್ತುಗಳು. ಅರಿವು, ದೇಹದಲ್ಲಿಯೇ ಸಂಗಮವಾದ ವಸ್ತು! ಮನಕ್ಕೆ ಜ್ಞಾನ ಪಡೆಯುವ ಬಯಕೆಯಾದರೆ ದೇಹದ ಹೊಸ ಶಕೆ ಆರಂಭವಾಗುತ್ತದೆ. ಆಗ ದೇಹ ಜ್ಞಾನಿ, ಬುದ್ಧ, ಶರಣ, ಮಹಾವೀರ ಎಂದು ಕರೆಯಿಸಿಕೊಳ್ಳುತ್ತದೆ.

**243**

**ಇದ್ದೆಸೆಯನರಿದಾತ ತತ್ವವಾದನು ತನ್ನ**
**ಸಪ್ತ ಧಾತುವನು ಗುರುವಿಗಿತ್ತು.**
**ಮತ್ತೆ ಕಲೆಯೆಂದಡೆ ತತ್ವಪದ ಮೀರಿದನು**
**ಸತ್ಯಶುದ್ಧನು ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನುಷ್ಯ ಮಹಾ ಮನುಷ್ಯನಾಗಿ, ಜ್ಞಾನಿಯಾಗಿಯೇ ಹುಟ್ಟ ಬೇಕಾಗಿತ್ತು. ಮನುಷ್ಯನನ್ನು ಬಿಟ್ಟು ಉಳಿದ ಜೀವಿಗಳೆಲ್ಲ ಸಹಜವಾಗಿವೆ. ಸಹಜವಾಗಿಯೇ ಜನ್ಮ ತಳೆದಿವೆ.

ಸಹಜತೆಯನ್ನು ಮೈಗೂಡಿಸಿಕೊಂಡಿವೆ. ಆದರೆ ಮನುಷ್ಯ ಹಾಗಲ್ಲ. ಸಹಜತೆ ಎನ್ನುವುದು ಮನುಷ್ಯನಲ್ಲಿ ಸಂಗಮವಾಗಿದೆ. ಮನಸ್ಸಿನ ಮೂಲಕ ದೇಹವನ್ನು ಗಮನಿಸಿ, ದೇಹದಲ್ಲಿಯೇ ಸಂಗಮವಾದ ಸಹಜ ಜ್ಞಾನಕ್ಕೆ, ಹರಿದಾಡುವ ಮನಸ್ಸನ್ನು ಅರ್ಪಣೆ ಮಾಡಬೇಕು.

ಮನಸ್ಸು ದೇಹ ಜ್ಞಾನ ಎಂಬ ತ್ರಿಕೂಟಗಳ ಸಂಗಮ ಎನ್ನಿಸಿಕೊಂಡಿದ್ದಾನೆ ಮನುಷ್ಯ. ಹೀಗೆ ಕೂಡಿದ ಮಹಾಜ್ಞಾನ ಸಂಗಮವನ್ನು ಬಸವಣ್ಣನವರು 'ಕೂಡಲ ಸಂಗಮ' ಎಂದು ಕರೆದರು. ನೋಡಲು ದೇಹ ಒಂದೇ ಆಗಿ ಕಂಡರೂ ಸಕಲ ದೇಹಗಳು ಜ್ಞಾನಿಯಂತೆ ಸಹಜವಾಗಿ ಇರಲು ದೇಹಗಳಿಗೆ ಸಾಧ್ಯವಾಗುತ್ತಿಲ್ಲ.

ಒಂದು ದೇಹದ ಮನಸ್ಸಿನ ಸ್ವಭಾವ ಮತ್ತೊಂದು ದೇಹಕ್ಕಿಂತ ಭಿನ್ನವಾಗಿದೆ. ಈ ಭಿನ್ನತೆ ಪ್ರತಿ ದೇಹಕ್ಕೂ ಅರಿವಾಗುತ್ತದೆ. ದೇಹದ ಅಜ್ಞಾನ ದೇಹಕ್ಕೆ ಅರಿವಾಗುವ ಅರಿವಿನ ವ್ಯವಸ್ಥೆಯೂ ದೇಹದಲ್ಲಿಯೇ ಇದೆ. ಹೀಗೆ ಅರಿವು ಮಾಡುವ ಅರಿವು ದೇಹದಲ್ಲಿಯೇ ಸಂಗಮವಾಗಿದೆ. ಈ ಅರಿವೇ ತತ್ತ್ವ, ಇದು ಬದಲಾಗುವುದಿಲ್ಲ.

ದೇಹ, ಅರಿವನ್ನು ಮತ್ತು ಮನಸ್ಸನ್ನು ಹೊತ್ತುಕೊಂಡಿದೆ. ಅರಿವಿಗೂ ಮನಸ್ಸಿಗೂ ದೇಹ ಉಪಕರಣವಾಗಿದೆ. ಅರಿವು 'ಮಹಾಜ್ಞಾನ' ಎನ್ನಿಸಿಕೊಂಡಿದೆ. ಸಿದ್ಧಾರ್ಥ ಈ ಅರಿವನ್ನು ಬುದ್ಧ ಎಂದು ಕರೆದ.

ವೇದ ಆಗಮ ಉಪನಿಷತ್ತುಗಳ ಮೂಲಕ ಜ್ಞಾನ ಪಡೆಯುವ ಸೂತ್ರವನ್ನು ಜ್ಞಾನಿಗಳು ಬರೆದರು. ರಾಮಾಯಣ ಮಹಾಭಾರತ ಭಗವದ್ಗೀತೆ ಭಾಗವತಗಳು ಜ್ಞಾನ ಪಡೆಯುವ ಸೂತ್ರಗಳೇ ಆಗಿವೆ. ಬೈಬಲ್ ಕುರಾನ್ ತ್ರಿಪಿಟಿಕ ಗ್ರಂಥಸಾಹೇಬ ಪುಸ್ತಕಗಳನ್ನು ಜ್ಞಾನಿಗಳು ದೇಹದಲ್ಲಿರುವ ಜ್ಞಾನ ತತ್ವವನ್ನು ದೇಹಗಳು ತಿಳಿದುಕೊಳ್ಳಲೆಂದೇ ಬರೆದರು. ಆದರೂ ಮನ ವಿಪರೀತವಾಗಿ ತಿಳಿದುಕೊಂಡು ತನ್ನ ಅಜ್ಞಾನ ಮೆರೆಯಿತು.

ಮನ, ದೇಹದ ತತ್ವ ತಿಳಿದುಕೊಂಡು ಆ ತತ್ವ ತಾನಾಗದೆ, ಜಾತಿ ಮತ ಪಂಥ ಧರ್ಮಗಳ ಮೂಲಕ ತನ್ನನ್ನು (ಅಂದರೆ ದೇಹವನ್ನು ದೇಹಗಳ ಮೂಲಕ) ವಿಂಗಡಿಸಿತು.

ಸಕಲ ಜ್ಞಾನ ಪುಸ್ತಕಗಳಲ್ಲಿ ದೇಹ ಜ್ಞಾನ ಮಾರ್ಗವನ್ನು ಕಂಡುಕೊಳ್ಳುವ ಸೂತ್ರ ಇದ್ದರೂ ಆ ಪುಸ್ತಕಗಳೇ ದೇಹಕ್ಕೆ ಮುಳುವಾದವು. ಧರ್ಮಗ್ರಂಥಗಳಾದವು. ಧರ್ಮದಿಂದಲೇ ನಡೆಯಬೇಕಾದ ದೇಹದ ಧರ್ಮ ದೇಹದಲ್ಲಿಯೇ ಉಳಿಯಿತು.

ಮನದಿಂದಾಗಿ ದೇಹ ಪಾಪ ಪುಣ್ಯಗಳ ಕಾಯಕದಲ್ಲಿ ಭಾಗಿಯಾಗುತ್ತದೆ. ತತ್ವದಿಂದಾಗಿ ದೇಹ ಜ್ಞಾನದಿಂದ ಸಹಜವಾಗಿ ಬದುಕುತ್ತದೆ. ತತ್ವದಿಂದ ಬದುಕಬೇಕೋ ಅಥವಾ ಅಜ್ಞಾನದಿಂದ ಬದುಕಬೇಕೋ ಎನ್ನುವುದನ್ನು ಮನವೇ ನಿರ್ಧರಿಸಬೇಕು. ತತ್ವದಿಂದ ಬದುಕಬೇಕೆಂದು ನಿರ್ಧರಿಸಿದರೆ ಮನ ದೇಹದಲ್ಲಿಯೇ ಸಂಗಮವಾದ ತತ್ವಕ್ಕೆ ಜಾರಬೇಕು. ಆ ತತ್ವಕ್ಕೆ ಮನ ತನ್ನನ್ನು ತಾನು ಅರ್ಪಿಸಿಕೊಳ್ಳಬೇಕು.

ಭಗವದ್ಗೀತೆ, ಬೈಬಲ್, ಕುರಾನ್, ತ್ರಿಪಿಟಿಕ, ಗ್ರಂಥಸಾಹೇಬ ಗ್ರಂಥಗಳು; ವೇದ ಆಗಮ ಉಪನಿಷತ್ತುಗಳು ಪುರಾಣಗಳು ಕೂಡಾ ದೇಹಕ್ಕೆ ಬೇಕಾದ ತತ್ವ ದೇಹದಲ್ಲಿಯೇ ಇದೆ ಎಂದು ಹೇಳುತ್ತವೆ, ಗ್ರಂಥಗಳು ತತ್ವಗಳನ್ನು ದೇಹಕ್ಕೆ ಕೊಡುವುದಿಲ್ಲ. ಬರೆದ ವ್ಯಕ್ತಿ ದೇಹಕ್ಕೆ ಉಪಕಾರ ಮಾಡಿದ್ದಾನೆ ಅಷ್ಟೆ. ಆದರೆ ಮನ ಪುಸ್ತಕಗಳಲ್ಲಿರುವ ತತ್ವವೇ ಪ್ರಧಾನವೆಂದು ತಿಳಿದು ಪುಸ್ತಕಗಳನ್ನೇ ಪ್ರಧಾನ ಮಾಡಿಕೊಂಡು ದೇಹದಲ್ಲಿರುವ ತತ್ವವನ್ನು ಅಲಕ್ಷ್ಯ ಮಾಡುತ್ತದೆ.

ಗ್ರಂಥಗಳ ಅಭ್ಯಾಸದಿಂದಾಗಿ ಪಂಡಿತ, ಶಾಸ್ತ್ರಿ, ಗುರು, ಜಗದ್ಗುರು, ಮೌಲ್ವಿ, ಬಿಷಪ್, ಪೋಪ್ ಎಂದು ಕರೆಯಿಸಿಕೊಂಡ ಮನ ದೇಹದ ತತ್ವ ಮರೆತು ಹೋಯಿತು. ದೇಹ ದೇಹಕ್ಕೆ ಗುರುವಾಯಿತು. ದೇಹಕ್ಕೆ ದೇಹವೇ ಶಿಷ್ಯನಾಯಿತು. ದೇಹದ ತತ್ವ ದೇಹದಲ್ಲಿಯೇ ಉಳಿಯಿತು.

ದೇಹದಲ್ಲಿಯೇ ಇರುವ ದೇಹದ ಜ್ಞಾನವನ್ನು, ದೇಹವನ್ನೇ ಆವರಿಸಿದ ಮನ ತಿಳಿಯುತ್ತಿಲ್ಲವೆಂದರೆ ಇದಕ್ಕೆ ಬಲವಾದ ಕಾರಣಗಳೇ ಇರಬೇಕು! ದೇಹ, ರಸ ರಕ್ತ ಮಾಂಸ ಮೇದಸ್ಸು ಮಜ್ಜೆ ಅಸ್ಥಿ ಮತ್ತು ಶುಕ್ಲಗಳೆಂಬ ಸಪ್ತ ಧಾತುಗಳಿಂದ ಭರಿತವಾಗಿದೆ. ಮನವೆಂಬ ಅಜ್ಞಾನ, ಇವೆಲ್ಲವುಗಳನ್ನು ಆವರಿಸಿದೆ. ಜ್ಞಾನತತ್ವ ದೇಹದ ಕಣ ಕಣದಲ್ಲಿ ಭರಿತವಾಗಿದೆ. ಮನದ ಮೂಲಕವೇ ಇದನ್ನು ಅರಿತು; ಅರಿವೆಂಬ ಗುರುದೇವನಿಗೆ ಸಪ್ತಧಾತುಗಳನ್ನು ಅರ್ಪಣೆ ಮಾಡಬೇಕೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಮನ, ದೇಹದ ಮೂಲಕ ಅನೇಕ ಕಲೆಗಳನ್ನು ಕಲಿತು ದೇಹವನ್ನು ಆಯಾ ನೈಪುಣ್ಯತೆಯಿಂದ ಪ್ರದರ್ಶನಕ್ಕೆ ಒಡ್ಡುತ್ತದೆ. ಇದರಿಂದ ಉಂಟಾಗುವ ದುಃಖಗಳು ಪಾಪ ಪುಣ್ಯಗಳು ಸತ್ಯವಲ್ಲ. ಮನ ದೇಹದ ಮೂಲಕ ಒಡ್ಡುವ ರಸಾಯನಿಕ ಕ್ರಿಯೆ. ಸದಾ ದೇಹವನ್ನು ರಸಾಯನಿಕ ಕ್ರಿಯೆಗೆ ಒಡ್ಡುವ ಮನ ದೇಹದಲ್ಲಿಯೇ ಸಂಗಮವಾದ ಜ್ಞಾನ ತತ್ವದಲ್ಲಿ ಸಂಗಮವಾದಾಗ ಅದು ಸಹಜನಾಗುತ್ತದೆ. ತತ್ವಪದ ಮೀರಿ ಸತ್ಯ ಶುದ್ಧನಾಗುತ್ತದೆ. ಮನ ತನಗೆ ತಾನೇ ತನ್ನರಿವಿಗೆ ಶಿಷ್ಯನಾಗುತ್ತದೆ. ಆ ಅರಿವೇ ಮನಕ್ಕೆ ಗುರುದೇವನಾಗುತ್ತಾನೆ. ದೇಹ, ಮನವೆಂಬ ಶಿಷ್ಯನಿಗೆ ಅರಿವೆಂಬ ಗುರುದೇವನಿಗೆ ಆಶ್ರಯ ನೀಡಿ ತ್ರಿಕೂಟ ಸಂಗಮವೆನ್ನಿಸಿಕೊಂಡಿದೆ.

**244**

**ಇದ್ದೆಸೆಯಿಂದಾನು ನಿದ್ದೆಸೆಯಾದೆನ್ನೈ**
**ಹೊದ್ದಿದ ಪ್ರಾಪಂಚ ಜರಿದೆ ನೋಡಾ**
**ಮುಗ್ಧೆಯ ಕೂಟದಲಿ ಹೊದ್ದಿ ನೀ ನಾನಾದೆ**
**ಸದ್ಯಫಲ ನೀನೆನ್ನ ಕಾಡುತಿಪ್ಪೆ.**
**ಶಿಶು ಕಂಡ ಕನಸುವನು ದೆಸೆಗೆಟ್ಟ ಮೋಹವನು**
**ಪಸರಿಸಿತು ಲೋಕಕ್ಕೆ ಅತಿ ಹರುಷದಿಂ.**
**ದೆಸೆಗೇಡಿ ಮಾನವರು ದೆಸೆಯನರಿಯರು,**
**ವಸುಧೆ ಪತಿ ಕಪಿಲಸಿದ್ಧ ಮಲ್ಲೇಶ್ವರನ.**

ಅರಿವೆಂಬ ಗುರುದೇವನೆ ನೀನು ಮಹಾಜ್ಞಾನಿ. ನೀನಿದ್ದ ಜಾಗವೇ ಕೈಲಾಸ. ಅದು ಕಾಶೀ ಶ್ರೀಶೈಲ ಕೇದಾರ! ಅರಿವಿನ ಮಹಾಕ್ಷೇತ್ರ! ನೀನಿದ್ದ ಜಾಗದಲ್ಲಿಯೇ ನಾನಿದ್ದರೂ ಕೂಡಾ, ನಾನು ನಿನ್ನನ್ನು ಅರಿಯದೆ ನಿದ್ರೆಗೆ ಜಾರಿದೆನಯ್ಯಾ.

ನಿನ್ನ ಅರಿವಿನ ಬೆಳಕ ಹೊದ್ದು ಕತ್ತಲಾದದ್ದು ನನ್ನ ದುರ್ದೈವ. ನಾನು ಅಜ್ಞಾನಿ. ನಾನು ಮುಗ್ಧ. ನಿನ್ನ ಬೆಳಕಿನ ಜ್ಞಾನವನ್ನು ಹೊದ್ದ ಕತ್ತಲು ಎಂಬ ಅಹಂಕಾರಿ ನಾನು. ಇದ್ದ ಜಾಗದ ಬೆಳಕನ್ನು ಹೊದ್ದು ಬೆಳಕನ್ನೇ ಹುಡುಕುತ್ತಾ ಹೊರಟ ಕತ್ತಲೆಯೆಂಬ ಮುಗ್ಧ ನಾನು.

ಜ್ಞಾನವೆಂಬ ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಶಿಶು ನಾನು. ನಿನ್ನ ಅರಿವಿನ ಬೆಳಕಿನ ವಸ್ತ್ರ ಹೊದ್ದ ಶಿಶು ನಾನು.

ಶಿಶು ಕಂಡ ಕನಸಿನ ಮೋಹವು ದೆಸೆಗೆಟ್ಟು ಪಸರಿಸಿತು ಲೋಕಕ್ಕೆ; ಅತಿ ಹರುಷದಿಂದ ದೆಸೆಗೇಡಿ ಮಾನವರು ದೆಸೆಯನರಿಯರು :

ಶಿಶು ಕಂಡ ಕನಸಿನ ನಗುವಿನಲ್ಲಿ ಏನಾದರೂ ಅರ್ಥವಿದೆಯೇ? ಅದು ಹಡೆದವನನ್ನು ಕಂಡು ನಗುತ್ತಿದೆಯೆಂದು ಹಡೆದ ಲೋಕ ಅತಿ ಹರುಷದಿಂದ ಅನ್ನುವುದುಂಟು! ಆ ಶಿಶುವನ್ನು ಹಡೆದವನು ಯಾರೆಂದು ಹಡೆದವರಿಗೆ ಏನಾದರೂ ತಿಳಿದಿದೆಯೆ? ನೀನು ಯಾರಿಗೂ ಹುಟ್ಟದವನು. ಆದರೂ ಲೋಕ ನಿನ್ನನ್ನು ಹಡೆದವರು ನಾವೆಂದು ಭಾವಿಸಿದೆ.

ಲೋಕ ನಿನ್ನ ಜ್ಞಾನದ ಗರ್ಭದಲ್ಲಿ ಹುಟ್ಟಿದ ಶಿಶು. ಆ ಶಿಶುವನ್ನು ಹಡೆದು ಆ ಶಿಶುವಿನ ಗರ್ಭದಲ್ಲಿ ನೀನಿದ್ದರೂ; ಲೋಕ ಮುಗ್ಧೆಯಂತೆ ನಿನ್ನ ಕನಸನ್ನೇ ಕಾಣುತ್ತಲಿದೆ. ನಿನ್ನ ಬೆಳಕಿನ ಹಚ್ಚಡವನ್ನು ಹೊದ್ದು ಕತ್ತಲಲ್ಲಿ ಬದುಕುತ್ತಲಿದೆ. ಕತ್ತಲೆಂದರೆ ಲೋಕವೆಂಬ ಶಿಶುವಿಗೆ ಬಲುಸುಖ! ದೆಸೆಗೇಡಿ ಮಾನವರು ದೆಸೆಯನರಿಯರು!

ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ. ಲೋಕದ ತಂದೆ ತಾಯಿಗಳನ್ನು ಮರೆತು ಹಡೆದ ತಂದೆಯನ್ನು ಕುರಿತು ಬಸವಣ್ಣನವರಂತೆ ಹಾಡಲು ಬರಬೇಕಲ್ಲ ಲೋಕಕ್ಕೆ!

ದೆಸೆಗೇಡಿ ಲೋಕದ ಮಾನವರು; ಇದ್ದ ದೆಸೆಯನು ಅರಿಯದೆ ನಿದ್ದೆಗೆ ಜಾರಿದ ಅಜ್ಞಾನಿ ಶಿಶುಗಳು. ಜ್ಞಾನದ ಕನಸು ಕಂಡು ಅತಿ ಹರುಷದಿಂದ ನಕ್ಕರೆ ಆ ಶಿಶುವೇನು ಜ್ಞಾನವನ್ನು ಅರಿತು ನಕ್ಕಂತೆಯೆ? ಜ್ಞಾನದ ಫಲವನು ಕೊಡದೆ ಕಾಡುತ್ತಿರುವ ಮಹಾಜ್ಞಾನಿಯ ದರುಶನ ಶಿಶುವಿಗೆ ಆಯಿತೆ?

ಜ್ಞಾನದ ಹಚ್ಚಡ ಹೊದ್ದು ಹುಟ್ಟಿದ ಶಿಶುವಿಗೆ ವರುಷ ಐವತ್ತಾದರೇನು, ನೂರಾದರೇನು? ಅದು ಜ್ಞಾನವನ್ನು ಅರಿತು ಆ ಜ್ಞಾನವೇ ತಾನಾಗದಿದ್ದರೆ ಅದು ಮೋಹದ ಶಿಶುವೇ ಸರಿ. ಇದ್ದ ದೆಸೆಯನು ಅರಿಯದೆ ನಿದ್ರೆಯ ದೆಸೆಗೆ ಜಾರಿದ ಅಜ್ಞಾನದ ಶಿಶುವೇ ಸರಿ.

ಹಸಿವಿನಿಂದ ತೊಳಲಾಡಿ ಜ್ಞಾನದ ಫಲಕ್ಕಾಗಿ ಹಂಬಲಿಸದಿದ್ದರೆ ಹಡೆದ ತಂದೆ ಜ್ಞಾನದ ಊಟ ಬಡಿಸದೆ ಕಾಡದೆ ಬಿಡನು.

ಶಿಶು ಅಜ್ಞಾನದ ಕನಸು ಕಾಣುತ್ತಾ, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳ ಊಟ ಮಾಡುತ್ತಾ ನಿದ್ರೆಗೆ ಜಾರಿದೆ. ತಾನಿದ್ದ ಮಹಾಜ್ಞಾನದ ಜಾಗವನ್ನೇ ಮರೆತು ಹೋಗಿದೆ. ಅರಿಷಡ್ವರ್ಗಗಳ, ಸಪ್ತ ವ್ಯಸನಗಳ, ಅಷ್ಟ ಮದಗಳ ಕೂಟದಲ್ಲಿ ಕೂಡಿ, ಹೊದ್ದ ಜ್ಞಾನದ ಹಚ್ಚಡವನ್ನೇ ಒದ್ದು ಹೊರಗೆಸೆದು ಮೋಹದ ನಿದ್ರೆಯಲ್ಲಿ ಜಾರಿದೆ; ವಸುಧೆ ಪತಿ ಕಪಿಲಸಿದ್ಧ ಮಲ್ಲೇಶ್ವರನನ್ನು ಅರಿಯದೆ.

**245**

**ಇದೇನಯ್ಯಾ, ಮುಂಡವಿಲ್ಲದೆ ರುಂಡ ಮಾತನಾಡುತ್ತಿದೆ!**
**ಮುಂಡಕ್ಕೆ ಸಮಾಧಿಯೊ?**
**ಮುಂಡ-ರುಂಡಕ್ಕೆ ಸಂಬಂಧವ ಮಾಡಹೋದಡೆ ಸಿಗದಿಪ್ಪುದು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸ್ಥೂಲಕಾಯದಲ್ಲಿ ಜ್ಞಾನಕಾಯ ಸಂಗಮವಾಗಿದೆ. ಈ ಕಾಯವನ್ನು ಕಾರಣ ಕಾಯ ಎಂದು ಕರೆಯುತ್ತಾರೆ. ಕಾರಣ ಕಾಯವೇ ಸ್ಥೂಲಕಾಯಕ್ಕೆ ಜನ್ಮ ನೀಡಿ ಜ್ಞಾನಕಾಯ ಎನ್ನಿಸಿಕೊಂಡು ಸ್ಥೂಲಕಾಯದ ಕಣಕಣದಲ್ಲಿ ಸಂಗಮವಾಗಿದೆ.

ಜ್ಞಾನಕಾಯ ಯಾರಿಗೂ ಕಾಣುವುದಿಲ್ಲ. ಆದರೆ ಸ್ಥೂಲಕಾಯಕ್ಕೆ ಆಧಾರವಾಗಿದೆ. ಸ್ಥೂಲಕಾಯಕ್ಕೆ ಆಧಾರವಾಗಿದ್ದು, ಸ್ಥೂಲಕಾಯವನ್ನು ಬೆಳಗುತ್ತಲಿದೆ. ಇಷ್ಟೇ ಇದ್ದರೆ ಜಗದ ಸಕಲ ಕಾಯಗಳು ಬುದ್ಧ ಮಹಾವೀರ ಬಸವಾದಿ ಶರಣರಂತೆ ದಾಸವರೇಣ್ಯರಂತೆ ಕ್ರಿಸ್ತ ಕೃಷ್ಣ ಪೈಗಂಬರರಂತೆ ಬೆಳಗುತ್ತಿದ್ದವು.

ಸ್ಥೂಲ ಮತ್ತು ಜ್ಞಾನಕಾಯಕ್ಕೆ ಮುಂಡವಿಲ್ಲದ ರುಂಡದ ಕಾಯವೊಂದು ಆವರಿಸಿಕೊಂಡಿದೆ. ಇದನ್ನು ಸೂಕ್ಷ್ಮಕಾಯವೆಂದು ಕರೆಯುತ್ತಾರೆ. ಇದು ಇಲ್ಲದ್ದು, ಹೇಗೆ ಬಿಸಿಲುಗುದುರೆ ಇಲ್ಲವೋ ಹೇಗೆ ಕತ್ತಲು ಎನ್ನುವುದು ಇಲ್ಲವೋ ಹೇಗೆ ಬಂಜೆಗೆ ಮಕ್ಕಳು ಇಲ್ಲವೋ ಇಲ್ಲಾದುದು, ಇದ್ದಂತೆ ಭಾಸವಾಗುತ್ತದೆ. ಹಾಗೆಯೇ ಮನವೆಂಬ ಮುಂಡವಿಲ್ಲದ ರುಂಡ ಸ್ಥೂಲ ದೇಹವನ್ನು ತನ್ನ ಕೈವಶ ಮಾಡಿಕೊಂಡು ಆ ಸ್ಥೂಲದೇಹವನ್ನೇ ತನ್ನ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು ಸುಳ್ಳು ರಾಜ್ಯಭಾರ ನಡೆಸಿದೆ.

ಮುಂಡವಿಲ್ಲದ ರುಂಡ ಸ್ಥೂಲದೇಹವನ್ನೇ ತನ್ನ ಸ್ವಾಧೀನಕ್ಕೆ ಪಡೆದು ತನಗೆ ತಿಳಿದಂತೆ ಮಾತನಾಡುತ್ತಿದೆ. ತನಗೆ ತಿಳಿದಂತೆ ಕೇಳುತ್ತದೆ. ತನಗೆ ತಿಳಿದಂತೆ ಮೂಸಿಸಿ ಮುಟ್ಟಿ ರುಚಿಸಿ ಸ್ಥೂಲದೇಹಕ್ಕೆ ಸುಳ್ಳು ರಸಾಯನವನ್ನು ಚೆಲ್ಲಿ ಸುಖ ದುಃಖಗಳನ್ನು ಉಂಟು ಮಾಡುತ್ತದೆ. ಇದು ಮುಂಡವಿಲ್ಲದ ರುಂಡದ ಕೆಲಸ.

ಮುಂಡ ರುಂಡಕ್ಕೆ ಸಂಬಂಧವ ಮಾಡ ಹೋದಡೆ ಸಿಗದಿಪ್ಪುದು. ಅದು ಮಾಡುವುದೆಲ್ಲ ಸುಳ್ಳು ಸಂಬಂಧ. ತನಗೆ ಸುಖವಾಗುವಂತೆ ಕಾಯದೊಂದಿಗೆ ಸಂಬಂಧ ಬೆಳೆಸಿ ಕಾಯಕ್ಕೆ ಮತ್ತೆ ಮತ್ತೆ ಸುಖ ದುಃಖಗಳನ್ನು ಉಂಟು ಮಾಡುತ್ತದೆ. ಕಾಯ ಕಾಯಕ್ಕೆ ಗುರುವಾಗುವುದು. ಕಾಯ ಕಾಯಕ್ಕೆ ಶಿಷ್ಯನಾಗುವುದು, ಕಾಯ ಕಾಯಕ್ಕೆ ರಾಜನಾಗುವುದು, ಮಂತ್ರಿ, ಕಾಲಾಳು, ಸೈನಿಕನಾಗುವುದು, ಇದೇನಯ್ಯಾ ಮುಂಡವಿಲ್ಲದ ರುಂಡದ ಸಂಬಂಧ ಅರಿವಿನಿಂದ ಹುಡುಕಲು ಹೋದರೆ ಮುಂಡವಿಲ್ಲದ ರುಂಡವು ಮಾಡಿದ ಸಂಬಂಧ ಸುಳ್ಳು ಸಂಬಂಧವೆಂದು ಸಿದ್ಧವಾಗುತ್ತದೆ. ಆದರೆ, ಮುಂಡವಿಲ್ಲದ ರುಂಡವನ್ನು ಬದಿಗಿಟ್ಟು ವಿಚಾರ ಮಾಡುವ ಶಕ್ತಿ ಬರುವುದು ಕೋಟಿಗೊಂದು ಕಾಯಕ್ಕೆ ಮಾತ್ರ.

ಇದು ಸುಳ್ಳು ಸಂಬಂಧವೆಂದು ಕಾಯಕ್ಕೆ ಗೊತ್ತಾಗುವುದೊಂದೆ ತಡ ಕೂಡಲೆ ಕಾಯ ಜ್ಞಾನಕಾಯದ ಸಂಬಂಧ ಮಾಡಿ ಮುಂಡವಿಲ್ಲದೆ ಮಾತನಾಡುತ್ತಿರುವ ರುಂಡ ಮುಂಡಕ್ಕೆ ಸಮಾಧಿ ಮಾಡುತ್ತದೆ. ಆಗ ಪರಿಪೂರ್ಣ ಜ್ಞಾನಕಾಯವೇ ತಾನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**246**

**ಇನ್ನಾವ ಹಿರಿಯರೇನಾದಡೇನಯ್ಯಾ,**
**ಇನ್ನಾವ ಸಮಯವಾದಡೇನಯ್ಯಾ,**
**ನೀ ಮಾಡಿದಂತೆ ಆಗದವರಾರಯ್ಯಾ.**

**ನೀನಿರಿಸಿದಂತೆ ಇರದವರಾರಯ್ಯ,**
**ನಿನ್ನಿಚ್ಛಾ ಮಾತ್ರದಲ್ಲಿ ಜಗವು ಅಪ್ಪುದಡಗುವುದಯ್ಯಾ,**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಪುರಾತನರು ಅರಿವನ್ನೇ ದೇವರೆಂದು ಕರೆದ್ದಿದಾರೆ. ದೇವರಿಲ್ಲದ ದೇಹ ಯಾವುದೂ ಇಲ್ಲ. ಆದರೆ ದೇಹಕ್ಕೆ ದೇಹದಲ್ಲಿಯೇ ದೇವರಿದ್ದಾನೆ ಎನ್ನುವ ಅರಿವು ಇಲ್ಲ. ಏಕೆಂದರೆ ದೇಹದಲ್ಲಿ ಸಂಗಮವಾದ ಅರಿವಿನ ಕಿರಣಗಳಿಂದ ಮನವೆಂಬ ಕತ್ತಲು ದೇಹವನ್ನು ಆವರಿಸಿದೆ.

ದೇಹವನ್ನಾವರಿಸಿದ ಮನಕ್ಕೆ ಹೊರಗಿನ ದೇವರು ಕಾಣುತ್ತಾನೆಯೇ ಹೊರತು ದೇಹದಲ್ಲಿಯೇ ಸಂಗಮವಾದ ದೇವರು ಕಾಣುವುದಿಲ್ಲ. ಮನಕ್ಕೆ ದೇಹದಲ್ಲಿದ್ದ ದೇವರು ಕಾಣದೇ ಇರುವುದರಿಂದ ಒಂದು ದೇಹ ಮತ್ತೊಂದು ದೇಹಕ್ಕೆ ಹಿರಿಯನಾಗಿದೆ. ಒಂದು ದೇಹ ಮತ್ತೊಂದು ದೇಹಕ್ಕೆ ಕಿರಿಯನಾಗಿದೆ. ದೇಹದಲ್ಲಿದ್ದ ದೇವರಿಗೆ ದೇಹವನ್ನು ಆವರಿಸಿದ ಮನಗಳೆಲ್ಲ ಕಿರಿಯವೇ ಆಗಿವೆ. ದೇವರು ಹಿರಿಯನೆಂದು ತಿಳಿದ ಮೇಲೆ ಮನ ಆ ದೇವರಿಗೆ ಕಿರಿಯನಾಗಬೇಕು. ಇದು ದೇಹದ ಧರ್ಮ. ಮನಕ್ಕೆ ದೇಹದಲ್ಲಿಯೇ ಇದ್ದ ದೇವರ ಪರಿಚಯ ಇಲ್ಲದೇ ಇರುವುದರಿಂದ ಮನ ದೇಹವನ್ನೇ ಹಿರಿಯನೆಂದು ದೇಹವನ್ನೇ ಗುರುವೆಂದು ಆದರಿಸಿ ಗೌರವಿಸುತ್ತದೆ. ಕಿರಿಯನೆಂದು ಹೀಯಾಳಿಸುತ್ತದೆ.

ಇದಕ್ಕೆಲ್ಲ ಕಾರಣ ದೇಹದಲ್ಲಿರುವ ದೇವರೇ ಹೊರತು ಮತ್ತಾರೂ ಅಲ್ಲ. ದೇವರು ಆಡಿಸಿದಂತೆ ಮನ ದೇಹದೊಂದಿಗೆ ಆಡುತ್ತದೆ. ಇದು ಮನ ದೇವರನ್ನು ಮರೆತ ಫಲ.

ದೇಹ ಯಾವ ದೇಶದ್ದಾದರೇನು? ದೇಹದಲ್ಲಿರುವ ಅರಿವು ಒಂದೇ; ದೇಹವನ್ನಾವರಿಸಿದ ಮನ ಒಂದೇ. ಆದರೂ ಮನಕ್ಕೆ ಅರಿವಿನ ಈ ವಿಚಾರ ತಿಳಿಯದೇ ಇರುವುದರಿಂದ ಮನದಿಂದಾಗಿ ದೇಹ ಹಿರಿಯನಾಗಿದೆ, ಕಿರಿಯನಾಗಿದೆ, ಹೆಣ್ಣಾಗಿದೆ, ಗಂಡಾಗಿದೆ, ಪಂಡಿತನಾಗಿದೆ, ಶಾಸ್ತ್ರಿಯಾಗಿದೆ ಹಾದರಿಗನಾಗಿದೆ, ವೇಶ್ಯೆಯಾಗಿದೆ, ಕಳ್ಳ, ಸುಳ್ಳ, ಭ್ರಷ್ಟಾಚಾರಿ ಎಂದು ಹೆಸರು ಪಡೆದು, ದೇಹದೊಂದಿಗೆ ದೇಹ ಹೀಗೆಂದು ಕರೆಯಿಸಿಕೊಂಡು ಮಾನ ಅಪಮಾನಗಳನ್ನು ಹೊಂದುತ್ತದೆ. ಸುಖ ದುಃಖಗಳನ್ನು ಅನುಭವಿಸುತ್ತದೆ.

ಇದಕ್ಕೆ ಕಾರಣ ಅರಿವೆಂಬ ಗುರುದೇವನ ಆಶೀರ್ವಾದವೇ ಆಗಿದೆ. ಆತ ಇರಿಸಿದಂತೆ ಮನ ದೇಹವನ್ನು ಇರಿಸಿದೆ. ಆತನ ಇಚ್ಛಾಮಾತ್ರದಲ್ಲಿ ಜಗತ್ತು ನಿರ್ಮಾಣವಾಗಿದೆ.

ಜಗತ್ತನ್ನು ಆತನೇ ನಿರ್ಮಾಣ ಮಾಡಿ ಅದನ್ನು ನೋಡುವ ಆಸೆಯಿಂದಾಗಿ ಆತ ದೇಹವನ್ನು ಸೃಷ್ಟಿಮಾಡಿದ. ಸೃಷ್ಟಿಮಾಡಿದ ಆ ದೇಹದಲ್ಲಿ ಆ ದೇವರು ಸಂಗಮವಾಗಿ ಆ ದೇಹದ ಮೂಲಕ ತನ್ನಿಚ್ಛಾ ಮಾತ್ರದಲ್ಲಿ ನಿರ್ಮಾಣ ಮಾಡಿದ ಜಗತ್ತನ್ನು ತನ್ನಿಚ್ಛೆಗನುಸಾರವಾಗಿ ಆಡಿಸಿದ. ಆತ ಬೇರಾರೂ ಅಲ್ಲ ದೇಹದಲ್ಲಿ ಸಂಗಮವಾದ ಅರಿವೆಂಬ ಗುರುದೇವನೇ ಆಗಿದ್ದಾನೆ.

ಆ ಗುರುದೇವನೇ ಸದಾಶಿವನು ಆಗಿದ್ದಾನೆ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮನಾಗಿದ್ದಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿದ್ದಾನೆ.

**247**

**ಇಪ್ಪತ್ತುನಾಲ್ವರು ಚೌಕವ ಹೊಕ್ಕಾರು.**
**ಆ ಚೌಕ ನಾಗರಕಟ್ಟೆಗೆ ಒಲೆದೀತು.**

**ಆ ನಾಗರಕಟ್ಟೆಯಲ್ಲಿ ಇಪ್ಪತ್ತು ನಾಲ್ವರು ದುಃಖಪಟ್ಟಾರು**
**ನುಚ್ಚಿನ ನುಚ್ಚು ಕೊನೆನುಚ್ಚು ಮೂಗಂಡುಗವಾದಾವು**
**ಚಿಟ್ಟೆಯ ಹುಳು ಬಾಣಸಕ್ಕೆ ಬಂದಾವು**
**ಲೋಕಕ್ಕೆ ಕೆಂಡದ ಮಳೆ ಸುರಿದಾವು**
**ಹದಿನೆಂಟು ಜಾತಿಯೆಲ್ಲ ಏಕವರ್ಣವಾದೀತು.**
**ಉತ್ತರ ದಕ್ಷಿಣ ಪೂರ್ವ ಪಶ್ಚಿಮದ ರಾಯರುಗಳೆಲ್ಲಾ**
**ಗುಡ್ಡರುಗಳಾಗಿ ನಡೆದಾರು.**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು**
**ಲಕ್ಷದ ಮೇಲೆ ತೊಂಬತ್ತಾರುಸಾವಿರ ಲಿಂಗವ**
**ಕಲಿಯಾಯಿತು ಕಲಿಯಾಯಿತು**
**(ಕಲಿಯುಗದೊಳಗೊಂದು ಸೋಜಿಗವ ಕಂಡೆನು)**
**ಸತ್ಯ ಸತ್ತೀತು, ಸಾತ್ವಿಕವಡಗೀತು,**
**ಠಕ್ಕು ಠವಳಿ ಮುಂಡು ಮುರುಹು**
**ಘುನ್ನ ಘಾತಕ ಹದುರು ಚದುರು**
**ಭೂಮಂಡಲವೆಲ್ಲಾ ಆದೀತು.**
**ಆಗಳೆ ಭಕ್ತರು, ಆಗಳೆ ಭವಿಗಳು ಅಂಗೈ ಮೇಗೈಯಾದರಲ್ಲಾ.**
**ನಿಜಗುರು ನಿಶ್ಚಿಂತ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಯ್ಯಾ.**

ಅಂಗದ ಮೇಲೆ ಹಾಕಿಕೊಂಡಿರುವ ಚೌಕದಲ್ಲಿ ಲಿಂಗವಿರುತ್ತದೆ. ಲಿಂಗವಿರುವ ಚೌಕ(ಕರಡಿಗೆ)ವನ್ನು ಅಂಗದ ಮೇಲೆ ಧರಿಸಿ; ಚೌಕದಿಂದ ಲಿಂಗ ಹೊರತೆಗೆದು ಪೂಜಿಸುತ್ತಾನೆ. ಪುನಃ ಚೌಕದಲ್ಲಿ ಲಿಂಗವನ್ನು ಬಂಧಿಸಿ ಅಂಗದ ಮೇಲೆ ಧರಿಸುತ್ತಾನೆ.

ಅಂಗವೆಂಬುದು ಕೂಡ ಒಂದು ಚೌಕ(ಕರಡಿಗೆ). ಈ ಚೌಕದಲ್ಲಿ ಅರಿವೆಂಬ ಲಿಂಗಯ್ಯ ಸಂಗಮವಾಗಿದ್ದಾನೆ. ಚೌಕ, ಮನವೆಂಬ ನಾಗರ ಕಟ್ಟೆಗೆ ಹೊಲೆದುಕೊಂಡಿದೆ. ಆ ನಾಗರ ಕಟ್ಟೆಯಲ್ಲಿ ಇಪ್ಪತ್ತು ನಾಲ್ಕು ಮಂದಿ ದುಃಖ ಪಡುತ್ತಿದ್ದಾರೆ.

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ಆರು ಜನ; ಸಪ್ತ ವ್ಯಸನಗಳೆಂಬ ಏಳು ಜನ; ಅಷ್ಟ ಮದಗಳೆಂಬ ಎಂಟು ಜನ; ಸಾತ್ವಿಕ ರಾಜಸ ತಾಮಸ ಗುಣಗಳುಳ್ಳ ಮೂರು ಜನ. ಹೀಗೆ ಅಂಗವೆಂಬ ಚೌಕದಲ್ಲಿ ಹೊಕ್ಕ ಇಪ್ಪತ್ನಾಲ್ಕು ಜನ ಚೌಕವೆಂಬ ನಾಗರಕಟ್ಟೆಗೆ ಹೊಲಿದುಕೊಂಡು ಆ ನಾಗರ ಕಟ್ಟೆಯಲ್ಲಿಯೇ ದುಃಖ ಪಡುತ್ತಿದ್ದಾರೆ.

ಮನವೆಂಬ ಪಾತರಗಿತ್ತಿಯಿಂದಾಗಿಯೇ; ಅದು ಅಂಗದಲ್ಲಿಯೇ ಇಡುತ್ತಿರುವ ಅಜ್ಞಾನದ ತತ್ತಿಯಿಂದಾಗಿಯೇ ನುಚ್ಚಿನ ನುಚ್ಚು ಕೊನೆನುಚ್ಚು ಮೂಗಂಡುಗವಾದವು. ಅಂದರೆ ಚಿಟ್ಟೆ ಹುಳುವಿನ ತತ್ತಿಯಿಂದಾಗಿಯೇ ತತ್ತಿಯೂ ಕೊನೆಯ ತತ್ತಿ ಸೇರಿ (ಮೂಗಂಡುಗ) ನೂರಾಇಪ್ಪತ್ತು ಆದವು.

ಚಿಟ್ಟೆಯಹುಳು ಬಾಣಸಕ್ಕೆ ಬಂದಾವು, ಲೋಕಕ್ಕೆ ಕೆಂಡದ ಮಳೆ ಸುರಿದಾವು:

ವ್ಯಾಸ ಮಹರ್ಷಿ ಜಾಣನಾದರೆ; ಸಿದ್ಧರಾಮ ಶಿವಯೋಗಿ ಜಾಣರ ಜಾಣ! ಗಾಂಧಾರಿ ಧೃತರಾಷ್ಟ್ರ ಸೇರಿ ನೂರಾಒಂದು ತತ್ತಿಗೆ ಜನ್ಮ ನೀಡಿದರು. ದಾಸಿ ವಿಧುರನಿಗೆ ಜನ್ಮ ನೀಡಿದಳು. ಕುಂತಿ ಮಾದ್ರಿ ಪಾಂಡುರಾಜ ಸೇರಿ ಆರು ಜನರಿಗೆ ಜನ್ಮ ನೀಡಿದರು. ದ್ರೌಪದಿ ಐದು ಜನ ಪಾಂಡುಪುತ್ರರು,

ಘಟೋದ್ಗಜ ಅಭಿಮನ್ಯು ಸೇರಿ ಮೂಗಂಡುಗವಾಗಿ ಲೋಕಕ್ಕೆ ಕೆಂಡದ ಮಳೆ ಸುರಿದವು.

ಹದಿನೆಂಟು ಜಾತಿಗಳು ಕೂಡಿ ಏಕವರ್ಣವಾದೀತು:

ಕಣ್ಣು ಕಂಚುಗಾರ, ಕರ್ಣ ಬಣಜಿಗ, ಮೂಗು ಈಳಿಗ, ಕೊರಳು ಕುಂಬಾರ, ತುಟಿ ಹೆಂಡಗಾರ, ಹಲ್ಲು ಕಲ್ಲು ಕುಟಿಗ, ತಲೆ ಮೋಪುಗಾರ, ಬೆನ್ನು ಜೇಡ, ಅಂಗೈ ಅಕ್ಕಸಾಲಿಗ, ಮುಂಗೈ ಬಡಿಗ, ಕರ ಕೋಮಟಿಗ, ಕಣಕಾಲು ಕಾಳಿಂಗಿ, ಕುಂಡೆ ಕುಡುವಕ್ಕಲಿಗ, ಒಳದೊಡೆ ಸಮಗಾರ, ಹೊರದೊಡೆ ಮಚ್ಚಿಗ, ಮೇಗಾಡಿ ಹೊಲೆಯ, ಬುದ್ಧಿ ಬೈಲಗಂಬಾರ ಹೀಗೆ ಅಂಬಿಗರ ಚೌಡಯ್ಯ ಅಂಗದಲ್ಲಿಯೇ ಹದಿನೆಂಟು ಜಾತಿಯನ್ನು ಹೇಳಿ ಪುನಃ ಅಂಗವನ್ನು ಏಕವರ್ಣವನ್ನಾಗಿಸಿದ್ದಾರೆ.

ಉತ್ತರ ದಕ್ಷಿಣ ಪೂರ್ವ ಪಶ್ಚಿಮದ ರಾಯರುಗಳೆಲ್ಲ ಗುಡ್ಡರುಗಳಾಗಿ ನಡೆದಾರು. ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಲಿಂಗವ ಕಲಿಯಾಯಿತು. ಸತ್ಯ ಸತ್ತೀತು, ಸಾತ್ವಿಕವು ಅಡಗೀತು. ಠಕ್ಕು ಠವಳಿ ಮುಂಡು ಮುರುಹು ಘನ್ನ ಘಾತಕ ಹದುರು ಚದುರು ಭೂಮಂಡಲವೆಲ್ಲ ಆದೀತು. ಆಗಳೇ ಭಕ್ತರು, ಆಗಳೇ ಭವಿಗಳು, ಅಂಗೈ ಮೇಗೈಯಾದರಲ್ಲಾ. ಆದರೂ ಅಂಗದಲ್ಲಿಯೇ ಸಂಗಮವಾದ ನಿಜಗುರು ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ನಿಶ್ಚಿಂತ!

**248**

**ಇಬ್ಬಟ್ಟೆಯಲ್ಲಿ ಮನೆಯ ಮಾಡಿಕೊಂಡಿಪ್ಪನಲ್ಲ;**
**ನಿನ್ನ ಕಂಗಳ ಮುಂದಿಂದಗಲಿದಡೆ ಎಂತು ಜೀವಿಸುವೆನಯ್ಯಾ?**
**ಎಂತು ಬದುಕುವೆನಯ್ಯಾ?**
**ಎನ್ನಳಲಬಳಲ ಕಂಡು ಕರುಣದಿಂದ ನೋಡಿ**
**ನಿನ್ನಳಲೇನುಸುರುಸುರೆಂದು ಕಣ್ಣೀರ ತೊಡೆದೊಡಗೂಡಾ,**
**ಕಪಿಲಸಿದ್ಧ ಮಲ್ಲಿನಾಥಾ.**

ದೇವರು, ಅಂಗದಲ್ಲಿಯೇ ಮನೆಯ ಮಾಡಿಕೊಂಡಿದ್ದಾನೆ. ಅಂಗವನ್ನು ಸೋಂಕಿಲ್ಲ. ಅಂಗಕ್ಕೆ ಆಧಾರವಾಗಿ ಅಂಗವನ್ನು ಬೆಳಗುತ್ತಿದ್ದಾನೆ. ಹೀಗೆ ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿವಿನ ದೇವರನ್ನು ಮನದ ಮೂಲಕವೇ ಶರಣು ಹೋಗಿ ಮನದಿಂದಲೇ ಕಂಡುಕೊಳ್ಳಬೇಕು.

ಅಂಗವೆಂಬ ಮನೆಯಲ್ಲಿ ದೇವರದ್ದೊಂದು ಮನೆಯಿದೆ. ದೇವರನ್ನು ಕಂಡುಕೊಂಡು ಆ ದೇವರಲ್ಲಿಯೇ ಸಂಗಮವಾಗುವ ಮನದ ಒಂದು ಮನೆಯಿದೆ. ಇದನ್ನೇ ಸ್ಥೂಲ, ಸೂಕ್ಷ್ಮ, ಕಾರಣ ಕಾಯವೆಂದು ಕರೆಯುತ್ತಾರೆ. ಹೀಗೆ ಭಗವಂತನ ದರುಶನಕ್ಕಾಗಿ ಎರಡು ದಾರಿಯನ್ನು ತುಳಿಯುವ ಮೂಲಕ ಮನ ಪಯಣಿಸಬೇಕಾಗಿದೆ.

ಅಂಗದಲ್ಲಿಯೇ ಮನೆಯ ಮಾಡಿಕೊಂಡಿದ್ದ ಭಗವಂತನಿಗೆ; ಅಂಗದಲ್ಲಿರುವ ಕಂಗಳಲ್ಲಿಯೇ ಆತನ ಕಂಗಳಿವೆ; ಹಾಗೆಯೇ ಮನದ ಕಂಗಳೂ ಇವೆ. ಅಂಗಕ್ಕೆ ಎರಡು ಕಂಗಳಿದ್ದರೂ; ಎರಡೂ ಕಣ್ಣುಗಳಿಗೆ ಕಾಣುವ ದೃಶ್ಯ ಮಾತ್ರ ಒಂದೇ. ಸ್ಥೂಲಾಂಗದಲ್ಲಿರುವ ಸ್ಥೂಲ ಕಣ್ಣು, ಭಗವಂತನ ಕಣ್ಣಿಗೆ ಮನೆಯಾಗಿದೆ. ಸ್ಥೂಲಕಣ್ಣನ್ನು ಮನೋಮಯವಾದ ಕಣ್ಣೊಂದು ಆವರಿಸಿದೆ.

ಹೀಗೆ ಅಂಗಕ್ಕೆ ಮೂರು ಕಣ್ಣುಗಳಿವೆ. ಮೂರು ಕಣ್ಣುಳ್ಳ ಅಂಗವನ್ನು ಮುಕ್ಕಣ್ಣ ಎಂದು

ಕರೆಯುತ್ತಾರೆ. ಅರಿವಿನ ಕಣ್ಣು ಎಂದು ಕರೆಯುತ್ತಾರೆ. ಅರಿವಿನ ಕಣ್ಣಿನ ಬೆಳಕಿನ ಕಿರಣಗಳಿಂದಲೇ ಕಣ್ಣಲ್ಲಿ ಮನೋಮಯವಾದ ಕಣ್ಣೊಂದು ಸೃಷ್ಟಿಯಾಗಿದೆ. ಈ ಕಣ್ಣು ಕಣ್ಣನ್ನೇ ಆವರಿಸಿದೆ.

ಕಣ್ಣಲ್ಲಿಯೇ ಮುಕ್ಕಣ್ಣನ ಕಣ್ಣಿದ್ದರೂ ಕೂಡಾ ಮುಕ್ಕಣ್ಣನ ಕಣ್ಣಿಂದಲೇ ಸೃಷ್ಟಿಯಾದ ಮನೋಮಯ ಕಣ್ಣು, ಮುಕ್ಕಣ್ಣನ ಕಣ್ಣನ್ನು ಕಾಣಲರಿಯದು. ಮುಕ್ಕಣ್ಣನ ಕಣ್ಣಿನ ದರುಶನ ಮಾಡಿಕೊಳ್ಳಲು ಅರಿಯದ ಬೇಡದ ಕಣ್ಣನ್ನು; ಕಣ್ಣಪ್ಪ ಮುಕ್ಕಣ್ಣನಿಗೆ ಇತ್ತು ಧನ್ಯನಾದ!

ಹಾಗೆಯೇ ಸಿದ್ಧರಾಮ ಶಿವಯೋಗಿಗಳು: ನೀನೇ ಕೊಟ್ಟ ನಿನ್ನ ಕಣ್ಣಿಗೆ ನೀನೇ ದರುಶನ ನೀಡದೆ ನಿನ್ನ ಕಣ್ಣ ಮುಂದೆಯೇ ನೀನು ಅಗಲಿದಡೆ ನಾನು ಎಂತು ಜೀವಿಸುವೆನು ತಂದೆ? ನಾನು ಎಂತು ಬದುಕುವೆನು ಪ್ರಭುವೆ?

ಎನ್ನಳಲ ಬಳಲ ಕಂಡು; ನಿನಗಾಗಿ ಹಗಲಿರುಳೆನ್ನದೆ ಬಳಲುವ ನಿನ್ನ ಕಂದನನು ಕರುಣದಿಂದ ಕಂಡು; ಸುರುಸುರೆಂದು ಸುರಿಯುವ ಕಣ್ಣೀರ ತೊಡೆದು ಒಡಗೂಡು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನನೇ.

ಶಿವನ ಕಂಗಳಲ್ಲಿ ಸುರುಸುರೆಂದು ಸೋರುವ ಕಣ್ಣೀರ ಕಂಡು ಕಣ್ಣಪ್ಪ ಶಿವನಿಗೆ ತನ್ನ ಕಂಗಳನು ಕೊಟ್ಟ. ಶಿವನೆ, ಭಗವಂತನೇ ನಾನು ಕಣ್ಣಪ್ಪನಂತಲ್ಲ. ನೀನೇ ಕೊಟ್ಟ ನಿನ್ನ ಕಣ್ಣಿಗೆ ನೀನೆ ದರುಶನ ಭಾಗ್ಯ ನೀಡದುದಕ್ಕಾಗಿ ನಿನ್ನ ಮತ್ತೊಂದು ಕಂಗಳಲ್ಲಿ ಸುರುಸುರೆಂದು ನೀರು ಸುರಿಯುತ್ತಲಿವೆ. ನಿನ್ನ ಕಣ್ಣಲ್ಲಿಯ ಆ ಕಣ್ಣೀರ ತೊಡೆದು ಒಡಗೂಡು ಪರಮಾತ್ಮನೆ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**249**

**ಇಬ್ಬರೆಡೆಗೆ ಹರಿವ ಕುಂಟಣಿ ಒಬ್ಬಳೆಯವ್ವ!**
**ತಾ ಮುನ್ನ ನೆರವಳವನ ಬಳಿಕ ತಂದು ನೆರಹುವಳೆಮಗೆ**
**ಇವಳ ಕುಂಟಣಿತನವಿಂತುಟವ್ವಾ**
**ನಾವಿಬ್ಬರು ಮಾಡಿ ನೆರವವನ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ದೇವರಿಂದಲೇ ಅವತಾರವೆತ್ತಿದ ಮನವೆಂಬ ಕುಂಟಣಿ, ದೇವರನ್ನೇ ಮರೆತು ಹೋಗಿದೆ. ದೇಹವನ್ನೇ ಹಿಡಿದು ದೇವಾಲಯ ನಿರ್ಮಿಸಿದೆ. ಆ ದೇವಾಲಯದಲ್ಲಿದ್ದ ದೇವರೇ ದೇವರೆಂದು ದೇಹಕ್ಕೆ ನಂಬಿಸಿ, ದೇಹದೊಂದಿಗೆ ದೇವರನ್ನು ನೆರೆಯುತ್ತದೆ. ಮನವನ್ನು, ದೇಹವನ್ನು ಸೃಷ್ಟಿಮಾಡಿದ ದೇವರನ್ನೇ ಮರೆಯುತ್ತದೆ ಮನ.

ಅನಂತ ಕಾಲ, ದೇವರಿದ್ದ ದೇಹಕ್ಕೆ ಮನವೆಂಬ ಕುಂಟಣಿ ಕೇಡು ಬಗೆದು, ದೇಹವನ್ನೇ ಆವರಿಸಿ ದೇಹದಿಂದಲೇ ಸುಖಿಸುತ್ತಾಳೆ.

ಅರಿವಿನ ದೇವರು, ತಾನಿರುವುದಕ್ಕಾಗಿ ದೇಹವೆಂಬ ದೇವಾಲಯವನ್ನು ನಿರ್ಮಿಸಿದ. ಆ ದೇಹವೆಂಬ ದೇವಾಲಯದ ಆರೈಕೆಗಾಗಿ ಮನವನ್ನು ಸೃಷ್ಟಿಮಾಡಿ ಆ ಮನಕ್ಕೆ ದೇಹದಲ್ಲಿಯೇ ಆಶ್ರಯ ನೀಡಿದ.

ದೇಹದಲ್ಲಿಯೇ ಸಂಗಮವಾದ ಅರಿವಿನ ದೇವರನ್ನು ಆರಾಧಿಸಿ, ದೇಹವನ್ನು ಆರೈಕೆ ಮಾಡಲಿಲ್ಲ ಮನ. ಬದಲಾಗಿ ದೇಹದಿಂದಲೇ ಮತ್ತೊಂದು ದೇವಾಲಯ ನಿರ್ಮಾಣ ಮಾಡಿ; ಆ ದೇವರನ್ನೇ ದೇವರೆಂದು ದೇಹಕ್ಕೆ ಹೇಳಿ; ದೇಹದೊಂದಿಗೆ ದೇವರಿಗೆ ಶರಣಾಯಿತು.

ಮನವೆಂಬ ಕುಂಟಣಿತನದ ಕೆಲಸವಿಂತುಟು:

ತನುವಿನಲ್ಲಿಯೇ ತನ್ಮಯವಾದ ದೇವರನ್ನು ತನುವಿಗೆ ಮರೆಯುವಂತೆ ಮಾಡಿ, ತನುವನ್ನು ಹಿಡಿದು ದೇವರಿಗಾಗಿ ಅನಂತಕಾಲದವರೆಗೆ ಮನವೆಂಬ ಕುಂಟಣಿ ಅಲೆಯುತ್ತದೆ ಎಂದರೆ ಇದು ಆಶ್ಚರ್ಯದ ಮಾತೇ ಸರಿ.

ತನು ಒಂದೇ. ತನುವಿನಲ್ಲಿದ್ದ ದೇವರೂ ಒಬ್ಬನೇ. ತನುವನ್ನು ಆವರಿಸಿದ ಮನವೂ ಒಂದೇ. ಆದರೂ ಮನ ತನುವನ್ನು ದೇವರನ್ನು ಪ್ರತ್ಯೇಕಿಸಿ ಒಂದನ್ನೇ ಎರಡನ್ನಾಗಿಸಿ ಎರಡನ್ನೂ ಆರಾಧಿಸುವ ಕುಂಟಣಿ ಇವಳೆಂದು, ಸಿದ್ಧರಾಮ ಶಿವಯೋಗಿಗಳು ಬೇಸರಿಸಿಕೊಂಡು ಮನಕ್ಕೆ ಕುಂಟಣಿ ಎಂಬ ಸರಿಯಾದ ಹೆಸರನ್ನೇ ಇಟ್ಟಿದ್ದಾರೆ.

ಮನ, ಬಾಹ್ಯ ಪದಾರ್ಥಗಳಿಗೆ ತನುವನ್ನು ಹೇಗೆ ಮರುಳಾಗುವಂತೆ ಮಾಡುತ್ತಿದೆಯೋ ಹಾಗೆಯೇ ಅನಂತ ದೇವರನ್ನು ನಿರ್ಮಾಣ ಮಾಡಿ ಆ ದೇವರಿಗೆ ತನುವನ್ನು ಮರುಳಾಗುವಂತೆ ಮಾಡುತ್ತದೆ. ತನುವಿನಲ್ಲಿದ್ದ ಅರಿವಿನ ದೇವರಿಂದ ನೋಡಲು ಹೋದರೆ ಮನದ ಹಾದರ ಮನದ ಮೂಲಕವೇ ತನುವಿಗೆ ಹೊಳೆಯುತ್ತದೆ.

ಒಂದೇ ಇದ್ದ ಅರಿವಿನ ದೇವರ ತನುವನ್ನು ಎರಡು ಮಾಡಿ, ಮನವೆಂಬ ಕುಂಟಣಿ ಆ ಎರಡನ್ನೂ ತಾನೇ ನೋಡಿ; ನೋಡಿದ ತನಗೆ ನಾಚಿಕೆ ಎನ್ನಿಸಿ ಪುನಃ ಒಂದು ಮಾಡುತ್ತಾಳೆ. ಪುನಃ ಆ ಅರಿವಿನ ದೇವರಿಗೆ ಸತಿಯಾಗಿ ಆ ಅರಿವಿನ ದೇವರನ್ನೇ ಪತಿಯನ್ನಾಗಿಸಿಕೊಂಡು ಆರಾಧನೆ ಮಾಡುತ್ತಾಳೆ. ತನುವನ್ನು ಹಿಡಿದು ಮಾಡುವ ಹಾದರ, ತನಗೆ ತಾನೇ ಕಳೆದುಕೊಂಡು, ದೇವರಿಗೆ ಶರಣು ಹೋಗಿ, ಶರಣ ಸತಿ ಲಿಂಗಪತಿ ಎಂದು ತನಗೆ ತಾನೇ ಕರೆದುಕೊಳ್ಳುತ್ತಾಳೆ.

**250**

**ಇರಿಸಿದಂತೆ ಇಪ್ಪ ಬಳಸ ಬೊಮ್ಮದ ಮಾತ**
**ಎಳಸುವನು ಭಕ್ತಿ ಆರರ ಸೀಮೆಯ**
**ತರಿಸುವನು ಘನವೆನಿಪ ಮನದ ಮಧ್ಯದ ನಡುವೆ**
**ಒಳಗಿಟ್ಟ ಶಿಷ್ಯನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇವರು ಇಟ್ಟಂತೆ ಇರುವೆ; ಅವನು ಇರಿಸಿದಂತೆ ಇರುವೆ ಎನ್ನುವ ಈ ಮಾತು ಭಾರತೀಯರಲ್ಲಿ ಶೇ.75 ರಿಂದ 80ರಷ್ಟು ತಂತಾನೆ ಗೊತ್ತಿಲ್ಲದಂತೆ ಬರುತ್ತದೆ. ಅವನೆಂದರೆ ದೇವರು; ದೇವರೆಂದರೆ ಯಾರು? ಅವನು ಹೇಗಿದ್ದಾನೆ? ಅವನನ್ನು ತಾನು ನೋಡಿದ್ದಾನೆಯೆ? ಅವನು ತಾನು ಹೀಗೆಯೇ ಇರು ಎನ್ನುವ ಮಾತನ್ನು ತಾನು ಕೇಳಿದ್ದಾನೆಯೆ? ಕೇಳಿಲ್ಲದಿದ್ದರೂ; ಅವನನ್ನು ತಾನು ನೋಡಿಲ್ಲದಿದ್ದರೂ ದೇವರು ಇರಿಸಿದಂತೆ ಇರುವೆ ಎನ್ನುವ ಮಾತನ್ನು ಆಡುತ್ತಾನೆ.

ಇದು ಬ್ರಹ್ಮನ ಮಾತು. ಭ್ರಮೆ ಕಳೆದುಕೊಂಡವನ ಮಾತು. ಭ್ರಮೆ ಕಳೆದುಕೊಳ್ಳದ ದೇಹ ಕೂಡಾ ಈ ಮಾತನ್ನಾಡುತ್ತದೆ. ಅಂದರೆ ಈ ಮಾತು ಬಳಕೆಯಲ್ಲಿ ಸಹಜವಾಗಿ ಸಕಲರಲ್ಲಿಯೂ ಬಂದಿದೆ. ಆದರೆ ಈ ಮಾತು ಅನುಭವಕ್ಕೆ ಬಂದಿಲ್ಲ. ಆದರೂ 'ದೇವರ ಇಚ್ಛೆ; ಅವನಿರಿಸಿದಂತೆ ಇರುವೆ'. 'ದೇವರ ದಯದಿಂದ ಹೀಗಿದ್ದೇನೆ' ಎನ್ನುವ ಹಲವಾರು ಮಾತು ಆಡುತ್ತಾನೆ ಮನುಷ್ಯ.

ಈ ಮಾತು ಏಕಾದರೂ ಆಡುತ್ತೇನೆ? ಅನುಭವಕ್ಕೆ ಬರದೆ ಆಡುವ ಮಾತಿಗೆ

ಅರ್ಥವಿಲ್ಲ. ಹಾಗೆಂದರೇನೆಂದು ಕೇಳಿದರೆ ತಬ್ಬಿಬ್ಬಾಗುತ್ತಾನೆ. ಅಥವಾ ಎಷ್ಟೋ ಕಾಲದವರೆಗೆ ತಂತಾನೆ ತನ್ನಿಂದ ಬರುವ ಈ ಮಾತಿನ ಅರ್ಥ ತಿಳಿಯುವುದಕ್ಕಾಗಿ ಅದರ ಬೆನ್ನು ಬೀಳುತ್ತಾನೆ.

ಹೀಗೆ ಮನುಷ್ಯನಿಂದ ಇವಲ್ಲದೆ ಎಷ್ಟೋ ಮಾತುಗಳು ತಂತಾನೆ ಬರುತ್ತವೆ. ತನಗೆ ಅನ್ಯಾಯ ಮಾಡಿದ ವ್ಯಕ್ತಿಯ ಮೇಲೆ ಸೇಡು ತೀರಿಸಿಕೊಳ್ಳಲು ಆಗದೇ ಇದ್ದಾಗ 'ನಿನ್ನನ್ನು ಆ ದೇವರು ನೋಡಿಕೊಳ್ಳಲಿ', 'ಅವನು ನಿನಗೆ ತಕ್ಕುದನ್ನು ಮಾಡಿಯೇ ತೀರುತ್ತಾನೆ', 'ಹಾಲಿಂದು ಹಾಲಿಗೆ ನೀರಿಂದು ನೀರಿಗೆ', 'ಹಂಸ ಕ್ಷೀರ ನ್ಯಾಯದಂತೆ', 'ದೇವರು ಅವರನ್ನು ಅವರ ಮಕ್ಕಳನ್ನು ಸುಖವಾಗಿ ಇಡಲಿ' ಎಂದು ಆಡುವ ಮಾತುಗಳಿಗೆ ಅರ್ಥವಿಲ್ಲ. ಆದರೂ ಭ್ರಮೆಯಲ್ಲಿದ್ದವರು ಬ್ರಹ್ಮನ ಮಾತುಗಳನ್ನಾಡುತ್ತಾರೆ.

ತಾವು ಆಡುವ ಈ ಮಾತಿನಲ್ಲಿ ಏನೋ ಅರ್ಥವಿದೆ; ದೇವರ ಪದವನ್ನು ಮಾತಿನಲ್ಲಿ ಬಳಸುತ್ತೇವಲ್ಲ? ಆತ ಯಾರೆಂದು; ಆತ ಹೇಗಿದ್ದಾನೆ ಎಂದು ತನಗೆ ತಿಳಿಯದಿದ್ದರೂ ಈ ಮಾತು ಮಾತ್ರ ತಂತಾನೆ ಹೊರಗೆ ಬರುತ್ತದೆ.

ಆಲಯಗಳಲ್ಲಿದ್ದ ದೇವರು ದೇವರೋ ಅಥವಾ ವಾಡಿಕೆಯಿಂದ 'ದೇವರು ಎಲ್ಲೆಡೆಯಿದ್ದಾನೆ' ಎನ್ನುವ ದೇವರು ದೇವರೋ? ತಾನು ಭ್ರಮೆಯಿಂದ ಮಾತು ಆಡುವ ಆ ದೇವರ ಹಿಂದೆ ಬಿದ್ದರೆ ಆ ದೇವರು ಯಾರು? ಆತ ಎಲ್ಲಿದ್ದಾನೆ? ಆತ ಹೇಗಿದ್ದಾನೆ, ಆತನಿಗೂ ನನಗೂ ಇರುವ ಸಂಬಂಧ ಏನು ಎಂಬುದು ತನಗೆ ತಿಳಿಯುತ್ತದೆ. ಹಾಗೆ ತಿಳಿ ಹೇಳುವ ಗುರುದೇವ ಕೂಡಾ ತನಗೆ ಸಿಕ್ಕುತ್ತಾನೆ. ಆತ ಇಂಥವರನ್ನು ಹುಡುಕುತ್ತಾನೆ. ಇಂಥವರು ಆತನನ್ನು ಹುಡುಕುತ್ತಾರೆ.

'ಶಿವಪಥವನ್ನು ಅರಿಯಲು ಗುರುಪಥ ಮೊದಲು' ಎಂದು ಬಸವಣ್ಣ ಹೇಳುತ್ತಾರೆ. ಲೋಕದ ಶಿವನನ್ನು ಆರಾಧಿಸುತ್ತಾರೆ. ಆಲಯಗಳಲ್ಲಿದ್ದ ದೇವರುಗಳನ್ನು ಆರಾಧಿಸುತ್ತಾರೆ. ಪೂಜಿಸುತ್ತಾರೆ. ಆದರೆ ದೇವರೆಂದರೆ ಯಾರು? ಆ ದೇವರು ಹೇಗಿದ್ದಾನೆ ಎಂದು ಕೇಳಿದರೆ ಹೇಳಲು ಬರುವುದಿಲ್ಲ. ಅದಕ್ಕಾಗಿಯೇ ದೇವರನ್ನು ಆರಾಧಿಸುವ ದೇಹಗಳು 'ದೇವರನ್ನು ಕಂಡು ಹಿಡಿದು' ಆತನನ್ನು ಆರಾಧಿಸುವ' ಗುರುದೇವನನ್ನು ಹುಡುಕಬೇಕು. ಆ ಗುರುದೇವನ ಮೂಲಕ ದೇವರನ್ನು ಕಂಡುಕೊಂಡು ಆ ದೇವರನ್ನು ಆರಾಧಿಸಬೇಕು. ಆಗ ದೇವರು ತನಗೆ ತನ್ನಂತೆಯೇ ಕಾಣುತ್ತಾನೆ. ತಾನು ತಪ್ಪು ನೋಡುವಾಗ, ನೋಡಿದ ನೋಟವನ್ನು ತನ್ನ ನೋಟದ ಮೂಲಕ ನೋಟದಿಂದಲೇ ನುಡಿದು ಸರಿ ದಾರಿಯಲ್ಲಿ ಇರಿಸುತ್ತಾನೆ. ನುಡಿದ ನುಡಿಯನ್ನು, ಸ್ಪರ್ಶಿಸಿದ ಸ್ಪರ್ಶವನ್ನು ಅಜ್ಞಾನದ ವಾಸನೆ, ರುಚಿಯನ್ನು ಖಂಡಿಸಿ ಅಖಂಡದ ಪಥವನ್ನು ತೋರಿಸುತ್ತಾನೆ.

ದೇವರು, ಕಣ್ಣು ಕಿವಿ ಮೂಗು ಚರ್ಮ ನಾಲಿಗೆಯಲ್ಲಿದ್ದುದು; ದೇಹದ ಕಣಕಣದಲ್ಲಿದ್ದುದು ತನಗೆ ತಿಳಿಯುತ್ತದೆ. ದೇಹದೊಳಗೆ ಅರಿವಿನ ದೇಹವಾಗಿ ಇದ್ದು, ದೇಹವನ್ನು ಅರಿವಿನಿಂದ ಕೈಹಿಡಿದು ನಡೆಸುವುದು; ದೇಹವನ್ನು ಆವರಿಸಿದ ಮನದ ಅರಿವಿಗೆ ಬರುತ್ತದೆ. ಮನ, ಆ ಅರಿವಿನ ದೇವರಿಗೆ ಶಿಷ್ಯನಾಗುತ್ತದೆ.

ನಿನ್ನಲ್ಲಿರುವ ಆ ಅರಿವೇ ನಿನಗೆ ಗುರುದೇವ; ಆ ಅರಿವೇ ನಿನಗೆ ಮಹಾದೇವ; ಆ ಅರಿವೇ ನಿನಗೆ ಸದಾಶಿವ; ನಿನ್ನ ಆ ಅರಿವೇ ನಿನಗೆ ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ. 'ನಿನ್ನ ಅರಿವಿನ ದೇವರನ್ನು ನಿನಗೆ ತೋರಿಸಿದ್ದೇನೆ; ಅ ಅರಿವಿನ ದೇವರೇ ನಿನಗೆ ಗುರು' ಎಂದು ಶಿಷ್ಯನಿಗೆ ಹೇಳಿ ಗುರುದೇವ ಹಿಂದೆ ಸರಿಯುತ್ತಾನೆ.

ಆಗ, ದೇಹದಲ್ಲಿಯೇ ಸಂಗಮವಾದ ಅರಿವಿನ ದೇವರು, ದೇಹವನ್ನು ಆವರಿಸಿದ ಮನಕ್ಕೆ ಪಾಠ ಮಾಡುವುದು ತನಗೆ ತಾನೇ ಅರಿವಾಗುತ್ತದೆ. ಹೀಗೆ ಸಕಲ ದೇಹಗಳಲ್ಲಿ ಇರುವ ಸತ್ಯ ಅರಿವಿನ ದೇಹಕ್ಕೆ ಅರಿವಾಗುತ್ತದೆ. ಸಕಲ ದೇಹಗಳೂ ಅರಿವಿನ ದೇವರಿದ್ದ ದೇವಾಲಯಗಳಾಗಿ ಕಾಣುತ್ತವೆ. ಭ್ರಮೆಯ ಮಾತುಗಳನ್ನು ಆಡದೆ, ತಾನೇ ಬ್ರಹ್ಮನಾಗುತ್ತಾನೆ. ಬ್ರಹ್ಮ ಬ್ರಹ್ಮನಿಗೆ ಕೈ ಮುಗಿಯುತ್ತಾನೆ.

ನೀನು ಇರಿಸಿದಂತೆ ಇರುವೆ ಪ್ರಭುವೆ ಎಂದು ಮನವೆಂಬ ಶಿಷ್ಯ ಅರಿವೆಂಬ ಗುರುದೇವನಿಗೆ ಹೇಳಿ ಕೈ ಮುಗಿಯುತ್ತಾನೆ. ಇದು ಸಕಲ ದೇಹಗಳಲ್ಲಿಯೂ ಇರುವ ವೈಜ್ಞಾನಿಕ ರಹಸ್ಯ.

ದೇವರಿಗೆ ದೇವಾಲಯಗಳನ್ನು ನಿರ್ಮಿಸಿ ದೇವರನ್ನು ಒಲಿಸಿಕೊಳ್ಳಬೇಕೆಂದು ಆರಾಧಿಸುವ ದೇಹಗಳು ಅರಿವಿನ ದೇವರನ್ನು ತಿಳಿದುಕೊಳ್ಳಬೇಕಾದ ರಹಸ್ಯ. ಆಲಯಗಳನ್ನು ನಿರ್ಮಿಸಿ ಭ್ರಮೆಯಿಂದ ದೇವರನ್ನು ಆರಾಧಿಸುವ ಬದಲು, ದೇಹದಲ್ಲಿಯೇ ಇರುವ ಅರಿವಿನ ದೇವರನ್ನು, ದೇಹವನ್ನು ಆವರಿಸಿರುವ ಮನದಿಂದಲೇ ಕಂಡು ಹಿಡಿದು, ದೇಹವನ್ನೇ ದೇವಾಲಯ ಮಾಡಿಕೊಂಡು, ಅರಿವಿನ ದೇವರನ್ನು ಮನದಿಂದಲೇ ಆರಾಧಿಸುವ ವೈಜ್ಞಾನಿಕ ಕಾಯಕದಲ್ಲಿ ಸಕಲ ಕಾಯಗಳೂ ತೊಡಗಬೇಕೆಂಬುದೇ ಅರಿವಿನ ವಿಜ್ಞಾನಿ ಸಿದ್ಧರಾಮ ಶಿವಯೋಗಿಯ ಆಶಯ.

**251**

**ಇಲ್ಲಿಯ ವಿಸ್ತಾರ ಮಹಾಗುರುವಿನ ಹೃದಯವೊ, ನಾನರಿಯೆನು.**
**ಇಲ್ಲಿಯ ವಿಸ್ತಾರ ಪ್ರಭುವಿನ ಹೃದಯವೊ ನಾನರಿಯೆನು.**
**ಇದ ನೀನೆ ಬಲ್ಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕ್ರಿಷ್ಣ, ದೇಹವನ್ನು ಧರ್ಮಕ್ಷೇತ್ರ ಎಂದು ಕರೆದ. ಬುದ್ಧ, ದೇಹವನ್ನು ಅರಿವಿನ ಮಾತುಗಳನ್ನು ಆಡುತ್ತಾ ನಡೆದಾಡುವ ಜ್ಞಾನದ ಮರ, ಬೋಧೀ ವೃಕ್ಷ ಎಂದು ಕರೆದ. ಬಸವಣ್ಣ, ದೇಹದ ವಿಸ್ತಾರವನ್ನು ''ಜಗದಗಲ ಮುಗಿಲಗಲ ಮಿಗೆಯಗಲ, ನಿಮ್ಮಗಲ; ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ. ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವೇ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ'' ಎಂದು ಹೃದಯ ತುಂಬಿ ಹಾಡಿದ.

ದೇಹದ ವಿಸ್ತಾರವನ್ನು ಏನೆಂದು ಬಣ್ಣಿಸುವುದು? ದೇಹವನ್ನು ಆವರಿಸಿದ ಮನ ದೇಹದ ವಿಸ್ತಾರವನ್ನು ಅರಿಯದಿದ್ದುದಕ್ಕಾಗಿ ಅದು ಕೇವಲ ಬಡವನಾಗಿದೆ; ಶ್ರೀಮಂತನಾಗಿದೆ, ಹೆಣ್ಣಾಗಿದೆ ಗಂಡಾಗಿದೆ. ಶಾಸಕ ಸಚಿವ ಅಧಿಕಾರಿಯಾಗಿದೆ. ಮಂತ್ರಿ ಪ್ರಧಾನಿ ರಾಷ್ಟ್ರಪತಿಗೆ ಮನದ ವಿಸ್ತಾರ ಸೀಮಿತವಾಗಿದೆ. ಏಕೆಂದರೆ

ಮನವೆಂಬುದು ಗೂಗೆ. ಅದಕ್ಕೆ ಕತ್ತಲು ಮಾತ್ರ ಕಾಣುತ್ತದೆಯೇ ಹೊರತು ಸೂರ್ಯನಿಂದ ಬೆಳಗುವ ಬ್ರಹ್ಮಾಂಡ ಕಾಣುವುದಿಲ್ಲ; ಬೆಳಕು ಕೂಡಾ ಕಾಣುವುದಿಲ್ಲ. ಕತ್ತಲಿಗೆ ಬೆಳಕಿನ ದರುಶನವಾದರೆ ಹೇಗೆ ಬೆಳಕಾಗುತ್ತದೊ ಹಾಗೆ ಮನವೆಂಬ ಕತ್ತಲಿಗೆ ದೇಹದಲ್ಲಿ ಬೆಳಗುವ ಅರಿವಿನ ಧರ್ಮದ ಬೆಳಕಿನ ದರುಶನವಾಗಬೇಕು. ಆಗ ಮನ ತನ್ನ ಅಜ್ಞಾನದ ಕತ್ತಲು ಕಳೆದುಕೊಂಡು ಅರಿವಿನ ಬೆಳಕಿನಲ್ಲಿ ಬೆರೆತು ಅರಿವೇ ಆಗುತ್ತದೆ. ಮನ ಘನ ಮನವಾಗುತ್ತದೆ.

ಮಹಾ ಗುರುವಿನ ಹೃದಯದ ವಿಸ್ತಾರ ಜಗದಗಲ ಮುಗಿಲಗಲಕ್ಕೂ ಚಾಚಿಕೊಂಡಿದೆ.

ಅದನ್ನು ಹೀಗೆ ಎಂದು ತಿಳಿಯಲು ಸಾಧ್ಯವೆ? ಅದು ಬ್ರಹ್ಮಾಂಡ! ಮನ, ಭ್ರಮೆಯನ್ನು ಕಳೆದುಕೊಂಡು ಬ್ರಹ್ಮನಾಗಿ ನೋಡುತ್ತಲಿದೆ. ಆ ಮಹಾ ಗುರುವಿನ ಮುಕುಟವನ್ನು ನೋಡಲು ಕಾತುರನಾದ ಬ್ರಹ್ಮ ಬ್ರಹ್ಮಾಂಡಕ್ಕೆ ಜಿಗಿದ. ಮಹಾ ಗುರುವಿನ ಶ್ರೀಮುಕುಟ ಕಾಣಲೇ ಇಲ್ಲ. ಆಕಾಶ ಕಾಯದಲ್ಲಿ ಬೆಳೆದ ಕೇದಿಗೆಯನ್ನು ತರೆದು ತಂದು ಶಿವನ ಜಡೆಯೆಂದು ತೋರಿದ. ಕೂಡಲೇ ಬ್ರಹ್ಮನ ತಲೆಯೊಂದು ಉದುರಿ ಬಿತ್ತು. ಆ ಮಹಾ ಗುರುವಿನ ವಿಸ್ತಾರವನು ನಾನರಿಯೆ ಅವನ ಮುಕುಟವನ್ನೂ ನಾನರಿಯೆ. ಎಂದು ನಿಟ್ಟುಸಿರು ಬಿಟ್ಟ.

ಪ್ರಭುವಿನ ವಿಸ್ತಾರವನ್ನು ಅರಿಯಲು ವಿಷ್ಣು ಪಾತಾಳಕ್ಕೆ ಜಿಗಿದ. ಪ್ರಭುವಿನ ಶ್ರೀಪಾದದ ದರುಶನ ವಿಷ್ಣುವಿಗೆ ಆಗಲೇ ಇಲ್ಲ. ಪ್ರಭುವಿನ ವಿಸ್ತಾರವನು ನಾನೂ ಅರಿಯೆ ಎಂದು ವಿಷ್ಣು ನಿಟ್ಟಸಿರು ಬಿಟ್ಟ.

ಅಪ್ರಮಾಣ ಅಗಮ್ಯ ಅಗೋಚರ ಅಪ್ರತಿಮವೆಂಬ ಅರಿವಿನ ಲಿಂಗವನ್ನು ಹೊರಗೆ ಹುಡುಕಿದರೆ ಸಿಕ್ಕುವುದೆ? ಒಳ ಹೊರಗೆನ್ನದೆ ಭರಿತವಾದ ಅರಿವಿನ ಲಿಂಗ ಅಂಗ (ಕರ)ದಲ್ಲಿಯೇ ಬಂದು ಚುಳುಕಾಗಿದೆ. ಅಂಗದಲ್ಲಿ ಸಂಗಮವಾದ ಅರಿವಿನ ಲಿಂಗವನ್ನು ಆವರಿಸಿದ ಮನದಿಂದ ಅಂಗದಲ್ಲಿಯೇ ಹುಡುಕಿದರೆ ಹುಡುಕುವ ಆ ಮನವನ್ನು ಘನ ಮನವನ್ನಾಗಿಸಿಕೊಳ್ಳುತ್ತಾನೆ ಕಪಿಲಸಿದ್ಧ ಮಲ್ಲಯ್ಯ.

**252**

**ಇವನ ಪರಿಯ ಗಂಡುಗೂಸು ಪೃಥುವಿಯ ಮೇಲಿಲ್ಲವಯ್ಯಾ,**
**ಅವ್ವಾ, ಗಂಡು ಮಕ್ಕಳು ಗಂಡು ಬೇಟಗೊಂಬರು.**
**ಹೆಮ್ಮಕ್ಕಳು ಹೆಂಬೇಟೆಗೊಂಬರು.**
**ಇವಗೆ ಕೂರದವರಾರು? ಹೇಳಾ! ಅವ್ವಾ! ಅಯ್ಯಾ!**
**ಜಗದ ಗಂಡರ ಹೆಂಡಿರು ಇವನ ಮೇಲೆ**
**ಮೂಗೂರಿಕೊಂಡಿಪ್ಪರು, ಕಪಿಲಸಿದ್ಧ ಮಲ್ಲಿನಾಥಯ್ಯನವ್ವಾ.**

ಶ್ರೀಕೃಷ್ಣ ಹದಿನಾರು ಸಾವಿರ ಹೆಂಡಿರನ್ನು ಮಾಡಿಕೊಂಡಿದ್ದ. ಇದು ದೇವರಿಗೆ ಅಪವಾದ. ಆತನ ಹಿಂಬಾಲಕರಿಗೆ; ಆತನನ್ನು ಆರಾಧಿಸುವವರಿಗೆ ಅಪಮಾನ ಭರಿಸಲು ಆಗಲಿಲ್ಲ. ಹೀಗಾಗಿ, ದ್ವಾರಕೆಯ ಶ್ರೀಕೃಷ್ಣಮಂದಿರ ಪ್ರವೇಶಕ್ಕೆ ಹೆಣ್ಣುಮಕ್ಕಳನ್ನು ನಿಷೇಧಿಸಲಾಯಿತು. ಪ್ರವೇಶ ಮಾಡಿದ ಹೆಣ್ಣು ಮಕ್ಕಳ ರುಂಡವನ್ನು ಚೆಂಡಾಡಲು ರಾಜ ಆಜ್ಞಾಪಿಸಿದ.

ಇದಾವುದರ ಪರಿವೆಯೇ ಇಲ್ಲದ ಮೀರಾ ಮೈಮರೆತು ಹಾಡುತ್ತಾ ಕುಣಿಯುತ್ತ ಕೃಷ್ಣ ಮಂದಿರ ಪ್ರವೇಶಿಸಿದಳು. ಪೂಜಾರಿಗೆ ಅಚ್ಚರಿಯಾಯಿತು. ನಿಲ್ಲು; ನೀನು ಹೆಣ್ಣೆಂಬುದು ನಿನಗೆ ಅರಿವಿಲ್ಲವೆ? ಹೆಣ್ಣು ಮಕ್ಕಳಿಗೆ ಪ್ರವೇಶವಿಲ್ಲ ಎನ್ನುವುದು ನಿನಗೆ ತಿಳಿದಿಲ್ಲವೆ? ಬಿಚ್ಚುಗತ್ತಿ ಹಿಡಿದು ಕಾವಲಿದ್ದ ಭಟರು ನಿನ್ನ ರುಂಡ ಚೆಂಡಾಡಲಿಲ್ಲವೆ? ಎಂದು ಮೀರಾಳನ್ನು ಅರ್ಚಕ ಪ್ರಶ್ನಿಸಿದ. ಆಗ ಮೀರಾ ಅರ್ಚಕನನ್ನು ಕುರಿತು ಹೀಗೆಂದಳು:

ಈ ಜಗದಲ್ಲಿ ಶ್ರೀಕೃಷ್ಣನೊಬ್ಬನೆ ಗಂಡೆಂಬುದು ನಿನಗೆ ತಿಳಿದಿಲ್ಲವೆ? ನೀನು ಯಾವ ಸೀಮೆಯ ಗಂಡು? ಎಂದು ಮೀರಾ ಅರ್ಚಕನನ್ನೇ ಪ್ರಶ್ನಿಸಿದಳು. ಅರ್ಚಕ ದಿಗ್ಭ್ರಾಂತನಾದ. ನಡೆದ ವಿಷಯವನ್ನು ರಾಜನಿಗೆ ಅರುಹಿದ. ಅಂದಿನಿಂದ ಪುನಃ ಹೆಣ್ಣು ಗಂಡೆನ್ನದೆ ಶ್ರೀಕೃಷ್ಣ

ಮಂದಿರ ಪ್ರವೇಶಕ್ಕೆ ಫರ್ಮಾನು ಹೊರಡಿಸಿದರು.

ಪೃಥುವಿಯಲ್ಲಿ 750 ಕೋಟಿ ದೇಹಗಳು ಇವೆ. ಆದರೆ ಅವು ಗಂಡಲ್ಲ; ಹೆಣ್ಣೂ ಅಲ್ಲ; ದೇಹಗಳು ಮಾತ್ರ. ದೇಹದಲ್ಲಿ ಜ್ಞಾನವೆಂಬ ಗಂಡುಗೂಸು ಸಂಗಮವಾಗಿದೆ. ದೇಹವನ್ನು ಮನವೆಂಬ ಹೆಣ್ಣು ಆವರಿಸಿದೆ. ಲೋಕದ ದೃಷ್ಟಿಯಲ್ಲಿ ದೇಹ ಹೆಣ್ಣಾಗಿ ಕಂಡರೂ ಜ್ಞಾನಿಯ ದೃಷ್ಟಿಯಲ್ಲಿ ಅದು ಹೆಣ್ಣಲ್ಲ; ಗಂಡಾಗಿ ಕಂಡರೂ ಅದು ಗಂಡಲ್ಲ.

ದೇಹವನ್ನು ಆವರಿಸಿದ ಮನಕ್ಕೆ, ದೇಹದಲ್ಲಿಯೇ ಸಂಗಮವಾದ ಜ್ಞಾನವೆಂಬ ಗಂಡುಗೂಸನ್ನು ಕೂಡುವ ಬಯಕೆ ಆದರೆ ಸಾಕು, ಹಾಗೆ ಬಯಕೆ ಮಾಡಿದ ಮನವೇ ಹೆಣ್ಣು. ದೇಹದಲ್ಲಿ ಸಂಗಮವಾದ ಜ್ಞಾನವೇ ಗಂಡು!

ಜ್ಞಾನವೆಂಬ ಗಂಡುಗಲಿಯನ್ನು ಬೇಟೆಯಾಡುವುದು ಸುಲಭದ ಮಾತಲ್ಲ. ಈತ ಚಕ್ರವರ್ತಿ ಸಾಮ್ರಾಟ ರಾಜ ಮಹಾರಾಜರುಗಳಿಗೆ ಒಲಿಯುವಾತನಲ್ಲ. ಈತನನ್ನು ಗೆಲ್ಲಬೇಕಾದರೆ ಮಹಾವೀರನೇ ಆಗಬೇಕು.

ರಾಜ, ರಾಜನೊಂದಿಗೆ ಸಾಮ್ರಾಟನೊಂದಿಗೆ ಚಕ್ರವರ್ತಿಯೊಂದಿಗೆ ಯುದ್ಧ ಮಾಡಿ ಗೆಲ್ಲಬಹುದು. ಆದರೆ ತನ್ನಲ್ಲಿಯೇ ಇರುವ ಅರಿಷಡ್ವರ್ಗಗಳೊಂದಿಗೆ ಸಪ್ತವ್ಯಸನಗಳೊಂದಿಗೆ ಅಷ್ಟಮದಗಳೊಂದಿಗೆ ಯುದ್ಧ ಮಾಡಿ ಗೆಲ್ಲುವದು ಸುಲಭದ ಮಾತಲ್ಲ. ಹೀಗೆ ಗೆದ್ದವನೇ ಮಹಾವೀರ, ಅವನೇ ಗಂಡುಗಲಿ. ಇಂತಹ ಗಂಡುಗಲಿಗಳು ಮಾತ್ರ ಗಂಡುಗೂಸನ್ನು ಗೆಲ್ಲಬಲ್ಲರು. ಇಂಥ ಗಂಡುಗೂಸು ಪೃಥುವಿಯ ಮೇಲಿಲ್ಲವಯ್ಯಾ .

ಪೃಥುವಿಯ ಮೇಲಿರುವ ಪ್ರತಿ ಅಂಗದಲ್ಲಿಯೂ ಲಿಂಗವೆಂಬ ಗಂಡು ಸಂಗಮವಾಗಿ ಲಿಂಗಯ್ಯನೆಂದು ಕರೆಯಿಸಿಕೊಂಡಿದ್ದಾನೆ. ಇವನೊಬ್ಬನೆ ಗಂಡು. ಉಳಿದವರೆಲ್ಲ ಹೆಣ್ಣು ಮಕ್ಕಳು ಎಂದು ಸಿದ್ಧರಾಮ ಶಿವಯೋಗಿಗಳು ಘೋಷಿಸಿದ್ದಾರೆ. ಅರಿಷಡ್ವರ್ಗಗಳೆಂಬ ಅಜ್ಞಾನವನ್ನು ಕಳೆದುಕೊಂಡು ಗಂಡು ಮಕ್ಕಳಾದವರಿಗೆ ಗಂಡುಗೂಸನ್ನು ಹುಡುಕಲು ಹುರಿದುಂಬಿಸಿದ್ದಾರೆ.

ಗಂಡು ಮಕ್ಕಳಾದವರು ಗಂಡನ್ನು ಬೇಟೆಯಾಡುತ್ತಾರೆ. ಹೆಮ್ಮಕ್ಕಳಾದವರು ಹೆಂಬೇಟೆಯಾಡುತ್ತಾರೆ: ಅರಿಷಡ್ವರ್ಗಗಳನ್ನು ಗೆದ್ದ ಮನವೇ ಗಂಡು. ಅರಿಷಡ್ವರ್ಗಗಳನ್ನು ಗೆಲ್ಲದ ದೇಹ ಹೆಣ್ಣಾದರೂ ಹೆಣ್ಣೇ; ಗಂಡಾದರೂ ಹೆಣ್ಣೇ ಆಗಿದೆ. ಹೀಗಾಗಿ ಅದು ಹೆಣ್ಣು ಹೆಣ್ಣು ಸೇರಿದಂತೆ ಲೋಕದ ವ್ಯವಹಾರ. ಹೆಣ್ಣು ಮಕ್ಕಳಾದವರು ಹೆಂಬೇಟೆ ಯಾಡುತ್ತಾರೆ. 'ಲೋಕದ ಕೂಟ ಹೆಣ್ಣು ಹೆಣ್ಣು ಕೂಡಿದ ಕೂಟ. ಶರಣರ ಕೂಟ ಗಂಡು ಹೆಣ್ಣು ಕೂಡಿದ ಕೂಟ' ಎಂದು ಶರಣರು ಹೇಳಿದ್ದಾರೆ.

ಜಗದ ಗಂಡರು ಇವನ ಮೇಲೆ ಮೂಗೂರಿಕೊಂಡಿಪ್ಪರು :

ಗಂಡಾದರೂ ಹೆಣ್ಣೇ ; ಹೆಣ್ಣಾದರೂ ಹೆಣ್ಣೇ ! ಪೃಥುವಿಯ ಸಕಲ ಹೆಣ್ಣು ಮಕ್ಕಳ ಆಸೆಯೂ ಜ್ಞಾನವೆಂಬ ಗಂಡುಗೂಸನ್ನು ಕೂಡುವ ಕಾಯಕದಲ್ಲಿ ನಿರತವಾಗಿದೆ. ಜ್ಞಾನವೆಂಬ ಪರಮ ಪುರುಷನೊಂದಿಗೆ ಬೆರೆತು ಅರ್ಧನಾರೀಶ್ವರನೆಂಬ ಪದವಿ ಪಡೆಯುವ ಕಾತುರದಲ್ಲಿವೆ. ಜ್ಞಾನವನ್ನು ಕೂಡಿ ಜ್ಞಾನದೊಂದಿಗೆ ಬೆರೆಯದವರಾರು ಹೇಳಾ! ಅವ್ವಾ! ಅಯ್ಯಾ! ಕಪಿಲಸಿದ್ಧ ಮಲ್ಲಯ್ಯನ ದರುಶನವನ್ನು ಹೊಂದದ ದೇಹ ಈ ಪೃಥುವಿಯ ಮೇಲೆ ಒಂದಾದರೂ ಇದೆಯಾ?

**253**

**ಇವರೆಂದ ಮಹಾವಸ್ತುವಿನ ಪ್ರಮಾಣವನರಿದೆ,**

**ಶುದ್ಧವಿದೆಂದರಿದೆ,**
**ಪಾದೋದಕ ಪ್ರಸಾದ ಭಕ್ತಿಯೆಂಬ ನಿಶ್ಚಯವನರಿದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ಪರತತ್ವವನರಿದೆ ಇವರಿಂದ.**

ಶರಣರು ಹೇಳಿದ ಮಹಾ ವಸ್ತುವಿನ ಪ್ರಮಾಣವನು ನಾನು ಅರಿತೆ. ನಾನು ನನ್ನಿಂದಲೇ ಅರಿತೆ. ನನ್ನಲ್ಲಿಯೇ ಸಂಗಮವಾದ ಆ ವಸ್ತುವನು ಶುದ್ಧವೆಂದು ನನ್ನಿಂದಲೇ ಅರಿತೆ.

ಉದರದಲ್ಲಿ ಬಚ್ಚಿಟ್ಟುಕೊಂಡ ಪರಮಾತ್ಮನ ಪಾದೋದಕವು ಮಹಾಜ್ಞಾನೋದಕವಾಗಿದೆ. ಅಂಗವಾಗಿದೆ. ಲಿಂಗಾಂಗವಾಗಿದೆ. ಸಕಲವನ್ನು ಸಹಜವಾಗಿ ಸ್ವೀಕರಿಸುವ ಪ್ರಸಾದವಾಗಿದೆ. ಮಹಾ ಪ್ರಸಾದವಾಗಿದೆ. ಏನೀ ಪಾದೋದಕದ ಮಹಿಮೆ! ಏನೀ ಪ್ರಸಾದದ ಮಹಿಮೆ! ಏನೀ ಭಕ್ತಿಯ ಮಹಿಮೆ!

ಪಾದೋದಕ ಪ್ರಸಾದ ಭಕ್ತಿ ಈ ಮೂರೂ ಅಂಗದಲ್ಲಿಯೇ ಸಂಗಮವಾಗಿವೆ. ಹೀಗಾಗಿ ಅಂಗ ಲಿಂಗಾಂಗವಾಗಿದೆ. ಪಾದೋದಕ, ಪ್ರಸಾದ, ಭಕ್ತಿ ಈ ಮೂರೂ ಶಕ್ತಿ ಅಂಗದಲ್ಲಿ ಮಿಳಿತವಾಗಿದ್ದು, ಒಂದೊಂದು ಶಕ್ತಿಯ ಮಹಾಪರಿಚಯವೂ ಅಂಗಕ್ಕೆ ಅರಿವಾಗಿದೆ; ಅಂಗದಿಂದಲೇ ಅಂಗಕ್ಕೆ ಅರಿವಾಗಿದೆ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮ ವಾದ-ಪಾದೋದಕಕ್ಕೆ ಭಕ್ತಿ ಮಾಡಿದ ಕಾರಣ ಪಾದೋದಕವೆಂದರೆ ಜ್ಞಾನೋದಕವೆಂದು ಮನಕ್ಕೆ ನಿಶ್ಚಯವಾಗಿದೆ.

ಅಂಗದಲ್ಲಿಯೇ ಸಂಗಮವಾದ ಪ್ರಸಾದಕ್ಕೆ ಮನ ಭಕ್ತಿ ಮಾಡಿದ ಕಾರಣ ಪ್ರಸಾದವೆಂದರೇನೆಂದು ಮನಕ್ಕೆ ನಿಶ್ಚಯವಾಗಿದೆ.

ಪಾದೋದಕಕ್ಕೆ ಪ್ರಸಾದಕ್ಕೆ ಮನ ಭಕ್ತಿ ಮಾಡಿದ ಕಾರಣ ಮನವೇ ಘನಮನವಾಯಿತೆಂದು ಮನಕ್ಕೆ ನಿಶ್ಚಯವಾಗಿದೆ. ಹೀಗೆ ಶರಣರು ಹೇಳಿದುದರಿಂದಾಗಿ ಮನದಿಂದಲೇ ಭಕ್ತಿ ಮಾಡಿ, ಪಾದೋದಕವನು ಅರಿತೆ; ಪ್ರಸಾದವನೂ ಅರಿತೆ; ಪರತತ್ವವನ್ನೂ ಅರಿತೆ. ಆ ತತ್ವವೇ ನಾನಾದೆ. ಇದರಿಂದಾಗಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಸಂಗ ಮಾಡಿ ಆತನಲ್ಲಿಯೇ ಒಂದಾದ ವೃತ್ತಾಂತವನ್ನು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ವಚನದ ಮೂಲಕ ಹೇಳಿದ್ದಾರೆ.

**254**

**ಇವಳಾವಾವ ವಂಚಕದಲಿ ಹುಟ್ಟಿ ಬೆಳದವನೆಂದರಿಯೆ.**
**ನೋಡಯ್ಯಾ, ಇಂತೀ ಲೋಕವ ಹೊರಿಸೆಂದು ತಲೆವಗ್ಗವಿಕ್ಕಿಕೊಟ್ಟಾ,**
**ಕಪಿಲಸಿದ್ಧ ಮಲ್ಲಿನಾಥಯ್ಯನವ್ಯಯ.**

ತನುವೆಂಬುದು ಶುದ್ಧ ಚಿನ್ನ. ತನುವನ್ನು ಆವರಿಸಿದ ಮನದಿಂದಾಗಿ ತನು ಶುದ್ಧ ಚಿನ್ನವೆಂದು ತೋರುತ್ತಿಲ್ಲ. ಇದು ತನುವಿನ ದುರ್ದೈವ.

ತನುವನ್ನು ಆವರಿಸಿದ ಮನದ ವಂಚನೆಯ ಸ್ವಭಾವದಿಂದಾಗಿ ತನು, ವಸ್ತುವನ್ನು ಪಡೆದು ಕಳ್ಳ ಎನ್ನಿಸಿಕೊಂಡಿದೆ. ಅದೇ ವಸ್ತುವನ್ನು ಪಡೆದು ಶ್ರೀಮಂತ ಎನ್ನಿಸಿಕೊಂಡಿದೆ. ಅದೇ ವಸ್ತುವನ್ನು ಪಡೆದು ರಾಜ ಎನ್ನಿಸಿಕೊಂಡಿದೆ. ಅದೇ ವಸ್ತು ಪಡೆಯಲು ಸಾಧ್ಯವಾಗದ್ದಕ್ಕಾಗಿ ತನು

ಭಿಕಾರಿ ಎನ್ನಿಸಿಕೊಂಡಿದೆ. ಅದೇ ವಸ್ತುವನ್ನು ತಿರಸ್ಕರಿಸಿದ್ದಕ್ಕಾಗಿ ಜ್ಞಾನಿ ಎನ್ನಿಸಿಕೊಂಡಿದೆ.

ತನುವನ್ನು ಆವರಿಸಿ, ತನುವನ್ನೇ ಆಶ್ರಯಿಸಿ, ಆಶ್ರಯಿಸಿದ ತನುವನ್ನೇ ಮತ್ತೆ ಮತ್ತೆ ವಂಚನೆಗೆ ಈಡುಮಾಡಿ, ತನುವನ್ನೇ ಉಪಕರಣ ಮಾಡಿಕೊಂಡು, ತನುವಿನೊಂದಿಗೆ ಭೋಗಿಸಿ ಸುಖಿಸುವ ನಯವಂಚಕಳೆಂಬ ಮಾನಸಗಳ್ಳಿಯ ಸ್ವಭಾವ.

ಅದು ತನುವಿನೊಂದಿಗೆ ಭಾದಿಸಿ ಅರಳುವುದು ತಡವಿಲ್ಲ; ಅದೇ ತನುವಿನೊಂದಿಗೆ ದುರ್ಭಾವಕ್ಕೊಳಗಾಗಿ ಕ್ರೂರಿಯಾಗುವುದೂ ತಡವಿಲ್ಲ. ತನು ಅರಳಿದಾಗ ಅಂತಃಕರಣಿ ಎಂದು ತನುವಿನಿಂದಲೇ ಗುರುತಿಸಿಕೊಂಡು; ತನು ಕೆರಳಿದಾಗ ತನುವಿನಿಂದಲೇ ದುರ್ಗುಣಿಯೆಂದು ಗುರುತಿಸಿಕೊಳ್ಳುತ್ತದೆ. ಇದೆಲ್ಲ ಆಗುವುದು ತನುವನ್ನು ಆವರಿಸಿದ ಮನವೆಂಬ ವಂಚಕಳಿಂದ.

ಹಳದಿ ಬಣ್ಣ ಸಂಗಮವಾದ ಲೋಹವನ್ನು ಮನ ಚಿನ್ನವೆಂದು ಗುರುತಿಸಿತು. ಯುದ್ಧ ಮಾಡಿ ಹಳದಿ ಲೋಹ ಪಡೆದ ತನುವನ್ನು ಮನ ರಾಜನೆಂದು ಗುರುತಿಸಿತು. ಹಳದಿ ಲೋಹ ಖರೀದಿಸಿದ ತನುವನ್ನು ಮನ ಶ್ರೀಮಂತನೆಂದು ಗುರುತಿಸಿತು. ಅದೇ ಲೋಹ ಕದ್ದ ತನುವನ್ನು ಮನ ಕಳ್ಳನೆಂದು ಗುರುತಿಸಿತು. ಹಳದಿ ಲೋಹ ಪಡೆಯಲು ಸಾಧ್ಯವಾಗದ ತನುವನ್ನು ಮನ ಭಿಕಾರಿ-ಭಿಕ್ಷುಕ ಎಂದು ಗುರುತಿಸಿತು. ಹಳದಿ ಲೋಹವನ್ನು ಲೋಹವೆಂದು ತಿರಸ್ಕರಿಸಿದ ತನುವನ್ನು ಮನ ಸಂತನೆಂದು ಗುರುತಿಸಿತು.

ಸದಾ ಸಹಜವಾಗಿರಬೇಕಾದ ತನುವನ್ನು ಮನ ತನ್ನ ಮನಬಂದಂತೆ ಚಂಚಲಗೊಳಿಸಿ ಅದರಲ್ಲಿ ತನ್ನ ವಿಕೃತ ಸ್ವಭಾವ ತುಂಬಿ, ಆ ತನುವಿನ ಮೂಲಕ ತಾನು ಸುಖಿಸಿ, ತನುವಿಗೆ ನಾನಾ ರೀತಿಯ ಹಣೆಪಟ್ಟಿ ಕಟ್ಟಿ, ತನುವನ್ನು ತನುವಿನಿಂದಲೇ ಹೀಯಾಳಿಸಿ, ಗೌರವಿಸಿ, ಹಾದರರದಿಂದ ಅಪ್ಪಿಕೊಂಡು, ಹಲ್ಲೆ, ಅತ್ಯಾಚಾರ; ಕಳುವು, ಹಾದರ, ವಂಚನೆಯ ಪದವಿಯನ್ನು ತನುವಿಗೆ ಹೇರಿ, ಮನ ತನುವಿನ ಮೂಲಕ ಸದಾ ಸುಖಿಸುವುದೇ ಮನದ ಕಾಯಕವಾಗಿದೆ.

ಸಿದ್ಧರಾಮ ಶಿವಯೋಗಿಗಳು ಇಂಥ ಮನವನ್ನು ಕುರಿತು 'ಇವಳಾವಾವ ವಂಚಕದಲ್ಲಿ ಹುಟ್ಟಿ ಬೆಳೆದವನೆಂದರಿಯೆ' ಎಂದಿದ್ದಾರೆ.

ನೋಡಯ್ಯಾ, ಇಂತೀ ಲೋಕವ ಹೊರಿಸೆಂದು ತಲೆವಗ್ಗವಿಕ್ಕಿ ಕೊಟ್ಟಾ, ಕಪಿಲಸಿದ್ಧ ಮಲ್ಲಿನಾಥಯ್ಯನವಯ್ಯನು.

ಸಾವಿಲ್ಲದ ರೂಹಿಲ್ಲದ ಕೇಡೇ ಇಲ್ಲದ ಚೆಲುವನು ಅಪ್ರತಿಮವಾದ ಅಂಗವನ್ನು ಸೃಷ್ಟಿಮಾಡಿದನು. ಆ ಅಂಗದಲ್ಲಿ ತಾನು ಸಂಗಮವಾದನು. ಆತ ತನ್ನ ಬೆಳಕಿನ ಕಿರಣಗಳಿಂದ ಮನವನ್ನು ಹೊಲಿದು ತನ್ನನ್ನು ಹುಡುಕಲು ಕಳುಹಿಸಿದನು.

ಸಿಕ್ಕದ್ದನ್ನೆಲ್ಲ ಕಬಳಿಸುವ ಮನ ಅನಂತ ಕಾಲ ಸಂಚರಿಸಿದರೂ ತನುವಿನಲ್ಲಿಯೇ ಸಂಗಮವಾದ ಅವ್ಯಯನಾದ ಕಪಿಲಸಿದ್ಧ ಮಲ್ಲಯ್ಯನನ್ನು ಕಾಣಲೇ ಇಲ್ಲ. ಇದು ಲೋಕದ ನಿಯಮ! ಸಾವೇ ಇಲ್ಲದ ಸರದಾರನ ನಿಯಮ!

**255**

**ಇಷ್ಟಲಿಂಗದ ಭೇದ ದೃಷ್ಟವಪ್ಪೀ ಮುಕ್ತಿ**
**ಬಚ್ಚಬರಿಯಾನತದ ನಿರ್ಗುಣದಲಿ**
**ಒಪ್ಪಿಪ್ಪ ಕಮಳದಲಿ ತಪ್ಪದಿಹ ದೀಪ್ತಿಯಲಿ,**

**ಒಪ್ಪಿಪ್ಪ ನಿತ್ಯದಿಂದಿಪ್ಪತ್ತರಲ್ಲಿ**
**ಮನೆಗಳಾ ಮಧ್ಯದಲಿ**
**ಮನಸಿಜನ ಎಣಿಕೆಯನು ಹುಗಲೀಯದೆ**
**ಶುದ್ಧ ತಾತ್ಪರ್ಯದಾ ಕಾಮ್ಯಾರ್ಥದಿಂದಲ್ಲಿ**
**ನಿಃಕಾಮ ಸಂಗವ ಮಾಡಿ**
**ಸೋಮಕೊಳದಲ್ಲಿ ಶುದ್ಧ ನೀರ ಮಿಂದು**
**ತಾನು ತಾನೊಂದಾಗಿ ನಾನಾಗುಣಂಗಳ ಭೇದವನು**
**ಅರಿದೀಗ ಮುಗ್ಧನಾದ.**
**ಮೋಹಿಸುವ ಮಲತ್ರಯದ**
**ಕಾಮಿಸುವ ಸಂಗಮವನು ಬೇಗದಲಿ ಸುಟ್ಟು**
**ನೀನು ನಾನಾದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದ ಮೇಲೆ ತಾನೇ ಕಟ್ಟಿಕೊಂಡ ಲಿಂಗವನ್ನು ಲೋಕದ ಗುರುಗಳು ಇಷ್ಟಲಿಂಗವೆಂದು ಕರೆದರು. ಅಂಗವನ್ನು ತನ್ನ ಇಚ್ಛೆಗನುಗುಣವಾಗಿ ಸೃಷ್ಟಿಮಾಡಿ, ಆ ಅಂಗದಲ್ಲಿ ತಾನು ಸಂಗಮವಾದ ಇಷ್ಟಲಿಂಗವನ್ನು ಶರಣರು ಇಷ್ಟಲಿಂಗವೆಂದು ಕರೆದರು.

ಲೋಕದ ಗುರುದೇವ ಅಂಗದ ಮೇಲೆ ಕಟ್ಟಿದ ಇಷ್ಟಲಿಂಗವನ್ನು ಸಕಲರಿಗೂ ಪೂಜಿಸಲು ಬರುತ್ತದೆ; ಆರಾಧಿಸಲು ಬರುತ್ತದೆ. ಅಂಗದ ಮೇಲೆ ಕಟ್ಟಿಕೊಂಡ ಲಿಂಗಯ್ಯನ ದರುಶನ ಸಕಲರಿಗೂ ಆಗುತ್ತದೆ. ಆದರೆ ಶರಣರು ತೋರಿದ ಇಷ್ಟಲಿಂಗವನ್ನು ಸಕಲರೂ ಪೂಜಿಸಲು ಸಾಧ್ಯವಿಲ್ಲ. ಆರಾಧಿಸಲೂ ಸಾಧ್ಯವಿಲ್ಲ. ಅದು ಸಕಲರಿಗೂ ಗೋಚರಕ್ಕೆ ಬಾರದ ಅಗೋಚರ ಲಿಂಗ. ಅಪ್ರತಿಮಲಿಂಗ. ಬಚ್ಚ ಬರಿಯ ನಿರ್ಗುಣಲಿಂಗ. ಬ್ರಹ್ಮ ಕಮಲದ ಮಧ್ಯದಲ್ಲಿ ಬೆಳಗಿಂಗೆ ಬೆಳಗಾಗಿ ಬೆಳಗುವ ಲಿಂಗ.

ಮನಸಿಜನ ಎಣಿಕೆಗೆ ನಿಲುಕದ ಲಿಂಗ. ಶುದ್ಧ ಕಾಮ್ಯಾರ್ಥದಿಂದ ನಿಃಕಾಮ ಸಂಗವ ಮಾಡಿ ಸೋಮಕೊಳದಲ್ಲಿ ಶುದ್ಧ ನೀರ ಮಿಂದು, ಅವನು ತಾನು ಒಂದಾಗಿ, ನಾನಾ ಗುಣಂಗಳ ಭೇದವನು ಅಳಿಸಿಕೊಂಡು ನಿರ್ಗುಣನಾಗಿ ಅರಿದರಿದು ಮುಗ್ಧನಾದವನಿಗೆ ಮಾತ್ರ ಒಲಿಯುವ ಲಿಂಗ.

ಮೋಹಿಸುವ ಮಲತ್ರಯಗಳನ್ನು ಮರೆತು; ಕಾಮಿಸುವ ಸಂಗವನ್ನು ಬೇಗದಲ್ಲಿ ಸುಟ್ಟು, ನಿಃಕಾಮಿ ಸಂಗಯ್ಯನಲ್ಲಿ ಒಂದಾಗಿ ಬೆರೆತು; ಅವನು ತಾನು ಎನ್ನುವ ಭೇದವನ್ನು ಮರೆತು ಹೋದವರಿಗೆ ಮಾತ್ರ, ಒಲಿಯುವ ಲಿಂಗ. ಅಂಗ ಲಿಂಗ ಒಂದಾಗಿ ಲಿಂಗಾಂಗವೆಂದು ಶರಣರಿಂದ ಕರೆಯಿಸಿಕೊಂಡ ಲಿಂಗ. ಇದು ಶರಣರಿಗೆ ಮಾತ್ರ ಒಲಿತ ಲಿಂಗ. ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ಎಂಬ ನಾಮಾಂಕಿತವನ್ನು ಪಡೆದ ಇಷ್ಟಲಿಂಗ. ಸಕಲ ಶರಣರೂ ಧಾರಣೆ ಮಾಡಿದ ಅರಿವೆಂಬ ಗುರುದೇವನ ಲಿಂಗ.

**256**

**ಇಷ್ಟಲಿಂಗವ ಕರಕ್ಕೆ, ಪ್ರಸಾದಲಿಂಗವ ತನುವಿಂಗೆ,**
**ಒಳಹೊರಗೆನ್ನದೆ ಸರ್ವಾಂಗದೊಳಗೆ**

**ಚರ ಪ್ರಸಾದಲಿಂಗವನಿತ್ತ ಶ್ರೀಗುರು**
**ಆನಂದಸ್ಥಾನದಲ್ಲಿ ಅಕ್ಷರಲಿಂಗವನು ತಂದಿತ್ತ ಕಾರಣ**
**ನಿನ್ನಂತೆ ಆನಾದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶ್ರೀಗುರುವಿನ ಕರುಣೆ ಅಪಾರ. ಶ್ರೀಗುರು ಅರಿವೆಂಬ ಗುರುದೇವನನ್ನು ಅಪ್ಪಿಕೊಂಡು ಆತನ ಪರಮಸುಖವನ್ನು ಉಂಡು ಆ ಸುಖದ ವೃತ್ತಾಂತವನ್ನು ಸಕಲ ಕರಗಳಿಗೆ ಉಣ್ಣಿಸುವ ಕಾಯಕದಲ್ಲಿ ನಿರತನಾದಾತ. ಹೀಗಾಗಿ ಆತನ ಕರುಣೆ ಅಪಾರ!

ಅಂಗವೆಂದರೆ ಸಾಮಾನ್ಯವಲ್ಲ. ಅದರೊಳಗೆ ಬ್ರಹ್ಮಾಂಡವೇ ಅಡಗಿದೆ. ಬ್ರಹ್ಮ, ವಿಷ್ಣು, ಸದಾಶಿವರು ಅಂಗದಲ್ಲಿ ಸಂಗಮವಾಗಿದ್ದಾರೆ. ಗಾಳಿ, ನೀರು, ಭೂಮಿ, ಬೆಂಕಿ, ಆಕಾಶ ಅಂಗದಲ್ಲಿ ಚುಳುಕಾಗಿದೆ. ಅದಕ್ಕಾಗಿಯೇ ದಾಸೀಮಾರ್ಯರು 'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ, ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ' ಎಂದರು.

ಬಸವಣ್ಣನವರು ಅಂಗವನ್ನು ಹೀಗೆಂದು ಬಣ್ಣಿಸಿದರು: 'ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ. ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವೇ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ''.

ಅಂಗದಲ್ಲಿ ಇಡೀ ಬ್ರಹ್ಮಾಂಡವೇ ಚುಳುಕಾಗಿರುವುದು ಅಂಗಕ್ಕೆ ಗೋಚರಕ್ಕೆ ಬರುತ್ತದೆ ಎಂದರೆ ಅದೇನು ಸಾಮಾನ್ಯ ಕಾಯಕವೇ. ಕಾಯ ಈ ಕಾಯಕ ಮಾಡಿಕೊಳ್ಳುವುದಕ್ಕಾಗಿಯೇ ಜನ್ಮ ತಳೆದಿರಬೇಕು. ಕಾಯವೇ ಕೈಲಾಸವಾಗುವ ಕಾಯಕದಲ್ಲಿ ಕಾಯ ತೊಡಗಬೇಕು. ಉಣ್ಣುವುದಕ್ಕಾಗಿ ಮಾಡುವ ಕಾಯಕ ಕಾಯಕವಲ್ಲವೆಂದು ಶ್ರೀಗುರು ಮಾತ್ರ ಕಾಯಕ್ಕೆ ತಿಳಿಸಬಲ್ಲ!

ಅಂಗವನ್ನೇ ಲಿಂಗವನ್ನಾಗಿಸಿ; ಆ ಅಂಗವನ್ನೇ ಅಂಗೈಯಲ್ಲಿಟ್ಟು ಇದು ಬರೀ ಅಂಗವಲ್ಲ; ಲಿಂಗಾಂಗವೆಂದು ಭೋದಿಸುತ್ತಾ, ಅಂಗದಲ್ಲಿ ಇಡೀ ಬ್ರಹ್ಮಾಂಡವನ್ನೇ ಅಂಗಕ್ಕೆ ದರುಶನ ಮಾಡಿಸುತ್ತಾನೆ. ಬ್ರಹ್ಮ ವಿಷ್ಣು ಸದಾಶಿವರನ್ನು ಅಂಗದಲ್ಲಿಯೇ ಅಂಗಕ್ಕೆ ದರುಶನ ಮಾಡಿಸುತ್ತಾನೆ.

ಒಳಹೊರಗೆನ್ನದೆ ಸರ್ವಾಂಗದೊಳಗೆ ಬೆರೆತ ಚರ ಪ್ರಸಾದ ಲಿಂಗವನ್ನು ಅಂಗೈಯೊಳಗಿಟ್ಟು ಆನಂದ ಸ್ಥಾನದಲ್ಲಿರುವ ಅಕ್ಷರ ಲಿಂಗಕ್ಕೆ ಅಕ್ಷರೋತ್ತಮನ ದರುಶನ ಮಾಡಿಸುತ್ತಾನೆ ಶ್ರೀಗುರು.

ತಾನು ಗುರುವೆನ್ನದೆ, ಅಂಗದ ಮೈದಡವಿ, ಸರ್ವಾಂಗದೊಳಗೆ ಒಳಹೊರಗೆನ್ನದೆ ಸಂಗಮವಾದ ಅರಿವಿನ ಸಂಗಯ್ಯನೆಂಬ ಗುರುದೇವನನ್ನು ಅಂಗವನ್ನು ಆವರಿಸಿದ ಮನಕ್ಕೆ ಪರಿಚಯಿಸುತ್ತಾನೆ.

ಗುರುದೇವನನ್ನು ಗುರುದೇವಾ ಎಂದು ಕರೆದ ಶಿಷ್ಯನೆಂಬ ಅಂಗವನ್ನೇ ಗುರುವನ್ನಾಗಿಸಿ ಆ ಗುರುವಿಗೆ ತಾನು ಶಿಷ್ಯನಾಗಿ ಹಣೆಮಣೆಯುತ್ತಾನೆ ಶ್ರೀಗುರು!

ವಿನೋದಕ್ಕಾಗಿ ಶಿಷ್ಯನೆಂದು ಕರೆದು ಆ ಶಿಷ್ಯನಿಗೆ ತಾನು ಗುರುವಾದ. ಪುನಃ ಆ ಶಿಷ್ಯನನ್ನೇ ಗುರುದೇವನನ್ನಾಗಿಸಿ ಆ ಗುರುದೇವನಿಗೆ ತಾನು ಶಿಷ್ಯನಾದ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಶ್ರೀಗುರುದೇವನನ್ನು ಕುರಿತು ಹೇ ಗುರುದೇವನೆ, ನಿನ್ನಂತೆ ಆನಾದೆ ಎಂದು ಅಕ್ಷರಲಿಂಗವನ್ನು ಆನಂದ ಸ್ಥಾನದಲ್ಲಿ ತಂದಿತ್ತ ಶ್ರೀಗುರುದೇವನನ್ನು ಕುರಿತು ಹಾಡಿದ್ದಾರೆ, ಕುಣಿದಾಡಿದ್ದಾರೆ.

**257**

**ಇಹತ್ರ ಪರತ್ರದಲ್ಲಿ ಎರಡರಲ್ಲಿ ಇಪ್ಪುದು ಗೀತವು ನೋಡಯ್ಯಾ.**
**ಇತ್ತ ಬಾರಾ, ಸಾರಾ ಎಂಬುದು ಗೀತವು ನೋಡಯ್ಯಾ.**
**ಗೀತವನೂ ಗಿರಿಜೆಯನೂ ಬಾಯೆಂದು ಕೈಮಿಸುವನ್ನೈ**
**ಎನ್ನ ಕಪಿಲಸಿದ್ಧ ಮಲ್ಲೇಶ್ವರದೇವ, ಓ! ಅಯ್ಯಾ!**

ದೇವಲೋಕ ಮರ್ತ್ಯಲೋಕ ಎಂಬವು ಎರಡಿಲ್ಲ, ದೇಹವೆಂಬ ಒಂದು ಲೋಕದಲ್ಲಿ ದೇವಲೋಕವು ಇದೆ. ಮರ್ತ್ಯಲೋಕವೂ ಇದೆ. ಹಾಗೆಯೇ ಭಗವಂತನ ಗೀತೆ ದೇಹದಲ್ಲಿ ಸಂಗಮವಾಗಿದೆ. ದೇಹಕ್ಕೆ ಭಗವಂತನ ಗೀತೆ ಆಧಾರವಾಗಿದೆ. ದೇವರು ಇರುವದರಿಂದಲೇ ದೇಹ ಬೆಳಗಿಂಗೆ ಬೆಳಗಾಗಿ ಬೆಳಗುತ್ತಲಿದೆ.

ಭಗವದ್ಗೀತೆ ಎಂಬುದು ಗೀತೆಯಲ್ಲ, ಭಗವಂತನ ಬಳಿ ಹೋಗಲು ಅದು ದಿಕ್ಸೂಚಿ, ಆ ಭಗವಂತನಲ್ಲಿ ಸಂಗಮವಾಗುವ ಭಾಗ್ಯವನ್ನು ಗಿರಿಜೆ ಮಾತ್ರ ಪಡೆದಿದ್ದಾಳೆ. ಗಿರಿಜೆಯು ಶಂಕರನು ಒಂದೇ ದೇಹದಲ್ಲಿ ಇಬ್ಬರೂ ಸಂಗಮವಾಗಿದ್ದಾರೆ. ಆ ಭಾಗ್ಯ ಆಶ್ರಯ ನೀಡಿದ ದೇಹಕ್ಕೆ ಮಾತ್ರ ಇದೆ. ಅವರಿಬ್ಬರನ್ನು ದೇಹದಿಂದಲೇ ಕಂಡುಕೊಳ್ಳಬೇಕು.

ದೇಹದಲ್ಲಿಯೇ ಇರುವ ದೇವರನ್ನು ಕಂಡುಕೊಳ್ಳುವ ಭಾಗ್ಯ ದೇಹಕ್ಕೆ ದೂರವಾದುದರಿಂದ ದೇಹದಿಂದಲೇ ಹೊರ ಬಂದ ಗೀತೆಯನ್ನು ದೇಹ ಆಶ್ರಯಿಸಿಕೊಂಡಿದೆ.

ದೇಹದಲ್ಲಿರುವ ಶಂಕರನನ್ನು ಗಿರಿಜೆಯನ್ನು ಬಾ ಎಂದು ಕೈ ಮಾಡಿ ಕರೆಯುವುದು ಸುಲಭವೋ? ದೇಹದಿಂದಲೇ ಹೊರ ಬಂದ ಗೀತೆಯ ಮೂಲಕ ದೇವರನ್ನು ಕಾಣುವುದು ಸುಲಭವೋ ಎಂದು ದೇಹವೇ ನಿರ್ಧರಿಸಬೇಕು.

ದೇಹದಿಂದಲೇ ದೇವರನ್ನು ಮಾಡಿ, ಆ ದೇವರೇ ದೇವರೆಂದು ದೇಹ ತಾನು ಮಾಡಿದ ದೇವರಿಗೆ ಕೈ ಮುಗಿಯುತ್ತಲೆ ಇದೆ. ಆದರೆ ದೇಹದಲ್ಲಿದ್ದ ದೇವರು ಅದು ದೇವರಲ್ಲವೆಂದು ದೇಹಕ್ಕೆ ಪಾಠ ಮಾಡುತ್ತಲೇ ಇದೆ. ದೇಹವನ್ನು ಸೃಷ್ಟಿಮಾಡಿ, ಆ ದೇಹವನ್ನೇ ದೇವಾಲಯವನ್ನಾಗಿಸಿಕೊಂಡು, ಆ ದೇವಾಲಯದೊಳಗೆ ತಾನಿದ್ದು, ದೇಹವನ್ನು ಆವರಿಸಿದ ಮನವನ್ನು ದೇವರು ಬಾ ಯೆಂದು ಕೈಮಾಡಿ ಕರೆಯುತ್ತಿದ್ದಾನೆ. ಹೀಗೆ ಕರೆಯುವ ದೇವರಿಗೆ ಓಗೊಟ್ಟು, ಆ ದೇವರಲ್ಲಿ ಸಂಗಮವಾದ ಮನವೇ ಗಿರಿಜೆಯಾಗುತ್ತಾಳೆ, ಅರ್ಧನಾರೀಶ್ವರಳಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಬೆರೆತು ಓ! ಅಯ್ಯಾ! ಎಂದು ಮನದುಂಬಿ ಹಾಡುತ್ತಾಳೆ.

**258**

**ಇಹಪರದ ಪರಿಯನು ಅಯ್ಯಾ ನೀನೇ ಬಲ್ಲೆ**
**ನಿನ್ನ ಶರಣನು ಬಲ್ಲ ಪ್ರಭುರಾಯನು**
**ಆತನನುಮತದಿಂ ಮಾಯೆಯ ಗೆಲುವ ಪರಿಯ**
**ನೀನೆನಗೆ ಕಲಿಸುವುದು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಒಂದೇ ತನುವಿನಲ್ಲಿ ಇಹವೂ ಉಂಟು; ಪರವೂ ಉಂಟು. ಇಹಪರವೆಂಬ ಎರಡು ಪದವುಳ್ಳ ಪದಾರ್ಥವನ್ನು ತನುವಿನಲ್ಲಿಯೇ ಇಟ್ಟು ಹೊಲಿದು ಕಳಿಸಿದೆ ಪ್ರಭುವೆ ಈ ಭೂಮಿಗೆ. ನಿನಗೆ ಮಾತ್ರ

ಗೊತ್ತು ಇಹವೆಂದರೇನೆಂದು, ಪರವೆಂದರೇನೆಂದು. ನಿನ್ನನ್ನು ಕಂಡು ಧನ್ಯನಾದ ಶರಣನಿಗೂ ಗೊತ್ತು. ಆದರೆ ಲೋಕದ ತನುಗಳು ಮಾತ್ರ ಇಹಪರವನ್ನು ಹೊರಗಡೆ ಹುಡುಕುತ್ತಲಿವೆ.

ತನುವಿನಲ್ಲಿಯೇ ತನ್ಮಯವಾದ ಪರವಸ್ತುವನ್ನು ತನುವನ್ನು ಆವರಿಸಿದ ಮನದಿಂದ ತನುವಿನಲ್ಲಿಯೇ ಹುಡುಕಿದರೆ ಸಿಕ್ಕೇ ಸಿಗುತ್ತದೆ. ಆದರೆ ಮನಕ್ಕೆ ಮಾಯೆಯ ಸೆರಗು ಚೆಲ್ಲಿ, ಪರವಸ್ತು ಅದಕ್ಕೆ ಕಾಣದಂತೆ ಮಾಡಿರುವಿ ಪ್ರಭುವೆ.

ನಿನ್ನ ಅನುಮತದಿಂದಲೇ ನೀನೆ ಚೆಲ್ಲಿದ ಮಾಯೆಯ ಸೆರಗು ಕಳಚಲು ನಿನ್ನಿಂದಲೇ ಸಾಧ್ಯ ಎಂದು ಮನಕ್ಕೆ ತಿಳಿಯದಂತೆ ಮಾಡಿದೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಹೆಗ್ಗಣಗಳನ್ನು ಹಾಕಿ, ತನುವೆಂಬ ಮನೆಯ ನಿರ್ಮಿಸಿ ಈ ಭ್ರಮಾ ಲೋಕಕ್ಕೆ ಕಳುಹಿಸಿರುವೆ.

ತನುವನ್ನು ಆವರಿಸಿದ ಮನವೆಂಬ ಮಾಯೆಯನು ಮನದಿಂದಲೇ ಗೆಲುವ ಪರಿಯನು ನೀನೆನಗೆ ಕಲಿಸುವುದು ಕಪಿಲಸಿದ್ದ ಮಲ್ಲಿಕಾರ್ಜುನಾ.

**259**

**ಇಹಪರವೆಂಬ ಇದ್ದೆಸೆಯನರಿತು ಇದ್ದೆಸೆಯಾದ**
**ಗುರುಚರವಿಡಿದು ಇಹಪರವೆಂದರಿಯ.**
**ಭಕ್ತನ ತನುವೆ ಶಿವನಿಪ್ಪಾಲಯವಾಗಿ**
**ಇಹಲೋಕವೆ ಪರಲೋಕ ; ಪರಲೋಕವೆ ಇಹಲೋಕ**
**ನಿನ್ನ ಭಕರಿಗೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

''ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ, ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ'' ಎಂದು ಬಸವಣ್ಣನವರು ತನುವನ್ನು ಆವರಿಸಿದ ಮನಕ್ಕೆ ಇದ್ದೆಸೆಯನ್ನು ತೋರಿಸಿದರು.

ತನುವಿನಲ್ಲಿ ದೇವಲೋಕವೂ ಇದೆ; ಮರ್ತ್ಯ ಲೋಕವೂ ಇದೆ. ಆದರೆ ತನುವನ್ನು ಆವರಿಸಿದ ಮನ, ತನುವನ್ನು ಹಿಡಿದುಕೊಂಡು ಪುಣ್ಯಕ್ಷೇತ್ರಗಳಿಗೆ ಅಲೆಯುತ್ತದೆ. ಅದನ್ನೇ ದೇವಲೋಕವೆಂದು ಭಾವಿಸುತ್ತದೆ. ಹಾಗೆಯೇ ತನುವನ್ನು ಹಿಡಿದು ಸೆರೆ ಅಂಗಡಿಗೆ, ವೇಶ್ಯಾಗೃಹಕ್ಕೆ ಕರೆದುಕೊಂಡು ಹೋಗಿ ಮನ ತಾನು ಸುಖಿಸುತ್ತದೆ.

ತನುವಿನ ಮೂಲಕ ಸುಖಿಸುವುದೇ ಸ್ವರ್ಗ ತನುವಿನ ಮೂಲಕ ದುಃಖಿಸುವುದೇ ನರಕ. ಹೀಗೆಂದು ಮನ ತಿಳಿದುಕೊಂಡು ತನುವಿನ ಆಯುಷ್ಯ ವ್ಯರ್ಥ ಕಳೆಯುತ್ತದೆ. ಆದರೆ ಸಿದ್ಧರಾಮ ಶಿವಯೋಗಿಗಳು ಇದ್ದೆಸೆಯನ್ನು ಅರಿವಿನಿಂದ ಅರಿಯುವುದೇ ಇಹ ಹಾಗೂ ಪರವೂ ಆಗಿದೆ. ಇಹಲೋಕ ಪರಲೋಕವೆಂಬವುಗಳು ಇಲ್ಲವೆಂದು ಖಚಿತವಾಗಿ ಹೇಳಿದ್ದಾರೆ.

ಗುರುವಿನ ಆಶ್ರಯ ಪಡೆದು ಇಹವೆಂದರೇನೆಂದು; ಪರವೆಂದರೇನೆಂದು ತಿಳಿಯಬೇಕು. ಶ್ರೀ ಗುರುದೇವ ಮನದ ಮೈದಡವುತ್ತಾನೆ. ಅದನ್ನು ಸಂತುಷ್ಟಗೊಳಿಸುತ್ತಾನೆ. ನಂತರ ಆ ಮನಕ್ಕೆ ವಿಶ್ವಾಸ ಬರುವಂತೆ ದೇಹ ಮುಟ್ಟಿ ದೇಹದಲ್ಲಿಯೇ ಇಹಲೋಕವನ್ನು ಪರಲೋಕವನ್ನು ತೋರಿಸುತ್ತಾನೆ.

ತನುವೆನ್ನುವುದು ಸಾಮಾನ್ಯವಲ್ಲ. ಎಲೆ ಮನವೇ, ತನುವನ್ನು ಹಿಡಿದು ಅತ್ತ ಇತ್ತ ತಿರುಗಬೇಡ. ಹಾಗೆ ತಿರುಗಾಡುವ ನೀನು ಕೂಡಾ ಸಾಮಾನ್ಯನಲ್ಲ. ನೀನು ಸಾಕ್ಷಾತ್ ಶಿವನ ಅರಸಿ; ಶಿವೆಯೇ ಆಗಿರುವೆ.

ನಿನ್ನನ್ನು ಅರ್ಧನಾರೀಶ್ವರಿ ಎಂದು ಸಾಕ್ಷಾತ್ ಶಿವನೇ ನಿನಗೆ ಹೆಸರಿಟ್ಟು, ಆತ ನಿನ್ನನ್ನು ತನ್ನ ಪಟ್ಟದರಸಿಯನ್ನಾಗಿ ಮಾಡಿಕೊಂಡಿದ್ದಾನೆ. ಈ ವೃತ್ತಾಂತ ನಿನಗೆ ಗೊತ್ತಿಲ್ಲ. ಗೊತ್ತಿಲ್ಲದ ನಿನಗೆ ಸರಿಯಾಗಿ ತಿಳಿಹೇಳು ಎಂದು ಆ ಶಿವ ನನ್ನನ್ನು ನಿನ್ನ ಹತ್ತಿರ ಕಳುಹಿದ್ದಾನೆ ಎಂದು ಶ್ರೀಗುರು ಮನಕ್ಕೆ ಭೋದಿಸುತ್ತಾನೆ.

ತನುವನ್ನು ಹಿಡಿದು ಸುಖಿಸುವ ಬಯಕೆ ನಿನಗೆ ಈಡೇರದೇ ಇರುವುದರಿಂದ; ತನುವಿನಲ್ಲಿಯೇ ಸಂಗಮವಾದ ಶಿವನ ಅರಿವಿನ ಸುಖ ನಿನಗೆ ಸಿಗುತ್ತಿಲ್ಲ. ಎಲೆ ಮನವೇ, ತನುವನ್ನು ಹಿಡಿದು ಅದಕ್ಕೆ ಸೆರೆ ಕುಡಿಸಿ ಅದರ ಮೂಲಕ ನೀನು ಸುಖಿಸುವೆ. ತನುವನ್ನು ಹಿಡಿದು ಹಾದರ ಮಾಡಿ ಅದರ ಮೂಲಕ ನೀನು ಸುಖಿಸುವೆ. ತನುವಿನ ಮೂಲಕ ಲಂಚ ಪಡೆದು; ಭ್ರಷ್ಟಾಚಾರ ಮಾಡಿ ತನುವಿನ ಮೂಲಕ ನೀನು ಸುಖಿಸುವೆ. ತನುವಿನ ಮೂಲಕ ತನುವಿಗೆ ನಿಂದೆ ಮಾಡಿ ನೀನು ಸುಖಿಸುವೆ. ತನುವಿನ ಮೂಲಕ ತನುವಿಗೆ ಕೊಲೆಗೈದು ನೀನು ದ್ವೇಷ ಸಾಧಿಸುವಿ.

ತನುವಿನ ಮೂಲಕ ತನುವಿನ ವಸ್ತು ಕದ್ದು ತನುವಿಗೆ ಕಳ್ಳನ ಹಣೆಪಟ್ಟಿ ಕಟ್ಟಿ ಎಲೆ ಮನವೆ ತನುವಿನ ಮೂಲಕ ನೀನು ಸುಖಿಸುವಿ. ಇದೆಲ್ಲಾ ಮಾಡಿದಾಗ ನಿನಗೆ ಸುಖ. ಇದೆಲ್ಲಾ ಮಾಡಬಾರದಿತ್ತು ಎಂದು ನಿನ್ನಿಂದ ನಿನಗೇ ತಿಳಿಯುವುದು. ಮಾಡಿದಾಗ ಸುಖ; ಮಾಡಿ ಆದ ಮೇಲೆ ದುಃಖ. ಮುಂದೆ ಮಾಡಬಾರದೆಂಬ ನಿರ್ಧಾರ. ಪುನಃ ಸುಖಿಸುವ ಆಸೆ ನಿನ್ನಲ್ಲಿಯೇ ಹುಟ್ಟಿ; ಮೈಮರೆತು, ತನುವಿನ ಆಯುಷ್ಯ ನಿನ್ನಿಂದಾಗಿ ವ್ಯರ್ಥ ಕಳೆದು ಹೋಗುವುದು.

ಎಲೆ ಮನವೇ, ನೀನು ತನುವನ್ನು ಬಳಸಿ, ಪರ ತನುವನ್ನು ಹಾದರದಿಂದ ನೋಡುವಾಗ, ಹಾಗೆ ನೋಡಬೇಡ ಅದು ನಿನ್ನಂತೆಯೇ ಇರುವ ತನು. ತನುವನ್ನು ತನುವೆಂದು ನೋಡಬಾರದೇ ಎಂದು ತನುವಿನಲ್ಲಿ ತನ್ಮಯವಾದ ಶಿವ; ತನುವನ್ನು ಆವರಿಸಿದ ಮನವೆಂಬ ನಿನಗೆ ಭೋದಿಸುತ್ತಾನೆ. ಹಾಗೆ ಭೋದಿಸುವವನೇ ಶಿವ. ಆ ಭೋದೆಯನ್ನೂ ಆಲಿಸು. ನಿನ್ನ ಅಜ್ಞಾನದ ಕೆಲಸವನ್ನೂ ಆಲಿಸು. ನೀನು ಮಾಡಿದ್ದು ದುರಾಲೋಚನೆಯೆಂದು ನಿನಗೆ ಶಿವನಿಂದಲೇ ತಿಳಿಯುವುದು.

ಎಲೆ ಮನವೆ, ನೀನು ನಿನಗಾಗಿ ದುರ್ಬಳಕೆ ಮಾಡಿಕೊಳ್ಳುವ ತನು ಅದು ಶಿವನ ಆಲಯ! ಶಿವನ ಪರಿಚಯ ನಿನಗೆ ಇಲ್ಲದ್ದಕ್ಕಾಗಿ ನಿನಗೆ ತಿಳಿದಂತೆ ನಿನ್ನ ಸುಖಕ್ಕಾಗಿ ಶಿವನ ಆಲಯವನ್ನು ನೀನು ಬಳಸುತ್ತಿರುವಿ. ನೀನು ನಿನ್ನ ಮನ ಬಂದಂತೆ ಬಳಸಿ ದಣಿದ ಮೇಲೆ ಶಿವ ಆ ತನುವನ್ನೇ ಕೈಲಾಸವನ್ನಾಗಿಸಿ ತಾನು ಬಳಸುತ್ತಾನೆ!

ಎಲೆ ಮನವೆ, ನಿನ್ನ ಪಾಲು ಹಗಲಾದರೆ, ಶಿವನ ಪಾಲು ರಾತ್ರಿ! ಶಿವ ನಿನ್ನನ್ನು ನೀನು ಬಳಸಿದ ತನುವನ್ನು ಕೈಲಾಸವನ್ನಾಗಿಸುತ್ತಾನೆ. ನೀನು ಗಂಡೋ ಹೆಣ್ಣೋ ಎನ್ನುವುದು ಕೂಡಾ ನಿನಗೆ ಗೊತ್ತಾಗುವುದಿಲ್ಲ. ನೀನು ಶ್ರೀಮಂತ ಬಡವ ಭಿಕ್ಷುಕ ಭಿಕಾರಿ ಕಳ್ಳ ಹಾದರಿಗ ಎಂಬುದು ನಿನಗೆ ತಿಳಿಯುವುದಿಲ್ಲ. ನೀನು ಜಿಲ್ಲಾಧಿಕಾರಿ ಅಧಿಕಾರಿ ಸೇವಕ ಕ್ಲರ್ಕ್ ಆಫೀಸರ್ ಎನ್ನುವ ನೆನಪೂ ನಿನಗೆ ಇರುವುದಿಲ್ಲ. ಶಾಸಕ ಸಚಿವ ಮಂತ್ರಿ ಪ್ರಧಾನಿ ರಾಷ್ಟ್ರಪತಿ ಎನ್ನುವ ಅಹಂಕಾರವೂ ನಿನ್ನಲ್ಲಿರುವುದಿಲ್ಲ.

ಎಲೆ ಮನವೇ, ನೀನು ಸಂಪೂರ್ಣ ಕಳೆದುಕೊಂಡು ಹೋಗುವಿ. ಶಿವನ ವಶವಾಗಿ ಶಿವೆಯೇ ಆಗಿರುವಿ. ನೀನು ಬಳಕೆ ಮಾಡಿದ ತನು, ಶಿವ ವಾಸ ಮಾಡಿದ ಶಿವಾಲಯವೇ ಆಗುವುದು.

ಎಲೆ ಮನವೇ, ಎಚ್ಚರವಾದ ಮೇಲೆ ಪುನಃ ನಿನ್ನ ನೆನಪು ನಿನಗೆ ಕಾಡುವುದು. ನಿನ್ನೊಂದಿಗಿದ್ದ ನಿನ್ನ ಶಿವ ನಿನ್ನಿಂದ ಮರೆಯಾಗುವನು. ನಿನ್ನ ಶಿವ ನಿನಗೆ ಬೇಕಾದರೆ, ಎಲೆ ಮನವೆ, ರಾತ್ರಿ ನೀನು ಶಿವನೊಂದಿಗೆ ಸುಖಿಸಿದಂತೆ ಹಗಲು ಕೂಡಾ ಹಾಗೆಯೇ ಇರಲು

ಪ್ರಯತ್ನಿಸು. ನೀನು ಯಾರೆಂಬುದನ್ನು ನಿನಗೆ ನಿನ್ನ ಶಿವನೇ ಪರಿಚಯಿಸುತ್ತಾನೆ. ತನ್ನ ಭಕ್ತರಿಗೆ ತನ್ನನ್ನು ತಾನು ಪರಿಚಯಿಸಿಕೊಳ್ಳುವುದು ಆತನ ಕರ್ತವ್ಯವೂ ಆಗಿದೆ.

**260**

**ಈ ಆಶೆಯೆಂಬವಳು ಒಂದು ನಿಮಿಷಂ ಬರಿದಿರಲೀಯಳು;**
**ಆರನಾದಡೆಣೆಸುತ್ತಿರ್ಪಳು.**
**ಈ ಆಶೆಯೆಂಬ ಪಾತಕಿಯನೆಂದಿಂಗೆ ನೀಗಿ,**
**ಎಂದು ನಿಮ್ಮೊಡಗೂಡಿ ಬೇರಾಗದಿಪ್ಪೆನೋ**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಸೆಯೆಂಬುದು ತನುವನ್ನು ಅಜ್ಞಾನದ ಕಟಕಟೆಯಲ್ಲಿ ನಿಲ್ಲಿಸುತ್ತದೆ. ಅಪರಾಧೀ ಸ್ಥಾನದಲ್ಲಿ ನಿಲ್ಲಿಸುತ್ತದೆ. ಆಸೆಯೆಂಬುದು ತನುವನ್ನು ಒಂದು ನಿಮಿಷವೂ ಬಿಟ್ಟಿರಲೊಲ್ಲದು.

ಗುರು, ಶಿಷ್ಯ, ಆಚಾರ್ಯ, ಪೀಠಾಧಿಪತಿ, ಮಠಾಧಿಪತಿ, ಪಾದ್ರಿ, ಮೌಲ್ವಿ, ಶಾಸಕ, ಸಚಿವ, ಅಧಿಕಾರಿ ಎಂದು ತನುವಿಗೆ ಬೇರೆ ಬೇರೆ ವೇಷ ಹಾಕಿದರೂ ಕೂಡಾ, ಆಸೆ ತನ್ನ ಪ್ರವೃತ್ತಿಯನ್ನು ಬಿಡದೆ, ತನುವನ್ನು ಅಮರಿಕೊಳ್ಳುತ್ತದೆ. ವೇಷದ ಮರೆಯಲ್ಲಿದ್ದು ತನ್ನ ಆಶೆ ಪೂರೈಸಿಕೊಳ್ಳುತ್ತದೆ; ಆಶೆ.

ಸಿದ್ಧರಾಮ ಶಿವಯೋಗಿಗಳು ತನುವಿಗೆ ಉಂಟಾಗುವ ಆಶೆಯನ್ನು ಪಾತಕಿ ಎಂದು ಹೆಸರಿಟ್ಟು ಕರೆದಿದ್ದಾರೆ. ಆಶೆ ಎಂಬುದು ಪಾತಕಿಯೇ ಸರಿ. ಇಡೀ ತನುವಿನ ಐದು ಜ್ಞಾನೇಂದ್ರಿಯಗಳಲ್ಲಿ ಹುಟ್ಟಿ, ತನುವನ್ನು ತನ್ನ ಬಲೆಗೆ ಹಾಕಿಕೊಂಡು, ಅಜ್ಞಾನಿ ಎಂಬ ಹಣೆಪಟ್ಟಿ ತನುವಿಗೆ ಕಟ್ಟಿ, ಹಂತ ಹಂತವಾಗಿ ತನುವನ್ನು ಕೊಲ್ಲುತ್ತದೆ ಆಶೆ. ಹೀಗಾಗಿ ಶರಣರು ಆಶೆಯೆಂಬ ಮಾರಿಯನ್ನು ಪಾತಕಿ ಎಂದು ಕರೆದರು.

ಮೂಗಿನಲ್ಲಿ ಆಶೆ ಹುಟ್ಟಿ, ಸುಗಂಧಕ್ಕೆ ತನುವನ್ನು ಮರುಳು ಮಾಡಿ, ಸುಗಂಧದ ಆಶೆಗಾಗಿ ತನು ತನ್ನನ್ನೇ ತಾನು ಮರೆತು, ತನ್ನನ್ನು ತಾನು ಅರಿಯುವ ಗೋಜಿಗೆ ತಾನು ಹೋಗದಂತೆ ಆಶೆಯೆಂಬ ಮಾರಿ ತನ್ನ ಮಾಯಾಜಾಲವನ್ನು ಮೂಗಿಗೆ ಚೆಲ್ಲಿ ಇಡೀ ತನುವನ್ನು ಮರಳು ಮಾಡುತ್ತದೆ. ಸುಗಂಧ ದುರ್ಗಂಧವನ್ನು ತಿಳಿಯುವ ಜ್ಞಾನ ಶಕ್ತಿಯನ್ನು ಹೊರಗೆ ಬರದಂತೆ ಆಶೆ, ಮೂಗಿಗೆ ನಿರ್ಬಂಧ ಹೇರುತ್ತದೆ.

ಮೂಗಿನಲ್ಲಿರುವ ಆಶೆಯನ್ನು ಮೂಗಿನಲ್ಲಿರುವ ಜ್ಞಾನದಿಂದಲೇ ಗೆಲ್ಲಬೇಕೆಂಬ ಸುಳಿವು ಕೂಡಾ ಮೂಗಿಗೆ ಬರದಂತೆ ಆಶೆ ತನ್ನ ಮಾಯಾ ಪರದೆಯನ್ನು ಮೂಗಿಗೆ ಬೀಸುತ್ತದೆ. ಮೂಗಿನಲ್ಲಿ ಮಹಾಜ್ಞಾನವೆಂಬ ಅರಿವಿನ ಪರಿಮಳವಿದೆ. ಸುಗಂಧವನ್ನು, ದುರ್ಗಂಧವನ್ನು ಸಮದೃಷ್ಟಿಯಲ್ಲಿ ಸರಳವಾಗಿ ಸಹಜವಾಗಿ ಸ್ವೀಕರಿಸುವ ಶಕ್ತಿ ಅರಿವಿನ ಪರಿಮಳಕ್ಕೆ ಇದೆ. ವಾಸನೆ ಎಂಬ ಆಶೆಗೆ ಬಲಿಯಾದ ಮೂಗು, ಗುರುದೇವನ ಸಹಾಯದಿಂದ ಮೂಗಿನಲ್ಲಿರುವ ಅರಿವಿನ ಪರಿಮಳವನ್ನು ಮೂಗಿನ ಮೂಲಕವೇ ತಿಳಿದುಕೊಂಡು ಮೂಗು ಪ್ರಯೋಗಕ್ಕೆ ಹೋದಾಗ; ಮೂಗಿನಲ್ಲಿ ಆವರಿಸಿದ ಆಶೆಯೆಂಬ ಪಾತಕಿಗೆ ಸಾವು ಬರುತ್ತದೆ.

ಮೂಗಿನ ಅಜ್ಞಾನ ಮೂಗಿನ ಜ್ಞಾನದಿಂದಲೇ ತೊಲಗುತ್ತದೆ. ಅಂದಿನಿಂದ ಮೂಗು ಸುಗಂಧಕ್ಕೆ ಆಶೆ ಮಾಡುವುದಿಲ್ಲ; ದುರ್ಗಂಧಕ್ಕೆ ಹೇಸುವುದಿಲ್ಲ. ಮೂಗಿನ ಜ್ಞಾನವನ್ನು ಮೂಗು

ಸದಾ ಬಳಸುತ್ತದೆ. ಎಲ್ಲೆಡೆ ಇರುವ ಅರಿವಿನ ಪರಿಮಳವನ್ನು ಹೀರುತ್ತಾ ಪರಿಮಳಾಚಾರ್ಯ ಎನ್ನಿಸಿಕೊಳ್ಳುತ್ತದೆ.

ಮೂಗನ್ನು ಆವರಿಸಿದ ಆಶೆಯೆಂಬ ಪಾತಕಿಯನ್ನು ಕಳೆದುಕೊಳ್ಳುವ ಇಚ್ಛೆ ಮೂಗಿಗೆ ಆಗಬೇಕಲ್ಲ. ಮೂಗಿನಲ್ಲಿ ಹುಟ್ಟಿದ ಆಶೆ ಈಡೇರಿಸಿಕೊಳ್ಳುವ ಇಚ್ಛೆ ಮೂಗಿಗೆ ಆಗುತ್ತದೆಯೇ ಹೊರತು; ದುರ್ಗಂಧ ಸುಗಂಧವೆಂಬ ಆಶೆಯ ಪಾತಕಿಯನ್ನು ಬಲ್ಲ ಶರಣರಿಂದ ಕಳೆದುಕೊಳ್ಳಬೇಕೆಂಬ ಜ್ಞಾನದ ಆಸೆ ಹುಟ್ಟುವುದು ವಿರಳಾತಿ ವಿರಳ. ಇಂತಹ ಜ್ಞಾನ ಇರುತ್ತದೆ ಎಂಬ ಸುಳುಹು ಮೂಗಿಗೆ ಸಿಗುವುದು ಕೂಡಾ ಅಪರೂಪ!

ಮೂರ್ಖ ಸಾಹಿತಿಗಳು, ಮೂರ್ಖ ಗುರುಗಳು ತಮ್ಮ ಮನಬಂದಂತೆ ಶರಣರ ವಚನಗಳನ್ನು ಬಳಸಿಕೊಳ್ಳುತ್ತಿದ್ದಾರೆ. ವಚನಗಳು ಸರಳ ಕನ್ನಡದಲ್ಲಿ ಇದ್ದರೂ ಅವರು ತಿಳಿದುಕೊಂಡಂತೆ ಅವು ಇಲ್ಲ. ಬೆಡಗಿನಿಂದ ಭರಿತವಾಗಿವೆ.

ತನುವಿನ ಅಜ್ಞಾನವನ್ನು ತನುವಿನ ಜ್ಞಾನದಿಂದಲೇ ಕಳೆಯುವ ಸೂತ್ರಗಳೇ ಶರಣರ ವಚನಗಳು! ತನುವಿನ ಅಜ್ಞಾನವನ್ನು ತನು ಕಳೆದುಕೊಳ್ಳಬೇಕೆಂದು, ತನುವಿಗೆ ಬಯಕೆಯಾದಾಗ ಮಾತ್ರ, ತನು ಜ್ಞಾನಿಯನ್ನು ಹುಡುಕಲು ತೊಡಗುತ್ತದೆ. ಹಾಗೆಯೇ ಶರಣ ಕೂಡಾ ಜ್ಞಾನದ ಬಯಕೆ ಹೊಂದಿದ ತನುಗಳನ್ನು ಹುಡುಕುತ್ತಿರುತ್ತಾನೆ. ಈ ಎರಡೂ ತನುಗಳು ಸಂಧಿಸಿದಾಗ ಜ್ಞಾನದ ಮುತ್ತು ತನುವಿನಲ್ಲಿಯೇ ಅರಳುತ್ತದೆ. ಜ್ಯೋತಿ ಬತ್ತಿಗೆ ಚುಂಬಿಸಿದಂತೆ! ಸ್ವಾತಿ ಹನಿಗಾಗಿ ಬಾಯ್ತೆರೆದ ಚಿಪ್ಪು ಮುತ್ತು ಮಾಡಿದಂತೆ!

**261**

**ಈ ಆಸೆಯೆಂಬವಳು ನೋಡಾ**
**ಜಲ ಸಮುದ್ರಂಗಳಂ ಕಟ್ಟಿಸುವಳು,**
**ಕ್ಷಣ ವೇಗದಿ ಮೂಷೆಗಳಂ ಮಾಡಿ ರಸಂಗಳಂ ಪಡೆವಳು.**
**ಈ ಆಸೆಯೆಂಬವಳಿಂದವೆ ನಿಮ್ಮೆಡೆಗಾಣದಿಪ್ಪೆನು.**
**ಈ ಆಸೆಯೆಂಬವಳನೆಂದಿಂಗೆ ನೀಗಿ**
**ಎಂದು ನಿಮ್ಮನೊಡಗೂಡಿ ಬೇರಾಗದೆಂದಿಪ್ಪೆನು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ಹುಟ್ಟಿದ ಆಸೆ ಎಂಬ ಮಾಯೆ, ತನುವಿನಲ್ಲಿ ತನ್ಮಯವಾದ ಅರಿವಿನ ಸಂಪತ್ತೊಂದನ್ನು ಪಡೆಯುವುದು ಬಿಟ್ಟು, ತನುವನ್ನು ಆಕಾಶದಲ್ಲಿ ಹಾರಾಡುವಂತೆ ಮಾಡುತ್ತದೆ. ಪಾತಾಳಕ್ಕೆ ಜಿಗಿಯುವಂತೆ ಮಾಡುತ್ತದೆ. ಜಲದಲ್ಲಿ ಮುಳುಗಿ ಜಲಸಾಗರವನ್ನೇ ತನ್ನ ಸ್ವಂತಕ್ಕೆ ಬಳಕೆ ಮಾಡಿಕೊಳ್ಳುವಂತೆ ಮಾಡುತ್ತದೆ.

ಭಗವಂತನೆ, ನೀನು ತನುವಿನಲ್ಲಿ ಆಶೆಯೆಂಬ ಮಾರಿಯನ್ನು ಸೃಷ್ಟಿ ಮಾಡಿದೆ. ತನುವಿನಲ್ಲಿದ್ದು, ತನುವಿಗೆ, ತನುವನ್ನು ಆವರಿಸಿದ ಆಸೆಯೆಂಬ ಮನಕ್ಕೆ ನೀನು ದರುಶನ ನೀಡದೆ ದೂರವಾದೆ. ದೂರವೆಂದರೆ ದೂರವಿಲ್ಲ. ತನುವಿನಲ್ಲಿ ಆಶೆಯನ್ನು ಸೃಷ್ಟಿ ಮಾಡಿ, ಆಶೆ ಮಾಡುವ ವಸ್ತುಗಳಿಗೆ ತನುವನ್ನು ಬಲಿಯಾಗುವಂತೆ ಮಾಡಿದೆ. ಆ ತನುವಿನಲ್ಲಿಯೇ ನೀನು ಸಂಗಮವಾಗಿ ನಿನ್ನ ದರುಶನ ಭಾಗ್ಯವನ್ನು ಮನವೆಂಬ ಆಶೆಗೆ ದೊರಕದಂತೆ ಮಾಡಿದೆ.

ತನುವಿನಲ್ಲಿ ಮನವನ್ನು ಸೃಷ್ಟಿ ಮಾಡಿದೆ. ಆ ತನುವಿನಲ್ಲಿಯೇ ನೀನಿದ್ದು, ನೀನಿದ್ದ ಆ ತನುವಿಗೆ ನಿನ್ನ ಸುಳಿವು ದಕ್ಕದಂತೆ ಮಾಡಿದೆ. ನೀನು ಸೃಷ್ಟಿ ಮಾಡಿದ ಆಸೆಯೆಂಬ ಮಾಯೆಯಿಂದಾಗಿಯೇ ನಿನ್ನ ದರುಶನ ನನಗೆ ದಕ್ಕಲಿಲ್ಲ ಪ್ರಭುವೆ. ನಿಮ್ಮೆಡೆಗೆ ಬರಲು ನನಗೆ ದಾರಿ ಕಾಣದಂತಾಗಿದೆ.

ಆಶೆಯೆಂಬ ಮಾಯೆಗೆ ದೇವರು ಬೇಕು! ಆದರೆ ನೀನು ಬೇಕಾಗಿಲ್ಲ! ನೀನು ಸೃಷ್ಟಿ ಮಾಡಿದ ಆಶೆ ನಿನ್ನನ್ನು ದೇವರೆಂದು ತಿಳಿದಿಲ್ಲ. ಕಲ್ಲಲ್ಲಿ ನಿನ್ನನ್ನು ಸೃಷ್ಟಿ ಮಾಡಿ, ಆ ಕಲ್ಲನ್ನೇ ದೇವರೆಂದು ತನುವಿಗೆ ನಂಬಿಸಿದ್ದಾಳೆ. ಆ ಕಲ್ಲಿಗೆ ಕಲ್ಲಿನ ಆಲಯ ನಿರ್ಮಿಸಿ, ಆ ಆಲಯವನ್ನು ಸುತ್ತಲು ತನುವಿಗೆ ಹಚ್ಚಿದ್ದಾಳೆ. ಹೀಗಾಗಿ ತನುವಿನಲ್ಲಿ ನೀನಿದ್ದರೂ ನಿಮ್ಮೆಡೆಗಾಣದಿಪ್ಪ ರೋಗ ಆಸೆಯೆಂಬ ಮಾರಿ ತನುವೆಂಬ ನನಗೆ ಅಂಟಿಸಿದ್ದಾಳೆ.

ನನ್ನಿಂದ ನಿರ್ಮಾಣವಾದ ಆಲಯಕ್ಕೆ ನಾನು ಎಷ್ಟು ಬಾರಿ ಸುತ್ತಿದರೆ ನನಗೆ ನೀನೊಲಿಯಲು ಸಾಧ್ಯ ಪ್ರಭುವೆ? ನನ್ನಲ್ಲಿಯೇ ಸಂಗಮವಾದ ನೀನು ನನ್ನನ್ನು ನೋಡಿ ಗಹಗಹಿಸಿ ನಗುವೆ! ನಿನ್ನ ನಗುವು ನನಗೆ ಕೇಳುತ್ತಿಲ್ಲ; ನೀನೆಂದರೆ ಯಾರೆಂದು ನನಗೆ ತಿಳಿಯುತ್ತಿಲ್ಲ; ನೀನು ಸೃಷ್ಟಿ ಮಾಡಿದ ಆಸೆಯೆಂಬ ಮಾಯೆಯಿಂದಾಗಿ ನನಗೆ ನಿನ್ನನ್ನು ತಿಳಿಯಲು ಆಗುತ್ತಿಲ್ಲ.

ತನುವನ್ನು ಸೃಷ್ಟಿ ಮಾಡಿದೆ. ತನುವಿನಲ್ಲಿ ಆಸೆಯೆಂಬ ಮಾಯೆಯನ್ನು ಸೃಷ್ಟಿ ಮಾಡಿದೆ. ಆ ತನುವಿನಲ್ಲಿಯೇ ನೀನು ಸಂಗಮವಾಗಿ, ಆ ತನುವನ್ನೇ ನಿನ್ನ ಆಲಯ ಮಾಡಿಕೊಂಡು, ನೀನು ಸೃಷ್ಟಿ ಮಾಡಿದ ಆಸೆ ಎಂಬ ಮಾಯೆಗೆ ನಿನ್ನ ದರುಶನ ಭಾಗ್ಯದ ಆಸೆ ಹುಟ್ಟದಂತೆ ಮಾಡಿದೆ. ನೀನಿದ್ದ ತನುವಿಗೂ ನಿನ್ನ ದರುಶನ ಭಾಗ್ಯ ದೊರೆಯದಂತೆ ಮಾಡಿದೆ.

ಎಂದು ನಿಮ್ಮನೊಡಗೂಡಿ ಬೇರಾಗದೆಂದ್ದಿಪೆನು ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ಅರಿವೆಂಬ ದೇವರನ್ನು ಕಾಣಲೇಬೇಕೆಂಬ ತವಕದಿಂದ ಹಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**262**

**ಈಗರಸುವ  ನುಡಿವಿರಹಿತ ಲಿಂಗದ ನಿಲುಕಡೆ ಬೇರೆ ಉಂಟೆ?**
**ಮುಕುಳದಲ್ಲಿ ಪರಿಮಳ ತೋರುವ ಕಾಲಕ್ಕೆ ತೋರದಿಪ್ಪುದೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನುಡಿದರೆ ಮುತ್ತಿನ ಹಾರದಂತಿರಬೇಕು. ಮುತ್ತು ನುಡಿಯುವುದಿಲ್ಲ ಬೆಳಗುತ್ತದೆ. ನುಡಿವಿರಹಿತ ಬೆಳಕಿನಿಂದ ಬೆಳಗುತ್ತದೆ. ಹಾಗೆಯೇ ಪ್ರತಿ ಮಾತೂ ಕೂಡ ಬೆಳಗುತ್ತದೆ. ಮಾತಿನಲ್ಲಿ ನುಡಿರಹಿತ ಶಕ್ತಿ ಇದೆ. ಅದನ್ನು ಮಾತಿನಲ್ಲಿಯೇ ಹುಡುಕಬೇಕು.

ಮಾತೇ ಜ್ಯೋತಿರ್ಲಿಂಗ ಎಂದಿದ್ದಾರೆ ಶರಣರು. ಮಾತನ್ನು ಮುತ್ತು ಎಂದಿದ್ದಾರೆ ಶರಣರು. ಮಾತು ಕಿವಿಗೆ ಸುಖ ಮತ್ತು ದುಃಖದ ಅಲೆಗಳಿಂದ ರಾಚುತ್ತದೆ. ಮಾತಿನಲ್ಲಿ ಇರುವ ಸುಖ ದುಃಖ ಉದುರಿದಾಗ ಅದು ಮಾತು ಜ್ಯೋತಿರ್ಲಿಂಗವಾಗುತ್ತದೆ.

ಮಾತಿನಲ್ಲಿರುವ ಸುಖ ದುಃಖ ಉದುರಿಸಿ ಅದನ್ನು ನಪುಂಸಕಗೊಳಿಸಿ ಕೇಳುವ ಶಕ್ತಿ ಪ್ರತಿ ಕಿವಿಯಲ್ಲಿ ಇದೆ. ಮಾತಿನಲ್ಲಿ ಹುಡುಕುವ ಶಕ್ತಿ ಕಿವಿಗೆ ಹೊಳೆಯಬೇಕು. ಆಗ ಸುಖ ದುಃಖಗಳನ್ನು ನಪುಂಸಕ ಮಾಡಿ ಮಾತನ್ನು ಮಾತಿನಂತೆ ಕೇಳುತ್ತದೆ ಕಿವಿ. ಸುಖ ದುಃಖಗಳನ್ನು ಕಿವಿಯ ಮೂಲಕ ಕೇಳಿ ತನುವನ್ನು ಅರಳಿಸುವ ಕೆರಳಿಸುವ ಶಕ್ತಿ ಕೂಡಾ ಕಿವಿಗೆ ಇದೆ. ಸುಖದ ಮಾತು ಕೇಳುವಾಗಲೂ

ತನುವಿಗೆ ರಾಸಾಯನಿಕ ಕ್ರಿಯೆ ಉಂಟಾಗುತ್ತದೆ. ಆಗ ತನು ಸುಖದಿಂದ ಅರಳುತ್ತದೆ.

ಮಾತನ್ನು ದುಃಖದಿಂದ ಕೇಳಿ ತನುವಿನಲ್ಲಿ ರಾಸಾಯನಿಕ ಕ್ರಿಯೆ ಉಂಟಾಗಿ ಆಗ ತನುವಿಗೆ ದುಃಖ ಉಂಟಾಗುತ್ತದೆ. ಮಾತನ್ನು ಸುಖದಿಂದ ದುಃಖದಿಂದ ಕೇಳುವ ಕಿವಿಗೆ ಮಾತನ್ನು ನಿಶಃಬ್ಧಗೊಳಿಸಿ ಕೇಳುವ ಶಕ್ತಿ ಇಲ್ಲ. ಸಕಲ ಮಾತುಗಳನ್ನು ಅರಿವಿನಿಂದ ಕೇಳಿ ತನುವಿನಲ್ಲಿ ಅರಿವು ಮೂಡಿಸುವ ಶಕ್ತಿ ಕಿವಿಯ ಕಿವಿಗೆ ಮಾತ್ರ ಇದೆ.

ಕಿವಿ ಅಸಹಜವಾದರೆ ಕಿವಿಯ ಕಿವಿ ಸಹಜ! ಅಸಹಜ ಕಿವಿಗೆ ಸಹಜ ಕಿವಿಯ ಪರಿಚಯವಿಲ್ಲದ್ದರಿಂದ ಮಾತಿನಲ್ಲಿರುವ ಅರಿವಿನ ಪರಿಚಯ ಇದಕ್ಕೆ ಇರುವುದಿಲ್ಲ. ಹೇಗೆ ಮುಕುಳದಲ್ಲಿ ಪರಿಮಳ ತೋರುವುದಿಲ್ಲವೋ ಹಾಗೆಯೇ ಅಸಹಜ ಕಿವಿಗೆ ಮಾತನ್ನು ಅರಿವಿನಿಂದ ಕೇಳಲು ಬರುವುದಿಲ್ಲ.

ಮುಕುಳ ಎಂದರೆ ಮೊಗ್ಗು. ಮೊಗ್ಗಿನಲ್ಲಿ ಪರಿಮಳ ಬಚ್ಚಿಟ್ಟು ಕೊಂಡಿದೆ. ಅದು ತಾನಾಗಿಯೇ ಅರಳಿದಾಗ ಪರಿಮಳ ಸೂಸುತ್ತದೆ. ಹಾಗೆಯೇ ಕಿವಿಯಲ್ಲಿ ಅರಿವಿನ ಪರಿಮಳ ಬಚ್ಚಿಟ್ಟುಕೊಂಡಿದೆ. ಅದು ತಾನಾಗಿಯೇ ಅರಳಬೇಕು. ಇಲ್ಲ ಅರಿವಿನಿಂದ ಅರಳಿದ ಕಿವಿಯತ್ತ ಕಿವಿ ಪ್ರಯಾಣ ಮಾಡಬೇಕು. ಅಂದರೆ ಅಜ್ಞಾನದ ಕಿವಿ ಮಾತನ್ನು ಕೇಳಲು ಬಾರದ ಕಿವಿ, ಸಕಲ ಮಾತುಗಳನ್ನು ಸಹಜವಾಗಿ ಕೇಳುವ ಅರಿವಿನ ಕಿವಿಯತ್ತ ಪ್ರಯಾಣ ಮಾಡಿ ಆ ಕಿವಿಯಲ್ಲಿ ಕಿವಿ ಸಂಗಮವಾಗಬೇಕು. ಇದು ಕಿವಿಗೆ ಕಿವಿಯನ್ನು ಹುಡುಕುವ ಕೆಲಸವಾಗಬೇಕು. ಇದು ಶರಣರಿಗೆ ಮಾತ್ರ ತಿಳಿದಿದೆ. ಶರಣರು ಸಕಲ ಮಾತುಗಳನ್ನು ಅರಿವಿನಿಂದ ಕೇಳುತ್ತಾರೆ. ತಾವು ಮಾತನಾಡಬೇಕಾದಾಗ ಮುತ್ತಿನಂತೆ ನುಡಿಯುತ್ತಾರೆ. ಶರಣರು ಮಾತನಾಡಿದರೆ ಮಾತನಳಿಯುವ ಮಾತನ್ನಾಡುತ್ತಾರೆ. ಮೌನದ ಮಾತನ್ನು ಆಡುತ್ತಾರೆ. ಮೌನವಾಗಿಸುವ ಮಾತನ್ನು ಆಡುತ್ತಾರೆ.

ದೇಹ ಮಾತಿನ ಶಕ್ತಿ ಉಣ್ಣಲು ಬಂದ ಸಾಧನ. ಭೂಮಿಯಲ್ಲಿರುವ ಸಕಲ ಪ್ರಾಣಿಗಳಲ್ಲಿಯೂ ಕೂಡ ದೇಹ ಶ್ರೇಷ್ಠ ಎನ್ನಿಸಿಕೊಂಡಿದೆ. ದೇಹಕ್ಕೆ ಮಾತ್ರ ಮಾತನಾಡುವ ಶಕ್ತಿ ಇದೆ. ಹಾಗೆಯೇ ಮಾತನ್ನು ಅರಿವಿನಿಂದ ಕೇಳುವ ಶಕ್ತಿಯಿದೆ. ಆದರೆ ಈ ಶಕ್ತಿ ಪರಿಮಳದಂತೆ ದೇಹದಲ್ಲಿ ಬಂಧಿಯಾಗಿದೆ. ದೇಹವನ್ನು ಆವರಿಸಿದ ಮನಕ್ಕೆ ದೇಹದಲ್ಲಿಯೇ ಇರುವ ಅರಿವಿನ ಪರಿಮಳ ಉಣ್ಣುವುದಕ್ಕೆ ಇಚ್ಛೆಯಾದಾಗ ಮಾತ್ರ ಮೊಗ್ಗಿನ ದೇಹ ಅರಿವಿನ ಪರಿಮಳ ಅರಳಿಸಿ ಅರಿವಿನಿಂದ ಬೆಳಗುತ್ತದೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

ಒಂದಿಲ್ಲೊಂದು ದಿನ ದೇಹದಲ್ಲಿರುವ ಅರಿವು ತಾನಾಗಿಯೇ ಅರಳುತ್ತದೆ ಅಥವಾ ತಾನೇ ಅರಳಿಸಿಕೊಳ್ಳಲು ಬರುತ್ತದೆ. ತಾನೇ ಅರಳಿಸಿಕೊಳ್ಳುವ ಶಿಕ್ಷಣದ ಸೂತ್ರವನ್ನು ಶರಣರು ಕಲಿತಿದ್ದರು.

ಸಕಲರಿಗೂ ಸರಳವಾಗಿ ಅರಿವಿನ ಶಿಕ್ಷಣವನ್ನು ಕಲಿಯಲು ಬರುತ್ತದೆ ಎಂದು ಜಗತ್ತಿಗೆ ತೋರಿಸಿಕೊಟ್ಟರು. ಹಲವಾರು ಸೂತ್ರಗಳ ಮೂಲಕ ವಚನಗಳನ್ನು ಬರೆದು ಸಕಲ ದೇಹಗಳು ಅರಿವಿನಿಂದ ಅರಳಲು ನೆರವಾದರು. ಸಿದ್ಧರಾಮ ಶಿವಯೋಗಿಗಳು ನುಡಿಯಲ್ಲಿರುವ ಅರಿವನ್ನು ಹುಡುಕುವ ವಿಧಾನವನ್ನು ತಮ್ಮ ಈ ವಚನದ ಮೂಲಕ ಹೇಳಿದ್ದಾರೆ.

**263**

**ಈ ರಿತುಕಾಲ ಹುಟ್ಟಿ ಮುಟ್ಟಿ ಕೆಡುವೊಡೆ**
**ಒಳಗೆ ಬೆಳೆಯಲೇಕಯ್ಯಾ! ಹೋ! ವಾ! ಹೋ! ಅಯ್ಯಾ!**

**ನೀ ಮುಟ್ಟಿ ಕೆಡುವಡೆ ಒಳಗೆ ಬೆಳೆಯಲೇಕಯ್ಯಾ.**
**ಈ ಬಟ್ಟೆ ಹುಸಿ ಬಟ್ಟೆ.**
**ಕಪಿಲಸಿದ್ಧ ಮಲ್ಲಿನಾಥನಯ್ಯನ ಅಂಜದೆ ನೆನೆಯಿರೋ,**
**ನೆನಯಿರೊ! ಹೋ! ವಾ! ಹೋ! ಅಯ್ಯಾ!**

ಮಳೆಗಾಲ ಬೇಸಿಗೆಕಾಲ ಚಳಿಗಾಲದಲ್ಲಿ ಪ್ರಕೃತಿ ಬದಲಾಗುತ್ತದೆ. ಆರು ಋತುಗಳಲ್ಲಿ ಬದಲಾವಣೆಯಾಗುವುದು ಕಾಲದ ನಿಯಮ. ಆದರೆ ಕಾಲ ಅದಾವುದನ್ನು ತನ್ನ ಗರ್ಭದಲ್ಲಿ ಇಟ್ಟುಕೊಳ್ಳುವುದಿಲ್ಲ. ಹಾಗೆಯೇ ಪ್ರಕೃತಿ ಕೂಡಾ ತನ್ನ ಗರ್ಭದಲ್ಲಿ ಕಾಲಗಳ ನಿಯಮವನ್ನು ದಾಖಲಿಸಿಕೊಳ್ಳುವುದಿಲ್ಲ. ಆದರೆ:

ತನು ಪ್ರಕೃತಿಗೆ ಸಂಬಂಧಪಟ್ಟಿದ್ದರೂ ಕೂಡಾ ಪ್ರಕೃತಿಯಂತೆ ತನುವಿಲ್ಲ! ಇದೇನಾಶ್ಚರ್ಯ! ತನು ತನುವನ್ನು ಮುಟ್ಟುವುದು ಕಾಲದ ನಿಯಮ. ಆದರೆ ಮುಟ್ಟಿದ ಕಲೆ ತನುವಿನಲ್ಲಿ ಉಳಿದು, ತನುವಿಗೆ ತನುವನ್ನು ಮುಟ್ಟಿದ ಗಾಯವಾಗುತ್ತದೆ. ಮುಟ್ಟಿದ ಗಾಯ ತನುವಿನಲ್ಲಿ ಬೆಳೆದು ನಿಲ್ಲುತ್ತದೆ.

ತನುವಿನ ಸುಖಕ್ಕಾಗಿ ಕೈಕೇಯಿ ರಾಮನನ್ನು ಹದಿನಾಲ್ಕು ವರ್ಷ ಕಾಡಿಗೆ ಕಳುಹಿಸಿದಳು. ಮಗ ಭರತನನ್ನು ಸಿಂಹಾಸನದ ಮೇಲೆ ಕುಳಿತುಕೊಳ್ಳಲು ಆಸೆ ಮಾಡಿದಳು. ಇದು ಕೈಕೇಯಿಯ ಸುಖ. ಮಗನನ್ನು ಹಡೆದ ತಾಯಿಯ ಸುಖ. ಈ ಸುಖದ ಬಯಕೆಯನ್ನು ರಾಮ ಈಡೇರಿಸಿದ. ಆದರೂ ಕೈಕೇಯಿಗ ಸುಖದ ಗಾಯವಾಯಿತು. ರಾಮ ಹದಿನಾಲ್ಕು ವರ್ಷಗಳ ವನವಾಸ ಮುಗಿಸಿ ಬಂದರೂ ಕೈಕೇಯಿಯ ತನುವಿಗೆ ಆದ ಗಾಯ ಮಾಯಲೇ ಇಲ್ಲ.

ಗಾಯವೇ ಇಲ್ಲದ ಕಾಯದಲ್ಲಿ ಕಾಣದ ಗಾಯ ಹುಟ್ಟಿ ಬೆಳೆಯುವುದೆಂದರೇನು? ದ್ರೌಪದಿಯ ತನುವಿನಿಂದ ಹೊರಬಂದ ಮಾತಿನ ಗಾಯ ದುರ್ಯೋಧನನ ವಜ್ರ ಶರೀರದಲ್ಲಿ ಮನೆ ಮಾಡಿತು. ಖಡ್ಗಕ್ಕೂ ಮಣಿಯದ ವಜ್ರ ಶರೀರ ಮಾತಿನ ಗಾಯಕ್ಕೆ ಸಿಡಿಯಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ನಾಶವಾಯಿತು. ನೂರು ಜನ ತಮ್ಮಂದಿರೂ, ಬಂಧುಗಳು, ಅಪಾರ ಸೈನ್ಯ ಯುದ್ಧದಲ್ಲಿ ಸತ್ತು ಹೋಯಿತು. ರಕ್ತದ ಕಾಲುವೆಯೇ ಹರಿಯಿತು. ಆದರೂ ದುರ್ಯೋಧನನ ವಜ್ರ ಶರೀರದಲ್ಲಿ ಬೆಳೆದು ನಿಂತ ದ್ರೌಪದಿಯ ಮಾತಿನ ಗಾಯ ಮಾಯಲೇ ಇಲ್ಲ.

ಸಿಡಿಲೊಡೆದು ಭೂಮಿಗೆ ತೂತು ಬಿದ್ದರೂ ಭೂಮಿಗೆ ಆಗದ ಗಾಯ ಅರಿವಿನ ಕಾಯದಲ್ಲಿ ಬೆಳೆಯುವುದೆಂದರೇನು? ಇದು ಸೋಜಿಗವಲ್ಲವೆ? ನೀನಿದ್ದ ಕಾಯದಲ್ಲಿ, ನೀಮುಟ್ಟಿದ ಕಾಯದಲ್ಲಿ, ನೀನೇ ಮುಟ್ಟಿ ಕೆಡುವುದೆಂದರೇನು? ತನುವಿನಿಂದ ತನುವಿಗೆ ಗಾಯವಾಗಿ ಒಳಗೆ ಬೆಳೆಯುವುದೆಂದರೇನು? ಇದು ಸೋಜಿಗವಲ್ಲವೆ?

ಕೈಕೇಯಿಯ ಕಾಯವಾದರೂ ಕಾಯವೇ, ರಾಮನ ಕಾಯವಾದರೂ ಕಾಯವೇ ಆಗಿದೆ. ಸಕಲ ಕಾಯಗಳಲ್ಲಿ (ಅರಿವೆಂಬ ದೇವರೇ) ನೀನಿರುವಿ. ನೀನಿಲ್ಲದ ಕಾಯವೇ ಇಲ್ಲ ಈ ಜಗದೊಳಗೆ. ನೀ ಮುಟ್ಟಿದ ಕಾಯ ಕೆಡುವುದೆಂದರೇನು? ಕೆಟ್ಟು ಒಳಗೆ ಬೆಳೆಯುವುದೆಂದರೇನು? ಹೋ! ವಾ! ಹೋ! ಅಯ್ಯಾ. ಇದು ನಿನ್ನ ಆಟವೇ ಆಗಿರಬೇಕು. ನಿನ್ನನ್ನು ನೀನು ನಿನಗೆ ಪರಿಚಯಿಸಿಕೊಳ್ಳುವ ಈ ಆಟ ನಿನಗೆ ಮಾತ್ರ ತಿಳಿದಿದೆ. ಈ ಹುಸಿ ಬಟ್ಟೆಯನ್ನು ಜಾಡಿಸಿ, ಅಂಜದೆ ನಿನ್ನನ್ನು ಹುಡುಕುವ ಕಲೆ ನೀನೇ ಎನಗೆ ಕರುಣಿಸು ದೇವಾ!.

**ಈರೈದು ಸೀಮೆಯಿಂದಾರಯ್ಯ ಬಂದಾರೆ,**
**ಓರಂತೆ ಅವರುವನು ನೀನೆಂಬೆನು;**
**ಕಾರುಣ್ಯಾಕರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ,**
**ಅವರ ದ್ವಾರಕಿಂಕರನಾಗಿಯಾನಿಪ್ಪೆನು.**

ಐದು ಜ್ಞಾನೇಂದ್ರಿಯಗಳನ್ನು ಹೊತ್ತು ಬಂದ ತನುಗಳೆಲ್ಲಾ ಮಹಾ ಜ್ಞಾನ ತನುಗಳೇ ಆಗಿವೆ. ಅರಿವೆಂಬ ಗುರುದೇವನೇ, ಮಹಾದೇವನೆ, ಸದಾಶಿವನೇ, ಸಾಕ್ಷಾತ್ ಪರಬ್ರಹ್ಮನಾದ ನೀನೇ ಈ ಜಗದ ಸಕಲ ತನುಗಳಲ್ಲಿ ಭರಿತನಾಗಿರುವಿ.

ನೀನಿಲ್ಲದ ತನುವೇ ಇಲ್ಲ ಈ ಜಗದೊಳಗೆ. ಯಾವ ದೇಶ ಭಾಷೆ ಧರ್ಮದಿಂದ ಬಂದರೇನು? ಬಂದ ತನುಗಳೆಲ್ಲ ನಿನ್ನ ಐದು ಜ್ಞಾನೇಂದ್ರಿಯಗಳನ್ನು ಹೊತ್ತು, ಗರ್ಭದಿಂದ ಹೊರ ಬಂದಿವೆ.

ಜ್ಞಾನವೆಂಬ ನಿನ್ನನ್ನು ಹೊತ್ತು ಹೊರಬಂದ ಅವರ ದ್ವಾರಕಿಂಕರನಾಗಿ ನಾನಿಪ್ಪೆನು. ಕಣ್ಣಲ್ಲಿ ಕಣ್ಣಾಗಿ ಮುಕ್ಕಣ್ಣನೆಂದು ಕರೆಯಿಸಿಕೊಂಡ ನೀನು ಸಕಲ ತನುಗಳ ಕಣ್ಣುಗಳಲ್ಲಿ ಸಂಗಮವಾಗಿರುವಿ. ನಿನ್ನ ಹೊರತಾಗಿ ನನ್ನ ಕಣ್ಣಿಗೆ ನೀನಲ್ಲದೆ ಅನ್ಯರು ಕಾಣರು ಕರುಣಾಕರನೆ.

ಚರ್ಮದಲ್ಲಿ, ನಾಸಿಕದಲ್ಲಿ, ನಾಲಿಗೆಯಲ್ಲಿ, ಕಿವಿಯಲ್ಲಿ ನೀನೇ ಸಂಗಮವಾಗಿರುವಿ ತಂದೆ. ನಿನಗೆ ಕಿಂಕರನಾಗಿ ನಾನಿರುವೆ ದೇವನೆ; ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ಜಗದ ತನ್ನುಗಳನ್ನು ನೋಡಿ; ಸಿದ್ಧರಾಮ ಶಿವಯೋಗಿಗಳು ಹಾಡಿದ್ದಾರೆ.

ಬಸವಣ್ಣನವರು ಕೂಡಾ ಇದಕ್ಕೆ ಹೊರತಾಗಿಲ್ಲ :

ಬಂದಿಕಾರ, ಹಾವಾಡಿಗ, ಹಾದರಿಗ, ಬಂಟನೋಲೆಯಕಾರನೆಂದೆನಾದಡೆ, ನೀ ಮುಂತಾಗಿ ಬಂದ ಭಕ್ತರ ನೀನೆಂದೆನ್ನದಿದ್ದಡೆ ಅದೇ ದ್ರೋಹ. ನಡೆ ನುಡಿ ಹುಸಿಯುಂಟಾದಡೆ, ಕೂಡಲಸಂಗನ ತೋರಿದ ಚೆನ್ನಬಸವಣ್ಣನಾಣೆ.

ತನುವಿನಲ್ಲಿಯೇ ಸಂಗಮವಾದ ಭಗವಂತನ ದರುಶನವಾದ ತನುಗಳಿಗೆ ಮಾತ್ರ; ಜಗದ ತನುಗಳೆಲ್ಲ ಶ್ರೇಷ್ಠಾತಿಶ್ರೇಷ್ಠ ತನುಗಳು ಎಂದು ನೋಡಲು ಬರುತ್ತದೆ. ಸಾಕ್ಷಾತ್ ಭಗವಂತನಿದ್ದ ತನುಗಳೆಂದು ನೋಡಲು ಬರುತ್ತದೆ.

ಜ್ಞಾನಿ, ಜಗದ ತನುಗಳನ್ನೆಲ್ಲ ತನ್ನಂತೆ ನೋಡುತ್ತಾನೆ. ಜಗತ್ತು ಜ್ಞಾನಿಯನ್ನು ವೈರಿಯಂತೆ ನೋಡುತ್ತದೆ. ಇದು ಜಗದ ನಿಯಮ. ಜಗದ ಈ ನಿಯಮವನ್ನು ಮುರಿಯಲು ಹೋಗುತ್ತಾನೆ ಜ್ಞಾನಿ!

ಬುದ್ಧ ಜಗದ ನಿಯಮ ಮುರಿಯಲು ಹೊರಟಾಗ ಆತನ ಅನುಯಾಯಿಗಳನ್ನು ಲೋಕದ ಜನ ಕಾದ ಎಣ್ಣೆಯ ಕಡಾಯಿಯಲ್ಲಿ ಕರಿದರು. ನೇಣು ಬಿಗಿದು ಸಾಯಿಸಿದರು. ವಿಷ ಪ್ರಾಶನ ಮಾಡಿಸಿದರು. ಆದರೂ ಬುದ್ಧ ಪ್ರತಿಭಟನೆ ಮಾಡಲಿಲ್ಲ. ಇದು ತನುವಿನಲ್ಲಿಯೇ ತನ್ಮಯವಾದ ಭಗವಂತನ ಪ್ರೇರಣೆ ಎಂದರು.

ಜಗತ್ತು ಕಲ್ಲು ದೇವರನ್ನು ದೇವರೆಂದು ಆರಾಧಿಸುತ್ತದೆ. ನೀನು ಆರಾಧಿಸುವ ಆ ದೇವರು ದೇವರಲ್ಲ. ನೀನೇ ಆ ದೇವರು. ನಿನ್ನ ಹೊರತಾಗಿ ದೇವರಿಲ್ಲ. ನಿನ್ನ ಆ ದೇವರನ್ನು ನೀನೇ ಸಾಕ್ಷಾತ್ಕಾರ ಮಾಡಿಕೋ ಎಂದು ಹೇಳುತ್ತಾನೆ ಜ್ಞಾನಿ.

ಜ್ಞಾನಿಯ ಮಾತು ಲೋಕಕ್ಕೆ ರುಚಿಸುವುದಿಲ್ಲ. ಲೋಕದ ಮಾತು ಜ್ಞಾನಿಗೆ ರುಚಿಸುವುದಿಲ್ಲ. ಆದರೂ ಲೋಕದ ಸಕಲ ತನುಗಳಲ್ಲಿ ಸತ್ಯವೇ ಸಂಗಮವಾಗಿದೆ. ಆ ಸತ್ಯ ನನ್ನನ್ನು ಬಳಸಿಕೋ ಎಂದು ತನುವನ್ನೇ ಕೂಗಿ ಕೂಗಿ ಕರೆಯುತ್ತದೆ. ಸತ್ಯದ ಈ ಧ್ವನಿ ಸಕಲ ತನುಗಳಿಗೂ ಕೇಳುವುದಿಲ್ಲ. ಕೇಳಿದ ತನುವೇ ಬುದ್ಧನಾಯಿತು. ಬುದ್ಧ ಬುದ್ಧನನ್ನೇ ನೋಡಿದ. ಕಳ್ಳ ಬಂದಿಕಾರ ಹಾವಾಡಿಗ ಹಾದರಿಗ ಬಂಟ ಓಲೆಯಕಾರ ಎಂದು ವಿಂಗಡಿಸಿ ನೋಡಲಿಲ್ಲ.

''ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ, ಬಾಯಲಿ ಸುರೆಯ ಗಡಿಗೆಯಿರಲಿ ಅವರನ್ನು ಲಿಂಗನೆಂಬೆ, ಸಂಗನೆಂಬೆ ಕೂಡಲ ಸಂಗಮದೇವಾ, ಅವರ ಮುಖ ಲಿಂಗಿಗಳೆಂಬೆನು'' ಎನ್ನುತ್ತಾರೆ ಬಸವಣ್ಣ.

ಶರಣರು, ಸತ್ಯಕ್ಕೆ ಶರಣು ಹೋದವರು. ಸತ್ಯವೇ ತಾವಾದವರು. ಅಂಥವರನ್ನು ನಾಡಿನ ಅರಸ ಆನೆಕಾಲುಗಳಿಂದ ತುಳಿಸಿ ಕೊಂದ. ನೇಣುಗಂಬಕ್ಕೆ ಏರಿಸಿ, ಕೋಟೆ ಗೋಡೆಗೆ ತೂಗು ಹಾಕಿದ. ಕಣ್ಣು ಕೀಳಿಸಿದ. ಕ್ರಿಸ್ತನಂತೆ ಶರಣರು ಅವರನ್ನು ಮನ್ನಿಸು ಪ್ರಭು ಎಂದರೇ ಹೊರತು ಶಾಪ ಹಾಕಲಿಲ್ಲ. ಏಕೆಂದರೆ ಸತ್ಯಕ್ಕೆ ಶಾಪ ಹಾಕಲು ಬರುವುದಿಲ್ಲ! ತನುವಿನಲ್ಲಿ ಸಂಗಮವಾದ ಸತ್ಯ ಒಂದೇ. ಸತ್ಯ ದರುಶನವಾದ ತನು, ತನುವಿನ ಸತ್ಯ ಮಾತ್ರ ನೋಡುತ್ತದೆ. ಆ ಸತ್ಯಕ್ಕೆ ಶರಣು ಹೋಗುತ್ತದೆ. ಬುದ್ಧ ಬುದ್ಧನನ್ನು ಮಾತ್ರ ನೋಡುತ್ತಾನೆ. ಆ ಬುದ್ಧನಿಗೆ ಶರಣು ಹೋಗುತ್ತಾನೆ.

**265**

**ಉಣ್ಣದ ಊಡದ ಫಲಪ್ರಾಣಿಗಳ ನಾ ಕಂಡು ನೋಡುತಿರ್ದೆ**
**ಅಂಧಕ ರೂಪಿನ ಉರಗನ ಮೋಹಕ್ಕೆ ಬೆರಗಾಗಿ ನೋಡುತಿರ್ದೆ.**
**ಎರಡರ ಮೋಹಕ್ಕೆ ನೋಡಿ ತಾನು ನಗುತಿರ್ದ,**
**ಕಪಿಲಸಿದ್ಧ ಮಲ್ಲಿನಾಥಾ.**

ದೇಹದ ರಚನೆಯೇ ವಿಚಿತ್ರ. ದೇಹವಿದೆ. ದೇಹದಲ್ಲಿ ಜ್ಞಾನವಿದೆ. ದೇಹವನ್ನು ಆವರಿಸಿದ ಮನದಿಂದಲೇ ದೇಹದಲ್ಲಿ ಸಂಗಮವಾದ ಜ್ಞಾನವನ್ನು ತಿಳಿಯಬೇಕು. ಮನ ಜ್ಞಾನದಲ್ಲಿ ಒಂದಾಗಿ ಜ್ಞಾನವೇ ತಾನಾಗಬೇಕು. ಆದರೆ ಹೀಗಾಗುವುದಿಲ್ಲ. ಜ್ಞಾನ ಶಿಕ್ಷಣ ಬಲ್ಲ ಮನ ಮಾತ್ರ ಜ್ಞಾನಕ್ಕೆ ಮರುಳಾಗಿ ಜ್ಞಾನವೇ ತಾನಾಗುತ್ತದೆ. ಉಳಿದ ದೇಹಗಳು ಮನದ ವ್ಯಾಮೋಹಕ್ಕೆ ಒಳಗಾಗಿ, ದೇಹ ಮನ ಒಂದಾಗಿ ಜ್ಞಾನದ ಸುಖ ಉಣ್ಣದ ಊಡದ ಫಲಪ್ರಾಣಿ ಎನ್ನಿಸಿಕೊಳ್ಳುತ್ತದೆ ದೇಹ.

ಇದನ್ನು ಕಂಡು ದೇಹದಲ್ಲಿಯೇ ಸಂಗಮವಾದ ಜ್ಞಾನದೇವ ಗಹಗಹಿಸಿ ನಗುತ್ತಾನೆ.

ಅಂಧಕ ರೂಪಿನ ಹಾವಿನ ಮೋಹಕ್ಕೆ ದೇಹ ಸಿಲುಕಿ ಹಾವು ಆಡಿಸಿದಂತೆ ಆಡುತ್ತದೆ. ಮನವೆಂಬ ಹಾವು ತನ್ನ ಸುಖಕ್ಕಾಗಿ ದೇಹವನ್ನು ಆವರಿಸಿ, ದೇಹವನ್ನೇ ಬಳಸಿ, ದೇಹವನ್ನೇ ಕಚ್ಚಿ ಕಚ್ಚಿ ತಿನ್ನುತ್ತದೆ.

ಚಿನ್ನ ದೇಹಕ್ಕೆ ಬೇಡ; ಮನವೆಂಬ ಹಾವಿಗೆ ಬೇಕು. ಚಿನ್ನದ ಮೇಲೆ ಮನ ಮೋಹ ಮಾಡಿ, ದೇಹಕ್ಕೆ ತನ್ನ ಕರಿನೆರಳು ಚೆಲ್ಲಿ, ಮನ ತನ್ನ ಮೋಹಕ್ಕೆ ತಕ್ಕಂತೆ ದೇಹವನ್ನು ಕುಣಿಯುವಂತೆ ಮಾಡುತ್ತದೆ. ಚಿನ್ನಕ್ಕೆ ಮೋಹ ಮಾಡಿದ ದೇಹ, ದೇಹದಿಂದಲೇ ಚಿನ್ನ ಕದ್ದು, ಕಳ್ಳನ ಹಣೆಪಟ್ಟಿ ಕಟ್ಟಿಕೊಳ್ಳುತ್ತದೆ. ಚಿನ್ನ ಖರೀದಿ ಮಾಡಿ ದೇಹ ಶ್ರೀಮಂತ ಎನ್ನಿಸಿಕೊಳ್ಳುತ್ತದೆ.

ರಾಜನಾಗಿ ರಾಜನೊಂದಿಗೆ ಯುದ್ಧ ಮಾಡಿ, ರಾಜನನ್ನೇ ಕೊಂದು, ಕಿರೀಟ ಧರಿಸಿ, ರಾಜನೆಂದು ಮೆರೆಯುತ್ತದೆ. ಚಿನ್ನಕ್ಕಾಗಿ ರಾಜ, ರಾಜನನ್ನು ಕೊಲ್ಲುತ್ತಾನೆ. ರಾಜನ ಮಾತು ಕೇಳಿದ ಅಪಾರ ಸೈನಿಕರು ಸತ್ತು ಹೋಗುತ್ತಾರೆ.

ಅಂಧಕ ರೂಪದ ಮನವೆಂಬ ಉರುಗನ ಮೋಹಕ್ಕೆ ಬಲಿಯಾದ ದೇಹದ ಸ್ಥಿತಿ ಇದು. ದೇಹಕ್ಕೆ ಮನದ ಮೋಹ ಗೊತ್ತಾಗುತ್ತದೆ. ಆದರೆ ಮೀರಿ ನಿಲ್ಲುವ ಶಕ್ತಿ ದೇಹಕ್ಕೆ ಇಲ್ಲ. ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ; ದೇಹ ಮತ್ತು ಮನವೆಂಬ ಹಾವಿನ ಕೆಲಸ ಗೊತ್ತಿಲ್ಲವೆಂದು ಅಲ್ಲ. ಆದರೂ ಇವೆರಡರ ವ್ಯಾಮೋಹ ನೋಡಿ ದೇವರು ನಗುತ್ತಾನೆಯೇ ಹೊರತು ದೇಹದಲ್ಲಿಯೇ ಇದ್ದು ಮತ್ತೇನೂ ಮಾಡುವುದಿಲ್ಲ.

ಮನವೆಂಬ ಮೋಹದ ಹಾವು ಅರಿವೆಂಬ ಗುರುದೇವನಿಗೆ ತಂತಾನೇ ಪಳಗಿ, ಆತನ ಕೊರಳಿಗೆ ಆಭರಣವಾಗಬೇಕು. ಆ ಅರಿವೆಂಬ ಗುರುದೇವನೇ ಮೋಹವೆಂಬ ಮನದ ಹಾವನ್ನು ದೇಹಕ್ಕೆ ಧರಿಸುತ್ತಾನೆ. ಆ ದೇಹವನ್ನೇ ಮಹಾದೇವನೆಂದು ಕರೆಯುತ್ತಾರೆ.

ಶಿವನಿಗೆ ಆಭರಣವಾಗಬೇಕೆಂಬ ಬಯಕೆ ಮನವೆಂಬ ಹಾವಿಗೆ ಹುಟ್ಟಬೇಕಲ್ಲ. ದೇಹದಲ್ಲಿ ಸಂಗಮವಾದ ಅರಿವೆಂಬ ಶಿವನ ಜ್ಞಾನ ಉಣ್ಣುವ ಸುಖ ಮನವೆಂಬ ಹಾವಿಗೆ ಹುಟ್ಟಿದಾಗಲೇ ಅದು ತಂತಾನೆ ದೇಹದ ಕೊರಳಿಗೆ ಹಾರವಾಗುತ್ತದೆ. ಆಭರಣವಾಗುತ್ತದೆ. ದೇಹದಲ್ಲಿಯೇ ಬೆರೆತು ಅರ್ಧನಾರೀಶ್ವರಳೇ ತಾನಾಗುತ್ತದೆ. ಅರ್ಧಾಂಗಿಯೇ ತಾನಾಗುತ್ತದೆ.

**266**

**ಉತ್ತರ ಕೋಣೆಯು ಉತ್ತರೋತ್ತರ ವಾಕ್ಯವ ಕೇಳಿ ಧನ್ಯನಾದೆನಯ್ಯಾ**
**ಉತ್ತರ ಕೋಣೆಯ ನಿಮಿತ್ತ ಪರಮಗುರುವಿನ**
**ದೂಷಣೆಯ ಕೇಳಿ ಪಾಪಿಯಾದೆನಯ್ಯಾ ,**
**ಇದು ಕಾರಣ, ಶರಣರ ದೂಷಣೆಯಿಂದ**
**ಶರಣರ ಮನಕ್ಕೆ ಭೂಷಣವೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಉತ್ತರ ಕೋಣೆ ಎಂದರೆ ಶ್ರೇಷ್ಠವಾದ ಮೇಲು ಭಾಗದ ಕೋಣೆ. ಮೇಲ್ಮುಖದ ಕೋಣೆ. ಹೀಗಾಗಿ ಕಾಯವನ್ನು ಶರಣರು ಕೈಲಾಸವೆಂದು ಕರೆದಿದ್ದಾರೆ. ಕಾಯ ಶ್ರೇಷ್ಠ, ಕಾಯದ ಮಾತು ಕೂಡ ಶ್ರೇಷ್ಠ. ಕಾಯದ ಮಾತು ಕಾಯವೇ ಕೇಳಿ ಆನಂದ ಪಡುತ್ತದೆ. ಅಂದರೆ ಪ್ರತಿ ಕಾಯದಲ್ಲಿಯೂ ಪರಮಾನಂದ ಪಡುವ ಶಕ್ತಿ ಸಂಗಮವಾಗಿದೆ. ಹೀಗಾಗಿ ಕಾಯದ ಮಾತು ಕಾಯವನ್ನು ಪುಳಕಿತಗೊಳಿಸಿ ಧನ್ಯನಾಗುವಂತೆ ಮಾಡುತ್ತದೆ.

ಕಾಯ ಯಾವುದಾದರೇನು? ಕಾಯದ ಭಾವ ಒಂದೇ. ಕಾಯದ ನಿರ್ಭಾವವೂ ಒಂದೇ. ಕಾಯದ ಮನವೂ ಒಂದೇ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಒಂದೇ. ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಒಂದೇ. ಕಾಯದ ಮಾತು ಕೂಡಾ ಒಂದೇ.

ಕಾಯ ಊರ್ಧ್ವಮುಖಿ. ಮೇಲ್ಮುಖಿ. ಉತ್ತರಕೋಣೆಯ ಅರಿವಿನ ಸಂಪತ್ತನ್ನು ಹೊಂದಿದ ಮಹಾಮೇಧಾವಿ. ಸಕಲ ಪ್ರಾಣಿಗಳಲ್ಲಿಯೇ ಕಾಯ ಶ್ರೇಷ್ಠ ಪ್ರಾಣಿ ಎನ್ನಿಸಿಕೊಂಡಿದೆ.

ಕಾಯದ ಮಾತು ಕಾಯಕ್ಕೆ ಅರಿವಾಗದ ನಿಮಿತ್ತ ಕಾಯದಿಂದಲೇ ಕಾಯ ದೂಷಣೆಗೆ

ಒಳಗಾಗಿದೆ. ಕಾಯ ಕಾಯವನ್ನೇ ದೂಷಣೆ ಮಾಡುತ್ತ ಪಾಪಕ್ಕೆ ಗುರಿಯಾಗಿದೆ. ಕಾಯ ಕಾಯಕ್ಕೆ ಪುಣ್ಯ ಮಾಡಿದೆನೆಂದು ಬೀಗಿ ವಂಚನೆಗೆ ಒಳಗಾಗಿದೆ.

ಪಾಪ ಮಾಡಿದೆನೆಂಬುದು, ಪುಣ್ಯ ಮಾಡಿದೆನೆಂಬುದು ಈ ಎರಡೂ ಮಾತುಗಳು ದೂಷಣೆಯ ಮಾತುಗಳೇ ಆಗಿವೆ. ಕಾಯ ಎನ್ನುವುದು ಶರಣಕಾಯ, ದಾಸಕಾಯ. ಕಾಯ, ಕಾಯದ ಅರಿವಿಗೆ ಶರಣು ಹೋಗಲು ಜನ್ಮ ತಳೆದಿದೆ. ಕಾಯದಲ್ಲಿಯೇ ಸಂಗಮವಾದ ಅರಿವಿನ ಅರಸನಿಗೆ ಅಂದರೆ ಭಗಂವತನಿಗೆ ಶರಣು ಹೋಗಲು ಬಂದ ಕಾಯ; ಹೀಗಾಗಿ ಅದು ಶರಣಕಾಯ. ಶರಣು ಹೋಗಲು ಬಂದ ಕಾಯವೇ; ಶರಣು ಹೋಗಲು ಬಂದ ಕಾಯವನ್ನು ದೂಷಣೆ ಮಾಡುವುದು ಪಾಪದ ಕೆಲಸವಲ್ಲವೆ? ಇದು ಶರಣರ ಮನಕ್ಕೆ ಭೂಷಣವೆ?

ಕಪಿಲಸಿದ್ಧ ಮಲ್ಲಿಕಾರ್ಜುನನಿದ್ದ ಕಾಯವನ್ನು ಕಾಯವೇ ದೂಷಣೆ ಮಾಡುವುದೆಂದರೇನು? ಮೇಲ್ಮುಖದ ಕಾಯವೆಂದು, ಉತ್ತರಕೋಣೆಯುಳ್ಳ ಉತ್ತಮಿಕೆಯ ಕಾಯವೆಂದು ಮರೆತುದರಿಂದ ಪಾಪಿಯಾಗಿದೆ. ಅರಿತರೆ ನುಡಿಯುವ ಮಾತುಗಳೆಲ್ಲ ಮುತ್ತುಗಳೇ. ಕೇಳುವ ಮಾತುಗಳೆಲ್ಲ ಮುತ್ತುಗಳೇ.

**267**

**ಉತ್ತರ ದಕ್ಷಿಣ ಪೂರ್ವ ಪಶ್ಚಿಮವೆಂಬ**
**ದಿಕ್ಕಿನ ಹಂಗು ಹರಿದೆ.**
**ನೀನುತ್ತರದಲ್ಲಿ ಓಂಕಾರ ಪ್ರದೀಪನಾಗಿ**
**ಉತ್ತರದ್ವಾರದಲ್ಲಿ ಬಪ್ಪಾಗ ಆನೊಡನೆ ಬಂದೆ.**
**ನೀನು ಅರಿತೂ ಅರಿಯದ ಹಾಂಗೆ ಇದ್ದೆ.**
**ದಕ್ಷಿಣದ್ವಾರದಲ್ಲಿ ಜನಿತನಾಶವಾಗಿ ಬಪ್ಪಂದು**
**ಆನೊಡನೆ ಬಂದು ನೀನರಿಯದಂತಿದ್ದೆ.**
**ನೀನು ಪೂರ್ವದ್ವಾರದಲ್ಲಿ ಅಕ್ಷರದ್ವಯದ**
**ವಾಹನವೇರಿಬಪ್ಪಲ್ಲಿ ಆನೊಡನೆ ಬಂದೆ.**
**ನೀ ಪಶ್ಚಿಮದ್ವಾರದಲ್ಲಿ ಅವ್ವೆಯ ಮನದ**
**ಕೊನೆಯ ಮೇಲೆ ಅವ್ಯಕ್ತಶೂನ್ಯವಾಗಿ ಬಪ್ಪಾಗ**
**ಒಡನೆ ಬಂದೆ ಎಲೆ ಅಯ್ಯಾ.**
**ಎನ್ನನು ಅನ್ಯಕ್ಕೊಪ್ಪಿಸುವ, ಎನ್ನನು**
**ಶುದ್ಧ ನಾನು ನಿನ್ನವನಲ್ಲಾ.**
**ಆನು ಬಂದ ಬರವ, ಇದ್ದ ಇರುವ**
**ಆನರಿಯೆನಲ್ಲದೆ ನೀ ಬಲ್ಲೆ.**
**ಅರಿದು ಕಾಡುವುದುಚಿತವೇ?**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಪ್ರಾಣಿ, ಪಶು, ಪಕ್ಷಿ, ಉರುಗ, ಕೀಟ, ಜಲಚರ, ಗಿಡ, ಮರ, ಬಳ್ಳಿ, ಸಸ್ಯ ಸಂಕುಲ ಸಹಜವಾಗಿವೆ, ಸುಂದರವಾಗಿವೆ. ಈ ಎಲ್ಲವುಗಳಿಗೆ ಜ್ಞಾನವಿದೆ. ಆಹಾರ, ನಿದ್ರೆ, ಭಯ

ಮೈಥುನಕ್ಕಾಗಿ ಮಾತ್ರ ಅವುಗಳ ಜ್ಞಾನ ಬಳಕೆಯಾಗುತ್ತದೆ. ಮನುಷ್ಯನಿಗೆ ಮಾತ್ರ ವಿಶೇಷ ಜ್ಞಾನವಿದೆ. ಆ ಜ್ಞಾನದ ಕಿರಣಗಳಿಂದ ದೇಹದಲ್ಲಿ ಮನಸ್ಸು ಸೃಷ್ಟಿಯಾಗಿದೆ. ಮನುಷ್ಯ ಮನಸ್ಸಿನ ಮೂಲಕ ದೇಹದಲ್ಲಿ ಸಂಗಮವಾದ ಜ್ಞಾನಕ್ಕೆ ಪ್ರಯಾಣಮಾಡಿ ಆ ಜ್ಞಾನದ ಮೂಲಕ ಇಡೀ ವಿಶ್ವವನ್ನೇ ಪರಮಾನಂದದಿಂದ ಸಹಜವಾಗಿ ನೋಡಬೇಕು. ಹೀಗಾಗಿ ಜ್ಞಾನಕ್ಕೆ ಪುರಾತನರು ದೇವರು ಎಂದು ಕರೆದರು. ಆ ಜ್ಞಾನ ದೇವರನ್ನು ದೇಹವನ್ನು ಆವರಿಸಿದ ಮನದ ಮೂಲಕ ಹೇಗೆ ಸಾಕ್ಷಾತ್ಕರಿಸಿಕೊಳ್ಳಬೇಕು, ಆ ಜ್ಞಾನಕ್ಕೆ ಮನದ ಮೂಲಕ ಹೇಗೆ ಶರಣು ಹೋಗಬೇಕು ಎಂಬುದನ್ನು ದೇವರನ್ನು ಕಂಡುಕೊಂಡ ಮಹಾಂತರು ಉಪನಿಷತ್ತು, ಆಗಮ ವೇದಗಳ, ಭಗವದ್ಗೀತೆ, ಕುರಾನ್ ಬೈಬಲ್‌ಗಳ ಮೂಲಕ ಸೂತ್ರ ರಚಿಸಿದರು.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದ ಮೂಲಕ ಜ್ಞಾನವನ್ನು ದೇವರನ್ನಾಗಿಸಿಕೊಂಡು ಮನವನ್ನೇ ಆ ಜ್ಞಾನಕ್ಕೆ ಭಕ್ತನನ್ನಾಗಿಸಿ ದೇಹವನ್ನು ಉಪಕರಣ ಮಾಡಿಕೊಂಡು ಪರಿಪರಿಯಿಂದ ಆ ದೇವರನ್ನು ಬೇಡುವ ಸೂತ್ರವನ್ನು ಓದುಗರಿಗೆ ಕರುಣಿಸಿದ್ದಾರೆ.

ಆದರೆ ಮನ ಜ್ಞಾನವನ್ನು ತಿಳಿಯುವುದು ಬಿಟ್ಟು ದಶ ದಿಕ್ಕುಗಳಿಗೆ ಮರುಳಾಗಿದೆ. ದಿಕ್ಕು ಯಾವುದಾದರೇನು? ಆ ಎಲ್ಲಾ ದಿಕ್ಕುಗಳಿಗೆ ಹೆಸರಿಟ್ಟಿದ್ದು ತಾನೆ. ಆ ದಿಕ್ಕುಗಳಿಗೆ ಭ್ರಮೆಯಿಂದ ಮರುಳಾದದ್ದು ತಾನೆ. ಉತ್ತರದ ಕೊನೆಯಲ್ಲಿ ಮನೆ ಮಾಡಿಕೊಂಡಿದ್ದ ಅರಿವೆಂಬ ಗುರುದೇವನನ್ನೇ ಮನ ಮರೆತದ್ದರಿಂದ ಮನಕ್ಕೆ ಭ್ರಮೆ ಉಂಟಾಗಿದೆ.

ಜ್ಞಾನದೊಂದಿಗೆ ಬಂದ ಮನ, ಜ್ಞಾನವನ್ನೇ ಮರೆತಿರುವುದರಿಂದ ಜ್ಞಾನ ಶರೀರವನ್ನು ತನ್ನ ಮನ ಬಂದತೆ ಬಳಸಿಕೊಂಡು ದೇಹವನ್ನು ಅಜ್ಞಾನಿಯಂತೆ ಪ್ರದರ್ಶಿಸುತ್ತದೆ. ಮನದ ಅಜ್ಞಾನ ಜ್ಞಾನಕ್ಕೆ ಗೊತ್ತಿದ್ದರೂ, ಮತ್ತೇ ಮತ್ತೇ ಮನ ತಪ್ಪು ಮಾಡಲು ಜ್ಞಾನ ಮನಕ್ಕೆ ಅವಕಾಶ ಕೊಡುತ್ತದೆ.

ದೇವರು ಜಗದಗಲ ಮುಗಿಲಗಲಕ್ಕೂ ವ್ಯಾಪಿಸಿಕೊಂಡಿದ್ದಾನೆ. ಆತನ ಶ್ರೀಚರಣ ಪಾತಾಳದಿಂದತ್ತತ್ತಲೂ ಚಾಚಿಕೊಂಡಿವೆ. ಆತನ ಶ್ರೀಮುಕುಟ ಬ್ರಹ್ಮಾಂಡದಿಂದತ್ತತ್ತಲೂ ಚಾಚಿಕೊಂಡಿದೆ. ಇಂತಹ ಜ್ಞಾನದೇವನೇ ಸಂಗಮವಾದ ದೇಹದಲ್ಲಿ ಮನ ಸೃಷ್ಟಿಯಾಗಿದೆ. ಅರಿವೆಂಬ ಗುರುದೇವನನ್ನು ಅರಿಯುವುದು ಬಿಟ್ಟು, ಉತ್ತರ ದಕ್ಷಿಣ ಪೂರ್ವ ಪಶ್ಚಿಮವೆಂಬ ದಿಕ್ಕಿನ ಹಂಗಿಗೆ ಒಳಗಾಗಿದೆ.

ಉತ್ತರವೆಂದರೆ ಅರಿವಿನ ಮನೆ. ಅರಿವಿನ ಶಿವನೇ ಉತ್ತರವೆಂಬ ಅರಿವಿನ ಮನೆ ಮಾಡಿ, ತಾನು ಓಂಕಾರನಾಗಿ ಆ ದೇಹದಲ್ಲಿ ಸಂಗಮವಾಗಿ ಹೊಲಿದುಕೊಂಡು ಗರ್ಭದಿಂದ ಹೊರಬಂದಿದ್ದಾನೆ. ಆತನೊಂದಿಗೆ ಮನವೂ ಬಂದಿದೆ.

ನೀನು ಬರುವಾಗ ನಿನ್ನೊಡನೆ ನಾನೂ ಬಂದೆ. ಆದರೆ ನಿನ್ನನ್ನು ಅರಿಯದಂತೆ ನೀನಿದ್ದ ಜಾಗದಲ್ಲಿಯೇ ನಾನಿದ್ದೆ. ನನ್ನನ್ನು ವಾಹನ ಮಾಡಿಕೊಂಡು ಆ ವಾಹನ ಏರಿ ನೀ ಬಂದೆ. ನೀ ಬಂದ ವಾಹನವನ್ನೇ ನೀನು ಮರೆಯುವುದೇ ತಂದೆ.

ನಿನ್ನನ್ನು ತಿಳಿಯದಂತೆ ಎನಗೆ ಇರಿಸಿದ ನೀನು, ನನ್ನನ್ನು ಅನ್ಯಕ್ಕೆ ಒಪ್ಪಿಸುವುದೆ ಅಯ್ಯಾ? ನೀನು ಶೂನ್ಯದಿಂದ ಬರುವಾಗ ನಿನ್ನಿಂದ ಬಂದ ನೆರಳು ನಾನು. ನಾನು ಶುದ್ಧನಲ್ಲವೆಂದು ನಿನಗೆ ತಿಳಿದಿದೆ. ಅದಕ್ಕೆ ಕಾರಣನೂ ನೀನೆ ಆಗಿರುವಿ. ನಿನ್ನ ಬೆಳಕು ನನ್ನನ್ನು ನಿನ್ನ ನೆರಳಾಗಿಸಿದೆ. ಹೀಗಾಗಿ ನನಗೆ ಏನೂ ತಿಳಿಯುತ್ತಿಲ್ಲ. ನಿನ್ನ ಬೆಳಕಿನ ಆಸೆ ನನ್ನಲ್ಲಿ ಹುಟ್ಟಿಸದೆ, ನಿನ್ನ ಬೆಳಕು ನೀನೇ ನನ್ನ ಮೇಲೆ ಚೆಲ್ಲದೆ ಇರುವ ನಿನ್ನ ಇರುವನು ನಾನು ಅರಿಯೆ ಎಂಬುದನು ಕೂಡಾ ನೀನೇ ಬಲ್ಲೆ. ಅರಿದು ಕಾಡುವುದು ಉಚಿತವೇ ತಂದೆ? ಕಪಿಲಸಿದ್ಧ ಮಲ್ಲಿಕಾರ್ಜುನಾ.

268

**ಉದಕ ಹೋಗಿ ಗುರುಪಾದೋದಕವೆನಿಸಿತ್ತು;**
**ಗುರುಪಾದೋದಕ ಹೋಗಿ ಕ್ರಿಯಾಪಾದೋದಕವೆನಿಸಿತ್ತು;**
**ಕ್ರಿಯಾಪಾದೋದಕ ಹೋಗಿ ಜ್ಞಾನಪಾದೋದಕವೆನಿಸಿತ್ತು;**
**ಜ್ಞಾನಪಾದೋದಕವೇ ಶರಣನ ಮನದ ಮೊನೆಯಲ್ಲಿ**
**ಕಪಿಲಸಿದ್ಧ ಮಲ್ಲಿಕಾರ್ಜುನನಾಗಿ ನಿಂದಿತ್ತು.**

ಉದಕದಿಂದಲೇ ಭೂಮಿ. ಉದಕದಿಂದಲೇ ಆಕಾಶಕಾಯಗಳು. ಉದಕದಿಂದಲೇ ಸಸ್ಯ ಸಂಕುಲ; ಗಿಡ, ಮರ, ಬಳ್ಳಿ, ಪಶು, ಪಕ್ಷಿ. ಉದಕದಿಂದಲೇ ಜಲಚರಗಳು; ಪ್ರಾಣಿ ಸಂಕುಲ. ಉದಕದಿಂದಲೇ ಕೆರೆ ಹಳ್ಳ ಭಾವಿ ನದಿ ಕೊಳ ಸಮುದ್ರಗಳು. ಉದಕದ ಬಿಂದುವುನಿಂದಲೇ ಮನುಷ್ಯನ ಜನ್ಮ!

ಉದಕವೆಂದರೆ ಉದಕವಲ್ಲ; ಅದು ಗುರುವಿನ ಪಾದೋದಕ. ಅರಿವಿನ ಪಾದೋದಕ. ಉದಕದ ಬಿಂದು ಗರ್ಭಪ್ರವೇಶ ಮಾಡಿ, ಅದೇ ರಕ್ತವಾಗಿ ಮಾಂಸವಾಗಿ ಮೂಳೆ ಮಜ್ಜೆ ಮೇದಸ್ಸು ಆಗಿ, ಉದಕವೇ ಚರ್ಮದ ಕವಚವಾಗಿ ಉದಕ ಸೋರದಂತೆ ಉದಕವೇ ಉದಕವನ್ನು ಹೊಲಿದುಕೊಂಡು ಉದಕವೇ ಅಂಗವಾಗಿ ಗರ್ಭದಿಂದ ಹೊರಬಂದಿದೆ.

ಉದಕದ ಬಿಂದುವಿನಲ್ಲಿಯೇ ಅರಿವು ಸಂಗಮವಾಗಿ ಗುರು ಎನ್ನಿಸಿಕೊಂಡಿದೆ. ಉದಕದ ಬಿಂದುವನ್ನು ಬಿಂದುವಿನ ನೆರಳು ಆವರಿಸಿಕೊಂಡು ಶಿಷ್ಯ ಎನ್ನಿಸಿಕೊಂಡಿದೆ. ಉದಕದ ಬಿಂದುವಿನ ನೆರಳಿಗೆ ಉದಕದ ಬಿಂದುವಿನ ಅರಿವಿನ ಬೆಳಕೇ ಪಾದೋದಕವೆನ್ನಿಸಿಕೊಂಡಿದೆ.

ಉದಕದಲ್ಲಿ ಅರಿವೆಂಬ ಗುರುದೇವನ ಜನನವೂ ಆಗಿದೆ. ಉದಕದಲ್ಲಿಯೇ ಆ ಗುರುದೇವನನ್ನು ನೆನೆದು, ಆ ಗುರುದೇವನನ್ನೇ ಪೂಜಿಸಿ ಆರಾಧಿಸುವ ಶಿಷ್ಯನ ಜನನವೂ ಆಗಿದೆ.

ಉದಕದಲ್ಲಿಯೇ ಕಿಚ್ಚು ಹುಟ್ಟಿ, ಆ ಕಿಚ್ಚನ್ನು ನಂದಿಸುವ ಶಕ್ತಿ ಉದಕದಿಂದಲೇ ನಿರ್ಮಾಣವಾಗಿದೆ. ಅರಿವಿನಿಂದ ನೋಡಲು ಹೋದರೆ ಉದಕ ಉದಕವೇ ಅಲ್ಲ. ಜಲಜನಕ ಮತ್ತು ಆಮ್ಲಜನಕಗಳೆರಡು ಕೂಡಿ ಉದಕಕ್ಕೆ ಜನ್ಮ ನೀಡಿದೆ. ಜಲಜನಕ ಆಮ್ಲಜನಕಕ್ಕೆ ಬಯಲು ಜನ್ಮ ನೀಡಿ ಬ್ರಹ್ಮಾಂಡದ ಸೃಷ್ಟಿಗೆ ಬಯಲೇ ಕಾರಣವಾಗಿದೆ. ಬಯಲು ಇಡೀ ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿ ತನ್ನ ಗರ್ಭದಲ್ಲಿ ಇಟ್ಟುಕೊಂಡಿದೆ.

ಅರಿವಿನ ಜೀವ ಜಲಬಿಂದುವೇ ತಂದೆಯ ಮುಖಾಂತರ ತಾಯಿ ಗರ್ಭ ಪ್ರವೇಶ ಮಾಡಿ ಅರಿವೆಂಬ ಗುರುದೇವನ ತನುವಾಗಿ ಹೊರಬಂದಿದೆ. ಹೀಗೆ ಹೊರಬಂದ ಪ್ರತಿ ತನುವಿನಲ್ಲಿ ಅರಿವು ಸಂಗಮವಾಗಿದೆ. ಹಾಗೆಯೇ ಅರಿವನ್ನು ತಿಳಿಯುವ ಮನವೂ ಸಂಗಮವಾಗಿದೆ.

ಉದಕವೇ ಅರಿವೆಂಬ ಗುರುದೇವನೆನ್ನಿಸಿಕೊಂಡಿದೆ. ಅಂದರೆ ಉದಕವು ಕಳೆದು ಹೋಗಿ ಪಾದೋದಕವಾಗಿದೆ. ಗುರುಪಾದೋದಕವೇ ಅರಿವಿನ ಕ್ರಿಯೆಯಲ್ಲಿ ತೊಡಗಿ ಕ್ರಿಯಾಪಾದೋದಕವಾಗಿದೆ. ಕ್ರಿಯಾಪಾದೋದಕವೇ ಜ್ಞಾನಪಾದೋದಕವೆಂದು ಮಹಾಜ್ಞಾನಿಯೆಂದು ಹೊರಹೊಮ್ಮಿದೆ. ಇದೆಲ್ಲವನ್ನು ಅರಿವಿಗೆ ತಂದುಕೊಂಡು ಆ ಅರಿವಿಗೆ ಶರಣುಹೋಗಿ ಶರಣನೇ ಆದಂತಹ ಶರಣನ ಮನದ ಮೊನೆಯಲ್ಲಿ ಅರಿವೆಂಬ ಗುರುದೇವನೇ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ದೇವರಾಗಿ ನಿಂತಿದ್ದಾನೆ.

ದೇವರೇ ಉದಕವಾದ ಕತೆ. ದೇವರೆಂದರೆ ದೇವರಲ್ಲ; ಅರಿವೇ ಗುರುವೆಂದು, ದೇವರೆಂದು ಜ್ಞಾನಿಯೆಂದು ಹೆಸರು ಪಡೆದ ಉದಕದ ಕತೆ.

**269**

**'ಉದಯೇ ಜನನಂ ನಿತ್ಯಂ ರಾತ್ರ್ಯಾಂಚ ಮರಣಂ ತಥಾ**
**ಅಜ್ಞಾನಂ ಸರ್ವಜಂತೂನಾಂ ತದ್ವಿಧಿಶ್ಚ ಪುನಃ ಪುನಃ**
**ಕ್ಷೀಣಾಯುರಗ್ನಿಮಾಂದ್ಯಂ ಚ ರೋಗೋದ್ರೇಕಶ್ಚ ಕಾರ್ತಿಕ!'**
**ನಿದ್ರಾಮಾತ್ರೇಣ ಜಾಯಂತೇ ಮನಃ ಪವನಸಂಯುತಂ ಎಂದುದಾಗಿ,**
**ರೂಪಿಲ್ಲದವಳೊಡನಾಡಿ ಮೃತ್ಯುವಿಪ್ಪ ಠಾವನರಿಯಬಾರದು.**
**ಹಿತವೆಯಂತಿಪ್ಪಳು ಒತ್ತಿ ಕೆಡಹುವಳು.**
**ದೊಪ್ಪನೆ ಭೂಮಿಗೆ ಒರಗಿಸುವಳು.**
**ಇವಳು ಅಪ್ಪುವ ಅಗಲುವ ಪರಿಯೇ ನೋಡಯ್ಯಾ.**
**ಈ ಲೋಕದೊಳಗೆಲ್ಲರೂ ಅಜ್ಞಾನ ನಿದ್ರಾಮಾಯ ಶಕ್ತಿಯ ಸಂಗದಿಂದ**
**ಮರೆದೊರಗುತ್ತೈದಾರೆ.**
**ಎನಗಿದ ತಪ್ಪಿಸಿ ನಿಮ್ಮೊಳಗಿರಿಸಿಕೊಳ್ಳಯ್ಯಾ ಪ್ರಭುವೆ**
**ಕಪಿಲಸಿದ್ಧ ಮಲ್ಲಿನಾಥದೇವರ ದೇವ.**

ನಿದ್ರೆ ಎನ್ನುವುದು ಅಜ್ಞಾನ. ಎಚ್ಚರದಲ್ಲಿದ್ದೂ ಜ್ಞಾನವೆಂದರೆ ಏನೆಂದು ಗೊತ್ತಿಲ್ಲದಿದ್ದರೆ ಅದು ನಿದ್ರೆಯೇ ಸರಿ. ಸರ್ವ ಜಂತುಗಳಿಗೆ ಅಜ್ಞಾನದ ನಿದ್ರೆ ವಿಧಿಯಾಗಿ ಕಾಡುತ್ತದೆ. ಮನುಷ್ಯ ಮಾತ್ರ ಅಜ್ಞಾನದ ನಿದ್ರೆಯಿಂದ ಹೊರಬರಬಲ್ಲ.

ಅಜ್ಞಾನದಿಂದ ಹೊರಗೆ ಬರುವುದು ಎಂದರೆ ಸದಾ ಎಚ್ಚರದಲ್ಲಿರುವುದು. ನೋಡುವಾಗ ಕಣ್ಣಿಗೆ ಅಂಟಿದ ಅಜ್ಞಾನದ ಪೊರೆ ಕಿತ್ತಿಕೊಂಡು ನೋಡುವುದು. ಕೇಳುವಾಗ, ಸ್ಪರ್ಶಿಸುವಾಗ, ರುಚಿಸುವಾಗ, ಮೂಸಿಸುವಾಗ ಅಜ್ಞಾನವೇ ಮುಂದಾಗುತ್ತದೆ. ಜ್ಞಾನ ಹಿಂದಕ್ಕೆ ಸರಿಯುತ್ತದೆ. ಆಗ ಅಜ್ಞಾನದ ಪೊರೆ ಕಿತ್ತಿಕೊಂಡು ಕೇಳಬೇಕು. ಹಾಗೆಯೇ ಅಜ್ಞಾನದ ಪೊರೆ ಕಿತ್ತಿಕೊಂಡು ಮುಟ್ಟಬೇಕು. ರುಚಿಸಿ ಮೂಸಿಸಬೇಕು. ಈ ತಂತ್ರಜ್ಞಾನದ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಓದುಗರಿಗಾಗಿ ಮಂಡಿಸಿದ್ದಾರೆ.

ಗಂಡಾಗಿ ನೋಡುವುದು ಅಜ್ಞಾನ. ಹೆಣ್ಣಾಗಿ ನೋಡುವುದು ಕೂಡಾ ಅಜ್ಞಾನ. ಹೀಗೆ ಗಂಡಾಗಿ ಹೆಣ್ಣಾಗಿ ನೋಡುವುದರಿಂದ ದೇಹದಲ್ಲಿ ಕಾಮದ ರಸಾಯನ ಹರಿದು ದೇಹ ಮನೋಹಾದರಕ್ಕೆ ತೊಡಗುತ್ತದೆ. ದೇಹ ನೈಜಕ್ಕೆ ಜಾರದಿದ್ದರೆ ತನಗೆ ತಾನೇ ಮಾನಸಿಕ ಹಾದರಿಗನಾಗಿ ಉಳಿಯುತ್ತಾನೆ. ದೇಹ ದೇಹದೊಂದಿಗೆ ಹಾದರಕ್ಕೆ ಜಾರಿದರೆ ದೇಹಕ್ಕೆ ಹಾದರದ ಹಣೆಪಟ್ಟಿ ದೇಹಗಳಿಂದಲೇ ಲಭ್ಯವಾಗುತ್ತದೆ.

ಕಣ್ಣು ಹೆಣ್ಣು ಅಲ್ಲ; ಗಂಡು ಕೂಡಾ ಅಲ್ಲ. ಅಜ್ಞಾನದ ವಶಕ್ಕೆ ಒಳಗಾದ ಕಣ್ಣು ಹೆಣ್ಣಿನ ಪಾತ್ರಧರಿಸಿ ಗಂಡನ್ನು ನೋಡಿ ದೇಹಕ್ಕೆ ಕಾಮದ ರಸಾಯನ ಸಿಂಪಡಿಸುತ್ತದೆ. ಹಾಗೆಯೇ ಅಜ್ಞಾನದ ವಶಕ್ಕೆ ಒಳಗಾದ ಕಣ್ಣು ಗಂಡಿನ ಪಾತ್ರಧರಿಸಿ ಹೆಣ್ಣನ್ನು ನೋಡಿ ದೇಹದಲ್ಲಿ ಕಾಮದ ಸಂಚಯನವಾಗಿ ಇಡೀ ದೇಹ ಅಜ್ಞಾನದ ವಶವಾಗುತ್ತದೆ. ಕಣ್ಣು, ಹೆಣ್ಣು ಅಲ್ಲ ಗಂಡು ಅಲ್ಲ;

ಕಣ್ಣು ಮಾತ್ರ ಎನ್ನುವುದನ್ನು ಕಣ್ಣು ಮರೆತು ಹೋಗುತ್ತದೆ.

ಅಜ್ಞಾನದ ಮಾಯೆಯಿಂದಾಗಿ ದೇಹಕ್ಕೆ ಹಿತವಾಗುತ್ತದೆ. ದೇಹಕ್ಕೆ ಆದ ಹಿತವನ್ನು ದೇಹಗಳೇ ಸಹಿಸುವುದಿಲ್ಲ. ಕಲ್ಲಿಲೆ ಹೊಡೆದು ಹಾದರದ ದೇಹವನ್ನು ಭೂಮಿಗೆ ಉರುಳಿಸುತ್ತವೆ. ಹಾದರದ ದೇಹಕ್ಕೆ ಸುಖವಾದರೆ ಅದನ್ನು ನೋಡಿದ ದೇಹಗಳಿಗೆ ದುಃಖ. ಹೀಗೆ ಸುಖ ದುಃಖಗಳನ್ನು ದೇಹದಲ್ಲಿ ಸೃಷ್ಟಿ ಮಾಡಿದ ಅಜ್ಞಾನದ ನಿದ್ರಾಮಾಯಾ ಶಕ್ತಿಯ ಸಂಗದಿಂದ ಮೈಮರೆತು ಭೂಮಿಗೆ ಒರುಗುತ್ತಿದ್ದಾರೆ.

ದೇಹದೊಂದಿಗೆ ದೇಹವನ್ನು ಅಪ್ಪಿಕೊಳ್ಳಲು ಕಾರಣವಾದ ಅಜ್ಞಾನದ ಮಾಯೆಯೇ ದೇಹಗಳ ಮೂಲಕ ಅಗಲಿಸುವ ನಾಟಕವಾಡುತ್ತದೆ. ಅರಿವಿನಿಂದ ನೋಡಿದರೆ ಅಜ್ಞಾನದ ಮಾಯೆಯ ಆಟ ಜ್ಞಾನಕ್ಕೆ ತಿಳಿಯುತ್ತದೆ.

ಹಾದರದಿಂದ ನೋಡಿದೆನೆಂದು ಕಣ್ಣಿನಿಂದಲೇ ಕಣ್ಣಿಗೆ ತಿಳಿಯುತ್ತದೆ. 'ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯಿರಯ್ಯಾ' ಎನ್ನುವ ಸೂತ್ರ ಕಣ್ಣಿಗೆ ಲಭ್ಯವಾದರೆ ಕಣ್ಣೊಳಗಣ ಕಣ್ಣು ಕಣ್ಣಿಗೆ ಪರಿಚಯವಾಗುತ್ತದೆ.

ಸಿದ್ಧರಾಮ ಶಿವಯೋಗಿಗಳು 'ಎನಗಿದ ತಪ್ಪಿಸಿ ನಿಮ್ಮೊಳಗಿರಿಸಿಕೊಳ್ಳಯ್ಯಾ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವ'. ಎಂದು ಕಾಯದೊಳಗಿದ್ದ ಅಕಾಯ ಜ್ಞಾನದೇವನನ್ನು ಕುರಿತು ಹಾಡಿದ್ದಾರೆ.

**270**

**ಉಸುರ ಹಿಡಿದು ಮಜ್ಜನಕ್ಕರೆವೆನಯ್ಯಾ ನಿಮಗೆ;**
**ವಿಷಯ ಮಾದು ಗಂಧವನೀವೆನಯ್ಯಾ ನಿಮಗೆ;**
**ನೆನೆಹ ನೆಲೆಗೊಳಿಸಿ ಕೊಡುವೆನು ಕುಸುಮವನು;**
**ತನುಗುಣಾದಿಗಳನುರುಹಿ ದಶಾಂಗಧೂಪವನಿಕ್ಕುವೆನು.**
**ಎನ್ನನೆ ನಿಮಗೆ ಬೋನಕ್ಕೆ ಸವೆವೆನಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಹೊರ ಬಳಕೆಯ ಪೂಜೆಗೆ ಎರಗದೆನ್ನ ಮನವು.**

ಒಂದು ಕಲ್ಲಿನಲ್ಲಿ, ಬೇಕಾದ ದೇವರನ್ನು ಕೆತ್ತಿ, ಆ ಕಲ್ಲನ್ನೇ ದೇವರೆಂದು ಆರಾಧಿಸಲು ಬರುತ್ತದೆ. ಕಲ್ಲನ್ನು ನೋಡುವುದು ಸಹಜ. ಕಲ್ಲಲ್ಲಿಯೇ ಕೆತ್ತಿದ ದೇವರನ್ನು ಕಲ್ಲೆಂದು ಸಹಜವಾಗಿ ನೋಡಲು ಬರುವುದಿಲ್ಲ. ಮಜ್ಜನಕ್ಕೆರೆಯುವ ಆಸೆ, ಗಂಧ ಧೂಪ ದೀಪದಿಂದ ಆರಾಧಿಸುವ ಆಸೆ, ಕುಸುಮದಿಂದ ಆರಾಧಿಸುವ ಆಸೆ, ಬೋನವನಿಕ್ಕಿ ನೈವೇದ್ಯವನು ಅರ್ಪಿಸುವ ಆಸೆ ದೇಹದಲ್ಲಿ ಅಂಕುರಿಸುತ್ತದೆ. ಇದು ಭ್ರಮೆ. ಕಲ್ಲನ್ನು ನೋಡಿದ ಸಹಜಾವಸ್ಥೆಯನ್ನು ಕಲ್ಲಲ್ಲಿ ಕೆತ್ತಿದ ದೇವರನ್ನು ನೋಡುವಾಗ ಕಣ್ಣು ಕಳೆದುಕೊಳ್ಳುತ್ತದೆ. ಸಹಜ ಕಣ್ಣನ್ನು ಮರೆಮಾಡಿ ಭ್ರಮಾ ಕಣ್ಣು ಪ್ರಕಟವಾಗುತ್ತದೆ. ಈ ಕಣ್ಣು ದೇಹವನ್ನು ತನ್ನ ಮನಬಂದತ್ತ ಬಾಗಿಸುತ್ತದೆ.

ಒಂದು ಕಲ್ಲಲ್ಲಿ ಯಾವ ದೇವರನ್ನು ಕೆತ್ತಿದರೇನು? ಕ್ರಿಷ್ಣನಾದರೇನು, ಕ್ರಿಸ್ತನಾದರೇನು? ಮಸೀದೆಯಾದರೇನು? ಮಹಾವೀರ, ಬುದ್ಧನಾದರೇನು? ಅದು ಕಲ್ಲೆಂದು ಕಣ್ಣಿಗೆ ಹೊಳೆದಾಗಲೇ ಕಣ್ಣಿಗೆ ದೇವರು ಸಾಕ್ಷಾತ್ಕಾರವಾದ. ಆ ಕಣ್ಣೇ ದೇವರು. ಕಣ್ಣ ದೇವರು ಕಣ್ಣಿಗೆ ಪರಿಚಯವಾದ್ದರಿಂದ

ಕಣ್ಣು ಕಣ್ಣಿಗೆ ಅರ್ಪಿತವಾಯಿತು. ಕಣ್ಣಪ್ಪ ತನ್ನ ಅಜ್ಞಾನದ ಕಣ್ಣನ್ನು ದೇವರ ಕಣ್ಣಿಗೆ ಅರ್ಪಿಸಿದ. ಬೇಡವಾದ ಅಜ್ಞಾನದ ಕಣ್ಣನ್ನು ನಿಜ ಕಣ್ಣಿಗೆ ಅರ್ಪಿಸಿ ಕಣ್ಣಪ್ಪನಾದ. ಬೇಡರ ಕಣ್ಣಪ್ಪನಾದ.

ಸಿದ್ಧರಾಮ ಶಿವಯೋಗಿಗಳು ನಿಜ ಜ್ಞಾನದೇವರನ್ನು ಆರಾಧಿಸುವ, ಆ ದೇವರಿಗೆ ಶರಣು ಹೋಗುವ ಸೂತ್ರವನ್ನು ತಮ್ಮ ವಚನದಲ್ಲಿ ನೀಡಿದ್ದಾರೆ.

ಕಲ್ಲಲ್ಲಿ ಕೆತ್ತಿದ ದೇವರನ್ನು ಕಲ್ಲೆಂದು ನೋಡುವುದೇ ಮಜ್ಜನಕ್ಕೆರೆಯುವ ವಿಧಾನ. ಉಸುರು ಬಿಗಿ ಹಿಡಿದು ಜಲವಿಲ್ಲದೆ ಮಜ್ಜನಕ್ಕೆರೆಯುವುದು.

ಅಜ್ಞಾನದ ವಿಷಯ ಕಳೆದುಕೊಂಡು ದೇಹ ದೇಹವನ್ನು ಆರಾಧಿಸುವುದು. ಅದೇ ದೇವರಿಗೆ ಸುಗಂಧವನ್ನು ಹೂಸಿದಂತೆ. ರೂಢಿಗತವಾದ ನೆನೆಹನೆಲ್ಲವನು ಕಳೆದುಕೊಂಡು ಅರಿವಿನ ಪರಿಮಳದಿಂದ ಆರಾಧಿಸುವುದು.

ತನು ಗುಣಾದಿಗಳನ್ನು ಸುಟ್ಟು ದಶಾಂಗ ದೀಪವನು ಬೆಳಗುವುದು. ತನುವಿನಿಂದಲೇ ಅರಿವಿನ ಅವ್ಯಕ್ತ ತನುವಿಗೆ ಅರಿವಿನ ಬೋನವನಿಕ್ಕಿ ಆರಾಧಿಸುವುದು. ಹೊರಬಳಕೆಯ ಪೂಜೆಗೆ ಎರಗದೆ ಅರಿವಿನ ಪೂಜೆಯಿಂದ ಅರಿವನ್ನೇ ಪೂಜಿಸಿ ಆರಾಧಿಸುವ ಸೂತ್ರವನ್ನು ಸಕಲ ತನುಗಳಿಗೆ ಅರುಹಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**271**

**ಉಸುರುಸುರ ಸರಹಿನೊಳಗಡಗಿಕೊಂಡು**
**ಬೆಳೆವುತಿಪ್ಪುದು ಲೋಕ!**
**ಇದನು ನೀನೆಂತು ಅರಿದೆ ಹೇಳಾ.**
**ಆ ನಿನ್ನ ಪ್ರಸಾದದಿಂದರಿತೆ ನಾ,**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ದೇಹದ ಹಾವ ಭಾವ, ದೇಹದ ಮಾಟ, ದೇಹದ ಚಲನ ವಲನ, ದೇಹದ ಉಸಿರು ಉಸಿರಿನ ಅಳತೆಯನ್ನು ಪ್ರತಿ ದೇಹಗಳು ಶಬ್ದದಿಂದಲೇ ಅಳೆಯುತ್ತವೆ. ಲೋಕ ಶಬ್ದದಿಂದಲೇ ತನ್ನನ್ನು ಗುರುತಿಸಿಕೊಂಡಿದೆ.

ಶಿಕ್ಷಣ ಸಂಸ್ಥೆಗಳು, ಶಾಲಾ ಕಾಲೇಜುಗಳು, ವಿಶ್ವವಿದ್ಯಾಲಯಗಳು, ಗುರುಪೀಠಗಳು ಮಠ ಮಂದಿರ ಮಸೀದೆ ಚರ್ಚ್‌ಗಳು, ಕೊನೆಗೆ ಸರಕಾರವೂ ಶಬ್ದಕ್ಕೆ ಮರುಳಾಗಿದೆ. ತನ್ನ ಸಕಲ ಅಸ್ತಿತ್ವವನ್ನು ಶಬ್ದದಿಂದಲೇ ಪರಿಚಯಿಸಿ, ಶಬ್ದದಿಂದಲೇ ಗುರುತಿಸಿಕೊಂಡಿವೆ.

ಶಬ್ದದ ಮೂಲಕ ಲೋಕ ಇದುವರೆಗೆ ಸುಖ ಮತ್ತು ದುಃಖ ಮಾತ್ರ ಗುರುತಿಸಿದೆ. ಇದರ ಹೊರತಾಗಿ ಏನನ್ನೂ ಗುರುತಿಸಲು ಸಾಧ್ಯವಾಗಿಲ್ಲ.

ಕವಿಗಳು ಸಾಹಿತಿಗಳು ಶಬ್ದದಿಂದ ನವರಸಗಳನ್ನು ಹೆಣೆದು ಪೋಣಿಸಿ ಓದುಗರಿಗೆ ನೀಡಿದ್ದಾರೆಯೇ ಹೊರತು ಪ್ರತಿ ಶಬ್ದದಲ್ಲಿ ಅರಿವಿನ ಪ್ರಸಾದವಿದೆ; ಅರಿವಿನ ಅಮೃತವಿದೆ ಅದರಲ್ಲಿ ಬ್ರಹ್ಮರಸವಿದೆ ಎಂದು ಕಂಡು ಹಿಡಿಯಲು ಸಾಧ್ಯವಾಗಿಲ್ಲ.

ಮೊಗ್ಗಿನಲ್ಲಿ ಪರಿಮಳವಿದೆಯೆಂದು ಸಕಲ ತನುಗಳಿಗೂ ಪರಿಚಯವಿದೆ. ಮೊಗ್ಗು ಅರಳಿದ ನಂತರ ಸುಗಂಧದ ವಾಸನೆ ಹೊರಚೆಲ್ಲುತ್ತದೆ. ಗಾಳಿಯ ಮೂಲಕ ಅದು ಎಲ್ಲೆಡೆ ಹಬ್ಬುತ್ತದೆ. ಮೂಗಿನ ಮೂಲಕ ಸುಗಂಧ ಹೀರಿ ತನು ಅರಳುತ್ತದೆ. ಮೊಗ್ಗಿನಲ್ಲಿ ಪರಿಮಳವಿಲ್ಲ;

ಹೂವಿನಲ್ಲಿ ಪರಿಮಳವಿದೆ!

ದೇಹ ಶಬ್ದಗಳನ್ನು ಹೊರಗೆ ಚೆಲ್ಲಿದ ಠಂಕಶಾಲೆ, ತಾನು ಚೆಲ್ಲಿದ ಶಬ್ದಗಳನ್ನು ತಾನೇ ಸುಖದಿಂದ ಕೇಳಿ ಆನಂದಪಡುತ್ತದೆ. ಹಾಗೆಯೇ ದುಃಖದಿಂದ ಕೇಳಿ ಕೆರಳುತ್ತದೆ.

ದ್ರೌಪದಿ ಹೊರಗೆ ಚೆಲ್ಲಿದ ಶಬ್ದಗಳು ಅಣುಬಾಂಬಿನಂತೆ ದುರ್ಯೋಧನನ ದೇಹದಲ್ಲಿ ಸ್ಫೋಟಿಸಿ ಹದಿನೆಂಟು ಅಕ್ಷೋಹಿಣಿ ಸೈನ್ಯದ ಸಾವಿಗೆ ಕಾರಣವಾಯಿತು. ಕೈಕೇಯಿ ಚೆಲ್ಲಿದ ಶಬ್ದಗಳಿಂದಾಗಿ ದಶರಥ ಸತ್ತು ಹೋದ; ರಾಮ ವನವಾಸಕ್ಕೆ ಹೋದ. ಮಡಿವಾಳ ನುಡಿದ ಶಬ್ದಗಳು ರಾಮನ ಕಿವಿಗೆ ಬಡಿದು ಸೀತಾಮಾತೆಯನ್ನು ಕಾಡಿಗೆ ಕಳುಹಿಸಿದ.

ಧ್ಯಾನಾಸಕ್ತ ಬುದ್ಧನಿಗೆ ಮಹಿಳೆಯ ಕಠಿಣ ಶಬ್ದಗಳು ಯಾತನೆಯನ್ನು ಉಂಟು ಮಾಡಲಿಲ್ಲ. ಬದಲಾಗಿ ಶಬ್ದಗಳಲ್ಲಿ ಬಚ್ಚಿಟ್ಟುಕೊಂಡ ಅರಿವಿನ ಪರಿಮಳವನ್ನು ಮಾತ್ರ ಹೀರಿ ಪರಮ ಸುಖವನ್ನು ಅನುಭವಿಸಿ ಹಸನ್ಮುಖನಾದ!

ಮಹಿಳೆ ಚೆಲ್ಲಿದ ಕಠಿಣ ಶಬ್ದಗಳ ಬುರುಡೆಯನ್ನು ಬಿಚ್ಚಿದ ಬುದ್ಧ ಅದರೊಳಗಣ ಅಮೃತವನ್ನು ಪಾನ ಮಾಡಿದ.

ಲೋಕ ಶಬ್ದದೊಳಗೆ ಅಡಿಗಿದೆ. ಹೀಗಾಗಿ ಶಬ್ದದಿಂದ ಸುಖ ಮತ್ತು ದುಃಖಗಳನ್ನು ಮಾತ್ರ ಕೇಳಲು ಬರುತ್ತದೆ ಲೋಕಕ್ಕೆ. ಜ್ಞಾನಿ, ಶಬ್ದದ ಬುರುಡೆ ಬಿಚ್ಚಿ ಅದನ್ನು ಅರಳಿಸಿ, ಅದರೊಳಗಿದ್ದ ಅರಿವಿನ ಪರಿಮಳವನ್ನು ಮಾತ್ರ ಹೀರುತ್ತಾನೆ.

ಮೊಗ್ಗು ತಂತಾನೆ ಅರಳುತ್ತದೆ. ಶಬ್ದ ಹಾಗಲ್ಲ; ಅದನ್ನು ಮೊಗ್ಗಿನಂತೆ ಅರಳಿಸಿ ಕೇಳಬೇಕು. ಹಾಗೆ ಕೇಳಿದಾಗ ಶಬ್ದ ನಪುಂಸಕವಾಗುತ್ತದೆ. 'ಶಬ್ದದೊಳಗಣ ನಿಃಶಬ್ದದಂತೆ' ಎಂಬ ಶರಣರ ಸೂತ್ರ ಶಬ್ದ ಚೆಲ್ಲಿದ ತನುವಿಗೆ ಶಬ್ದ ಕೇಳಿದ ತನುವಿಗೆ ಸರಳವಾಗಿ ಹೊಳೆಯುತ್ತದೆ.

'ಶಬ್ದ ಸುಖಿಗಳು ರೌರವ ನರಕಿಗಳು' ಎನ್ನುವ ಪ್ರಭುಗಳ ಸೂತ್ರ, ಹಾಗೂ 'ಉಸುರುಸುರ ಸರಹಿನೊಳಗಡಗಿಕೊಂಡು ಬೆಳೆವುತಿಪ್ಪುದುಲೋಕ' ಎನ್ನುವ ಸಿದ್ಧರಾಮ ಶಿವಯೋಗಿಗಳ ಸೂತ್ರವೂ ಒಂದೇ ಆಗಿದೆ.

ಶಬ್ದವನ್ನು ಅರಿವಿನ ಪ್ರಸಾದದಿಂದ ಅರಿಯಬೇಕು ಎನ್ನುವ ಉತ್ತರವನ್ನು ನೀಡಿದ್ದಾರೆ. ಶಬ್ದದಲ್ಲಿ ಅರಿವು ಮಾತ್ರ ಇದೆ. ಖಡ್ಗದಂತೆ ಚುಚ್ಚಿಕೊಂಡು ಕೇಳಿದರೆ ಗಾಯವಾಗುತ್ತದೆ. ಮರೆವಿನಿಂದ ಕೇಳಿದರೆ ಸುಖವಾಗುತ್ತದೆ. ಅರಿವಿನಿಂದ ಕೇಳಿದರೆ ನಪುಂಸಕವಾಗುತ್ತದೆ. ಆಗ ಶಬ್ದದಿಂದ ಸುಖ ದುಃಖ ಉಂಟಾಗುವುದಿಲ್ಲ. ಇದು ತನ್ನರಿವು ತನಗೇ ಆದ ಜ್ಞಾನಿಗೆ ಮಾತ್ರ ಸಾಧ್ಯ!

**272**

**ಊರೂರ ಮಧ್ಯದಲಿ ಆತನಿಪ್ಪರಮನೆಯ**
**ಆರು ಅರಿಯರು ಆರು ದ್ವಾರಂಗಳ.**
**ಅಂಗ ಲಿಂಗದಲಿದ್ದು ಸಂಗವಂ ತೊರೆದೀಗ**
**ಸುಸಂಗ ಸಾನಂದವಾದವರರಿಯರು.**
**ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನ**
**ಲಿಂಗವಿಪ್ಪರ ಮನೆ ಈ ಪರಿಯಯ್ಯಾ.**

''ಮುಳ್ಳ ಮೊನೆಯ ಮೇಲೆ ಮೂವತ್ತೆರಡು ಪಟ್ಟಣ. ಆ ಪಟ್ಟಣಕ್ಕೆ ವಿದ್ಯೆ ಇಲ್ಲದ ಅರಸ

ಬುದ್ಧಿ ಇಲ್ಲದ ಪ್ರಧಾನಿ ಆಳುತ್ತಿದ್ದರಯ್ಯಾ. ಆ ಪ್ರಧಾನಿಯ ಹೆಂಡತಿ ತಳ ಇಲ್ಲದ ಕೊಡ ಹೊತ್ತುಕೊಂಡು ನೀರಿಲ್ಲದ ಬಾವಿಗೆ ಹೋಗಿದ್ದಳಯ್ಯಾ. ಆ ಬಾವಿಯ ಮೇಲೆ ಬೇರಿಲ್ಲದ ಗಿಡ ಹುಟ್ಟಿ ರೆಕ್ಕೆಯಿಲ್ಲದ ಪಕ್ಷಿಯೊಂದು ಬಂದು ಕುಳಿತಿತ್ತಯ್ಯಾ'' ಇದು ಶರಣರ ಬೆಡಗಿನ ವಚನ. ದೇಹವನ್ನು ದೇಹದ ಜ್ಞಾನವನ್ನು ದೇಹದ ಬುದ್ಧಿ, ದೇಹದ ಮನವನ್ನು ಕುರಿತು ಹೇಳಿದ ಸೂತ್ರ ಪ್ರಧಾನವಾದ ವಚನ.

ದೇಹವನ್ನು ಊರು, ಪುರ, ದೇಶ, ದೇಹ, ಪುರುಷ, ತನು, ಅಂಗ, ಶರೀರವೆಂದು ಕರೆದಿದ್ದಾರೆ. ಇದಕ್ಕೆ ಆರು ದ್ವಾರಗಳು. ಅರಿವಿನ ಲಿಂಗದಲ್ಲಿಯೇ ಅಂಗವಿದೆ. ಲಿಂಗದ ಸಂಗವನ್ನು ಅಂಗ ತೊರೆದಿದೆ. ಅಂಗವನ್ನು ಆವರಿಸಿದ ಮನ ಅಂಗದ ಸಂಗ ಮಾಡಿರುವುದರಿಂದಾಗಿ ಅಂಗ ಲಿಂಗದ ಸಂಗವನ್ನು ತೊರೆದು ಅಂಗದ ಸಂಗ ಮಾಡಿದೆ.

ಅಂಗ ಲಿಂಗದಲ್ಲಿ ಸಂಗಮವಾಗಿ ಸಾಮರಸ್ಯದಿಂದ ಬೆರೆತ ಸುಸಂಗದ ಸಾನಂದವನ್ನು ಯಾರೂ ಅರಿಯರು. ಅಂಗದಲ್ಲಿಯೇ ಅರಿವಿನ ಲಿಂಗ ಅನಂಗವಾಗಿ ಅಂಗವನ್ನು ಧಾರಣ ಮಾಡಿದೆ. ಹೀಗೆ ಧಾರಣ ಮಾಡಿದ ಅನಂಗವನ್ನು ಅಂಗವನ್ನು ಆವರಿಸಿದ ಮನೋಮಯ ಅನಂಗದ ಮೂಲಕವೇ ಕಂಡುಕೊಳ್ಳಬೇಕಾಗಿದೆ. ಆದರೆ ಮನೋಮಯವಾದ ಅನಂಗ ಅಂಗದ ಜೊತೆಗೆ ಸಂಬಂಧ ಮಾಡಿದೆ. ಅರಿವಿನ ಲಿಂಗದ ಅನಂಗದ ಸುಖ ಮನೋಮಯವಾದ ಅಂಗಕ್ಕೆ ಬೇಡವಾಗಿರುವುದರಿಂದ ಮನಕ್ಕೆ ಸುಸಂಗದ ಸಾನಂದವನ್ನು ಅರಿಯದಾಗಿದೆ.

ಜಗದಲಿರುವ ಅಂಗಗಳೆಲ್ಲ ಅರಿವಿನ ಲಿಂಗಯ್ಯನಿದ್ದ ಮನೆಗಳೇ ಆಗಿವೆ. ಆದರೂ ಆತನಿಪ್ಪ ಮನೆಯನ್ನು ಯಾರೂ ಅರಿಯರು. ಅರಿವಿನ ಪರಿಮಳವನ್ನೇ ಸದಾ ಹೊರಚೆಲ್ಲುವ ಮನೆ ಮುಳ್ಳಿನ ಮನೆಯಾಗಿ ಪರಿವರ್ತನೆಯಾಗಿದೆ. ಈ ಮುಳ್ಳಿನ ಮೊನೆಯ ಮೇಲೆ ಪುನಃ ಮೂವತ್ತೆರಡು ಪಟ್ಟಣಗಳು ಹುಟ್ಟಿಕೊಂಡಿವೆ.

ಅರಿವಿನ ಶಿವನಿದ್ದ ಕಾಯ ಕೈಲಾಸವೇ ಆಗಬೇಕಿತ್ತು. ಆದರೆ ಕಾಯವನ್ನು ಆವರಿಸಿದ ಮನವೇ ಅರಸನಾಗಿದೆ; ಪ್ರಧಾನಿಯಾಗಿದೆ; ಪ್ರಧಾನಿಯ ಹೆಂಡತಿಯ ಪಾತ್ರವನ್ನು ಮನವೇ ಈ ದೇಹಕ್ಕೆ ಹಾಕಿದೆ. ದೇಹದ ಮೂಲಕ ಮನ ಸಂಸಾರ ಮಾಡುತ್ತಿರುವುದರಿಂದ ಆ ಸಂಸಾರದ ಸುಖ ದುಃಖಗಳು ಮನಕ್ಕೆ ಅಪಾರ ಸಂತೋಷವನ್ನುಂಟು ಮಾಡುತ್ತಿರುವುದರಿಂದಾಗಿ ಮನಕ್ಕೆ ಅರಿವಿನ ಶಿವನ ಪರಿಚಯ ಇಲ್ಲವಾಗಿದೆ. ಸುಸಂಗ ಸಾನಂದ ಸುಖವನು ಮನ ಅರಿಯದಾಗಿದೆ.

ಮನ, ತನು, ಅರಿವನು ಹಿಡಿದು ಮನ ಆಲೋಚನೆಗೆ ತೊಡಗಿದರೆ ತನುವಿನ ಕೃತ್ರಿಮ ಸುಖ ದುಃಖಗಳು ತೊಲಗಿ ಪರಮ ಸುಖದ ಅನುಭವವನ್ನು ಸರಳವಾಗಿ ಪಡೆಯಬಹುದು ಎನ್ನುವ ಸ್ವಯಂ ಕೃಷಿಯನ್ನು ಸಿದ್ಧರಾಮ ಶಿವಯೋಗಿಗಳು ಸಕಲ ಓದುಗ ತನುಗಳಿಗೆ ಸೂತ್ರ ರೂಪದಲ್ಲಿ ಈ ವಚನದ ಮೂಲಕ ನೀಡಿದ್ದಾರೆ.

**273**

**ಎಂಟಕ್ಕೆ ಗಂಟಾಗಿ ನಂಟನ ತಾಯಿ ನಮ್ಮೂರಿಗೆ ಹೋದಳು.**
**ಅರಸುಗಳೈವರು ಅರಸಿಯ ಮುದ್ದಾಡ ಹೋದರು.**
**ರೂಪುಳ್ಳ ಹೆಂಡತಿ ಕಂಡಡೆ ಏನೆಂದೂ:**
**ನಮ್ಮ ಕಪಿಲಸಿದ್ಧ ಮಲ್ಲಿನಾಥ ಉಂಬಡೆ ಓಗರವಿಲ್ಲವೆಂದನು.**

ಅರಸುಗಳು ಐವರು ಅರಸಿಯ ಮುದ್ದಾಡ ಹೋದರು:

ಪಾಂಡವರ್ಶೈವರಿಗೆ ಒಬ್ಬಳೆ ಅರಸಿ. ಅರಸರು ಐದು ಜನ! ಈ ಐವರು ಅರಸರಿಗೆ ದ್ರೌಪದಿಯೊಬ್ಬಳೆ ಅರಸಿ. ವ್ಯಾಸ ಮಹರ್ಷಿ ಮಹಾಭಾರತವನ್ನು ಅದ್ಭುತವಾಗಿಯೇ ಸೃಷ್ಟಿಸಿದ್ದಾನೆ. ಒಂದು ದೇಹವನ್ನೇ ದೇಶವನ್ನಾಗಿಸಿದ್ದಾನೆ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿ ಐದು ಜನ ಅರಸರನ್ನು ಸೃಷ್ಟಿಮಾಡಿದ್ದಾನೆ. ಆ ಐದೂ ಜನರಿಗೆ ಮನವೆಂಬ ಒಬ್ಬಳೇ ಒಬ್ಬ ಅರಸಿಯನ್ನು ಸೃಷ್ಟಿ ಮಾಡಿ ಐದು ಜನ ಅರಸರೊಂದಿಗೆ ಮದುವೆ ಮಾಡಿದ್ದಾನೆ.

ವ್ಯಾಸ ಮಹರ್ಷಿಗಳು ಸೂಚಿಸಿದ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ನಾಲ್ಕು ಸಾಲಿನಲ್ಲಿಯೇ ಹೆಣೆದಿದ್ದಾರೆ. ಒಂದು ದೇಹದಲ್ಲಿಯೇ ಅಷ್ಟಮದಗಳ ನಂಟಿನ ತಾಯಿಯನ್ನು, ಐದು ಅರಸರು ಹಾಗೂ ಅರಸರಿಗೆ ಮನವೆಂಬ ಅರಸಿಯನ್ನು ಸೃಷ್ಟಿಮಾಡಿದ್ದಾರೆ. ಅರಸ ಅರಸಿಯೊಂದಿಗೆ ಅಷ್ಟಮದಗಳನ್ನು ಉಂಡು ಪ್ರಸಾದವನ್ನಾಗಿ ಮಾಡಿಕೊಳ್ಳುವ ಅರಿವಿನ ಮಲ್ಲಯ್ಯನನ್ನು ಕೂಡಾ ಸೃಷ್ಟಿಸಿದ್ದಾರೆ.

ವ್ಯಾಸ ಮಹರ್ಷಿಗಳು ಜಾಣರಾದರೆ ಸಿದ್ಧರಾಮ ಶಿವಯೋಗಿಗಳು ಜಾಣರ ಜಾಣ. ಬಲು ಜಾಣ!

ಕಣ್ಣಲ್ಲಿ ನೋಡುವ ಜ್ಞಾನವಿದೆ. ಮನ ದೃಶ್ಯವಾಗಿ ಕಣ್ಣನ್ನು ಆವರಿಸಿ ನೋಡುವ ಅರಿವಿನ ಕಣ್ಣಿಗೆ ತನ್ನ ಮರೆವಿನ ವಸ್ತ್ರ ಚೆಲ್ಲಿ ಮರೆವಿನ ಕಣ್ಣಿನಿಂದ ನೋಡುತ್ತದೆ. ಮರೆವಿನ ಅರಸಿ ಅರಿವಿನ ಅರಸನನ್ನು ನೋಡಲು ಬಿಡದೆ ಮರೆವಿನ ಕಣ್ಣಿನಿಂದ ನೋಡುತ್ತಾಳೆ. ಹೀಗೆ ನೋಡುವ ಅರಸಿಯ ಕಣ್ಣು ಕುರುಡು! ಅದಕ್ಕೆ ಸತ್ಯ ನೋಡಲು ಬರುವುದಿಲ್ಲ. ನೋಡುವುದೆಲ್ಲ ಬರೀ ಸುಳ್ಳು ಮಾತ್ರ.

ಮನ ಹೀಗೆ ಪಂಚ ಜ್ಞಾನೇಂದ್ರಿಯಗಳೆಂಬ ಅರಸರೊಂದಿಗೆ ಅರಸಿಯಾಗಿ ಸಂಬಂಧ ಬೆಳೆಸಿ ಅಜ್ಞಾನದ ಮುತ್ತನಿಕ್ಕಿ ಮತ್ತು ಬರಿಸುತ್ತಾಳೆ. ಮನದ ಮತ್ತಿನ ಮುತ್ತಿಗೆ ದೇಹ ಬಲಿಯಾಗುತ್ತದೆಯೇ ಹೊರತು ದೇಹದೊಳಗೆ ಸಂಗಮವಾದ ಅರಿವಿನ ಮಲ್ಲಯ್ಯನಲ್ಲ!

ಸಕಲ ಅಜ್ಞಾನವನ್ನು ಉಂಡು ಜೀರ್ಣಮಾಡಿಕೊಳ್ಳುವ ಶಕ್ತಿ ಜ್ಞಾನಕ್ಕಿದೆ. ಹೀಗೆ ಮನಕ್ಕೆ ದೇಹದ ಐದು ಜ್ಞಾನೇಂದ್ರಿಯಗಳು ಉಪನ್ಯಾಸ ಮಾಡಿದರೂ ಮನದ ಅಜ್ಞಾನದ ಕೆಲಸ ನಿಲ್ಲುವುದಿಲ್ಲ. ಮನಕ್ಕೆ ಜ್ಞಾನದ ಸುಖ ಗೊತ್ತಾದಾಗ ದೇಹದೊಂದಿಗೆ ಹೊರಗಿನ ಸುಖ ಅನುಭವಿಸುವುದು ಬಿಟ್ಟು ಜ್ಞಾನದೊಂದಿಗೆ ಸುಖಿಸುತ್ತದೆ. ಜ್ಞಾನದಲ್ಲಿಯೇ ಸಂಗಮವಾಗಿ ಜ್ಞಾನಿಯೇ ತಾನಾಗುತ್ತದೆ.

**274**

**ಎಂಟು ಬೆಟ್ಟದ ಮೇಲೆ ಸುಡೆಯರು ಬಂದು,**
**ನಂಟುಗಂಡೆವೆಂದು ವರ್ಗಂಗಳಾ**
**ಕಂಠಸ್ವರದಿಂದರೆ ಮಧುರಗೀತವ ಮಾಡೆ,**
**ನಂಟು ಮುರಿಯಿತ್ತೀಗ ಈ ಪರಲೋಕ,**
**ತನುತ್ರಯದ ಮಲತ್ರಯವ ಸುಟ್ಟು**
**ಲಿಂಗತ್ರಯವ ನೆಲೆಗೊಳಿಸಿದಾತ**
**ಗುರು ಕಪಿಲಸಿದ್ಧ ಮಲ್ಲಿಕಾರ್ಜುನ.**

ತನು ಒಂದೇ ಆದರೂ ಸಾತ್ವಿಕ ವೇಷವನ್ನು ಹಾಕಿ ಸಾತ್ವಿಕ ತನು ಎಂದು ಕರೆಯಿಸಿಕೊಳ್ಳುತ್ತದೆ. ರಾಜಸ ವೇಷ ಹಾಕಿ ರಾಜಸ ತನು ಎಂದು ಕರೆಯಿಸಿಕೊಳ್ಳುತ್ತದೆ. ತಾಮಸ ವೇಷಧರಿಸಿ ತಾಮಸಿಗ ಎಂದು ಕರೆಯಿಸಿಕೊಳ್ಳುತ್ತದೆ.

ತನು ಸಾತ್ವಿಕನೂ ಅಲ್ಲ; ರಾಜಸಿಗನೂ ಅಲ್ಲ; ತಾಮಸಿಗನು ಕೂಡಾ ಅಲ್ಲ. ತನುವೆಂಬುದು ತ್ರಿಗುಣಗಳಿಗೆ ಅತೀತವಾದುದು. ತನುವಿನಲ್ಲಿ ಅರಿವಿನ ಲಿಂಗ ತನ್ಮಯವಾಗಿರುವುದರಿಂದ ಅರಿವಿನ ಲಿಂಗಯ್ಯ ವಾಸಮಾಡಿದ ಅಂಗ. ಅದು ಲಿಂಗಾಂಗ!

ಲಿಂಗಯ್ಯ ವಾಸ ಮಾಡಿದ ಅಂಗವನ್ನು ಶರಣರು ಲಿಂಗಾಂಗವೆಂದು ಕರೆದರು. ಅಂಗವನ್ನು ಆವರಿಸಿದ ಮನ, ಅಂಗದ ನಂಟು ಬಿಟ್ಟು ಅರಿವಿನ ಲಿಂಗಯ್ಯನಿಗೆ ಶರಣು ಹೋದಾಗ ಶರಣು ಶರಣಾರ್ಥಿ ಎನ್ನುವ ಮಧುರ ಗೀತೆ ಕಂಠದಿಂದ ತನಗೆ ತಾನೆ ಹೊರಬರುತ್ತದೆ. ಇದಕ್ಕೂ ಮುನ್ನ ಅಂಗವನ್ನು ಆವರಿಸಿದ ಮನದಿಂದಾಗಿ ಅಂಗದಲ್ಲಿ ಅಷ್ಟಮದಗಳು ಹುಟ್ಟಿ ಲಿಂಗಯ್ಯನ ಅಂಗವನ್ನೇ ಸುಡುತ್ತವೆ. ಹೀಗೆ ಸುಡುವ ಮನವೆಂಬ ಊಸರವಳ್ಳಿಯ ನಂಟು ಮುರಿದಾಗ ಇಹಲೋಕಕ್ಕೆ ಹತ್ತಿರವಾದ ತನುವೇ ಪರಲೋಕವೆಂದು ಕರೆಯಿಸಿಕೊಳ್ಳುತ್ತದೆ.

ತನುತ್ರಯದ ಮಲತ್ರಯಗಳು ಸುಟ್ಟು ತನುತ್ರಯದಲ್ಲಿ ಲಿಂಗತ್ರಯವೆಂಬ ಅರಿವಿನ ಲಿಂಗವೇ ನೆಲೆಗೊಳ್ಳುತ್ತದೆ. ಹಾಗೆ ನೆಲೆಗೊಂಡ ಅಂಗವೇ ಲಿಂಗಾಂಗವೆಂದು ಕರೆಯಿಸಿಕೊಳ್ಳುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನದೇವ ವಾಸ ಮಾಡಿದ ಕಾಯ ಕೈಲಾಸವೇ ಆಗುತ್ತದೆ.

**275**

**ಎಂಟು ಮೂರ್ತಿಯಲ್ಲಾದ ಆನಂದ ತಾ ನೀನಲ್ಲ**
**ಎಂಟರಂತಿಪ್ಪೆ ಎಲೆ ಸದ್ಬೋಧದಾ**
**ಮೂರರಲಿ ಭವಿಸೀಗ, ಆರರಲಿ ಪ್ರಭವಿಸಿ**
**ಆರಾರನತಿಗಳೆದ**
**ಶುದ್ಧ ರೂಪ ಮೀರಿಪ್ಪ ಸೀಮೆಯಲಿ**
**ತಾನೊಂದು ರೂಪಾಗಿ ತೋರಿಪ್ಪ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಎಂಟರಂತಿಪ್ಪೆ. ಆ ಎಂಟು ನೀನಲ್ಲ! ಉತ್ತಮ ಕುಲದಲ್ಲಿ ಹುಟ್ಟಿದೆ ಎಂಬ ಸಂತೋಷದ ಮದ ನಿನಗೆ ಬೇಡ. ಆ ಮದದಿಂದ ಆನಂದಪಡುವ ಮೂರ್ತಿ ನೀನಲ್ಲ. ಛಲಮದ, ಧನಮದದ ಆನಂದವೂ ನೀನಲ್ಲ. ರೂಪಮದ ಯೌವ್ವನದ ಮದವೂ ನಿನಗೆ ಒಳ್ಳೆಯದಲ್ಲ. ಅದು ಶಾಶ್ವತವೂ ಅಲ್ಲ. ವಿದ್ಯಾಮದ, ರಾಜಮದವನ್ನೂ ತುಳಿದು ನಿಂತು ಒಮ್ಮೆ ನಿನ್ನನ್ನು ನೀನೇ ನೋಡು; ನಿನ್ನ ಸ್ವಸ್ವರೂಪವೇನು ಎನ್ನುವುದು ನಿನಗೇ ತಿಳಿಯುತ್ತದೆ. ಹಾಗೆಯೇ ತಪೋಮದ ಎನ್ನುವುದು ನಿನ್ನಿಂದಲೇ ನಿನ್ನ ತಪದಿಂದಲೇ ಉಂಟಾದ ಭ್ರಮೆ. ಅದು ಕೂಡಾ ನೀನಲ್ಲ. ಆದರೂ ಅಷ್ಟಮದಗಳಿಂದ ಸುಖಿಸಿ ಆನಂದ ಹೊಂದುವಿ.

ಸಾತ್ವಿಕನೂ ನೀನಲ್ಲ. ರಾಜಸನೂ ನೀನಲ್ಲ. ತಮೋಗುಣದವನೂ ನೀನಲ್ಲ. ಇವು ನಿನಗೆ ಮೃತ್ಯು. ನೀನು ತ್ರಿಗುಣಗಳಿಗೆ ಅತೀತನು. ಹೀಗಾಗಿ ನಿನ್ನನ್ನು ತ್ರಿಗುಣಾತೀತಂ, ತ್ರಿನೇತ್ರಂ ಎಂದು ಕರೆಯುವರು.

ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳೆಂಬ ಅರಿಷಡ್ವರ್ಗಗಳನ್ನು ದಾಟಿದ ಭಕ್ತ ನೀನು. ತನುವಿನಲ್ಲಿಯೇ ತನ್ಮಯವಾದ ಮಹೇಶ್ವರನಿಗೆ ಭಕ್ತನಾದವನು ನೀನು. ಪ್ರಸಾದಿ ಪ್ರಾಣಲಿಂಗಿ ನೀನು. ನಿನ್ನ ಜ್ಞಾನಕ್ಕೆ ನೀನೇ ಶರಣು ಹೋದ ಶರಣ ನೀನು. ನಿನ್ನ ಜ್ಞಾನದಲ್ಲಿಯೇ ಐಕ್ಯನಾಗಿ ಷಟಸ್ಥಲ ಚಕ್ರವರ್ತಿ ಎನ್ನಿಸಿಕೊಂಡ ಮಹಾವೀರ ನೀನು.

ಆರಾರು ಮೂವತ್ತಾರು ತತ್ವವನತಿಗಳೆದ ಶುದ್ಧರೂಪ ನೀನು. ನೀನು ಹಾಕಿಕೊಂಡ ಸೀಮೆಯನು ನೀನೇ ಮೀರಿ ನಿಂತು ನಿಸ್ಸೀಮನೆನ್ನಿಸಿಕೊಂಡ ಧೀರ ನೀನು.

ಇವೆಲ್ಲವನು ಒಳಗೊಂಡು ಲಿಂಗಾಂಗವೆನ್ನಿಸಿಕೊಂಡು ಒಂದು ರೂಪಾಗಿ ತೋರಿಪ್ಪ ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು.

ಇದು ನಿನ್ನ ದರ್ಶನ. ನಿನಗೆ ನೀನೇ, ನಿನ್ನನ್ನು ನೀನೇ ನೋಡಿಕೊಂಡು ಅನಂದಪಡುವ ಪರಮದರ್ಶನ. ನಿನ್ನನ್ನು ನೀನೇ ನೋಡಿಕೊಳ್ಳುವ ವಿರಾಟದರ್ಶನ. ನಿನ್ನ ದರ್ಶನ ನಿನಗಾದರೆ, ಜಗದ ದರ್ಶನವೇ ನಿನಗಾಗುವುದು. ಲಿಂಗದಲ್ಲಿಯೇ ಜಗತ್ತು ಸಂಗಮವಾದ ವಿರಾಟದರ್ಶನದ ಸುಖ ನಿನಗಾಗುವುದು.

**276**

**ಎಂಟು ಹದಿನಾರೆಂಬ ಬಲೆಯನೊಡ್ಡಿ**
**ಚೆನ್ನಮೃಗವೆಂಬ ಕಂಗಳ ಬೇಟೆ ಎಸುವೆನಯ್ಯಾ.**
**ವಿಂಧ್ಯವನದೊಳಗೆ ಓ ಓ ಎಂದೆನುತಲಯಿದರೆ ಎಸುವೆನಯ್ಯಾ.**
**ಕಪಿಲಸಿದ್ಧ ಮಲ್ಲಿಕಾರ್ಜುನ ಎಯ್ದೆ ಬಾಣಕ್ಕೆ ಎಯ್ದೆ**
**ಗುರಿಯಾಗದ ಮುನ್ನ ಎಯ್ದುವೆ**
**ದಶಮುಖ ರಾಮತಂದೆ ಎಸುವೆನಯ್ಯಾ.**

ಸೀತಾಮಾತೆ ಮಾಯಾ ಮೃಗಕ್ಕೆ ಬಲಿಯಾದಂತೆ, ಜಗದ ಸಕಲ ತನುಗಳು ಮನವೆಂಬ ಮಾಯಾ ಮೃಗಕ್ಕೆ ಬಲಿಯಾಗಿವೆ. ಮನ ತನ್ನ ಮಾಯಾ ಜಾಲದ ಬಲೆ ಬೀಸಿ ಆ ಬಲೆಯೊಳಗೆ ತನುವನ್ನು ಕೆಡವಿ ತನ್ನ ಕೈವಶ ಮಾಡಿಕೊಂಡು ತನ್ನ ಇಚ್ಛೆಬಂದಂತೆ ಮನ ತನುವಿನ ಮೂಲಕ ಸುಖಿಸುತ್ತದೆ.

ಅಂಗ ಲಿಂಗಯ್ಯನಿದ್ದ ಕ್ಷೇತ್ರ. ಅದು ಕೈಲಾಸ. ಕಾಯವನ್ನೆ ಕೈಲಾಸ ಎಂದು ಕರೆದರು ಶರಣರು. ಇಂತಹ ಕಾಯವೆಂಬ ಕೈಲಾಸಕ್ಕೆ ಅಜ್ಞಾನದ ಬಲೆ ಬೀಸಿ, ಮನವೆಂಬ ಮಾಯಾಮೃಗ ತನ್ನ ವಶಮಾಡಿಕೊಂಡಿದೆ.

ಕಣ್ಣೊಳಗೆ ಮುಕ್ಕಣ್ಣನ ಕಣ್ಣಿದೆ. ಮುಕ್ಕಣ್ಣನ ಕಣ್ಣ ಬೆಳಕು ಕಣ್ಣ ಮೇಲೆ ಬಿದ್ದು ನೆರಳಾಗಿ ಕರಿನೆರಳಾಗಿ, ಆ ಕರಿನೆರಳೇ ಮಾಯಾಮೃಗವಾಗಿ ಕಾಣುವ ಕಣ್ಣನ್ನೇ ಕಾಣದಂತೆ ಮಾಡಿದೆ.

ಭಗವಂತನೇ ಬೇಡವಾದ ಈ ಅಜ್ಞಾನದ ಕಣ್ಣನ್ನು ಕಣ್ಣಪ್ಪನಿಂದ ಕಿತ್ತಿಕೊಂಡ. ಮುಕ್ಕಣ್ಣನೇ ನಿನ್ನ ದಯದಿಂದ, ನೀನು ಕೊಟ್ಟ ಜ್ಞಾನದ ಬಾಣವನು ಎಸೆದು ಮನವೆಂಬ ಮಾಯಾ ಮೃಗದ ಬೇಟೆಯನಾಡುವೆನು. ಆ ಬಾಣದ ಎಸೆತಕ್ಕೆ ಸಿಲುಕಿ ಓ ಓ ಎಂದೆನುತ ಗಾಯವಾಗದೆ ರಕ್ತ ಸುರಿಯದೆ ನಿನ್ನಿಂದ ಹುಟ್ಟಿದ ಮಾಯಾಮೃಗ ನಿನ್ನಲ್ಲಿಯೇ ಒಂದಾಗಿ ನಿನ್ನಂತಾಗುವುದು ಪ್ರಭುವೆ.

ಎಸೆದ ಬಾಣಕ್ಕೆ ಗುರಿಯಾಗದ ಮುನ್ನ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ

ಒಂದಾಗುವುದು. ನಿನ್ನ ಬೆಳಕಿನಿಂದ ಹುಟ್ಟಿದ ಮಾಯಾಮೃಗ ನೀನು ವಾಸಮಾಡಿದ ಕೈಲಾಸದಲ್ಲಿಯೇ ಸಂಗಮವಾಗಿ ನಿನ್ನಂತಾಗುವುದು.

**277**

**ಎಂತು ಮಾಯಾಸುಖವ ಸಂತತಂ ಗೆಲುವಾತ**
**ನಿಶ್ಚಿಂತನಕ್ಕು ತಾನಿಹ ಪರದಲಿ.**
**ಸಂತತ ನಿಶ್ಚಿಂತನಪ್ಪಾತ**
**ಕಪಿಲಸಿದ್ಧ ಮಲ್ಲಿಕಾರ್ಜುನ ತಾನಪ್ಪನು.**

ತನುವನ್ನು ಕಿತ್ತಿ ತಿನ್ನುವ ಮಾಯಾಸುಖವೊಂದುಕಡೆ. ತನುವನ್ನು ಸದಾ ಪರಮಸುಖದಿಂದ ತೃಪ್ತಿಪಡಿಸುವ ಪರಶಕ್ತಿ ಮತ್ತೊಂದು ಕಡೆ. ಈ ಎರಡೂ ಶಕ್ತಿಗಳನ್ನು ಅರಿಯದೆ ತನಗೆ ತಾನೇ ಸಹಜವಾಗಿರುವ ತನುವಿನ ಸಹಜ ಶಕ್ತಿ ಕೂಡಾ ತನುವಿನಲ್ಲಿ ಇದೆ.

ತನುವನ್ನು ಆವರಿಸಿದ ಮನವೆಂಬ ಮಾಯಾಶಕ್ತಿಯನ್ನು ತನುವಿನಲ್ಲಿಯೇ ಇರುವ ತನುವಿನ ಸಹಜ ಶಕ್ತಿಯನ್ನು ತನುವಿಗೆ ತೋರಿಸುತ್ತಾ ತನುವಿನಲ್ಲಿಯೇ ಸಂಗಮವಾದ ಪರಶಕ್ತಿಯೆಂಬ ಜ್ಞಾನಶಕ್ತಿ ಇದ್ದರೂ, ತನುವಿಗೂ, ಮನಕ್ಕೂ ಹೊಳೆಯದಂತಹ ವ್ಯವಸ್ಥೆ ತನುವಿಗೆ ಬಂದೊರಗಿರುವುದು ತನುವಿನ ದುರ್ದೈವವೇ ಸರಿ.

ತನುವಿಗೆ ಮುಸುಕಿರುವ ಮಾಯಾಶಕ್ತಿಯನ್ನು ಕಿತ್ತೆಸೆಯುವಂತೆ ತನುವಿನಲ್ಲಿಯೇ ಸಂಗಮವಾದ ಜ್ಞಾನಶಕ್ತಿ ತನುವಿಗೂ ತನುವನ್ನು ಆವರಿಸಿದ ಮನಕ್ಕೂ ಹಗಲಿರುಳೆನ್ನದೆ ಬೋಧಿಸಿದರೂ ತನುವಿಗೆ ತಿಳಿಯದಾಗಿದೆ. ತನುವನ್ನು ಆವರಿಸಿದ ಮನಕ್ಕೂ ತಿಳಿಯದಾಗಿದೆ.

ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ತನುವೇ ಧಾರಣೆ ಮಾಡಿಕೊಂಡು; ತನುವನ್ನು ಆವರಿಸಿದ ಮನ ತನುವಿನ ಜ್ಞಾನಕ್ಕೆ ಸೋತು ಶರಣುಹೋಗಿ ಶರಣಾಗತವಾದಾಗ ತನು ಸಂಪೂರ್ಣ ನಿಶ್ಚಿಂತನಾಗುವುದು.

ತನುವನ್ನು ಅಜ್ಞಾನ ಆವರಿಸಿಕೊಂಡಿದೆ; ತನುವಿನಲ್ಲಿ ಜ್ಞಾನ ಸಂಗಮವಾಗಿದೆ. ತನ್ನನ್ನು ತಾನು ಅರಿಯದ ಸ್ಥಿತಿ ತನುವಿಗೆ ಬಂದೆರಗಿದೆ. ಹೀಗಾಗಿ ತನು ನರಕ ಸಾದೃಶವಾದ ಅಜ್ಞಾನವನ್ನು ಸದಾ ಅನುಭವಿಸುತ್ತಾ ತನ್ನ ಆಯುಷ್ಯವನ್ನು ಕಳೆಯುತ್ತದೆ.

ಓದಲು ಬರೆಯಲು ಕೇಳಿ ತಿಳಿಯಲು ತನುವಿಗೆ ಬಂದರೂ ಕೂಡಾ, ಈ ಸುಖವನ್ನು ಮನವೇ ಅನುಭವಿಸಿ ತನುವಿಗೆ ತಲುಪದ ವ್ಯವಸ್ಥೆಯನ್ನು ಮನ ಕೈಗೊಂಡಿದೆ. ಮನವೇ ಓದಿ ತನುವಿಗೆ ಪಂಡಿತನ ವೇಷ ಹಾಕುತ್ತದೆ. ಮನವೇ ಓದಿ ತನುವಿಗೆ ಶಾಸ್ತ್ರಿಯ ವೇಷ ಹಾಕುತ್ತದೆ. ಮನವೇ ಓದಿ ತನುವಿಗೆ ಗುರುವಿನ, ಜಗದ್ಗುರುವಿನ ವೇಷ ಹಾಕುತ್ತದೆ. ಆದರೆ ತನುವಿನಲ್ಲಿಯೇ ಇದ್ದ ಜ್ಞಾನಸುಖವನ್ನು ಅನುಭವಿಸಿ ಸಹಜ ಜ್ಞಾನಿಯಾಗದೆ ಕಣ್ಮುಚ್ಚುತ್ತದೆ.

''ತನ್ನ ತಾನರಿಯದ ಮುನ್ನ ತನ್ಮಯವಾದ ಅರಿವು. ತನ್ನ ತಾನರಿದ ಬಳಿಕ ಅರಿವು ತನ್ಮಯವೆಂದು ಅರಿತ ಅರಿವು. ತನ್ನಲ್ಲಿರುವ ಅರಿವಿನ ಇರುವೇ ಕರಿಗೊಂಡ ಬಳಿಕ ತಾನೇ ಸೌರಾಷ್ಟ್ರ ಸೋಮೇಶ್ವರಾ''

ತನ್ನನ್ನು ತಾನೇ ಅರಿತು, ತನುವಿಗೆ ಅಂಟಿದ ಮಾಯಾಸುಖವನ್ನು ಗೆದ್ದು ನಿಶ್ಚಿಂತನಾದವನು ಇಹದಲ್ಲಿಯೂ ಸುಖಿ; ಪರದಲ್ಲಿಯೂ ಸುಖಿ. ತನುವಿನಲ್ಲಿರುವ ಆ ಅರಿವೇ

ಕರಿಗೊಂಡು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುವನು ಎಂದು ಸಿದ್ಧರಾಮ ಶಿವಯೋಗಿ ಹೇಳಿದುದನ್ನೇ ಗುಜರಾತಿನ ಆದಯ್ಯ ಶರಣರು ಕೂಡಾ ಹೇಳಿದ್ದಾರೆ.

**278**

**ಎಂತೆಂತು ನೋಡಿದಡೀ ಮನವು ಸಂತವಿಡಲೀಯದಯ್ಯಾ.**
**ನಿಮ್ಮಯ ಚಿಂತೆಗೆ ಒಳಗಾಗದೆ ದೆಸೆದೆಸೆವರಿವುದು,**
**ಕಾಮಕಿಚ್ಚೈಸೂದು, ಕ್ರೋಧಕಿಚ್ಚೈಸೂದು,**
**ಆಮಿಷ ತಾಮಸಕ್ಕೆ ತಾನೆ ಮುಂದಾಗಿಪ್ಪುದು.**
**ಇದ ಮೂಲನಾಶವ ಮಾಡೆ ನೀ ಮುಂದಾಗಯ್ಯ ತಂದೆ.**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಮನ ತನುವನ್ನು ಕಾಮಕ್ಕಾಗಿ ಬಳಸುವುದು. ಕ್ರೋಧಕ್ಕಾಗಿ ಬಳಸಿ ತನುವಿನಲ್ಲಿ ಕಿಚ್ಚು ಸೃಷ್ಟಿ ಮಾಡುವುದು. ತನುವನ್ನು ಮನ ಲೋಭ ಮೋಹ ಮದ ಮತ್ಸರಗಳಿಗಾಗಿ ಬಳಸುವುದು. ಮನ ತನುವಿಗೆ ಹಲವಾರು ಆಮಿಷಗಳನ್ನು ಒಡ್ಡಿ ತಾಮಸಕ್ಕೆ ಒಳಪಡಿಸುವುದು.

ಹೇಗೆ ನೋಡಿದರೂ ಕೂಡಾ ಮನದ ಉಪಟಳ ಅಧಿಕವಾಗಿದೆಯೇ ಹೊರತು ಮನದಿಂದಾಗಿ ತನು ಎಂದೂ ಸಂತಸವನ್ನು ಕಾಣುವುದಿಲ್ಲ.

ಮನ ಇಲ್ಲದ ವಸ್ತು. ತನು ಇದ್ದ ವಸ್ತು. ಇಲ್ಲದ ವಸ್ತು ಇದ್ದ ವಸ್ತುವನ್ನು ದುಃಖಕ್ಕೆ ಈಡು ಮಾಡುತ್ತಲಿದೆ. ಮನ ಅರಿವೆಂಬ ಗುರುದೇವನ ಬೆಳಕಿನಿಂದ ಹುಟ್ಟಿದ ಕತ್ತಲು. ಅಜ್ಞಾನವೆಂಬ ಕತ್ತಲಾಗಿ ಮನವೆಂಬ ಹೆಸರನ್ನು ಪಡೆದು ತನುವನ್ನು ಆವರಿಸಿಕೊಂಡಿದೆ.

ಕತ್ತಲಲ್ಲಿ ಬಿದ್ದ ವಸ್ತುಗಳನ್ನು ಕತ್ತಲು ಹೇಗೆ ನುಂಗಿ ತನ್ನ ಕರಿನೆರಳನ್ನು ವಸ್ತುವಿನ ಮೇಲೆ ಚೆಲ್ಲಿ ಆ ವಸ್ತುವನ್ನು ಕಾಣದಂತೆ ಮಾಡುತ್ತದೆಯೋ ಹಾಗೆ ಮನ ತನುವನ್ನು ಆವರಿಸಿ, ತನ್ನ ಕರಿನೆರಳನ್ನು ತನುವಿನ ಮೇಲೆ ಚೆಲ್ಲಿ, ತನುವನ್ನು ಕಾಣದಂತೆ ಮಾಡಿದೆ. ಹೀಗೆ ತನುವಿಗೆ ತನುವನ್ನು ಕಂಡರೆ ಸಾಕು ತನುವಿನಲ್ಲಿ ಕ್ರೋಧ ಸೃಷ್ಟಿಯಾಗುತ್ತದೆ. ಕಾಮ ಸೃಷ್ಟಿಯಾಗುತ್ತದೆ. ಮದ ಮತ್ಸರಗಳು ಸೃಷ್ಟಿಯಾಗುತ್ತವೆ. ಆಸೆ ಆಮಿಷಗಳು ಸೃಷ್ಟಿಯಾಗಿ ತಾಮಸಕ್ಕೆ ಬಲಿಯಾಗುತ್ತದೆ.

ಮನವೆಂಬ ಅಜ್ಞಾನದ ನಾಶವನ್ನು ಮನವೇ ಮಾಡಲು ಸಾಧ್ಯವಿಲ್ಲ. ಜ್ಞಾನದಿಂದ ಹುಟ್ಟಿದ ಮನವೆಂಬ ಅಜ್ಞಾನ ಜ್ಞಾನದಿಂದಲೇ ನಾಶವಾಗಬೇಕು. ತನುವಿನಲ್ಲಿಯೇ ಸಂಗಮವಾದ ಜ್ಞಾನವನ್ನು ತನುವನ್ನು ಆವರಿಸಿದ ಮನವೆಂಬ ಅಜ್ಞಾನ ಗುರುವನ್ನಾಗಿ ಸ್ವೀಕರಿಸಬೇಕು. ಹಾಗೆ ಸ್ವೀಕರಿಸಿದರೆ ಮನ ನಾಶವಾಗುತ್ತದೆ. ತನ್ನನ್ನು ತಾನೇ ನಾಶ ಮಾಡಿಕೊಳ್ಳುವುದು ಯಾರಿಗೂ ಬೇಡ. ಅಂದ ಮೇಲೆ ಮನ ಜ್ಞಾನವೆಂಬ ಗುರುದೇವನೊಂದಿಗೆ ಸಂಗ ಮಾಡುವುದಾದರೂ ಹೇಗೆ? ಅದು ಅಸಾಧ್ಯದ ಮಾತು ಆಗಿರುವುದರಿಂದ ಅಲ್ಲೊಬ್ಬ ಇಲ್ಲೊಬ್ಬ ಜ್ಞಾನಿ ಮಾತ್ರ ಉದಯಿಸುತ್ತಾನೆ. ತಂತಾನೇ ಹೊರಗೆ ಬರುತ್ತಾನೆ. ತನ್ನ ಅಜ್ಞಾನದ ನಾಶ ತಾನೇ ಮಾಡಿಕೊಳ್ಳುತ್ತಾನೆ.

ತನುವಿನ ಅಜ್ಞಾನದ ನಾಶ ಮಾಡಿಕೊಳ್ಳುವ ಸೂತ್ರವನ್ನು ತನುವಿಗೆ ಹೇಳುತ್ತಾನೆ. ತನುವನ್ನು ಆವರಿಸಿದ ಮನ, ಜ್ಞಾನಿ ಹೇಳಿದ ಸೂತ್ರವನ್ನು ಪಾಲಿಸದೆ ಜ್ಞಾನಿಯನ್ನು ಆರಾಧಿಸುತ್ತದೆ. ಜ್ಞಾನಿಗೆ ಆಲಯವನ್ನು ಸ್ತೂಪವನ್ನು ನಿರ್ಮಿಸಿ ಪುನಃ ಮನ ತನ್ನ ದಟ್ಟವಾದ ಅಜ್ಞಾನವನ್ನು ಮೆರೆಯುತ್ತದೆ.

ಜ್ಞಾನಿ ಬರೆದ ಸೂತ್ರಗಳನ್ನು ಮನ ಉರು ಹೊಡೆದು ಪಂಡಿತ ಶಾಸ್ತ್ರಿ ಆಗುತ್ತದೆಯೇ ಹೊರತು ಜ್ಞಾನಿ ಆಗುವುದಿಲ್ಲ. ಇದು ತನುವಿನ ದುರ್ದೈವ. ಜ್ಞಾನದ ಮಾತು ಕೇಳಿ ಜ್ಞಾನಿ ತಾನಾಗದ ಮನದ ದುರ್ದೈವ.

ಜ್ಞಾನಿಗಳು ಸಾಕಷ್ಟು ಸರಳ ಸೂತ್ರಗಳನ್ನು ರಚಿಸಿದರೂ ಮನ ಜ್ಞಾನಿಯಾಗುವುದಿಲ್ಲ; ಬದಲಾಗಿ ತನುವಿಗೆ ಜ್ಞಾನಿಯಂತೆ ಕಾವಿ ಧರಿಸಿ, ಜ್ಞಾನಿಯೆಂದು ತನುವಿನ ಮೂಲಕ ಫೋಸು ಕೊಡುತ್ತದೆ. ಜ್ಞಾನಿ ಬರೆದ ಸೂತ್ರ ಪ್ರಧಾನವಾದ ಜ್ಞಾನ ಗ್ರಂಥಗಳನ್ನು ಮನ ತನ್ನ ಅಜ್ಞಾನದ ಬಲ ಅಧಿಕಗೊಳಿಸಿಕೊಳ್ಳಲು ಬಳಸಿಕೊಳ್ಳುತ್ತದೆಯೇ ವಿನಃ ಜ್ಞಾನಿಯಾಗಲು ಅಲ್ಲ. ಹೀಗಾಗಿ ಕುರಾನ್, ಭಗವದ್ಗೀತೆ, ಬೈಬಲ್, ತ್ರಿಪಿಟಿಕ, ಗ್ರಂಥಸಾಹೇಬ, ತತ್ವಪದಗಳು, ಕೀರ್ತನೆಗಳು, ವಚನಗಳು ಮನದ ಅಜ್ಞಾನದ ಸುಖಕ್ಕಾಗಿ ಬಳಕೆಯಾಗುತ್ತಿರುವುದು ದುರ್ದೈವದ ಸಂಗತಿಯಾಗಿದೆ.

ಹೇಗೆ ನೋಡಿದರೂ ಮನ ಸಮಾಧಾನಿಯಾಗುತ್ತಿಲ್ಲವಲ್ಲ ಪ್ರಭುವೇ ಮನವನ್ನು ಸೃಷ್ಟಿ ಮಾಡಿದ ತಂದೆಯೇ ಅದನ್ನು ನಾಶ ಮಾಡಲು ನೀನೆ ಮುಂದಾಗು ಎಂದು ಸಿದ್ಧರಾಮ ಶಿವಯೋಗಿಗಳು ಜ್ಞಾನದೇವನನ್ನು ಬೇಡಿಕೊಂಡಿದ್ದಾರೆ.

**279**

**ಎಂದಡಾ ಮಾಯೆಯನು ಕರದಿಂ ತಂದೆ**
**ಇಕ್ಕೆ ಜಾರಿ ಕೆಡುಹುವುದು.**
**ಮಾಯೆ ಆರೂಢವೆಂಬವರ ಏಡಿಸುವುದು.**
**ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನ ಶರಣರಿಗೆ**
**ಅಂಜಿ ನಿಂದಿತು ಮಾಯೆ.**

ಅರಿವು ಇಲ್ಲದ ದೇಹಗಳೇ ಇಲ್ಲ. ಹೀಗಾಗಿ ದೇಹವನ್ನು ಶರಣರು ಅಂಗ ಎಂದು ಕರೆದರು; ಲಿಂಗಾಂಗ ಎಂದು ಕರೆದರು. ಲಿಂಗಾಂಗವೆಂದರೆ ಅರಿವಿನಿಂದ ಭರಿತವಾದ ಅಂಗ. ಅರಿವೆಂದರೆ ವಸ್ತುವಲ್ಲ; ಅವ್ಯಕ್ತ ಗುರುದೇವ. ಆತ ಅಂಗದಲ್ಲಿದ್ದು ಅಂಗದ ಕಣಕಣದಲ್ಲಿದ್ದು ಅಂಗಕ್ಕೆ ಪಾಠ ಮಾಡುವಾತ. ಅಂಗವನ್ನು ಆವರಿಸಿದ ಮಾಯೆಯಿಂದ ಸದಾ ಎಚ್ಚರದಿಂದ ಇರಲು ಅಂಗಕ್ಕೆ ಬೋಧಿಸುವಾತ.

ಆದರೂ ಮಾಯೆಯೆಂದರೆ ಬಲು ಇಷ್ಟ ಅಂಗಕ್ಕೆ. ಅಂಗದಲ್ಲಿದ್ದ ಅರಿವಿನ ಲಿಂಗಯ್ಯನನ್ನು ಪಕ್ಕಕ್ಕಿಟ್ಟು; ಮಾಯೆಯನ್ನು ಕರೆದುಕೊಂಡು ಬಂದು ಕರದಲ್ಲಿಟ್ಟುಕೊಂಡಿದೆ. ಮಾಯೆಯ ಸುಖದ ರೂಢಿಗೆ ಅಂಗ ಒಳಗಾಗಿದೆ.

ನೋಡಿ, ಕ್ಷಣ ಕ್ಷಣಕ್ಕೂ ಅಜ್ಞಾನದ ಸುಖಕ್ಕೆ ಒಳಗು ಮಾಡುವ, ಕಣ್ಣಲ್ಲಿ ಇದ್ದ ಮಾಯೆಯ ಮಾತನ್ನು ಅಲ್ಲಗಳೆದು, ಕಣ್ಣಲ್ಲಿಯೇ ಪ್ರತ್ಯಕ್ಷವಾಗಿ ಕಣ್ಣಿಗೆ ಅರಿವಿನ ಪಾಠ ಮಾಡುವ ಮುಕ್ಕಣ್ಣನನ್ನು ಅರಿಯದಿದ್ದರೆ ಕಣ್ಣನ್ನು ಆವರಿಸಿದ ಮಾಯೆ ಇಡೀ ದೇಹವನ್ನು ಅಜ್ಞಾನದಲ್ಲಿ ಕೆಡಹುವುದು.

ಕಣ್ಣಿನಿಂದ ನೋಡಿದ ಕಾಮದ ಮಾಯಾ ಸುಖಕ್ಕೆ ಮರುಳಾದ ಅಂಗ ಕಾಮಕ್ಕೆ ಜಾರಿದರೆ ಅಜ್ಞಾನದ ಹಣೆಪಟ್ಟಿ. ನೋಡಿದ ನೋಟ ತಪ್ಪು ಎಂದು ಅಂಗಕ್ಕೆ ಕಣ್ಣಿನಿಂದಲೇ ತಿಳಿಯುತ್ತದೆ. ಕಣ್ಣಲ್ಲಿ ಮಾಯಾನೋಟವೂ ಇದೆ; ಅರಿವಿನ ನೋಟವೂ ಇದೆ ಎಂದು ಕಣ್ಣಿಗೆ

ಹೊಳೆಯುವುದಿಲ್ಲ. ಶರಣರ ಸಂಗ ಮಾಡಿದಾಗ, ಶರಣರು ಕಣ್ಣಿಗೆ ಪಾಠ ಮಾಡುತ್ತಾರೆ. ಕಣ್ಣನ್ನು ಆವರಿಸಿದ ಮಾಯೆಯ ಕೆಲಸವನ್ನು ಕಣ್ಣಿಗೆ ಹೇಳುತ್ತಾರೆ. ಹಾಗೆಯೇ ಕಣ್ಣಲ್ಲಿಯೇ ಸಂಗಮವಾದ ಅರಿವಿನ ಮುಕ್ಕಣ್ಣನ ಕಣ್ಣಿನ ಪರಿಚಯವನ್ನೂ ಕಣ್ಣಿಗೆ ಮಾಡಿಸುತ್ತಾರೆ.

ಕಣ್ಣಿಗೆ ಮಾಯಾ ದೃಶ್ಯವೂ ಪರಿಚಯವಾಗುತ್ತದೆ; ಅರಿವಿನ ದೃಶ್ಯವೂ ಪರಿಚಯವಾಗುತ್ತದೆ.

ಮಾಯಾ ದೃಶ್ಯದಿಂದ ನೋಡಿದರೆ: ಅಂಗ ಹೆಣ್ಣಾಗಿ ಇಲ್ಲ ಗಂಡಾಗಿ ಕಾಣುತ್ತದೆ. ನೋಡುವ ಅಂಗದಲ್ಲಿ ಕಾಮದ ರಸಾಯನ ಹರಿದು ಇಡೀ ದೇಹ ಹಾದರಕಕ್ಕೆ ಒಳಗಾಗುತ್ತದೆ. ಅಂಗ ಅಂಗವನ್ನೇ ಹರಿದು ತಿನ್ನುತ್ತದೆ.

ಅರಿವಿನ ದೃಶ್ಯದಿಂದ ನೋಡಿದರೆ:

ಅಂಗ ಲಿಂಗವಾಗಿ ಕಾಣುತ್ತದೆ. ತನ್ನಂತೆಯೇ ಚರ್ಮದ ಹೊದಿಕೆ ಇರುವ ಅಂಗ. ರಕ್ತ ಮಾಂಸ ಮೂಳೆ ಮಜ್ಜಾ ಮೇದಸ್ಸು ಕೂಡಾ ಒಂದೇ. ಉಗುರು ರೋಮ ಕೂಡಾ ಒಂದೇ. ಹೆಣ್ಣು ಗಂಡು ಎನ್ನುವ ಅಜ್ಞಾನ ಅರಿವಿನ ದೃಶ್ಯದಲ್ಲಿ ಇರುವುದಿಲ್ಲ. ಹೀಗಾಗಿ ಅಜ್ಞಾನದಿಂದ ನೋಡುವ ದೃಶ್ಯವನ್ನು ಅರಿವಿನ ದೃಶ್ಯ ಅಲ್ಲಗಳೆಯುತ್ತದೆ. ಇವೆರಡೂ ಕಣ್ಣಿಗೆ ತಿಳಿಯುವುದರಿಂದ, ಶರಣರು ಕಣ್ಣಿಗೆ ತಿಳಿಸಿ ಹೇಳುವುದರಿಂದಾಗಿ ಕಣ್ಣು ಪ್ರಯೋಗಕ್ಕೆ ಸಿದ್ಧವಾಗುತ್ತದೆ.

ರೂಢಿಗತವಾದ ಮಾಯಾ ದೃಶ್ಯವನ್ನು ಮೆಟ್ಟಿ ನಿಂತ ಕಣ್ಣು ಗುರುದೇವನ ಅರಿವಿನ ದೃಶ್ಯವನ್ನು ಬಳಕೆ ಮಾಡುತ್ತದೆ. ಮಾಯಾಮಯವಾದ ರೂಢಿಯನ್ನು ಮರೆತು ಆರೂಢ ಎನ್ನಿಸಿಕೊಳ್ಳುತ್ತದೆ.

ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನ ಶರಣರಿಗೆ ಅಂಜಿ ನಿಂದಿತು ಮಾಯೆ:

ಸಿದ್ಧರಾಮ ಶಿವಯೋಗಿಗಳು ಸುಂದರವಾದ ಮಾತನ್ನೇ ಹೇಳಿದ್ದಾರೆ. ಸ್ವತಹ ಸಮರ್ಥರಾಗಿದ್ದರೂ ಮಾಯೆಯಿಂದಾಗಿ ಬಳಲುತ್ತಿದ್ದರು. ಅವರ ಮಾಯೆ ಕಳೆಯುವ ಶಕ್ತಿ ಅಲ್ಲಮಪ್ರಭುಗಳಿಗೆ ಇದ್ದರೂ ಕೂಡಾ ಶಿವಯೋಗಿಗಳನ್ನು ಕಲ್ಯಾಣಕ್ಕೆ ಕರೆತಂದರು. ಪಳಗಲು ಶರಣರ ಗರಡಿಯಲ್ಲಿ ಬಿಟ್ಟರು. ಆಗ ಶರಣರು ಅಂಗವನ್ನು, ಅಂಗವನ್ನು ಆವರಿಸಿದ ಮನವೆಂಬ ಮಾಯೆಯನ್ನು ಅಂಗದಲ್ಲಿಯೇ ಸಂಗಮವಾದ ಅರಿವನ್ನು ಮುಟ್ಟಿ ಮುಟ್ಟಿ ತೋರಿದರು. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಶರಣು ಹೋಗಲು ಹೇಳಿದರು.

ಅಂಗವನ್ನು ಆವರಿಸಿದ ಮಾಯೆ, ಅಂಗದಲ್ಲಿಯೇ ಸಂಗಮವಾದ ಕರುಣಾಕರನಿಗೆ ಅಂಜಿ ಆ ಅರಿವಿನ ಮಲ್ಲಯ್ಯನಿಗೆ ಶರಣು ಹೋಯಿತು. ಶರಣು ಶರಣಾರ್ಥಿ ಎಂದು ಅಂಜಿ ನಿಂದಿತು.

**280**

**ಎಂದಡೆ ಅವ್ವೆ ಅತ್ಯತಿಷ್ಯದ್ದಶಾಂಗುಲ ಆನಂದರೂಪ ತಾಳು,**
**ಗುರುವಾಗಿ ಶುದ್ಧದಲ್ಲಿ ತಾನೆ ಬಂದು,**
**ಸಿದ್ಧದಲ್ಲಿ ತಾನೆ ಬಂದು, ಪ್ರಸಿದ್ಧದಲ್ಲಿ ತಾನೆ ಬಂದು,**
**ಎನ್ನ ಮನದ ಮಹಾಕಾಂಕ್ಷೆಯನು ಮಾಣಿಸಿ**
**ಉರುತರ ತಾನೆ ಬಂದು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ**

**ಎನ್ನ ಮನದ ಮಸ್ತಕದಲ್ಲಿ ನೆಲೆಮನೆಯಾದ.**

ಅವ್ವೆ ಎಂದಡೆ ಸಾಮಾನ್ಯಳಲ್ಲ; ಜಗನ್ಮಾತೆ. ಆನಂದ ರೂಪ ತಾಳಿ ಜಗದೀಶನಲ್ಲಿ ಅರ್ಧಾಂಗಿ ಎನ್ನಿಸಿಕೊಂಡವಳು. ಕಾಯವನ್ನೇ ಕೈಲಾಸ ಮಾಡಿ ಶಿವನೊಂದಿಗೆ ಒಂದಾದವಳು. ಅತ್ಯತಿಷ್ಠದ್ದಶಾಂಗುಲ ಎನ್ನಿಸಿಕೊಂಡ; ಜಗದಗಲ ಮುಗಿಲಗಲಕ್ಕೂ ವಿಸ್ತಾರ ಉಳ್ಳ, ಪಾತಾಳದಿಂದಲೂ ಅತ್ತತ್ತ ಬ್ರಹ್ಮಾಂಡದಿಂದಲೂ ಅತ್ತತ್ತ ಚಾಚಿಕೊಂಡ, ಪರಮಾನಂದ ಮೂರ್ತಿಯಾದ ಪರಮಪತಿ ಪರಮೇಶ್ವರನಲ್ಲಿ ಸಂಗಮವಾಗಿ ಪಾರ್ವತಿ ಎಂದು ಕರೆಯಿಸಿಕೊಂಡವಳು.

ಮನವೇ ಮಹಾದೇವಿಯಾಗಿ, ಹಡೆದ ತಾಯಿಯಾಗಿ, ಅವ್ವೆಯಾಗಿ ಜಗದೀಶನಿಗೆ ಅರ್ಧಾಂಗಿಯಾಗಿ ಆತನೊಂದಿಗೆ ಸಂಗವುವಾದುದಕ್ಕಾಗಿ ಕಾಯ ಕೈಲಾಸವೆಂದು ಕರೆಯಿಸಿಕೊಂಡಿತು.

ಅರಿವೆಂಬ ಗುರುದೇವನು ಕೂಡಲೇ ಕಾಯದಲ್ಲಿ ಕಂಡು, ಇಡೀ ಕಾಯವನ್ನು ಕ್ಷಣಾರ್ಧದಲ್ಲಿ ಶುದ್ಧಗೊಳಿಸಿದ. ಪ್ರಸಿದ್ಧಗೊಳಿಸಿದ. ಮನದ ಮಹಾಕಾಂಕ್ಷೆಯನು ಮಾಣಿಸಿ ಮಹಾದೇವನನ್ನಾಗಿಸಿದ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಾಗಿ ಮನದ ಮಸ್ತಕದಲ್ಲಿ ನೆಲೆ ಮನೆಯಾದ.

ಕತ್ತಲಿಗೆ ಬೆಳಕಾಗುವ ಬಯಕೆ ಹುಟ್ಟಿದರೆ ಸಾಕು, ಕೂಡಲೇ ಬೆಳಕಾಗುವುದು. ಬೆಳಕಿನಿಂದ ಹುಟ್ಟಿದ ಬೆಳಕನ್ನು ಮರೆತದ್ದರಿಂದ ಕತ್ತಲು ಎನ್ನಿಸಿಕೊಂಡಿದೆ. ಕತ್ತಲು ಕತ್ತಲನ್ನೇ ಅನುಭವಿಸುತ್ತ ಕತ್ತಲ ಸುಖವನ್ನು ಕಂಡು ಬೆಳಕಿನಿಂದ ದೂರವಾಗಿದೆ. ದೂರವೆಂದರೆ ದೂರವಲ್ಲ; ಬಹುದೂರವೂ ಅಲ್ಲ; ಬೆಳಕಿನ ಬೆನ್ನಿಗೆ ಒರಗಿಕೊಂಡು ಕತ್ತಲಾಗಿದೆ. ಬೆಳಕಾಗುವ ಆಸೆಯಾದರೆ ಸಾಕು ಪುನಃ ಬೆಳಕಿನ ಬೆನ್ನಿಗೆ ಆನಿಕೊಂಡು ಬೆಳಕಾಗುವುದು.

**281**

**ಎಂದಪ್ಪುದಯ್ಯಾ ಶಿವಭಕ್ತಿರಸ?**
**ಎನಗೆಂದಪ್ಪುದಯ್ಯಾ ನಿಮ್ಮ ಕರುಣ?**
**ಕ್ರಿಯಾಕಾರಕ್ಕೆ ತಾನೆ ಮೂಲಿಗನಾದೆ.**
**ಮೊದಲುಗೆಟ್ಟೆನು ಶುದ್ಧಮೂಲದಲ್ಲಿ.**
**ನಿರ್ವಾಣದೀಕ್ಷೆಯಲಿ ಒಯ್ಯನೆ ಮುಖದೋರೆ**
**ಅಯ್ಯಾ ನೀನೆಯ್ದಿಕೊ ಮನ ಮಧ್ಯವ.**
**ಮಥನದಲಿ ಸಂಗಮಿಸಿ ಯಥಾ ಕಥನಕ್ಕೆ ತಾನಾಗಿ**
**ಸದಮಳ ಜ್ಞಾನಕ್ಕೆ ಮಾತೆಯಾಗಿ**
**ಅತಿಶಯದ ರೂಪ ನಿನ್ನ ನೆನಹಿನ ನಿರ್ಮಳದಲ್ಲಿ ಲೀಯ್ಯವಾದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಭ್ರಮಾರಸವು ಇದೆ; ಅರಿವಿನ ಶಿವನ ಭಕ್ತಿರಸವೂ ಇದೆ. ನವರಸಗಳ ಅನುಭವವೇ ಭ್ರಮಾರಸ! ಅದನ್ನು ಸಾಹಿತಿಗಳು ಸಾಹಿತ್ಯಕವಾಗಿ ಬಣ್ಣಿಸುತ್ತಾರೆ. ಕಾಯ, ನವರಸಗಳಲ್ಲಿ ಮಿಂದು ಪ್ರತಿ ನಿತ್ಯ ತೊಪ್ಪನೆ ತೋಯುತ್ತದೆ. ಆದರೆ ಈ ಎಲ್ಲಾ ರಸಗಳು

ಮನದಿಂದಾಗಿ ಕಾಯದಲ್ಲಿ ಉಂಟಾದ ಅಜ್ಞಾನದ ರಸಾಯನಿಕ ಕ್ರಿಯೆಯೆಂದು ಕಾಯಕ್ಕೆ ಗೊತ್ತಾಗುವುದಿಲ್ಲ. ಎಲ್ಲಿಯವರೆಗೆ ಗೊತ್ತಾಗುವುದಿಲ್ಲವೋ ಅಲ್ಲಿಯವರೆಗೂ ಕಾಯ ಭ್ರಮಾರಸವನ್ನು ಅನುಭವಿಸುತ್ತದೆ. ಒಮ್ಮೆ ಸುಳ್ಳೇ ಸುಖಕ್ಕೆ ಒಳಗಾಗಿ ಮತ್ತೊಮ್ಮೆ ಸುಳ್ಳು ದುಃಖಕ್ಕೆ ಒಳಗಾಗುತ್ತಾ ಕಾಯದ ಆಯುಷ್ಯ ಕಳೆದು ಹೋಗುತ್ತದೆ.

ಕಾಯದಲ್ಲಿ ಸಂಗಮವಾದ ಶಿವನ ಭಕ್ತಿರಸ ಕಾಯಕ್ಕೆ ದೊರೆಯುವುದಿಲ್ಲ. ಇಂತಹ ಒಂದು ರಸವಿದೆಯೆಂದು ಎಷ್ಟೋ ಕಾಯಗಳಿಗೆ ಗೊತ್ತಾಗುವುದೇ ಇಲ್ಲ. ಕಾಯ ತಂತಾನೆ ಮಾಗಬೇಕು ಇಲ್ಲ ಮಾಗಿಸಿಕೊಳ್ಳಲು ಅಣಿಯಾಗಬೇಕು. ಆಗ ಮಾತ್ರ ಕಾಯದಲ್ಲಿಯೇ ಬ್ರಹ್ಮರಸವಿದೆ ಎಂದು ಕಾಯಕ್ಕೆ ಗೊತ್ತಾಗುತ್ತದೆ.

ಬ್ರಹ್ಮರಸ ಅಥವಾ ಶಿವನ ಭಕ್ತಿರಸ ಕಾಯಕ್ಕೆ ತನಗೆ ತಾನೇ ಗೊತ್ತಾಗುವುದು ಶಿವನ ಕರುಣೆಯಿಂದ; ಕಾಯದ ಮಾಗುವಿಕೆಯಿಂದ ಇವೆರಡನ್ನೂ ಕಾಯದ ದೈವವೆಂದು ಕರೆಯಬಹುದು. ಅರಿವಿನ ಶಿವನ ಕರುಣೆ ಎಂದು ಕರೆಯಬಹುದು. ಹೀಗೆ ಶಿವನ ಭಕ್ತಿರಸದ ಧಣಿಯ ಮೇದ ಗುರುದೇವನಿಂದ ನಿರ್ವಾಣ ದೀಕ್ಷೆಯನು ಪಡೆದು ಶಿವರಸಪಾನ ಮಾಡುತ್ತಾ ಕಾಲಕ್ರಮೇಣವಾಗಿ ಕಾಯ ಮಾಗುತ್ತಾ ಮಾಗುತ್ತಾ ಕಾಯದ ಸಕಲ ಭ್ರಮೆಯನ್ನು ಕಳೆದುಕೊಳ್ಳಬಹುದು. ಗುರುದೇವನ ಆಶ್ರಯದಲ್ಲಿದ್ದು ಕಾಯ ತನಗೆ ತಾನೆ ಮಾಗುವುದು. ಇದು ಕೂಡಾ ಕಾಯದ ದೈವವೇ ಸರಿ. ಏಕೆಂದರೆ ಕಾಯಕ್ಕೆ ಶಿವರಸ ಪಾನ ಮಾಡಿದ ಗುರುದೇವನ ಕಾಯ ದೊರೆಯಬೇಕಲ್ಲ? ಇದು ಶಿವರಸಪಾನ ಮಾಡಿದ ಕಾಯ ಎಂದು ಕಾಯಕ್ಕೆ ಗೊತ್ತಾಗಬೇಕಲ್ಲ?

ಕಾವಿ ಹೊದ್ದ ಕಾಯಗಳೆಲ್ಲ ಶಿವರಸ ಪಾನ ಮಾಡಿದ ಕಾಯಗಳಲ್ಲಿ ಅವು ಸುಲಭವಾಗಿ ಬದುಕುವ ದಾರಿಯನ್ನು ಕಂಡುಕೊಂಡ ಕಾಯಗಳು. ಅಂತಹ ಕಾಯಗಳನ್ನೇ ಗುರುದೇವನೆಂದು ಭಾವಿಸಿ ಮೋಸಕ್ಕೆ ತುತ್ತಾಗುವ ಕಾಯಗಳ ಸಂಖ್ಯೆಯೇ ಅಧಿಕವಾಗಿವೆ. ಇದು ಕಾಯದ ದುರ್ದೈವ. ಹಾಗೆಯೇ ಕಾವಿ ಹೊದ್ದ ಕಾಯದ ದುರ್ದೈವ. ಏಕೆಂದರೆ ಕಾವಿ ಹೊದ್ದರೂ ಕೂಡಾ ಶಿವರಸವೆಂಬ ಭಕ್ತಿರಸ ದಣಿಯೆ ಮೇಯಲು ಸಾಧ್ಯವಾಗುತ್ತಿಲ್ಲ. ಹಾಗೆಂದರೇನೆಂದು ಕಾವಿ ಹೊದ್ದ ಕಾಯಕ್ಕೆ ಗೊತ್ತಾಗುತ್ತಿಲ್ಲ. ಕಾವಿ ಹೊದ್ದ ಕಾಯವೂ ಕೂಡಾ ಮನವೆಂಬ ಭ್ರಮೆಗೆ ಒಳಗಾಗಿ ಭ್ರಮಾರಸವನ್ನು ಮೇಯುತ್ತಿರುವುದರಿಂದಾಗಿ ತನಗೆ ತಾನೇ ಮನದ ಮೋಸಕ್ಕೆ ಒಳಗಾಗಿದೆ. ಕಾಯಗಳನ್ನು ಮೋಸ ಮಾಡುವ ಕಾಯಕದಲ್ಲಿ ತನಗರಿಯದಂತೆ ಕಾವಿ ಹೊದ್ದ ಕಾಯ ತೊಡಗಿಕೊಂಡಿದೆ.

ಕಾಯ ಕಾಯಕ್ಕೆ ಭವಿಷ್ಯ ಹೇಳುವುದೆಂದರೇನು? ಕಾಯ ಕಾಯದಿಂದಲೇ ಭವಿಷ್ಯ ಕೇಳುವುದೆಂದರೇನು? ಇವೆರಡೂ ಭ್ರಮಾರಸವನ್ನು ಪಾನ ಮಾಡುವ ಕಾಯಗಳು. ಕಾಯದಲ್ಲಿಯೇ ಸಂಗಮವಾದ ಬ್ರಹ್ಮರಸವನ್ನು ಅಂದರೆ ಶಿವರಸವನ್ನು ಅರಿಯದ ಕಾಯಗಳು. ಇವು ತನಗೆ ತಾನೇ ಮೋಸಕ್ಕೆ ಒಳಗಾಗಿವೆ. ತನಗೆ ತಾನೇ ಶಿವರಸದಿಂದ ವಂಚನೆಗೆ ಒಳಗಾಗಿವೆ. ಮಾಗುವ ಮಾಗಿಸಿಕೊಳ್ಳುವ ಚಿಂತೆಯೇ ಇಲ್ಲದೆ ಅಜ್ಞಾನದ ಭ್ರಮೆಗೆ ಒಳಗಾಗಿವೆ. ಕಾಯಕ್ಕೆ ಅಂಟಿದ ಭ್ರಮೆಯನ್ನು ಕಾಯದಲ್ಲಿಯೇ ಸಂಗಮವಾದ ಶಿವರಸದಿಂದ ತೊಳೆದುಕೊಳ್ಳಲು ಸಾಧ್ಯ ಎನ್ನುವ ಸುಳುಹು ಕೂಡಾ ಹೊಳೆಯದ ಕಚ್ಚಾ ಕಾಯಗಳು; ಕರಕಲು ಕಾಯಗಳು. ಹಣ್ಣಾಗಬೇಕೆಂಬ ಆಸೆಯೇ ಅಂಕುರಿಸದ ದುರ್ದೈವದ ಕಾಯಗಳು!

ಕಾಯದಲ್ಲಿಯೇ ಅರಿವಿನ ಮಥನ ಸೃಷ್ಟಿ ಮಾಡಿ, ಕಥನವಲ್ಲದ ಕಥನಕ್ಕೆ ನಾಂದಿ ಹಾಡಿ,

ಸದಮಳ ಜ್ಞಾನಕ್ಕೆ ಮಾತೆಯಾಗಿ, ಅಯ್ಯಾ ಶಿವನೆ ಈ ಮನಕ್ಕೆ ನಿನ್ನ ಜ್ಞಾನರಸ ಪಾನ ಮಾಡಿಸಿ ನಿನ್ನ ಕಾಯವನ್ನು ನೀನೇ ಕೈಲಾಸ ಮಾಡಿಕೊಂಡು ನೀನು ಸೃಷ್ಟಿ ಮಾಡಿದ ಮನಕ್ಕೆ ಕರುಣೆ ತೋರಿ ನೀನೆ ಕಾಪಾಡು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಶಿದ್ಧರಾಮ ಶಿವಯೋಗಿಗಳು ಶಿವನನ್ನು ಬೇಡಿಕೊಂಡಿದ್ದಾರೆ.

ಶಿವರಸ ಪಾನ ಮಾಡಿದವರು ಮಾತ್ರ, ಸಕಲ ಕಾಯಗಳಿಗೂ ಶಿವರಸ ಪಾನ ಮಾಡಿಸಬೇಕೆಂಬ ತವಕದಲ್ಲಿರುತ್ತಾರೆ. ಆದರೆ ತಾನು ಪಾನ ಮಾಡಿದ ಶಿವರಸ ಇತರರಿಗೆ ಪಾನ ಮಾಡಿಸಲು ಬರುವುದಿಲ್ಲ. ಆಯಾ ಕಾಯದಲ್ಲಿಯೇ ಸಂಗಮವಾದ ಶಿವರಸ ಆಯಾ ಕಾಯದಿಂದಲೇ ಪಾನ ಮಾಡಬೇಕು. ಕಾಯದಲ್ಲಿಯೇ ಇದ್ದ ಶಿವರಸವನ್ನು ಕಾಯ ಹೇಗೆ ಪಡೆದು ಪಾನ ಮಾಡಬೇಕೆಂದು ಗುರುದೇವ ಕಾಯಕ್ಕೆ ಪಾಠ ಮಾಡುತ್ತಾನೆ. ಕಾವಿ ಹೊದ್ದ ಕಾಯ ತೀರ್ಥ ಪ್ರಸಾದ ವಿತರಿಸಿದಂತೆ ಗುರುದೇವ ಪ್ರಸಾದ ಇತರಿಸುವುದಿಲ್ಲ. ಹಾಗೆ ವಿತರಿಸಲು ಬರುವುದೂ ಇಲ್ಲ. ಕಾಯದಲ್ಲಿರುವ ಪ್ರಸಾದವನ್ನು ಕಾಯಕ್ಕೆ ತೋರಿಸಿ, ಕಾಯದಿಂದಲೇ ಸ್ವೀಕರಿಸಲು ಕಾಯಕ್ಕೆ ಮಾತೆಯಾಗಿ ಬೋಧಿಸುತ್ತಾನೆ.

**282**

**ಎಂದೆಂದೂ ಎನ್ನಂಗ ಮನ ಪ್ರಾಣ ನಿನ್ನದಯ್ಯಾ ಬಸವಾ.**
**ಕಪಿಲಸಿದ್ಧ ಮಲ್ಲಿನಾಥಯ್ಯನ ಗುರುಬಸವಾ.**

ಗುರುದೇವನೆಂದರೆ ಕಾಯ ಉಳ್ಳವನಲ್ಲ; ಪ್ರತಿ ಕಾಯದಲ್ಲಿಯೂ ಇದ್ದವನು. ಅಕಾಯನಾಗಿ ಕಾಯಕ್ಕೆ ಬೋಧಿಸುತ್ತಿರುವವನು. ಕಾಯದಿಂದಲೇ ಕಾಯದಲ್ಲಿದ್ದ ಅಕಾಯ ಗುರುದೇವನನ್ನು ತಿಳಿದುಕೊಂಡು ಅಕಾಯ ಗುರುದೇವನೇ ತಾನಾದವನು!

ಇಂತಹ ಗುರುದೇವನು ಮಾತ್ರ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಅಂಗಕ್ಕೆ ಮನಕ್ಕೆ ಪ್ರಾಣಕ್ಕೆ ತೋರಿಸಬಲ್ಲನು.

ಬಸವರಸರು ಶಿದ್ಧರಾಮ ಶಿವಯೋಗಿಗಳಿಗೆ ಕಾಯದಲ್ಲಿರುವ ಅಕಾಯ ಗುರುದೇವನನ್ನು ಕಾಯಕ್ಕೆ ತೋರಿಸಿದರು. ಕಾಯದಲ್ಲಿಯೇ ಸಂಗಮವಾದ ಅಕಾಯ ಗುರುದೇವನ ಬ್ರಹ್ಮರಸವನ್ನು ಶಿದ್ಧರಾಮ ಶಿವಯೋಗಿಗಳು ಪಾನ ಮಾಡಿದರು. ಆಗ ಅವರಿಗೆ ಅಂಗ ಅಂಗವಾಗಿ ಕಾಣಲಿಲ್ಲ ಅರಿವಿನ ಲಿಂಗವಾಗಿ ಕಂಡಿತು. ಸಕಲ ಅಂಗಗಳೂ ಲಿಂಗಾಂಗವಾಗಿ ಕಂಡವು.

ಬಸವರಸರಿಂದಾಗಿ ಅಂಗ ಲಿಂಗಾಂಗವಾಯಿತು. ಬಸವರಸರ ಕಾಯವು ಕೂಡಾ ಗುರುದೇವನಿದ್ದ ಅಕಾಯವಾಗಿ ಕಂಡಿತು. ಆ ಗುರುದೇವನ ಅಕಾಯವೇ ಎನ್ನ ಕಾಯದಲ್ಲಿ ಸಂಗಮವಾಗಿ ಅಕಾಯವಾಯಿತು.

ಹೀಗಾಗಿ ಶಿದ್ಧರಾಮ ಶಿವಯೋಗಿಗಳು ಎಂದೆಂದೂ ಎನ್ನ ಅಂಗವು ನಿನ್ನದಯ್ಯಾ ಬಸವಾ. ಎನ್ನ ಮನ ಕೂಡಾ ನಿನ್ನದಯ್ಯಾ ಬಸವಾ. ಎಂದೆಂದೂ ಎನ್ನ ಪ್ರಾಣ ಕೂಡಾ ನಿನ್ನದಯ್ಯಾ ಬಸವಾ. ಕಪಿಲಸಿದ್ಧ ಮಲ್ಲಿನಾಥಯ್ಯನ ಗುರುಬಸವಾ ಎಂದು ಪರಮಾನಂದದಿಂದ ಹಾಡಿದ್ದಾರೆ ಅರಿವಿನ ಬ್ರಹ್ಮರಸ ಪಾನ ಮಾಡುತ್ತಾ.

ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಚೆಲುವ ಬಸವರಸನನ್ನು ಕಾಯದಲ್ಲಿಯೇ ಕಂಡುಕೊಂಡಿದ್ದಾರೆ; ಶಿದ್ಧರಾಮ ಶಿವಯೋಗಿಗಳು.

ಕಾಯದಲ್ಲಿ ಅರಿವಿದೆ. ಅದು ಯಾರಿಗೂ ಕಾಣುವುದಿಲ್ಲ. ಸದಾ ಕಾಯಕ್ಕೆ ಬೋಧಿಸುತ್ತದೆ. ಹೀಗಾಗಿ ಅದು ಅಕಾಯ! ಅರಿವಿನ ಗುರುದೇವನ ಕಾಯ!

ಕಾಯವನ್ನು ಮನ ಆವರಿಸಿದೆ. ಕಾಯ ಕಾಣುತ್ತದೆ; ಮನ ಕಾಣುವುದಿಲ್ಲ. ಹೀಗಾಗಿ ಮನ ಕೂಡಾ ಅಕಾಯವೇ ಆಗಿದೆ. ಏಕೆಂದರೆ ಗುರುದೇವನ ದರುಶನಾಶೀರ್ವಾದಕ್ಕಾಗಿ ತವಕದಲ್ಲಿದೆ.

ಅರಿವೆಂಬ ಗುರುದೇವನು ಕಾಯದಲ್ಲಿಯೇ ಇದ್ದಾನೆ. ಆ ಗುರುದೇವನನ್ನು ಬಯಕೆ ಮಾಡಿದ ಮನವೆಂಬ ಶಿಷ್ಯನೂ ಕಾಯದಲ್ಲಿಯೇ ಇದ್ದಾನೆ. ಕಾಯ ಇವರಿಬ್ಬರಿಗೂ ವಾಸದ ಮನೆಯಾಗಿದೆ.

ಬಸವರಸ ಕಾಯವನ್ನು ಹಿಡಿದು, ಬಯಕೆ ಮಾಡಿದ ಮನಕ್ಕೆ ಗುರುದೇವನ ದರುಶನ ಮಾಡಿಸಿದ. ಮನವೆಂಬ ಅಕಾಯಕ್ಕೆ ಅಕಾಯದ ದರುಶನವಾಯಿತು. ಅಕಾಯ ಅಕಾಯದಲ್ಲಿ ಬೆರೆತು ಪರಕಾಯ ಪ್ರವೇಶ ಪಡೆಯಿತು. ಈ ಪರ ಕಾಯವೆಂಬ ಅಕಾಯ ಗುರುಕಾಯಕ್ಕೆ ಕಾಯ ಆಧಾರವಾಯಿತು. ಆಧಾರವಾದ ಕಾಯವೂ ಅಕಾಯವಾಯಿತು. ಆಗ ಕಾಯಗಳೆಲ್ಲ ಅಕಾಯಗುರುದೇವನ ಕಾಯಗಳಾಗಿ ಕಾಯಕ್ಕೆ ಕಂಡವು. ಕಾಯ ಧನ್ಯವಾಯಿತು. ಕಾಯವೇ ಕೈಲಾಸವಾಯಿತು!

ಎಂದೆಂದೂ ಎನ್ನಂಗ ಮನ ಪ್ರಾಣ ನಿನ್ನದಯ್ಯಾ ಬಸವಾ ಎಂದು ಎದೆ ತುಂಬಿ ಹಾಡಿದರು ಶಿದ್ಧರಾಮ ಶಿವಯೋಗಿಗಳು.

**283**

**ಎಂದೋ ದಂದುಗ ಮಾಬುದು ಎನಗೆಂದೊ?**
**ದಂದುಗ ಮಾಬುದು ಎನ್ನ ಮನಸ್ಸಿನ್ನೆಂದೊ?**
**ತಂದೆ ಪರಮಾನಂದವೆಂದಪ್ಪುದೊ?**
**ಎನಗಿನ್ನೆಂದೊ ಎಂದೋ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಹಣ ಆಭರಣ ಅಧಿಕಾರ ಆಸ್ತಿ ವಿದ್ಯೆ ಸಂಪತ್ತು ಇವುಗಳಿಂದ ಸಂತೋಷವಾಗಿ ಇರಲು ತನುವಿಗೆ ಸಾಧ್ಯವಾಗುವುದಿಲ್ಲ. ಇವುಗಳಿಂದಾಗಿ ತನುವಿನಲ್ಲಿಯೇ ತನುವಿನಿಂದಲೇ ಉಂಟಾದ ದುಗುಡ ದುಮ್ಮಾನಗಳು ಅಶಾಂತಿ ಮಾನಸಿಕ ಅಸ್ತವ್ಯಸ್ತಗಳು ಕಳಚಿ ಬೀಳುವುದಿಲ್ಲ. ಯಾವ ಪಶು ಪಕ್ಷಿ ಪ್ರಾಣಿಗಳಿಗೆ ಬೇಕಾಗದ ಬೇಡಿಕೆಗಳು ತನುವಿನಲ್ಲಿಯೇ ಹುಟ್ಟಿ ತನುವನ್ನು ಮತ್ತೆ ಮತ್ತೆ ಪ್ರಪಾತಕ್ಕೆ ತಳ್ಳುತ್ತವೆ. ಇದಕ್ಕೆಲ್ಲ ಮನವೇ ಕಾರಣ.

ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿ ಉಂಟಾದ ಮನದ ದಂದುಗವನ್ನು ಕಂಡು ಹಿಡಿದಿದ್ದಾರೆ. ಅದಕ್ಕೆ ಪರಿಹಾರವನ್ನು ಕೂಡಾ ಕಂಡು ಹಿಡಿದಿದ್ದಾರೆ. ಮನದ ದಂದುಗವನ್ನು ಮಾಣಿಸಿ ಪರಮಾನಂದವನ್ನು ಅನುಭವಿಸಿದ್ದಾರೆ. ತಾವು ಅನುಭವಿಸಿದ ಪರಮಾನಂದದ ಸೂತ್ರವನ್ನು ಸಕಲ ಓದುಗ ತನುಗಳಿಗೆ ತಮ್ಮ ಈ ವಚನದ ಮೂಲಕ ವಿವರಿಸಿದ್ದಾರೆ.

ಎಂದೋ ದಂದುಗ ಮಾಬುದು ಎನಗೆಂದೋ? ದಂದುಗ ಮಾಬುದು ಎನ್ನ ಮನಸ್ಸಿನ್ನೆಂದೋ? ತಂದೆ ಪರಮಾನಂದವೆಂದಪ್ಪುದೋ? ಎನಗಿನ್ನೆಂದೋ ಎಂದೋ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಹಡೆದ ತಂದೆ ತಾಯಿಗಳು ಮನದ ದಂದುಗವನ್ನು ಕಳೆಯಲು ಸಾಧ್ಯವಿಲ್ಲ. ಅಕ್ಷರ ಕಲಿಸಿದ ಗುರು, ಮನೆಯ ಕರ್ಮಾದಿಗಳನ್ನು ತೀರಿಸುವ ಮನೆ ಗುರುವಿನಿಂದಲೂ ಕೂಡಾ

ಮನದಿಂದಾಗಿ ಹುಟ್ಟಿಕೊಂಡ ತನುವಿನ ದಂದುಗ ಹೋಗುವುದಿಲ್ಲ. ಮನೆ ದೈವದಿಂದ, ಪುಣ್ಯಕ್ಷೇತ್ರಗಳ ದರುಶನದಿಂದ ಮನದ ದಂದುಗ ಕಳೆಯುವುದಿಲ್ಲ. ಆದರೂ ಸಿದ್ಧರಾಮ ಶಿವಯೋಗಿಗಳು ಪ್ರಶ್ನೆ ಮಾಡಿದ್ದಾರೆ.

ಓದುಗರಿಗೆ ಮಾಡಿದ ಪ್ರಶ್ನೆಯಲ್ಲ; ಇದು ಕಾಣದ ದೇವರಿಗೆ ಮಾಡಿದ ಪ್ರಶ್ನೆಯೂ ಅಲ್ಲ. ಸ್ವತಹ ತನಗೆ ಕಾಣುವ ದೇವರನ್ನು ಹಿಡಿದು ನಿಲ್ಲಿಸಿ ಆತನಿಗೆ ಈ ಪ್ರಶ್ನೆಯನ್ನು ಹಾಕಿದ್ದಾರೆ.

ಕಾಣದ ದೇವರನ್ನು ಕಲ್ಲಲ್ಲಿ ಕೆತ್ತಿ, ಆ ದೇವರಿಗೆ ಪಡಿ ಪದಾರ್ಥಗಳನ್ನು ನೀಡಿ, ಸಕಲ ಖಾದ್ಯದ ನೈವೇದ್ಯವನ್ನರ್ಪಿಸಿ, ಕೈ ಮುಗಿದು ಮನದ ದಂದುಗವನ್ನು ಕಳೆಯಲು ಕೇಳುವುದು ವಾಡಿಕೆ. ಹೀಗೆ ಕೇಳಿದರೆ ಆ ದೇವರು ಕಾಣುವುದಿಲ್ಲ. ಮಾತನಾಡುವುದೂ ಇಲ್ಲ. ಕೇಳಿದಾತನೇ ಸಾಯುತ್ತಾನೆ; ಮನದ ದಂದುಗದಿಂದ; ಪರಿಹಾರ ಸಿಗುವುದೇ ಇಲ್ಲ.

ಸಿದ್ಧರಾಮ ಶಿವಯೋಗಿಗಳು ಹಾಗಲ್ಲ. ದೇವರನ್ನು ಹಿಡಿದು ನಿಲ್ಲಿಸಿ, ಆತನಿಗೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ನಾಮಕರಣ ಮಾಡಿ, ಆತನೊಂದಿಗೆ ಆತನೇ ಸೃಷ್ಟಿ ಮಾಡಿದ ಮನದಿಂದಾಗಿ ತನುವಿನಲ್ಲಿ ಉಂಟಾಗುವ ಮನದ ದಂದುಗವನ್ನು ನಿವಾರಿಸಲು ಅರಿಕೆ ಮಾಡಿಕೊಂಡು ಪರಿಪರಿಯಿಂದ ಯಾಚಿಸುತ್ತಿದ್ದಾನೆ.

ಈ ವಚನದಲ್ಲಿ ಬರೆದ ಮಾತುಗಳನ್ನು ಎಲ್ಲರೂ ಓದಬಹುದು. ಆದರೆ ಕೇಳಲು ಸಾಧ್ಯವಾಗುವುದಿಲ್ಲ. ಆತ ದೇವರೊಂದಿಗೆ ಮಾತನಾಡಿದ್ದಾನೆ. ದೇವರು ಯಾರಿಗೂ ಕಾಣುವುದಿಲ್ಲ. ದೇವರು ಆಡುವ ಮಾತು ಕೂಡಾ ಬೇರೆಯವರಿಗೆ ಕೇಳುವುದಿಲ್ಲ. ಮನಕ್ಕೆ ಮಾತ್ರ ಕೇಳದೇ ಇರುವುದಿಲ್ಲ; ಮನ ಭಕ್ತನಾದಾಗ ಮಾತ್ರ ಇದು ಸಾಧ್ಯವಾಗುತ್ತದೆ. ಮನ ತನ್ನನ್ನು ಸೃಷ್ಟಿ ಮಾಡಿದ ದೇವರಿಗೆ ಭಕ್ತನಾದಾಗ ದೇವರ ಮಾತು ಕೇಳುತ್ತಾನೆ. ಭಕ್ತನ ಮಾತು ದೇವರು ಆಲಿಸುತ್ತಾನೆ. ಇವರಿಬ್ಬರ ಮಾತು ಬೇರೊಬ್ಬರಿಗೆ ಕೇಳುವುದಿಲ್ಲ.

ಮನವೆಂದರೆ ತನುವಲ್ಲ. ತನುವನ್ನು ಆವರಿಸಿದ ತನುವಿನಂತೆಯೇ ಇರುವ ಮನ. ಇದನ್ನು ಸೂಕ್ಷ್ಮತನುವೆಂದು ಕರೆಯುತ್ತಾರೆ. ಇದು ಕಾಣುವುದಿಲ್ಲ.

ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ದೇವರು ಮನದ ಮೂಲಕ ನೋಡಬೇಕೆಂದು ತನುವನ್ನು ಮನವನ್ನು ಸೃಷ್ಟಿ ಮಾಡಿದ; ತನುವಿನಲ್ಲಿಯೇ ಸಂಗಮವಾದ. ಸೃಷ್ಟಿ ಮಾಡಿದ ದೇವರನ್ನು ಮರೆತು, ತನುವಿನೊಂದಿಗೆ ಸಂಗ ಮಾಡಿತು ಮನ. ತನಗೆ ಬೇಕಾದ ದೇವರನ್ನು ತನುವಿನ ಮೂಲಕ ಸೃಷ್ಟಿ ಮಾಡಿತು. ತನುವಿನಲ್ಲಿ ದಂದುಗವನ್ನುಂಟು ಮಾಡಿ ದೇವರಿದ್ದ ತನುವನ್ನೇ ಯಾಮಾರಿಸಿತು.

ಮನದಿಂದಾಗಿ ದೇವರಿದ್ದ ತನುವೇ ದೇವರನ್ನು ಆರಾಧಿಸಿತು. ನಾನು ಬೇರೆ ದೇವರು ಬೇರೆ ಎಂದು ಸಾವಿರಾರು ದೇವರನ್ನು ನಿರ್ಮಾಣ ಮಾಡಿತು. ದೇವರನ್ನು ಪೂಜಿಸಿ ಆರಾಧಿಸಲು ದೇವರಿದ್ದ ತನುವನ್ನೇ ಪೂಜಾರಿಯಾಗಿ ನಿಯಮಿಸಿತು. ಅಕ್ಷರೋತ್ತಮನಿಗೆ ಅಕ್ಷರ ಕಲಿಸಿ ಅಧಿಕಾರಿಯನ್ನಾಗಿಸಿತು.

ತನುವನ್ನು ಆಳಲು ತನುವೇ ರಾಜನಾಯಿತು, ತನುವೇ ಸೈನಿಕನಾಯಿತು. ತನುವೇ ಪ್ರಧಾನಿಯಾಗಿ, ತನುವೇ ಪ್ರಜೆಯಾಯಿತು. ತನುವಿಗೆ ತನುವೇ ಸುಖ ನೀಡಲು ತನುವೇ ಹೆಣ್ಣಾಯಿತು, ತನುವೇ ಗಂಡಾಯಿತು. ಮನದ ದಂದುಗದಿಂದಾಗಿ ತನುವೇ ಗಂಡನಾದ ತನುವೇ ಹೆಂಡತಿಯಾಯಿತು. ತನುವಿನ ಮಗಳು ಸೊಸೆ ಅತ್ತೆ, ಅಣ್ಣ ತಮ್ಮ ತಂಗಿಯಾಯಿತು.

ತನುವಿನ ಶಬ್ದವೇ ತನುವಿಗೆ ಸುಖವಾಯಿತು, ದುಃಖವಾಯಿತು. ತನುವಿನ ಸ್ಪರ್ಶ ತನುವಿಗೆ ತಿಳಿಯದಾಯಿತು.

ತನುವಿನಿಂದಲೇ ಬಂದ ಗ್ರಂಥಗಳು ತನುವಿಗೆ ಶ್ರೇಷ್ಠವಾದವು. ತನುವೇ ಶ್ರೇಷ್ಠವೆಂದು ಹೇಳಿದ ಕೃಷ್ಣನನ್ನು, ಕ್ರಿಸ್ತನನ್ನು ಬುದ್ಧ ಮಹಾವೀರನನ್ನು ಬಸವಾದಿ ಶರಣರನ್ನು ದಾಸವರೇಣ್ಯರನ್ನು ತನುವೆಂದು ತಿಳಿಯದೆ ತನುವೇ ಪೂಜಿಸಿ ಆರಾಧಿಸಿತು. ಇದು ಮನದ ದಂದುಗವಲ್ಲದೆ ಮತ್ತೇನೆಂದು ಮನವೇ ಅರಿಯಬೇಕು. ಇಲ್ಲ ತನುವಾದರೂ ನಿರ್ಧರಿಸಬೇಕು ಮನದ ಮಾತು ಕೇಳಬಾರದೆಂದು.

ಸಿದ್ಧರಾಮ ಶಿವಯೋಗಿಗಳಿಗೆ ಗೊತ್ತಾಯಿತು; ಇದು ಮನದ ದಂದುಗವೆಂದು. ಮನವನ್ನೇ ಭಕ್ತನನ್ನಾಗಿಸಿದ. ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರಿಗೆ ಮೊರೆ ಹೋದ. ಸಂಪೂರ್ಣ ಶರಣು ಹೋಗಿ ಶರಣನಾದ. ಅರಿವಿನ ದೇವರಿಗೆ ಮನದ ಅಜ್ಞಾನವನ್ನು ಅರ್ಪಿಸಿದ. ಪರಿಪೂರ್ಣ ಜ್ಞಾನಿಯಾದ. ಜಾತಿ-ಮತ ಪಂಥಗಳು ಉದುರಿಬಿದ್ದವು. ತನುವನ್ನು ತನುವಿನಂತೆಯೇ ನೋಡಿದ. ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರನ್ನು ಮನದಿಂದಲೇ ಆರಾಧಿಸಿದ. ಕಪಿಲಸಿದ್ಧ ಮಲ್ಲಯ್ಯ ಎಂದು ನಾಮಕರಣ ಮಾಡಿದ. ಆ ದೇವರೊಂದಿಗೆ ಮಾತಾಡಿದ. ದೇವರ ಮಾತು ತನಗೆ ಕೇಳಿದವು. ಮನದ ಮಾತು ದೇವರು ಆಲಿಸಿದ. ದೇವರು ದೇವರನ್ನೇ ನೋಡಿದ. ಸಕಲರೂ ದೇವರಾಗಿ ಕಂಡರು.

**284**

**ಎಣಿಕೆಯಿಲ್ಲದ ಘನವೆನ್ನ ಕಣ್ಣಮುಂದೆ ತೋರುತ್ತಿದೆ ಎಲೆ ಅಯ್ಯಾ,**
**ಇದ ಕಂಡು ಮನಕ್ಕೆ ಸಂತಸವಾಯಿತ್ತಯ್ಯಾ.**
**ಎಣಿಕೆಯಿಲ್ಲದ ಘನವ ಕರುಣಿಸಿದಡಾನು ಬದುಕುವೆನಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಕೆಚ್ಚಲಿಗೆ ಅಂಟಿಕೊಂಡ ಉಣ್ಣೆ, ಹಾಲ ರುಚಿಯನ್ನು ಅರಿಯದು. ಕೆಚ್ಚಲೊಳಗೆ ಅಮೃತವಿದ್ದರೂ ಕೂಡಾ ರಕ್ತದ ಸವಿಯನ್ನುಣ್ಣುವ ಉಣ್ಣೆಯಂತೆಯೇ ಮನದ ಬದುಕು ಆಗಿದೆ.

ತನುವಿನಲ್ಲಿ ಅರಿವಿನ ಗುರುದೇವನು ಸಂಗಮವಾಗಿದ್ದರೂ ತನುವನ್ನು ಆವರಿಸಿದ ಮನ ಆ ಗುರುದೇವನಿಗೆ ಶರಣು ಹೋಗಿ ಶರಣನಾಗಲು ಅರಿಯದು. ಅರಿವೇ ಗುರು; ಆ ಗುರುದೇವನೇ ಮಹಾದೇವ; ಆ ಗುರುದೇವನೇ ಸದಾಶಿವ; ಆ ಸದಾ ಶಿವನೇ ಸಾಕ್ಷಾತ್ ಪರಬ್ರಹ್ಮ. ಹೀಗೆ ಕಣ್ಣ ಮುಂದೆಯೇ ಎಣಿಕೆಯಿಲ್ಲದ ಘನ ತನುವಿನಲ್ಲಿಯೇ ಸಂಗಮವಾದದ್ದು ಕಣ್ಣಿಗೆ ಗೋಚರವಾಯಿತು. ಮನಕ್ಕೂ ಸಂತಸವಾಯಿತು.

ಎಣಿಕೆಯಿಲ್ಲದ ಘನವನ್ನು ಕರುಣಿಸಿದಡೆ ಮಾತ್ರ ನಾನು ಬದುಕುವೆನು ತಂದೆಯೇ ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಅರಿವಿನ ಶಿವನನ್ನು ಬೇಡಿಕೊಂಡಿದ್ದಾರೆ.

ಅಂಗದಲ್ಲಿಯೇ ಅರಿವು ಇದೆ. ಅಂಗವನ್ನು ಆವರಿಸಿದ ಮನಕ್ಕೆ ಅಂಗದಲ್ಲಿ ಅರಿವಿದೆ ಎಂದು ಅರಿವಾಗಿದೆ. ಮನಕ್ಕೆ ಮಹದಾನಂದವಾಗಿದೆ. ಆದರೂ ಅರಿವನ್ನು ಬಳಕೆ ಮಾಡಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಮನ ಅಂಗದಲ್ಲಿರುವ ಅರಿವನ್ನು ನೋಡಿದೆ. ಆ ಅರಿವೇ

ಗುರುದೇವನೆಂದು, ಆ ಅರಿವೇ ಮಹಾದೇವನೆಂದು; ಆ ಅರಿವೇ ಸದಾಶಿವನೆಂದು; ಆ ಅರಿವೇ ಸಾಕ್ಷಾತ್ ಪರಬ್ರಹ್ಮನೆಂದು ನಿರ್ಧರಿಸಿ, ಆ ಅರಿವಿಗೆ ಮನ ಸಂಪೂರ್ಣ ಶರಣು ಹೋಗಿ ಶರಣಾಗತನಾಗಲು ಸಾಧ್ಯವಾದಾಗ ಮಾತ್ರ ಮನವೇ ಭಕ್ತನಾಗುತ್ತದೆ.

ಮನವೆಂಬ ಭಕ್ತನನ್ನು ಅರಿವೆಂಬ ಗುರುದೇವ ತನ್ನಲ್ಲಿ ಲೀನ ಮಾಡಿಕೊಂಡು ಮನವನ್ನೇ ಘನಮನವಾಗಿಸುತ್ತಾನೆ. ಮನವನ್ನೇ ಮಹಾದೇವನಾಗಿಸುತ್ತಾನೆ. ಆಗ ಮನ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗುತ್ತದೆ.

**285**

**ಎನಗೆನ್ನ ಬಸವಣ್ಣನ ತೊತ್ತು ನಮ್ಮ ತಾಯಿಯಾಗಬೇಕು,**
**ಎನಗೆನ್ನ ಬಸವಣ್ಣನ ತೊಂಡ ನಮ್ಮ ತಂದೆಯಾಗಬೇಕು.**
**ಎನಗೆನ್ನ ಬಸವಣ್ಣನ ತೊತ್ತು ತೊಂಡರು ನಮ್ಮ**
**ತಾಯಿ ತಂದೆಗಳಾದರು;**
**ನಿಮ್ಮ ತಂದೆ ತಾಯಿಗಳಾರು ಹೇಳಾ,**
**ಕಪಿಲಸಿದ್ದ ಮಲ್ಲಿನಾಥಯ್ಯ.**

ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಎಂದು ಬಸವಣ್ಣನವರು ಪಡೆದ ತಂದೆ ತಾಯಿಗಳನ್ನು ಮರೆತು ಹಡೆದ ತಂದೆಯನ್ನು ಕುರಿತು ಎದೆ ತುಂಬಿ ಹಾಡಿದ್ದಾರೆ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಯಾರೂ ಹಡೆಯಲಿಲ್ಲ. ಅವನಿಗೆ ತಂದೆ ಇಲ್ಲ; ತಾಯಿ ಇಲ್ಲ. ತನಗೆ ತಾನೆ ಹುಟ್ಟಿದವನು. ಸಕಲ ತನುಗಳನ್ನು ಹಡೆದವನು. ತನುವಿನಲ್ಲಿಯೇ ಸಂಗಮವಾದವನು. ಹೀಗಾಗಿ ಬಸವಣ್ಣ ತನುವಿನ ಮಾಂಸಕ್ಕೆ ಜನ್ಮ ಕೊಟ್ಟ ತಂದೆ ತಾಯಿಯನ್ನು ಮರೆತರು. ತನುವನ್ನು ಹಡೆದು, ತನುವಿನಲ್ಲಿಯೇ ಸಂಗಮವಾದ ಸಂಗಯ್ಯನನ್ನು ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ಎಂದು ಹಾಡಿದರು. ಹೀಗೆ ಹಾಡಲು ಸಕಲ ತನುಗಳಿಗೂ ಸಾಧ್ಯವಾಗುವುದಿಲ್ಲ. ಶರಣರಿಗೆ ಮಾತ್ರ ಸಾಧ್ಯವಾಗುತ್ತದೆ.

ಶಿದ್ಧರಾಮ ಶಿವಯೋಗಿಗಳು ಬಸವಣ್ಣನಿಂದ ಮರು ಜನ್ಮ ಪಡೆದವರು. ಹೀಗಾಗಿ ಬಸವಣ್ಣನ ಮನೆಯ ಸೇವಕಿ ಎನಗೆ ತಾಯಿಯಾಗಬೇಕು. ಬಸವಣ್ಣನ ಮನೆಯ ಸೇವಕ ಎನಗೆ ತಂದೆಯಾಗಬೇಕು. ಬಸವಣ್ಣನ ಮನೆಯ ತೊತ್ತು ತೊಂಡರು ಎನಗೆ ನಮ್ಮ ತಾಯಿ ತಂದೆಗಳಾದರು ಎಂದು ಹೇಳುತ್ತಾ ನಿಮ್ಮ ತಂದೆ ತಾಯಿಗಳಾರು ಹೇಳಾ ಎಂದು ಸಕಲ ತನುಗಳಿಗೆ ಜನ್ಮಕೊಟ್ಟ ತಂದೆಯನ್ನೇ ಪ್ರಶ್ನಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಸಕಲ ತನುಗಳಿಗೂ ತಂದೆ ಇದ್ದಾನೆ. ಸಕಲ ತನುಗಳನ್ನು ಹಡೆದ ತಂದೆಗೆ ತಂದೆ ಇಲ್ಲ ತಾಯಿ ಇಲ್ಲ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ತನ್ನನ್ನು ಹಡೆದ ತಂದೆಯನ್ನೇ ನಿನ್ನ ತಂದೆ ಯಾರು? ನಿನ್ನ ತಾಯಿ ಯಾರು ಹೇಳಾ ಎಂದು ಭಗವಂತನನ್ನೇ ಪ್ರಶ್ನಿಸಿದ್ದಾರೆ.

ಭಕ್ತನನ್ನು ದೇವರು ಹಡೆದಿದ್ದಾನೆ. ದೇವರನ್ನು ಯಾರೂ ಹಡೆದಿಲ್ಲ. ಭಕ್ತನಿಗೆ ದೇವರೆಂದರೆ ಯಾರೆಂದು ಗೊತ್ತಾಗಬೇಕು. ಭಕ್ತನ ಅಂಗದಲ್ಲಿಯೇ ಸಂಗಮವಾದ ದೇವರು

ಭಕ್ತನಿಗೆ ಪರಿಚಯವಾದ ಮೇಲೆ ಆ ದೇವರನ್ನು ನಿಮ್ಮನ್ನು ಹಡೆದವರು ಯಾರು ಎಂದು ಕೇಳಲು ಬರುತ್ತದೆ.

ಬಸವಣ್ಣನಲ್ಲಿಯೂ ದೇವರಿದ್ದಾನೆ. ಬಸವಣ್ಣನ ಮನೆಯ ಸೇವಕ ಸೇವಕಿಯರಲ್ಲಿಯೂ ದೇವರಿದ್ದಾನೆ. ದೇವರಿಲ್ಲದ ತನುಗಳೇ ಇಲ್ಲ. ಯಾವ ತನುವಾದರೇನು? ಅದು ದೇವರಿದ್ದ ತನುವೇ ಆಗಿದೆ; ತನುವಿಗೆ ಗೊತ್ತಿಲ್ಲ ಅಷ್ಟೆ.

ಸಿದ್ದಾರೂಢರು ಗಜದಂಡ ಸ್ವಾಮಿಗಳಿಗೆ ಸೇವಕನಾಗಿದ್ದ. ಇದು ಲೋಕದ ಮಾತು. ಸಿದ್ಧಾರೂಢರು ತನುವಿನಲ್ಲಿದ್ದ ದೇವರಿಗೆ ಸೇವಕನಾಗಿದ್ದ. ಇದು ಜ್ಞಾನಿಗಳ ಮಾತು. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ಪರಿಚಯವಾದ ಅಂಗ ಅಂಗವಲ್ಲ; ಅದು ಲಿಂಗಾಂಗ! ಲಿಂಗಾಂಗ ಲಿಂಗಾಂಗವನ್ನು ನೋಡುವುದೇ ಹೊರತು ಅಂಗವನ್ನಲ್ಲ. ದೇವರೊಂದಿಗೆ ವಿನೋದದಿಂದ ಮಾತನಾಡುವ ಶಕ್ತಿ ಶರಣರಿಗೆ ಮಾತ್ರ ಇದೆ; ಜ್ಞಾನಿಗಳಿಗೆ ಮಾತ್ರ ಇದೆ.

**286**

**ಎನ್ನ ಕಾಡದ ಮುನ್ನ ನಿನ್ನ ಮತವೀಯಯ್ಯ**
**ನಿನ್ನ ಪ್ರಭುರಾಯಂಗೆ ಹೇಳಿ ಕಳೆಯಯ್ಯ.**
**ಎನ್ನ ಗುರು ಕಪಿಲಸಿದ್ಧ ಮಲ್ಲಿಕಾರ್ಜುನ**
**ಮನ್ನಣೆಗೆಡಿಸಿತ್ತು ಮಾಯೆ ಜಗವ.**

ಅರಿವೆಂಬ ಗುರುದೇವನ ಸಮ್ಮತವಿಲ್ಲದ್ದಕ್ಕಾಗಿ ಮನವೆಂಬ ಮಾಯೆ ಜಗದ ಜನರನ್ನು ಸುತ್ತಿ ಮನ್ನಣೆಗೆಡಿಸಿದೆ. ನಿದ್ದೆಗೆಡಿಸಿದೆ. ಹಗಲಿರುಳೆನ್ನದೆ ತನುವಿನಲ್ಲಿಯ ಕಿಚ್ಚು ತನುವನ್ನೇ ತಿಂದು ಹಾಕುತ್ತಲಿದೆ.

ಮನವೆಂಬ ಮಾಯೆಯಿಂದಾಗಿ ತನುವನ್ನು ಸುಡುವ ಕಿಚ್ಚು ತನುವಿನಲ್ಲಿಯೇ ಹುಟ್ಟಿದೆ ಎಂದು ತನುವಿಗೆ ಯಾರು ಹೇಳಬೇಕು? ತನುವಿಗೆ ಪಾಠಮಾಡಬೇಕಾದವನು ತನುವಿನಲ್ಲಿಯೇ ಇದ್ದು ತನುವಿಗೆ ಪಾಠಮಾಡುತ್ತಿದ್ದರೂ ತನು ಕೇಳಲೊಲ್ಲದು. ತನುವನ್ನು ಆವರಿಸಿದ ಮನವೂ ಕೇಳಲೊಲ್ಲದು.

ಮಾಯೆಯನ್ನು ಗೆದ್ದ ಬುದ್ಧ ಮಹಾವೀರ ಬಸವಾದಿ ಶರಣರ ಮಾತು ಕ್ರಿಸ್ತ ಕ್ರಿಷ್ಣ ಪೈಗಂಬರರ ಮಾತು ಮನಕ್ಕೆ ರುಚಿಸುತ್ತಿಲ್ಲ. ಮನದ ಮಾಯೆ ಕಳೆಯುವ ಜ್ಞಾನಿಗಳ ಮಾತಿನ ಪುಸ್ತಕಗಳು ಸಾಕ್ಷಿಗೆ ಆರಾಧನೆಗೆ ಒಳಗಾಗಿವೆ. ಅವರಿಗೆ ಆಲಯಗಳನ್ನು ಸ್ಥೂಪ ಬಸದಿಗಳನ್ನು ನಿರ್ಮಿಸಿದ ಮನವೆಂಬ ಮಾಯೆ ಅವರ ಉತ್ಸವಗಳಿಗೆ ಆರಾಧನೆಗಳಿಗೆ ಒಳಗಾಗಿದೆ. ಜ್ಞಾನಿಗಳ ಜ್ಞಾನದ ಬಲಕೂಡಾ ಮನವೆಂಬ ಮಾಯೆಗೆ ಆಹಾರವಾಗಿದೆ. ಇದು ಮನದ ದುರ್ದೈವ. ಮನವನ್ನು ಹೊತ್ತ ತನುವಿನ ದುರ್ದೈವ.

ಮಹಾಜ್ಞಾನಿ ಬಸವಣ್ಣನವರು ಮಾಯೆಯನ್ನು ಅಡಗಿಸುವ ಸೂತ್ರವನ್ನು ಜಗದ ತನುಗಳಿಗೆ ಸರಳವಾಗಿ ವಿವರಿಸಿದ್ದಾರೆ.

ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ, ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ, ನೀನು ಜಗಕ್ಕೆ ಬಲ್ಲಿದನು, ಆನು ನಿನಗೆ ಬಲ್ಲಿದನು, ಕಂಡಯ್ಯಾ, ಕರಿಯು ಕನ್ನಡಿಯೊಳಗಡಗಿದಂತಯ್ಯಾ, ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಾ!

ಅಂಗದಲ್ಲಿಯೇ ಕೂಡಿ ಸಂಗಮುಗೊಂಡ ಅರಿವಿನ ಸಂಗಯ್ಯನೇ ನಿನ್ನ ಮಾಯೆ ಜಗದ ತನುಗಳಿಗೆ ಸುತ್ತಿದೆ. ಹೀಗಾಗಿ ಜಗದ ತನುಗಳು ನಿನ್ನನ್ನು ಆರಾಧಿಸುತ್ತಿವೆ. ನಿನಗಾಗಿ ಆಲಯಗಳನ್ನು ನಿರ್ಮಿಸಿ ಉತ್ಸವಗಳನ್ನು ಮಾಡುತ್ತಲಿವೆ. ನೀನು ಜಗಕ್ಕೆ ಬಲ್ಲಿದನು. ನೀನೆಂದರೆ ದೇವರೆಂದು ಸಕಲ ತನುಗಳಿಗೂ ಗೊತ್ತಿದೆ. ಹೀಗಾಗಿ ತನುಗಳನ್ನು ಸೃಷ್ಟಿಸಿದ ನಿನ್ನನ್ನೇ ತನುಗಳು ಕಲ್ಲಲ್ಲಿ ಕಟ್ಟಿಗೆಯಲ್ಲಿ ಲೋಹದಲ್ಲಿ ಸೃಷ್ಟಿ ಮಾಡಿ, ನಿನಗೆ ಆಲಯ ಕಟ್ಟಿ ಆರಾಧಿಸುತ್ತಲಿವೆ. ನೀನು ಜಗಕ್ಕೆ ಬಲ್ಲಿದನು. ಹೀಗಾಗಿ ನೀನೆ ಸೃಷ್ಟಿಸಿದ ಮಾಯೆ ಜಗವನ್ನು ಸುತ್ತಿದೆ. ಅದಕ್ಕಾಗಿಯೇ ಜಗದ ತನುಗಳು ನಿನ್ನನ್ನು ಸೃಷ್ಟಿ ಮಾಡಿ ಆರಾಧಿಸುತ್ತಿವೆ. ತನುವನ್ನು ಸೃಷ್ಟಿ ಮಾಡಿದ ದೇವರನ್ನೇ ತನುವು ಸೃಷ್ಟಿಮಾಡುವುದೆಂದರೇನು? ಇದು ದೇವರ ಮಾಯೆಯೇ ಆಗಿರಬೇಕೆಂದು ಬಸವಣ್ಣನವರಿಗೆ ಸ್ಪಷ್ಟವಾಗಿ ಹೊಳೆಯಿತು.

ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ. ನೀನು ಜಗಕ್ಕೆ ಬಲ್ಲಿದನು, ಆನು ನಿನಗೆ ಬಲ್ಲಿದನು, ಕಂಡಯ್ಯಾ. ಆನೆ ಕನ್ನಡಿಯೊಳಗೆ ಅಡಗಿದಂತೆ, ಜಗದಗಲ ಮುಗಿಲಗಲಕ್ಕೂ ಪಾತಾಳದಿಂದತ್ತತ್ತ, ಬ್ರಹ್ಮಾಂಡದಿಂದತ್ತತ್ತಕ್ಕೂ ಚಾಚಿಕೊಂಡ ನೀನು ಎನ್ನೊಳಗೆ ಅಡಗಿದೆ ಕೂಡಲಸಂಗಮದೇವಾ.

ತನುವನ್ನು ಸೃಷ್ಟಿ ಮಾಡಿ, ತನುವನ್ನು ತಿಳಿಯುವ ಮನವನ್ನು ತನುವಿನಲ್ಲಿಯೇ ಸೃಷ್ಟಿ ಮಾಡಿ, ತನುವಿಗೂ ಮನಕ್ಕೂ ಸದಾ ಪಾಠ ಮಾಡುವ ನೀನು ಕೂಡಾ ತನುವಿನಲ್ಲಿಯೇ ಸಂಗಮವಾದುದನ್ನು ನೀನು ಸೃಷ್ಟಿ ಮಾಡಿದ ಮನದಿಂದಲೇ ನಾನು ನಿನ್ನನ್ನು ಅರಿತೆ. ನಿನ್ನನ್ನೇ ಆರಾಧಿಸಿದೆ.

ನೀನು ಸೃಷ್ಟಿ ಮಾಡಿದ ಜಗತ್ತು ಏನೆಂದು ನಿನಗೆ ಗೊತ್ತಿದೆ. ನಿನ್ನನ್ನು ನಾನು ಬಲ್ಲೆ. ಹೀಗಾಗಿ ಎನ್ನ ಮನ ನಿನ್ನ ಸುತ್ತಿಪ್ಪುದು. ಹೀಗಾಗಿ ಕರಿಯು ಕನ್ನಡಿಯೊಳಗೆ ಅಡಗಿದಂತೆ ನೀನು ಎನ್ನಲ್ಲಿ ಅಡಗಿಕೊಂಡಿರುವಿ.

ಎನ್ನ ಕಾಡದ ಮುನ್ನ ನಿನ್ನ ಸಮ್ಮತವನ್ನಿತ್ತು ಎನ್ನನ್ನು ಸಲಹು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಅರಿವಿನ ಮಲ್ಲಯ್ಯನನ್ನು ಬೇಡಿಕೊಂಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**287**

**ಎನ್ನ ಗಂಡ ಬಹನಡ್ಡ ಬಂದು ಬಾಯ ತೆರೆವ,**
**ಬಾಯಿ ತುಂಬ ಹೊಯ್ವ.**
**ಮೆಲಲೊಡನೆ ಕುಡಿನೀರ ಹಿಡಿಯೆನುತಿಪ್ಪನವ್ವಾ.**
**ಕುಡಿಸಿ ಕಡು ಮೀರಿ ಉಗುಳೆನುತಿಪ್ಪ ಮುನ್ನ ಕಾಣಿರೊ.**
**ಇವನಾಡಿಸುವ ಯಂತ್ರವಾಹಕ**
**ಕಪಿಲಸಿದ್ಧ ಮಲ್ಲಿಕಾರ್ಜುನ ನುಗುಳೆಂದಡೆ ಉಗುಳುವೆನವ್ವಾ.**

ಹೆಂಡತಿಯನ್ನು ನೋಡಿಕೊಳ್ಳುವುದು ಗಂಡನ ಧರ್ಮ. ಗಂಡನ ಮಾತು ಕೇಳುವುದು ಹೆಂಡತಿಯ ಧರ್ಮ. ಹೆಂಡತಿಗೆ ಏನೂ ತಿಳಿಯುವುದಿಲ್ಲ. ಆಕೆಗೆ ಸ್ವಾತಂತ್ರ್ಯವೂ ಇಲ್ಲ. 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಮನು ಹೇಳಿದ ಮಾತು ಹೆಂಡತಿಗೆ ಮಾತ್ರ ಅನ್ವಹಿಸುತ್ತದೆ.

ಸ್ತ್ರೀಗೆ ಅಲ್ಲ.

ಶರಣರು ಸ್ತ್ರೀಗೆ ಸ್ವಾತಂತ್ರ್ಯಕೊಟ್ಟರು. ಹೆಂಡತಿಗೆ ಸ್ವಾತಂತ್ರ್ಯ ಕೊಡಲಿಲ್ಲ. ''ಹೆಣ್ಣು ಹೆಣ್ಣಲ್ಲ; ಹೆಣ್ಣು ರಕ್ಕಸಿಯಲ್ಲ; ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ''. ಹೆಣ್ಣು ಹೆಣ್ಣೇ; ಗಂಡು ಕೂಡಾ ಹೆಣ್ಣೆ. ಲೋಕದ ಗಂಡು ಹೆಣ್ಣು ಎನ್ನುವ ದೇಹದಲ್ಲಿ ಸಂಗಮವಾದ ಅರಿವಿನ ಮಲ್ಲಯ್ಯನೊಬ್ಬನೇ ಗಂಡ! 'ಗಂಡು ಹೆಣ್ಣು' ಎಂದು ಹೇಳುವ ದೇಹವನ್ನು ಆವರಿಸಿದ ಮನ ಮಾತ್ರ ಹೆಣ್ಣು!

ಸಿದ್ಧರಾಮ ಶಿವಯೋಗಿ ಲೋಕದ ದೃಷ್ಟಿಯಲ್ಲಿ ಗಂಡಾದರೂ ಕೂಡಾ ಆತನ ದೃಷ್ಟಿಯಲ್ಲಿ ಆತ ಎಂದೂ ಗಂಡಲ್ಲ. ಹಾಗೆಯೇ ಸಕಲ ಶರಣರ ದೃಷ್ಟಿಯಲ್ಲಿ ಸಕಲ ಶರಣರೂ ಹೆಣ್ಣೇ ಆಗಿದ್ದಾರೆ! ಹೀಗಾಗಿ ಶರಣ ಸತಿ ಲಿಂಗ ಪತಿ ಎಂದರು.

ಮನವನ್ನೇ ಹೆಂಡತಿಯನ್ನಾಗಿಸಿದರು; ಅರಿವನ್ನೇ ಗಂಡನನ್ನಾಗಿಸಿದರು. ಗಂಡ ಹೆಂಡತಿ ವಾಸವಾಗಿದ್ದ ದೇಹವನ್ನೇ ಮನೆಯನ್ನಾಗಿಸಿದರು. ಶರಣ ಸತಿ ಎಂದು ಲಿಂಗ ಪತಿ ಎಂದು ಪತಿ ದೇವನಿಗೆ ಶರಣು ಹೋದರು.

ಗಂಡನ ಮಾತು ಹೆಂಡತಿ ಕೇಳಿದಳು. ಸತಿಲೋಕಕ್ಕೆ ಚ್ಯುತಿ ಬಾರದಂತೆ ಹೆಂಡತಿ ನಡೆದುಕೊಂಡಳು. ಗರತಿ ಎನ್ನಿಸಿಕೊಂಡಳು. ಹಾದರ ಮಾಡಿ ಹಾದರಗಿತ್ತಿ ಎನ್ನಿಸಿಕೊಳ್ಳಲಿಲ್ಲ. ಗಂಡ ಕೂಡೆಂದರೆ ಕುಳಿತಳು; ಗಂಡ ಏಳು ಎಂದರೆ ಎದ್ದಳು. ಗಂಡನಾದರೂ ಹೆಂಡತಿ ಕುಲಕ್ಕೆ ಅಪಚಾರವೆಸಗಲಿಲ್ಲ. ಗಂಡ ಬಾಯಿ ತೆರೆ ಎಂದರೆ ಹೆಂಡತಿ ಬಾಯಿ ತೆಗೆದಳು. ಬಾಯಿ ತುಂಬಾ ಅರಿವಿನ ಅಮೃತದ ಪಾಯಸವನ್ನೇ ಹಾಕಿದ ಗಂಡ. ಮೆಲ್ಲಲೊಡನೆ ಕುಡಿಯುವ ನೀರನು ಹಿಡಿಯೆಂದು ಪನ್ನೀರನ್ನೇ ಕುಡಿಸಿದನವ್ವಾ. ಹೆಚ್ಚಾಗಿ ನೆತ್ತಿಗೆ ಹತ್ತಿದಾಗ ಉಗುಳಿ ಮೇಲೆ ನೋಡೆಂದನವ್ವಾ.

ಗಂಡನು ಆಡಿಸುವ ಯಂತ್ರವಾಹಕಳು ನಾನು. ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಅರಿವಿನ ಗಂಡನು ಉಗುಳೆಂದಡೆ ಉಗುಳುವೆನವ್ವಾ. ನನಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಇರಬಾರದು ಕೂಡಾ. ನಾನು ಅವನಾಡಿಸುವ ಯಂತ್ರ! ಅವನ ವಾಹನ!

ವಾಹನದ ಮೇಲೆ ಕುಳಿತವನು ವಾಹನದ ಮಾಲೀಕ. ಅವನು ಕರೆದುಕೊಂಡು ಹೋದರೆ ಮಾತ್ರ ವಾಹನ ಚಲಿಸುತ್ತದೆ. ಅವನು ಹೇಳಿದ ಜಾಗಕ್ಕೆ ವಾಹನ ಹೋಗುತ್ತದೆ. ಅವನು ಕರೆದುಕೊಂಡು ಹೋದ ಜಾಗಕ್ಕೆ ವಾಹನ ಹೋಗುತ್ತದೆ. ವಾಹನವೇ ಮಾಲೀಕನನ್ನು ತನ್ನ ಇಚ್ಛೆ ಬಂದತ್ತ ಕರೆದುಕೊಂಡು ಹೋದರೆ ಮಾಲೀಕನ ಗತಿ ಏನು? ಹೆಂಡತಿ ಹೇಳಿದಂತೆ ಕೇಳುವ ಗಂಡನೆಂದು ಜನ ಆಡಿಕೊಳ್ಳುವುದಿಲ್ಲವೆ? ಹೀಗಾಗಿ ಹೆಂಡತಿಗೆ ಸ್ವಾತಂತ್ರ್ಯ ಬೇಡ. ಗಂಡನೇ ಸರ್ವಾಧಿಕಾರಿ.

ಹೆಂಡತಿಯೇ ಸ್ವಯಂ ಇಚ್ಛೆಯಿಂದ ಅರಿವಿನ ಗಂಡನಿಗೆ ತಲೆಬಾಗಿ ಶರಣು ಹೋಗಬೇಕು. ಇಲ್ಲದಿದ್ದರೆ ಗಂಡ, ಹೆಂಡತಿಗೆ ಅರಿವಿನ ಅಮೃತಪಾನ ಮಾಡಿಸುವುದಿಲ್ಲ. ಅರಿವಿನ ಅಮೃತ ಕುಡಿಯದ ಹೆಂಡತಿ ಹೆಂಡತಿಯೇ ಅಲ್ಲ; ಹಾದರಗಿತ್ತಿ ಎನ್ನಿಸಿಕೊಳ್ಳುತ್ತಾಳೆ.

ಅರಿವಿನ ಗಂಡ ವಾಸ ಮಾಡಿದ ದೇಹವನ್ನು ಮನವೆಂಬ ಹೆಂಡತಿ ಸೆರೆ ಅಂಗಡಿಗೆ, ಕ್ಲಬ್ಬಿಗೆ, ವೇಶ್ಯಾಗೃಹಕ್ಕೆ, ಭ್ರಷ್ಟಾಚಾರಕ್ಕೆ ಎಲ್ಲೆಂದರಲ್ಲಿಗೆ ಕರೆದುಕೊಂಡು ಹೋಗಿ ದೇಹಕ್ಕೆ ಅಜ್ಞಾನದ ಪಟ್ಟಕಟ್ಟುತ್ತಾಳೆ. ಅದು ತನ್ನ ದೇವರಿದ್ದ ದೇವಾಲಯವೆನ್ನುವ ಕಬುರು ಸಹಿತ ಇಲ್ಲದೆ ಮನವೆಂಬ ಹೆಂಡತಿ ಎಚ್ಚರ ತಪ್ಪುತ್ತಾಳೆ. ಹೀಗಾಗಿ ಮನವೆಂಬ ಹೆಂಡತಿಗೆ ಅರಿವಾಗಬೇಕು; ನಾನು ಅರಿವಿನ

ಗಂಡನುಳ್ಳಾಕೆಯೆಂದು!

ಶರಣರು ಮಾತ್ರ ಈ ಜ್ಞಾನ ಕಲೆಯಲ್ಲಿ ನುರಿತರು. ಹೀಗೆ ತಮಗೆ ತಾವೇ ಅರಿವಿನ ಕಲೆಯಲ್ಲಿ ಸಕಲರೂ ನುರಿಯಬಹುದು ಎಂದು ಅನೇಕ ಸೂತ್ರಗಳನ್ನು ಬರೆದರು.

ಶರಣರ ಸೂತ್ರಗಳನ್ನು ಓದಿದವರು ಅರಿವಿನ ಕಲೆಯಲ್ಲಿ ನುರಿಯಲಿಲ್ಲ. ಸೂತ್ರ ಬರೆದ ಶರಣರಿಗೆ ಆಲಯ ನಿರ್ಮಿಸಿದರು. ಉತ್ಸವ ಮಾಡಿದರು. ಅಂಗದ ಮೇಲೆ ಲಿಂಗಧರಿಸಿ ಶರಣ ಸಂಸ್ಕೃತಿಯ ಆಚರಣೆ ಮಾಡಿದರು. ಅಂಗದ ಅಧಿಕಾರಿಯಾಗಬೇಕಾದ ಅರಿವಿನ ಲಿಂಗಯ್ಯ ಅಂಗದಲ್ಲಿಯೇ ಮರೆಯಾದ. ಮನವೆಂಬ ಹೆಂಡತಿಯದೇ ಕಾರುಬಾರು!

ಅಂಗಕ್ಕೆ ಇಟ್ಟ ಜಗದ್ಗುರು ಪೀಠಾಧಿಪತಿ ಎನ್ನುವ ಹೆಸರು ಅಳಿಸಿ ಹಾಕಿದಳು. ಶರಣ ಎಂದು ಮರುನಾಮಕರಣ ಮಾಡಿದಳು. ಸರ್ವಾಂಗದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನನ್ನು ಮರೆತಳು. ಅಂಗದ ಮೇಲೆ ಲಿಂಗಧರಿಸಿ ಲಿಂಗಾಯತ ಎಂದು ಘೋಷಿಸಿದಳು. ಲಿಂಗಾಯತನಲ್ಲ ವೀರಶೈವ ಎಂದು ಕಿರುಚಿದಳು. ಇದು ಗಂಡ ಹೆಂಡತಿಯ ಜಗಳ. ಅರಿವು ಮರೆವಾದ ಮನವೆಂಬ ಹೆಂಡತಿಯ ಜಗಳ.

ಮುಸಲ್ಮಾನ, ಕ್ರೈಸ್ತ, ಬೌದ್ಧ, ಜೈನ, ಹಿಂದು, ಫಾರ್ಸಿ, ಲಿಂಗಾಯತ ವೀರಶೈವ ಎಂದು ಮನ ದೇಹಕ್ಕೆ ಜಗಳ ಹಚ್ಚಿದೆ. ಮನವೆಂಬ ಅಜ್ಞಾನಿ ಹೆಂಡತಿಗೆ ಸ್ವಾತಂತ್ರ್ಯ ಸಿಕ್ಕರೆ ಆಗುವುದೇ ಹೀಗೆ. ''ಗಂಡ ಹೆಂಡತಿಯ ಜಗಳದಲ್ಲಿ ಕೂಸು ಬಡವಾಯಿತು'' ಎನ್ನುವ ಗಾದೆಯಂತೆ ನಿರಪರಾಧಿ ದೇಹದ ಸ್ಥಿತಿಯಾಗಿದೆ. ಏಕೆಂದರೆ ದೇಹವೇ ಹಿಂದು, ದೇಹವೇ ಮುಸಲ್ಮಾನ, ದೇಹವೇ ಫಾರ್ಸಿ, ದೇಹವೇ ಕ್ರೈಸ್ತ, ದೇಹವೇ ಜೈನ, ದೇಹವೇ ಬೌದ್ಧ, ದೇಹವೇ ಲಿಂಗಾಯತ-ವೀರಶೈವ ಆಗಿದೆ. ದೇಹವೇ ಹೆಣ್ಣು ದೇಹವೇ ಗಂಡು ಆಗಿದೆ. ಇದು ಮನವೆಂಬ ಹೆಂಡತಿಗೆ ಸ್ವಾತಂತ್ರ್ಯ ಸಿಕ್ಕ ಪಾಡು!

**288**

**ಎನ್ನ ತನುಮನದೊಡೆಯ ನೀನೆ ಕಂಡಯ್ಯಾ.**
**ಮನದ ಮಹಾದೇವ ನೀನಾದ ಬಳಿಕ**
**ಇನ್ನು ನಾ ಮನವ ಕದ್ದೆಲ್ಲಿ ಬೈಚಿಡುವೆನಯ್ಯಾ?**
**ಎನ್ನ ಮನೋವಾಕ್ಕಾಯದೊಡೆಯ ನೀನೆ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಶರಣು ಶರಣು!**

ಮನದೊಡೆಯ ಮಹಾದೇವ ಮನವನ್ನು ಸೃಷ್ಟಿ ಮಾಡಿ, ತನುವನ್ನು ಸೃಷ್ಟಿ ಮಾಡಿ, ಮನವನ್ನು ತನುವಿನಲ್ಲಿಯೇ ಇಟ್ಟು, ತಾನು ತನುವಿನಲ್ಲಿಯೇ ಸಂಗಮವಾಗಿದ್ದಾನೆ. ಮನ ಮತ್ತು ತನುವಿನ ಚೆನ್ನಾಟವನ್ನು ತನುವಿನಲ್ಲಿಯೇ ಇದ್ದು ನೋಡುತ್ತಿದ್ದಾನೆ.

ನಾನು ಎನ್ನುವ ನನ್ನನ್ನು ಕೂಡಾ ಮನ ಮತ್ತು ತನುವಿನಲ್ಲಿ ಇರಿಸಿದ್ದಾನೆ. ಮಹಾದೇವ ಬಲು ಜಾಣ! ಮನ, ಮನದಿಂದಾಗಿ ತನುವಿನಿಂದ ಹೊರ ಬರುವ ಮಾತು, ಮತ್ತು ತನುವು; ಇವುಗಳಿಗೆ ಮಹಾದೇವನೇ ಒಡೆಯ. ನಾನೇನಾದರೂ ಮನವನ್ನು ನಿಯಂತ್ರಿಸಲು ಸಾಧ್ಯವೇ? ನೀನು ಸೃಷ್ಟಿ ಮಾಡಿದ ಮನವನ್ನು ಕದ್ದು ಎಲ್ಲಿ ಬಚ್ಚಿಡಲಿ ತಂದೆಯೇ?

ಮನ, ವಾಕ್ಕು, ಕಾಯ, ಪ್ರಾಣಕ್ಕೆ ಜನ್ಮ ನೀಡಿದ ತಂದೆ ನೀನು. ಹೀಗಾಗಿಯೇ

ಬಸವಣ್ಣನವರು ನಿನ್ನನ್ನು ಕುರಿತು ''ತಂದೆ ನೀನು ತಾಯಿ ನೀನು. ಬಂಧು ನೀನು, ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲ ಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿನ್ನ ಧರ್ಮ'' ಎಂದು ಹಾಡಿದ್ದಾರೆ.

ನಿನ್ನಿಂದ ಸೃಷ್ಟಿಯಾದ ಮನ ನಿನ್ನನ್ನು ಮರೆತುದಕ್ಕಾಗಿ ಮನವೆನ್ನಿಸಿಕೊಂಡಿದೆ. ಊಸರವಳ್ಳಿ ಎನ್ನಿಸಿಕೊಂಡಿದೆ. ಸೂಳೆ ಹಾದರಗಿತ್ತಿ ಚಂಚಲೆ ಎಂದು ಶರಣರಿಂದ ಕರೆಯಿಸಿಕೊಂಡಿದೆ.

ಮನ ನಿನ್ನನ್ನು ಮರೆತುದಕ್ಕಾಗಿ, ನೀನು ಸೃಷ್ಟಿ ಮಾಡಿದ ಕಾಯವನ್ನು ಮರೆತುದಕ್ಕಾಗಿ, ಕಾಯದಲ್ಲಿಯೇ ವಾಸ ಮಾಡಿದ ನಿನ್ನ ಸುಳುಹು ಮನಕ್ಕೆ ತಿಳಿಯದುದಕ್ಕಾಗಿ ಕಾಯವನ್ನು ಹೆಣ್ಣನ್ನಾಗಿ ಗಂಡನ್ನಾಗಿ ಮಾಡಿದೆ. ಕಾಯದಲ್ಲಿಯೇ ಜಾತಿ ಮತ ಪಂಥ ಧರ್ಮಗಳನ್ನು ಸೃಷ್ಟಿ ಮಾಡಿ, ಕಾಯಕ್ಕೆ ಮಾಯದ ಗಾಯ ಮಾಡುತ್ತ, ಕಾಯದ ಸುಖ ದುಃಖಗಳನ್ನು, ಮನ ತಾನು ಸುಖಿಸುತ್ತಾ ನೀನಿದ್ದ ಕಾಯವನ್ನು ಯಾಮಾರಿಸಿದೆ.

ಕಾಯ ಒಂದೇ ಆದರೂ ದೇಶ ಭಾಷೆ ಧರ್ಮ ಗಂಡು ಹೆಣ್ಣು ಶ್ರೀಮಂತ ಬಡವ ಭಿಕಾರಿ ಭಿಕ್ಷುಕ ಪ್ರಧಾನಿ ಸಚಿವ ಶಾಸಕ ಸಂಸದ ಜವಾನ ಸೈನಿಕನೆಂದು ವಿಂಗಡಿಸಿ ಮನ ಕಾಯದ ಮೂಲಕ ಸುಖ ಉಣ್ಣುತ್ತಲಿದೆ.

ನೀನು ವಾಸ ಮಾಡಿದ ಕಾಯಕ್ಕೆ ದುಃಖ; ನೀನೆ ಸೃಷ್ಟಿ ಮಾಡಿದ ಮನಕ್ಕೆ ಸುಖ! ಇವೆರಡರ ಚೆನ್ನಾಟ ನೋಡುವ ಆಸೆ ನಿನಗೆ! ನೀನು ಸೃಷ್ಟಿ ಮಾಡಿದ ಮನವನ್ನು ಕದ್ದು ಎಲ್ಲಿ ಬಚ್ಚಿಡಲಿ ತಂದೆ? ಅದು ನನಗೆ ಸಾಧ್ಯವೆ? ಮಹಾದೇವ ನೀನು. ನಿನ್ನ ಸೇವಕ ನಾನು. ಕಾಯದೊಡೆಯ ನೀನು. ಕಾಯವನ್ನು ಆವರಿಸಿದ ಮನದೊಡೆಯನೂ ನೀನೆ. ಕಾಯದಿಂದ ಹೊರ ಬಂದ ಸಕಲ ಮಾತುಗಳ ಒಡೆಯನೂ ನೀನೇ ಆಗಿರುವಿ. ನಿನಗೆ ಶರಣೆಂದು ಶರಣು ಹೋಗುವುದೊಂದೆ ನನ್ನ ಕೆಲಸ. ಸಕಲವನ್ನು ಸೃಷ್ಟಿ ಮಾಡಿ ಕಾಯದಲ್ಲಿ ವಾಸ ಮಾಡಿದ ಕೈಲಾಸ ಪತಿ ನೀನು. ಮನೋವಾಕ್ಕಾಯವನ್ನು ನಿನ್ನಂತೆ ಮಾಡಿಕೊ ತಂದೆ. ನಿನಗೆ ಶರಣು ಶರಣು ಎಂದು ಬದುಕುವೆ.

**289**

**ಎನ್ನ ತನುವ ಕಡಿವುದು ಬಸವಣ್ಣನ ಧರ್ಮವಯ್ಯಾ,**
**ಎನ್ನ ಮನವನೊರೆದು ನೋಡುವುದು ಬಸವಣ್ಣನ ಧರ್ಮವಯ್ಯಾ.**
**ಎನ್ನ ಧನವ ಸೂರೆ ಮಾಡುವುದು ಬಸವಣ್ಣನ ಧರ್ಮವಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಪ್ರತಿ ದೇಹವೂ ಅರಿವಿನ ಸಂಪತ್ತಿನಿಂದ ಭರಿತವಾಗಿದೆ. ಹೀಗಾಗಿ ದೇಹ ಸಂಪದ್ಭರಿತ ಅರಿವಿನ ಚಿನ್ಮಯ ಪಾತ್ರೆ. ತನುವಿನಲ್ಲಿ ತುಂಬಿ ತುಳುಕಾಡುವ ಅರಿವನ್ನು ಬಳಕೆ ಮಾಡಲು ಮನಕ್ಕೆ ಸಾಧ್ಯವಾಗುತ್ತಿಲ್ಲ. ಪುನಃ ಪುಸ್ತಕದ ಅರಿವನ್ನು, ನೆರೆಹೊರೆಯ ಅರಿವನ್ನು ಜ್ಞಾನಿಗಳ ಭಾಷಣ, ಉಪನ್ಯಾಸಗಳನ್ನು ತುಂಬಿಕೊಂಡು ಅದನ್ನೇ ಆಪದ್ಧನವೆಂದು ಮನ ಬಳಸುತ್ತದೆ.

ಭಗವದ್ಗೀತೆ, ಬೈಬಲ್, ಕುರಾನ್, ತ್ರಿಪಿಟಿಕ, ಗ್ರಂಥಸಾಹೇಬ, ದಾಸರ ಕೀರ್ತನೆ, ತತ್ವಪದಗಳು, ಶರಣರ ವಚನಗಳೇ ತನುವಿಗೆ ಆಸ್ತಿಯಾಗಿವೆ. ಇವು ತನುವಿನ ಆಸ್ತಿಯಲ್ಲ. ಮನ ಉರು ಹೊಡೆದು ತನುವಿನಲ್ಲಿ ತುಂಬಿಕೊಂಡ ಕಳ್ಳ ಧನ; ಕಾಳಧನ. ಈ ಕಾಳಧನ ವೇದಿಕೆಗೆ

ಬಳಕೆಯಾಗುತ್ತದೆಯೇ ಹೊರತು ತನ್ನ ಇರುವಿಕೆಗೆ ಬಳಕೆಯಾಗುವುದಿಲ್ಲ.

ಭಗವದ್ಗೀತೆಯ ಮಾತುಗಳನ್ನು ಲೀಲಾಜಾಲವಾಗಿ ಆಡುವ ನಿತ್ಯಾನಂದ ಸ್ವಾಮಿ, ರಾಘವಶ್ರೀಗಳಿಗೆ ಇರುವಿಕೆಯಲ್ಲಿ ಸೋಲು ಉಂಟಾಗಲಿಲ್ಲವೆ? ಜನ ಇವರ ಮಾತುಗಳಿಗೆ ಆಕರ್ಷಿತರಾದರು; ಇವರು ಇರುವಿಕೆಯಲ್ಲಿ ಸೋತಾಗ ಅದೇ ಜನ ಕಲ್ಲಿಲೆ ಹೊಡೆದರು. ಇವರ ತನುಗಳು ಬಾಹ್ಯಧನದಿಂದ ತೃಪ್ತಿ ಪಟ್ಟವೇ ಹೊರತು ಆಂತರಿಕ ಧನದ ತೃಪ್ತಿ ಇವರಿಗೆ ಆಗಲೇ ಇಲ್ಲ.

ಕೇಳುವ ತನುಗಳಿಗೆ ಏನು ಗೊತ್ತು? ಹೇಳುವಾಗ ಕೇಳಿ ಆನಂದಪಟ್ಟವು. ಕೇಳಿದಷ್ಟು ಹಣ ಕೊಟ್ಟವು. ಹೇಳುವಾತ ಹೇಳಿದಂತೆ ಇರಲು ಬಾರದಿದ್ದಾಗ ಕೇಳಿದ ತನುಗಳು ಹೇಳಿದಾತನನ್ನು ಕಲ್ಲಿಲೆ ಹೊಡೆದವು.

ಹೇಳುವ ತನುವಾದರೇನು, ಕೇಳುವ ತನುವಾದರೇನು? ತನು ಒಂದೇ, ತನುವನ್ನು ಆವರಿಸಿದ ಮನ ಒಂದೇ, ತನುವಿನಲ್ಲಿ ಸಂಗಮವಾದ ಅರಿವು ಒಂದೇ. ತನುವೆಂದರೆ ಅರಿವು ಎನ್ನುವ ಸಂಪತ್ತಿನಿಂದ ಭರಿತವಾದ ಚಿನ್ಮಯ ಪಾತ್ರೆ. ಮನ ತನುವಿನಲ್ಲಿಯೇ ಇರುವ ಅರಿವಿನ ಅಮೃತವನ್ನು ಅರಿತು ಅದನ್ನು ಪಾನ ಮಾಡಿದಾಗ ಮನವೇ ಘನಮನವಾಗುವುದು. ಬುದ್ಧನಾಗುವುದು, ಮಹಾವೀರನಾಗುವುದು, ಕ್ರಿಷ್ಣನಂತೆ ವಿರಾಟಸ್ವರೂಪಿಯೇ ತಾನಾಗುವುದು.

ಬಸವಣ್ಣ, ಸಿದ್ಧರಾಮ ಶಿವಯೋಗಿಗೆ ತನುವಿನಲ್ಲಿಯೇ ತನುವಿನ ಅರಿವಿನ ಧರ್ಮವನ್ನು ತನುವನ್ನು ಆವರಿಸಿದ ಮನಕ್ಕೆ ತೋರಿದ. ತನುವಿನ ಅಜ್ಞಾನ ತನಗೆ ತಾನೇ ಕಡಿದು ಹೋಯಿತು. ತನುವೇ ಚಿನ್ಮಯ ಪಾತ್ರೆಯಾಯಿತು. ತನುವಿನಲ್ಲಿ ಸಂಗಮವಾದ ಅರಿವಿನ ಅಮೃತವನ್ನು ಪಾನ ಮಾಡಿದ ಮನ ಘನಮನವಾಯಿತು.

ವೇದ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಮನ ತನುವಿನಲ್ಲಿ ತುಂಬಿಕೊಂಡಿದ್ದರೂ ಅವು ತನುವಿನ ಅಪವ್ಯಯಕ್ಕೆ ಒಳಗಾಗಿದ್ದವು. ಮನದ ಬಾಹ್ಯ ಸುಖಕ್ಕಾಗಿ ಬಳಕೆಯಾಗಿದ್ದವು. ಧನವೇ ಕಾಳಧನವಾಗಿ ಮಾರ್ಪಾಟಾಗಿತ್ತು.

ತನುವಿನಲ್ಲಿ ಸಂಗ್ರಹವಾದ ಕಾಳಧನವೆಂಬ ಅಜ್ಞಾನವನ್ನು ತನುವಿನ ಜ್ಞಾನದ ಮೂಲಕ ತನುವಿನಿಂದಲೇ ಕಡಿದು ಹಾಕುವ ಸೂತ್ರವನ್ನು ಬಸವಣ್ಣ ತನುವಿಗೆ ಸೂಚಿಸಿದ. ಶಿದ್ಧರಾಮ ಶಿವಯೋಗಿ ಈ ಸೂತ್ರವನ್ನು ಕೂಡಲೇ ಬಳಸಿದ. ಮನದಿಂದಾಗಿ ತನುವಿನಲ್ಲಿ ಸಂಗ್ರಹವಾದ ಸಕಲ ಅಪರಾಧಗಳು ಉದುರಿ ಬಿದ್ದವು. ''ಬೆಟ್ಟದನಿತಪರಾಧವನ್ನು ಒಂದು ಬೆಟ್ಟಿಲೆ ತೊಡೆವ'' ಎನ್ನುವಂತೆ ತನುವಿನ ಸಕಲ ಅಜ್ಞಾನಗಳು ಕಡಿದು ನೆಲಕ್ಕುರುಳಿದವು. ತನುವಿನ ಜ್ಞಾನವನ್ನು ತನುವನ್ನು ಆವರಿಸಿದ್ದ ಮನ ಬಳಸಿದಕ್ಕಾಗಿ ತನು ಅರಿವಿನ ಸಂಪದ್ಭರಿತ ತನುವಾಯಿತು. ಮನ ಘನಮನವಾಯಿತು.

ತನುವಿನಲ್ಲಿರುವ ಅರಿವಿನ ಸಂಪತ್ತು (ಧನ) ತನುವಿಗೆ ತೋರಿಸಲು ತನುವಿನಿಂದ ತನುವೇ ಹಣಪಡೆಯುವುದೆಂದರೇನು ? ಇದು ತನುವನ್ನು ಆವರಿಸಿದ ಮನದ ಮಾಯೆ. ತನುವನ್ನು ತನುವಿನ ಸಂಪತ್ತನ್ನು ತಿಳಿಯದ ಮನದ ಮಾಯೆ! ತನುವಿನಿಂದಲೇ ಹೊರಬಂದ ಭಗವದ್ಗೀತೆ ಬೈಬಲ್ ಕುರಾನ್ ವೇದ ಉಪನಿಷತ್ತುಗಳನ್ನು ಪುನಃ ತನುವಿನಲ್ಲಿಯೇ ಸಂಗ್ರಹ ಮಾಡಿಕೊಂಡು ಆರಾಧಿಸುವುದು ಮನದ ಮಾಯೆ!

''ನಿತ್ಯ ನಿರಂಜನ ತಾನೆಂದರಿತ 'ತತ್ವಮಸಿ' ಎಂದು ಹೊರಗನೆ ಹಾಡಿ ಸತ್ತಿತಲ್ಲ ಜಗವೆಲ್ಲ ನಾಯಿಸಾವ. ತಮ್ಮ ತಾವರಿಯದೆ 'ಸತ್ತವರ ಪತ್ರ' ಓದಿದಡೆ ಎತ್ತಣ ಮುಕ್ತಿ ಗುಹೇಶ್ವರಾ''

ಎಮೆ ಮನವೇ ನೀನೇ ನಿರಂಜನ, ನೀನೇ ತತ್ವ ಆಗಿರುವಿ ಅದನ್ನು ತಿಳಿಯದೆ ನೀನೇ ತಿಳಿ ಎಂದು ನಾಯಿಯಂತೆ ರಂಜನೆಗೆ ಒಳಪಟ್ಟು ಒದರಿ ಒದರಿ ಹೇಳುವಿಯಲ್ಲ? ಭಗವದ್ಗೀತೆ ಕುರಾನ್

ಬೈಬಲ್ ಬರೆದವರು ಸತ್ತು ಹೋಗಿದ್ದಾರೆ. ಸತ್ತವರು ಬರೆದಿಟ್ಟ ಆ ಪತ್ರ ಓದಿದರೆ ನಿನಗೆತ್ತ ಮುಕ್ತಿ? ನೀನೇ ತತ್ವ ಆಗಿರುವಿ. ಅದನ್ನು ನೀನೇ ತಿಳಿದು ಪರಮ ಸುಖಿಯಾಗು ಎಂದು ಅಲ್ಲಮಪ್ರಭುಗಳು ಮನಕ್ಕೆ ಸೂತ್ರ ಹೇಳಿದ್ದಾರೆ. ತತ್ವ ಆಸಕ್ತ ಮನ ಈ ಸೂತ್ರ ಪಾಲಿಸಿದರೆ ಸಾಕು ಎನ್ನಿಸುತ್ತದೆ.

**290**

**ಎನ್ನ ತನು ಶುದ್ಧವಾಯಿತ್ತು ಚೆನ್ನಬಸವಣ್ಣನಿಂದ;**
**ಎನ್ನ ಜೀವ ಶುದ್ಧವಾಯಿತ್ತು ಬಸವಣ್ಣನಿಂದ;**
**ಎನ್ನ ಭಾವ ಶುದ್ಧವಾಯಿತ್ತು ಪ್ರಭುದೇವರಿಂದ.**
**ಇಂತೆನ್ನ ತನು-ಜೀವ-ಭಾವಂಗಳಲ್ಲಿ**
**ಇಷ್ಟ ಪ್ರಾಣ ಭಾವಂಗಳ ಕುರುಹು ಕಂಡು**
**ನಿಷ್ಠೆ ನಿಬ್ಬೆರಗಾದೆ ನಾನು, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

'ತನು'ವಿನ ತಜ್ಞ ಚೆನ್ನಬಸವಣ್ಣನಿಂದಾಗಿ ಎನ್ನ ತನು ಶುದ್ಧವಾಯಿತು. 'ಪ್ರಾಣ'ದ ತಜ್ಞ ಬಸವಣ್ಣನಿಂದಾಗಿ ಎನ್ನ ಜೀವ ಶುದ್ಧವಾಯಿತು. 'ಭಾವ'ದ ತಜ್ಞ ಪ್ರಭುದೇವರಿಂದಾಗಿ ಎನ್ನ ಭಾವ ಶುದ್ಧವಾಯಿತು ಎಂದು ತನು, ಪ್ರಾಣ, ಭಾವ ಶುದ್ಧವಾದ ಬಗೆಯನ್ನು ಓದುಗರಿಗೆ ಸಿದ್ಧರಾಮ ಶಿವಯೋಗಿಗಳು ಹಂಚಿಕೊಂಡಿದ್ದಾರೆ.

ತನು ಶುದ್ಧವಲ್ಲ, ಭಾವ ಶುದ್ಧವಲ್ಲ, ಜೀವವೂ ಶುದ್ಧವಲ್ಲ. ಇಂದ್ರಿಯಗಳ ಮೂಲಕ ಅಂದರೆ ಕಣ್ಣು, ಕಿವಿ, ನಾಲಿಗೆ, ಚರ್ಮ, ಮೂಗಿನ ಮೂಲಕ ಭಾವ ಕೆರಳಿ ಇಲ್ಲ ಅರಳಿ ತನುವಿನಲ್ಲಿ ರಾಸಾಯನಿಕ ಕ್ರಿಯೆ ಉಂಟುಮಾಡಿ ಪ್ರಾಣ ಗಲಿಬಿಲಿಗೊಳ್ಳುತ್ತದೆ.

ತನುವಿನ ಮೂಲಕ ತನುವನ್ನು ನೋಡಿದ ಕಣ್ಣು, ಅಣ್ಣ ತಂಗಿ ತಮ್ಮ ಮೈದುನ ಎಂದು ನುಡಿದು ಭಾವದಿಂದ ಅರಳುತ್ತದೆ. ಅದೇ 'ಭಾವ'ವೇ ದುರ್ಭಾವಕ್ಕೆ ಪಲ್ಲಟಗೊಂಡು ಕಾಮದಿಂದ ಕೆರಳಿ ತನು ದುರ್ಭಾವವಾಗಿ ಹಾದರಕ್ಕೆ ಇಳಿಯುತ್ತದೆ.

ಭಾವ ತನುವಿನಲ್ಲಿ ಸಂಬಂಧ ಸೃಷ್ಟಿ ಮಾಡಲು ಕಾರಣವಾಯಿತು. ಭಾವ ತನುವಿನಲ್ಲಿ ಹಾದರ ಸೃಷ್ಟಿ ಮಾಡಲು ಕಾರಣವಾಯಿತು. 'ಭಾವ'ದಿಂದಾಗಿ 'ತನು' ಅರಳಿತು. 'ಭಾವ'ದಿಂದಾಗಿ 'ತನು' ಕೆರಳಿತು. ತನು ಅರಳುವುದರಿಂದಾಗಿ, ತನು ಕೆರಳುವುದರಿಂದಾಗಿ ಪ್ರಾಣದಲ್ಲಿ ಏರಿಳಿತಗಳುಂಟುದಾವು.

ಮನ ತನುವಿನಲ್ಲಿ ಭಾವ ಸೃಷ್ಟಿ ಮಾಡಿದ ಫಲ. ಭಾವವೇ ದುರ್ಭಾವಕ್ಕೆ ಜಿಗಿದು ತನುವನ್ನು ದುರ್ಬಳಕೆ ಮಾಡಿದ ಫಲವನ್ನು ತನು ಮತ್ತು ಪ್ರಾಣವೇ ಅನುಭವಿಸುತ್ತದೆ. ಭಾವದಿಂದಾಗಿ ತನು ಹಾದರದ ಹಣೆಪಟ್ಟಿ ಕಟ್ಟಿಕೊಳ್ಳುತ್ತದೆ.

ನೋಡಿದರೆ, ಕೇಳಿದರೆ, ಮುಟ್ಟಿದರೆ, ಮೂಸಿಸಿದರೆ, ರುಚಿಸಿದರೆ ತನುವಿನಲ್ಲಿ ತೊಂದರೆಯಾಗುತ್ತದೆ. ಹಾಗೆಯೇ ಸುಖವೂ ಆಗುತ್ತದೆ. ಈ ಸುಖ ಮತ್ತು ದುಃಖಗಳಿಗೆ ಏನು ಕಾರಣ? ನೋಡಿದಂತೆ ನುಡಿದರೆ ತನುವಿಗೆ ತೊಂದರೆ. ನೋಡುವಾಗ ಹಾದರದ ಭಾವ, ನುಡಿಯುವಾಗ ಆದರದ ಭಾವ. ನುಡಿದಂತೆ ನೋಡಲು ಸಾಧ್ಯವಾಗುವುದಿಲ್ಲ. ನೋಡಿದಂತೆ ನುಡಿಯಲು ಸಾಧ್ಯವಾಗುವುದಿಲ್ಲ. ಭಾವದಲ್ಲಿ ಈ ದ್ವಂದ್ವ ಏಕೆ ಉಂಟಾಗುತ್ತದೆ?

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಹುಟ್ಟಿದ ಭಾವ, ಇಡೀ ತನುವನ್ನೇ

ಆವರಿಸಿಕೊಂಡ ಭಾವ, ತನುವನ್ನು ಅರಳಿಸುವ, ತನುವನ್ನು ಕೆರಳಿಸುವ ಕಾಯಕದಲ್ಲಿ ಏಕೆ ತೊಡಗಿಕೊಂಡಿದೆ. ತನುವಿನಲ್ಲಿ ಹುಟ್ಟಿ, ತನುವಿನ ಪ್ರಾಣಕ್ಕೆ ಕುತ್ತು ತಂದು ತನುವಿನಲ್ಲಿಯೇ ತನ್ನ ಅಧಿಪತ್ಯವನ್ನು ಸಾರುವ ಭಾವವನ್ನು ನಿರ್ನಾಮ ಮಾಡುವ ಬಗೆಯನ್ನು ನನಗೆ ವಿವರಿಸಿ ಹೇಳಿ ಪ್ರಭು ಎಂದು ಸಿದ್ಧರಾಮ ಶಿವಯೋಗಿಗಳು ಅಲ್ಲಮ ಪ್ರಭುದೇವರನ್ನು ಕೇಳಿದರು:

ಶಾಲಾ, ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಪಾಠ ಮಾಡುವ ಗುರುವನ್ನು ವಿದ್ಯಾರ್ಥಿ ಕೇಳಿದರೆ ಅವರಿಗೆ ಹೇಳಲು ಬುರವುದಿಲ್ಲ. 'ಭಾವ'ದಿಂದಲೇ ತನುವಿನಲ್ಲಿ ತೊಂದರೆ ಉಂಟಾಗುತ್ತದೆ ಎಂದು ಶಿಷ್ಯನಿಗೂ ಗೊತ್ತಿಲ್ಲ ಪಾಠ ಮಾಡುವ ಗುರುವಿಗೂ ಗೊತ್ತಿಲ್ಲ. ಹುಟ್ಟಿದಂದಿನಿಂದ ಕಾಯ ಭಾವದಿಂದಲೇ ಅರಳಿ, ಭಾವದಿಂದಲೇ ಕೆರಳಿ, ಒಮ್ಮೆ ಭಾವದಿಂದಲೇ ಸಾವು ಸಂಭವಿಸುತ್ತದೆ. ಕಾಯದಲ್ಲಿ ಹರಿದಾಡುವ ಅಶುದ್ಧವಾದ ಭಾವವನ್ನು ಶುದ್ಧಗೊಳಿಸಿಕೊಳ್ಳುವ ಬಗೆ ಹೇಗೆ ಎಂದು ಬಲ್ಲ ಜ್ಞಾನಿಗಳಿಂದ ತಿಳಿದುಕೊಂಡು ಬಾವವನ್ನು ಶಿದ್ಧಗೊಳಿಸಿಕೊಂಡಾಗ ಕಾಯವೇ ಕೈಲಾಸವಾಗುತ್ತದೆ.

ಮನ ಶುದ್ಧವಾಗಬೇಕು, ತನು ಶುದ್ಧವಾಗಬೇಕು, ಭಾವ ಶುದ್ಧವಾಗಬೇಕು, ಪ್ರಾಣ ಶುದ್ಧವಾಗಬೇಕು ಎಂದು ಗುರುವಾದಾತ ವೇದಿಕೆಯ ಮೇಲೆ ಕುಳಿತು ಉಪನ್ಯಾಸ ನೀಡಿದರೆ ಕೇಳಿದ ಕಾಯ, ಹೇಳುವ ಕಾಯಗಳೆರಡೂ ಶುದ್ಧವಾಗುವುದಿಲ್ಲ. ಅಲ್ಲಮ ಪ್ರಭುಗಳಂತಹ ಸಮರ್ಥ ಗುರುದೇವನಿಗೆ ಮಾತ್ರ ತನು ಶುದ್ಧಗೊಳಿಸುವ ಸೂತ್ರ ಗೊತ್ತು. ಬಸವಣ್ಣನಂತಹ ಸಮರ್ಥ ಗುರುದೇವನಿಗೆ ಮಾತ್ರ ಪ್ರಾಣ ಶುದ್ಧಗೊಳಿಸುವ ಸೂತ್ರ ಗೊತ್ತು.

ಸಿದ್ಧರಾಮ ಶಿವಯೋಗಿಗಳಂತಹ ಸಮರ್ಥ ಶಿಷ್ಯನಿಗೆ ಮಾತ್ರ ಎನ್ನ ತನು ಭಾವ ಜೀವ ಶುದ್ಧವಿಲ್ಲ; ಅದನ್ನು ಶುದ್ಧಗೊಳಿಸಿಕೊಳ್ಳುವ ಸೂತ್ರ ಹೇಳಿ ಗುರುದೇವ ಎಂದು ಕೇಳಲು ಬರುತ್ತದೆ.

ಎನ್ನ ತನು ಶುದ್ಧವಾಯಿತ್ತು ಚೆನ್ನಬಸವಣ್ಣನಿಂದ :

ಮರ ಮೂರು ಕಾಲಗಳಲ್ಲಿ ಸಹಜವಾಗಿರುತ್ತದೆ. ಇದು ಮರದ ಶಕ್ತಿ. ಮರದ ಶಕ್ತಿ ಮರವೇ ಬಳಸುತ್ತದೆ. ಹೀಗಾಗಿ ಮರದಲ್ಲಿ ಸಕಲ ಎಲೆಗಳು ಉದುರಿದರೂ ಸುಂದರ. ಎಲೆಗಳಿಂದ ಹೂಗಳಿಂದ ತುಂಬಿಕೊಂಡರೂ ಸುಂದರ. ಕಾಯಿ ಮಾಗಿ ಹಣ್ಣುಗಳಿಂದ ತುಂಬಿಕೊಂಡರೂ ಸುಂದರ. ಬೀಜದಲ್ಲಿ ಮರದ ಶಕ್ತಿ ತುಂಬಿ ತೊಟ್ಟು ಕಳಚಿ ಕೆಳಗೆ ಬೀಳಿಸುತ್ತದೆ. ಬೀಜದ ಮೇಲಿನ ಸಿಪ್ಪೆ ತಿಂದು ಎಲ್ಲಿ ಬೀಸಾಡಿದರೂ ಮತ್ತೆ ತಂತಾನೆ ಚಿಗುತು ಮರವಾಗುತ್ತದೆ. ಹೆಮ್ಮರವಾಗುತ್ತದೆ.

ಎಲೆ ಕಾಯಿ ಹಣ್ಣುಗಳಿಂದ ಭರಿತವಾದ ಮರವನ್ನು ನೋಡಿ ಮತ್ತೊಂದು ಮರ ಕರುಬುವುದಿಲ್ಲ. ಕಸಿಯುವುದಿಲ್ಲ. ಮರದ ಶಕ್ತಿ ಮರದಿಂದಲೇ ಪ್ರಕಟವಾಗುತ್ತದೆ. ಹಾಗೆಯೇ ತನು ಕೂಡಾ ಜ್ಞಾನದ ಮರ. ಬೇರಿಲ್ಲದೆ ನಡೆದಾಡುತ್ತಾ ಮಾತನಾಡುವ ಮರ! ಬೋಧೀ ವೃಕ್ಷ.

ಸಿದ್ದಾರ್ಥ ಮರವನ್ನು ಅರಿವಿನಿಂದ ನೋಡಿದ. ಅದು ಸಹಜವಾಗಿರುವುದನ್ನು ಕಂಡ. ಹಾಗೆಯೇ ತನುವನ್ನು ನೋಡಿದ. ತನುವಿನಲ್ಲಿಯ ಸಹಜ ಜ್ಞಾನ ಮನಕ್ಕೆ ಪಾಠ ಮಾಡುವುದನ್ನು ಮನದಿಂದಲೇ ಕಂಡ. ಏನೀ ವಿಚಿತ್ರ! ತನುವಿನಲ್ಲಿ ಸಂಗಮವಾದ ಸಹಜ ಜ್ಞಾನ ತನುವನ್ನು ಆವರಿಸಿದ ಮನಕ್ಕೆ ಭೋದೆ ಮಾಡುತ್ತಲಿದೆ! ಜ್ಞಾನಕ್ಕೆ ಮನಕ್ಕೆ ತನು ವೃಕ್ಷವಾಗಿ ಆಶ್ರಯ ನೀಡಿದೆ!

ತನು ಸತ್ಯವಾದರೆ; ಜ್ಞಾನ ಶಿವ; ಇವೆರಡನ್ನೂ ವೀಕ್ಷಿಸುವ ಮನ ಸುಂದರ! ಅತಿ ಸುಂದರ! ತನುವೇ ವೃಕ್ಷ ಜ್ಞಾನವೇ ಬುದ್ಧ. ಮನ ಬುದ್ದನಿಗೆ ಶರಣು ಹೋಗಿ ಬುದ್ಧನೇ

ಆಗುವುದು. ಹೀಗಾಗಿ ವೃಕ್ಷದಂತೆ ತನು ಭೋದಿವೃಕ್ಷ!

ತನು, ಸಕಲ ಅರಿವಿನ ಪದಾರ್ಥಗಳನ್ನು ತುಂಬಿಕೊಂಡು, ತನುವಿನ ಗರ್ಭದಿಂದಲೇ ಹೊರಬಂದ ಅರಿವಿನ ಭಾಂಡ; ಚಿನ್ಮಯ ಪಾತ್ರೆ! ಅರಿವಿನಿಂದ ತನುವನ್ನು ನೋಡುವ ಸಂಸ್ಕಾರ ಮನಕ್ಕೆ ಸಿಕ್ಕರೆ ಸಾಕು, ತನುವಿನಲ್ಲಿ ಸಂಗಮವಾದ ಜ್ಞಾನಾಗ್ನಿಯಿಂದಲೇ ತನುವಿನ ಸಕಲ ಅಜ್ಞಾನವನ್ನು ಬೇಯಿಸಿ ಅಡುಗೆ ಮಾಡುತ್ತದೆ.

ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ಸ್ಪರ್ಶಮೂರ್ತಿಯು ತಾನೇ ಆಗುತ್ತದೆ. ಮನ ತನುವಿನ ಅರಿವಿನ ಪ್ರಸಾದವನು ಉಂಡು ಅರಿವಿಗೆ ನಮೋ ನಮೋ ಎಂದು ಆ ಅರಿವಿಗೆ ಶರಣು ಹೋಗುತ್ತದೆ. ಶರಣ ಸತಿಯಾಗಿ ಅರಿವಿನ ಲಿಂಗಯ್ಯನನ್ನೇ ಪತಿಯನ್ನಾಗಿಸಿಕೊಂಡು ಸತಿ ಧರ್ಮ ಮೆರೆಯುತ್ತದೆ. ಸತಿ ಪತಿಗಳಿಗೆ ಆಸರೆಯಾದ ಅಂಗವನ್ನೇ ಬೇರಿಲ್ಲದ ಮರವನ್ನಾಗಿಸಿಕೊಂಡು ಪರಮಾನಂದದಿಂದ ಅಲೆಯುತ್ತದೆ ಎಂದು ಚೆನ್ನಬಸವಣ್ಣನವರು ಪರಿಶುದ್ಧವಾದ ತನುವನ್ನು ಸಿದ್ಧರಾಮ ಶಿವಯೋಗಿಗಳ ತನುಮುಟ್ಟಿ ತನುವಿನ ಮೂಲಕ ತನು ತೋರಿದರು.

''ತನುವೇ ಭಾಂಡವಾಗಿ, ಮನವೇ ಸಯಿದಾನವಾಗಿ ಜ್ಞಾನಾಜ್ಞಿಯಲ್ಲೇ ಪದಾರ್ಥವ ಮಾಡೆ, ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ಸ್ಪರ್ಶಮೂರ್ತಿಯು ನೀನೆ. ನಿನ್ನ ಪ್ರಸಾದಕ್ಕೆ ನಮೋ ನಮೋಯೆಂಬೆ ಕೂಡಲಚೆನ್ನಸಂಗಮದೇವಾ''.

ತನುವನ್ನು ಮುಟ್ಟಿ, ತನುವಿನ ಮೂಲಕ ಅರಿವಿನ ತನುವನ್ನು ತೋರಿ, ಆ ಅರಿವಿನ ತನುವಿಗೆ ನಮೋ ನಮೋ ಎಂದು ಕೈಮುಗಿದರು-ಚೆನ್ನಬಸವಣ್ಣ! ಎನ್ನ ತನು ಶುದ್ಧವಾಯಿತು ಚೆನ್ನಬಸವಣ್ಣನಿಂದ ಎಂದು ಸಿದ್ಧರಾಮ ಶಿವಯೋಗಿಗಳು ಅರಿವಿನ ಅಮೃತ ಸವಿದು ಎದೆ ತುಂಬಿ ಹಾಡಿದರು.

ಸಕಲ ಪದಗಳೂ ಕಿವಿಗೆ ಬ್ರಹ್ಮಪದಗಳಾಗಿ ಕೇಳಿದವು. ಸಕಲ ತನುಗಳೂ ಕಣ್ಣಿಗೆ ವಿರಾಟ ಸ್ವರೂಪವಾಗಿ ಕಂಡವು. ನಾಲಿಗೆ ತನ್ನ ಪೂರ್ವಾಶ್ರಮವನ್ನು ಕಳೆದುಕೊಂಡು ಸಕಲ ಪದಾರ್ಥಗಳನ್ನು ಪ್ರಸಾದವಾಗಿ ಸ್ವೀಕರಿಸಿತು. ಸುಗಂಧ ದುರ್ಗಂಧವನ್ನು ಎಸೆದು ಮೂಗು ಸಕಲ ವಾಸನೆಗಳನ್ನು ಅರಿವಿನ ಪರಿಮಳವಾಗಿ ಸ್ವೀಕರಿಸಿತು. ಚರ್ಮ, ಚರ್ಮದೊಳಗಿದ್ದ ಪದಾರ್ಥದ ಜ್ಞಾನ ಚರ್ಮಕ್ಕೆ ಆಯಿತು. ಹೆಣ್ಣು ಗಂಡೆಂಬ ಅಜ್ಞಾನ ಚರ್ಮದ ಜ್ಞಾನದಿಂದಲೇ ಬೆಂದು ಅಂಗ ಸರ್ವಾಂಗ ಲಿಂಗಿಯಾಗಿ ಅಂಗಕ್ಕೆ ಗೋಚರವಾಯಿತು.

ಚೆನ್ನಬಸವಣ್ಣ ತನುವಿನ ತಜ್ಞ. ತನುವನ್ನು ಆವರಿಸಿಕೊಂಡ ತನುವಿನ ಅಜ್ಞಾನದ ಕಾಯಿಲೆಯನ್ನು, ತನುವನ್ನು ಮುಟ್ಟಿ ತನುವಿನ ಜ್ಞಾನವನ್ನು ತನುವಿಗೆ ತೋರಿಸಿದ. ತನುವಿನ ಜ್ಞಾನಾಜ್ಞಿಯಿಂದಲೇ ತನುವಿನ ಅಜ್ಞಾನ ಬೇಯಿಸಿದ. ಅರಿವಿನ ದಿವ್ಯ ಔಷಧಿಯನ್ನು ತನುವಿನಲ್ಲಿಯೇ ತಯ್ಯಾರಿಸಿದ. ತನುವಿನ ಅರಿವಿನ ಔಷಧಿಯನ್ನು ತನುವಿಗೆ ಲೇಪಿಸಿಕೊಂಡು ತನುವಿನ ಅಜ್ಞಾನದ ಕಾಯಿಲೆ ಕಳೆದುಕೊಳ್ಳಲು ತನುವಿನ ಮೂಲಕ ತನುವಿಗೆ ಹೇಳಿದ. ತನು ಜ್ಞಾನದ ಮರವಾಗಿ ಪರಮಾನಂದದಿಂದ ಸುಖಿಸಿತು; ಮೂರು ಕಾಲಗಳಲ್ಲಿಯೂ ಸುಖಿಸಿತು. ತ್ರಿಕಾಲ ಜ್ಞಾನಿಯಾಗಿ ಮೆರೆಯಿತು.

ಎನ್ನ ಜೀವ ಶುದ್ಧವಾಯಿತ್ತು ಬಸವಣ್ಣನಿಂದ :

ತನುವಿನ ತಜ್ಞ ಚೆನ್ನಬಸವಣ್ಣನಾದರೆ, ಜೀವ ಜೀವಾತ್ಮ ಅಂತರಾತ್ಮದ ತಜ್ಞ ಬಸವಣ್ಣನಾಗಿದ್ದಾನೆ. ಜೀವವೂ ಬೇರಲ್ಲ, ಜೀವಾತ್ಮವೂ ಬೇರಲ್ಲ, ಅಂತರಾತ್ಮವೂ ಬೇರಲ್ಲ. ಜೀವದ ಸುದ್ದಿಯನ್ನು ಕೇಳಲು ಬಂದ ಸಿದ್ಧರಾಮ ಶಿವಯೋಗಿಗೆ ಬಸವಣ್ಣ ಜೀವ ಮತ್ತು

ಅಂತರಾತ್ಮದ ಸುದ್ದಿಯನ್ನು ಈ ಕೆಳಗಿನಂತೆ ವಿವರಿಸುತ್ತಿದ್ದಾನೆ.

''ಜೀವಾತ್ಮ ಅಂತರಾತ್ಮನ ಸುದ್ದಿಯ ಬೆಸಗೊಂಬಡೆ ಹೇಳಿಹೆ ಕೇಳಿಭೋ: ಹುಸಿಯ ಸಂಕಲೆಯಾಗಿದ್ದಲ್ಲಿ ಕಾದುಕೊಂಡಿದ್ದನೊಬ್ಬ. ಕಥೆ ಕನಸ ಮಾಡಿ ಹೇಳುತ್ತಿದ್ದನೊಬ್ಬ. ಪರಾಪರಕ್ಕೆ ಹೋಗಿ ಪರಮನ ಸುದ್ದಿಯ ಕೊಂಡು ಬರುತ್ತಿಪ್ಪ ಅವರಿಬ್ಬರ ಕೆಡೆಮಟ್ಟಿ ಹೋಹಾಗ, ಲೋಕ ನಿರ್ಬುದ್ಧಿಗೊಂಡಿತ್ತು. ಕೂಡಲಸಂಗಮದೇವಾ''.

'ಬಯಲ'ಲ್ಲಿ ಸಂಗಮವಾದ 'ಆಮ್ಲಜನಕ'ವನ್ನು 'ಜಲಜನಕ'ವನ್ನು 'ಬಯಲು' ಒಂದು ಮಾಡಿ 'ಜಲ'ವನ್ನಾಗಿಸಿತು. ಬಯಲು ಜಲದಲ್ಲಿ ಬೆರೆತು ಜೀವ ಜಲವಾಯಿತು. ಜೀವಜಲವೇ ಗರ್ಭದಲ್ಲಿ ಹೊಕ್ಕು ತನುವಾಯಿತು. ತನುವಿಗೆ ಜೀವವಾಯಿತು; ತನುವಿಗೆ ಜೀವಾತ್ಮವಾಯಿತು; ಅಂತರಾತ್ಮವಾಯಿತು. ಈ ಅಂತರಾತ್ಮದ ಬೆಳಕಿನಿಂದ ಹುಟ್ಟಿದ ನೆರಳು 'ಮನ'ವೆಂದು ಕರೆಯಿಸಿಕೊಂಡಿತು.

ಅಂತರಾತ್ಮ ಮತ್ತು ಅಂತರಾತ್ಮವನ್ನು ತಿಳಿದು ಆತ್ಮವೇ ತಾನಾಗಬೇಕಾದ ಮನ ಇವೆರಡೂ ತನುವಿಗೆ ತ್ರಾಸಗಳಾದವು; ತಕ್ಕಡಿಯ ತಟ್ಟೆಗಳಾದವು. ತನುವೇ ತಟ್ಟೆಗಳಿಗೆ ದಂಡಿಗೆಯಾಯಿತು.

ಅರಿದರಿದು ಅರಿದರೆ, ಜೀವವೇ ಜೀವಾತ್ಮ! ಜೀವವೇ ಪರಮಾತ್ಮ! ಮನ ಅರಿಯದಿದ್ದರೆ ಜೀವಾತ್ಮ ಅಲ್ಲ; ಪರಮಾತ್ಮನೂ ಅಲ್ಲ! ಜೀವ ಬೇರೆ ಪರಮಾತ್ಮ ಬೇರೆ ಮಾಡಿ, ಮನ ಜೀವದೊಂದಿಗೆ ಚಿನ್ನಾಟವಾಡುತ್ತದೆ.

ಪರಮಾತ್ಮನನ್ನು ಕಲ್ಲಲ್ಲಿ ಕಟ್ಟಿಗೆಯಲ್ಲಿ ಲೋಹದಲ್ಲಿ ಮಣ್ಣಿನಲ್ಲಿ ಸೃಷ್ಟಿ ಮಾಡಿ, ಆ ಪರಮಾತ್ಮನಿಗೆ ಆಲಯ ನಿರ್ಮಾಣ ಮಾಡಿ ಆರಾಧಿಸುತ್ತದೆ. ಪರಮಾತ್ಮ ಸೃಷ್ಟಿ ಮಾಡಿದ ಮನ ಪರಮಾತ್ಮನಿಂದ ದೂರವಾಯಿತು. ಮನ, ತಾನೇ ಸೃಷ್ಟಿ ಮಾಡಿದ ಪರಮಾತ್ಮನಿಗೆ ಹತ್ತಿರವಾಗಿ ಆರಾಧಿಸಿತು. ಮನದ ಅಜ್ಞಾನದಿಂದಾಗಿ ಇಡೀ ಲೋಕವೇ ನಿರ್ಬುದ್ಧಿಗೊಂಡಿತು.

ಜೀವ ಮತ್ತು ಮನದ ಕೊಂಡಿಯೇ ಹುಸಿಯ ಸಂಕಲೆಯಾಗಿ ತನುವನ್ನು ಕಾಡುತ್ತಾ, ತನುವಿನಲ್ಲಿಯೇ ತನುವಿನೊಂದಿಗೆ ಜೀವ ಮನ ಬುದ್ಧಿ ಸುಖ ದುಃಖಗಳನ್ನು ಅನುಭವಿಸುತ್ತಾ ಜೀವದಲ್ಲಿ ಸಂಗಮವಾದ ಪರಮಾತ್ಮನಿಂದ ದೂರವಾದವು.

ಮನ, ಜೀವದಲ್ಲಿಯೇ ಜೀವಾತ್ಮನನ್ನು ಕಂಡಡೆ ಸಮವೇದಿಸದಿಪ್ಪನೆ ಶಿವನು? 'ಯತ್ರ ಜೀವಃ' 'ತತ್ರ ಶಿವ' ಸರ್ವಜೀವ ದಯಾಪಾರಿಯಾದ ಪ್ರಾಣನಾಥನು ಕಾಯವನ್ನೇ ಕೈಲಾಸವನ್ನಾಗಿಸಿ ಕಾಯವನ್ನು ಆವರಿಸಿದ ಮನವನ್ನು ಎತ್ತಿಕೊಳ್ಳುತ್ತಾನೆ. ಜೀವವೇ ಜೀವಾತ್ಮವಾಗಿ, ಜೀವಾತ್ಮವೇ ಪರಮಾತ್ಮನಾಗಿ ಕಾಯವನ್ನೇ ಕೈಲಾಸ ಮಾಡಿಕೊಂಡು, ಮನವನ್ನೇ ಮನದನ್ನೆಯಾಗಿಸಿಕೊಂಡು ಅರ್ಧನಾರೀಶ್ವರನೆಂದು ಹೆಸರು ಪಡೆಯುತ್ತಾನೆ.

ಕಾಯದಲ್ಲಿದ್ದ ಜೀವ ಕಾಯಕ್ಕೆ ಜನ್ಮಕೊಟ್ಟು, ಕಾಯದಲ್ಲಿಯೇ ಸಂಗಮವಾಗಿ, ಜೀವಾತ್ಮನೆಂದು, ಪರಮಾತ್ಮನೆಂದು ಕಾಯದಿಂದಲೇ ಕರೆಯಿಸಿಕೊಂಡು, ಕಾಯದಲ್ಲಿಯೇ ಮರೆವೆಂಬ ಮನವನ್ನು ಸೃಷ್ಟಿ ಮಾಡಿದ. ಮನವೆಂಬ ಮರೆವಿಗೆ ಅರಿವಾದರೆ ಜೀವ ಕಾಣುವುದಿಲ್ಲ; ಜೀವದೊಳಗೆ ಸಂಗಮವಾದ ಪರಮಾತ್ಮ ಕಾಣುತ್ತಾನೆ. ಕಾಯ ಕೈಲಾಸವಾಗುತ್ತದೆ. ಕಾಯ ಅರಿವಿನ ಬ್ರಹ್ಮಾಂಡವಾಗುತ್ತದೆ. ವಿರಾಟಸ್ವರೂಪಿಯೇ ತಾನಾಗುತ್ತದೆ.

ಕಾಯುವನ್ನು ಕಾಯುದ ಜೀವವನ್ನು ಆವರಿಸಿದ ಮನ ಕಾಯದಿಂದಲೇ ಕಾಯದೊಂದಿಗೆ ಇರುಳು ಹಗಲೆನ್ನದೆ ಪ್ರಾಣಘಾತಕ ಮಾಡಿದ ಬೇಡದ ಮನವನ್ನು ಜೀವವನ್ನು

ಕೈಲಾಸಕ್ಕೆ ಒಯ್ಯುತ್ತಾನೆ ಶಿವ.

ಇದು ಜೀವವೇ ಶುದ್ಧವಾಗಿ ಜೀವಾತ್ಮನಾದ ಕತೆ. ಜೀವಾತ್ಮನೆ ಪರಮಾತ್ಮನಾದ ಕತೆ. ಶಿವ-ಜೀವ ಸಂಬಂಧದ ಶಿವನ ಕತೆ.

ಎನ್ನ ಭಾವ ಶುದ್ಧವಾಯಿತುತಿ ಪ್ರಭುದೇವರಿಂದ:

ಪ್ರಭುದೇವರು 'ಭಾವ'ದ ತಜ್ಞ! ಸೊನ್ನಲಾಪುರದಿಂದ ಸಿದ್ಧರಾಮ ಶಿವಯೋಗಿಗಳನ್ನು ಪ್ರಭುದೇವರು ಕಲ್ಯಾಣಕ್ಕೆ ಕರೆದು ತಂದರು. ಆಯಾ ತಜ್ಞರಲ್ಲಿಗೆ ಅವರನ್ನು ಕಳುಹಿಸಿದರು. ಕಾಯದ ಕತೆಯನ್ನು, ಜೀವದ ಕತೆಯನ್ನು, ಭಾವದ ಕತೆಯನ್ನು ಕಾಯದಿಂದಲೇ ಕೇಳಿ ಕಾಯವನ್ನೇ ಕೈಲಾಸ ಮಾಡಿಕೊಳ್ಳಲು ಹೇಳಿದರು.

'ಭಾವ'ವೆಂಬುದು ಜನ್ಮಕ್ಕೆ ಈಡು, 'ನಿರ್ಭಾವ'ವೆಂಬುದು ಜನ್ಮಕ್ಕೆ ಕಾಡುಗಿಚ್ಚು. ಈ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಪ್ರಭುದೇವರಿಂದ ಕಲಿತುಕೊಂಡರು. ಜನ್ಮವನ್ನು ಸಾರ್ಥಕ ಪಡಿಸಿಕೊಂಡರು.

ಭಾವ ಎಂಬುದೊಂದು ರೋಗ. ಭಾವವೇ ದುರ್ಭಾವವಾಗಿ ಮಾರ್ಪಟ್ಟು ಕಾಯಕ್ಕೆ ಕೇಡು ಬಗೆಯುತ್ತದೆ. ಭಾವ ಕಾಯದಲ್ಲಿಯೇ ಹುಟ್ಟಿ, ಕಾಯವನ್ನೇ ಅರಳಿಸಿ, ಕಾಯವನ್ನೇ ಕೆರಳಿಸಿ ಕಾಯಕ್ಕೆ ಕೇಡು ಬಗೆಯುವುದು. ಇದು ಭಾವದ ಗುಣ; ಭಾವದ ದುರ್ಗುಣ!

ಉದಾ: ಕಣ್ಣು ಕಲ್ಲನ್ನು ನೋಡಿದಾಗ ಕಣ್ಣಲ್ಲಿ ಭಾವ ಹುಟ್ಟುವುದಿಲ್ಲ. ಕಾಯದಲ್ಲಿಯೂ ಭಾವ ಹುಟ್ಟುವುದಿಲ್ಲ. ಕಲ್ಲಲ್ಲಿ ಈಶ್ವರ ದೇವರನ್ನು ಕೆತ್ತಿದಾಗ ಕಣ್ಣಲ್ಲಿ ಭಾವ ಸೃಷ್ಟಿಯಾಗುತ್ತದೆ. ಕಾಯದಲ್ಲಿ ಭಕ್ತಿಯ ಭಾವ ಸೃಷ್ಟಿ ಮಾಡಿ, ಕಾಯ ಕಲ್ಲದೇವರಿಗೆ ಬಾಗುತ್ತದೆ. ಈಶ್ವರ ತನ್ನ ದೈವವೆಂದು, ಕಾಯದಲ್ಲಿ ದೃಢ ನಿರ್ಧಾರ ಸೃಷ್ಟಿ ಮಾಡುತ್ತದೆ ಭಾವ!

ಕಲ್ಲಲ್ಲಿಯೇ ಕೆತ್ತಿದ ವೆಂಕಟರಮಣನನ್ನು ನಾಮದ ದೇವರೆಂದು ಭಾವ ತಿರಸ್ಕರಿಸುತ್ತದೆ. ಭಾವವೇ ದುರ್ಭಾವವಾಗಿ ಮಾರ್ಪಟ್ಟು ವೆಂಕಟರಮಣನನ್ನು ಪೂಜಿಸುವ ಭಕ್ತರನ್ನು ಕೂಡಾ ದ್ವೇಶಿಸುತ್ತದೆ.

ಈಶ್ವರ, ವೆಂಕಟರಮಣನನ್ನು ಪೂಜಿಸುವ ಕಾಯ ಒಂದೇ. ಕಾಯದಲ್ಲಿ ಸೃಷ್ಟಿಯಾದ ಭಾವ ಒಂದೇ. ಕಾಯದಲ್ಲಿ ಸೃಷ್ಟಿಯಾದ ದುರ್ಭಾವ ಒಂದೇ. ಈಶ್ವರ, ವೆಂಕಟರಮಣನನ್ನು ಕೆತ್ತಿದ ಕಲ್ಲು ಒಂದೇ.

ಕಲ್ಲು ನೋಡಿದಾಗ ಕಣ್ಣಲ್ಲಿ ಭಾವ ಸೃಷ್ಟಿಯಾಗಲಿಲ್ಲ. ದುರ್ಭಾವವೂ ಸೃಷ್ಟಿಯಾಗಲಿಲ್ಲ. ಏಕೆಂದರೆ ಕಲ್ಲು ನೋಡುವಾಗ ಕಣ್ಣಲ್ಲಿ ನಿರ್ಭಾವವಿತ್ತು! ಭಾವ, ದುರ್ಭಾವಗಳೆಂಬ ಅಜ್ಞಾನವನ್ನು ನಿರ್ಭಾವ ನುಂಗಿ ಕಣ್ಣಲ್ಲಿ ಸಹಜ ಜ್ಞಾನದ ಕಿರಣಗಳನ್ನು ಹರಿಯುವಂತೆ ಮಾಡಿತು. ಭಾವದಿಂದಾಗಿ ತನಗೆ ಬೇಕಾದ ಕೆತ್ತಿದ ಕಲ್ಲು ದೇವರಾಯಿತು; ತನಗೆ ಬೇಡವಾದ ದೇವರನ್ನು ಕೆತ್ತಿದ ಕಲ್ಲು ನೋಡಿ ಭಾವವೇ ದುರ್ಭಾವವಾಯಿತು.

ಕಲ್ಲಲ್ಲಿ ಯಾವ ದೇವರನ್ನು ಕೆತ್ತಿದರೇನು? ಅದು ಕಲ್ಲು ಮಾತ್ರ! ಕಲ್ಲನ್ನು ಕಲ್ಲು ಎಂದು ನೋಡುವ ಶಕ್ತಿ ನಿರ್ಭಾವದ ಕಣ್ಣಿಗೆ ಮಾತ್ರ ಇದೆ. ನಿರ್ಭಾವ ಕಣ್ಣಲ್ಲಿಯೇ ಇದೆ. ಭಾವ ಕಣ್ಣಲ್ಲಿಯೇ ಇದೆ. ಕಣ್ಣು ಭಾವ, ನಿರ್ಭಾವ, ದುರ್ಭಾವಗಳಿಗೆ ಉಪಕರಣವಾಗಿದೆ. ಹಾಗೆಯೇ ಚರ್ಮ, ಮೂಗು, ನಾಲಿಗೆ, ಕಿವಿ ಕೂಡಾ ಕಣ್ಣಿನಂತೆಯೇ ಇವೆ. ಈ ಐದೂ ಇಂದ್ರಿಯಗಳಲ್ಲಿ ಭಾವ, ನಿರ್ಭಾವ, ದುರ್ಭಾವ ಕೆಲಸ ಮಾಡುತ್ತಿರುವುದರಿಂದ ಕಾಯವೇ ಜ್ಞಾನಿ, ಅಜ್ಞಾನಿ, ರಾಕ್ಷಸ ಎಂದು ಕಾಯದಿಂದಲೇ ಕರೆಯಿಸಿಕೊಳ್ಳುತ್ತದೆ.

ಕಾಯದಲ್ಲಿ ಸಹಜವಾಗಿ ಸಂಗಮವಾದ ನಿರ್ಭಾವವನ್ನು ಕಾಯಕ್ಕೆ ಬಳಕೆ ಮಾಡಲು ಬಂದಾಗ ಕಾಯ ಜ್ಞಾನಿ, ಮಹಾಜ್ಞಾನಿ, ಬುದ್ಧ, ಮಹಾವೀರ, ಶರಣ, ಸಂತ, ದಾಸ ಎಂದು ಕರೆಯಿಸಿಕೊಳ್ಳುತ್ತದೆ.

''ಭಾವದಲೊಬ್ಬ ದೇವರ ಮಾಡಿ, ಮನದಲೊಂದು ಭಕ್ತಿಯ ಮಾಡಿದರೆ, ಕಾಯದ ಕೈಯಲ್ಲಿ ಕಾರ್ಯವುಂಟೆ? ವಾಯಕ್ಕೆ ಬಳಲುವರು ನೋಡಾ, ಎತ್ತನೇರಿ ಎತ್ತನರಸುವರು, ಎತ್ತ ಹೋದರೈ ಗುಹೇಶ್ವರಾ?''

ತನು, ಜೀವ, ಭಾವಂಗಳಲ್ಲಿ ಇಷ್ಟ ಪ್ರಾಣ ಭಾವಂಗಳ ಕುರುಹು ಕಂಡು ನಿಷ್ಠೆ ನಿಬ್ಬೆರಗಾದೆ ನಾನು, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಎಂದು ಓದುಗರಿಗೆ ಸಿದ್ಧರಾಮ ಶಿವಯೋಗಿಗಳು ಎಚ್ಚರಿಕೆಯ ಮಾತನ್ನು ಹೇಳಿದ್ದಾರೆ.

ಪ್ರಭುದೇವರು ಹೇಳಿದ ಸೂತ್ರದಿಂದ ಇಡೀ ತನುಗಳು ಬೆಳಗುವುದಿಲ್ಲ. ಸದಾ ಅರಿವಿನಿಂದ ಬೆಳಗುವ ತನುವನ್ನು ತನುವೇ ಕಂಡುಕೊಂಡಾಗ ತನು ಬೆಳಗುತ್ತದೆ. ಪ್ರಭುದೇವರ ಸೂತ್ರ ತನುವಿನ ಅನುಭವಕ್ಕೆ ಬರುತ್ತದೆ.

ತನುವಿನಲ್ಲಿಯೇ ಅರಿವಿನ ತನುವೊಂದಿದೆ. ಅರಿವಿನ ತನು ತನುವಿನಲ್ಲಿಯೇ ಮರೆಯಾಗಿ, ಮರೆವಿನ ತನು ತನುವನ್ನು ಹಿಡಿದು ಕೆಲಸ ಮಾಡುತ್ತಿರುವುದರಿಂದ ತನು ನಿಸ್ತೇಜವಾಗಿದೆ. ಜಡವಾಗಿದೆ. ಮರೆವಿನ ತನುವಿಗೆ ಮತ್ತೆ ಮತ್ತೆ ಬಳಕೆಯಾಗಿ ಒಮ್ಮೆ ಭಾವಕ್ಕೆ ಮತ್ತೊಮ್ಮೆ ದುರ್ಭಾವಕ್ಕೆ ಒಳಪಡುತ್ತ ತನುವಿನ ಆಯುಷ್ಯ ಪೂರ್ತಿಯಾಗುತ್ತದೆ. ತನುವು ಅರಿವಿನ ತನುವನ್ನು ಅಂದರೆ ನಿರ್ಭಾವವುಳ್ಳ ತನುವನ್ನು ಕಂಡುಕೊಳ್ಳುವುದಕ್ಕೆ ಸಾಧ್ಯವಾಗುವುದೇ ಇಲ್ಲ.

ಎತ್ತನೇರಿ ಎತ್ತನರಿಸುವಂತಾಗಿದೆ ತನುವಿನ ಗತಿ. ಎತ್ತಿನ ಮೇಲೆ ಕುಳಿತು ಎತ್ತನ್ನೇ ಮರೆತು ಎತ್ತನ್ನು ಹುಡುಕುವುದೆಂದರೇನು? ಇದು ಸೋಜಿಗವಲ್ಲವೆ? ತನುವಿನಲ್ಲಿ ಅರಿವಿನ ತನು ಸಂಗಮವಾಗಿದ್ದರೂ, ಪುನಃ ಅರಿವಿನ ತನುವನ್ನು ಹುಡುಕಿ ಅರಿವನ್ನು ಕೇಳುವುದೆಂದರೇನು? ತನುವಿನಿಂದ ಹೊರಬಂದ ಅರಿವಿನ ಪುಸ್ತಕಗಳ ಸಾರವನ್ನು ತನುವಿನಲ್ಲಿ ಇಟ್ಟುಕೊಂಡು ಅರಿವು ಸಾರುವುದೆಂದರೇನು? ಅರಿವುಳ್ಳ ತನುವಿಗೆ ಅರಿವ ಹೇಳಿದರೆ ಅದು ಕೇಳುವುದೆ? ಅರಿವುಳ್ಳ ತನುವಿನಲ್ಲಿಯೇ ಮರೆವಿನ ತನುವಿದ್ದು ಆ ತನುವಿಗೆ ಅರಿವು ಹೇಳಿದರೆ ಹಿಡಿಸುವುದೆ? ಇದು ತನುವಿನ ಕತೆ. ತನುವಿನಲ್ಲಿರುವ ಭಾವ ದುರ್ಭಾವದ ಕತೆ. ನಿರ್ಭಾವವುಳ್ಳ ತನುವಿನ ನಿಜಕತೆ. ಕಲ್ಲಲ್ಲೇ ದೇವರನ್ನು ಕೆತ್ತಿ ಕಲ್ಲನ್ನು ಮರೆತ ಕತೆ.

**291**

**ಎನ್ನದಿರು ಅನ್ಯವನು**
**ಅನ್ಯ ತಾ ತನ್ನೊಳಗೆ ಬಿನ್ನಾಣವೇನು.**
**ಲೋಕದ ಹೊರಗೆಯೂ ಅನ್ಯತ್ರವು ಬೇಡ,**
**ತಾ ತನ್ನೊಳಗೆ ಬಿನ್ನಾಣದಿಂ ತಿಳಿದು ನೋಡು.**
**ಸಮತೆಯೊಳಗೆ ಬೇರನ್ಯವೇ ಇಲ್ಲ.**
**ತನ್ನೊಳಗೆ ಸರ್ವವೂ ಬಿನ್ನಾಣವೇನದರ**
**ಪರಿ ಬೇರೇನು ಹೇಳಾ.**

**ಸನ್ನುತವು ಸಮತೆಯ ಅನನ್ಯತವು ಆದರೆ**
**ತನ್ನೊಳಗೆ ಸರ್ವವೂ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ತನುವಿನಲ್ಲಿಯೇ ಸಂಗಮವಾದ ಅರಿವು, ತನುವನ್ನು ಆವರಿಸಿದ ಮನಕ್ಕೆ ಮರೆವು ಆದುದರಿಂದ ತಾನು ಬೇರೆ, ತನ್ನಂತೆಯೇ ಇರುವ ತನುವು ತನುವೇ ಆದರೂ ಅದು ಬೇರೆ ಎಂದು ತನುವಿನೊಳಗೆ ಮರೆವು ಸೃಷ್ಟಿಯಾಗಿದೆ. ಇದು ಅರಿವಿನ ಬಿನ್ನಾಣ. ತನುವನ್ನು ಆವರಿಸಿದ ಮನದ ಬಿನ್ನಾಣ.

ತನುವನ್ನು ಆವರಿಸಿದ ಮನದಿಂದ ಒಮ್ಮೆ ತನುವನ್ನೇ ನೋಡಿಕೊಂಡರೆ ತನ್ನ ತನುವಿನಲ್ಲಿರುವ ಪದಾರ್ಥ, ಅನ್ಯ ತನುಗಳಲ್ಲಿರುವ ಪದಾರ್ಥ, ಲೋಕದ ತನುಗಳಲ್ಲಿರುವ ಪದಾರ್ಥ ಒಂದೇ ಆಗಿದೆ. ತನುವು ತನುವಿನೊಳಗೆ ಬಿನ್ನಾಣದಿಂದ ತಿಳಿದು ನೋಡಿದಾಗ ಮಾತ್ರ ತಿಳಿಯುವುದು.

ತನುವಿನಲ್ಲಿ ಸಂಗಮವಾದ ಅರಿವಿನ ಸಮತೆಯೇ ಹಾಗೆ. ಅದು ಸಹಜ. ಸಹಜ ವಸ್ತುವಿಗೆ ಸಕಲವೂ ಸಹಜವಾಗಿಯೇ ಕಾಣುತ್ತದೆ. ತನು ಒಂದೇ, ತನುವಿನ ಚರ್ಮ ಒಂದೇ, ಅದರ ಸ್ಪರ್ಶ ಶಕ್ತಿಯೂ ಒಂದೇ ಆಗಿದೆ. ಇದ್ಯಾವುದೂ ಹೆಣ್ಣು ಅಲ್ಲ; ಗಂಡೂ ಅಲ್ಲ. ಅಖಂಡ ದೃಷ್ಟಿ ಅಖಂಡ ಚರ್ಮದ ಮೇಲೆ ಬಿದ್ದರೆ ಅಖಂಡ, ಖಂಡ ಖಂಡವಾಗಿ ಕಾಣುವುದಿಲ್ಲ. ಚರ್ಮದಲ್ಲಿ ಉಬ್ಬು ತಗ್ಗುಗಳಿದ್ದರೇನು ಅದು ಮಾಂಸವೇ ಹೊರತು ಹೆಣ್ಣು ಗಂಡು ಎಂದು ಅಲ್ಲ. ಅಖಂಡ ದೃಷ್ಟಿ ತನುವಿನಲ್ಲಿ ಮರೆಯಾದುದರಿಂದ ತನುವೇ ತನುವನ್ನು ಹೆಣ್ಣೆಂದು ಗಂಡೆಂದು ಜಾತಿ ಮತ ಪಂಥವೆಂದು ಧರ್ಮವೆಂದು ಶ್ರೀಮಂತ ಬಡವನೆಂದು ಖಂಡ ಖಂಡವಾಗಿ ನೋಡುತ್ತದೆ. ಇದು ಕೂಡಾ ತನುವಿನ ಬಿನ್ನಾಣವೇ ಸರಿ.

ಸರ್ವಾಂಗದಲ್ಲಿ ಸಮತೆ ಸಹಜವಾಗಿ ಭರಿತವಾಗಿದೆ. ತನುವಿನ ಸಮತೆಯ ತತ್ವ ತನುವಿಗೆ ಎಟಕದೆ ತನುವನ್ನೇ ಸಂಕಟಕ್ಕೆ ಒಡ್ಡಿದೆ. ತನುವಿನ ಅಜ್ಞಾನದ ಸಂಕಟವನ್ನು ತನುವೇ ನಿವಾರಣೆ ಮಾಡಿಕೊಂಡು ತನುವಿನ ಸಮತತ್ವವನ್ನು ತನುವೇ ಬಳಕೆ ಮಾಡಿದಾಗ, ತನು ಬೇರೆ ತನ್ನಂತೆಯೇ ಇರುವ ಅನ್ಯತನು ಬೇರೆ ಎಂದು ತನು ತನುವನ್ನು ಕಂಡು ಹೇಳುವಂತಿಲ್ಲ.

ಭಾಷೆ ಬೇರೆ ಆದರೇನು? ಬಣ್ಣ ಬೇರೆ ಆದರೇನು? ದೇಶ ಬೇರೆ ಆದರೇನು? ತನುವಿನ ಸಹಜ ಅರಿವಿನ ಧರ್ಮ ತನುವಿಗೆ ಒಲಿದಾಗ ಅದು ಬರೀ ತನುವಲ್ಲ; ವಿರಾಟ ಸ್ವರೂಪ! ಸರ್ವವೂ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ, ಸರ್ವಾಂಗವೂ ಲಿಂಗವಾಗುತ್ತದೆ.

**292**

**ಎನ್ನ ನೀ ಒಲಿವೆ, ಒಲ್ಲೆ ಎಂಬುದನು**
**ಅರಿಯಲು ಬಾರದು ಹಾ! ಹಾ! ಅಯ್ಯಾ!**
**ನೀನೊಲಿವಂತೆ ಗೆಯ್ವೆ ನಾನು.**
**ಒಲ್ಲದಂತೆ ಇರುವೆ ನೀನಯ್ಯಾ.**
**ಎನ್ನ ನೀ ಕರ ಕಾಡದಿರಯ್ಯಾ,**
**ಎನ್ನ ಕಪಿಲಸಿದ್ಧ ಮಲ್ಲೇಶ್ವರ ದೇವಯ್ಯ.**

ಮರ ಹೇಗೆ ನಿರಪರಾಧಿಯೋ; ಹಾಗೆ ತನು ಕೂಡಾ ನಿರಪರಾಧಿಯೇ ಆಗಿದೆ. ''ಅಪರಾಧಿ ನಾನಲ್ಲ, ಅಪರಾಧ ಎನಗಿಲ್ಲ, ಕಪಟ ನಾಟಕ ಸೂತ್ರಧಾರಿ ನೀನು'' ಎಂದು ದಾಸರು ತನುವನ್ನು ಆಡಿಸುವ ದೇವರನ್ನು ಕುರಿತು ಹಾಡಿದ್ದಾರೆ. ಹಾಗೆಯೇ ಸಿದ್ಧರಾಮ ಶಿವಯೋಗಿಗಳು ಕೂಡಾ ದೇವರನ್ನು ಕುರಿತು 'ಎನ್ನ ನೀ ಒಲಿವೆ, ಒಲ್ಲೆ ಎಂಬುದನು ಅರಿಯಲು ಬಾರದು ಹಾ! ಹಾ! ಅಯ್ಯಾ! ನೀನೊಲಿವಂತೆ ಗೆಯ್ವೆ ನಾನು' ಎಂದು ಹಾಡಿದ್ದಾರೆ.

ನನಗೆ ನೀನು ಒಲಿವೆ, ಒಲಿತಿರುವೆ. ದೇವರು ನನಗೆ ಒಲಿಯಲಿಲ್ಲ ಎನ್ನಲು ಯಾರಿಗೂ ಬರುವುದಿಲ್ಲ. ಏಕೆಂದರೆ ಸಕಲರೂ ದೇವರನ್ನು ನೆನೆಯುತ್ತಾರೆ ಪೂಜಿಸುತ್ತಾರೆ. ದೇವರನ್ನು ಕುರಿತು ಹಾಡುತ್ತಾರೆ. ಶಬ್ದ ಮಾತ್ರ ಬೇರೆ ಬೇರೆ. ಕೆಲವರು ಪ್ರಾರ್ಥಿಸುತ್ತಾರೆ, ಕೆಲವರು ಪೂಜಿಸುತ್ತಾರೆ. ಕೆಲವರು ಧ್ಯಾನಿಸುತ್ತಾರೆ, ಕೆಲವರು ದೇವರ ಕುರಿತು ಜಪ ತಪ ಗೈಯ್ಯುತ್ತಾರೆ.

ನೀನು ಆಡಿಸಿದಂತೆ ಆಡುವ ನಿನ್ನ ಬೊಂಬೆಗಳು ಅವರು. ನಿನ್ನನ್ನು ಕುರಿತು ಆಡಿ ಹಾಡಿ ಆರಾಧಿಸಿ ಪ್ರಾರ್ಥಿಸಿ ಧ್ಯಾನಿಸಿ ಜಪತಪಗೈದು ಬೇಡಿದರೂ ಕೂಡಾ ನೀನು ಮಾತ್ರ ಅವರನ್ನು ಒಲ್ಲೆ.

ತನುವಿಗೆ ಒಲಿತು, ತನುವನ್ನು ಸೃಷ್ಟಿ ಮಾಡಿ ತನುವಿನಲ್ಲಿಯೇ ಇದ್ದು, ತನುವನ್ನು ನಿನಗೆ ತಿಳಿದಂತೆ ಆಡಿಸಿ ಹಾಡಿಸಿ ಬೇಡಿಸುವಂತೆ ಮಾಡುವವನು ನೀನೆ. ಬೇಡುವ ಭಕ್ತನಿಗೆ ಒಲಿಯದೆ, ಆತನಲ್ಲಿಯೇ ಇದ್ದು ಆತನನ್ನು ಕಾಡಿಸುವವನು ಕೂಡಾ ನೀನೇ ಆಗಿರುವಿ. ಇದು ನಿನಗೂ ತನುವಿಗೂ ಇರುವ ಚಿನ್ನಾಟದ ಸಂಬಂಧ. ಈ ಆಟವನ್ನು ಒಲ್ಲೆ ಎನ್ನಲು ಬಾರದಂತೆ ಮಾಡಿರುವಿ.

ಕೆಲಸಕ್ಕೆ ಬಾರದ ಕಲ್ಲನ್ನು ನೋಡಿದ ತನು ಕಲ್ಲೆಂದು ತಿಳಿದು ಉದಾಸೀನ ಮಾಡಿತು. ನೋಡಿದ ಆ ಕಲ್ಲನ್ನೇ ಬೊಂಬೆ ಮಾಡಿತು. ಅದಕ್ಕೆ ಪ್ರಾಣ ಪ್ರತಿಷ್ಠಾನ ಮಾಡಿದೆ ಎಂಬ ಆಟವನ್ನು ಆಡಿತು. ಕಲ್ಲಲ್ಲೇ ನಿನಗೆ ಆಲಯ ಮಾಡಿತು. ಕಲ್ಲಲ್ಲೇ ನಿನಗೆ ಶಿಖರ ಮಾಡಿತು. ಅದನ್ನೇ ನೆತ್ತಿಯೆಂದು ತಿಳಿದು ನಿನಗೆ ಚಿನ್ನದ ಕಳಸಾರೋಹಣ ಮಾಡಿತು. ಕಲ್ಲ ಬೊಂಬೆ, ಕಲ್ಲಕಂಬ, ಕಲ್ಲ ಶಿಖರ, ಕಲ್ಲ ಪೌಳಿ, ಕಲ್ಲ ಹಾಸುಗೆ ಹಾಸಿ, ಕಲ್ಲಲ್ಲೇ ನಿನ್ನನ್ನು ಆರಾಧಿಸಿತು. ಅದು ಕಲ್ಲಲ್ಲ; ಕಲ್ಲನ್ನು ನೀನೇ ಎಂದು ತಿಳಿದು ಹಾಡಿತು. ಆರಾಧಿಸಿತು!

ಕಲ್ಲು ಎಂದ ತನುವನ್ನು ಕಲ್ಲಿಲೇ ಹೊಡಿದು ತನುವೇ ತನುವನ್ನು ಕೊಂದು ಹಾಕಿತು. ತನುವಿನಲ್ಲಿಯೇ ಇದ್ದು, ತನುವಿಗೆ ಒಲಿಯದಂತೆ ಇರುವ ಆಟ ನಿನ್ನದು! ಕಲ್ಲು ನೀನಲ್ಲ ; ಸಾಕ್ಷಾತ್ ಅಲ್ಲಾ ನೀನು ಎಂದು ಪ್ರಾರ್ಥಿಸುವ ತನುವನ್ನು ಆಡಿಸುವೆ! ಅಣು ರೇಣು ತೃಣ ಕಾಷ್ಠದಲ್ಲಿ ಇರುವ ದೇವರು ನೀನು ಎಂದು ಪೂಜಿಸುವ ತನುವನ್ನು ಆಡಿಸುವೆ! ಜಪ ತಪ ಮಾಡಿ, ಗೆಡ್ಡೆ ಗೆಣಸು ತಿಂದು ನಿನ್ನ ದರುಶನಕ್ಕಾಗಿ ಕಾದು ಕುಳಿತ ತನುವನ್ನು ಆಡಿಸುವೆ. ದೇವರೇ ಇಲ್ಲ ಎಂದು ನುಡಿದು ಆಡುವ ತನುವನ್ನು ಕೂಡಾ ಆಡಿಸುವೆ.

ತನುವಿನಲ್ಲಿಯೇ ಇದ್ದು, ತನುವಿಗೆ ಒಲಿಯದೆ, ನಿನ್ನನ್ನು ಕುರಿತು ಆಡಿ, ಹಾಡಿ, ಪೂಜಿಸುವ, ಪ್ರಾರ್ಥಿಸುವ ತನುವಿಗೆ, ನೀನು ಇಲ್ಲವೇ ಇಲ್ಲ ಎಂದು ಅಬ್ಬರಿಸುವ ತನುವಿಗೆ ಒಲಿಯದೆ, ಸಕಲ ತನುಗಳನ್ನು ನಿನಗೆ ತಿಳಿದಂತೆ ಆಡಿಸುವ ಆಟ ನಿನ್ನದು. ಹಾ! ಹಾ! ಅಯ್ಯಾ! ಅರಿಯಲು ಬಾರದು ನಿನ್ನ ಆಟ!

ತನುವಿನಲ್ಲಿಯೇ ಇದ್ದು, ನಿನ್ನನ್ನು ಪೂಜಿಸಿ ಪ್ರಾರ್ಥಿಸುವ ತನುವಿಗೆ ಒಲಿಯದಂತೆ, ತನುವನ್ನು ಆಡಿಸುವ ನಿನ್ನ ಆಟ ನಾನು ಬಲ್ಲೆನಯ್ಯಾ. ತನುವಿಗೆ ಒಲಿತು, ತನುವಿನಲ್ಲಿದ್ದು, ತನುವನ್ನೇ ಒಲ್ಲೆ ಎಂಬುದನ್ನು ನಾನು ಬಲ್ಲೆನಯ್ಯಾ, ಅರಿಯಲು ಬಾರದು ಹಾ! ಹಾ! ಅಯ್ಯಾ!

ನಿನ್ನ ಆಟ! ಇನ್ನು ನೀನು ಎನಗೆ ಒಲಿಯುವಂತೆ ಇರುವೆನು ನಾನಯ್ಯಾ. ಆದರೂ ನನ್ನನ್ನು ಒಲ್ಲದಂತೆ ನನ್ನಲ್ಲಿಯೇ ಇರುವೆ ನೀನಯ್ಯಾ. ನೀನಿದ್ದ ತನುವು ಎನ್ನದು. ಅದನ್ನು ಸೃಷ್ಟಿ ಮಾಡಿ, ಅದರಲ್ಲಿಯೇ ಇದ್ದು, ಅದನ್ನೇ ಕಾಡದಿರಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ!

**293**

**ಎನ್ನ ಪಾತಕ ಜನ್ಮವ ಕಳೆದಿರಿ.**
**ಎನ್ನ ಭೂತಪ್ರಾಣವನುಳಿದು ಲಿಂಗಪ್ರಾಣಿಯ ಮಾಡಿದಿರಿ.**
**ಎನ್ನ ನಿಮ್ಮ ಶರಣರ ಸಂಗಕ್ಕೆ ಸಲಿಸಿದಿರಿ.**
**ಭವಿಯ ಮನೆಯನ್ನಪಾನ ಸುರಪಾನವೆಂದೆಂಬೆ.**
**ಎನ್ನದಿದ್ದೆನಾದಡೆ ನಾಯಕನರಕ, ನಿಮ್ಮಾಣೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವನ್ನು ಸಂಗ್ರಹಿಸಿಕೊಂಡು ಉದ್ಧಾರವಾಗಬೇಕೆಂದು ಮನುಕುಲ ಯತ್ನಿಸುತ್ತಲಿದೆ. ಅದಕ್ಕಾಗಿಯೇ ಇಡೀ ಜಗದ ಮನುಕುಲ ಜ್ಞಾನಿಗಳು ಬರೆದಿಟ್ಟು ಹೋದ ಪುಸ್ತಕಗಳಿಗೆ ಮೊರೆ ಹೋಗಿದೆ. ಶಾಲಾ-ಕಾಲೇಜುಗಳು, ವಿಶ್ವ ವಿದ್ಯಾಲಯಗಳು ಹಾಗೂ ಸರಕಾರ ಕೂಡಾ ಮನುಕುಲಕ್ಕೆ ಜ್ಞಾನಿಯಾಗಲು ಪುಸ್ತಕಗಳತ್ತ ಬೆಟ್ಟು ತೋರುತ್ತಲಿವೆ. ಇದು ಮನುಕುಲದ ದುರ್ದೈವದ ಸಂಗತಿ.

ಸಿದ್ಧರಾಮ ಶಿವಯೋಗಿಗಳು, ಅರಿವನ್ನು ಸಂಗ್ರಹಿಸಿಕೊಂಡ ತನುವಿನ ಜನ್ಮವನ್ನು ಪಾತಕ ಜನ್ಮವೆಂದು, ನರಕದ ಜನ್ಮವೆಂದು ಕರೆದಿದ್ದಾರೆ. ತನುವಿನಲ್ಲಿಯೇ ಸಂಗಮವಾದ ಅರಿವಿನ ದರುಶನದಿಂದ, ತನುವಿನಲ್ಲಿಯೇ ಸಂಗ್ರಹವಾದ ಮರೆವಿನ ಅರಿವು ಉದುರಿ ಬೀಳುವುದು. ಹಿಂದಿನಿಂದಲೂ ಬಂದ ಪ್ರಾಣವೇ ಅರಿವಿನ ಪ್ರಾಣ ಆಯಿತು.

ಅರಿವಿನ ದರುಶನದಿಂದಾಗಿ, ಅರಿವಿಗೆ ಶರಣು ಹೋಗಿ ಶರಣರೇ ಆದವರ ಶರಣರ ಸಂಗ ಎನಗೆ ಲಭ್ಯವಾಯಿತು. ನಿನ್ನ ದರುಶನದಿಂದಾಗಿ ಅರಿವಿನ ಜನ್ಮ ಲಭ್ಯವಾಗಿ ಅರಿವಿನ ಸುಖ ಉಣ್ಣುವ ಭಾಗ್ಯ ಎನಗೆ ದೊರೆಯಿತು ತಂದೆ. ಇನ್ನು ಅರಿವೆಂದರೇನೆಂದು ಗೊತ್ತಾಗದ ಭವಿಯ ಮನೆಯಲ್ಲಿ ಉಂಡೆನಾದಡೆ ನಾನು ನರಕಕ್ಕೆ ಭಾಜನನಾದಂತೆ; ಸುರಾಪಾನ ಮಾಡಿದಂತೆ. ಪುನಃ ಪಾತಕ ಜನ್ಮಕ್ಕೆ ಹೋಗಿ ನಾಯಕ ನರಕ ಅನುಭವಿಸಿದಂತೆ.

ಅರಿವಿನ ದರುಶನ ಭಾಗ್ಯ ಕಲ್ಪಿಸಿದ ಅರಿವೆಂಬ ಗುರುದೇವನೆ, ಮಹಾದೇವನೆ, ಸದಾಶಿವನೆ, ಸಾಕ್ಷಾತ್ ಪರಬ್ರಹ್ಮನೆ ನಿಮ್ಮಾಣೆ. ನಾನು ಪುನಃ ಮರೆವಿನ ಜನ್ಮಕ್ಕೆ ಹೋಗಲಾರೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ಎಂದು ಸಿದ್ಧರಾಮ ಶಿವಯೋಗಿಗಳು ತನುವಿಗೆ ಮುಸುಕಿದ ಮಾಯಾಮಯವಾದ ಮರೆವು ಅರಿವಿನಿಂದಲೇ ಕಳೆದುಕೊಂಡು ಅರಿವೇ ತಾನಾಗಿ, ಅರಿವಾಗಿ ಹಾಡಿದ್ದಾರೆ.

ಪೇದೆ ರಾಜನಾಗಬಹುದು. ರಾಜ ಅನೇಕ ರಾಜರನ್ನು ಯುದ್ಧದಲ್ಲಿ ಸೋಲಿಸಿ ಸಾಮ್ರಾಟನಾಗಬಹುದು. ಚಕ್ರವರ್ತಿಯಾಗಬಹುದು. ಇದೆಲ್ಲ ಮರೆವಿನ ಕೆಲಸ. ಮರೆವನ್ನೇ ಅರಿವೆಂದು ತಿಳಿದು ಆ ಅರಿವನ್ನೇ ತನುವಿನಲ್ಲಿ ಸಂಗ್ರಹ ಮಾಡಿಕೊಂಡ ತನುವಿನ ಕೆಲಸ.

ತನುವನ್ನು ಆವರಿಸಿದ ಮರೆವಿನ ಅರಿವನ್ನು ತನುವಿನಲ್ಲಿಯೇ ಸಂಗಮವಾದ

ಅರಿವಿನಿಂದ ಸೋಲಿಸಿ, ತನುವಿನ ಅಜ್ಞಾನವನ್ನು ತನುವಿನ ಜ್ಞಾನದಿಂದಲೇ ಗೆದ್ದು ಜ್ಞಾನಿ ಎನ್ನಿಸಿಕೊಂಡ ತನುವನ್ನು ಮಹಾವೀರ ಎಂದು ಕರೆದಿದ್ದಾರೆ. ಬುದ್ಧ ಎಂದು ಕರೆದಿದ್ದಾರೆ. ಶರಣ, ದಾಸ ಎಂದು ಕರೆದಿದ್ದಾರೆ. ಪುನಃ ಈತ ಮರೆವಿನ ಜನ್ಮಕ್ಕೆ ಹೋಗಲಾರ.

ಕಾಯದಲ್ಲಿ ಅರಿವು ಸಂಗಮವಾಗಿದೆ; ಮರೆವು ಸಂಗ್ರಹವಾಗಿದೆ. ಕಾಯವನ್ನು ಆವರಿಸಿದ ಮನ ಮತ್ತು ಕಾಯ ನಿರ್ಧರಿಸಬೇಕು; ತಾನು ಅರಿವಿನತ್ತ ಪಯಣಿಸಬೇಕೆಂದು; ಆ ಅರಿವೇ ತಾನಾಗಬೇಕೆಂದು. ತನ್ನ ಮರೆವಿನ ಅಜ್ಞಾನದೊಂದಿಗೆ ತಾನೆ ಯುದ್ಧ ಮಾಡುವ ಅರಿವಿನ ಕೃಷಿಯನ್ನು ತಾನೇ ರೂಢಿಸಿಕೊಳ್ಳಬೇಕು.

**294**

**ಎನ್ನ ಭವಕ್ಕೆ ತಂದಿರಿಸಿ ನರಕವನೂಡಿಹೆನೆಂದಡೆ ಉಂಡೆನೆ?**
**ನಾನುಣ್ಣೆನುಣ್ಣೆ, ನಿನ್ನ ಕರುಣವುಂಟು!**
**ನಿನ್ನ ಬಸವಣ್ಣನ ಕರುಣದಿಂದ ನೀನಪ್ಪೆ.**
**ನಿನ್ನ ಕಕ್ಕುಲತೆ ಉಳಿದುದು, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು ಭಗವಂತನೊಂದಿಗೆ ಮಾತನಾಡಿದ್ದಾರೆ. ಮಾತನಾಡುವ ದೃಶ್ಯವನ್ನು ಅಕ್ಷರಗಳ ಮೂಲಕ ತಮ್ಮ ವಚನದಲ್ಲಿ ಸೆರೆಹಿಡಿದಿದ್ದಾರೆ. ಸಾಧ್ಯವಾದರೆ ಸಕಲ ಓದುಗರಿಗೂ ಹೀಗೆ ಸಾಧ್ಯವಾಗಲಿ ಎಂಬ ಕಳಕಳಿ ಅವರದು.

ಭಗವಂತ ಕಾಯಕ್ಕೆ ಜನ್ಮ ನೀಡಿದ್ದಾನೆ. ಕಾಯದಲ್ಲಿ ತಾನೇ ಸಂಗಮವಾಗಿದ್ದಾನೆ. ಪುನಃ ಕಾಯಕ್ಕೆ ಜನನ ಮರಣಗಳ ಭಾದೆಯನ್ನು ಉಂಟು ಮಾಡಿದ್ದಾನೆ. ಕೈಲಾಸವೇ ತಾನಾಗಬೇಕಾದ ಕಾಯದ ಬದುಕು ಬದುಕಲ್ಲ ; ಅದು ನರಕ! ನರಕಯಾತನೆಯನ್ನು ಉಣ್ಣುತ್ತಾ; ಹುಟ್ಟು ಸಾವುಗಳ ಸುಖದುಃಖದಲ್ಲಿ ಸತ್ತು ಹೋಗುತ್ತದೆ.

ಹೀಗೆ ಹುಟ್ಟು ಸಾವುಗಳ ನರಕದಲ್ಲಿ ಯಮಯಾತನೆ ಅನುಭವಿಸುತ್ತಿರುವ ಕಾಯದಲ್ಲಿ ಭಗವಂತನಿದ್ದು ತಾನೇ ಜನ್ಮ ಕೊಟ್ಟ ಕಾಯವನ್ನು ನೇವರಿಸುತ್ತಾ, ಅದರ ಮೈದಡುವುತ್ತ ಪರಮಾನಂದದಿಂದ ವಾಸವಾಗಿದ್ದಾನೆ.

ಭಗವಂತನ ವಾಸಸ್ಥಾನವೆಂದರೆ ಸುಡುಗಾಡು. ಅದು ಆತನಿಗೆ ಕೈಲಾಸ. ಸ್ವತಃ ಸುಡುಗಾಡಿಗೆ ನರಕ. ಯಮಯಾತನೆ! ಸುಡುಗಾಡು ಎಂದರೆ ಹೆಣಗಳನ್ನು ಹೂತು ಹಾಕುವ ಭೂಮಿಯಲ್ಲ. ಅನೇಕ ವಿಷಯಾದಿಗಳನ್ನು ಚಿಂತೆಗಳನ್ನು ಸಂಗ್ರಹಿಸಿಕೊಂಡು; ಅಧಿಕಾರದಿಂದ, ಅಹಂಕಾರದಿಂದ, ವಿಷಯಾದಿ ಸುಖ ದುಃಖಗಳಿಂದ, ಹೆಣ್ಣು ಗಂಡು ಎಂಬ ಅಜ್ಞಾನದಿಂದ, ಜಾತಿ ಮತ ಧರ್ಮಗಳ ಸರಪಳಿಗಳಿಂದ ಕಾಯ ತನ್ನನ್ನು ತಾನೇ ಬಂಧಿಸಿಕೊಂಡು, ತನಗೆ ತಾನೇ ಸುಳ್ಳು ಸುಖದಿಂದ ಸುಳ್ಳು ದುಃಖದಿಂದ ಮಾತನಾಡಿಕೊಳ್ಳುವ ಕಾಯವೇ ಸುಡುಗಾಡು.

ಕಾಯವನ್ನು ಆವರಿಸಿದ ಮನಕ್ಕೆ ಸುಡುಗಾಡಿನ ಸುಖ ಬೇಕು. ಅದು ದೆವ್ವ! ಮನವಿದ್ದ ಜಾಗದಲ್ಲಿಯೇ ಸುಡುಗಾಡು. ಆ ಜಾಗದಲ್ಲಿಯೇ ಮಹಾದೇವ! ಮಹಾದೇವನ ಸುಖ ಮನಕ್ಕೆ ಬೇಡ; ಮನದ ಸುಖ ದುಃಖಗಳು ಮಹಾದೇವನಿಗೆ ಬೇಡ! ಮಹಾದೇವನನ್ನು ಮನ ತಿಳಿಯಲೆಂದೇ ಕಾಯಕ್ಕೆ ಈ ಬಾಧೆ; ನರಕಯಾತನೆ!

ಸಿದ್ಧರಾಮ ಶಿವಯೋಗಿ, ಕಾಯವನ್ನು ಆವರಿಸಿದ ಮನದ ಮಾತು ಕೇಳಲಿಲ್ಲ.

ಬದಲಾಗಿ ಕಾಯ ಮನದ ಮಾತನ್ನು ವಿರೋಧಿಸಿತು. ಕಾಯದಲ್ಲಿಯೇ ಸಂಗಮವಾದ ಭಗವಂತನನ್ನು ಆಶ್ರಯಿಸಿತು. ಆ ಭಗವಂತನಿಗೆ ಮೊರೆ ಹೋಯಿತು. ಮನ ಒಂಟಿಯಾಯಿತು. ಮನ ಮತ್ತು ಕಾಯದ ಸಂಬಂಧ ಮುರಿದು ಬಿತ್ತು. ಕಾಯವನ್ನೇ ಪುಟ್ಟಿಯನ್ನಾಗಿಸಿಕೊಂಡು ಹೆಡೆ ಎತ್ತಿ ಬುಸುಗುಡುವ ವಿಷ ಸರ್ಪದ ಸೊಕ್ಕು ತನಗೆ ತಾನೇ ಮುರಿಯಿತು. ಭಗವಂತನ ಕಾಯಕ್ಕೆ ಮನವೆಂಬ ಹಾವು ಆಭರಣವಾಯಿತು.

ಹಾವಿನ ವಿಷವೇ ಅರಿವೆಂಬ ಭಗವಂತನಿಗೆ ಆಹಾರವಾಯಿತು. ಕಾಯದಲ್ಲಿ ಸಂಗ್ರಹವಾದ ಸಕಲ ಸುಖ ದುಃಖಗಳು ಅರಿವಿನ ದೇವರಿಗೆ ಪ್ರಸಾದವಾದವು. ಕಾಯ ಕೈಲಾಸವಾಯಿತು.

ನನ್ನಲ್ಲಿ ನೀನಿದ್ದು, ನನ್ನನ್ನು ನರಕದಲ್ಲಿ ದೂಡಿ, ಆ ನರಕದ ಊಟವನು ಮಾಡೆಂದಡೆ ನಾನು ಮಾಡುವೆನೆ? ನಾನುಣ್ಣೆನು ಉಣ್ಣೆನು ತಂದೆಯೇ. ಏಕೆಂದರೆ ನನಗೆ ನಿನ್ನ ಕರುಣವುಂಟು ಪ್ರಭುವೆ.

ಬಸವಣ್ಣನ ಕರುಣದಿಂದ ಎನಗೆ ನಿನ್ನ ಪರಿಚಯವಾಯಿತು. ಸಕಲ ಶರಣರಿಗೂ ನಿನ್ನ ಪರಿಚಯವಾಯಿತು. ಬಸವಣ್ಣನ ಕರುಣದಿಂದ ಸಕಲ ಶರಣರೂ ನಿನ್ನೊಂದಿಗೆ ಮಾತನಾಡುವಂತಾದರು. ಬಸವಣ್ಣನ ಕರುಣೆ ಎನಗೂ ಉಂಟು; ಸಕಲ ಶರಣರಿಗೂ ಉಂಟು; ಹಾಗೆಯೇ ನಿನಗೂ ಉಂಟು ತಂದೆಯೇ. ಬಸವಣ್ಣನ ಕರುಣೆ ಇಲ್ಲದಿದ್ದರೆ ನಿನಗೆ ಸುಡುಗಾಡೇ ಗತಿಯಾಗುತ್ತಿತ್ತು.

ನೀನು ಸೃಷ್ಟಿ ಮಾಡಿದ ಕಾಯ ನಿನಗೆ ಕೈಲಾಸವಾದರೇನು? ನನಗೆ ಮಾತ್ರ ಸುಡುಗಾಡು! ನರಕ! ನರಕದ ಬದುಕು!

ನನ್ನನ್ನು ಸೃಷ್ಟಿ ಮಾಡಿ, ನನಗೆ ಕಾಣದಂತೆ ನನ್ನಲ್ಲಿಯೇ ಇದ್ದ ನಿನ್ನ ಪರಿಚಯ ನನಗೆ ಬಸವಣ್ಣನ ಕರುಣೆಯಿಂದ ಆಯಿತು. ಇನ್ನು ನಾನು ಆ ನರಕದ ಊಟವನ್ನು ಉಣ್ಣೆನು, ಉಣ್ಣೆನು. ಏಕೆಂದರೆ ನಿನ್ನ ಕರುಣೆ ವುಂಟೆಂದು ಬಸವಣ್ಣನಿಂದ ನನಗೆ ತಿಳಿಯಿತು. ಏನೀ ನಿನ್ನ ಈ ಅಪಾರ ಕರುಣೆ. ಬಸವಣ್ಣನ ಕರುಣದಿಂದ ನೀನಪ್ಪೆ. ನಿನ್ನ ಕಕ್ಕುಲತೆ ಉಳಿಯಿತು!

ಗೊತ್ತು ಪರಿಚಯವಿಲ್ಲದ ದೇವರೊಂದಿಗೆ ಭ್ರಮೆಯಿಂದ ಮಾತನಾಡುವುದಕ್ಕಿಂತ ಅಂಗದಲ್ಲಿಯೇ ಸಂಗಮವಾದ ಸಂಗಯ್ಯನೊಂದಿಗೆ ಮಾತನಾಡುವುದು ಲೇಸಲ್ಲವೆ? ದೇವರೊಂದಿಗೆ ಮಾತನಾಡುವ ಕಲೆಯನ್ನು ಸಕಲ ಕಾಯಗಳು ಶರಣ ಕಾಯದಿಂದಲೇ ಕಲಿಯಬೇಕು.

ಅರಿವಿಗೆ ಶರಣು ಹೋದ ಕಾಯ ಹೇಗಿರುತ್ತದೆ ಎಂದು ಕಾಯದಿಂದಲೇ ಹುಡುಕಬೇಕು. ಹುಡುಕುವ ತವಕ ಕಾಯದಲ್ಲಿ ಹುಟ್ಟಿದಾಗಲೇ ಕಾಯ ಕೈಲಾಸಕ್ಕೆ ಹತ್ತಿರವಾಗುತ್ತದೆ. ಕಾಯಕ್ಕೆ ಅಂಟಿದ ಸುಡುಗಾಡು ಕಾಯದಿಂದಲೇ ಕಳಚಿ ಬೀಳುತ್ತದೆ.

**295**

**ಎನ್ನ ಮನ ಶುದ್ಧವಲ್ಲ, ನಿನ್ನ ಪೂಜಿಸಿ ಏವೆ?**
**ಎನ್ನ ತನು ಶುದ್ಧವಲ್ಲ, ನೀನೆಂತು ಇಂಬುಗೊಂಬೆಯಯ್ಯಾ?**
**ಮನದೊಡೆಯ ಮಹಾದೇವನೇ**
**ಎನ್ನ ತನು ಮನ ಶುದ್ಧವ ಮಾಡಿ.**
**ಮಧ್ಯಮಸ್ಥಾನ ಸಿಂಹಾಸನಾರೂಢನಾಗು,**

**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ನಿಮ್ಮ ಧರ್ಮ.**

ಎನ್ನ ಮನ ಶುದ್ಧವಿಲ್ಲ, ಎನ್ನ ತನು ಶುದ್ಧವಿಲ್ಲ ಎಂದು ಸಿದ್ಧರಾಮ ಶಿವಯೋಗಿಗಳು ಮನದೊಡೆಯ ಮಹಾದೇವನೊಂದಿಗೆ ಮಾತನಾಡಿದ್ದಾರೆ. ಎನ್ನ ತನು ಮನ ಶುದ್ಧವ ಮಾಡಿ ''ಮಧ್ಯಮಸ್ಥಾನ'' ಸಿಂಹಾಸನಾರೂಢನಾಗು, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಇದು ನಿಮ್ಮ ಧರ್ಮ ಎಂದಿದ್ದಾರೆ.

ಮನದೊಡೆಯ ಮಹಾದೇವನೇ ನೀನು ಕಡ್ಡಾಯವಾಗಿ ಪಾಲಿಸಲೇಬೇಕಾದ ಧರ್ಮ ಎಂದು ಮಹಾದೇವನೊಂದಿಗೆ ನೇರವಾಗಿ ಮಾತಿಗೆ ಇಳಿದಿದ್ದಾರೆ. 'ಮಧ್ಯಮ ಸ್ಥಾನ'ವನ್ನು ಅಲಂಕರಿಸಿ ತನುವನ್ನು ಶುದ್ಧ ಮಾಡು. ತನುವನ್ನು ಆವರಿಸಿದ ಮನವನ್ನು ಶುದ್ಧ ಮಾಡು. ಮನದೊಡೆಯ ಮಹಾದೇವನೇ ಮನಕ್ಕೆ ನೀನು ಒಡೆಯನಾಗಿದ್ದಾರೂ ಮನ ಶುದ್ಧವಿಲ್ಲ. ಎನ್ನ ಒಡೆಯನ ಮಾತು ಮೀರಿ; ಮಧ್ಯಮಸ್ಥಾನವಾದ ತನುವೆಂಬ ನಿನ್ನ ಸಿಂಹಾಸನದ ಮೇಲೆ ಕುಳಿತು ಮನ ರಾಜ್ಯಭಾರ ಮಾಡುತ್ತಲಿದೆ. ಅದು ಮಹಾದೇವನು ಕುಳಿತು ರಾಜ್ಯಭಾರ ಮಾಡುವ ಸ್ಥಾನವೆಂದು ಅರಿಯುತ್ತಿಲ್ಲ. ಕಾಗೆಗೆ ಕಚೇರಿ ಕೊಟ್ಟಂತಾಗಿದೆ. ನಾಯಿಗೆ ನಾರಿವಾಣವನಿಕ್ಕಿದಂತೆ ಆಗಿದೆ. ಅದಕ್ಕೆ ಬಳಸಿ ತಿನ್ನಲು ಬರುವುದಿಲ್ಲ. ಆದರೂ ದೊಡ್ಡ ಸ್ಥಾನದ ಯಜಮಾನಿಕೆ ಅದಕ್ಕೆ.

ಬುದ್ಧ ಬಸವ ಮಹಾವೀರ ಕ್ರಿಷ್ಣ ಕ್ರಿಸ್ತ ಪೈಗಂಬರ ಎಂದು ಕರೆಯಿಸಿಕೊಳ್ಳಬೇಕಾದ ತನುವನ್ನು, ಸಾಕ್ಷಾತ್ ಶಿವ ಎಂದು ಕರೆಯಿಸಿಕೊಳ್ಳಬೇಕಾದ ತನುವನ್ನು ಹಿಂದು ಮುಸಲ್ಮಾನ ಕ್ರೈಸ್ತ ಫಾರ್ಸಿ ಪಂಜಾಬಿ ಎಂದು ಜಾತಿ-ಮತ ಪಂಥಗಳ ಮೂಲಕ ಕರೆಯಿಸಿಕೊಳ್ಳುತ್ತದೆ. ಶ್ರೀಮಂತ, ಬಡವ, ದರಿದ್ರ, ಭಿಕ್ಷುಕ ಎಂದು ಕರೆಯಿಸಿಕೊಳ್ಳುತ್ತಲಿದೆ. ಹೆಣ್ಣು ಗಂಡು ಎಂದು ಅಧಿಕಾರಿ ಜವಾನ ಎಂದು ಭ್ರಷ್ಟ ಕಳ್ಳ ಕೊಲೆಗಾರ ದರೋಡೆಕೋರ ಎಂದು ಕರೆಯಿಸಿಕೊಳ್ಳುತ್ತದೆ.

ಮನ ಶುದ್ಧವಿಲ್ಲ. ಹೀಗಾಗಿ ತನು ಕೂಡಾ ಶುದ್ಧವಿಲ್ಲ. ಮನದೊಡೆಯ ಮಹಾದೇವನೆ; ಮನವನ್ನು ಹೀಗೆ ಬಸವಿಗೆ ಬಿಡುವುದೆ? ನೀನು ಸುಮ್ಮನಿದ್ದುದ್ದಕ್ಕಾಗಿ ಅದು ನೀನು ಕುಳಿತುಕೊಳ್ಳುವ ಸಿಂಹಾಸನವನ್ನೇ ಏರಿ ಕುಳಿತಿದೆ. ತಾನು ಮಹಾದೇವನ ತೊತ್ತಿನ ತೊತ್ತು ಎನ್ನುವುದನ್ನೇ ಮರೆತಿದೆ.

ಏನೀ ತನುವಿನ ಆರ್ಭಟ? ಏನೀ ಮನದ ಆರ್ಭಟ. ಸಕಲ ತನುಗಳು ಕೂಡಾ ಮಹಾದೇವ ಕುಳಿತುಕೊಳ್ಳುವ 'ಮಧ್ಯಮಸ್ಥಾನ'ವಾದ ಸಿಂಹಾಸನವೆಂಬುದನ್ನೇ ಮರೆತಿವೆ. ತನುವನ್ನು ಕಂಡೆರೆ ತನುವಿಗೆ ಆಗುತ್ತಿಲ್ಲ.

ವಿಭೂತಿ ಗಂಧ ಬಳಿದು ಜುಟ್ಟು ಬಿಟ್ಟು ಹಣೆಗೆ ತಿಲಕವಿಟ್ಟ ತನುವನ್ನು ಅದು ಹಿಂದು ಎಂದು ಮನ ತನುವಿನ ಸಿಂಹಾಸನದ ಮೇಲೆ ಕುಳಿತು ಫರ್ಮಾನು ಹೊರಡಿಸಿದೆ. ಕೊರಳಿಗೆ ಶಿಲುಬೆ ಹಾಕಿ ನಿಲುವಂಗಿ ಧರಿಸಿದರೆ ಅದು ಕ್ರೈಸ್ತ, ಟೊಪ್ಪಿಗೆ ಇಟ್ಟು ಗಡ್ಡ ಬಿಟ್ಟರೆ ಅದು ಮುಸಲ್ಮಾನ, ಗಡ್ಡ ಬಿಟ್ಟು ಪಗಡಿ ಧರಿಸಿದರೆ ಅದು ಸಿಖ್ ಎಂದು ತನುವಿನೊಂದಿಗೆ ತನುವೇ ಕಾದಾಡುತ್ತಲಿದೆ. ಮನ, ಒಡೆಯನನ್ನು ಮರೆತ ಫಲ ನಿರಪರಾಧಿ ತನು ಅನುಭವಿಸುತ್ತಲಿದೆ.

ಎನ್ನ ಮನ ಶುದ್ಧವಿಲ್ಲ, ತನು ಶುದ್ಧವಿಲ್ಲ. ಆದರೂ ಮನ ದೇವರೆಂದು, ದೇವರನ್ನೇ ಮರೆತು, ತಾನು ಸೃಷ್ಟಿ ಮಾಡಿದ ದೇವರನ್ನು ದೇವರೆಂದು ಆರಾಧಿಸುತ್ತದೆ! ಮನವನ್ನು ಸೃಷ್ಟಿ ಮಾಡಿದ ಮನದೊಡೆಯನಾದ ಮಹಾದೇವನನ್ನು ಸಂಪೂರ್ಣ ಮರೆತು ಹೋಗಿದೆ. ಹೀಗಾಗಿ ಎನ್ನ ಮನ ಶುದ್ಧವಿಲ್ಲ. ನಿನ್ನ ಪೂಜಿಸಿಯೂ ಫಲವಿಲ್ಲ, ಏಕೆಂದರೆ ಮನ, ತನುವಿನಿಂದ

ಪೂಜಿಸುವ ದೇವರು ದೇವರಲ್ಲ. ಮನವನ್ನು ತನುವನ್ನು ಸೃಷ್ಟಿ ಮಾಡಿ ತನುವಿನಲ್ಲಿಯೇ ಸಂಗಮವಾದ ದೇವರು ಮಾತ್ರ ದೇವರು.

ಮನಕ್ಕೆ ಮನವರಿಕೆಯಾಗಿ. ಮನದೊಡೆಯ ಮಹಾದೇವನೇ, ಎನ್ನ ತನು ಮನ ಶುದ್ಧವ ಮಾಡಯ್ಯಾ. ತನುವನ್ನೇ ಸಿಂಹಾಸನ ಮಾಡಿಕೊಂಡು, ಮನದ ಮೂಗಿಗೆ ಮೂಗುದಾಣ ಹಾಕಿ ತನುವಿನ ಮೂಲಕ ಅರಿವಿನ ಧರ್ಮದ ರಾಜ್ಯಭಾರ ಮಾಡು ತಂದೆ. ಇದು ನಿನ್ನ ಧರ್ಮ ಸಹಜ ಧರ್ಮ. ಮಾನವ ಕುಲಂ ಒಂದೇ ವಲಂ ಎನ್ನುವ ಮಾನವ ಧರ್ಮದ ನಿನ್ನ ಬೆಳಕು ಎಲ್ಲೆಡೆ ಜಗಮಗಿಸಲಿ ಗುರುವೇ ಎಂದು ಸಿದ್ಧರಾಮ ಶಿವಯೋಗಿಗಳು ಅರಿವಿನ ದೇವರನ್ನು ಪ್ರಾರ್ಥಿಸಿದ್ದಾರೆ.

**296**

**ಎನ್ನ ಸಕಲಕ್ಕೆ ಗುರು ಬಸವಣ್ಣ,**
**ಎನ್ನ ನಿಃಕಲಕ್ಕೆ ಗುರು ಬಸವಣ್ಣ;**
**ಎನ್ನ ಸಕಲ ನಿಃಕಲ ಕೂಡಿದಾನಂದದಾದಿ ಪದವೆನಿತ ಆಗೆನಿಸಿ,**
**ಪದವ ಮೀರಿದ ಸದಮಲ ಜ್ಞಾನಜ್ಯೋತಿರ್ಮಯನೈ.**
**ಬಸವಣ್ಣನೇ ಶರಣು, ಬಸವಣ್ಣನೇ ಶರಣು.**
**ಬಸವಣ್ಣನೇ ಭಕ್ತಿಮುಕ್ತಿಗೆ ಮೂಲವು.**
**ಬಸವಣ್ಣನ ನೆನೆದು ಅನಿಮಿಷಾಕ್ಷರದಿಂದ ಬಸವಪದವಾಯಿತ್ತೈ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಲ್ಯಾಣದಲ್ಲಿ ಏಳುನೂರಾ ಎಪ್ಪತ್ತು ಶರಣರು ಏಕ ಕಾಲಕ್ಕೆ ಜ್ಞಾನಿಗಳಾಗಿ ಸಹಜ ಸುಖವನ್ನು ಪಡೆಯಲು ಕಾರಣವಾದ ಬಸವಣ್ಣನನ್ನು ಸಿದ್ಧರಾಮ ಶಿವಯೋಗಿಗಳು ಹೃದಯ ತುಂಬಿ ನೆನೆದಿದ್ದಾರೆ.

ಅನಿಮಿಷ ದೇವರನ್ನು ಅಲ್ಲಮ ಪ್ರಭುಗಳು ಗುರುವನ್ನಾಗಿಸಿಕೊಂಡರು. ಅನಿಮಿಷ ದೇವರು ಬಸವಣ್ಣನನ್ನು ಗುರುವನ್ನಾಗಿಸಿಕೊಂಡರು. ಅಲ್ಲಮಪ್ರಭುಗಳು ಅನುಭವ ಮಂಟಪಕ್ಕೆ ಅಧ್ಯಕ್ಷರಾದರು. ಇದು ಬಸವಾಕ್ಷರದಿಂದ ಸಾಧ್ಯವಾಯಿತು. ಬಸವ ಪದದಿಂದ ಸಾಧ್ಯವಾಯಿತು.

ಆಯಾ ಶರಣರು ಅವರವರ ಅರಿವಿಗೆ ಬಸವಗುರು ಎಂದು ನಾಮಕರಣ ಮಾಡಿ ಬಸವ ಪದದಿಂದ ಪೂಜಿಸಿದರು; ಆರಾಧಿಸಿದರು. ಸಕಲಕ್ಕೆ ಗುರು ಬಸವಣ್ಣನಾದ. ನಿಃಕಲಕ್ಕೆ ಗುರು ಬಸವಣ್ಣನಾದ. ಸಕಲ ನಿಃಕಲ ಕೂಡಿದ ಆನಂದಾದಿ ಬಸವ ಪದವು ಆಗೆಂದರೆ ಜ್ಞಾನವಾಯಿತು. ಬಸವ ಪದವೇ ಶರಣರಿಗೆ ಮಂತ್ರವಾಯಿತು.

ಬಸವಣ್ಣನನ್ನು ಏನೆಂದು ಹಾಡುವುದು? ಮಂತ್ರಪದವ ಮೀರಿದ ಸದಮಲ ಜ್ಞಾನವನ್ನು ಏನೆಂದು ಸ್ತುತಿಸುವುದು? ಅದು ಜಗದಗಲ ಮುಗಿಲಗಲ. ಪಂಚಭೂತಗಳಿಗೂ ವಿಸ್ತಾರವಾದುದು ಬಸವ ಪದ! ಶರಣನ ಅಂಗದಲ್ಲಿ ಚುಳುಕಾಗಿ ಅಂಗವನ್ನೇ ಲಿಂಗವನ್ನಾಗಿಸಿದ ಬಸವಾಕ್ಷರವನ್ನು ಏನೆಂದು ಹಾಡುವುದು? ಅದು ಅಗಮ್ಯ, ಅಗೋಚರ, ಅಪ್ರಮಾಣ, ಅಪ್ರತಿಮ ಲಿಂಗವು! ಹಾಡಿ ಅನುಭವಿಸಿ ಬಸವಾಕ್ಷರ ತಾನೇ ಆದ ಅನುಭಾವಿಗೆ ಮಾತ್ರ ನಿಲುಕುವ ಬಸವಣ್ಣನಿಗೆ ಶರಣು, ಬಸವಣ್ಣನೇ ಶರಣು.

ಬಸವಣ್ಣನೇ ಭಕ್ತಿ ಮುಕ್ತಿಗೆ ಮೂಲವು. ಭಕ್ತಿಯೆಂದರೆ ಸಾಮಾನ್ಯವೆ? ಅದು ವಿಶಿಷ್ಟ

ಪದವಾಗಿ ಬಸವಣ್ಣನಿಂದ ಹೊರಬಂದ ಬ್ರಹ್ಮಪದ. ಲೋಕ ಕಲ್ಲದೇವರಿಗೆ ಭಕ್ತಿ ಮಾಡಿದಂತಹ ಭಕ್ತಿ ಅಲ್ಲ ಬಸವಣ್ಣನದು. ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಭಕ್ತಿ ಮಾಡುವ ವಿಧಾನವನ್ನು ಶರಣರಿಗೆ ಭಕ್ತಿ ಪದದ ಮೂಲಕ ಹೇಳಿದರು. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಮನವನ್ನೇ ಭಕ್ತನನ್ನಾಗಿಸಿ, ಭಕ್ತಿ ಮಾಡುವ ವಿಧಾನವನ್ನು ಅರುಹಿದರು.

ಭಕ್ತ ಅಂಗದಲ್ಲಿಯ ಅರಿವಿನ ಲಿಂಗಕ್ಕೆ ಸಂಪೂರ್ಣ ಶರಣು ಹೋಗಿ ಶರಣನಾಗುವ ಸರಳ ಸೂತ್ರವನ್ನು ಅರುಹಿದರು. ಅಂಗವನ್ನೇ ಅನುಭವ ಮಂಟಪವನ್ನಾಗಿಸಿದರು. ಅಂಗವನ್ನೇ ಕಲ್ಯಾಣ ಮಂಟಪವನ್ನಾಗಿಸಿದರು. ಅಂಗವನ್ನೇ ಲಿಂಗಾಂಗವನ್ನು ಆಗಿಸಿ ಲಿಂಗಾಂಗ ಸಾಮರಸ್ಯವನ್ನು ಸಕಲ ಶರಣರಿಗೆ ಅರುಹಿದರು ಬಸವಣ್ಣ!

ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಯಾರಾದರೂ ಗುರುವಾಗಲು ಸಾಧ್ಯವೇ? ಅಂಗವನ್ನು ಆವರಿಸಿದ ಅಜ್ಞಾನಿ ಮನಕ್ಕೆ ಯಾವ ಗುರುವಾದರೂ ಬೋಧೆ ಮಾಡಲು ಸಾಧ್ಯವೆ? ಗುರುದೇವನಿಗೆ ಗುರುವಾಗಲು ಸಾಧ್ಯವೆ?

ಸಕಲ ಅಂಗಗಳಲ್ಲಿಯೂ ಅರಿವು ಸಂಗಮವಾಗಿದೆ. ಸಂಗಮವಾದ ಆ ಅರಿವನ್ನೇ 'ಗುರು' ಎಂದು ಕರೆದರು. ಸಕಲ ಅಂಗಗಳಿಗೂ ಆವರಿಸಿದ ಮನವನ್ನೇ ಭವಿ ಎಂದು ಕರೆದರು. ಮನದ ಭವಿತನವನ್ನು ಮನವೇ ಕಳೆದುಕೊಂಡು ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿ, ಭಕ್ತನಾಗುವ ಸರಳ ಸೂತ್ರವನ್ನು ಸಕಲ ಶರಣರಿಗೂ ಹೇಳಿದರು.

ತನು, ತನಗೆ ತಾನೇ ಗುರುವಾಯಿತು.ತನಗೆ ತಾನೇ ಶಿಷ್ಯನಾಯಿತು. ತನಗೆ ತಾನೇ ಭಕ್ತಿ ಮಾಡಿದ ತನು ಭಕ್ತಿ ಭಂಡಾರಿಯಾಯಿತು; ಜ್ಞಾನ ಭಂಡಾರಿಯೇ ತಾನಾಯಿತು. ಇದು ಬಸವಾಕ್ಷರದಿಂದ ಸಾಧ್ಯವಾಯಿತು.

ಅಂಗದ ಅಜ್ಞಾನದ ನೋಟ ಅರಿವಿನ ನೋಟದಿಂದಲೇ ಮರೆಯಾಯಿತು. ಅಂಗ ಲಿಂಗಾಂಗವಾಯಿತು. ಅರಿವಿನ ಲಿಂಗಯ್ಯನನ್ನು ಧಾರಣೆ ಮಾಡಿದ ಅಂಗವೇ ಇಷ್ಟಲಿಂಗವಾಯಿತು. ಮನವೇ ಭಕ್ತನಾಗಿ, ಇಷ್ಟಲಿಂಗವನ್ನು ಆರಾಧಿಸಿ, ಅರಿವಿನ ಸಂಗಯ್ಯನಿಗೆ ಶರಣು ಹೋಯಿತು, ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**297**

**ಎನ್ನ ಸ್ವಸ್ಥಿರವೆಂಬ ಭೂಮಿಯಲ್ಲಿ**
**ಒಂದು ಬೀಜ ಮೊಳೆ ದೋರಿ,**
**ಮೂರು ಶಾಖೆಗಳಾಗಿ ಫಲವಾರಾದವು.**
**ಮೂವತ್ತಾರರ ಮೇಲೆ ಇನ್ನೂರಾ ಹದಿನಾರು ಹಣ್ಣಾದವು**
**ಇಂತೀ ಫಲವನುಂಡುಂಡು ಮೀರಿ**
**ಮೇಲಣದೊಂದು ಫಲದಲ್ಲಿ ಮೈಮರೆದು,**
**ಕಪಿಲಸಿದ್ಧ ಮಲ್ಲಿಕಾರ್ಜುನನ ತತ್ತ್ವವಿದೆಂದರಿದು**
**'ತತ್ತ್ವಮಸಿ' ಯಾದೆನು.**

ಬಯಲು ಕಾಣುವುದಿಲ್ಲ. ಜಲಜನಕ ಆಮ್ಲಜನಕವು ಕೂಡಾ ಕಾಣುವುದಿಲ್ಲ. ಬಯಲ ಗರ್ಭದಲ್ಲಿದ್ದ ಜಲಜನಕವನ್ನು, ಆಮ್ಲಜನಕವನ್ನು ಒಂದು ಕೂಡಿಸಿ, ಅದರಲ್ಲಿ ಸಂಗಮವಾದ

ಬಯಲೇ ಜೀವಜಲದ ಬಯಲ ಬೀಜವಾಯಿತು. ಈ ಬೀಜವೇ ಮೊಳೆದೋರಿ ತನುವೆಂಬ ವೃಕ್ಷವಾಯಿತು. ಈ ವೃಕ್ಷವೇ ಸ್ಥೂಲ, ಸೂಕ್ಷ್ಮ, ಕಾರಣವೆಂಬ ಹೆಸರು ಪಡೆದು ಮೂರು ಶಾಖೆಗಳಾದವು. ಈ ಮೂರು ಶಾಖೆಗಳು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಹೆಸರಿನ ಆರು ಫಲಗಳನ್ನು ಬಿಟ್ಟವು. ಈ ಆರಾರು ಫಲಗಳೇ ಮೂವತ್ತಾರು ಫಲಗಳಾದವು. ಪುನಃ ಈ ಮೂವತ್ತಾರು ಫಲಗಳಿಗೆ ಆರಾರು ಫಲಗಳು ವಿಭಜನೆಗೊಂಡು ಇನ್ನೂರ ಹದಿನಾರು ಹಣ್ಣು ಆದವು.

ಬಯಲೇ ಬೀಜವಾಗಿ ಅಂಕುರಿಸಿದ ಫಲ. ಬಯಲೇ ವೃಕ್ಷವಾಗಿ, ಬಯಲೇ ಬಯಲ ಫಲ ಬಿಟ್ಟ ಫಲ! ಬಯಲು ಬಯಲ ಬೀಜವಾಗಿ ಬಯಲ ಭೂಮಿಯಲ್ಲಿ ನೆಟ್ಟು ಮೊಳೆದೋರಿದ ಫಲ. ಬಯಲ ವೃಕ್ಷವಾಗಿ ಬಯಲೇ ಬಯಲ ಫಲ ಬಿಟ್ಟ ಫಲ!

ಇಂತೀ ಫಲವನು ಉಂಡುಂಡು ಮೀರಿ, ಮೇಲಣದೊಂದು ಫಲದಲ್ಲಿ ಮೈಮರೆದ ಫಲ. ಬಯಲ ಫಲ ಪುನಃ ಬಯಲೇ ತಾನಾದ ಫಲ. ಇದು ಬಯಲ ದೇವನ ತತ್ವ. ಬಯಲೇ ದೇವರಾಗಿ ಬಯಲ ದೇವರನ್ನು ನೋಡಿ ಪರಮ ಸಂತೋಷದಿಂದ ಬೀಗಿದ ಫಲ. ಬಯಲ ತತ್ವ, ಬಯಲ ವೃಕ್ಷದಲ್ಲಿ ಅಡಗಿ, ಬಯಲಫಲವಾಗಿ, ಅರಿವಿನ ಪರಿಮಳ ಬೀರಿ, ಆ ಪರಿಮಳವನ್ನು ಬಯಲೇ ಸ್ವೀಕರಿಸಿ ಕುಣಿಕುಣಿದಾಡಿದ ಫಲ. ಬಯಲು ತಾನೇ, ಬಯಲ ತತ್ವವು ತಾನೇ, ಆ ತತ್ವವನ್ನು ಉಂಡವನು ತಾನೇ. ಆ ತತ್ವವನ್ನೇ ತೇಗಿ ಬಯಲಾದವನು ತಾನೇ. ಹೀಗೆಂದು ಹಾಡಿ ಕುಣಿಕುಣಿದಾಡಿದ ಬಯಲು ದೇವರು ತಾನೇ! ಕಪಿಲಸಿದ್ಧ ಮಲ್ಲಿಕಾರ್ಜುನನ ತತ್ತ್ವವಿದು ಎಂದು ಹಾಡಿದವನು ತಾನೇ!

**298**

**ಎನ್ನ ಹೊತ್ತಿಪ್ಪವಳ ನೆತ್ತಿಯ ಕಣ್ಣಿನಲ್ಲಿಪ್ಪ**
**ಲಿಂಗವ ನಾನೆಚ್ಚತ್ತು ನೋಡುವ ತೆರನೆಂತಯ್ಯಾ.**
**ನೋಡ ಹೋದಡೆ ನೆತ್ತಿ ಹೊಡೆದು ಕಣ್ಣಾಯಿತ್ತು.**
**ನೋಡದಿರ್ದಡೆ ಎನಗವಳು ತೋರಳು.**
**ಎನಗೆ ಕಾಬ ತೆರನ ತೋರಾ,**
**ಕಪಿಲಸಿದ್ಧ ಮಲ್ಲಿಕಾರ್ಜುನ ಪ್ರಭುವೆ.**

ಪ್ರಭುವೆ, ಅರಿವಿನ ಮಲ್ಲಯ್ಯನೇ. ಏನೀ ನಿನ್ನ ಲೀಲೆ! ಕಾಯವನ್ನು ಸೃಷ್ಟಿ ಮಾಡಿದೆ. ಕಾಯದಲ್ಲಿ ನೀನೇ ಸಂಗಮವಾದೆ. ಕಾಯಕ್ಕೆ ಮನವೆಂಬ ಮಾಯೆಯನ್ನು ಸೃಷ್ಟಿ ಮಾಡಿದೆ. ಕಾಯದ ನೆತ್ತಿಯ ಮೇಲೆ ಕಣ್ಣನ್ನಿಟ್ಟು ನಿನ್ನನ್ನು, ಲೋಕವನ್ನು, ತನ್ನಂತೆಯೇ ಇರುವ ತನುವನ್ನು ನೋಡದಂತೆ ಮಾಡಿದೆ.

ಎನ್ನ ಹೊತ್ತ ಮನವೆಂಬ ಮಾಯೆಯ ನೆತ್ತಿಯ ಕಣ್ಣಲ್ಲಿಪ್ಪ ನಿನ್ನನ್ನು ನಾನು ಎಚ್ಚೆತ್ತು ನೋಡುವಂತೆ ಮಾಡಿದೆ. ನೀನು ಸೃಷ್ಟಿ ಮಾಡಿದ ನಾನು ನಿನ್ನನ್ನು ನೋಡುವುದು ಎಂದರೆ ಸಣ್ಣ ಮಾತೆ? ನಿನ್ನ ನೋಡ ಹೋದಡೆ ನನ್ನ ಅಜ್ಞಾನದ ನೆತ್ತಿ ಹೊಡೆದು ಅರಿವಿನ ಕಣ್ಣಾಯಿತು! ಮುಕ್ಕಣ್ಣನ ಕಣ್ಣಾಯಿತು. ನೀನು ಸೃಷ್ಟಿ ಮಾಡಿದ ಮಾಯೆ ನಿನ್ನನ್ನು ನೋಡಲು ಹೋಗಿ ತಾನೇ ಭಸ್ಮವಾಯಿತು.

ನೀನು ಸೃಷ್ಟಿ ಮಾಡಿದ ಮನ್ಮಥ, ನಿನ್ನನ್ನು ಮೋಹಿಸಲು ಹೋಗಿ ತಾನೇ ನಿನ್ನ

ಜ್ಞಾನಾಗ್ನಿಯ ಕಿಡಿಗಣ್ಣಿಗೆ ಗುರಿಯಾಗಿ ಸುಟ್ಟು ಹೋಗಲಿಲ್ಲವೆ? ಜಗದ ಕಾಯಗಳು ಮನ್ಮಥನ ಮೋಹದ ಮಾಯಾ ಜಾಲಕ್ಕೆ ಬಲಿಯಾದವು. ಹೀಗಾಗಿ ಮನ್ಮಥನಿಗೆ ಅಹಂಕಾರ! ತನ್ನ ಮಾಯಾಮಯವಾದ ಮೋಹದ ಮೋಡಿಯ ಬಲೆಯನ್ನು; ಸೃಷ್ಟಿ ಮಾಡಿದ ನಿನ್ನ ಮೇಲೆ ಬೀಸಲು ಹೋದ; ನಿನ್ನ ಜ್ಞಾನಾಗ್ನಿಯಿಂದಲೇ ಭಸ್ಮವಾದ.

ಕಾಯವನ್ನು ಸೃಷ್ಟಿ ಮಾಡಿ, ಕಾಯಕ್ಕೆ ಮತ್ತೊಂದು ಮಾಯಾಮಯವಾದ ಮನೋಕಾಯವನ್ನು ಸೃಷ್ಟಿ ಮಾಡಿದ ಲಿಂಗಯ್ಯ ನೀನು. ಅದರ ನೆತ್ತಿಯ ಕಣ್ಣಿನಲ್ಲಿರುವ ಲಿಂಗಯ್ಯ ನೀನು! ಲೋಕವನ್ನು ನೋಡಿದಂತೆ ಮಾಯೆ ಎಚ್ಚೆತ್ತು ನಿನ್ನನ್ನು ನೋಡಲು ಹೋದಡೆ, ನೋಡುವ ತನ್ನ ನೆತ್ತಿಯೇ ಹೊಡೆದು ಅರಿವಿನ ಕಣ್ಣಾಯಿತ್ತು!

ನೋಡದಿರ್ದಡೆ ಕಾಯಕ್ಕೆ ಅಂಟಿದ ಮಾಯೆ ಕಾಯವನ್ನು ಬಿಡದು. ಎನಗೆ ಕಾಬ ತೆರನ ತೋರಾ, ಕಪಿಲಸಿದ್ಧ ಮಲ್ಲಿಕಾರ್ಜುನ ಪ್ರಭುವೆ.

**299**

**ಎನಿತುಂ ತ್ರಿಭುವನಂಗಳು ತನಗಾದಡೆ**
**ಅನಿತರಲಿ ತುಷ್ಟಿವಡೆಯಳು,**
**ಈ ಆಸೆಯೆಂಬವಳಿಂದವೆ ನಿಮ್ಮೆಡೆಗಾಣದಿಪ್ಪೆನು,**
**ಈ ಆಸೆಯುಂಬವಳನೆಂದಿಂಗೆ ನೀಗಿ**
**ಎಂದು ನಿಮ್ಮೊಡಗೂಡಿ ಬೇರಾಗದೆಂದಿಪ್ಪೆನೊ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ತನುವನ್ನು ಆವರಿಸಿದ ಮನವೆಂಬ ಮಾಯೆಯ ಆಸೆಯೇ ವಿಪರೀತ. ಮೂರು ಲೋಕಗಳ ಸುಖವನ್ನು ಅನುಭವಿಸಿದರೂ ಸಂತೃಪ್ತಿ ಎಂಬುದೇ ಇಲ್ಲ. ಈ ಆಸೆಯೆಂಬ ಮಾಯೆಯಿಂದಾಗಿ ನಾನು ನಿಮ್ಮೆಡೆಗೆ ಬರಲು ಸಾಧ್ಯವಾಗುತ್ತಿಲ್ಲ ತಂದೆಯೇ.

ನನಗೆ ನಿನ್ನ ಅರಿವಿನ ಸುಖ ಬೇಕು. ಆಸೆ ಎಂಬ ಮಾಯೆಗೆ ಕಾಯದ ಸುಖಬೇಕು. ಕಾಯವನ್ನು ಆವರಿಸಿದ ಮಾಯೆ ಕಾಯದಲ್ಲಿಯೇ ಮೂರು ಲೋಕಗಳನ್ನು ನಿರ್ಮಿಸಿ, ಆ ಮೂರೂ ಲೋಕದ ಸುಖವನ್ನು ಉಂಡರು ಕೂಡಾ ತೃಪ್ತಿ ಎಂಬುದೇ ಇಲ್ಲ ಅವಳಿಗೆ.

ಕಾಯದಲ್ಲಿ ಆಸೆ ಎಂಬ ಮಾಯೆ ಸಾತ್ವಿಕ ಲೋಕವನ್ನು ನಿರ್ಮಿಸಿ, ಈ ಭೂಮಿಯ ಮೇಲೆ ಚರ್ಚ್, ಆಲಯ, ಮಸೀದಿ, ಮಠ, ಮಂದಿರಗಳನ್ನು ಕಟ್ಟಿದ್ದಾಳೆ. ತನುವಿಗೆ ವೇಷ ಹಾಕಿ ಗುರುವೆಂದು, ಶಿಷ್ಯನೆಂದು ಕರೆಯಿಸಿಕೊಂಡಿದ್ದಾಳೆ.

ಅರಿವೆಂಬ ಗುರುದೇವನೇ ಸಕಲ ಕಾಯಗಳಲ್ಲಿ ನೀನಿರುವೆ. ನೀನಿಲ್ಲದ ಕಾಯವೇ ಇಲ್ಲ. ನೀನಿರುವ ಕಾಯವದು ಕೈಲಾಸ. ದೇವರಿದ್ದ ನಿವಾಸ. ಆದರೂ ನೀನು ಸೃಷ್ಟಿ ಮಾಡಿದ ಮಾಯೆ ನಿನ್ನನ್ನು ನಿನ್ನ ಕಾಯವನ್ನು ಕರೆದುಕೊಂಡು ಹೋಗಿ ತಾನು ಮಾಡಿದ ದೇವರಿಗೆ ಮಣಿಸುವುದೆಂದರೇನು?

ಕಾಯವನ್ನು ಮಾಡಿದ್ದು ನೀನು. ನಿನ್ನ ಕಾಯದಿಂದಲೇ ದೇವರನ್ನು ಸೃಷ್ಟಿ ಮಾಡಿದ್ದು ಮಾಯೆ. ದೇವರು ದೇವರನ್ನು ಆರಾಧಿಸುವುದೆಂದರೇನು? ನೀನು ಸೃಷ್ಟಿ ಮಾಡಿದ ಮಾಯೆ ಸಾತ್ವಿಕ ಲೋಕವನ್ನು ಸೃಷ್ಟಿ ಮಾಡಿ ಕಾಯಕ್ಕೆ ಸಾತ್ವಿಕನ ಪಟ್ಟ ಕಟ್ಟಿದರೆ ನಿನ್ನನ್ನು, ನಿನ್ನ

ಕಾಯವನ್ನು ಮರೆತಂತಾಗಲಿಲ್ಲವೆ? ಈ ಆಸೆಯೆಂಬವಳಿಂದಾಗಿ ನಿಮ್ಮೆಡೆಗಾಣದಿಪ್ಪೆನು ತಂದೆ. ಈ ಮಾಯಾಮಯವಾದ ಆಸೆಯೆಂಬವಳ ದುರಾಸೆಗೆ ಎಂದು ಕಡಿವಾಣ ಹಾಕುವೆ ನನ್ನಯ್ಯ?

ಕಾಯವನ್ನು ಕೈಲಾಸವೆನ್ನದ ಮಾಯೆ ಕಾಯವನ್ನೇ ರಾಜಸ ಲೋಕವನ್ನಾಗಿ ಮಾಡಿಕೊಂಡು ತನ್ನ ಆಸೆಯೆಂಬ ಪಾಶವನ್ನು ಕಾಯದ ಮೇಲೆ ಚೆಲ್ಲಿದೆ. ಕಾಯವೇ ರಾಜ, ಕಾಲಾಳು, ಕಾಯವೇ ಪ್ರಜೆ, ಕಾಯವೇ ಪ್ರಧಾನಿ, ಕಾಯವೇ ಕಾಯದ ಶಾಸನ ಬರೆಯುವುದೆಂದರೇನು? ನೀನಿದ್ದ ಕಾಯ ಕೈಲಾಸವೆಂಬುದನ್ನೇ ಮರೆತು ಮಾಯೆ ತನ್ನ ಮರೆವಿನ ಸಾಮ್ರಾಜ್ಯವನ್ನು ಸ್ಥಾಪಿಸಿದೆ.

ಮಾಯೆಯ ಆಸೆಯೆಂಬ ಪಾಶದಲ್ಲಿ ಭವ ಬಂಧನನಾಗಿರ್ದೆನಯ್ಯಾ, ಸಕೃತು ನಿಮ್ಮ ನೆನೆಯಲು ಎನಗೆ ತೆರಹಿಲ್ಲಯ್ಯಾ! ಕರುಣಾಕರ, ಅಭಯಂಕರ, ವರದಿ ನೀ ಕರುಣಿಸಯ್ಯಾ ಎಂದು ಬಸವಣ್ಣನವರು ಕೂಡಾ ಹಾಡಿದ್ದಾರೆ. ಆಸೆಯೆಂಬ ಮಾಯೆಯನ್ನು ಸೃಷ್ಟಿ ಮಾಡಿದವನನ್ನೇ ಬೇಡಬೇಕು. ಅವನು ಮಾತ್ರ ಆಸೆಗೆ ಗತಿ ಕಾಣಿಸಬಲ್ಲ.

ಕಾಯವನ್ನು ಆವರಿಸಿದ ಆಸೆಯೆಂಬ ಮಾಯೆ, ಕಾಯದಲ್ಲಿಯೇ ತಾಮಸ ಲೋಕವನ್ನು ಸೃಷ್ಟಿ ಮಾಡಿದೆ. ಕಾಯ ಕಾಯವನ್ನು ನಿಂದಿಸಿ, ಕಾಯ ಕಾಯದೊಂದಿಗೆ ರಮಿಸಿ, ಕಾಯ ಕಾಯವನ್ನೇ ಹರಿದು ತಿನ್ನುವ ಮತ್ತಿನಲ್ಲಿ ಮೈಮರೆತಿದೆ.

ನೂರನೋದಿ ನೂರ ಕೇಳಿದರೇನು? ತನುವಿನಲ್ಲಿದ್ದ ಆಸೆ ಹರಿಯಲು ಸಾಧ್ಯವೆ? ರೋಷ ಬಿಡದು, ಮಜ್ಜನಕ್ಕೆ ಎರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವಾ! ಬಸವಣ್ಣನವರ ಈ ಸೂತ್ರದಿಂದ, ಸಿದ್ಧರಾಮ ಶಿವಯೋಗಿಗಳ ಸೂತ್ರದಿಂದ ಕಾಯಕ್ಕಂಟಿದ ಮಾಯೆಯನ್ನು ಕಾಯದಿಂದಲೇ ಕಳೆದುಕೊಳ್ಳುವ ಪ್ರಯತ್ನ ಕಾಯ ಮಾಡಬಹುದಾಗಿದೆ.

ಕಾಯದಿಂದ ಏನಾದರೂ ಸಾಧಿಸಬಹುದು. ಕಾಯಕ್ಕಂಟಿದ ಆಸೆಯೆಂಬ ಮಾಯೆಯ ಮರ್ಮವನ್ನು ಕಾಯದಿಂದಲೇ ಅರಿಯುವುದು ಬಲು ಜಟಿಲ. ಅರಿಯಲು ಸಿದ್ಧವಾದರೆ ಬಲು ಸರಳ.

**300**

**ಎಪ್ಪತ್ತೆರಡು ಸಾವಿರ ಇಚ್ಛಾನಾಡಿಗಳಲ್ಲಿ ತಪ್ಪದೆ ಚರಿಸುವಾತನ**
**ಉಪಪ್ರಯೋಗ ಹಂಸನೆಂದೆಂಬೆ. ಆತನ ಪರಿಯದಂತಿರಲಿ.**
**ದ್ವಾರ ಒಂಬತ್ತರಲ್ಲಿ ನಾಯಕದ್ವಾರವನರಿಯಬೇಕು ಯೋಗಿಗಳು;**
**ಬೇರೆ ಜಪ ನಿಮಗೇಕೆ ಹೇಳಿರೆ.**
**'ಹಂಸ ಹಂಸ' ಎಂಬ ಜಪ ಸಂಪೂರ್ಣವಾಗಿ**
**ಅತ್ತಲಿತ್ತಲೆತ್ತೆರಕ್ಕೆ ಕಂಪಿಸದಿದ್ದಡೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ಕೂರ್ತು**
**'ತತ್ವಮಸಿ'ಯೆಂಬ ಛೈತ್ರದಿಂದೊಯ್ವನವ್ವಾ.**

ಹಂಸ ಮತ್ತು ಗಂಡಭೇರುಂಡ ಪಕ್ಷಿಗಳನ್ನು ಆಧ್ಯಾತ್ಮ ಲೋಕ ಅರಿವಿನ ಸಂಕೇತವಾಗಿ ಬಳಸುತ್ತದೆ. ಗಂಡಭೇರುಂಡಕ್ಕೆ ಎರಡು ಮೋತಿಗಳು. ಇಂತಹ ಒಂದು ಪಕ್ಷಿಯನ್ನು ಯಾರೂ

ನೋಡಿಲ್ಲ. ಆದರೂ ಈ ಪಕ್ಷಿ ಮಾನವನ ಮಾತುಗಳಲ್ಲಿ ಬಳಕೆಯಲ್ಲಿದೆ. ಹಾಗೆಯೇ ಮೈಸೂರು ಅರಸರು ಗಂಡಭೇರುಂಡವನ್ನು ರಾಜ್ಯದ ರಾಜಮುದ್ರೆಯನ್ನಾಗಿಸಿಕೊಂಡಿದ್ದರು. ಹಾಗೆಯೇ ಹಂಸ ಕೂಡಾ ಹಾಲಿನಲ್ಲಿ ಬೆರೆತ ನೀರನ್ನು ಹಾಗೆಯೇ ಉಳಿಸಿ ಬರೀ ಹಾಲನ್ನು ಮಾತ್ರ ಸ್ವೀಕರಿಸುತ್ತದೆ ಎಂಬ ಮಾತೂ ಇದೆ.

ಗಂಡಭೇರುಂಡಕ್ಕೆ ಹೇಗೆ ಎರಡು ರುಂಡಗಳು ಒಂದು ದೇಹವಿದೆಯೋ ಹಾಗೆಯೇ ತನುವಿಗೆ ಕೂಡಾ ಎರಡು ತಲೆಗಳು ಒಂದು ದೇಹವಿದೆ. ಎರಡು ಕಾಣದ ತಲೆಗಳು ಕಾಣುವ ತಲೆಯನ್ನು ಉಪಕರಣ ಮಾಡಿಕೊಂಡು ಬಳಸುತ್ತಲಿದೆ. ಅರಿವನ್ನು ಅರಿಯುವ ತಲೆ ಒಂದು, ಅರಿವಿನ ತಲೆ ಒಂದು. ತನುವಿಗೆ ಅರಿವಿದ್ದರೂ ಅರಿವಿನ ತಲೆಯ ಪರಿಚಯವೂ ಇಲ್ಲ. ಆದರೂ ಗಂಡ ಬೇರುಂಡದಂತೆ ಮುಂಡವನ್ನು ಇಟ್ಟುಕೊಂಡು ಎರಡು ತಲೆ ಮಾನವ ಬದುಕಿದ್ದಾನೆ.

ಹಾಲಲ್ಲಿ ಬೆರೆತ ಹಾಲಾಹಲವನ್ನು ಬೇರ್ಪಡಿಸಿ ಶುದ್ಧ ಹಾಲನ್ನು ಸೇವಿಸಲು ಹಂಸೆಗೆ ಸಾಧ್ಯವಾಗುತ್ತಿಲ್ಲ. ಸದಾ ಹಾಲಾ ಹಲವನ್ನೇ ಸೇವಿಸುವ ಮತ್ತೊಂದು ತಲೆಯನ್ನು ಬದಿಗಿರಿಸಲು ಹಂಸೆಗೆ ಸಾಧ್ಯವಾಗುತ್ತಿಲ್ಲ.

ಎಪ್ಪತ್ತೆರಡು ಸಾವಿರ ಇಚ್ಛಾನಾಡಿಗಳುಳ್ಳ ಇಷ್ಟಲಿಂಗವು ಬರೀ ಅಂಗವಾಗಿದೆ. ರುಂಡವೇ ಇಲ್ಲದ ಬರೀ ಮುಂಡವಾಗಿದೆ. ರುಂಡವಿಲ್ಲದ ಮುಂಡಕ್ಕೆ ಲಿಂಗವನ್ನು ಹಾಕಿಕೊಂಡು ಆ ಲಿಂಗವನ್ನು ಪೂಜಿಸಿದರೆ ಹಂಸೆಯಾಗಲು ಸಾಧ್ಯವೆ? ಹಂಸೆಯೆಂದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಸುಧೆಯನ್ನು ಮಾತ್ರ ಹೀರುವ ಶಕ್ತಿ. ಈ ಶಕ್ತಿ ಮುಂಡದ ಎಪ್ಪತ್ತೆರಡು ಸಾವಿರ ಇಚ್ಛಾ ನಾಡಿಗಳಲ್ಲಿಯೂ ಹರಿಯುತ್ತಲಿದೆ. ಪ್ರಯೋಗಕ್ಕೆ ಹೋಗಿ ಅರಿವಿನ ಸುಧೆಯನ್ನು ಹೀರಿದಾತನೇ ಹಂಸನಾಗುತ್ತಾನೆ.

ನವ ದ್ವಾರಗಳುಳ್ಳ ತನುವೆಂಬ ಮುಂಡದಲ್ಲಿ ನಾಯಕ ದ್ವಾರವನ್ನು ಅರಿತವನೇ ಯೋಗಿ ಎಂದು ಸಿದ್ಧರಾಮ ಶಿವಯೋಗಿಗಳು ಹೇಳುತ್ತಾರೆ. ಜಪತಪಗಳ ಗೊಡವೆ ನಿಮಗೇಕೆ ಎಂದು ಪ್ರಶ್ನೆ ಮಾಡುತ್ತಾರೆ. ಹಂಸ ಪರಿಚಯವಾಗದಿದ್ದರೆ ನವದ್ವಾರಗಳಲ್ಲಿಯ ನಾಯಕ ನರಕವನ್ನೇ ಅನುಭವಿಸುತ್ತಾನೆ.

ಏನ್‌ಕೊಡಾ ಏನ್‌ಕೊಡವು ಹುಬ್ಬಳ್ಳಿ ಮಾಟದ ಒಂಬತ್ತು ತೂತಿನ ಚಂದುಳ್ಳ ಕೊಡವು. ತಿಕ್ಕಲಿಲ್ಲ ತೊಳಿಲಿಲ್ಲ ಥಳಥಳ ಹೊಳಿತಾದ ಎಂದು ಶಿಶುನಾಳ ಷರೀಫರು ಹಾಡಿದರು. ಎಪ್ಪತ್ತೆರಡು ಸಾವಿರ ಇಚ್ಛಾನಾಡಿಗಳಲ್ಲಿ ಹರಿದಾಡುವ ಸುಧೆಯನ್ನು ಕುಡಿದು ಕುಣಿಕುಣಿದಾಡಿದರು. ನವದ್ವಾರಗಳಲ್ಲಿ ಸೂಸುವ ಅರಿವಿನ ಅಮೃತವನ್ನುಂಡು ಹಾಡಿದರು.

ನವದ್ವಾರಗಳುಳ್ಳ ತನು ಸಾಮಾನ್ಯವಲ್ಲ. 'ತತ್ವಮಸಿ' ಎಂಬ ಅರಿವಿನ ಸಂಪತ್ತನ್ನು ತುಂಬಿಕೊಂಡ ಬೃಹದಾಕಾರದ ಹಡಗು. ಆದರೇನು ಅರಿವಿನ ತಲೆಯನ್ನು ಮನವೆಂಬ ಮತ್ತೊಂದು ತಲೆ ಅರಿಯದಿದ್ದಕ್ಕಾಗಿ ಅಜ್ಞಾನದ ಒಂದು ಚಿಕ್ಕ ಗೂಟಕ್ಕೆ ಬೃಹದಾಕಾರದ ಹಡಗು ಚಲಿಸದಂತೆ ಬಿಗಿದುಕೊಂಡಿದೆ. ಅತ್ತಲಿತ್ತಲಿ ಇತ್ತರಕ್ಕೆ ಕಂಪಿಸದಂತೆ ಅಲುಗಾಡುತ್ತಲಿ ನಿಂತಿದೆ. ಮರೆವಿನ ತಲೆ ಅರಿವಿನ ತಲೆಯನ್ನು ಅರಿತರೆ ಸಾಕು ಅರಿವಿನ ಹಂಸ ಇಪ್ಪತ್ತೆರಡು ಸಾವಿರ ನರನಾಡಿಗಳಲ್ಲಿ ಹರಿದಾಡುತ್ತ ಅರಿವಿನ ಸುಧೆಯ ಸವಿಯನ್ನು ಈಂಟುತ್ತದೆ. 'ತತ್ವಮಸಿ' ಎಂಬ ಅರಿವಿನ ಸಂಪದ್ಭರಿತ ಹಡಗು ಬಾನೆತ್ತರಕ್ಕೆ ಚಿಮ್ಮುತ್ತದೆ. ಜಗದಗಲ ಮುಗಿಲಗಲಕ್ಕೂ ಬೆಳೆದು ನಿಂತು ವಿರಾಟ ಸ್ವರೂಪಿಯೇ ತಾನಾಗುತ್ತದೆ.

**301**

**ಎಪ್ಪತ್ತೊಂದು ಅರಣ್ಯದಲಿಪ್ಪತ್ತೊಂದು**
**ಋಷಿಯರು ತಪ್ಪದೆ ಅಜಪೆಯ ಜಪಿಸುತ್ತ.**
**'ಹವಿಷಾ ಹವಿಷಾ'ಯೆಂಬ ಆನಂದದ ಹಂಸದ ಜಪದಲ್ಲಿ,**
**ತೋರಿಪ್ಪ ಬ್ರಹ್ಮಾಂಡವ ಮೀರಿಪ್ಪ ಜಪದಲ್ಲಿ,**
**ಆರೂಢವಾದಳವ್ವೆ.**
**ಕಪಿಲಸಿದ್ಧ ಮಲ್ಲಿನಾಥನ ಕೂಡಿ ಕೂಡಿ ಲೀಯವಾದಳು.**

ತನುವೆಂಬುದು ಅರಣ್ಯ. ಇದರ ಸುಖ ದುಃಖಗಳು ಕೂಡಾ ಅರಣ್ಯ ರೋಧನ. ತನುವನ್ನು ತನುವಿನಲ್ಲಿ ಸಂಗಮವಾದ ಮಹಾಜ್ಞಾನ ತತ್ವವನ್ನು ತನುವೇ ತಿಳಿದುಕೊಂಡಾಗ ತನುವೇ ಪ್ರಣವವಾಗುತ್ತದೆ. ಪ್ರಣವವನ್ನು ಉಚ್ಚರಿಸುವ ತನುಗಳಿವೆ. ಪ್ರಣವವನ್ನು ಜಪಿಸುತ್ತ ಕುಂಡದಲ್ಲಿಯ ಅಗ್ನಿಗೆ ಹಾಲು ತುಪ್ಪ ಧಾನ್ಯಗಳನ್ನು ಸುರಿದು ಯಜ್ಞ ಮಾಡುವುದು ಜಪವಲ್ಲ.

ಆರು ಆದಿ ಪ್ರಣಮಗಳನ್ನು ಉಚ್ಚರಿಸುತ್ತ , ಆರು ಅನಾದಿ ಪ್ರಣಮಗಳನ್ನು ಉಚ್ಚರಿಸುತ್ತ, ಆರು ಚಿತ್ಕಲಾ ಪ್ರಸಾದ ಪ್ರಣಮಗಳನ್ನು ಉಚ್ಚರಿಸುತ್ತ, ಮೂರು ನಿಃಕಳಂಕ ಚಿತ್ಕಲಾ ಮೂಲ ಪ್ರಣಮಗಳನ್ನು ಉಚ್ಚರಿಸುತ್ತಾ 'ಹಿವಿಷಾ ಹಿವಿಷಾ' ಎಂದು ತಿನ್ನುವ ಪದಾರ್ಥಗಳನ್ನು ಅಗ್ನಿಗೆ ಚೆಲ್ಲಿ ಯಜ್ಞದಲ್ಲಿ ತೊಡಗುವುದು ಜಪವಲ್ಲ.

ಬ್ರಹ್ಮಾಂಡವೇ ತಾನಿದ್ದು ಪುನಃ ಬ್ರಹ್ಮಾಂಡವನ್ನು, ಬಾಹ್ಯ ಜಗತ್ತನ್ನು ಒಲಿಸಿಕೊಳ್ಳಬೇಕೆಂದು ಯಜ್ಞದಲ್ಲಿ ತೊಡಗುವುದು, ಮನ ಹಾಗೆ ತನುವನ್ನು ರೂಢಿಗತ ಯಜ್ಞದಲ್ಲಿ ತೊಡಗಿಸಿ ಆನಂದ ಪಡುವುದು. ಇದು ಮನದ ಕೆಲಸ. ತನು ಮನದ ಕೆಲಸ ನಿರಾಕರಿಸಿದಾಗಲೇ ಮನ ಹೆಳವನಾಗುತ್ತದೆ. ರೂಢಿಗತ ಸಂಪ್ರದಾಯವನ್ನು ಬಿಟ್ಟು ಆರೂಢಿಯಾಗುತ್ತದೆ. ಜಪ ಬಿಟ್ಟು ಅಜಪದ ಯಜ್ಞದಲ್ಲಿ ತೊಡಗುತ್ತದೆ.

ತನುವಿನಲ್ಲಿ ತನ್ಮಯವಾದ ಪ್ರಣವವನ್ನು ಹುಡುಕುವ ಕೆಲಸದಲ್ಲಿ ಮನ ತೊಡಗಿದಾಗಲೇ, ಆ ಪ್ರಣವವೇ ತಾನಾಗುತ್ತದೆ. 'ಓಂ ನಮಃ ಶಿವಾಯ'ವೆಂಬ ಷಡಕ್ಷರವೇ ತಾನಾಗಿ ನಿಲ್ಲುತ್ತದೆ.

ಪ್ರಣವ ತಾನೇ ಆಗುವುದೇ ಅಜಪ. ಸ್ಥೂಲ ದೇಹ ತಂತಾನೇ ದಗ್ಧವಾಗುವುದು. ಸೂಕ್ಷ್ಮ ದೇಹ ತಂತಾನೇ ನಿರ್ಮಲವಾಗುವುದು. ಕಾರಣ ದೇಹದ ಕರ್ಮ ಬೀಜವು ತಂತಾನೆ ಅಳಿಯುವುದು. 'ಅ'ಕಾರ 'ಉ'ಕಾರ 'ಮ'ಕಾರವೆಂಬ ಮೂರಕ್ಷರಗಳುಳ್ಳ ಪ್ರಣವವೇ ತನುವಾಗಿ, ತನುವೇ ಪ್ರಣವವಾಗಿ ವಿರಾಟ ಸ್ವರೂಪವೇ ತಾನಾಗಿ ತನಗೆ ತಾನೇ ತೋರುವುದು.

ರೂಢಿಗತವಾದ ಮನವೆಂಬ ಅವ್ವೆ ಸಕಲ ಜಪಗಳನ್ನು ಮೀರಿ ಅಜಪೆಯ ಜಪಿಸುತ್ತ ಆರೂಢವೇ ತಾನಾಗುವಳು. ಕಪಿಲಸಿದ್ಧ ಮಲ್ಲಿನಾಥನ ಕೂಡಿ ಕೂಡಿ ಲೀಯವಾಗುವಳು. ಈಶ್ವರನನ್ನು ಕೂಡಿ ಅರ್ಧನಾರೀಶ್ವರಿಯಾಗುವಳು.

**302**

**ಎಮ್ಮ ನಲ್ಲನ ಬೆನ್ನಲ್ಲಿ ಹೋಗಿ**

**ಎಂಟು ನಾಡ ಗಡಿಯ ಕಂಡೆ.**
**ಉರಿಗಳ ಪರಿಗಳು ಉದಕದೆರೆಗಳು**
**ಅವು ಧಗಿ ಭುಗಿಲು ಭೋರೆನ್ನುತ್ತೈದಾವೆ, ಎಲೆ ಅವ್ವಾ,**
**ಅಲ್ಲಿಂದತ್ತ ರೂಪಿಲ್ಲ, ಮೇಲೆ ತಾನು ತಾನೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು.**

''ಎಮ್ಮ ನಲ್ಲನು ಏಕಾಂತಂಬೊಕ್ಕನು; ಬೇಗ ಬೇಗ ಹೊರನಡಿಯಿರಣ್ಣಗಳಿರಾ, ಒಬ್ಬನಿದ್ದಡೂ ಸೈರಿಸ, ಕಪಿಲಸಿದ್ಧ ಮಲ್ಲಿಕಾರ್ಜುನದೇವಾ''. ಮೇಲಿನ ಸೂತ್ರಕ್ಕೂ ಈ ಸೂತ್ರಕ್ಕೂ ಸಾಮ್ಯವಿದೆ; ಸಂಬಂಧವಿದೆ.

ತನುವನ್ನು ಆವರಿಸಿದ ಅಜ್ಞಾನ ಬೆಟ್ಟದಷ್ಟು. ತನುವಿನಲ್ಲಿಯೇ ಸಂಗಮವಾದ ಜ್ಞಾನ ಜಗದಗಲ. ತನುವಿನ ಅಜ್ಞಾನವನು ತನುವಿನ ಜ್ಞಾನದಿಂದಲೇ ಕಳೆದುಕೊಳ್ಳಬೇಕು.

ತನುವನ್ನು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಅರಿಷಡ್ವರ್ಗಗಳು ಕಾಡುತ್ತವೆ. ಅಷ್ಟ ಮದಗಳು, ಸಪ್ತ ವ್ಯಸನಗಳು ಕಾಡುತ್ತವೆ. ಹಾಗೆಯೇ ರಾಜಸ ತಾಮಸ ಸಾತ್ವಿಕ ಗುಣಗಳು ಕೂಡಾ ನಿರ್ಗುಣ ತನುವನ್ನು ಮುತ್ತಿಕೊಂಡಿವೆ. ಇವು ತನುವಿನಲ್ಲಿಯೇ ಹುಟ್ಟಿದ ತನುವಿನ ಸಹೋದರ ಬಂಧುಗಳು. ಇವು ಇರುವವರೆಗೆ ಕಾಯ ಕೈಲಾಸವೆನ್ನಿಸಿಕೊಳ್ಳುವುದಿಲ್ಲ.

ವೇಷದಿಂದ ಕಾಯ ಕೈಲಾಸವೆನ್ನಿಸಿಕೊಂಡರೆ ಉಪಯೋಗವಿಲ್ಲ. ಇರುವಿಕೆಯಿಂದ ಸಿದ್ಧವಾಗಬೇಕು. ಇದು ತನಗೆ ತಾನೇ ಅನುಭವಿಸುವ ಸುಖ. ಈ ಸುಖ ಬೇಕೆಂದಾದರೆ ತನುವಿನಲ್ಲಿಯ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟ ಮದಗಳು ತೊಲಗಬೇಕು. ಅಂದಾಗ ಮಾತ್ರ ತನುವಿನಲ್ಲಿಯೇ ಸಂಗಮವಾದ ಅರಿವಿನ ನಲ್ಲನು ತನುವನ್ನು ಆವರಿಸಿದ ಮನವನ್ನೇ ನಲ್ಲೆಯನ್ನಾಗಿಸಿಕೊಂಡು ತನುವನ್ನೇ ಮನೆಯನ್ನಾಗಿಸಿಕೊಂಡು ತನುವಿನಲ್ಲಿಯೇ ಮಲಗುತ್ತಾನೆ. ನಲ್ಲ ನಲೆಯರ ಈ ಕೂಟ ಮಹಾಜ್ಞಾನದ ಕೂಟ. ಕೂಡದ ಅಗಲದ ಕೂಟ. ಈ ಕೂಟದ ಸುಖವನ್ನು ಅನುಭವಿಸಿ ಮಹದಾನಂದ ಹೊಂದಿದ ಸಿದ್ಧರಾಮ ಶಿವಯೋಗಿ ಸಕಲ ಓದುಗರಿಗೂ ಈ ಸವಿಯನ್ನು ಉಣ ಬಡಿಸಿದ್ದಾನೆ.

ತನುವಿನಲ್ಲಿರುವ ಅಜ್ಞಾನವನ್ನು ಹೊರಗೆ ಕಳುಹಿಸಿ ಮನಕ್ಕೆ ಮಹಾಜ್ಞಾನದೊಂದಿಗೆ ಕೂಡಲು ಬಂದಾಗ ತನು ಅಜ್ಞಾನದಿಂದ ಮುಕ್ತನಾಗುತ್ತದೆ. ಜ್ಞಾನದಿಂದ ಬೆಳಗುತ್ತದೆ.

ಬೆಳಗಿಂಗೆ ಬೆಳಗಾಗಿ ಬೆಳಗಿದ ನಲ್ಲೆ, ಬೆಳಗಲು ಸಹಕರಿಸಿದ ನಲ್ಲನನ್ನು ಮುಕ್ತ ಕಂಠದಿಂದ ಹಾಡಿ ಹೊಗಳುತ್ತಾಳೆ. ''ಎಮ್ಮ ನಲ್ಲನ ಬೆನ್ನಲ್ಲಿ ಹೋಗಿ ಎಂಟು ನಾಡ ಗಡಿಯ ಕಂಡೆ''.

ಅಷ್ಟ ಮದಗಳಿಂದ ತುಂಬಿ ತುಳುಕುತ್ತಿದ್ದ ನನ್ನ ಅಹಂಕಾರಕ್ಕೆ ನನ್ನ ನಲ್ಲನಿಂದಾಗಿ ಇಂದು ತೆರೆಬಿತ್ತು! ತಲೆ ಬಾಲವಿಲ್ಲದ ಅಹಂಕಾರದಿಂದ ಬೀಗುತ್ತಿದ್ದ ತನುವಿಗೆ ಇಂದು ಮುಕ್ತಿ ದೊರೆಯಿತು! ಅಷ್ಟ ಮದಗಳನ್ನು ಅದರ ಗಡಿಯಾಚೆ ನಿಂತು ಸಾಕ್ಷಿಯಾಗಿ ವೀಕ್ಷಿಸುವ ಅದೃಷ್ಟ ಅರಿವಿನ ಎಮ್ಮ ನಲ್ಲನಿಂದಾಗಿ ಎನಗೆ ಲಭ್ಯವಾಯಿತು.

ಅಷ್ಟ ಮದಗಳ ಅಹಂಕಾರದಿಂದಾಗಿ ತನುವಿನ ಮಾತು ತನುವಿಗೆ ಅಗ್ನಿಯಾಗಿ ಬಡಿಯುತ್ತಿತ್ತು. ತನುವಿನ ದೃಶ್ಯವೇ ತನುವಿಗೆ ಮುಳುವಾಗಿತ್ತು. ತನುವಿನ ಸ್ಪರ್ಶವೇ ತನುವಿಗೆ ಬೆಂಕಿಯ ಉಂಡೆಗಳಾಗಿ ಬಡಿದು ಸುಡುತ್ತಿದ್ದವು. ನಾಲಿಗೆ ರುಚಿ ತನುವನ್ನೇ ಸೀಳಿ ಹಾಕುತ್ತಿತ್ತು. ಮೂಗಿನ ವಾಸನೆ ತನುವನ್ನು ಹಿಂಡಿ ಹಿಪ್ಪೆ ಮಾಡುತ್ತಿತ್ತು. ಏನೀ ತನುವಿನ ಅಜ್ಞಾನದ ಮಹಿಮೆ.

ತನುವಿನ ಜ್ಞಾನ ತನುವಿಗೆ ಬಳಕೆಯಾಗದಿದ್ದರೆ ತನುವನ್ನು ತನುವೆಂದು ಹೇಳಲು ಸಾಧ್ಯವೆ? ಮಹಾಜ್ಞಾನವುಳ್ಳ ಶ್ರೀಮಂತ ತನು ಅಜ್ಞಾನದ ಬಡತನಕ್ಕೆ ಗುರಿಯಾದುದು ತನುವಿನ ದುರ್ದೈವವೇ ಸರಿ.

ಮನವೆಂಬ ಅವ್ವಳ ಕೃಪೆಯಿಂದಾಗಿ ಅಷ್ಟ ಮದಗಳ ಗಡಿಯ ಕಂಡೆ. ನಲ್ಲನ ಬೆನ್ನಲ್ಲಿ ಹೋಗಿ ಎಂಟು ನಾಡಗಡಿಯ ಕಂಡೆ. ಉರಿಗಳ ಪರಿಗಳು ಉದಕದೆರೆಗಳು:

ಉದಕದ ಬೊಂಬೆಯಲ್ಲಿ ಬಚ್ಚಿಟ್ಟುಕೊಂಡ ಜ್ಞಾನದ ಕಿಚ್ಚಿನಿಂದಾಗಿ ಉದಕ ಬೆಳಗಿಂಗೆ ಬೆಳಕಾಗಿ ಬೆಳಗಿತು. ''ಜಲಮೇ ಆಗ ಲಗೀ ಹೈ ಬುಜಾನೆ ವಾಲೆ ನಹೀ'' ಎನ್ನುವ ಕಬೀರರ ಮಾತಿನಂತೆ ಜಲದಲ್ಲಿ ಬಚ್ಚಿಟ್ಟುಕೊಂಡ ಬಯಕೆಯ ಅಗ್ನಿಯಿಂದಲೇ ಜಲ ಅರಳಿ ಬ್ರಹ್ಮಕಮಲವಾಯಿತು. ಅರಿವಿನ ಪರಿಮಳ ಬೀರಿ ಎಲ್ಲೆಲ್ಲು ಹರಡಿತು. ಪರಿಮಳಕ್ಕೆ ರೂಪಿಲ್ಲ. ಅದು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

**303**

**ಎಮ್ಮ ನಲ್ಲ ಮನೆಯೊಳಗೆ ಏಕಾಂತಂಬೊಕ್ಕಹನು,**
**ಬೇಗ ಬೇಗ ಹೊರವಂಡಿರಣ್ಣಗಳಿರಾ.**
**ನೀವಿದ್ದಡೆ ಮೃತ್ಯು ಬಪ್ಪದು;**
**ಆತ ಮನೆಯೊಳಗೊಬ್ಬರಿದ್ದಡೂ ಸೈರಿಸ**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ನಲ್ಲನು.**

ನಲ್ಲನು ಇಲ್ಲದ ಮನೆಯೇ ಇಲ್ಲ. ಹಾಗೆಯೇ ನಲ್ಲೆಯು ಇಲ್ಲದ ಮನೆಯೂ ಇಲ್ಲ. ತನುವೆಂಬುದು ನಲ್ಲ ನಲ್ಲೆ ವಾಸ ಮಾಡಿದ ಮನೆ. ನಲ್ಲೆಯ ಜೊತೆಗೆ ಆಕೆಯ ಸಹೋದರ ಸಂಬಂಧಿಗಳಾದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತ ವ್ಯಸನಗಳು, ಅಷ್ಟ ಮದಗಳೆಂಬ ಅಣ್ಣ ತಮ್ಮಂದಿರು ಕೂಡಾ ತನುವಿನ ಮನೆಯಲ್ಲಿ ವಾಸ ಮಾಡಿದ್ದಾರೆ.

ಸೋದರ ಸಂಬಂಧಿಗಳು ಸಂಪೂರ್ಣ ಮಲಗಿದಾಗಲೇ ನಲ್ಲ ನಲ್ಲೆಯರ ಏಕಾಂತ ಕುದುರುವುದು. ಆದರೆ ಅವರು ಮಲಗುವಂತಿಲ್ಲ. ಅರಿವೆಂಬ ಮಲ್ಲಯ್ಯನ ಕೈಹಿಡಿದರೂ ಕೂಡಾ ಏಕಾಂತದ ಕೂಟ ಇನ್ನೂ ಕೈಗೂಡಿಲ್ಲ.

ಮನವೆಂಬ ನಲ್ಲೆಯ ಸೃಷ್ಟಿಯಾದುದೇ ಅರಿವಿನ ಮಲ್ಲಯ್ಯನ ಕೂಟದ ಸುಖಕ್ಕಾಗಿ. ಎಷ್ಟೋ ಕಾಲಗಳವರೆಗೆ ನಲ್ಲೆ ಪ್ರೌಢಾವಸ್ಥೆಗೆ ಬಂದಿರಲಿಲ್ಲ. ಹೀಗಾಗಿ ನಲ್ಲ ಎಂದರೆ ಯಾರೆಂದು ಆಕೆಗೆ ಗೊತ್ತಿರಲಿಲ್ಲ. ಅರಿಷಡ್ವರ್ಗಗಳೊಂದಿಗೆ ಸಪ್ತವ್ಯಸನಗಳೊಂದಿಗೆ ಅಷ್ಟಮದಗಳೊಂದಿಗೆ ಸಂಬಂಧ ಬೆಳೆಸಿ ತನ್ನ ಕನ್ಯೆತನವನ್ನು ಪೂರೈಸಿದಳು. ಸೋದರ ಸಂಬಂಧಿಗಳೊಂದಿಗೆ ಆಟವಾಡಿದಳು. ಇನ್ನು ನಲ್ಲೆ ಪ್ರೌಢತ್ವಕ್ಕೆ ಬಂದಿದ್ದಾಳೆ. ಆಕೆಗೆ ಅರಿವಿನ ಮನೆಯ ನೆನಪಾಗಿದೆ. ಅರಿವಿನ ಮಲ್ಲಯ್ಯನೆಂಬ ಗಂಡನ ನೆನಪಾಗಿದೆ. ಆ ಗಂಡನೊಂದಿಗೆ ಕೂಡಿ ಅರಿವಿನ ಸುಖ ಅನುಭವಿಸಬೇಕೆಂಬ ಸದಿಚ್ಛೆಯಾಗಿದೆ. ಆದರೆ ಏನು ಮಾಡುವುದು? ನಲ್ಲೆಯ ಸೋದರ ಸಂಬಂಧಿಗಳು ತನುವಿನ ಮನೆಯನ್ನು ಬಿಟ್ಟು ಹೊರಗೆ ಹೋಗುತ್ತಿಲ್ಲ. ಅವರಿದ್ದರೆ ನಲ್ಲ ಕೂಟಕ್ಕೆ ಕರೆಯುವುದಿಲ್ಲ. ಕೂಡದ ಅಗಲದ ಕೂಟದ ಸುಖಕ್ಕೆ ಏಕಾಂತ ಬೇಕೇ ಬೇಕು.

ಅರಿಷಡ್ವರ್ಗಗಳನ್ನು, ಸಪ್ತ ವ್ಯಸನಗಳನ್ನು, ಅಷ್ಟ ಮದಗಳನ್ನು ಹೊರಗಟ್ಟಿಯೇ ಸುಖದ

ಸವಿಯನ್ನು ಅನುಭವಿಸಬೇಕು. ಹೋಗು ಎಂದರೆ ಅವರು ಹೋಗುತ್ತಿಲ್ಲ. ಅವರಿದ್ದರೆ ಗಂಡನ ಸುಖ ಅನುಭವಿಸಲು ಸಾಧ್ಯವಾಗುವುದಿಲ್ಲ. ಅವರು ಹೋಗದಿದ್ದರೆ ತನುವಿನ ಮನೆ ವ್ಯರ್ಥ ಬಿದ್ದು ಹೋಗುವುದು. ಮೃತ್ಯು ಬಂದು ಮನೆಯನ್ನು ನಾಶ ಮಾಡುವುದು.

ಯೌವ್ವನವಿದ್ದಾಗಲೇ ಗಂಡನ ಸುಖ ಅನುಭವಿಸಬೇಕು. ''ನರೆ ಕೆನ್ನೆಗೆ, ತೆರೆ ಗಲ್ಲಕ್ಕೆ, ಶರೀರ ಗೂಡುವೋಗದ ಮುನ್ನ, ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ, ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ ಪೂಜಿಸು ಕೂಡಲಸಂಗಮದೇವನ''.

ಅರಿಷಡ್ವರ್ಗಗಳು, ಸಪ್ತ ವ್ಯಸನಗಳು, ಅಷ್ಟ ಮದಗಳು ಶರೀರವನ್ನು ಹರಿದು ತಿನ್ನುವಾಗ, ಅವುಗಳಿಗೆ ಮನ ದಾಸನಾಗಿ ಶರೀರವೇ ಅವುಗಳಿಗೆ ಆಹಾರವಾದಾಗ ಯಾರು ಏನು ಮಾಡಿಯಾರು? ಶರೀರಕ್ಕೆ ಎಷ್ಟು ವರುಷವಾದರೇನು? ಅದರ ಕನ್ಯೆಯತನವೇ ಹೋಗದಿದ್ದರೆ ಅರಿವಿನ ನಲ್ಲ ಶರೀರವನ್ನು ಬಯಕೆ ಮಾಡುವುದಾದರೂ ಹೇಗೆ?

ತನುವಿನ ಕನ್ಯತನ ಹೋಗಿ ಪ್ರೌಢತ್ವಕ್ಕೆ ಬಂದಾಗ, ತನು, ತನಗೆ ತಾನೇ ನಲ್ಲನನ್ನು ಬೇಡುತ್ತದೆ. ನಲ್ಲನು ಕೂಡಾ ನಲ್ಲೆಯನ್ನು ಕೂಡಲು ತವಕ ಪಡುತ್ತಾನೆ. ಆದರೆ ತನು ಪ್ರೌಡತ್ವಕ್ಕೆ ಬಂದು ಅರಿವಿನ ನಲ್ಲನೊಂದಿಗೆ ಮನವೆಂಬ ನಲ್ಲೆ ಕೂಡಲು ಬಯಕೆ ಮಾಡಿದಾಗ ತನುವಿನಲ್ಲಿ ಯಾರೂ ಇರಬಾರದು. ಅಂದಾಗ ಮಾತ್ರ ಅರಿವಿನ ಮಲ್ಲಯ್ಯ ನಲ್ಲೆಯೊಂದಿಗೆ ಕೂಡಿ ಕೂಡದ ಅಗಲದ ಕೂಟದ ಅರಿವಿನ ಸುಖವನ್ನು ನೀಡುತ್ತಾನೆ.

**304**

**ಎಮ್ಮ ನೋವೇ ನೋವು ನಿಮಗೆ,**
**ಎಮ್ಮ ಸುಖವೇ ಸುಖವು ನಿಮಗೆ,**
**ಮತ್ತೆ ನಿಮ್ಮುವ ತೋರೆಯಯ್ಯಾ ನೀನು ಕರಕರ ಸೂಕ್ಷ್ಮನು.**
**ಸೂಕ್ಷದಲ್ಲಿ ತಿಮಿರ ಹೂಸಿ ಬೆರಸಿ ನೋಡು ನೋಡೆಂಬೆನಯ್ಯಾ.**
**ನಾ ಕಾಣಿಸಲಿಕಾರೆನಯ್ಯಾ; ನೀ ಬೆರಸಿ ಬೆರಸಿ ಒಲ್ಲೆನೆ,**
**ಎನ್ನ ಕಪಿಲಸಿದ್ಧ ಮಲ್ಲಿನಾಥಾ, ನೀ ಶೂನ್ಯನಯ್ಯಾ.**

ದೇಹ ನಿನ್ನದು. ದೇವಾಲಯವೂ ನಿನ್ನದೆ. ದೇಹದಲ್ಲಿ ಸಂಗಮವಾದ ದೇವರು ಕೂಡಾ ನೀನೇ ಆಗಿರುವಿ. ನಿನ್ನ ದೇಹದೊಂದಿಗೆ ನನ್ನ ಕಾಮದ ಚೆಲ್ಲಾಟ; ನಿನ್ನ ದೇಹದೊಂದಿಗೆ ನನ್ನ ಕ್ರೋಧದ ಆಟ; ಲೋಭ ಮೋಹ ಮದ ಮತ್ಸರಗಳ ಒಡನಾಟವನ್ನು ನಿನ್ನ ದೇಹದ ಮೂಲಕ ಮಾಡುವ ಕ್ರೂರಿ ನಾನು. ನನ್ನ ನೋವು ನಿನಗೆ, ನನ್ನ ಸುಳ್ಳು ಸುಖವು ಕೂಡಾ ನಿನಗೆ.

ನನ್ನ ಸುಖ ದುಃಖಗಳನ್ನು ಸಹಿಸಿಕೊಳ್ಳುವ ಗಟ್ಟಿಗ ನೀನು. ಭಗವಂತನೇ, ನನ್ನ ಹಾದರದ ಸುಖವನ್ನು ನಿನ್ನ ದೇಹದ ಮೂಲಕ ಅನುಭವಿಸಿ, ಕೆಟ್ಟ ಹಣೆಪಟ್ಟಿಯನ್ನು ನಿನಗೆ ಕಟ್ಟುವ ಜಾಣತನ ನನ್ನಲ್ಲಿದೆ. ಆದರೆ ನಿನ್ನ ಚರಣ ಕಮಲಗಳಿಗೆ ದಾಸನಾಗಿ ನಿನ್ನೊಂದಿಗೆ ಸೇರಿ ನಿನ್ನಲ್ಲಿಯೇ ಲೀನವಾಗಬೇಕೆಂಬ ಬಯಕೆ ನನ್ನಲ್ಲಿ ಕಿಂಚಿತ್ತೂ ಇಲ್ಲ. ಅದನ್ನು ನೀನೇ ಹುಟ್ಟಿಸುತ್ತಿಲ್ಲ. ನಿಮ್ಮ ದರುಶನವನ್ನು ನೀಡದ ಕರಕರ ಸೂಕ್ಷ್ಮನು ನೀನು.

ಏಳೂನೂರಾ ಇಪ್ಪತ್ತು ಕೋಟಿ ತನುಗಳಲ್ಲಿಯೂ ನೀನಿದ್ದು, ತನು ತನುವಿಗೂ

ಅಜ್ಞಾನದ ಕತ್ತಲೆಯನು ಹೂಸಿ, ಜ್ಞಾನದ ಬೆಳಕಿನಲ್ಲಿ ನೀನಿರುವಿ. ಒಡಲೊಳಗಿದ್ದು ಒಡಲಿಂಗೆ ಆಧಾರವಾಗಿರುವೆ; ಆದರೂ ಒಡಲನ್ನು ಸೋಂಕದ ಗಟ್ಟಿಗ ನೀನು. ಒಡಲನ್ನು ಬೆರಸಿಯೂ ಬೆರಸದಂತೆ ಬೆಳಗುವ ಜಾಣ ನೀನು.

ನೀ ಬೆರೆಸಿದ ಈ ಒಡಲಲ್ಲಿ ನಾ ಬೆರೆತಿದ್ದರೂ ನಿನಗೆ ನಾನು ಕಾಣಿಸುತ್ತಿಲ್ಲವೆ? ನಿನ್ನ ಬೆಳಕಿನಿಂದಲೇ ನಿರ್ಮಾಣವಾದ ಕತ್ತಲೆ ನಾನು! ನಿನಗೆ ನಾನು ಕಾಣಿಸಲಿಕೆ ಆರೆನಯ್ಯಾ. ನೀನು ಬೆರಸಿ ಬೆರಸಿಯೂ ನಿನಗೆ ನಾನು ಒಲ್ಲೆನಾದೆನೆ ತಂದೆ? ಎನ್ನ ಮಾತು ಆಲಿಸದೆ ಎನ್ನನು ನೀ ಬೆಳಗದ ಶೂನ್ಯನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**305**

**ಎರಡು ತೋಳೆರಡು ಭುಜ,**
**ಆವಾತನ ಹಿಡಿವಾಗಲಿ ಒಂದೇ ನೋಡಾ.**
**ಕಣ್ಣೆರಡಂಗ ಬೇರಿರೆ**
**ಆವಾತನ ನೋಡುವಾಗ ಒಂದೇ ನೋಡಾ.**
**ಇಬ್ಬರಿಗೊಬ್ಬ ಗಂಡ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಅನುಭಾವಿಗಳ ಮಾತನ್ನು ಮಾತೆನ್ನುವಂತಿಲ್ಲ. ಮಾತನ್ನು ಅಳಿಯುವ ಮಾತು. ಮಾತಲ್ಲದ ಮಾತು. ಮಾತಿನಲ್ಲಿ ಅಮೃತ ತುಂಬಿದ ಮಾತು. ಅದು ಜ್ಯೋತಿರ್ಲಿಂಗ.

ಎರಡು ತೋಳು ಎರಡು ಭುಜ ಇರುವಾತ ಯಾರಾದರೂ ಆಗಲಿ ಆತ ತನುವುಳ್ಳಾತನೇ ಆಗಿದ್ದಾನೆ. ಆತನನ್ನು ಹಿಂದು ಮುಸಲ್ಮಾನ ಫಾರ್ಸಿ ಕ್ರಿಶ್ಚಿಯನ್ ಬುದ್ಧನೆಂದು ಜೈನನೆಂದು ಕರೆಯುವಂತಿಲ್ಲ. ಆತ ತನುವುಳ್ಳಾತನೆ.

ಕಣ್ಣು ಎರಡು ಅಂಗ ಬೇರಿರುವಾತನನ್ನು ಕೂಡಾ ಹೆಣ್ಣು ಎಂದು ಕರೆಯುವಂತಿಲ್ಲ. ತನು ಒಂದೇ. ಕಾಣುವ ಕಣ್ಣು ಬೇರಿಲ್ಲ. ಕೇಳುವ ಕಿವಿಯೂ ಬೇರಿಲ್ಲ. ಸ್ಪರ್ಶಿಸುವ ಚರ್ಮವೂ ಬೇರಿಲ್ಲ. ಮೂಸಿಸುವ ಮೂಗು ಬೇರಿಲ್ಲ. ರುಚಿಸುವ ನಾಲಿಗೆ ಬೇರಿಲ್ಲ. ಅಂದ ಮೇಲೆ ಹೆಣ್ಣೆಂದು ನೋಡುವುದು ತಪ್ಪಲ್ಲವೇ? ಹೆಣ್ಣು, ಗಂಡೆಂದು ನೋಡುವುದು ತಪ್ಪಲ್ಲವೆ?

ಹೆಣ್ಣು ಎಂದು ಹೇಳಿಕೊಳ್ಳುವ ಅಂಗ ಹೆಣ್ಣು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡಿದೆ. ಗಂಡು ಎಂದು ಹೇಳುವ ಅಂಗ, ಗಂಡು ಎನ್ನುವ ಅಜ್ಞಾನ ಆಮಂತ್ರಣ ಮಾಡಿಕೊಂಡಿದೆ. ಇವೆರಡೂ ಅಂಗಗಳಲ್ಲಿ ಇರುವ ಪದಾರ್ಥಗಳೆಲ್ಲ ಒಂದೇ ಆಗಿದೆ. ಎರಡೂ ಅಂಗಗಳಲ್ಲಿ ಹರಿಯುವ ರಕ್ತ ಒಂದೇ. ಮಾಂಸ ಒಂದೇ. ಹಂದರದಂತೆ ಹೆಣೆದ ಮೂಳೆಗಳು ಒಂದೇ. ಮಜ್ಜಾ ಮೇದಸ್ಸು ಒಂದೇ. ಇವು ಸೋರದಂತೆ ಸುಂದರವಾಗಿ ಪ್ಯಾಕ್ ಆದ ಚರ್ಮ ಒಂದೇ. ಅಂದಮೇಲೆ ಮನ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಹೆಣ್ಣಾಗಿ ಗಂಡನ್ನು ನೋಡುತ್ತದೆ. ಗಂಡಾಗಿ ಹೆಣ್ಣನ್ನು ನೋಡುತ್ತದೆ. ಅರಿವಿನಿಂದ ನೋಡಲು ಅಂಗ ಒಂದೇ.

ಪ್ರತಿ ಅಂಗದಲ್ಲಿ ಅರಿವು ಇದೆ. ಅಂಗವನ್ನು ಮನ ಆವರಿಸಿದೆ. ಮನ, ಅಂಗವನ್ನು ಬಳಸಿಕೊಂಡು ಮತ್ತೊಂದು ಅಂಗವನ್ನು ನೋಡಿದಾಗ ಹೆಣ್ಣಾಗಿ ಗಂಡನ್ನು ನೋಡುತ್ತದೆ. ಗಂಡಾಗಿ ಹೆಣ್ಣನ್ನು ನೋಡುತ್ತದೆ. ಮನ ಲೋಕದ ಮಾತನ್ನು ನಂಬುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಮಾತನ್ನು ನಂಬುವುದಿಲ್ಲ.

ಮನ ಎಂಬುದು ಇಲ್ಲದ್ದು. ಆದರೂ ಇದ್ದಂತೆ ಭಾಸವಾಗಿದೆ. ಭಾಸವಾಗಿದೆ ಎನ್ನುವುದಕ್ಕಿಂತ ಅದು ಖಚಿತವಾಗಿ ಇದೆ ಎಂದೇ ನಂಬಿಗೆ ಉಂಟಾಗಿದೆ. ಹೀಗಾಗಿ ಮನ ಕಾಯಿಲೆ ಬಿದ್ದಾಗ ವೈದ್ಯರು ಮನಕ್ಕೆ ಚಿಕಿತ್ಸೆ ಮಾಡುವುದುಂಟು. ಆದರೆ ಯಾವೊಬ್ಬ ವೈದ್ಯನೂ ಅರಿವಿಗೆ ಚಿಕಿತ್ಸೆ ಮಾಡುವುದಿಲ್ಲ. ಅರಿವಿಗೆ ಚಿಕಿತ್ಸೆ ಮಾಡುವ ವೈದ್ಯರೇ ಈ ಜಗದೊಳಗೆ ಇಲ್ಲ.

ಅರಿವು ಎಂದರೆ ಬೆಳಕು. ಅಂಗವನ್ನು ಬೆಳಗುವ ಬೆಳಕು. ಈ ಬೆಳಕಿನಿಂದ ಮನವೆಂಬ ಕತ್ತಲು ಅಂಗದಲ್ಲಿಯೇ ಹುಟ್ಟಿದೆ. ಅಂಗವನ್ನು ಆವರಿಸಿ ಬದುಕುತ್ತಲಿದೆ. ಹೀಗಾಗಿ ಅಂಗದಲ್ಲಿ ಕತ್ತಲು ಬೆಳಕಿನ ಆಟ ನಡೆದಿದೆ.

ಕತ್ತಲು ಎನ್ನುವುದು ಇಲ್ಲ. ಭೂಮಿಯ ಅರ್ಧ ಭಾಗ ಬೆಳಗುತ್ತಿದೆ. ಇನ್ನರ್ಧ ಭಾಗ ಸೂರ್ಯನ ಬೆಳಕನ್ನು ತಡೆದಿದೆ. ತಡೆದ ಈ ಭಾಗವನ್ನು ಕತ್ತಲು ಎಂದರೆ ತಪ್ಪಲ್ಲವೆ? ಆದರೂ ಬೆಳಗುತ್ತಿಲ್ಲ. ಕತ್ತಲೆನ್ನದೆ ವಿಧಿಯಿಲ್ಲ. ಅರ್ಧಭಾಗ ಬೆಳಗಿದ ಸೂರ್ಯ ಇನ್ನರ್ಧ ಭಾಗವನ್ನೂ ನಂತರ ಬೆಳಗುತ್ತಾನೆ.

ಸೂರ್ಯ ತಾನಾಗಿಯೇ ಬೆಳಗುವುದಿಲ್ಲ. ಭೂಮಿಯ ಕತ್ತಲ ಭಾಗ ಸೂರ್ಯನ ಬೆಳಕಿನತ್ತ ಸರಿಯುತ್ತಾ ಹೋಗುತ್ತದೆ. ಬೆಳಕು ಕತ್ತಲನ್ನು ನುಂಗಿ ಬೆಳಗುತ್ತಾ ಹೋಗುತ್ತದೆ. ಕತ್ತಲು ಬೆಳಕಿನಲ್ಲಿ ಸರಿದು ಬೆಳಕೇ ಆಗಿ ಬೆಳಗುತ್ತಾ ಹೋಗುತ್ತದೆ. ಇದು ಕತ್ತಲು ಬೆಳಕಿನ ಆಟ. ಒಂದು ಸದಾ ಬೆಳಗುವ ಬೆಳಕಿನ ಪ್ಲಾನೆಟ್. ಮತ್ತೊಂದು ಬೆಳಕಿನ ಸಹಾಯದಿಂದ ಬೆಳಕೂ ಕತ್ತಲಾಗುವ ಬೆಳಕು ಕತ್ತಲೆಯುಳ್ಳ ಪ್ಲಾನೆಟ್.

ಭೂಮಿ ಮತ್ತು ಸೂರ್ಯ ಎರಡೂ ಆಕಾಶದಲ್ಲಿರುವ ಕಾಯಗಳು. ಆಕಾಶ ಕಾಯಗಳು. ಬಯಲ ಕಾಯಗಳು! ಬಯಲೇ ಈ ಎರಡೂ ಕಾಯಗಳಿಗೆ ಜನ್ಮ ನೀಡಿದೆ. ಒಂದನ್ನು ಸದಾ ಬೆಳಗುವಂತೆ ಮಾಡಿದೆ. ಮತ್ತೊಂದನ್ನು ಒಂದರ ಬೆಳಕಿನಿಂದ ಅರ್ಧ ಬೆಳಗಿ ಅರ್ಧ ಕತ್ತಲಾಗುವಂತೆ ಮಾಡಿದೆ. ಬೆಳಗುವ ಸೂರ್ಯ ಕಾಯವನ್ನು, ತಿರುಗುವ ಭೂಮಿ ಕಾಯವನ್ನು ಬಯಲು ತನ್ನ ಗರ್ಭದಲ್ಲಿಟ್ಟುಕೊಂಡು ಪೋಷಿಸುತ್ತಿದೆ. ಹೀಗಾಗಿ ಇವೆರಡೂ ಕಾಯಗಳಿಗೂ ಗಂಡ ಒಂದೇ.

ಬಯಲು ಜಲಜನಕವನ್ನು ಆಮ್ಲಜನಕವನ್ನು ಸೃಷ್ಟಿ ಮಾಡಿ, ಅವೆರಡನ್ನೂ ಒಂದು ಮಾಡಿ, ಅವೆರಡರಲ್ಲಿ ಬಯಲು ಬೆರೆತು ಜೀವಜಲವಾಗಿದೆ. ಕಾಯವಾಗಿದೆ. ಕಾಯದ ಮೂಲಕ ಕಾಯದ ಗರ್ಭದಲ್ಲಿ ಹೊಕ್ಕು ಕಾಯವಾಗಿದೆ. ಕಾಯದಲ್ಲಿಯೇ ಸಂಗಮವಾಗಿ, ಕಾಯಕ್ಕೆ ಅರಿವಾಗಿ ಬೆಳಗುತ್ತಲಿದೆ. ಬೆಳಕಿನ ನೆರಳೇ ಮನವೆಂಬ ಕತ್ತಲಾಗಿದೆ.

ಕಾಯದಲ್ಲಿಯೇ ಕತ್ತಲು ಬೆಳಕಿನ ಆಟ ನಡೆದಿದೆ. ಜ್ಞಾನ ಅಜ್ಞಾನದ ಆಟ ನಡೆದಿದೆ. ಮನದಿಂದಾಗಿ ಕಾಯವೇ ಹೆಣ್ಣಾಗಿದೆ ಕಾಯವೇ ಗಂಡಾಗಿದೆ.

ಮನ, ಕಾಯದ ಸಂಗ ಮಾಡಿದರೆ ಹೆಣ್ಣಾದರೂ ಆಗುತ್ತದೆ; ಗಂಡಾದರೂ ಆಗುತ್ತದೆ. ಮನ, ಅರಿವಿನ ಸಂಗ ಮಾಡಿದರೆ ಎರಡೂ ಕಾಯಗಳಿಗೆ ಅರಿವೇ ಗಂಡನಾಗುತ್ತದೆ. ಇವರಿಬ್ಬರಿಗೊಬ್ಬನೇ ಗಂಡ ಕಪಿಲಸಿದ್ಧ ಮಲ್ಲಿಕಾರ್ಜುನ!

**306**

**ಎರಡು ಸಾದಾಖ್ಯದಲಿ ಒದವಿದ ಬ್ರಹ್ಮವನು**
**ಪದಚ್ಛೇದವ ಮಾಡುತ್ತಿದ್ದಳವ್ವೆ.**

**ಮೂರಾರಲ್ಲಿ ಹುಟ್ಟಿ ಆರಾರನತಿಗಳೆದಳವ್ವೆ.**
**ಮೀರಿದಾನಂದದ ನೆಲೆಮನೆಯಾಗಿದ್ದಳವ್ವೆ.**
**ಕಪಿಲಸಿದ್ಧ ಮಲ್ಲಿನಾಥನ ಕೂಡಿ ಅವ್ವೆ.**

ದೇಹಕ್ಕೂ ದೇಹವನ್ನು ಆವರಿಸಿದ ಮನಕ್ಕೂ ಮದ್ದು ಕೊಡುವ ವೈದ್ಯರಿದ್ದಾರೆ. ಆದರೂ ದೇಹ ಮತ್ತು ಮನಗಳೆರಡೂ ಸಂಪೂರ್ಣ ನಿರೋಗಿಯಾಗಿ ಇರಲಾರವು. ಏಕೆಂದರೆ ಮನದಿಂದಾಗಿ ಮನಕ್ಕೂ ಮತ್ತು ದೇಹಕ್ಕೂ ಭ್ರಮೆ ಆವರಿಸಿದೆ. ಈ ಭ್ರಮೆಯ ರೋಗವನ್ನು ಸಂಪೂರ್ಣ ಕಳೆಯಬಲ್ಲ ವೈದ್ಯನೊಬ್ಬನು ಇದ್ದಾನೆ. ಅವನೇ ಸದ್ಗುರು. ಭವರೋಗದ ವೈದ್ಯ.

ದೇಹ ಮತ್ತು ಮನ ಇವೆರಡೂ ಬೇರೆ ಬೇರೆ ಅಲ್ಲ. ಇವು ಭ್ರಮೆ ಕೂಡಾ ಅಲ್ಲ. ಅರಿವಿನಿಂದ ನೋಡಿದರೆ; ಅವೆರಡರಲ್ಲಿಯೂ ಬ್ರಹ್ಮ ಸಂಗಮವಾಗಿದ್ದಾನೆ.

ಮನ ಭ್ರಮೆಯಲ್ಲ; ನಿನ್ನನ್ನು ಹಡೆದ ತಾಯಿ ಆಕೆ ಸಾಕ್ಷಾತ್ ಶಿವೆ. ಅರ್ಧನಾರೀಶ್ವರಿಯೇ ಆಗಿದ್ದಾಳೆ. ಅಂಗದಲ್ಲಿ ಸಂಗಮವಾದ ಮಹಾಜ್ಞಾನವೇ ಶಿವ. ಆತ ನಿನ್ನನ್ನು ಹಡೆದ ತಂದೆಯೇ ಆಗಿದ್ದಾನೆ. ನಿನ್ನ ತಂದೆ ನಿನ್ನ ತಾಯಿ ದೇಹದಲ್ಲಿಯೇ ಸಂಗಮವಾಗಿದ್ದಾರೆ. ತಂದೆ ತಾಯಿಗಳು ವಾಸ ಮಾಡಿದ ಕಾಯವನ್ನೇ ಶರಣರು ಕೈಲಾಸವೆಂದು ಕರೆದಿದ್ದಾರೆ.

ನೀನು ಸಾಕ್ಷಿಯಾಗಿ ನಿನ್ನನ್ನೇ ನೋಡಿಕೋ. ಮನ ಮತ್ತು ದೇಹ ಬೇರೆ ಬೇರೆ ಅಲ್ಲ. ಅವೆರಡೂ ಬ್ರಹ್ಮವೇ ಆಗಿವೆ. ನಿನ್ನ ಹಡೆದ ಅವ್ವೆ ಪದಚ್ಛೇದ ಮಾಡಿದುದಕ್ಕಾಗಿ ನಿನಗೆ ಹಾಗೆ ಕಂಡು ಬರುತ್ತಲಿದೆ.

ಮೂರು ಆರು ಒಂಬತ್ತು ತತ್ವಗಳಲ್ಲಿ ಹುಟ್ಟಿ ; ಆರಾರು ಮೂವತ್ತಾರು ತತ್ವವನು ಅತಿಗಳೆದು ಮಹಾತತ್ವವೇ ತಾನಾಗಿದ್ದಾಳೆ ಅವ್ವೆ. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೊಂದಿಗೆ ಬೆರೆತು ಲಿಂಗಾಂಗವೇ ತಾನಾಗಿದ್ದಾಳೆ ಅವ್ವೆ.

ಮೀರಿದ ಮಹದಾನಂದದ ನೆಲೆಮನೆಯಾಗಿದ್ದಾಳೆ ಅವ್ವೆ. ಸಕಲ ಭ್ರಮೆಗಳನ್ನು ಕಳಚಿ ಕಪಿಲಸಿದ್ಧ ಮಲ್ಲಯ್ಯನನ್ನು ಕೂಡಿ ಭ್ರಮರಾಂಬೆಯೇ ತಾನಾಗಿದ್ದಾಳೆ ಅವ್ವೆ.

**307**

**ಎರಡೆಂಟನತಿಗಳೆದು ಮುನ್ನೂರ ಮೂವತ್ತು**
**ಕರದರ್ಪಣೆಯ ಭೇದವೊಂದು ಮಾಡಿ,**
**ಜಗವ ಸುತ್ತಿದ ಸೀಮೆ ಹದುಳವಿಡಬಲ್ಲರೆ**
**ಪರಬ್ರಹ್ಮ ಗುರು ತಾನು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇಹ ಸುಧಾರಣೆಗಾಗಿ, ಸುಧಾರಿಸಿದ ದೇಹದಿಂದ ಹೊರಬಂದ ಸೂತ್ರಗಳನ್ನು ಶಾಸ್ತ್ರ ಎಂದು ದೇಹದಿಂದಲೇ ಕರೆಯಲ್ಪಟ್ಟಿತು. ದೇಹದಲ್ಲಿಯೇ ತೊಂದರೆಯಿದೆ. ದೇಹದ ಮೂಲಕ ದೇಹದಿಂದ ಘಟಿಸಿದ ಅವಘಡಗಳನ್ನು ದೇಹದ ಅರಿವಿನ ಮೂಲಕ ಸುಧಾರಿಸಿಕೊಳ್ಳಬಹುದು. ಆದರೆ ದೇಹದಿಂದ ಹೊರಬಂದ ಶಾಸ್ತ್ರವೇ ಪ್ರಧಾನವಾಗಿದೆ. ಈ ಶಾಸ್ತ್ರಗಳಿಂದ ದೇಹ ಪಂಡಿತ ಶಾಸ್ತ್ರಿ ಆಗಬಹುದೇ ವಿನಃ ಸುಧಾರಿಸಲಾರದು.

ದೇಹದಿಂದ ಹೊರಬಂದ ಭೇದಗಳ ದರ್ಪಣಗಳನ್ನು ಒಂದು ಮಾಡಿ ನೋಡಲು ಹೋದರೆ

ಸಮಯ ಹಾಳಾಗುತ್ತದೆ. ಅಜ್ಞಾನದ ಸೀಮೆಯನ್ನು ದಾಟಿ ನಿಸ್ಸೀಮನಾಗಲು ತಡವಾಗುತ್ತದೆ.

ಅರವತ್ನಾಲ್ಕು ವಿದ್ಯೆಗಳನ್ನು ಕಲಿತ ದೇಹ ಚತುರ ಎನ್ನಿಸಿಕೊಳ್ಳಲು ಸಾಧ್ಯವೇ ಹೊರತು ಮತ್ತೇನೂ ಸಾಧಿಸಿದಂತೆ ಆಗುವುದಿಲ್ಲ. ದೇಹವನ್ನು ಭ್ರಮೆ ಆವರಿಸಿದೆ. ಹೀಗಾಗಿ ದೇಹವೇ ದೇವಾಲಯವಾಗಿದ್ದರೂ ಆಲಯಗಳನ್ನು ನಿರ್ಮಿಸಿ ದೇವರನ್ನು ಪ್ರತಿಷ್ಠಾಪಿಸಿದೆ. ಭ್ರಮೆಯಿಂದ ತಾನು ಸೃಷ್ಟಿ ಮಾಡಿದ ದೇವರಿಗೆ ತಾನೇ ಶರಣಾಗತನಾಗಿದೆ.

ದೇಹವನ್ನು ಸೃಷ್ಟಿ ಮಾಡಿ, ದೇಹದಲ್ಲಿಯೇ ಸಂಗಮವಾದ ದೇವರನ್ನು ದೇಹವೇ ಮರೆತದ್ದರಿಂದ ದೇಹಕ್ಕೆ ಶಾಸ್ತ್ರದ ಶನಿ, ದೇವರ ಶನಿ ಬಡಿದಿದೆ.

ದೇವರೆಂದರೆ 'ಅರಿವು', ಸತ್ಯ. ಅದು ದೇಹದಲ್ಲಿಯೇ ಇದೆ. ದೇಹವೇ 'ಕೋಶ'ವನ್ನು ರಚಿಸಿದೆ. ದೇಹವೇ 'ಕೋಶ'ಕ್ಕೆ ಮರುಳಾಗಿದೆ. ದೇಹವೇ ದೇಶಕ್ಕೆ ಮರುಳಾಗಿದೆ. ದೇಹವೇ ದೇವರಿಗೆ ಮರುಳಾಗಿದೆ.

ಕಲ್ಲು ಒಂದೇ. ಕಲ್ಲಲ್ಲಿ ಕೆತ್ತಿದ ದೇವರು ಸಾವಿರಾರು. ದೇವರ ದರುಶನಕ್ಕಾಗಿ ದೇಹ ದೇಶ ಸುತ್ತುತ್ತಲಿದೆ. ಕಲ್ಲಲಿ ಕೆತ್ತಿದ ದೇವರನ್ನು ದೇವರೆಂದು ತಿಳಿದು ಕಲ್ಲನ್ನೇ ಮರೆತದ್ದರಿಂದ ದೇಹಕ್ಕೆ ಈ ದುರ್ಗತಿ.

ದೇವರು ದೇವರಲ್ಲ ಅದು ಕಲ್ಲೆಂದು ತಿಳಿಯುವ ಅರಿವು ದೇಹದಲ್ಲಿಯೇ ಇದೆ. ಅರಿವಿನ ದೇವರನ್ನು ದೇಹ ಹೊತ್ತುಕೊಂಡು ಮರೆವಿನ ದೇವರ ದರುಶನಕ್ಕೆ ಹೋದರೆ ಯಾರು ಏನು ಮಾಡಿಯಾರು?

ದೇಹದಿಂದಲೇ ಹೊರಬಂದ ಶಾಸ್ತ್ರಗ್ರಂಥಗಳು, ಭಗವದ್ಗೀತೆ, ಬೈಬಲ್, ಕುರಾನ್‌ಗಳು, ವೇದ ಆಗಮ ಉಪನಿಷತ್‌ಗಳೆಲ್ಲವೂ ಕೂಡಾ ದೇಹದಿಂದಲೇ ಹೊರಬಂದ 'ಅರಿವು' ಆಗಿವೆ. ಎಂಜಲ ಅರಿವು ಮೀಸಲ ಅರಿವಿಗೆ ಭೋದಿಸಲು ಸಾಧ್ಯವೆ? ಸಾಧ್ಯವಾಗುವುದಿಲ್ಲ.

ಅರಿವಿನಿಂದ ನೋಡಿದರೆ ಆ 'ಅರಿವೇ' ತಾನು. ತನ್ನ ಮರೆವಿನಿಂದ ಮಾಡಿದ ತಪ್ಪುಗಳನ್ನು ತನ್ನ ಅರಿವೇ ತನಗೆ ಭೋದೆ ಮಾಡುವುದು ತನ್ನಿಂದಲೇ ತನಗೆ ತಿಳಿಯುತ್ತದೆ. ಅರಿವಿನಿಂದ ಆಲಿಸಬೇಕು. ದೇಹದಲ್ಲಿ ಸಂಗಮವಾದ ಅರಿವೇ ದೇಹವನ್ನು ಆವರಿಸಿದ ಮನಕ್ಕೆ 'ಗುರು'ವಾಗುತ್ತದೆ. ಮನವೇ ಅರಿವೆಂಬ ಗುರುವಿಗೆ ಶಿಷ್ಯನಾಗುತ್ತದೆ.

ಅರಿವೇ ಗುರು, ಆ ಗುರುದೇವನೇ ಮಹಾದೇವನೂ ಆಗಿದ್ದಾನೆ. ಆ ಮಹಾದೇವನೇ ಸದಾಶಿವನೂ ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೂ ಆಗಿದ್ದಾನೆ.

**308**

**ಎರಡೆಂಟು ಗ್ರಾಮದಲ್ಲಿ ಚೌಮಠವ ಮನ್ನಿಸಿ**
**ಆನಂದದಿಂದವರು ನಿತ್ಯರಯ್ಯಾ.**
**ಧ್ಯಾನ ಸಮಾಧಿ ತಾನು ರೂಪಾದೊಡೆ**
**ಅವರ ನೀನು ನೀನೆಯೆಂಬೆ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇಹವನ್ನು ಗ್ರಾಮ, ಪುರ, ದೇಶ ಎಂದು ಕರೆದಿದ್ದಾರೆ. ದೇಹವನ್ನು ಮನ ಬುದ್ಧಿ ಚಿತ್ತ ಅಹಂಕಾರ ಆವರಿಸಿದೆ. ದೇಹದಲ್ಲಿ ಅರಿವಿನ ದೇವರು ಸಂಗಮವಾಗಿದ್ದಾನೆ.

ಮನ ಬುದ್ಧಿ ಚಿತ್ತ ಅಹಂಕಾರದ ಹಿಂದೆಯೇ ಚತುರ್ಮುಖ ಲಿಂಗಗಳಿವೆ. ಹರಿದಾಡುವ ಮನವನ್ನೇ ಭಕ್ತನನ್ನಾಗಿಸಿ, ಬುದ್ಧಿಯನ್ನು ಜಂಗಮವನ್ನಾಗಿಸಿ, ಚಿತ್ತವನ್ನೇ ಪಾದೋದಕವನ್ನಾಗಿಸಿ, ಅಹಂಕಾರವನ್ನು ಪ್ರಸಾದದಂತೆ ಸ್ವೀಕರಿಸಿ ಪರಮಾನಂದದಿಂದ ಇರಲು ಬಂದವನೇ ಜಾಣ.

ಅಷ್ಟಮದ, ಅಷ್ಟಮಲಗಳಿಂದ ತುಂಬಿದ, ಮನ ಬುದ್ಧಿ ಚಿತ್ತ ಅಹಂಕಾರವುಳ್ಳ ತನುವಿನ ಅಜ್ಞಾನವನ್ನು ತನಗೆ ತಾನೇ ತನುವಿನಲ್ಲಿ ತನ್ಮಯವಾದ ಜ್ಞಾನದಿಂದಲೇ ಪ್ರಸಾದ ಮಾಡಿಕೊಂಡು ಉಂಡಾಗ ನಿತ್ಯನಾಗುತ್ತಾನೆ. ತನಗೆ ತಾನೇ ಪರಮಾನಂದ ಪ್ರಾಪ್ತಿಯಾಗುತ್ತದೆ.

ಜಪ ತಪ ಮಾಡಿದರೆ, ಧ್ಯಾನ ಮಾಡಿದರೆ ತನುವನ್ನು ಆವರಿಸಿದ ಅಷ್ಟಮದಗಳು, ಅಷ್ಟಮಲಗಳು ತೊಲಗುವುದಿಲ್ಲ. ಮನ ಬುದ್ಧಿ ಚಿತ್ತ ಅಹಂಕಾರಗಳು ಅರಿವಿನ ಮಹಾಲಿಂಗಗಳಾಗುವುದಿಲ್ಲ.

ದೇಹದಲ್ಲಿ ಅಷ್ಟ ಮದಗಳು, ಅಷ್ಟ ಮಲಗಳು ಹುಟ್ಟುವುದಕ್ಕೆ ಮನವೇ ಕಾರಣ. ದೇಹದಲ್ಲಿ ಚಿತ್ತ ಬುದ್ಧಿ ಅಹಂಕಾರ ಹುಟ್ಟುವುದಕ್ಕೆ ಮನವೇ ಕಾರಣ.

ದೇಹದಲ್ಲಿ ಅರಿವಿನ ದೇವರು ಇದ್ದಾನೆ. ದೇಹವನ್ನು ಮನ ಆವರಿಸಿದೆ. ದೇಹವನ್ನು ನಾನಾ ವಿಧಗಳಿಂದ ಸೀಳುತ್ತಾ ಹೋದಂತೆಲ್ಲ ಅಜ್ಞಾನದ ಸಂಖ್ಯೆಗಳು ಹೆಚ್ಚಾಗುತ್ತಲೇ ಹೋಗುತ್ತವೆ. ಅಷ್ಟಮದ ಅಷ್ಟಮಲ ಸಪ್ತವ್ಯಸನಗಳು ಅರಿಷಡ್ವರ್ಗಗಳನ್ನು ಪಠಿಸುತ್ತಾ ಮನ ಪಂಡಿತನಾಗಿ ದೇಹವನ್ನು ಪುನಹ ಯಾಮಾರಿಸುತ್ತದೆ.

ದೇಹ ಅರಿವು ಮನ ಇವು ಮೂರೂ ದೇಹಗಳೇ ಆಗಿವೆ. ದೇಹ ಕಾಣುತ್ತದೆ ಹೀಗಾಗಿ ಅದು ಸ್ಥೂಲದೇಹ. ಮನ ಕಾಣುವುದಿಲ್ಲ; ಸ್ಥೂಲ ದೇಹದೊಂದಿಗೆ ಗೆಳೆತನ ಮಾಡಿ ಅಜ್ಞಾನದ ಸುಖವನ್ನು ದೇಹದೊಂದಿಗೆ ಉಣ್ಣುತ್ತದೆ ಹೀಗಾಗಿ ಮನವನ್ನು ಸೂಕ್ಷ್ಮ ದೇಹ ಎಂದು ಕರೆದಿದೆ ಅರಿವಿನ ಲೋಕ.

ಸೂಕ್ಷ್ಮ ದೇಹಕ್ಕೆ ಹಗಲಿರುಳೆನ್ನದೆ ಅರಿವಿನ ಪಾಠ ಮಾಡುವ ಅರಿವಿನ ದೇವರೊಬ್ಬನಿದ್ದಾನೆ. ಈತ ಸದಾ ಸುಖಿ. ಈ ದೇಹವನ್ನು ಕಾರಣ ದೇಹವೆಂದು, ಅರಿವಿನ ದೇಹವೆಂದು ಕರೆದಿದ್ದಾರೆ ಅರಿವಿನ ಹಿರಿಯರು. ಈ ದೇಹ ಕೂಡಾ ಕಾಣುವುದಿಲ್ಲ.

ಸ್ಥೂಲ ದೇಹ ಅರಿವಿನ ದೇಹದೊಂದಿಗೆ ಸಂಗ ಮಾಡಬೇಕು. ಆದರೆ ಮನ, ಸ್ಥೂಲ ದೇಹದ ಸಂಗ ಬಿಡಬೇಕು; ಅರಿವಿನ ದೇಹದ ಸಂಗ ಮಾಡಬೇಕು. ಇದು ಅನಂತ ಕಾಲದವರೆಗೆ ಸಾಧ್ಯವಾಗುವುದೇ ಇಲ್ಲ.

ಮನ ಸ್ಥೂಲ ದೇಹದೊಂದಿಗೆ ಸಂಗ ಮಾಡಿ ದೇಹಕ್ಕೆ ಅರಿವಿನ ವೇಷ ಹಾಕುತ್ತದೆ. ಧ್ಯಾನ ಮಾಡುತ್ತದೆ. ಜಪ ತಪಗಳನ್ನು ಮಾಡುತ್ತಾ ಮನ ದೇಹವನ್ನು ವಂಚನೆ ಮಾಡುತ್ತದೆ. ತನಗೆ ತಾನೇ ವಂಚನೆ ಮಾಡಿಕೊಳ್ಳುತ್ತಿದ್ದೇನೆ ಎಂದು ಕಾವಿ ಧರಿಸಿದ ಅರಿವಿನ ವೇಷದಲ್ಲಿದ್ದ ದೇಹಕ್ಕೆ ಅರಿವಾಗದಂತೆ ಮನ ಯಾಮಾರಿಸುತ್ತದೆ. ಇದು ಧ್ಯಾನವಲ್ಲ ; ಧ್ಯಾನದ ಸಮಾಧಿಯಲ್ಲ. ಮತ್ತೊಂದು ದೇಹವನ್ನು ವಂಚನೆ ಮಾಡುವ ಹುನ್ನಾರವೆಂದು ವೇಷ ಧರಿಸಿದ ದೇಹಕ್ಕೆ ಅರಿವಾಗುವುದೇ ಇಲ್ಲ. ವಂಚನೆಗೆ ಒಳಗಾದ ದೇಹಕ್ಕೂ ಅರಿವಾಗುವುದೇ ಇಲ್ಲ.

ಮನವೆಂಬ ಮನೋಕಾಯ ತನಗೆ ತಾನೇ ತಿಳಿದುಕೊಂಡು ತನಗೆ ನಿತ್ಯವೂ ಪಾಠ ಮಾಡುವ ಪರಮಾನಂದದ ಅರಿವಿನ ಮಹಾಕಾಯದಲ್ಲಿ ಸಮಾಧಿಯಾಗಬೇಕು. ಇದೇ ಧ್ಯಾನ ಸಮಾಧಿ. ಮತ್ತೆ ಮನಕ್ಕೆ ಜನ್ಮವಿಲ್ಲ. ಮನವೇ ಘನಮನವಾಗಿ ಬದಲಾವಣೆ ಹೊಂದುತ್ತದೆ. ಸಾಕ್ಷಾತ್

ಕಪಿಲಸಿದ್ದ ಮಲ್ಲಿಕಾರ್ಜುನ ದೇವನೇ ತಾನಾಗುತ್ತದೆ. ಇಲ್ಲದ ಮನೋಕಾಯ ಇಲ್ಲವಾಗಿ ಇದ್ದ ಕಾಯ ಮಾತ್ರ ಪರಮಾನಂದದ ಪರಮ ಸುಖವನ್ನು ನಿತ್ಯವೂ ಅನುಭವಿಸುತ್ತದೆ.

**309**

**ಎರಡೆಂಟು ಗ್ರಾಮದಲ್ಲಿ ಮಡಿದಿಪ್ಪ ಬ್ರಹ್ಮಾಂಡದತಿಶಯದ**
**ಕುಳ ತಾನು ಸಮತೆ ರೂಪುಯೆನ್ನು ನೀ**
**ಸಮತೆಯನು, ಮುನ್ನಾದ ಸಮತೆಯನು ಮನ್ನಣೆಯ ಸಮತೆ**
**ದ್ವಾದಶ ಗ್ರಾಮದ ಸೀಮೆ ಸಾಹಿತ್ಯದಲಿ**
**ಸೋಮಪ್ರಭೆಯೊಂದರಲಿ ತಾಮಸಂವಾದಲ್ಲಿ**
**ತನು ತನ್ನಯ ಗ್ರಾಮ ಸೀಮೆಯನರಿದು**
**ನಿತ್ಯ ಸಾಯುಜ್ಯದಲಿ ಸಮತೆ ಸಾಯುಧನಾದೆನಯ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಾಹಿತ್ಯ ನಿರ್ಮಿಸುವಲ್ಲಿ ತನು ಅಗ್ರಗಣ್ಯ ಪಾತ್ರವಹಿಸುತ್ತದೆ. ಹಾಗೆಯೇ ಕೇಳುವಲ್ಲಿ ನವರಸಗಳನ್ನು ಪಾನ ಮಾಡಿ ಸುಖಪಡವಲ್ಲಿ ಹಿಂದೆ ಬಿದ್ದಿಲ್ಲ. ಆದರೆ ತನು ತನುವಿನ ಸಾಹಿತ್ಯವನ್ನು ಈಂಟುವಲ್ಲಿ ಹಿಂದೆ ಬಿದ್ದಿದೆ. ತನು, ತನುವಿನ ಸೀಮೆಯನ್ನು ಅರಿಯುವಲ್ಲಿ ಹಿಂದೆ ಬಿದ್ದಿದೆ.

ತನು, ಅನ್ಯೋನ್ಯ ಸಂಯೋಗ, ತನುವಿನ ಏಕತೆಯನ್ನು ತನುವೇ ಮರೆಯುವಲ್ಲಿ ತನು ಹಿಂದೆ ಬಿದ್ದಿದೆ. ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನಲ್ಲಿ ಲೀನವಾಗಿ ಆ ಪರಮಾತ್ಮನೇ ತಾನಾಗುವುದರಲ್ಲಿ ಹಿಂದೆ ಬಿದ್ದಿದೆ.

ಅಷ್ಟಮದ ಅಷ್ಟಮಲಗಳ ಭಾಂಡವನ್ನಾಗಿಸಿಕೊಂಡ ತನು ಬ್ರಹ್ಮಾಂಡವೇ ತಾನೆಂಬುದನ್ನು ಸಂಪೂರ್ಣ ಮರೆತು ಹೋಗಿದೆ. ಹಿಂದು ಎನ್ನುವ ರೋಗ, ಮುಸಲ್ಮಾನ ಎನ್ನುವ ರೋಗ, ಕ್ರಿಶ್ಚಿಯನ್ ಎನ್ನುವ ರೋಗ, ಫಾರ್ಸಿ, ಬೌದ್ಧ, ಜೈನ ಎನ್ನುವ ರೋಗ ಹಚ್ಚಿಕೊಂಡು ತನು ಎನ್ನುವುದನ್ನೇ ಮರೆತು ಹೋಗಿದೆ.

ಹೆಣ್ಣು ಗಂಡು ಎನ್ನುವ ರೋಗ ಹಚ್ಚಿಕೊಂಡ ತನು ಗುರು-ಶಿಷ್ಯ ಎನ್ನುವ ರೋಗ ಹಚ್ಚಿಕೊಂಡ ತನು ತಾನು ತನುವೆಂಬುದನ್ನೇ ಮರೆತು ಹೋಗಿದೆ. ಈ ಪ್ಲಾನೆಟ್‌ನಲ್ಲಿ ವಾಸ ಮಾಡುವ ತನುಗಳೆಲ್ಲ ತನುಗಳೇ ಆಗಿವೆ. ನೋಡುವ ಕಣ್ಣು ಒಂದೇ ಆದರೂ ಸಮತೆಯೇ ಮೈವೆತ್ತ ಕಣ್ಣು ಆದರೂ ಅದು ಹೆಣ್ಣಾಗಿ ಗಂಡನ್ನು ನೋಡುವ ಅಸಮತೆಯನ್ನು ಕಣ್ಣಲ್ಲಿ ಸೃಷ್ಟಿಸಿಕೊಂಡಿದೆ. ಕಣ್ಣಲ್ಲಿಯ ಸಮತೆ ಕಣ್ಣಲ್ಲಿಯೇ ಉಳಿದು ಅಸಮತೆಯ ಕುರುಡು ಮಾತ್ರ ಕಣ್ಣಿಗೆ ಬಳಕೆಯಾಗುತ್ತಲಿದೆ. ಇದು ತನುವಿನ ದುರ್ದೈವ. ತನುವನ್ನು ಆವರಿಸಿದ ಮನದ ದುರ್ದೈವ.

ಸಕಲ ಪುಸ್ತಕಗಳನ್ನು ಓದಿ ಅರೆದು ಕುಡಿದರೂ ತನು ತಾನು ತನುವೆಂಬ ಸಮತೆಯನ್ನೇ ಅರಿಯುತ್ತಿಲ್ಲ. ಸಕಲ ತನಗಳು ಕೂಡಾ ತನ್ನಂತೆಯೇ ಇರುವ ತನುಗಳೆಂಬುದನ್ನೂ ಅರಿಯುತ್ತಿಲ್ಲ. ಇದು ತನುವನ್ನು ಆವರಿಸಿದ ಮನದ ದುರ್ದೈವವೇ ಸರಿ.

ಸರಕಾರ ವಿಶ್ವವಿದ್ಯಾಲಯ ಶಿಕ್ಷಣ ತಜ್ಞರಿಗೂ ಗುರುಗಳೆನ್ನಿಸಿಕೊಂಡು ಮಠ ಆಶ್ರಮ ಮಂದಿರಗಳನ್ನು, ಮಸೀದೆ, ಚರ್ಚ್, ಪ್ರಾರ್ಥನಾ ಮಂದಿರಗಳನ್ನು ನಿರ್ಮಿಸಿಕೊಂಡ

ಮಹನೀಯರು ತನುವಿನ ಸಮತೆಯನ್ನು ತನುವಿನ ಶಿಕ್ಷಣವನ್ನು ಸಂಪೂರ್ಣ ಮರೆತು ಹೋಗಿದ್ದಾರೆ.

ಪ್ರಾರ್ಥನೆ, ಜಪ, ತಪ, ಹೋಮ, ಹವನ, ಮಡಿ ಮುಂತಾದ ಸಂಪ್ರದಾಯಗಳನ್ನು ಆಚರಿಸಿದರೂ ಸಮತೆಯ ತನವೆಂದು ಕರೆಯಿಸಿಕೊಳ್ಳಲು ತನುವಿಗೆ ಸಾಧ್ಯವಾಗುತ್ತಿಲ್ಲ. ತನುವಿನ ಅಷ್ಟಮದಗಳನ್ನು ತನುವೇ ಹೊಡೆದು ಹಾಕಿ, ತನುವಿನ ಅಷ್ಟಮಲಗಳನ್ನು ತನುವೇ ಚೆಲ್ಲಿ ತನುವಿನ ಸಮತೆಯನ್ನು ತನುವೇ ಮೆರೆದು, ಸಕಲ ಭ್ರಮೆಗಳನ್ನು ಹೊರಗೆ ಚೆಲ್ಲಿ ತನುವಿನೊಳಗಣ ಬ್ರಹ್ಮ ಪದವಿಯನ್ನು ಅಲಂಕರಿಸಿ ಬ್ರಹ್ಮರಸವನ್ನು ಪಾನಮಾಡಬೇಕಿದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿ ಸಮತೆಯನ್ನು ಮೆರೆಯಬೇಕಿದೆ.

**310**

**ಎಲವೆಲವೋ ನಲ್ಲ,**
**ನಿನ್ನ ಕೂಡದ ಮುನ್ನ ಕಾಣೆ.**
**ಕೂಡಿದ ಬಳಿಕ ಮತ್ತೆ ಕಾಣೆನಯ್ಯಾ.**
**ನಿನ್ನ ಕೂಡಿದ ಸುಖದಿಂದ ಆನೇನೆಂದರಿಯೆನಯ್ಯಾ.**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಇಡೀ ಸಾರಸ್ವತ ಲೋಕ ಜ್ಞಾನವೆಂದರೆ ಪುಸ್ತಕವೆಂದು ತಿಳಿದುಕೊಂಡಿದೆ. ಪಂಡಿತರೆಂದು ತಿಳಿದುಕೊಂಡಿದೆ. ಶಾಸ್ತ್ರಿಗಳೆಂದು ತಿಳಿದುಕೊಂಡಿದೆ. ಶಾಲಾ ಕಾಲೇಜುಗಳು ವಿಶ್ವವಿದ್ಯಾಲಯಗಳೆಂದು ತಿಳಿದುಕೊಂಡಿದೆ. ಓದಿ ಕೆಟ್ಟ ಕೂಚು ಭಟ್ಟ ಎನ್ನುವಂತೆ ಸಾರಸ್ವತ ಲೋಕದ ಪರಿಸ್ಥಿತಿಯಾಗಿದೆ.

ಜ್ಞಾನ, ಅದು ತನುವಿನಲ್ಲಿಯೇ ಸಂಗಮವಾಗಿದೆ. ತನುವನ್ನು ಆವರಿಸಿದ ಮನ ಜ್ಞಾನವನ್ನು ಕೂಡಬೇಕು. ಆ ಜ್ಞಾನವೇ ತಾನಾಗಬೇಕು.

ಜ್ಞಾನವೆಂದರೆ ಬರೀ ಅರಿವು ಅಲ್ಲ. ತನುವಿನಲ್ಲಿ ಸಂಗಮವಾದ ಅವ್ಯಕ್ತ ವ್ಯಕ್ತಿ; ಶಕ್ತಿ. ಆ ಶಕ್ತಿಯನ್ನು ಪುರಾತನರು ದೇವರೆಂದು ಕರೆದರು. ಆ ಶಕ್ತಿಯನ್ನೇ ಗಂಡನೆಂದು, ನಲ್ಲನೆಂದು ಕರೆದರು. ಆತನಿಗೆ ಶರಣು ಹೋಗಿ ಶರಣರಾದರು. ಶರಣ ಸತಿಯಾಗಿ ಲಿಂಗ ಪತಿಯನ್ನು ಕೂಡಿದರು. ಜ್ಞಾನವೆಂಬ ಪತಿಯನ್ನು ಲಿಂಗವೆಂದು ಕರೆದರು. ಮನವೆಂಬ ಸತಿಯನ್ನು ಶರಣ ಎಂದು ಕರೆದರು. ಅರಿವಿನ ನಲ್ಲನಿಗೆ ಸಂಪೂರ್ಣ ಶರಣು ಹೋಗಿ ಶರಣರಾದರು. ಅರಿವಿನ ನಲ್ಲನಿಗೆ ಸಂಪೂರ್ಣ ದಾಸು ಹೋಗಿ ದಾಸರಾದರು.

ಸಕಲರೂ ಅರಿವಿನ ನಲ್ಲನಿಗೆ ದಾಸು ಹೋಗಲು ದಾಸರು ಗೆಜ್ಜೆ ಕಟ್ಟಿಕೊಂಡು ಸಂತೆಯಲ್ಲಿ ಕುಣಿದರು. ಶರಣರು, ದಾಸರು, ಬುದ್ಧ, ಮಹಾವೀರ, ಕ್ರಿಸ್ತ, ಕ್ರಿಷ್ಣ ಇವರಾರೂ ದೇವರಲ್ಲ. ಅರಿವಿನ ದೇವರನ್ನು ಗಂಡನನ್ನಾಗಿಸಿಕೊಂಡವರು. ದೇವರಿಗೆ ಪ್ರೇಯಸಿಯಾದವರು. ಸತಿಯಾದವರು. ಸತಿ ಪತಿಯನ್ನು ಕೂಡಿ ಒಂದಾದವರು.

ಬುದ್ಧ, ಮಹಾವೀರ ದೇವರೇ ಇಲ್ಲವೆಂದು ಘೋಷಿಸಿದರು. ನಿಜವಾಗಿಯೂ ದೇವರು ಇಲ್ಲ. ಲೋಕದಿಂದ ಪೂಜೆಗೊಳ್ಳುವ ದೇವರು ದೇವರು ಅಲ್ಲ. ಲೋಕ ದೇವರನ್ನು ನಿರ್ಮಾಣ ಮಾಡಿ, ಆ ದೇವರನ್ನೇ ದೇವರೆಂದು ಪೂಜಿಸುತ್ತಲಿದೆ. ಕಲ್ಲು ಕಟ್ಟಿಗೆ ಮಣ್ಣು ಲೋಹದಿಂದ

ಮಾಡಿದ ದೇವರನ್ನು ದೇವರೆಂದು ಕರೆದರೆ ಆತ ತನಗೆ ಜ್ಞಾನದ ಪಾಠ ಮಾಡಲು ಸಾಧ್ಯವೆ? ಇದೊಂದು ಮನಸ್ಸಿನ ಭ್ರಮೆ. ಮನಸ್ಸು ತನುವನ್ನು ಯಾಮಾರಿಸಿ, ದೇವರನ್ನು ತನುವಿನಿಂದ ಕೆತ್ತಿ, ಕೆತ್ತಲ್ಪಟ್ಟ ಬೊಂಬೆಯನ್ನೇ ದೇವರೆಂದು ಆರಾಧಿಸಿ ಆರಾಧಿಸಿ ಅಂತ್ಯವನ್ನು ಕಾಣುತ್ತದೆ.

ದೇವರು ತನುವಿಗೆ ಒಲಿಯಲಿಲ್ಲ. ತನು ಮಾಡಿದ ದೇವರು ತನುವಿನೊಂದಿಗೆ ಮಾತಾಡಿದ ಎಂದು ಎದೆ ತಟ್ಟಿ ಶರಣರಂತೆ ದಾಸರಂತೆ ಹೇಳಿದ ಒಂದು ತನುವು ಕೂಡಾ ಈ ಲೋಕದಲ್ಲಿಲ್ಲ. ಇದಕ್ಕೆ ರೋಸಿ ಹೋದ ಬುದ್ಧ ಮಹಾವೀರರು ದೇವರೇ ಇಲ್ಲವೆಂದು ಘೋಷಣೆ ಮಾಡಿದರು.

ಅಂಗದಲ್ಲಿ ಸಂಗಮವಾದ ಅರಿವನ್ನು ಬುದ್ಧ ಎಂದು ಸಿದ್ಧಾರ್ಥ ಕರೆದ. ಮಹಾವೀರ ಎಂದು ವರ್ಧಮಾನ ಕರೆದ. ಪತಿ, ನಲ್ಲ, ಲಿಂಗ ಎಂದು ಶರಣರು ಕರೆದರು. ದಾಸರು ಕೂಡಾ ಗಂಡ ಎಂದು ಕರೆದು ಆ ಅರಿವಿನ ಗಂಡನಿಗೆ ದಾಸಾನುದಾಸರಾದರು.

ಅನುಯಾಯಿ ತನುಗಳು ಬೌದ್ಧರಾದರು. ಬುದ್ಧನನ್ನೇ ದೇವರೆಂದು ಆರಾಧಿಸಿದರು. ಜಿನರಾಗದೆ ಜೈನರಾದರು. ತೀರ್ಥಂಕರರನ್ನು ಆರಾಧಿಸಿದರು. ಅರಿವಿನ ನಲ್ಲನಿಗೆ ಶರಣು ಹೋಗಿ ಸತಿಯಾಗದೆ ಲಿಂಗವನ್ನು ಅಂಗದ ಮೇಲೆ ಧರಿಸಿ ಲಿಂಗಾಯತರಾದರು. ಕ್ರಿಷ್ಣನಾಗದೆ, ಕ್ರಿಸ್ತನಾಗದೆ ಜ್ಞಾನ ಹೇಳಿದ ಅವರನ್ನೇ ದೇವರನ್ನಾಗಿಸಿಕೊಂಡು ಹಿಂದುವಾದರು, ಕ್ರಿಶ್ಚಿಯನ್ ಆದರು.

ಇದು ತನುವಿನ ತಪ್ಪಲ್ಲ. ತನುವನ್ನು ಆವರಿಸಿದ ಮನದ ತಪ್ಪು. ತನುವನ್ನು ಆವರಿಸಿ, ತನುವನ್ನೇ ತನ್ನ ಅಜ್ಞಾನದ ಸಾಮ್ರಾಜ್ಯವನ್ನಾಗಿ ಮಾಡಿಕೊಂಡ ಮನದ ತಪ್ಪು.

ಜ್ಞಾನಿಗಳ ಮಾತು ಸಾರಸ್ವತ ಲೋಕಕ್ಕೆ ಅರ್ಥವಾಗುವುದಿಲ್ಲ. ಹೀಗಾಗಿ ತಮಗೆ ತಿಳಿದಂತೆ ಅಕ್ಷರಗಳ ಮೂಲಕ ಅವರನ್ನು ಚಿತ್ರಿಸಿದ್ದಾರೆ. ಸಕಲ ತನುಗಳಲ್ಲಿ ಜ್ಞಾನ ಸಂಗಮವಾಗಿದೆ; ಆ ಜ್ಞಾನವನ್ನು ತನುವನ್ನು ಆವರಿಸಿದ ಮನದಿಂದಲೇ ಪಡೆಯಬೇಕು ಎಂದು ಹೇಳಿದ ಜ್ಞಾನಿಗಳನ್ನು ಸಕಲ ತನುಗಳು ದೇವರೆಂದು ಆರಾಧಿಸಿದರೆ ಯಾರೇನು ಮಾಡಿಯಾರು? ಇದು ಜ್ಞಾನವಿದ್ದ ತನುವಿನ ಮನದ ಅವಸ್ಥೆ. ಮನ ತನುವಿನ ಜ್ಞಾನಕ್ಕೆ ನಲ್ಲೆಯಾಗಲು ಒಲ್ಲದು.

ಸಿದ್ಧರಾಮ ಶಿವಯೋಗಿಗಳು ನಲ್ಲೆಯಾಗಿ ಅರಿವಿನ ನಲ್ಲನನ್ನು ಕೂಡಿ ಪರಮಸುಖದಿಂದ ಹಾಡಿದರು. ಓ ನಲ್ಲನೇ, ನಿನ್ನ ಕೂಡದ ಮುನ್ನ ಜ್ಞಾನವೆಂದರೇನೆಂದು ನನಗೆ ಗೊತ್ತಿರಲಿಲ್ಲ. ನಿನ್ನ ಕೂಡಿದ ಮೇಲೆ ಅಜ್ಞಾನ ಈ ತನುವಿನಲ್ಲಿ ಮತ್ತೆ ಸುಳಿಯಲೇ ಇಲ್ಲ. ನಿನ್ನ ಕೂಡಿದ ಸುಖದಿಂದ ನಾನು ಏನೆಂದರಿಯದೆ ಬಯಲಲ್ಲಿ ಬಯಲಾಗಿ ಬಯಲಾದೆನಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನಾದೆ ತಂದೆ ಎಂದು ಹಾಡಿದ್ದಾರೆ.

''ದೇವರು ಯಾರೆಂದು ತಿಳಿಯದೆ ದೇವಾಲಯಗಳನ್ನು ಕಟ್ಟಿಸಿದೆ. ಅರಿವಿನ ದೇವರಿದ್ದ ದೇಹವೇ ದೇವಾಲಯವೆಂದು ತಿಳಿದ ಮೇಲೆ, ಆ ದೇವರನ್ನೇ ನಲ್ಲನನ್ನಾಗಿಸಿಕೊಂಡು ನಾನು ನಲ್ಲೆಯಾಗಿ ಆ ನಲ್ಲನನ್ನು ಕೂಡಿದೆ. ಸಕಲ ದೇಹಗಳೂ ನಲ್ಲ ನಲ್ಲೆ ವಾಸ ಮಾಡಿದ ದೇಹಗಳಾಗಿ ಕಂಡವು. ದೇವರಿದ್ದ ದೇವಾಲಯಗಳಾಗಿ ನನಗೆ ಕಂಡವು. ದೇವರಿದ್ದ ದೇಹಗಳಿಗಾಗಿ ದೇವಾಲಯಗಳನ್ನು ಕಟ್ಟುವುದು ಪಾಪದ ಕೆಲಸವೆಂದು ತಿಳಿಯಿತು. ಹೇಳಿದಂತೆ ಕೇಳುವ ಸೇವಕರೆಲ್ಲ ದೇವರಾಗಿ ಕಂಡರು. ನನ್ನಿಂದ ಅಪಚಾರವಾಯಿತೆಂದು ಸಕಲರಿಗೂ ಶರಣು ಹೋದೆ. ಈ ಅರಿವಿನ ಸುಖ ನನಗೆ ಹಿಂದೆ ಗೊತ್ತಾಗಲಿಲ್ಲವಲ್ಲ. ಈ ಅರಿವಿನ ನಲ್ಲನನ್ನು ಕೂಡಿದ ಬಳಿಕ ಹಿಂದಿನ ಅಜ್ಞಾನ ನನ್ನ ಬಳಿ ಸುಳಿಯಲಿಲ್ಲವಲ್ಲ! ಏನೀ ನಿನ್ನ ಕೂಡಿದ ಸುಖ. ನಿನ್ನ ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸಿ ಪರಮ ಸುಖಿಯಾದೆ ಮಲ್ಲಯ್ಯನೆ!''

311

**ಎಲ್ಲರ ಎಲ್ಲರಂತಲ್ಲ, ನಿನ್ನ ಪರಿ ಹೊಸತು.**
**ಆಕೆ ಅನಾಹತ ಅಪರಸ್ಥಾನಕ್ಕೆ ಬಂದಡೆ**
**ನೀನು ಪೂರ್ವಸ್ಥಾನಕ್ಕೆ ಬಪ್ಪಿ,**
**ಆಕೆ ಪೂರ್ವಸ್ಥಾನಕ್ಕೆ ಬಂದಡೆ ನೀನು ದಕ್ಷಿಣ ಸ್ಥಾನಕ್ಕೆ ಬಪ್ಪಿ.**
**ಆಕೆ ದಕ್ಷಿಣ ಸ್ಥಾನಕ್ಕೆ ಬಂದಡೆ ನೀನು ಪಂಚಮಸ್ಥಾನಕ್ಕೆ ಬಪ್ಪಿ.**
**ಆಕೆ ಅನಾಹತ ಅಪರಸ್ಥಾನವನೆಯ್ದಲಾರದೆ ಇದ್ದಡೆ**
**ಕೋಹಂ ನಿಚ್ಚಣಿಕೆಯನ್ನಿಕ್ಕಿಟ್ಟು,**
**ಸಂಗಮ ಸ್ಥಾನಕ್ಕೆ ಸಂಯೋಗ ಪ್ರಾಪ್ತಿಯನು ಮಾಡಿಸಿದೆ.**
**ನಿನ್ನ ಸಂಯೋಗ ಸುಖದಿಂದ ಸಂಪನ್ನೆಯಾಗಿ**
**ಇಹಪರವೆಂಬುದನು ಏಕವ ಮಾಡಿದಳು.**
**ಅವ್ವೆಯ ಕರುಣದಿಂದ ಎನಗೆ ಅರಿದಿಪ್ಪ ಅಧಿಕ್ಯವಿಲ್ಲ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಗುರುವಿನ ಕರುಣದಿಂದ**
**ಸದ್ಭಕ್ತಿಯನರಿದು ಸಕಲ ಯೋಗಕ್ಕೆ ಮೂಲನಾದೆನು.**

ಬೆಳಕು ಕತ್ತಲನು ಕಾಡಿಸುವಂತೆ, ಕತ್ತಲು ಬೆಳಕಿನಡೆಗೆ ನಡೆಯುವ ನಡಿಗೆ ಸಾಗದಂತೆ. ಇವೆರಡೂ ಕೆಲಸಗಳು ಭೂಮಿಯ ಮೇಲೆ ಹೇಗೆ ನಡೆದಿದೆಯೋ ದೇಹವೆಂಬ ಭೂಮಿಯ ಗತಿಯೂ ಹಾಗೆಯೇ ಆಗಿದೆ.

ಸೂರ್ಯನ ಬೆಳಕನ್ನು ಸಂಪೂರ್ಣವಾಗಿ ಅನುಭವಿಸುವ ಯೋಗ ಭೂಮಿಗೆ ಹೇಗೆ ಇಲ್ಲವೋ ಹಾಗೆಯೇ ತನುವೆಂಬ ಭೂಮಿಗೆ ಕೂಡಾ ಸಂಪೂರ್ಣ ಅರಿವಿನ ಸಹಜ ಶಕ್ತಿಯನ್ನು ಅನುಭವಿಸುವ ಯೋಗ ಇಲ್ಲದಂತಾಗಿದೆ.

ಭೂಮಿಯನ್ನು ಬೆಳಗುವ ಸೂರ್ಯನ ಬೆಳಕೇ ಅರ್ಧ ಬೆಳಗಿ ಇನ್ನರ್ಧ ಕತ್ತಲನ್ನು ಮಾಡಿದೆ. ಹಾಗೆಯೇ ತನುವಿನಲ್ಲಿಯೇ ಸಂಗಮವಾದ ಅರಿವು ಎನ್ನುವ ಬೆಳಕಿನಿಂದಲೇ ಬೆಳಕು ಮತ್ತು ಕತ್ತಲೆ ತನುವಿನಲ್ಲಿ ಉಂಟಾಗಿದೆ. ಸಿದ್ಧರಾಮ ಶಿವಯೋಗಿ, ಬೆಳಕಿನ ಕತ್ತಲ ಬೆಳಗಿನ ಆಟವನ್ನು ಅರಿತ. ಅದನ್ನು ಸಾಕ್ಷಿಯಾಗಿ ನೋಡಿ ಅದರೊಂದಿಗೆ ಮಾತನಾಡಿದ ಪ್ರಸಂಗವನ್ನು ಓದುಗರಿಗೆ ವಚನದ ಮೂಲಕ ಹಂಚಿಕೊಂಡಿದ್ದಾರೆ.

ಎಲ್ಲರ ಎಲ್ಲರಂತಲ್ಲ, ನಿನ್ನ ಪರಿ ಹೊಸತು. ಮನವೆಂಬ ಕತ್ತಲು ಬೆಳಕನ್ನು ಹುಡುಕಿಕೊಂಡು ಅನಾಹತ ಅಪರಸ್ಥಾನಕ್ಕೆ ಹೋದಡೆ ಬೆಳಕು ಪೂರ್ವಸ್ಥಾನದಲ್ಲಿ ಪ್ರಕಟವಾಗುವುದು. ಮನವೆಂಬ ಕತ್ತಲು ಪೂರ್ವಸ್ಥಾನಕ್ಕೆ ಹೋದರೆ, ಬೆಳಕು ದಕ್ಷಿಣ ಸ್ಥಾನಕ್ಕೆ ಬರುವುದು. ಮನವೆಂಬ ಕತ್ತಲು ದಕ್ಷಿಣ ಸ್ಥಾನಕ್ಕೆ ಹೋದಡೆ, ಬೆಳಕು ಪಂಚಮ ಸ್ಥಾನಕ್ಕೆ ಬರುವುದು. ಮನವೆಂಬ ಕತ್ತಲು ಅನಾಹತ ಅಪರ ಸ್ಥಾನವನು ಹತ್ತಲಾಗದಿದ್ದರೆ ಬೆಳಕೆಂಬ ನಿಚ್ಚಣಿಕೆಯನು ಇಟ್ಟು ಸಂಗಮ ಸ್ಥಾನದಲ್ಲಿ ಸಂಯೋಗ ಪ್ರಾಪ್ತಿಯನು ಮಾಡಿಸಿದೆ.

ಪರಮಾತ್ಮನೆ, ನಿನ್ನ ಸಂಯೋಗ ಸುಖದಿಂದ ಕತ್ತಲ ಕನ್ಯೆ ಸಂಪನ್ನೆಯಾದಳು. ಇಹಪರವೆಂಬುದನ್ನು ಏಕ ಮಾಡಿದಳು. ಅವ್ವೆಯ ಕರುಣೆ ಅಪಾರ. ನಾನು ಏನೂ

ಅರಿಯದಂತಾದೆ. ಮನ ಘನದಲ್ಲಿ ಬೆರೆತು ಘನವೇ ತಾನಾಯಿತು.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಗುರುವಿನ ಕರುಣದಿಂದ ಸದ್ಭಕ್ತಿಯನು ಅರಿದೆ. ಸಕಲಯೋಗಕ್ಕೆ ಮೂಲನಾದೆ. ಕತ್ತಲಿಗೆ ಜನ್ಮ ನೀಡಿದ್ದು ಬೆಳಕು. ಕತ್ತಲ ಮೂಲ ಬೆಳಕು. ಬೆಳಕೆನ್ನುವುದನ್ನು ಮರೆತುದಕ್ಕಾಗಿ ಕತ್ತಲಾಗಿತ್ತು. ಪುನಃ ಬೆಳಕಿನಲ್ಲಿ ಲೀನವಾದ ಕತ್ತಲು ಬೆಳಕೇ ಆಯಿತು. ಕತ್ತಲೆನ್ನುವುದನ್ನು ಮರೆತು ಬೆಳಕಾಯಿತ್ತು.

**312**

**ಎಲ್ಲ ಮರಂಗಳೊಳು ಅಯ್ಯಾ ಸೊಲ್ಲಿಡಬಲ್ಲಡೆ**
**ಅಯ್ಯಾ ಬಲ್ಲತನವೆಂಬುದೇನೆಂದರಿದು ಹೇಳು.**
**ಸಲ್ಲಲಿತವೆಂಬ ಸತ್ಯದ ನೆಲೆಯನರಿದಡೆ**
**ಬಲ್ಲಹ ಇಹಪರಕೆ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸೊಲ್ಲು ಇಲ್ಲದ ಮರಗಳೇ ಇಲ್ಲ. ಸಕಲ ಮರಗಳಲ್ಲಿಯೂ ಕೆಚ್ಚು ಭರಿತವಾಗಿದೆ. ಹೇಗೆ ಮರಗಳಲ್ಲಿ ಕೆಚ್ಚು ಭರಿತವಾಗಿದೆಯೋ ಹಾಗೆಯೇ ಜಗದ ಸಕಲ ತನುಗಳಲ್ಲಿಯೂ ಅರಿವು ಭರಿತವಾಗಿದೆ. ಅರಿವು ಇಲ್ಲದ ತನುವೇ ಇಲ್ಲ.

ಮರ ಕೆಚ್ಚನ್ನು ಹೊರಗಿನಿಂದ ಸಂಗ್ರಹಿಸಿಕೊಳ್ಳುವುದಿಲ್ಲ. ಅದು ತಾನು ನೀರುಂಡಂತೆಲ್ಲ ಕೆಚ್ಚಿನ ಪ್ರಮಾಣ ಅಧಿಕವಾಗುತ್ತದೆ. ರೆಂಬೆ ಕೊಂಬೆಗಳು ಚಿಗುರು ಎಲೆಗಳಿಂದ ಮೊಗ್ಗು ಹೂ ಕಾಯಿ ಹಣ್ಣುಗಳಿಂದ ನಳ ನಳಿಸುತ್ತದೆ. ಬೀಜದಲ್ಲಿ ಕೆಚ್ಚು ತನ್ನ ಸರ್ವಸ್ವವನ್ನು ತುಂಬಿ ಮರದಿಂದ ತೊಟ್ಟು ಬಿಟ್ಟು ಬೀಳುವಂತೆ ಮಾಡುತ್ತದೆ. ಸಿಪ್ಪೆ ತಿಂದ ಮನುಷ್ಯ ಬೀಜವನ್ನು ಎಲ್ಲಿ ಬೀಸಾಡಿದರೂ ಪುನಃ ಮರವಾಗಿ ಹೆಮ್ಮರವಾಗಿ ಬೆಳೆದು ನಿಲ್ಲುತ್ತದೆ.

ಹಾಗೆಯೇ ಅರಿವು ಇಲ್ಲದ ತನುಗಳು ಇಲ್ಲ. ಸಕಲ ತನುಗಳಲ್ಲಿ ಅರಿವು ಭರಿತವಾಗಿದೆ. ಆದರೂ ತನುವಿನಿಂದ ಹೊರಬಂದ ಅರಿವನ್ನು ತನುವೇ ಸಂಗ್ರಹ ಮಾಡಿಕೊಂಡು ಬೆಳಗಬೇಕೆಂದು ನಿರ್ಧರಿಸಿದೆ.

ಬುದ್ಧ ಬಸವಾದಿ ಶರಣರು, ದಾಸವರೇಣ್ಯರು, ಕ್ರಿಸ್ತ, ಕ್ರಿಷ್ಣ, ಮಹಾವೀರ ಮುಂತಾದ ಅರುಹಿರಿಯರು ಸಲ್ಲಲಿತವೆಂಬ ಯೋಗ್ಯವಾದ ಮಾರ್ಗವನ್ನು ಸೂತ್ರ ರೂಪದಲ್ಲಿ ರಚಿಸಿದರು. ಈ ಸೂತ್ರಗಳು ತನುವಿಗೆ ಏಣಿಯಾಗಲೆಂದು. ಆದರೆ ತನುವಿನ ಭಂಡಾರ ತನುವೇ ಮರೆತು ಅರಿವಿನ ಭಂಡಾರವೆಂದು ಅರುಹಿರಿಯರು ರಚಿಸಿದ ಸೂತ್ರಗಳನ್ನೇ ಜ್ಞಾನವೆಂದು ತನುವಿನಲ್ಲಿ ಸಂಗ್ರಹಿಸಿಕೊಂಡಿದ್ದಾರೆ.

ಹಿಂದು ಮುಸಲ್ಮಾನ ಕ್ರೈಸ್ತ ಲಿಂಗಾಯತ ಫಾರ್ಸಿ ಆದರೆ ತನು ಜ್ಞಾನಿ ಎನ್ನಿಸಿಕೊಳ್ಳುವುದಿಲ್ಲ. ತನುವಿನಲ್ಲಿಯೇ ಸಂಗಮವಾದ ಜ್ಞಾನವನ್ನು ತನುವೇ ಹೇಗೆ ಬಳಸಿಕೊಳ್ಳಬೇಕೆಂದು ತನುವಿನಲ್ಲಿ ಸಂಗಮವಾದ 'ಅರಿವು' ಗುರುದೇವನಾಗಿ ತನುವನ್ನು ಆವರಿಸಿದ ಮನಕ್ಕೆ ಪಾಠ ಮಾಡುತ್ತದೆ. ಗುರುದೇವನ ಪಾಠವನ್ನು ಮನ ಕೇಳುತ್ತ ತನುವನ್ನು ಹಾಗೆ ನಡೆಸಿಕೊಂಡು ಹೋದರೆ ಸಾಕು. ತನುವಿನ ಅರಿವು ತನುವಿಗೆ ಬಳಕೆಯಾಗುತ್ತ ಹೋಗುತ್ತದೆ. ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಮಾತು ಕೇಳುತ್ತ ಕೇಳುತ್ತ ಕೇಳಿದ ಮನವು ಮರದ ಕೆಚ್ಚಿನಂತೆ ಘನಮನವಾಗುತ್ತದೆ.

ಮರದ ಕೆಚ್ಚು ಮರಕ್ಕೆ ಬಳಕೆಯಾಗಿ ಮರದಲ್ಲಿ ಚಿಗುರೊಡೆದು ಮೊಗ್ಗೆಯಾಗಿ ಹೂ ಅರಳುತ್ತದೆ. ಹೂ ಬಿಡದ ಮರ, ಹೂಬಿಟ್ಟ ಮರದ ಹೂಗಳನ್ನು ಕಿತ್ತು ತನ್ನ ರೆಂಬೆಕೊಂಬೆಗಳಿಗೆ ಕಟ್ಟಿ ಕೊಳ್ಳುವುದಿಲ್ಲ. ಇದು ಮರದ ಕೆಚ್ಚು ಮರವೇ ಬಳಸಿಕೊಂಡ ಅರಿವಿನ ಫಲ.

ಅಂತೆಯೇ ತನುವಿನಲ್ಲಿ ಅರಿವಿದ್ದು ತನುವೇ ಬಳಸಿಕೊಳ್ಳದೆ ವೇದ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್ ತ್ರಿಪಿಟಕ ಗ್ರಂಥಸಾಹೇಬ ವಚನ ಕೀರ್ತನಗಳನ್ನು ಹಾಡುತ್ತಾ ಕಾಲ ಕಳೆದರೆ ತನುವಿನ ಅರಿವು ತನುವಿನಲ್ಲಿ ಉಳಿದಂತೆ ಆಗಲಿಲ್ಲವೆ?

ತನುವಿನ ಸಲ್ಲಲಿತ ಸನ್ಮಾರ್ಗವನ್ನು ಅನುವಿನಿಂದ ಪಡೆದು ಅರುಹಿರಿಯರು ಅರಿವಿನ ಮಹಾಮಹಿಮರಾದರು. ಸಲ್ಲಲಿತ ಸತ್ಯದ ಸನ್ಮಾರ್ಗವನ್ನು ತನು ಮನದ ಮೂಲಕ ಹೇಗೆ ಪಡೆಯಬಹುದೆಂದು ಸೂತ್ರ ರಚಿಸಿದರು.

ತನುವಿನ ಅರಿವಿಗೆ ದಾಸನಾಗದೆ ಕ್ರಿಸ್ತ, ಕ್ರಿಷ್ಣ, ಬುದ್ಧ, ಮಹಾವೀರ, ಬಸವಾದಿ ಶರಣರು, ದಾಸರು ಬರೆದ ಗ್ರಂಥಗಳಿಗೆ ದಾಸನಾಗುವುದೆಂದರೇನು? ಅವರ ತನುಗಳಿಗೆ ದಾಸನಾಗುವುದೆಂದರೇನು? ಹಾಗೆ ದಾಸನಾದರೆ ತನುವಿನಲ್ಲಿ ಸಂಗಮವಾದ ಸಲ್ಲಲಿತ ಸತ್ಯದ ಸನ್ಮಾರ್ಗ ಹಾಳು ಬೀಳುವುದಿಲ್ಲವೆ?

ಸಲ್ಲಲಿತವೆಂಬ ಸತ್ಯದ ನೆಲೆಯನು ಅರಿತವನೆ ಜಾಣ. ಕ್ರಿಸ್ತ, ಕ್ರಿಷ್ಣ, ಬುದ್ಧ, ಮಹಾವೀರ, ಬಸವಾದಿ ಶರಣರು, ದಾಸವರೇಣ್ಯರು, ಅರಿವೆಂಬ ಗುರುದೇವನನ್ನು, ಸಲ್ಲಲಿತವೆಂಬ ಸತ್ಯದ ಮಾರ್ಗವನ್ನು ಅದರ ನೆಲೆಯನ್ನು ಅದರ ಇರುವಿಕೆಯನ್ನು ಅಂಗದಲ್ಲಿಯೇ ಅರಿತರು. ಅಂಗವನ್ನು ಆವರಿಸಿದ ಮನದಿಂದಲೇ ಅರಿತರು. ಆ ಅರಿವೆಂಬ ಗುರುದೇವನಿಗೆ ಮನ ಶರಣು ಹೋಯಿತು. ಸಕಲ ಭ್ರಮೆಗಳೂ ಕಳಚಿ ಬಿದ್ದವು. ಸರ್ವಾಂಗವೂ ಅರಿವಿನ ಬ್ರಹ್ಮಕಮಲವಾಗಿ ಅರಳಿತು. ಇದು ಸಲ್ಲಲಿತವೆಂಬ ಸತ್ಯದ ನೆಲೆಯನ್ನು ಅರಿತ ಫಲ. ಇಹಕ್ಕೂ ಪರಕ್ಕೂ ಗುರುವಾದ ಫಲ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ ಫಲ. ತನಗೆ ತಾನೇ ಗುರುವಾದ ಫಲ. ತನಗೆ ತಾನೇ ತನ್ನ ಗುರುವಿಗೆ ಶಿಷ್ಯನಾದ ಅರಿವಿನ ಫಲ.

**313**

**ಎಲ್ಲರ ನೆನಹಿನ ಆಯುಷ್ಯದ ಪುಂಜವೆ,**
**ಅವಧಾರು ಅವಧಾರು;**
**ಅಯ್ಯಾ ಎನ್ನ ನೆನಹಿನ ಮಂಗಳನೆ.**
**ಅವಧಾರು ಅವಧಾರು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನೆನಹು ಆಯುಷ್ಯದ ವರದಾನ. ನೆನಪು ತನುವಿನ ಧರ್ಮ. ಆಯುಷ್ಯದ ಕಿರೀಟ. ನೆನಪುಗಳಿಲ್ಲದ ತನುಗಳೇ ಇಲ್ಲ. ಬಾಲ್ಯಾವಸ್ಥೆಯಿಂದ ತನು ಇರುವವರೆಗೆ ತನುವಿಗೆ ನೆನಪಿದೆಯೆಂದು ಅಲ್ಲ. ಅದರಾಚೆಗೂ ನೆನಪಿದೆ. ಎಷ್ಟೋ ತಲೆಮಾರುಗಳವರೆಗೂ ನೆನಪಿದೆ. ನೆನಪು ತನುವಿಗೆ ಚರ್ಮವಾಗಿ ಹೆಣೆದುಕೊಂಡಿದೆ. ಕಣ್ಣು ಕಿವಿ ಮೂಗು ನಾಲಿಗೆ ಹಲ್ಲು ರೋಮವಾಗಿ ಹೆಣೆದುಕೊಂಡಿದೆ.

ತಾತ ಅಜ್ಜಿ ಮುತ್ತಾತರ ಮೂಗು ಮುಖದ ತನುವಿನ ಮೇಲೆ ಬಂದು ಕುಳಿತು ಅವರ

ನೆನಪು ಮರುಕಳಿಸುವಂತೆ ಮಾಡುತ್ತದೆ. ಉಂಗುರು ಕೂದಲು, ಗೊಗ್ಗೆ ಹಲ್ಲು, ಬಿಳಿ ಮತ್ತು ಕೆಂಪು ಕಪ್ಪು ಬಣ್ಣ ಹೊಂದಿದ ಚರ್ಮ ತಂದೆ ತಾಯಿಗಳಿಗೆ ಇವು ಯಾವವೂ ಇಲ್ಲದಿದ್ದರೂ ಅವರೇ ಹಿಂದಿನವರನ್ನು ನೆನಪು ಮಾಡಿಕೊಂಡು ಅವರಂತೆ ನೀನಿರುವಿ ಎನ್ನುವ ಮಾತು ಬಾಯಿಂದ ಬಾಯಿಗೆ ತೇಲಿ ಬರುತ್ತದೆ.

ತನುವಿನ ನೆನಪು ಜನ್ಮ ಜನ್ಮಗಳ ಆಚೆಗೂ ಚಾಚುತ್ತದೆ. ಪುನರ್ಜನ್ಮದ ನೆನಪು ತನುವಿಗೆ ಇರಲಿಕ್ಕಿಲ್ಲ. ಆದರೆ ತನುವಿನ ಆಕಾರ ರೂಪ ಸಂಬಂಧಿಗಳ ಹಿಂದಿನ ತನುವಿನ ಒಂದಂಶವಾದರೂ ತನು ಉಳಿಸಿಕೊಂಡು ಮುಂದುವರೆಯುತ್ತದೆ. ಇದೊಂದೇ ಅಲ್ಲ. ತನು ಬಾಲ್ಯದಲ್ಲಿ ಸುಳುಹಿಲ್ಲದಿದ್ದಾಗ ತಾಯಿಯ ಸ್ಪರ್ಶ ನೆನಪಿನಲ್ಲಿಟ್ಟುಕೊಳ್ಳುತ್ತದೆ. ತಾಯಿಯ ವಾಸನೆ ನೆನಪಿನಲ್ಲಿಟ್ಟುಕೊಂಡು ಅಳಲು ಶುರು ಮಾಡುತ್ತದೆ.

ಸ್ಪರ್ಶ ವಾಸನೆ ರುಚಿಯ ನೆನಪು ಕಿವಿಯಲ್ಲಿ ಕೇಳಿದ ಶಬ್ದದ ನೆನಪು ಕಣ್ಣಿನಲ್ಲಿ ದೃಶ್ಯದ ನೆನಪು ತನುವು ಇರುವವರೆಗೂ ಉಳಿಯುತ್ತದೆ. ತನುವು ನುಡಿದ ನುಡಿಯ ನೆನಪು ಕೇಳಿದ ಶಬ್ದದ ನೆನಪು ಕೂಡಾ ತನುವಿನಲ್ಲಿ ತನು ಇರುವವರೆಗೂ ಇರುತ್ತದೆ. ಹೀಗಾಗಿ ತನು ನೆನಪಿನ ಪುಂಜ.

ತನು ಸುಖದಿಂದ ಹಿಗ್ಗುವುದು, ದುಃಖದಿಂದ ಕುಗ್ಗುವುದು ಕೂಡಾ ಅದರ ನೆನಪಿನಿಂದಾಗಿ. ತನುವಿನ ನೆನಪು ತನುವಿಗೆ ಸುಖ ಉಂಟು ಮಾಡುತ್ತದೆ ಹಾಗೆಯೇ ದುಃಖವನ್ನು ಉಂಟು ಮಾಡುತ್ತದೆ. ಹತ್ತು ವರ್ಷಗಳ ಹಿಂದೆ ಕೇಳಿದ ಶಬ್ದಗಳು ತನುವಿಗೆ ಇಂದೇ ಕೇಳಿದಂತಾಗುತ್ತದೆ. ಅದು ಸುಖದ ಶಬ್ದವಾಗಿದ್ದರೆ ತನುವಿನಲ್ಲಿ ಸುಖದ ರಸಾಯನ ಚಿಮ್ಮಿ ಅರಳುತ್ತದೆ. ಅದು ದುಃಖದ ಶಬ್ದವಾಗಿದ್ದರೆ ದುಃಖದ ರಸಾಯನ ತನುವಿನಲ್ಲಿಯೇ ಉಸುರಿ ದುಃಖಕ್ಕೆ ಜಾರುತ್ತದೆ. ಒಮ್ಮೊಮ್ಮೆ ಹಿಂದಿನ ಶಬ್ದ ತನುವಿನಲ್ಲಿ ಮಾರ್ದನಿಸಿ ಮರಣಕ್ಕೂ ತುತ್ತಾಗುತ್ತದೆ.

ತನುವಿನ ನೆನಪೇ ತನುವನ್ನು ಬದುಕಿಸುತ್ತದೆ. ತನುವಿನ ನೆನಪೇ ತನುವನ್ನು ಸಾಯಿಸುತ್ತದೆ. ತನುವಿನ ಮೇಲೆ ನೆನಪಿನ ಕತ್ತಿ ಸದಾ ತೂಗುತ್ತಲಿರುತ್ತದೆ. ನೆನಪು ಇಲ್ಲದ ತನುವೇ ಇಲ್ಲ. ಇದ್ದರೆ ಅದು ಆರೋಗ್ಯಕರ ತನುವಲ್ಲವೆಂದು ತನುಗಳ ಲೋಕವೇ ನಿರ್ಧರಿಸುತ್ತದೆ. ನೆನಪು ಸರಿದಾಗ ತನುವಿನ ಆಯುಷ್ಯವೂ ಸರಿಯುತ್ತದೆ.

ನೆನಪು ತನುವಿಗೆ ಮೃತ್ಯು. ಶಬ್ದದಿಂದ ನುಡಿದು ಸುಖಿಸುವ, ನುಡಿದು ದುಃಖಿಸುವ, ಎಂದೋ ಕೇಳಿದ ನುಡಿಯನ್ನು, ನುಡಿದ ನುಡಿಯನ್ನು ಕೇಳಿ ಸುಖ ಮತ್ತು ದುಃಖಗಳಿಗೆ ಒಳಗಾಗುವ ತನುವಿನ ಲೋಕವನ್ನು ಅಲ್ಲಮಪ್ರಭುಗಳು ''ಶಬ್ದ ಸೂತಕಿಗಳು ರೌರವ ನರಕಿಗಳು'' ಎಂದಿದ್ದಾರೆ. ಈ ಸೂತ್ರ ಹಿಡಿದು ಸಂಶೋಧನೆ ಮಾಡಲು ಇಂದಿನ ಶಿಕ್ಷಣ ಇಲಾಖೆಗಳಿಗೆ, ಶಿಕ್ಷಕರಿಗೆ, ಸಾಹಿತಿಗಳಿಗೆ ಸಾಧ್ಯವಾಗುತ್ತಿಲ್ಲ. ಆಡಳಿತ ನಡೆಸುತ್ತಿರುವ ಸರಕಾರಕ್ಕೂ ಈ ಬಗ್ಗೆ ಕಾಳಜಿ ಇಲ್ಲ. ಏಕೆಂದರೆ ಸಕಲ ತನುಗಳು ನೆನಹಿನ ಆಯುಷ್ಯ ಪುಂಜಕ್ಕೆ ಒಳಗಾಗಿವೆ.

ನೆನಪು ಎಂದರೆ ತನುವಿನ ಆಯುಷ್ಯ. ತನುವಿನ ಪ್ರಾಣ. ಅದು ಪ್ರಾಣವನ್ನು ರಕ್ತವನ್ನು ಕಿವಿ ಮೂಗು ಚರ್ಮ ನಾಲಿಗೆ ಕಣ್ಣನ್ನು ಹೆಣೆದುಕೊಂಡು ತನುವಿನ ಆಯುಷ್ಯವಾಗಿ, ತನುವನ್ನು ಜನ್ಮ ಜನ್ಮಗಳಿಂದಲೂ ಕಾಡುತ್ತದೆ. ತನುವಿನಲ್ಲಿ ಸಂಗ್ರಹಗೊಂಡ ನೆನಪು, ತನುವಿನ ಜನ್ಮದಿಂದಲೂ ಬಂದ ನೆನಪನ್ನು ತನುವಿನ ಮೂಲಕ ಸಂಪೂರ್ಣ ತೆಗೆದುಕೊಳ್ಳಲು ಸಾಧ್ಯವೆ? ಹಾಗೆ ಆಲೋಚನೆ ಮಾಡಲು ಕೂಡಾ ತನುವಿಗೆ ಸಾಧ್ಯವಾಗಿಲ್ಲ.

ನೆನಪಿನ ಶಕ್ತಿ ಕಡಿಮೆಯಾದರೆ ಸಾಕು ಕೂಡಲೇ ಚಿಕಿತ್ಸೆಗಾಗಿ ವೈದ್ಯರ ಬಳಿ ಹೋಗುವ ತನು, ನೆನಪಿನ ಶಕ್ತಿಯನ್ನು ಸಂಪೂರ್ಣವಾಗಿ ಉದುರಿಸಿಕೊಳ್ಳುವುದೆಂದರೇನು? ಇದು ತನುವಿಗೆ

ಸಾಧ್ಯವಾಗದ ಮಾತು.

ಸಿದ್ಧರಾಮ ಶಿವಯೋಗಿಗಳು ನೆನಹನ್ನು ಆಯುಷ್ಯದ ಪುಂಜ ಎಂದು ಕರೆದಿದ್ದಾರೆ. ನೆನಹಿನ ಮಂಗಳನೆ ಎಂದು ಕರೆದಿದ್ದಾರೆ. ಅವಧಾರು, ಅವಧಾರು ಎಂದು ಹಠ ಮಾಡುವ ಹುಡುಗನ ಮೈ ನೇವರಿಸುತ್ತಾ ನೆನಹು ಸೃಷ್ಟಿ ಮಾಡಿದವನನ್ನು ಒಲಿಸಿಕೊಳ್ಳುವ ಸೂತ್ರ ಓದುಗರಿಗೆ ಹಂಚಿದ್ದಾರೆ.

ಬಯಲಿಗೆ ಯಾವ ನೆನಪೂ ಇಲ್ಲ. ಇತಿಹಾಸವೂ ಇಲ್ಲ. ಗಾಳಿ, ನೀರು, ಬೆಂಕಿ, ಭೂಮಿ, ಆಕಾಶ ಕಾಯಗಳಿಗೆ ಇತಿಹಾಸವಿದೆ. ನೆನಪಿದೆ. ಇವೆಲ್ಲವುಗಳನ್ನು ಸೃಷ್ಟಿ ಮಾಡಿದ ಬಯಲಿಗೆ ಯಾವ ನೆನಪೂ ಇಲ್ಲ. ಇತಿಹಾಸವೂ ಇಲ್ಲ. ಅದು ಎಂದು ಹುಟ್ಟಿದೆ, ಯಾರಿಗೆ ಹುಟ್ಟಿದೆ, ಅದರ ತಂದೆ ತಾಯಿಗಳು ಯಾರು ಎನ್ನುವ ನೆನಪು ಯಾರಿಗೂ ಇಲ್ಲ. ಆದರೂ ಸಕಲ ಕಾಯಗಳಿಗೂ ಜನ್ಮ ನೀಡಿದ್ದು ಬಯಲು. ಸಕಲ ಕಾಯಗಳಿಗೂ ತನ್ನ ಗರ್ಭದಲ್ಲಿಯೇ ಆಶ್ರಯ ನೀಡಿದ್ದು ಕೂಡಾ ಬಯಲೇ. ಆದರೂ ಅದಕ್ಕೆ ನೆನಪಿಲ್ಲ. ನೆನಪಿನ ಅವಶ್ಯಕತೆ ಅದಕ್ಕಿಲ್ಲ. ಬಣ್ಣನೆ ಸುಖ ದುಃಖ ಅದಕ್ಕೆ ಬೇಕಿಲ್ಲ.

ಬಯಲು, ತನುವಿಗೆ ಜನ್ಮ ನೀಡಿ, ತನುವಿನಲ್ಲಿಯೇ ಸಂಗಮವಾಗಿದೆ. ತನುವನ್ನು ತಾಗದೆ ತನುವನ್ನು ಬೆಳಗುತ್ತಲಿದೆ. ಈ ಬೆಳಕಿನಿಂದ ಹುಟ್ಟಿದ ನೆರಳೇ ಮನ. ಇದೇ ಕತ್ತಲಾಗಿ ಕರಾಳ ನೆನಪಾಗಿ ತನುವನ್ನು ಕಾಡುತ್ತಲಿದೆ. ತನುವನ್ನು ಬೆಳಗುವ ಬೆಳಕು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗಿದ್ದಾನೆ. ಆತನ ಬೆಳಕಿನಿಂದ ಹುಟ್ಟಿದ ಮನವೆಂಬ ಕತ್ತಲೇ ಭಕ್ತನಾಗಿ; ಎಲ್ಲರ ನೆನಹಿನ ಆಯುಷ್ಯದ ಪುಂಜವೆ, ಅವಧಾರು ಅವಧಾರು; ಅಯ್ಯಾ ಎನ್ನ ನೆನಹಿನ ಮಂಗಳನೆ, ಅವಧಾರು. ಕಪಿಲಸಿದ್ಧ ಮಲ್ಲಿಕಾರ್ಜುನನೆ ಎಂದು ಹಾಡಲು ಬಂದಾಗ ಸಕಲ ನೆನಹಿನ ಪುಂಜಗಳು ಉದುರಿ ಬೀಳುತ್ತವೆ.

**314**

**ಎಲ್ಲರ ಪರಿಯಲ್ಲ ಅವನ ಪರಿ ಹೊಸತು;**
**ಕಾಲಾರರಲ್ಲಿ ನಡೆವ ಕಿವಿಯಲ್ಲಿ ಉಂಬ,**
**ಮೂಗಿನಲ್ಲಿ ನೋಡುವ, ಬಾಯಲ್ಲಿ ಭಾವಿಸುವ,**
**ಕಣ್ಣಿನಲ್ಲಿ ಮೂರ್ಛೆ ಹೋಹ,**
**ಬಂದುದನತಿಗಳೆವ, ಬಾರದುದ ತಾನೆಂಬ;**
**ಇಂಥ ವಿನೋದ ವಿಚಿತ್ರನವ್ವಾ, ಕಪಿಲಸಿದ್ಧ ಮಲ್ಲಿಕಾರ್ಜುನನು.**

ತೋರುವ ತನುವಿನಲ್ಲಿ ಸಂಗಮವಾದ ಅವ್ಯಕ್ತ ಅರಿವೆಂಬ ಗುರುದೇವನ ಪರಿ ಹೊಸತು. ಆತನ ಪರಿ ಎಲ್ಲರ ಪರಿಯಂತಲ್ಲ. ಆರು ಸ್ಥಲಗಳಲ್ಲಿ ತನ್ನ ಶಕ್ತಿಯನ್ನು ತೋರುವ ಮಹಾಮಹಿಮನು ಅವನು. ಎಲ್ಲರಂತಲ್ಲ. ಅವನ ಪರಿ ಹೊಸತು.

ಸುಗಂಧ ದುರ್ಗಂಧವನ್ನು ದೂರ ಮಾಡಿ ಅರಿವಿನ ಪರಿಮಳವನ್ನು ನೋಡುವ. ಸು-ಶಬ್ದ, ಕು-ಶಬ್ದಗಳನ್ನು ನಿಃಶಬ್ದವನ್ನಾಗಿಸಿ ಅರಿವಿನ ಕಿವಿಯ ಮೂಲಕ ಉಂಡು ಅರಿವನ್ನೇ ತೇಗುವ.

ನೋಡಿದ ಕಣ್ಣುಗಳಂತೆ ನುಡಿಯಲು ಯಾರಿಗೂ ಸಾಧ್ಯವಿಲ್ಲ ನೋಡುವ ಕಣ್ಣು ಹಾದರದ ಕಣ್ಣು ಇದು ಎಲ್ಲರ ಪರಿ. ಆದರೆ ನನ್ನ ಅರಿವಿನ ನಲ್ಲನ ಪರಿಯೇ ಬೇರೆ. ನೋಡಿದಂತೆ ನುಡಿಯುವ.

ಭಾವ ದುರ್ಭಾವಗಳನ್ನು ದೂರ ಮಾಡಿ ನಿರ್ಭಾವದಿಂದ ನುಡಿವ. ಕು-ಶಬ್ದಗಳನ್ನು ನಿಃಶಬ್ದ ಮಾಡಿ, ಶಬ್ದ ನಪುಂಸಕಗೊಳಿಸಿ, ಶಬ್ದವನ್ನೇ ಪ್ರಸಾದದಂತೆ ಉಂಡು ಮುತ್ತಿನಂತೆ ನುಡಿಯುವ. ಮುತ್ತು ನುಡಿಯುವುದಿಲ್ಲ; ಬೆಳಗುತ್ತದೆ. ಹಾಗೆಯೇ ನನ್ನ ನಲ್ಲನ ಪರಿಕೂಡಾ ಹೊಸತು. ಆತ ನುಡಿಯುವ ಮಾತುಗಳು ಕೂಡಾ ನುಡಿಯುವವನನ್ನು ಬೆಳಗುತ್ತದೆ. ಬೆಳಗುವ ನುಡಿಗಳನ್ನು ಎತ್ತಿಕೊಂಡ ತೊತ್ತು ನಾನು. ನಲ್ಲ ನುಡಿದಂತೆ ನುಡಿಯುವುದು ನಲ್ಲೆಯ ಧರ್ಮ.

ಕಣ್ಣಿನಲ್ಲಿ ಮೂರ್ಚೆ ಹೋಹ. ''ಎನ್ನ ಕಂಗಳು ನೋಡಲಮ್ಮದೆ ಬೆಚ್ಚಿ ಬೆದರಿದೆನಯ್ಯ ನೀನು ಶತಕೋಟಿ ಸೂರ್ಯ ಪ್ರಕಾಶಕ್ಕೆ ಅತೀತನು. ನಿನ್ನ ಕಂಡ ಬಳಿಕ ಕರ್ಮ ಉಂಟೆ ಕಪಿಲಸಿದ್ಧ ಮಲ್ಲಿಕಾರ್ಜುನ'' ಎಂದು ಸಿದ್ಧರಾಮ ಶಿವಯೋಗಿಗಳೇ ಹೇಳಿದ ಮತ್ತೊಂದು ವಚನವಿದು.

ಯಾವ ತನುವನ್ನು ನೋಡಿದರೂ ನಲ್ಲನ 'ಜಗದಗಲ ಮುಗಿಲಗಲ'ದ ವಿರಾಟ ಸ್ವರೂಪವೇ ಕಾಣುತ್ತದೆ. ಅಜ್ಞಾನದ ಕಣ್ಣುಗ್ಗಳು ಅವನ ಜ್ಞಾನ ಪ್ರಕಾಶದಲ್ಲಿ ಸುಟ್ಟು ಭಸ್ಮವಾದಾಗ ಮಾತ್ರ ಇದು ಸಾಧ್ಯವಾಗುತ್ತದೆ. ಯಾರನ್ನು ನೋಡಿದರೂ ನಲ್ಲನ ನೋಡಿದಂತೆ ಭಾಸವಾಗುತ್ತದೆ. ನಲ್ಲನ ದರುಶನ ಭಾಗ್ಯ ಎಲ್ಲೆಡೆಯೂ ಗೋಚರಿಸುತ್ತದೆ.

ಬಂದುದನತಿಗಳೆವ, ಬಾರದುದ ತಾನೆಂಬ, ಇಂಥ ವಿನೋದ ವಿಚಿತ್ರನವ್ವಾ, ಕಪಿಲಸಿದ್ಧ ಮಲ್ಲಿಕಾರ್ಜುನನು.

**315**

**ಎಲ್ಲರ ಪರಿಯಲ್ಲ ಎಮ್ಮ ಗಂಡನ ಪರಿ**
**ಒಬ್ಬರು ಬಲ್ಲುದ ತಾನರಿಯ, ತಾ ಬಲ್ಲುದನೊಬ್ಬರರಿಯರು.**
**ತವಕ ಬಂದಲ್ಲಿ ಕೂಡುವ, ಅಲ್ಲದಡೊಲ್ಲದ ಹಾಂಗಿರ್ಪ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು.**

ಮನೆ ಬೆಳಗಬೇಕಾದರೆ ಮನೆಯ ಒಡತಿ ಚೆನ್ನಾಗಿರಬೇಕು. ಶರಣರು, ತನು ಅರಿವಿನಿಂದ ಬೆಳಗಬೇಕಾದರೆ, ತನುವನ್ನು ಆವರಿಸಿದ ಮನವನ್ನು ಹೆಂಡತಿಯನ್ನಾಗಿಸಿದರು. ತನುವಿನಲ್ಲಿ ತನ್ಮಯವಾದ ಅರಿವನ್ನು ಗಂಡನನ್ನಾಗಿಸಿದರು. 'ಸತಿ-ಪತಿಗಳು ಒಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ಹಾಡಿದರು.

ಅರಿವು ಎನ್ನುವುದು ಗಂಡು, ಮನ ಎನ್ನುವುದು ಹೆಣ್ಣು. ಇದರ ಹೊರತಾಗಿ ಹೆಣ್ಣು ಗಂಡು ಎಂದು ದೇಹವನ್ನು ವಿಂಗಡಿಸುವಂತಿಲ್ಲ. ಹೀಗೆ ವಿಂಗಡಿಸದೆ ನೋಡಬೇಕೆಂದರೆ, ನೋಡುವ ಶಕ್ತಿ ತನಗೆ ಬರಬೇಕೆಂದು ಬಯಕೆಯಾದರೆ, ಬಯಕೆಯಾದ ತನು ಚಿಂತಿಸಲು ತೊಡಗುತ್ತದೆ.

ಕಣ್ಣಿಗೆ, ಚರ್ಮ ಗಂಡಾಗಿ ಹೆಣ್ಣಾಗಿ ಕಾಣುತ್ತದಲ್ಲ? ಚರ್ಮದೊಳಗಿರುವ ಪದಾರ್ಥಗಳು ಒಂದೇ ಆಗಿದ್ದರೂ ಕೂಡಾ ಕಣ್ಣು ಏಕೆ ಗಂಡಾಗಿ ಹೆಣ್ಣನ್ನು ನೋಡುತ್ತದೆ? ಕಣ್ಣು ಏಕೆ ಹೆಣ್ಣಾಗಿ ಗಂಡನ್ನು ನೋಡುತ್ತದೆ? ಕಣ್ಣು ಗಂಡು ಹೆಣ್ಣು ಎಂದು ದೇಹವನ್ನು ಬೇರ್ಪಡಿಸಿ ನೋಡಲು ಕಾರಣವೇನು? ಕಣ್ಣು ಹೆಣ್ಣೇ ಅಥವಾ ಗಂಡೇ? ಹೀಗೆ ಅರಿವಿನಿಂದ ನೋಡಲು ಹೋದರೆ ಕಣ್ಣು ಹೆಣ್ಣಲ್ಲ, ಗಂಡಲ್ಲವೆಂದು ನಿರ್ಧರಿಸುತ್ತದೆ. ಹಾಗಾದರೆ ಗಂಡು ಯಾವುದು? ಹೆಣ್ಣು ಯಾವುದು?

ದೇಹವನ್ನು ಆವರಿಸಿದ ಮನದ ಸುಳ್ಳು ನಿರ್ಧಾರ ಎಂದು ಚಿಂತಿಸಲು ಹೋದಾಗ ತನ್ನ

ಅರಿವಿನಿಂದ ತನಗೇ ಗೊತ್ತಾಗುತ್ತದೆ. ಹೀಗೆ ಗೊತ್ತಾದ ಮೇಲೆ ಸುಳ್ಳು ಮನವನ್ನು ಹಿಡಿದು ಅರಿವಿನ ಸಂಬಂಧ ಮಾಡುವುದೇ ಮದುವೆ. ಸತಿ ಪತಿಗಳನ್ನು ಒಂದು ಮಾಡುವುದೇ ಮದುವೆ.

ಹಿರಿಯರು ಮಾಡುವ ಮದುವೆ ಸಂತಾನ ಪ್ರಾಪ್ತಿಗಾಗಿ. ಅರುಹಿರಿಯರು, ಶರಣರು ಮಾಡುವ ಮದುವೆ ಪರಮ ಸಂತೋಷ ಪ್ರಾಪ್ತಿಗಾಗಿ. ಹೀಗಾಗಿ ಬಸವಣ್ಣ ನವರು 'ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ' ಎಂದು ಎದೆ ತುಂಬಿ ಹಾಡಿದರು. 'ಹೆಂಗೂಸು ಗಂಡುಗೂಸು ನೀನೇ ದೇವಾ, ಎಮ್ಮಕ್ಕನ ಗಂಡ ನೀನೇ ದೇವಾ' ಎಂದು ನಿಜ ಗಂಡನ ಪರಿಚಯ ಆದ ಮೇಲೆ ಕುಣಿ ಕುಣಿದು ಹಾಡಿದರು.

'ಎಲ್ಲರ ಪರಿಯಲ್ಲ ಎಮ್ಮ ಗಂಡನ ಪರಿ, ಒಬ್ಬರು ಬಲ್ಲುದ ತಾನರಿಯ, ತಾ ಬಲ್ಲುದನು ಒಬ್ಬರೂ ಅರಿಯರು'. ಸಿದ್ಧರಾಮ ಶಿವಯೋಗಿಗಳದು ಎಂತಹ ಸುಂದರವಾದ ಸೂತ್ರ. ನಿಜ ಗಂಡನ ಸುಖ ಅನುಭವಿಸಿದವರು. ಸಕಲರಿಗೂ ಅರಿವಿನ ನಿಜಗಂಡ ದೊರೆಯಲಿ ಎಂದು ಅರಿವಿನ ಸೂತ್ರ ಬರೆದರು.

ಗಂಡಾಗಿ ಹೆಂಡತಿಯನ್ನಾಗಿಸಿಕೊಳ್ಳಬಹುದು, ಹೆಣ್ಣಾಗಿ ಗಂಡನನ್ನು ಮಾಡಿಕೊಳ್ಳಬಹುದು. ಇದು ಸರಳ. ಆದರೆ ಅವರಿಬ್ಬರು ಸುಂದರವಾಗಿ ಬದುಕಬೇಕೆಂದು, ಪರಮ ಸಂತೋಷದಿಂದ ಇರಬೇಕೆಂದು ಬಯಸಿದರೆ, ಅವರಿಬ್ಬರೂ ಸತಿಯಾಗಬೇಕು. ಸತಿಯಾಗಿ ತನುವಿನಲ್ಲಿಯೇ ಅರಿವಿನ ಪತಿಯನ್ನು ಹುಡುಕಬೇಕು. ಅಂದರೆ ಪತಿ ಸತಿಯಾಗಿ ಅರಿವಿನ ಪತಿಯೊಂದಿಗೆ ಮದುವೆಯಾಗಬೇಕು. ಸತಿ ಸತಿಯಾಗಿ ಅರಿವಿನ ಪತಿಯೊಂದಿಗೆ ಮದುವೆಯಾಗಬೇಕು. ಈ ಮದುವೆಗೆ ಹೆಣ್ಣು ಗಂಡಿನ ಅವಶ್ಯಕತೆಯಿಲ್ಲ. ಗಂಡು ಹೆಣ್ಣೇ, ಹೆಣ್ಣು ಕೂಡಾ ಹೆಣ್ಣೇ. ಹೆಣ್ಣು ಗಂಡು ಕೂಡಿ ಗಂಡನನ್ನು ಹುಡುಕಬೇಕು. ಹೆಣ್ಣಾಗಿ ಗಂಡನನ್ನು ಹುಡುಕಬೇಕು. ಹುಡುಕುವ ಬಯಕೆ ಹೆಚ್ಚಾದಂತೆಲ್ಲ ಅರಿವಿನ ನಲ್ಲ ಬಿಗಿದಪ್ಪಿ ತನ್ನಂತೆ ಮಾಡಿಕೊಳ್ಳುವನು.

ಹೆಣ್ಣಿಗೆ ತವಕ ಬಂದಲ್ಲಿ ಕೂಡುವ ಅಲ್ಲದಡೊಲ್ಲದ ಹಾಂಗಿರ್ಪ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು:

ಇದು ನಿಜವಾದ ಮದುವೆ. ಈ ಮದುವೆ ಇಲ್ಲದ ತನುವಿಗೆ ಮುಕ್ತಿ ಇಲ್ಲ. ಮದುವೆಯಾಗದ ವಿನಹ ಅಜ್ಞಾನದ ಪೊರೆ ಕಳಚುವುದಿಲ್ಲ.

ಈ ಮದುವೆ ಗಂಡಿಗೆ ಮಾತ್ರ ಸಾಧ್ಯ ಎಂದು ತೀರ್ಥಂಕರರು ಸಾರಿದರು. ಗಂಡಿಗೆ ಮಾತ್ರ ಬುದ್ಧತ್ವ ಸಾಧ್ಯವೆಂದು ಸಿದ್ಧಾರ್ಥ ಸಾರಿದ. ನಂತರ ಸರಿಪಡಿಸಿಕೊಂಡರು. ಅರಿವಿನ ಕೆಲಸ ಕಾಲಘಟ್ಟದನುಗುಣವಾಗಿ ಮುಂದೆ ಸಾಗುತ್ತಾ ಬಂದಿದೆ. ಸವಕಳಿಯಾದ ಪದ ಹೊಡೆದು ಹಾಕಿ ಹೊಸ ಆವಿಷ್ಕಾರದಲ್ಲಿ ಮುಂದೆ ಸಾಗಿದೆ.

ಶರಣರು ಸರಳವಾಗಿ ನಿರ್ಧರಿಸಿದರು. ಹೆಣ್ಣು ಗಂಡು ಎನ್ನುವುದು ಇಲ್ಲ. ದೇಹ ಮಾತ್ರ ಸತ್ಯ. ದೇಹವನ್ನು ಆವರಿಸಿದ ಮನ ಹೆಣ್ಣು. ದೇಹದಲ್ಲಿ ಸಂಗಮವಾದ ಅರಿವು ಗಂಡು ಇವೆರಡರ ಮಿಲನವಾದರೆ ದೇಹಕ್ಕೆ ಅಂಟಿದ ಅಜ್ಞಾನ ಸಂಪೂರ್ಣವಾಗಿ ಕಳಚಿ ಬೀಳುತ್ತದೆ ಎಂದು ಅನುಭವಿಸಿ ಸತ್ಯವನ್ನು ಜಗಕ್ಕೆ ಸಾರಿದರು.

ಅರಿವಿನ ತವಕವುಳ್ಳ ದೇಹಕ್ಕೆ ಮಾತ್ರ ಇದು ಘಟಿಸಲು ಸಾಧ್ಯ. ತನ್ನ ಅರಿವಿಗೆ ಸಂಪೂರ್ಣ ಶರಣು ಹೋಗಿ ಶರಣನಾಗುವುದು ಕೋಟಿಗೊಬ್ಬನಿಗೆ ಮಾತ್ರ ಸಾಧ್ಯ ಎಂದರು. ಬಸವಾದಿ ಶರಣರು ಏಕ ಕಾಲಕ್ಕೆ ಪ್ರಯೋಗಕ್ಕೆ ಹೋದರು. ಏಳುನೂರಾ ಎಪ್ಪತ್ತು ಜನ

ಶರಣರಾದರು. ಅರಿವಿನ ಈ ಶಿಬಿರದಲ್ಲಿ ಶಿಬಿರಾರ್ಥಿಗಳಾಗಿ ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಭಾಗಿಗಳಾಗಿದ್ದರೆಂದು ಶರಣರು ಅಕ್ಷರಗಳ ಮೂಲಕ ದಾಖಲಿಸಿದ್ದಾರೆ.

ಅರಿವಿನ ತವಕ ಹೆಚ್ಚಾಗುವುದು ಕೋಟಿಗೊಂದು ತನುವಿಗೆ ಮಾತ್ರ. ಮನದಲ್ಲಿ ಅರಿವಿನ ಬಯಕೆ ಸೃಷ್ಟಿಯಾದರೆ ಸಕಲ ತನುಗಳಿಗೂ ಬುದ್ಧತ್ವ, ಶರಣತ್ವ ಪ್ರಾಪ್ತಿಯಾಗುತ್ತದೆ ಎಂಬುದಕ್ಕೆ ಶರಣ ಮಾರ್ಗವೇ ಸಾಕ್ಷಿಯಾಗಿದೆ. ಒಂದು ಲಕ್ಷ ತೊಂಬತ್ತಾರು ಸಾವಿರ ಶಿಬಿರಾರ್ಥಿಗಳಲ್ಲಿ ಏಳುನೂರಾ ಎಪ್ಪತ್ತು ಜನ ತಮಗೆ ಜ್ಞಾನವಾಯಿತು ಎಂದು ಘೋಷಿಸಿಕೊಂಡಿದ್ದಾರೆ. ಇದಕ್ಕೆ ಯಾರೂ ಸರ್ಟಿಫಿಕೇಟ್ ಕೊಡುವುದಿಲ್ಲ. ತನ್ನ ಅಜ್ಞಾನ ತನ್ನ ಜ್ಞಾನದಿಂದಲೇ ಸಂಪೂರ್ಣ ನಿರ್ನಾಮವಾಯಿತು ಎಂದು ತನಗೆ ಮಾತ್ರ ಗೊತ್ತಾಗುವುದರಿಂದ ಜ್ಞಾನಿ ತನಗೆ ಜ್ಞಾನ ಪ್ರಾಪ್ತಿಯಾಯಿತೆಂದು ಘೋಷಣೆ ಮಾಡುತ್ತಾನೆ.

ಶ್ರೀ ಶಂಕರರು 'ಅಹಂ ಬ್ರಹ್ಮಾಸ್ಮಿ' ಎಂದು ಘೋಷಿಸಿಕೊಂಡರು. ನನಗೆ 'ಬುದ್ಧತ್ವ ಪ್ರಾಪ್ತಿಯಾಯಿತೆಂದು ಸಿದ್ಧಾರ್ಥ ಘೋಷಿಸಿಕೊಂಡ. ತನಗೆ ಜಿನತ್ವ ಪ್ರಾಪ್ತಿಯಾಯಿತೆಂದು ವರ್ಧಮಾನ ತನ್ನ ತನುವಿನ ಮೂಲಕ ಮಾತನಾಡದೆ ಘೋಷಿಸಿದ. ಮಹಾನ್ ಸಂತರಾದ ಪೈಗಂಬರರು, ಏಸುಕ್ರಿಸ್ತರು ದೇವರನ್ನು ಕಂಡೆವೆಂದು ಕುಣಿದಾಡಿದರು. ಕ್ರಿಷ್ಣ ತನ್ನ ವಿರಾಟ ಸ್ವರೂಪವನ್ನೇ ತೋರಿದ. ದಾಸವರೇಣ್ಯರು ದೇವರಿಗೆ ದಾಸಾನುದಾಸರಾದೆವೆಂದು ಕುಣಿ ಕುಣಿದಾಡಿದರು. ತತ್ವಪದಕಾರರು ಸೂಫಿಗಳು ಮೈದುಂಬಿ ಹಾಡಿದರು. ಹೆಂಡತಿಯೆಂಬ ಮಾರಿ ಮಸಣೆಯ ಅಜ್ಞಾನವನ್ನು ಕಳಚಿಕೊಂಡು ಶಿವಲಿಂಗದೇವರೊಂದಿಗೆ ಮದುವೆಯಾದ ಅರಿವಿನ ಸಂಕೇತವಿದು.

ಇಂತಹ ಸಂಕೇತ ಸುಳುಹುಗಳನ್ನು ಹಿಡಿದುಕೊಂಡು ಸ್ವಾಮಿಗಳಾದವರು, ಗುರುಪೀಠಕ್ಕೆ ಒಡೆಯರಾದವರು, ಸರಕಾರ ನಡೆಸುತ್ತಿರುವ ಶಾಸಕ ಸಂಸದರು ಕೂಡಿ ನಿಜ ಶಿಬಿರಗಳನ್ನು ಮಾಡಲು ಸಹಕರಿಸುವುದು ಸೂಕ್ತ. ಹಾಗೆ ಮಾಡುವುದು ಅವರ ಧರ್ಮವೂ ಆಗಿದೆ. ಆದರೆ ಜನರ ಕೈಯಲ್ಲಿ ಲಿಂಗಕೊಟ್ಟು, ಲಿಂಗಕ್ಕೆ ಇಂತಿಷ್ಟು ಹಣವನ್ನು ಪಡೆದು ಜನರನ್ನು ಯಾಮಾರಿಸುತ್ತಿರುವುದು ಪಾಪದ ಕೆಲಸವಲ್ಲವೇ?

ಹನ್ನೆರಡನೇ ಶತಮಾನದಲ್ಲಿ ಶರಣರು ಕೈಕೊಂಡ ಅರಿವಿನ ಶಿಬಿರವನ್ನು ನಾಯಕ ರಾದವರು ಗುರುಗಳಾದವರು ಹೀಗೆ ಅಪಭ್ರಂಶಗೊಳಿಸುವುದು ಸಲ್ಲದ ಕೆಲಸ. ಇದು ಜನ ಸಮೂಹಕ್ಕೆ ಶೋಭೆ ತರುವಂತಹ ಕೆಲಸವೂ ಇಲ್ಲ.

ಅರಿವಿಗಾಗಿ ಮಹಾಜ್ಞಾನ ಯಜ್ಞಕ್ಕಾಗಿ ಸಂಘಟಿಸಿದ ಒಂದು ಲಕ್ಷ ತೊಂಬತ್ತಾರು ಸಾವಿರ ಸಂಖ್ಯೆಯನ್ನು ಸಂಕೇತವಾಗಿಸಿಕೊಂಡು ರಾಜಕೀಯ ಹಾಗೂ ಧಾರ್ಮಿಕ ಲಾಭಕ್ಕಾಗಿ ಬಳಸಿಕೊಳ್ಳುವುದು ಪಾಪದ ಕೆಲಸವೆಂದು ಅರಿವಾಗದಿದ್ದರೆ ಹೇಗೆ?

ತನ್ನ ಅಜ್ಞಾನವನ್ನು ತಾನೇ ಕಳೆದು ಕೊಳ್ಳುವ ಬಯಕೆಯನ್ನು ಹೊಂದಿ ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಕಲ್ಯಾಣದಲ್ಲಿ ಸೇರಿದ್ದರು. ಅದರಲ್ಲಿ ಏಳುನೂರಾ ಎಪ್ಪತ್ತು ಜನರಿಗೆ ಜ್ಞಾನ ಪ್ರಾಪ್ತಿಯಾಯಿತು. ಮಹಾನ್ ಜ್ಞಾನಿಗಳು ಈ ಯಜ್ಞದಲ್ಲಿ ಭಾಗವಹಿಸಿದ್ದರು. ಅಲ್ಲಮಪ್ರಭುಗಳು ಜ್ಞಾನ ಯಜ್ಞದ ಅಧ್ಯಕ್ಷರಾಗಿದ್ದರು. ಕಲ್ಯಾಣದಲ್ಲಿ ನಡೆದದ್ದು ಸ್ವಯಂಕ್ರಾಂತಿ. ತನ್ನ ಅಜ್ಞಾನವನ್ನು ತಾನೇ ಕಳೆದುಕೊಳ್ಳುವ ಉತ್ಕ್ರಾಂತಿ. ಇಂತಹ ಉದ್ದೇಶವುಳ್ಳ ಸಭೆಗಳನ್ನು ಯಾರು ಮಾಡಿದರೂ ಸ್ವಾಗತಿಸಬೇಕು.

**ಎಲ್ಲರೊಳಗಿಪ್ಪರೆ ಅಲ್ಲಲ್ಲಿ ರಚಿಸುವೊಡೆ**
**ಎಲ್ಲರೋಪಾಯ ಎಲೆ ಅಯ್ಯಾ ನೀನು.**
**ಸಲ್ಲಲಿತ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ಭಕ್ತರಲ್ಲಿಯಲ್ಲದೆ ನೀನು ಸುಲಭನಲ್ಲ.**

ಸಕಲ ದೇಹಗಳಲ್ಲಿ ದೇವರಿದ್ದಾನೆ. ದೇವರಿಲ್ಲದ ದೇಹವೇ ಇಲ್ಲ. ಆದರೂ ದೇವರನ್ನು ಹೊತ್ತ ದೇಹವೇ ದೇವರನ್ನು ಸೃಷ್ಟಿ ಮಾಡಿ, ಸೃಷ್ಟಿ ಮಾಡಿದ ದೇಹವನ್ನೇ ದೇವರೆಂದು ಬಾಗುತ್ತದೆ. ಆ ದೇವರಿಗೆ ಆಲಯವನ್ನು ನಿರ್ಮಿಸುತ್ತದೆ. ಕಲಶಗಳನ್ನಿಟ್ಟು ಉತ್ಸವ ಜಾತ್ರೆಗಳನ್ನು ಮಾಡುತ್ತದೆ. ಇದು ದೇಹದಲ್ಲಿದ್ದ ದೇವರ ಮಾಯೆ.

ದೇಹದಲ್ಲಿ ದೇವರಿದ್ದೂ ದೇಹಕ್ಕೆ ದೇವರನ್ನು ಹುಡುಕಲು ಹಚ್ಚಿ ದೇಹದೊಂದಿಗೆ ಚಿನ್ನಾಟವಾಡುವ ದೇವರ ಮಾಯೆ! ದೇವರನ್ನು ನಂಬದೇ ಇರುವ ದೇಹಗಳೇ ಇಲ್ಲ. ಇದ್ದರೂ ಅವು ಸತ್ಯವನ್ನು ಚೈತನ್ಯವನ್ನು ನಂಬುತ್ತವೆ. ಮುಗಿಲೆಡೆ ಕೈತೋರಿಸಿ ದೇವರನ್ನು ನಂಬುತ್ತವೆ.

ದೇವರು, ಸತ್ಯ, ಚೈತನ್ಯದ ಮೇಲೆ ನಂಬಿಗೆ ಇಟ್ಟವರು ಎಲ್ಲೆಡೆ ಸಿಕ್ಕುತ್ತಾರೆ. ದೇವರನ್ನು ನೋಡಿದ್ದೇನೆ, ಆ ದೇವರೇ ನಾನು; ಸತ್ಯ ಮತ್ತು ಚೈತನ್ಯದ ಸಾಕ್ಷಾತ್ಕಾರ ನನಗೆ ಆಗಿದೆ ಎಂದು ಖಚಿತವಾಗಿ ಎದೆ ಮುಟ್ಟಿ ಹೇಳುವವರು ವಿರಳ. ಹಾಗೆ ಇರುವವರನ್ನು ಹುಡುಕುವವರೂ ವಿರಳ. ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಬಯಕೆ ಉಳ್ಳವರೂ ವಿರಳ.

ದೇಹದಲ್ಲಿ ಸತ್ಯ ಸಂಗಮವಾಗಿದ್ದರೂ ದೇಹಕ್ಕೆ ಸಾಕ್ಷಾತ್ಕಾರ ಮಾಡಿಸಬೇಕೆಂಬ ಬಯಕೆ ದೇಹದಲ್ಲಿ ಸತ್ಯವಿದ್ದೂ, ದೇಹಕ್ಕೆ ಸತ್ಯದ ದರ್ಶನ ಒದಗಿಸಬೇಕೆಂಬ ಬಯಕೆ ದೇಹದಲ್ಲಿರುವ ಸತ್ಯಕ್ಕೆ ಉಂಟಾಗದಿದ್ದರೆ ಆ ದೇಹವಾದರೂ ಏನು ಮಾಡೀತು?

ದೇಹವನ್ನು ಆವರಿಸಿದ ಮನವೇ ಟಿಸಿಲೊಡೆದು ವಿಧಿಯಾಗಿ ಕಾಡುತ್ತಿರುವ ವಿಧಿಯ ನಿಯಮವಿದು. ದೇಹದಲ್ಲಿಯೇ ದೇವರನ್ನು ಇಟ್ಟುಕೊಂಡು ದೇಹದಿಂದಲೇ ಕೆತ್ತಿದ ಕಲ್ಲಲ್ಲಿ ದೇವರನ್ನು ಹುಡುಕಿದರೆ ದೇಹಕ್ಕೆ ದೇವರು ಸಿಕ್ಕಾನೆಯೇ? ದೇಹದ ಆಯುಷ್ಯ ಮುಗಿಯುವವರೆಗೂ ಕಲ್ಲುದೇವರನ್ನು ದೇವರೆಂದು ದೇಹ ಪೂಜಿಸಿದರೂ ದೇವರು ಒಲಿಯುವುದಿಲ್ಲ. ನೀನು ಪೂಜಿಸುವುದು ಕಲ್ಲು ಅದು ನಾನಲ್ಲ ಎಂದು ಕೂಡಾ ದೇವರು ಹೇಳುವುದಿಲ್ಲ. ಏಕೆಂದರೆ ಕಲ್ಲನ್ನು ದೇವರೆಂದು ಪೂಜಿಸುವವನು ತಾನೇ ಆಗಿದ್ದಾನೆ.

ಕಲ್ಲಲ್ಲಿ ಯಾವ ದೇವರನ್ನು ಕೆತ್ತಿದರೂ ಅದು ಕಲ್ಲಲ್ಲವೇ? ಕಲ್ಲನ್ನು; ಕಲ್ಲು ದೇವರನ್ನು ಕಲ್ಲು ಎಂದು ಹೇಳುವವನು ಸಮರ್ಥ. ಅವನಿಗೆ ದೇವರ ಸಾಕ್ಷಾತ್ಕಾರವಾಗಿದೆ. ಅವನು ಖಚಿತವಾಗಿ ಹೇಳುತ್ತಾನೆ, ನೀನು ಪೂಜಿಸುವ ದೇವರು ದೇವರು ಅಲ್ಲವೆಂದು. ಆದರೆ ಪೂಜಿಸುವ ದೇಹ ಕೇಳಬೇಕಲ್ಲ? ಕಲ್ಲನ್ನು ಕಲ್ಲೆಂದು ಹೇಳಿದ ದೇಹಕ್ಕೆ ಕಲ್ಲಿಲೆ ಒಡೆದು ಸಾಯಿಸುವರು. ಇದು ದೇವರೇ ಇದ್ದ ದೇಹದ ನಿಯಮ. ದೇಹದಲ್ಲಿಯೇ ಇದ್ದ ದೇವರು ದೇಹವನ್ನು ತನ್ನ ಮಾಯೆಯಿಂದ ಯಾಮಾರಿಸಿದ್ದಾನೆ.

ದೇಹವನ್ನು ಆವರಿಸಿದ ಮನ ದೇಹದಲ್ಲಿದ್ದ ದೇವರನ್ನು ಹೊರತುಪಡಿಸಿ ಸರ್ವವನ್ನು ತಿಳಿಯುತ್ತದೆ. ಸಮುದ್ರದ ತಳವನ್ನು ಜಾಲಾಡುತ್ತದೆ. ಗಾಳಿಯಲ್ಲಿ ಹಾರಿ ಚಂದ್ರಗ್ರಹಕ್ಕೆ, ಮಂಗಳ

ಗ್ರಹಕ್ಕೆ ಜಿಗಿಯುತ್ತದೆ. ದೇಹದಲ್ಲಿಯೇ ಇದ್ದ ದೇವರನ್ನು ತಿಳಿಯುವುದಕ್ಕೆ ಮನಕ್ಕೆ ಸಾಧ್ಯವಾಗುವುದಿಲ್ಲ. ದೇವರನ್ನು ತಿಳಿದರೆ ಮನಕ್ಕೆ ಅವಸಾನ. ದೇಹದ ಸುಖ ಮನಕ್ಕೆ ದಕ್ಕದಂತೆ ಮಾಡುತ್ತಾನೆ. ಮನ ದೇಹದೊಂದಿಗೆ ಸುಳ್ಳು ಸುಖ ಅನುಭವಿಸದಂತೆ ಕಡಿವಾಣ ಹಾಕುತ್ತಾನೆ. ಮನವನ್ನೇ, ಘನಮನವನ್ನಾಗಿಸಿ ತನ್ನಂತೆ ಮಾಡಿಕೊಳ್ಳುತ್ತಾನೆ. ಹೀಗಾಗಿ ಮನ ದೇಹವನ್ನು ನಿಜ ದೇವರ ದರುಶನಕ್ಕೆ ಕರೆದುಕೊಂಡು ಹೋಗುವುದಿಲ್ಲ. ಸುಳ್ಳು ದೇವರ ಮುಂದೆ ದೇವರಿದ್ದ ದೇಹವನ್ನು ಕೆಡುವದೇ ಬಿಡುವುದಿಲ್ಲ. ಇದು ಮನದ ಆಟವೆಂದು ದೇಹಕ್ಕೆ ತಿಳಿಯಬೇಕಲ್ಲ. ದೇವರು ದೇಹಕ್ಕೆ ಒಲಿಯುವವರೆಗೆ ಅದು ಜಡವಾಗಿಯೇ ಇರುತ್ತದೆ. ಮನದ ಉಪಕರಣವಾಗಿಯೇ ಇರುತ್ತದೆ.

ಸಲ್ಲಲಿತ ಸನ್ಮಾರ್ಗವನ್ನು ಮನ ಅರಿತಾಗ, ಅಂದರೆ ತನಗೆ ಅರಿವಿನ ದರ್ಶನ ಮಾಡಿಕೊಳ್ಳಬೇಕೆಂಬ ಅರಿವಾದಾಗ ಅರಿವಾದ ಅರು ಹಿರಿಯರನ್ನು ಹುಡುಕುತ್ತಾ ಅಲೆದಾಡುತ್ತದೆ. ಶರಣರು ಬೋಧಿಸಿದ ಸಲ್ಲಲಿತ ಸನ್ಮಾರ್ಗವನ್ನು ಹಿಡಿದು ದೇವರ ದರ್ಶನ ಪಡೆಯುತ್ತದೆ. ಮನ ಘನಮನವಾಗುತ್ತದೆ. ದೇಹ ಘನಕ್ಕೆ ವಾಹನವಾಗುತ್ತದೆ. ದೇಹವೆಂಬ ''ಪಶು'' ''ಪಶುಪತಿ''ಗೆ ವಾಹನವಾಗುತ್ತದೆ.

ಮನಕ್ಕೆ ನಿಜ ದೇವರ ಮೇಲೆ ಭಕ್ತಿ ಹುಟ್ಟದಿದ್ದರೆ ದೇಹದಲ್ಲಿಯೇ ಇದ್ದ ದೇವರು ದೇಹಕ್ಕೆ ಒಲಿಯುವುದು ಸುಲಭವಲ್ಲದ ಮಾತು.

**317**

**ಎಲ್ಲ ವಾಹಿ ಇವಗೆ ನೋಡಾ!**
**ನೀರೆಣ್ಣೆ ಬಣ್ಣೆ ಇವಗೆ ನೋಡಾ!**
**ಈ ವಾಹಿ ಕಿಚ್ಚು ಇವಗೆ ಸವೆದನವ್ವಾ!**
**ಎಂತುಟನು ಸರಿಮಾಡಿ ನುಂಗುವ ಕಪಿಲಸಿದ್ಧ ಮಲ್ಲಿನಾಥಯ್ಯ.**

ನಿಂಬೆಯಲ್ಲಿ ಹುಳಿನೀರು, ತೆಂಗಿನಲ್ಲಿ ಸಿಹಿನೀರು, ಕಂಗಿನಲ್ಲಿ (ಅಡಕೆ) ಒಗರು, ಮೆಣಸಿನಲ್ಲಿ ಖಾರ, ಎಳ್ಳಿನಲ್ಲಿ ಎಣ್ಣೆ, ಹಾಲಿನಲ್ಲಿ ತುಪ್ಪ, ಮರದಲ್ಲಿ ಕೆಚ್ಚನು ತನುವಿನಲ್ಲಿ ಮನವನ್ನು ಇಟ್ಟು ವಾಹನ ಚಲಾಯಿಸುವ ಚಾಲಕ ನೀನು.

ನೀರಲ್ಲಿ ಸಿಹಿ ಬೆರಸಿ ತೆಂಗು ಮಾಡಿದೆ. ನೀರಲ್ಲಿ ಹುಳಿ ಬೆರಸಿ ನಿಂಬೆ ಮಾಡಿದೆ. ನೀರಲ್ಲಿ ಖಾರ ಬೆರಸಿ ಮೆಣಸು ಮಾಡಿದೆ. ನೀರಲ್ಲಿ ಎಣ್ಣೆ ಬೆರಸಿ ಎಳ್ಳು ಮಾಡಿದೆ. ನೀರನ್ನೇ ರಕ್ತ ಮಾಡಿ ಪ್ರಾಣಿ ಕುಲಕ್ಕೆ ಜನ್ಮ ಕೊಟ್ಟೆ, ಮರದಲ್ಲಿ ಹರಿಯುವ ನೀರನ್ನೇ ಕೆಚ್ಚಾಗಿಸಿ ಅಗ್ನಿಗೆ ಜನ್ಮ ಕೊಟ್ಟೆ. ನೀರು ಹರಿದು ಸಸ್ಯವಾಯಿತು. ಸಸ್ಯವನು ಉಂಡ ಹಸು ಹಾಲು ಕರೆಯಿತು. ಹಾಲಲ್ಲಿ ಮಸರು, ತುಪ್ಪ, ಬೆಣ್ಣೆಯನಿಟ್ಟ ಬ್ರಹ್ಮ ನೀನು. ಜಲವೂ ಜಲವೇ, ಜಲಚರಗಳೂ ಜಲವೇ. ಜಲ ಕುದ್ದ ಪಾಕವೇ ಭೂಮಿ. ಜಲಪಾಕವೇ ಚಿನ್ನ ಬೆಳ್ಳಿ ಖನಿಜ. ಸಕಲ ಲೋಹಗಳೂ ಜಲವೇ. ಜಲದ ವಾಹಕನೂ ನೀನೇ; ಜಲದ ಚಾಲಕನೂ ನೀನೆ!

ನೀರೆ ಎಣ್ಣೆ, ನೀರೆ ಬೆಣ್ಣೆ, ನೀರೆ ತುಪ್ಪ, ನೀರೆ ಭೂಮಿ, ನೀರೆ ಸಸ್ಯ, ನೀರೆ ಗಿಡ ಮರ ಬಳ್ಳಿ, ನೀರೆ ಅಗ್ನಿ, ನೀರೆ ವಾಯು, ನೀರವಾಹಕ ನೀನು. ನೀರು ಮಾಡಿ, ನೀರಲ್ಲಿ ನೀನಿದ್ದು, ನೀರನ್ನೇ ನೋಡಿ ನುಡಿಯುವಂತೆ ಮಾಡಿದ ವಾಹಕನೂ ನೀನೇ; ಅದರ ಚಾಲಕನೂ ನೀನು.

ಜಲಜನಕವೂ ನಿನ್ನ ಗರ್ಭದಲ್ಲಿ, ಆಮ್ಲಜನಕವೂ ನಿನ್ನ ಗರ್ಭದಲ್ಲಿ. ಜಲಜನಕವನ್ನು

ಉರಿಯುವಂತೆ ಮಾಡಿದೆ; ಆಮ್ಲಜನಕವನ್ನು ಉರಿಸುವಂತೆ ಮಾಡಿದೆ. ಅವೆರಡನ್ನೂ ಕೂಡಿಸಿ ತಣ್ಣನೆಯ ಜಲವನ್ನು ಮಾಡಿದೆ. ಉರಿಯುವ ಗುಣ ನಿನ್ನದೇ, ಉರಿಸುವ ಗುಣ ನಿನ್ನದೆ, ತಣ್ಣಗಾಗಿಸುವ ಗುಣವೂ ನಿನ್ನದೇ. ನೀನು ವಾಹಕನೂ ಆಗಿರುವಿ; ಚಾಲಕನೂ ಅಗಿರುವ ನಿರ್ಗುಣಿ ನೀನು. ಸಕಲ ಗುಣಗಳಿಗೂ ಅತೀತನು ನೀನು.

ಜಲಬಿಂದುವನ್ನೇ ನೋಡುವಂತೆ ಮಾಡಿದೆ, ನುಡಿಯುವಂತೆ ಮಾಡಿದೆ. ಮುಟ್ಟಿ, ಮೂಸಿಸಿ, ರುಚಿಸುವಂತೆ ಮಾಡಿದೆ. ಎಲ್ಲವೂ ಮಾಡಿದ ನಿನ್ನನ್ನು ನೋಡಲು ಬಾರದಂತೆ ಮಾಡಿದೆ. ನಿನ್ನಿಂದ ಆದ ವಸ್ತು ನೀನೆ; ನಿನ್ನ ಹೊರತುಪಡಿಸಿ ಅನ್ಯವಲ್ಲ ಎಂದು ತಿಳಿಯದಂತೆ ಮಾಡಿದೆ. ಸಕಲವನ್ನೂ ಸರಿಮಾಡಿ ನುಂಗುವ ಮಹಾವೀರ ನೀನು. ಅಮೃತವನ್ನು ವಿಷವನ್ನು ನುಂಗುವ ನೀಲಕಂಠ ನೀನು. ನಿನಗೆ ಎರಡೂ ಒಂದೇ. ಅಮೃತವೂ ಅಮೃತವೇ; ವಿಷವೂ ಅಮೃತವೇ!

ಬಿಂದುವಿನಲ್ಲಿಯೇ ನಂಜು ಇದೆ; ನಂಜುಣ್ಣುವ ನಂಜುಂಡನೂ ಬಿಂದುವಿನಲ್ಲಿಯೇ ಇದ್ದಾನೆ. ಒಂದೇ ತನು. ರಾಮನೂ ಅವನೇ ರಾವಣನೂ ಅವನೇ. ಕೃಷ್ಣನೂ ಅವನೇ ಕಂಸನೂ ಅವನೇ. ಬಯಲಲ್ಲಿದ್ದ ಜಲಜನಕ ಆಮ್ಲಜನಕ ಜಲವಾಗಿ ಸುನಾಮಿಯಾದಂತೆ. ಕಡಲ ಸೀಳಿ ಅಲೆಯಾಗಿ ಅಪ್ಪಳಿಸಿದಂತೆ. ಜಲವೇ ಜಲಚರವಾಗಿ ಮತ್ಸ್ಯಾವತಾರ ತಾಳಿದಂತೆ. ಜಲವೇ ಕುದ್ದು ಆವಿಯಾಗಿ ಬಯಲು ಸೇರಿದಂತೆ.

ಮನ ಬಯಸಿದರೆ ಕೃಷ್ಣನಾಗಬಹುದು; ಕಂಸನೂ ಆಗಬಹುದು. ದೇಹ ಮಾತ್ರ ಒಂದೇ. ಕೃಷ್ಣನೆಂದರೆ ಬಯಲು. ಬಯಲನ್ನೇ ಉಂಡು ಬಯಲಾದವನು. ಮನಕ್ಕೆ ದೇಹವೆಂದರೆ ಇಷ್ಟ. ದೇಹವನ್ನು ಹಿಡಿದು ದೇಹವನ್ನೇ ಉಣ್ಣಲು ಹೋಗುತ್ತದೆ. ದೇಹದಲ್ಲಿಯೇ ಸುಖ ದುಃಖಗಳನ್ನೂ ಉಂಟು ಮಾಡುತ್ತದೆ. ಇವೆರಡೂ ಮನಕ್ಕೆ ಸುಖವೇ ಆಗಿದೆ. ಜಲದಲ್ಲಿಯೂ ನೊರೆತೊರೆ ಸುನಾಮಿ ಎದ್ದಂತೆ. ಜಲದಲ್ಲಿಯೇ ಪ್ರಳಯವಾದಂತೆ; ತನುವಿನಲ್ಲಿಯೂ ಪ್ರಳಯವಾಗುತ್ತದೆ. ಆದರೆ ಉಣ್ಣುವ ಶಕ್ತಿ ಮನಕ್ಕೆ ಇಲ್ಲ. ಮನವನ್ನು ಸೃಷ್ಟಿ ಮಾಡಿದ ನಂಜುಂಡನಿಗೆ ಮಾತ್ರ ಇದೆ. ತನು ನಂಜು ಮತ್ತು ನಂಜುಂಡರಿದ್ದ ಬಯಲ ಕುರುಹು. ಕುರುಹು ಹಿಡಿದು ನೋಡಬೇಕು, ಕುರುಹು ಹಿಡಿದು ಅರಿಯಬೇಕು. ಕುರುಹು ಹಿಡಿದು ಪೂಜಿಸಬೇಕು. ಎಲ್ಲವನೂ ಸರಿಮಾಡಿ ಉಣ್ಣುವ ಜಾಣ್ಮೆ ಸಕಲ ತನುಗಳಿಗೂ ಇದೆ. ತನು ಇರುವಾಗಲೆ ತನುವಿನಲ್ಲಿಯೇ ತನ್ಮಯವಾದ ತನುವಿನ ಈ ಸತ್ಯವನ್ನು ತನುವೇ ಕಂಡುಕೊಳ್ಳಬೇಕು.

**318**

**ಎಲ್ಲ ಹೆಂಗೂಸುಗಳು ಬಂದು, ಮುಟ್ಟಿ ಮೂವಟ್ಟೆಯ**
**ನೆರೆವಳು ನಲ್ಲನ ಇವಳೈವರವರೆಲ್ಲರ**
**ನಾವೀ ಮೂಗನ ನೆರೆವೆವವ್ವಾ**
**ಉಸರದೆ ಬಂದವನ, ಉಸರದೆ ನೆರೆವ**
**ಕಪಿಲಸಿದ್ಧ ಮಲ್ಲಿನಾಥನ.**

ವ್ಯಾಸರು, ಮಹಾಭಾರತದಲ್ಲಿ ಐವರು ಪಾಂಡವರಿಗೆ ದ್ರೌಪದಿಯೊಬ್ಬಳನ್ನೇ ಹೆಂಡತಿಯನ್ನಾಗಿಸಿದ್ದಾರೆ. ಸಿದ್ಧರಾಮ ಶಿವಯೋಗಿಗಳು ಬಲು ಜಾಣರು. ಒಬ್ಬ ಮೂಗ ಗಂಡನಿಗೆ ಐದು ಜನ ಹೆಂಡತಿಯರನ್ನಾಗಿಸಿದ್ದಾರೆ.

ಕಣ್ಣಿನ ಮೂಲಕ ಕಾಮಿಸುವವಳು ಒಬ್ಬಳಾದರೆ; ಕಿವಿಯ ಮೂಲಕ ಕೇಳಿ ಕಾಮಿಸಿ ನೆರೆವವಳು ಮತ್ತೊಬ್ಬಳು. ಕಣ್ಣಲ್ಲಿದ್ದ ನಲ್ಲ ನೋಡಬಲ್ಲನೆ ಹೊರತು ಮಾತನಾಡಲಾರ. ಅವನು ಮೂಗ. ಕಿವಿಯಲ್ಲಿದ್ದವನು ಕೇಳಬಲ್ಲ ನಲ್ಲನೆ ಹೊರತು ಮಾತನಾಡಲಾರ. ಇವನು ಕೂಡಾ ಮೂಗ. ಚರ್ಮದಲ್ಲಿ ಸಂಗಮವಾದ ನಲ್ಲನು ಕೂಡಾ ಮೂಗ. ಇವನನ್ನು ನಲ್ಲೆ ಮುಟ್ಟಿ ಮೈಮರೆತು ಅಲ್ಲಿಯೇ ಲೀನವಾಗಿ ಕೂಡದ ಅಗಲದ ಕೂಟದ ಅರಿವಿನ ರತಿ ಸುಖವನು ಅನುಭವಿಸುವಳು.

ಮೂಗಿನಲ್ಲಿಯೇ ಸಂಗಮವಾದ ನಲ್ಲ ಕೂಡಾ ಮೂಗ. ಅವನು ಉಸರದೇ ಬಂದವನು. ಸುಗಂಧ ದುರ್ಗಂಧಗಳನ್ನು ಹೊರಚೆಲ್ಲಿ ಅರಿವಿನ ಪರಿಮಳವನ್ನು ಮಾತ್ರ ಸ್ವೀಕರಿಸುವನು. ಇಂತಹ ನಲ್ಲನೊಂದಿಗೆ ಸುಖಿಸಿ ಒಂದಾಗಿರ್ದ ನಲ್ಲೆ ಬಲು ಜಾಣಳು.

ನಾಲಿಗೆಯ ಮೇಲೆ ನಿಂದು ನಾಟ್ಯವಾಡುವ ನಲ್ಲೆ ಅಲ್ಲಿಯೇ ಸಂಗಮವಾದ ಅರಿವಿನ ನಲ್ಲನನ್ನು ಸುಖಿಸಲು ಅಣಿಯಾದಳು. ತನ್ನ ಸುಖದ ನವರಸಗಳನ್ನು ಕಳೆದುಕೊಂಡ ನಲ್ಲೆ ಬ್ರಹ್ಮರಸಕ್ಕೆ ಮರುಳಾದಳು.

ನಾಲಿಗೆಯ ಮೇಲೆ ನಾಟ್ಯವಾಡುವ ನಲ್ಲೆ ತನ್ನ ರುಚಿಗಾಗಿ ಇಡೀ ತನುವನ್ನೇ ಸೋಲಿಸಿ ಅನಂತ ಕಾಲಗಳವರೆಗೆ ಯಾಮಾರಿಸಿ ತನ್ನ ಸ್ವಾಧೀನಪಡಿಸಿಕೊಂಡ ನಲ್ಲೆ; ನಾಲಿಗೆಯಲ್ಲಿಯೇ ಸಂಗಮವಾದ ಅರಿವಿನ ಪರಿಮಹಂಸನೊಂದಿಗೆ ಕೂಡಿದಳು. ಕೂಡದ ಅಗಲದ ಕೂಟದ ಸುಖವನ್ನು ಮಾತನಾಡದ ಮೂಗನೊಂದಿಗೆ ಮಾತನಾಡದೆ ಅನುಭವಿಸಿದಳು.

ನಾಲಿಗೆ ಮೇಲಿದ್ದ ನಲ್ಲೆಗೆ ರುಚಿ ಅರುಚಿ ಗೊತ್ತೇ ಹೊರತು ನೋಡಲಾರಳು; ಕೇಳಲಾರಳು; ಮುಟ್ಟಲಾರಳು, ಮೂಸಿಸಲಾರಳು ಹೀಗಾಗಿ ಈಕೆ ಒಬ್ಬ ನಲ್ಲೆ.

ಮೂಗನ್ನು ಆವರಿಸಿದ ನಲ್ಲೆಗೆ ಸುಗಂಧ ದುರ್ಗಂಧದ ರುಚಿ ಮಾತ್ರ ಗೊತ್ತು. ಆಕೆ ಕೂಡಾ ನೋಡಲಾರಳು, ಕೇಳಲಾರಳು, ಮುಟ್ಟಲಾರಳು, ರುಚಿಸಲಾರಳು. ಹೀಗಾಗಿ ಈಕೆ ಮತ್ತೊಬ್ಬ ನಲ್ಲೆ.

ಕಿವಿಯನ್ನು ಆವರಿಸಿದ ನಲ್ಲೆ ಸು-ಶಬ್ದ, ಕು-ಶಬ್ದವನ್ನು ಕೇಳಿ ಸುಖಿಸಿ ದುಃಖಿಸುವಳೆ ಹೊರತು ನೋಡಲಾರಳು. ಮುಟ್ಟಿ-ಮೂಸಿಸಲಾರಳು. ರುಚಿಸಲಾರಳು. ಇವಳೆ ಮೂರನೆಯ ನಲ್ಲೆ.

ಚರ್ಮದ ಮೇಲೆ ನಾಟ್ಯವಾಡುವ ನಲ್ಲೆ ಮುಟ್ಟಿ, ಮುಟ್ಟಿಸಿಕೊಂಡು ಸುಖ ಹಾಗೂ ದುಃಖ ಪಡುತ್ತಾಳೆಯೇ ಹೊರತು ನೋಡಲಾರಳು. ಕೇಳುವ, ಮೂಸಿಸುವ, ರುಚಿಸುವ ಕಲೆ ಕೂಡಾ ಕರಗತವಾಗದವಳು. ಇವಳೇ ನಾಲ್ಕನೆಯ ನಲ್ಲೆಯಾಗಿದ್ದಾಳೆ.

ಕಣ್ಣಲ್ಲಿ ಆವರಿಸಿದ ನಲ್ಲೆ ಸಕಲವನ್ನು ನೋಡಿ ತನ್ನಂತೆ ಮಾಡಿಕೊಳ್ಳುವ ಸಾಮರ್ಥ್ಯ ಹೊಂದಿದ್ದಾಳೆ. ನೋಡುವ ಮುಕ್ಕಣ್ಣನ ಕಣ್ಣಿಗೆ ತನ್ನ ಕರಿ ಕಂಬಳಿಯನ್ನು ಹೊದಿಸಿ ತನಗೆ ತಿಳಿದಂತೆ ನೋಡುವ ಜಾಣ ನಲ್ಲೆ ಇವಳು. ಈಕೆ ಐದನೆಯವಳು.

ಹೀಗೆ ಒಬ್ಬ ನಲ್ಲನಿಗೆ ಐದು ನಲ್ಲೆಯರು. ವ್ಯಾಸ ಮಹರ್ಷಿಗಳು ಜಾಣರು. ಮಹಾಭಾರತ ರಚಿಸುವ ವೇಗದಲ್ಲಿ ಸ್ವಲ್ಪ ತಿರುವು ಮರುವು ಆಗಿದೆ ಅಷ್ಟೆ. ಸಿದ್ಧರಾಮ ಶಿವಯೋಗಿ ಜಾಣರ ಜಾಣ.

ಎಲ್ಲ ಹೆಂಗೂಸುಗಳು ಬಂದು ಮುಟ್ಟಿ ಮೂವಟ್ಟೆಯ ನೆರೆವಳು ನಲ್ಲನ ಇವಳೈವರವರೆಲ್ಲರ ನಾವೀ ಮೂಗನ ನೆರೆವೆವವ್ವಾ ಉಸರದೆ ಬಂದವನ, ಉಸರದೆ ನೆರೆವ ಕಪಿಲಸಿದ್ಧ ಮಲ್ಲಿನಾಥನ.

ಐದು ಸಾಲಿನ ವಚನದಲ್ಲಿ ಸಿದ್ಧರಾಮ ಶಿವಯೋಗಿಗಳು ಮಹಾ ಭಾರತದಲ್ಲಿ ಹೇಳಬೇಕಾದುದನೆಲ್ಲ ಹೇಳಿ ಮುಗಿಸಿದ್ದಾರೆ. ವ್ಯಾಸ ಮಹರ್ಷಿಗಳು ಒಂದಂಗದಲ್ಲಿ ಐದು ಜನ

ಗಂಡಂದಿರನ್ನು ಸೃಷ್ಟಿ ಮಾಡಿದ್ದಾರೆ. ಈ ಐದು ಜನ ಗಂಡಂದಿರಿಗೆ ಹೆಂಡತಿ ದ್ರೌಪದಿಯನ್ನು ಮಾತ್ರ ಸೃಷ್ಟಿ ಮಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ಒಂದಂಗದಲ್ಲಿಯೇ ಸಂಗಮವಾದ ಅರಿವಿನ ನಲ್ಲನನ್ನು ವರಿಸಲು ಐದು ನಲ್ಲೆಯರನ್ನು ಸೃಷ್ಟಿ ಮಾಡಿದ್ದಾರೆ. ಇದು ಸೃಷ್ಟಿ ಎನ್ನಲು ಕೂಡಾ ಬರುವುದಿಲ್ಲ; ನಿಜವಾದುದೂ ಆಗಿದೆ. ಬಸವಣ್ಣನವರು ಕೂಡಾ ಈ ಕೆಳಗಿನಂತೆ ಹೇಳಿದ್ದಾರೆ: ''ಅವಳ ವಚನ ಬೆಲ್ಲದಂತೆ, ಹೃದಯದಲ್ಲಿಪ್ಪುದು ನಂಜು ಕಂಡಯ್ಯಾ, ಕಂಗಳಲೊಬ್ಬನ ಕರೆವಳು, ಮನದಲೊಬ್ಬನ ನೆನೆವಳು. ಕೂಡಲಸಂಗಮದೇವಾ ಕೇಳಯ್ಯಾ, ಮಾನಸಗಳ್ಳಿಯ ನಂಬದಿರಯ್ಯಾ''.

ಕಣ್ಣೊಳಗೆ ಕಣ್ಣುದ್ದು ಕಾಣದಂತೆ ಕಣ್ಣಿಗೆ ಕರಿ ಕಂಬಳಿ ಹೊದಿಸಿದ ನಲ್ಲೆ, ನಿಜ ಕಣ್ಣಲ್ಲಿ ಸಂಗಮವಾದ ಅರಿವಿನ ಕಣ್ಣಪ್ಪನೊಂದಿಗೆ ಕೂಡಿದಾಗಲೇ ಪರಮ ಸುಖವನ್ನು ಕಂಡುಕೊಳ್ಳುತ್ತಾಳೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾಳೆ.

**319**

**ಎಲ್ಲಿ ನೋಡಲು ತಾಯ ಕೊಂದವರೂಟ ಘನವಾಗಿದೆ.**
**ಈ ಗುಣ ಹರಿವ ಹಕ್ಕಿಗೆ ಸಂಬಂಧವಿಲ್ಲ.**
**ನಿಮ್ಮೂಟವಂ ಕಂಡವರೊಳರೆ ಚೆನ್ನಬಸವಣ್ಣನಲ್ಲದೆ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**
**ನಿಮ್ಮ ಧರ್ಮವಿಡಿದು ಚೆನ್ನಬಸವಣ್ಣನಿಂದ ಸುಖವ ಕಂಡೆನು.**

ಎಲ್ಲಿ ನೋಡಿದರೂ ಜಾತಿ ಮತ ಧರ್ಮ ನಾಮಂಗಳೇ ತನುವನ್ನು ಕಾಡುತ್ತಲಿವೆ. ಇದು ಆಯಾ ತನುಗಳಿಗೆ ಘನವಾಗಿದೆ. ಇದೇ ಪ್ರಧಾನವಾಗಿದೆ. ಜಾತಿ-ವರ್ಣ ನಾಮಗಳ ಗರ್ವದಿಂದ ತನು ಉಬ್ಬುತ್ತದೆ. ಕುಬ್ಜನಾಗುತ್ತದೆ.

ಜಾತಿ-ವರ್ಣ ನಾಮಂಗಳನ್ನು ಕೊಂದವರು ಎಲ್ಲಿಯೂ ಸಿಗುವುದಿಲ್ಲ. ಅದು ತನುವಿನ ಹಕ್ಕು. ಅದರ ಹೊರತಾಗಿ ತನುವನ್ನು ಆವರಿಸಿದ ಮನಕ್ಕೆ ಗಳಿಕೆ ಮಾಡುವುದಾದರೂ ಏನಿದೆ? ಮನದ ನಿಯಮವೇ ಹಾಗೆ. ಮನಕ್ಕೆ ದಾಸಾನು ದಾಸನಾದ ತನುವಿನ ಹಣೆಬರಹವೇ ಇಷ್ಟು.

ತನುವಿನಲ್ಲಿ ಜಾತಿ ವರ್ಣ ನಾಮಗಳ ಹೊರತಾಗಿ ಮತ್ತೊಂದು ಶಕ್ತಿ ಉಂಟೆಂದು ಮನಕ್ಕೆ ಅರಿವಾಗುವುದೇ ಇಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನೆಂಬ ನಲ್ಲನನ್ನು ಅಪ್ಪಿಕೊಂಡು ಸುಖಿಸುವವರ ಸಂಘವೂ ಇದೆಯೆಂದು ಮನಕ್ಕೆ ಅರಿವಾದರೆ, ತನ್ನ ತನುವನ್ನು ಆವರಿಸಿದ ಮನದ ಊಟ ಬದಲಾಗುತ್ತದೆ. ಅರಿವಿನ ಊಟ ಆರಂಭವಾಗುತ್ತದೆ.

ಅರಿವಿನ ಊಟ ಮಾಡುವವರ ಕೂಟವೇ ಇದೆ. ಅದು ಶರಣರ ಕೂಟ. ಅದರಲ್ಲಿ ಚೆನ್ನಬಸವಣ್ಣ ನಿಸ್ಸೀಮ. ಆತನ ಅರಿವಿನ ಧರ್ಮವಿಡಿದು ನಾನು ಸುಖವನ್ನು ಕಂಡೆ. ಏನೀ ಸುಖ. ಕೂಡದ ಅಗಲದ ಕೂಟದ ಸುಖ. ಸ್ವಸುಖ. ಈ ಸುಖಕ್ಕೆ ನಾನೊಬ್ಬನೆ ಸಾಕು. ನನ್ನೊಂದಿಗೆ ಯಾರೂ ಅವಶ್ಯವಿಲ್ಲ.

ಜಾತಿ ವರ್ಣ ನಾಮಂಗಳ ಸುಖ ಹಾಗಲ್ಲ. ನಾನು ಇಂಥವನೆಂದು ಹಲವರ ಮುಂದೆ ಹೇಳಬೇಕು. ತನ್ನನ್ನು ತಾನೇ ಬಣ್ಣನೆ ಮಾಡಿಕೊಳ್ಳಬೇಕು. ಅನಂತ ಕಾಲದಿಂದ ತನು ಈ ರೋಗಕ್ಕೆ ತುತ್ತಾಗಿತ್ತು. ಅರಿವಿನ ಸಂಗದ ಸ್ವಸುಖದಿಂದಾಗಿ ತನುವಿನ ರೋಗ ಉದುರಿ ಬಿತ್ತು.

ಕಪಿಲಸಿದ್ಧ ಮಲ್ಲಯ್ಯನೆ ನಿನ್ನ ಅರಿವಿನ ಧರ್ಮವಿಡಿದು ಚೆನ್ನಬಸವಣ್ಣನಿಂದ ಸುಖವ ಕಂಡೆನು.

**320**

**ಎಲೆ ಅಯ್ಯಾ, ಎನಗೆ ಜವ್ವನವೇರಿತ್ತಯ್ಯಾ, ಹರೆಯಹತ್ತಿತ್ತಯ್ಯಾ.**
**ಪ್ರಾಯ ಸಮರೂಪಿಗೆ ಬಂದಿತ್ತಯ್ಯಾ.**
**ಜವ್ವನಕ್ಕೆ ಜಯವಂತನಿಲ್ಲ, ಹರೆಯಕ್ಕೆ ಹರುಷಿತನಿಲ್ಲ.**
**ಪ್ರಾಯಕ್ಕೆ ಪ್ರೌಢಿಗನಿಲ್ಲದೆ ಭ್ರಮೆಬಡುತ್ತಿದ್ದೇನಯ್ಯಾ.**
**ಜವ್ವನಿಗೆ ಜಯವ ಮಾಡಿದಡೆ ಆನು ಬದುಕುವೆನಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಯೌವ್ವನದ ಹರೆಯ ಅದರ ಪ್ರೌಢತ್ವ ಸಕಲ ತನುಗಳಿಗೂ ಬರುವುದು ಸಹಜ. ಯೌವ್ವನದ ಸಂಕೇತ ಮತ್ತೊಂದು ತನುವಿಗೆ ಜನ್ಮ ನೀಡುವುದೇ ಆಗಿದೆ. ತನುವು ತನುವಿನೊಂದಿಗೆ ಕೂಡುವ ಕೂಟದ ಮೂಲಕ ಮತ್ತೊಂದು ತನುವಿಗೆ ತನು ಜನ್ಮಕೊಡುತ್ತದೆ.

ಹೇಗೆ ತನುವಿನಲ್ಲಿ ತನುವಿಗೆ ಜನ್ಮ ಕೊಡುವ ಬಯಕೆ ಹುಟ್ಟುತ್ತದೊ ಹಾಗೆಯೇ ಅವ್ಯಕ್ತ ಮನವೆಂಬ ತನುವಿಗೆ ಅವ್ಯಕ್ತ ಜ್ಞಾನ ತನುವಿನೊಂದಿಗೆ ಕೂಡುವ ಪ್ರೌಢತ್ವದ ಯೌವ್ವನ ಬಂದಾಗ ಅವ್ಯಕ್ತ ತನುವಿನೊಂದಿಗೆ ಅವ್ಯಕ್ತ ಮನವೆಂಬ ತನುವು ಕೂಡಿ ಕೂಡದ ಅಗಲದ ಕೂಟದ ಜ್ಞಾನ ಸವಿಯನ್ನು ಉಣ್ಣುತ್ತದೆ. ಈ ಕೂಟ ಭೌತಿಕ ತನುವಿನೊಂದಿಗೆ ಮತ್ತೊಂದು ಭೌತಿಕ ತನು ಕೂಡುವ ಕೂಟದಂತಲ್ಲ. ಅದು ಕೂಡದ ಅಗಲದ ಕೂಟದ ಸುಖ. ಪರಮ ಸುಖ!

ಜ್ಞಾನದ ಪರಮ ಸುಖ ಹೊಂದುವ ಪ್ರಾಯ ಜವ್ವನದವುತ್ತು ತನುವಿಗೆ ಅರಿವಾದಾಗಲೇ ಈ ಘಟನೆ ತನುವಿನಲ್ಲಿಯೇ ನಡೆಯುತ್ತದೆ. ಆಗ ತನುವಿಗೆ ಮತ್ತೊಂದು ತನುವಿನ ಅವಶ್ಯಕತೆಯಿಲ್ಲ.

ತನುವು ತನುವಿನೊಂದಿಗೆ ಸುಖಪಡುವ ಜವ್ವನ ಜಯವಂತನಿಲ್ಲದ ಜವ್ವನ. ಹರುಷಿತನಿಲ್ಲದ ಜವ್ವನ. ಪ್ರೌಢಿಗನಿಲ್ಲದ ಜವ್ವನ. ಪ್ರಾಯ ಸಮರೂಪಿಗೆ ಬಾರದ ಜವ್ವನ. ಹರೆಯವಿಲ್ಲದ ಜವ್ವನ. ಅದು ಪ್ರೌಢತ್ವವಿಲ್ಲದ ಕನ್ಯೆಯೊಂದಿಗೆ ಸುಖಿಸಿದಂತಹ ಸುಖವಲ್ಲದ ಸುಖ.

ಜವ್ವನದ ಜಯವಂತನ ಸುಖ ಹಾಗಲ್ಲ. ಪ್ರಾಯಕ್ಕೆ ಬಂದ ತನುವಿನ ಭ್ರಮೆಯನ್ನು ಬೀಸಿ ಒಗೆಯುತ್ತಾನೆ; ಜವ್ವನಕ್ಕೆ ಬಂದ ಜಯವಂತನೊಂದಿಗೆ ಕೂಡಿ, ಕೂಡದ ಅಗಲದ ಕೂಟದ ಸುಖವನ್ನು ಉಂಡು ಆನು ಬದುಕುವೆನಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**321**

**ಎಲೆ ಅಯ್ಯ, ಎಲೆ ನಲ್ಲ,**
**ಎನ್ನ ಮಾಯೆ ಮಕ್ಕಳು ದಂಡು ಕೇಳಾ.**
**ಅಹಾ! ಅಯ್ಯಾ ಎನ್ನ ಮನದ ಬೆನ್ನ ಬೆನ್ನ ಬಾರೊ.**
**ಬಂದು ನಿಂದು ಕೂಡಿಸಯ್ಯಾ.**
**ಅಯ್ಯಾ ಎನ್ನ ಮನ ಸಂಗಡ ನಿಮ್ಮ ಕಂಡಡಿ ಮಾಡುವುದು**

ಕಪಿಲಸಿದ್ಧ ಮಲ್ಲಿನಾಥಯ್ಯನ.

ಮನಕ್ಕೆ ತನ್ನ ನಲ್ಲ ಯಾರು ಎಂದು ತಿಳಿದ ಮೇಲೆ, ಎಲೆ ಅಯ್ಯಾ ಎಂದು ಗೋಗರೆದು ಕರೆಯುತ್ತಾಳೆ ನಲ್ಲೆ. ಬಾರದಿದ್ದರೆ ಎನ್ನ ನಲ್ಲನೆ, ಎಲೆ ನಲ್ಲನೆ ಎಂದು ಆಲಾಪಿಸುತ್ತಾಳೆ. ತನಗೆ ತೊಡಕಾದ ಮಾಯೆಯನ್ನು ಅದರ ಅಜ್ಞಾನದ ಪೊರೆಯನ್ನು ನೀನೆ ಹರಿದು ಹಾಕು ತಂದೆ ಎಂದು ಪರಿಪರಿಯಿಂದ ಕರೆದು ಎನ್ನ ಬೆನ್ನ ಬೆನ್ನ ಬಾರೊ. ಬಂದು ನಿಂದು ಎನ್ನನ್ನು ಬರಸೆಳೆದು ನಿನ್ನ ಸುಖದಲ್ಲಿ ಕೂಡಿಸಯ್ಯಾ. ನಿನ್ನ ಪರಮ ಸುಖವನ್ನು ಎನಗೆ ಉಣ್ಣಿಸು ತಂದೆ.

ನಿನ್ನ ಪಾದಕ್ಕೆರಗಿ ಬಾಗಿ ನಿನಗೆ ದಾಸಾನು ದಾಸನಾಗುವಂತೆ ಮಾಡು ತಂದೆ. ನಿನಗೆ ಶರಣು ಹೋಗುವಂತೆ ಎನಗೆ ಆಶೀರ್ವದಿಸು ಪರಮಾತ್ಮನೆ ಎಂದು ಮನ ಪರಿಪರಿಯಿಂದ ಕೇಳಿದರೂ ಕೂಡಾ ಮನವನ್ನು ಸೃಷ್ಟಿ ಮಾಡಿದ ನಲ್ಲ ನಲ್ಲೆಯ ಕಣ್ಣಿಗೆ ಬೀಳುವುದಿಲ್ಲ.

ಅನಂತ ಕಾಲದವರೆಗೆ ನಲ್ಲ ನಲ್ಲೆಯನ್ನು ಅಪ್ಪಿಕೊಂಡು ತನ್ನಂತೆ ಮಾಡಿಕೊಳ್ಳಲು ಪ್ರಯತ್ನಿಸಿದರೂ; ನಲ್ಲೆಗೆ ನಲ್ಲನೆಂದರೆ ಯಾರು ಎಂದು ತಿಳಿದಿರಲಿಲ್ಲ. ತಾನು ತನ್ನ ಮಕ್ಕಳೊಂದಿಗೆ, ಮಕ್ಕಳ ದಂಡಿನೊಂದಿಗೆ ಸುಖವಾಗಿದ್ದಳು.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತ ವ್ಯಸನಗಳು, ಅಷ್ಟ ಮದಗಳೆಂಬ ಇಪ್ಪತ್ತೊಂದು ಮಕ್ಕಳ ದಂಡು ಮನವೆಂಬ ನಲ್ಲೆಗೆ ರಕ್ಷಣೆಯಾಗಿ ನಿಂತು ಸುಖ ಕೊಡುವಾಗ; ಆ ಸುಖದಲ್ಲಿಯೇ ಮನವೆಂಬ ನಲ್ಲೆ ಅನಂತ ಕಾಲದವರೆಗೆ ನಲ್ಲನೆಂದರೆ ಯಾರು ಎಂದು ತಿಳಿಯುವ ಗೋಜಿಗೆ ಹೋಗಿರಲಿಲ್ಲ. ಮಕ್ಕಳ ದಂಡಿನಿಂದ ಮನಕ್ಕೆ ಒಮ್ಮೆ ಸುಖವಾದರೆ ಮತ್ತೊಮ್ಮೆ ದುಃಖವಾಗುತ್ತಿತ್ತು.

ಮನವೆಂಬ ನಾನು ಮಕ್ಕಳ ದಂಡಿನೊಂದಿಗೆ ಅನುಭವಿಸುವ ಸುಖ ಸುಖವೂ ಅಲ್ಲ ದುಃಖ ದುಃಖವೂ ಅಲ್ಲ ಎಂದು ಶರಣರ ದಂಡಿನಿಂದ ತಿಳಿದಾಗ ಸ್ವತಃ ತಾನೇ ತನ್ನ ಅರಿವಿನ ನಲ್ಲನನ್ನು ತಿಳಿಯ ಹತ್ತಿದಳು. ತಿಳಿ ತಿಳಿದು ತಿಳಿಯಾಗಿ ನಲ್ಲನೊಂದಿಗೆ ರಮಿಸಲು ಹೋದಂತೆಲ್ಲ ಆತ ಬಹುದೂರ ಹೋಗುತ್ತಿದ್ದ. ನಲ್ಲ ಹತ್ತಿರವಾದಾಗ, ನಲ್ಲೆಗೆ ನಲ್ಲನ ಪರಿಚಯವಿರಲಿಲ್ಲ. ನಲ್ಲೆಗೆ ನಲ್ಲನ ಪರಿಚಯವಾದಾಗ ನಲ್ಲ ಮುನಿಸಿಕೊಂಡ. ಇದು ದೇಹವೆಂಬ ಮನೆಯಲ್ಲಿ ನಲ್ಲೆ ನಲ್ಲನ ಆಟ ಹೀಗೆ ಅನಂತಕಾಲದವರೆಗೂ ನಡೆಯುತ್ತದೆ. ಇಂತಹ ಸುಖವೂ ಕೂಡಾ ಮನ ಅನುಭವಿಸುತ್ತದೆ.

ಮನವೆಂಬ ನಲ್ಲೆಯ ಮುಂದೆ ತನ್ನ ಮಕ್ಕಳೇ ಕಾಣುವಾಗ ಬೆನ್ನ ಹಿಂದೆ ನಲ್ಲನಿದ್ದು ನಲ್ಲೆಯನ್ನು ಎಚ್ಚರಿಸುತ್ತಿದ್ದ. ಬೆನ್ನ ಹಿಂದೆ ದೇವರಿದ್ದರೂ ಆ ದೇವರನ್ನು ಕಟ್ಟಿಕೊಂಡು ದೇವರ ದರುಶನಕ್ಕೆ ಹೋಗುವ ನಲ್ಲೆಯನ್ನು ನಲ್ಲ ಎಚ್ಚರಿಸುತ್ತಿದ್ದ.

ನೀನು ನಮಸ್ಕರಿಸುವ ದೇವರು ದೇವರೇ ಅಲ್ಲ. ಆ ದೇವರನ್ನು ಒಮ್ಮೆ ನೋಡು. ಅದು ನೀನು ಮಾಡಿದ ದೇವರು. ನಿನ್ನನ್ನು ಹಡೆದ ನಿನ್ನ ದೇವರು ನಿನ್ನ ಬೆನ್ನ ಹಿಂದೆಯೇ ಇದ್ದಾನೆ ಎಂದು ದೇವರೇ ನುಡಿದು ಹೇಳುವ ಮಾತು ಮನಕ್ಕೆ ಅರ್ಥವಾಗಲಿಲ್ಲ. ಏಕೆಂದರೆ ಮನದ ಮುಂದೆ ತನ್ನ ಅರಿಷಡ್ವರ್ಗಗಳೆಂಬ ಆರು ಮಕ್ಕಳು, ಸಪ್ತವ್ಯಸನಗಳೆಂಬ ಏಳು ಮಕ್ಕಳ, ಅಷ್ಟಮದಗಳೆಂಬ ಎಂಟು ಮಕ್ಕಳ ಮೋಜು ಅವುಗಳ ಚೆನ್ನಾಟ ತನ್ನ ಎದುರಿಗೆ ನರ್ತಿಸುತ್ತಿತ್ತು. ಹೀಗಾಗಿ ಬೆನ್ನ ಹಿಂದೆಯೆ ಇದ್ದು ಮಾತನಾಡುವ ದೇವರನ್ನು ನೋಡಲಿಲ್ಲ. ತಾನು ಮಾಡಿದ ದೇವರನ್ನು ಸಹ ಕಣ್ಣು ಮುಚ್ಚಿ ನೋಡಿ ಅಡಿಗೆ ಎರಗಿದಳು. ಕಣ್ಣು ತೆರೆದು ನೋಡಿ ನಮಸ್ಕರಿಸಲು ಹೋದರೆ ಅದು ದೇವರಲ್ಲ ಕಲ್ಲೆಂದು ತಿಳಿಯುತ್ತಿತ್ತು.

ದೇವರನ್ನು ಬೆನ್ನ ಹಿಂದೆ ಹೊತ್ತುಕೊಂಡು ದೇವರ ಬಳಿ ಹೋದ ನಲ್ಲೆ ಬೆನ್ನ ಹಿಂದೆ ತಿರುಗಿ ನೋಡದೆ ಹಿಂದೆ ಹಿಂದೆ ಸರಿದಳು. ಬೆನ್ನ ಹಿಂದಿರುವ ಅರಿವಿನ ನಲ್ಲನನ್ನು, ನಲ್ಲೆ ನೋಡಿದರೆ ಸಾಕು ಕೈಹಿಡಿದೆಳೆದು ಬರಸೆಳೆದು ಬಿಗಿದಪ್ಪಿಕೊಳ್ಳುವನು. ಆತ ಅಪ್ಪಿಕೊಂಡರೆ ಇಪ್ಪತ್ತೊಂದು ಮಕ್ಕಳು ವ್ಯರ್ಥ ಸಾಯುತ್ತವಲ್ಲ ಎನ್ನುವ ಭಯ ಮನಕ್ಕೆ. ಮನದ ಅಜ್ಞಾನ ಒಂದೆಡೆಯಾದರೆ ಅರಿವಿನ ಮಲ್ಲಯ್ಯನ ಚಿನ್ನಾಟ ಮತ್ತೊಂದೆಡೆ ಜೀವನ ಪರ್ಯಂತ ಸಾಗುತ್ತದೆ.

**322**

**ಎಲೆ ಅಯ್ಯ, ಎಲೆ ನಲ್ಲ,**
**ನಿನ್ನ ಕೈಯ ಬಿಲ್ಲ ಗುಣವ ಕಂಡೆ ನಾನಯ್ಯಾ.**
**ಗುರಿ ಎರಡ ಕೊಂದಂಬನೆಸುವ**
**ಅದ ಒಂದೆಡೆಗೆ ಬರ ಹರಿಯ ಹುಟ್ಟ ಹರಿಯಲೆಸುವ**
**ವಿರಿಂಚನ ಬಿಡ! ಅಭಿನ್ನದಲೆಸುವ!**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯನು.**

ತನುವಿನಲ್ಲಿ ತನ್ಮಯವಾದ ಅರಿವಿನ ನಲ್ಲನ ಆಟವೇ ಹೀಗೆ. ತನುವಿನಲ್ಲಿ ತಾನಿದ್ದು; ತನ್ನನ್ನು ತಿಳಿಯದ ಮನವನ್ನು ಸೃಷ್ಟಿ ಮಾಡಿದ್ದಾನೆ. ತನುವಿನೊಂದಿಗೆ ಮನದ ಬಯಕೆಗಳನ್ನು ಈಡೇರಿಸಿಕೊಳ್ಳುವ ಗುಣಗಳನ್ನು ಮನಕ್ಕೆ ದಾನ ಮಾಡಿದ್ದಾನೆ.

ಮನದ ಬಯಕೆಗಳು ವಿಪರೀತ. ಒಂದು ತನುವನ್ನು ಮನ ರಕ್ಕಸನನ್ನಾಗಿಸಿದೆ; ಮತ್ತೊಂದು ತನುವನ್ನು ಆ ರಕ್ಕಸನನ್ನು ಕೊಲ್ಲುವ ರಾಜನನ್ನಾಗಿಸಿದೆ. ಒಂದು ತನು ಭಿಕ್ಷುಕನಾದರೆ ಮತ್ತೊಂದು ತನು ಶ್ರೀಮಂತ. ಒಂದು ಹೆಣ್ಣಾದರೆ ಮತ್ತೊಂದು ಗಂಡು, ಒಂದು ತನು ಅಧಿ ಕಾರಿಯಾದರೆ ಮತ್ತೊಂದು ಸೇವಕ.

ಮನ ಒಂದು ತನುವನ್ನು ತನ್ನ ಗುಣದಿಂದ ಕಾಲಾಳನ್ನಾಗಿಸಿದೆ; ಮತ್ತೊಂದು ತನುವನ್ನು ರಾಜನನ್ನಾಗಿಸಿದೆ. ತನು ಒಂದೇ ತನುವನ್ನು ಆವರಿಸಿದ ಮನ ಒಂದೇ. ತನುವಿನಲ್ಲಿ ತನ್ಮಯವಾದ ಭಗವಂತನು ಕೂಡಾ ಒಬ್ಬನೇ ಆಗಿದ್ದಾನೆ.

ಭಗವಂತನ ದೃಷ್ಟಿಯಲ್ಲಿ ತನುವೇ ವಿಷ್ಣು. ತನುವನ್ನು ಆವರಿಸಿದ ಮನವೇ ಬ್ರಹ್ಮ. ತನುವಿಗೆ, ತನುವನ್ನು ಆವರಿಸಿದ ಮನಕ್ಕೆ ಜನ್ಮ ಕೊಟ್ಟು ಆ ತನುವಿನಲ್ಲಿಯೇ ಇದ್ದ ಅರಿವಿನ ಶಿವನ ಆಟ ಇದು.

ಮನ, ತನುವಿನಲ್ಲಿಯೇ ತನ್ಮಯವಾದ ಅರಿವಿನ ಶಿವನನ್ನು ಅರಿಯಲು ಹೋದರೆ ಮನದ ಸಕಲ ಭ್ರಮೆಗಳು ಆತನ ನೋಟದ ಬಾಣಗಳಿಂದ ಕಳಚಿ ಬೀಳುತ್ತವೆ. ಭ್ರಮೆ ಕಳೆದಿಕೊಂಡ ಮನವೇ ಬ್ರಹ್ಮನಾಗುತ್ತದೆ. ಸಕಲ ಅಜ್ಞಾನವನ್ನು ಹರಿದುಕೊಂಡ ತನುವೇ ಹರಿಯಾಗುತ್ತದೆ.

ಶಿವನ ಬಾಣ ಒಂದೇ; ಆದರೆ ಗುರಿ ಎರಡು. ಹರಿಯನ್ನು ಹರಿದು ಹಾಕುವ, ಬ್ರಹ್ಮನನ್ನು ಬಿಡ. ಅಭಿನ್ನದಲ್ಲಿ ಅಲೆಸುವ ಪರಮಾತ್ಮ ಆತ. ಕಪಿಲಸಿದ್ಧ ಮಲ್ಲಿಕಾರ್ಜುನನು ಆತ.

ಅರಿವೇ ಗುರು! ಆ ಗುರುದೇವನೇ ಮಹಾದೇವ! ಆತ ಸದಾಶಿವನೂ ಆಗಿದ್ದಾನೆ! ಆತನನ್ನು ಕುರಿತು ಸಿದ್ಧರಾಮ ಶಿವಯೋಗಿ ಎಲೆ ಅಯ್ಯ; ಎಲೆ ನಲ್ಲ, ನಿನ್ನ ಕೈಯ ಬಿಲ್ಲ ಗುಣವ ಕಂಡೆ ನಾನಯ್ಯಾ:

ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆಯಲ್ಲಿ ಭ್ರಮೆ ನಾಟ್ಯವಾಡುತ್ತಲಿದೆ. ಅದನ್ನು ಹರಿದುಕೊಳ್ಳಲು ಸಾಧ್ಯವಾಗದ ಹರಿ ಒಬ್ಬ, ಭ್ರಮೆಗೆ ಒಳಗಾದ ಬ್ರಹ್ಮ ಒಬ್ಬನಾಗಿದ್ದಾನೆ. ತನು ಒಂದೇ ಆದರೂ ತನ್ಮಯವಾದ ಭಗವಂತನನ್ನು ಪಂಚಾನನ ಎಂದು ಕರೆದಿದ್ದಾರೆ. ಆತನ ಐದು ಕೈಗಳು ಐದೆಡೆ ಚಾಚಿವೆ. ಐದೂ ಕೈಗಳಲ್ಲಿ ಬಿಲ್ಲು ಇದೆ. ಬಾಣ ಒಂದೇ. ಆತನು ಬಿಟ್ಟ ಬಾಣದಿಂದ ಕೈಯ(ತನುವಿನ) ಗುಣಗಳೆಲ್ಲ ಉದುರಿಬಿದ್ದವು. ಹರಿವಿರಂಚಿಗಳಿಬ್ಬರೂ ಆತ ಬಿಟ್ಟ ಬಾಣದ ಗುರಿಗೆ ಈಡಾದರು.

ತನುವಿನ ಸಕಲ ಗುಣಗಳು ಕರಗಿ ನೀರಾಯಿತು. ತನು ನಿರ್ಗುಣಿಯಾಯಿತು. ಎಲೆ ನಲ್ಲ, ಎಲೆ ಅಯ್ಯಾ ಎಂದು ಮನ ಆಲಾಪಿಸುತ್ತ ನಲ್ಲನ ಅರ್ಧಾಂಗಿಯಾಗಿ ಆತನ ಅಪ್ಪಿಕೊಂಡಳು. ಅರ್ಧನಾರೀಶ್ವರಳೆಂದು ಕರೆಯಿಸಿಕೊಂಡಳು.

**323**

**ಎಲೆ ಆಯ್ಯಾ, ನಿನ್ನ ಬೆಳಗಿನ ಪರಿಯ ಕೇಳು ಕಂಡಾ.**
**ನಾನಾರೆಂಬುದ ತಿಳಿದು ನೋಡಿ**
**ಕಂಡು ಕಂಡು ಬೆಳಗ ಕಾಬ ಪರಿ ಎಂತು ಹೇಳಾ.**
**ಕಂಡುದು ಕಂಡು ಕಾಯದೊಳಗೆ ಸಂತವಿಡುವ ಪರಿ ಎಂತಯ್ಯಾ?**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**
**ನೀನೆನ್ನ ಮನವ ತಿಳಿವಡೆ ಅಸಾಧ್ಯವುಂಟೆ ದೇವರ ದೇವಾ?**

ತನುವನ್ನು ಸೃಷ್ಟಿ ಮಾಡಿ, ತನುವಿನೊಳಗಿದ್ದು ತನುವನ್ನು ಬೆಳಗುವ ನಿನ್ನ ಬೆಳಕಿನ ಪರಿಯೇ ವಿಚಿತ್ರವಾಗಿದೆ ಭಗವಂತನೆ! ಒಂದು ತನುವನ್ನು ಬೆಳಗುವೆ; ಅದೆಷ್ಟೋ ತನುಗಳನ್ನು ಕತ್ತಲಲ್ಲಿ ಇಡುವೆ. ಬೆಳಗುವ ಸೂರ್ಯ ಹಾಗಲ್ಲ; ತನ್ನ ಬೆಳಕನ್ನು ಸಕಲರ ಮೇಲೆಯೂ ಚೆಲ್ಲುತ್ತಾನೆ. ಅವನಲ್ಲಿ ತಾರತಮ್ಯವಿಲ್ಲ.

ಎಲೆ ಅಯ್ಯಾ, ನಿನ್ನ ಬೆಳಕಿನ ಪರಿ ಮಾತ್ರ ವಿಚಿತ್ರ. ತನುವಿಗೆ ಜನ್ಮವಿತ್ತು; ತನುವಿನೊಳಗೆ ತನ್ಮಯವಾಗಿದ್ದು, ತನು ಸೋಂಕದೆ, ತನುವಿನಲ್ಲಿಯೇ ಬೆಳಗುವ ನಿನ್ನ ಬೆಳಗಿನ ಪರಿಮಾತ್ರ ವಿಚಿತ್ರ ತಂದೆ. ತನುವಿನೊಳಗಿದ್ದು ತನುವಿಗೆ ತಿಳಿಯದಂತೆ ಬೆಳಗುವ ನಿನ್ನ ಬೆಳಕಿನ ಪರಿಯೇ ವಿಚಿತ್ರ.

ನಿನ್ನೊಂದಿಗೆ ಯುದ್ಧ ಮಾಡಿದ ಅರ್ಜುನನಿಗೆ ಒಲಿದೆ. ಪಾಶುಪತ ಅಸ್ತ್ರವನಿತ್ತು ಕರುಣಿಸಿದೆ. ಹೂ ಬಾಣದಿಂದ ನಿನ್ನನ್ನು ಎಚ್ಚರಿಸಲು ಬಂದ ಕಾಮನನ್ನು ಸುಟ್ಟೆ. ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡನನ್ನು ಕೈಲಾಸಕ್ಕೆ ಒಯ್ದೆ. ನಾನಾರೆಂಬುದನು ತಿಳಿದು ನೋಡಿ ಬೆಳಗುವ ನಿನ್ನ ಬೆಳಕಿನ ಪರಿಯೇ ವಿಚಿತ್ರ ತಂದೆ.

ನೀನೆ ಹಡೆದ ತನು ನಿನಗೆ ಗೊತ್ತಿಲ್ಲವೆ? ನೀನೇ ಹಡೆದ ಮನ ನಿನಗೆ ಗೊತ್ತಿಲ್ಲವೆ? ಕಿವಿ ಹಿಂಡಿ ಬೆಳಗಬೇಕಾದ ಮನವನ್ನು ಸಂತವಿಡುವ, ಪರಿಪರಿಯಿಂದ ಸಂತೈಸುವ, ಹಾಗೆ ಮಾಡಬೇಡವೆಂದು, ಅಡ್ಡದಾರಿ ಹಿಡಿದು ಹೋಗಬೇಡವೆಂದು ಗದ್ದ ಹಿಡಿದು ಬೇಡಿಕೊಳ್ಳುವ ನಿನ್ನ ಪರಿಯೇ ವಿಚಿತ್ರ ತಂದೆ.

ಸಕಲ ತನುಗಳಿಗೆ ನೀನೇ ಜನ್ಮ ಕೊಟ್ಟು, ಆ ತನುಗಳಲ್ಲೆಲ್ಲ ನೀನೇ ಸಂಗಮವಾಗಿ, ನಿನ್ನನ್ನು ಒಲಿಸಿಕೊಳ್ಳಲು ಆಪೇಕ್ಷೆ ಪಟ್ಟ ತನುವಿನ ಮುಂದೆ ಇಡುವ ನಿನ್ನ ಬೇಡಿಕೆಯೇ

ವಿಪರೀತವಾಗಿದೆ. ನೀನಿದ್ದ ನಿನ್ನ ಭಕ್ತರನ್ನು ನೀನು ಹೀಗೆ ವಿಪರೀತವಾಗಿ ಬೇಡುವುದುಂಟೆ? ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣಾ ಎಂದು ಬಸವಣ್ಣನವರೇ ನಿನ್ನನ್ನು ಕುರಿತು ಹೀಗೆ ಹೇಳಿದ ಮೇಲೆ ಉಳಿದ ತನುಗಳ ಗತಿ ಹೇಗೆ:

ಬಲ್ಲಾಳನ ವಧುವಿನೊಡನೆ ಸರಸವನಾಡಿ ಅವನಿಗೆ ಒಲಿದೆ. ಸಿರಿಯಾಳನ ಮಗನ ಬೇಡಿ ಅವನಿಗೆ ಒಲಿದೆ. ದಾಸನ ವಸ್ತ್ರವ ಸೀಳಿ ಅವನಿಗೆ ಒಲಿದೆ. ಪುರಾತನರು, ಶರಣರು ನಡೆದ ದಾರಿ ಭಯ ಕಾಣಿರಣ್ಣಾ. ದೇವನು ಒಳ್ಳಿದನೆಂದು ಮುಯ್ಯಾನಲು ಬೇಡ, ತರಕಟ ಕಾಡಿದನು ಒಳ್ಳಿದನೆ? ಅಳಿಸುವ ನಗಿಸುವವನು ಒಳ್ಳಿದನೆ? ಬೆಚ್ಚದೆ ಬೆದರದೆ ತೊತ್ತುತನವ ಮಾಡಲು ತನ್ನನ್ನೇ ಈವ ಕೂಡಲಸಂಗಮದೇವ.

ನಾನಾರೆಂಬುದನು ನಾನೇ ತಿಳಿದು ತಿಳಿದು, ನನ್ನನ್ನು ನಾನು ನೋಡಿಕೊಂಡರೆ ನನ್ನಲ್ಲಿಯೇ ಸಂಗಮವಾದ ನನ್ನನ್ನು, ನನ್ನ ಮನವನ್ನು ಹಡೆದ ತಂದೆ ನನಗೆ ಕಾಣುತ್ತಾನೆ. ಅವನನ್ನು ನೋಡುವ ಪರಿಯೇ ವಿಪರೀತ.

ಕಂಡುದನು ಕಂಡು ಕಾಯದೊಳಗೆ ಸಂತವಿಡುವ ಪರಿ ಎಂತಯ್ಯಾ: ಅವನ ಬೆಳಕಿನಲ್ಲಿ ದೋಷವಿಲ್ಲ. ಅವನ ಶಬ್ದದಲ್ಲಿ ದೋಷವಿಲ್ಲ. ಅವನ ಸ್ಪರ್ಶದಲ್ಲಿ ದೋಷವಿಲ್ಲ. ಅವನ ರುಚಿಯಲ್ಲಿ ದೋಷವಿಲ್ಲ. ಅವನು ಮೂಸಿಸುವ ಮೂಗಿನಲ್ಲಿಯೂ ದೋಷವಿಲ್ಲ. ಅವನಿಂದ ನೋಡುವ ನನ್ನ ಕಣ್ಣಲ್ಲಿ ದೋಷ. ನಾನು ನೋಡಿದರೆ, ನೋಡುವ ರೂಪದೊಂದಿಗೆ ತನು ಹಾದರಕ್ಕೆ ಇಳಿಯುತ್ತದೆ. ನನ್ನ ಕಂಗಳಿಂದ ನೀನು ಹೀಗೆ ನೋಡುವುದೆ? ಎಂದು ನನ್ನ ಕಾಯದಲ್ಲಿಯೇ ಪರಿಪರಿಯಿಂದ ಸಂತವಿಡುವ ಅವನ ಮಾತು ನನಗೊಂದೆ ಕೇಳುತ್ತದೆ. ಅವನನ್ನು ಮರೆತು ರೂಪದೊಂದಿಗೆ ನಾನು ಹಾದರಕ್ಕೆ ಇಳಿದರೆ ಅವನಾದರೂ ಏನು ಮಾಡಿಯಾನು? ಗದ್ದ ಹಿಡಿದು ಬೇಡಿಕೊಳ್ಳಲು ಮಾತ್ರ ಸಾಧ್ಯವೆ ಹೊರತು ಮತ್ತೇನೂ ಮಾಡಲು ಸಾಧ್ಯವಾಗುವುದಿಲ್ಲ.

ಆದರೂ ನಾನು ನಿನ್ನ ಮಗನಲ್ಲವೆ ತಂದೆ ನೀನೇ ಹುಟ್ಟಿಸಿದ ಈ ದರಿದ್ರ ಮನವನ್ನು ನಿನಗೆ ತಿಳಿಯಲು ಅಸಾಧ್ಯವುಂಟೆ ದೇವರ ದೇವಾ? ಕಪಿಲಸಿದ್ಧ ಮಲ್ಲಿಕಾರ್ಜುನನೆ ಕೃಪೆ ಮಾಡು ಎಂದು ಕಾಡಿ ಬೇಡಿ ಒಲಿಸಿಕೊಳ್ಳುವ ಸುಳುಹು ನೀಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**324**

**ಎಲೆ ಅಯ್ಯಾ, ನಿಮ್ಮ ಬರವಿಂಗೆ ಕಣ್ಬೇಟಗೊಂಡೆನು.**
**ಎಲೆ ಅಯ್ಯಾ, ನಿಮ್ಮ ಬರವಿಂಗೆ ಎನ್ನ ಮನವೆಂಬ**
**ಮಂಚವ ಪಚ್ಚಡಿಸಿದೆ.**
**ಎಲೆ ಅಯ್ಯಾ, ನಿಮ್ಮ ಬರವಿಂಗೆ ಚಿತ್ತ ಸುಯಿಧಾನಿಯಾಗಿದ್ದೇನೆ.**
**ಎಲೆ ಅಯ್ಯಾ, ನಿಮ್ಮ ಬರವಿಂಗೆ ಜ್ಞಾನದ**
**ಸೆರಗ ಹಾಸಿ ಆಸೆಬಡುತ್ತಿದ್ದೇನೆ.**
**ಎಲೆ ಅಯ್ಯಾ, ನೀ ಬಂದು ವಿರತವಿಲ್ಲದೆ ಕೂಡಿ ನಿನ್ನವಳೆಂದೆನಿಸಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಅಂಗದಲ್ಲಿ ಅರಿವಿನ ಲಿಂಗಯ್ಯ ಸಂಗಮವಾಗಿದ್ದಾನೆ. ಅಂಗವನ್ನು ಮನವೆಂಬ ಮಾಯೆ

ಆವರಿಸಿದೆ. ಸಿದ್ಧರಾಮ ಶಿವಯೋಗಿಗಳು ಮಾಯೆಯನ್ನು ಹಿಡಿದು ಅಂಗನೆಯನ್ನಾಗಿಸಿ ಲಿಂಗಯ್ಯನ ಬರುವಿಕೆಗಾಗಿ ಕಾಯುತ್ತಿದ್ದಾರೆ.

ಅರಿವನ್ನು ಪುಸ್ತಕದಿಂದ ಸಂಗ್ರಹ ಮಾಡಿಕೊಳ್ಳಬಹುದು. ಅದು ವೇದಿಕೆಗೆ, ಚರ್ಚೆಗೆ, ಪಾಂಡಿತ್ಯಕ್ಕೆ ಬಳಕೆಯಾಗುತ್ತದೆಯೇ ವಿನಹ ಅಂಗ ಆಪತ್ಕಾಲದಲ್ಲಿ ಸಿಲುಕಿದಾಗ ಪುಸ್ತಕದ ಅರಿವು ಮರೆಯಾಗುತ್ತದೆ. ಹೀಗಾಗಿ ಅನಂತಕಾಲದಿಂದ ತನ್ನ ತನುವಿನಲ್ಲಿ ಸಂಗಮವಾದ ಅರಿವನ್ನು ಶರಣರು ಲಿಂಗಯ್ಯ ಎಂದು ಹೆಸರಿಟ್ಟು ಕರೆದರು.

ಅರಿವು ಒಂದು ಪದಾರ್ಥವಲ್ಲ. ಅದೊಂದು ವಿರಾಟಸ್ವರೂಪ. ದ್ವಾರಕೆಯ ಕ್ರಿಷ್ಣ ಅದನ್ನು ಪಡೆದ. ಅದು ವಿರಾಟಸ್ವರೂಪಿ ಎಂದು ಬಲ್ಲವರಿಗೆ ತೋರಿದ. ಅಂತಹ ಅರಿವನ್ನು ಪಡೆಯುವುದಕ್ಕಾಗಿ ಸಿದ್ಧರಾಮ ಶಿವಯೋಗಿಗಳು ಪರಿಪರಿಯಿಂದ ಪ್ರಾರ್ಥಿಸುವ ಸೂತ್ರಗಳನ್ನು ತಮ್ಮ ವಚನದ ಮೂಲಕ ಅಭಿವ್ಯಕ್ತ ಪಡಿಸಿದ್ದಾರೆ; ಓದುಗರಿಗೆ ಉಪಯೋಗವಾಗಲಿ ಎಂದು!

ನಿಮ್ಮ ಬರವಿಂಗೆ ಎನ್ನ ಮನವೆಂಬ ಮಂಚವ ಪಚ್ಚಡಿಸಿದೆ; ಎನ್ನುತ್ತಾರೆ. ''ಅರಸರು ಮಂಚಕ್ಕೆ ಬರಿಸಿ, ಎನ್ನ ಬೆರಸಿದ ಬಳಿಕ ಆನು ಅಂಜುವಳೆ? ಆನು ಸಿರಿಯಕ್ಕನೇ ಪರುಷ ಮುಟ್ಟಿದ ಬಳಿಕ ಲೋಹವೇ? ಕೂಡಲಸಂಗಮದೇವ, ಎನ್ನನೊಲ್ಲದಡಾನು ಬದುಕುವೆನೆ?'' ಎಂದು ಬಸವಣ್ಣನವರು ಓದುಗರಿಗಾಗಿ ಅಮೃತವನ್ನೇ ಬಿಟ್ಟು ಹೋಗಿದ್ದಾರೆ.

ಶರಣರ ಬೆಡಗಿನ ಮಾತು ಓದುಗರಿಗೆ ಅರ್ಥವಾಗಬೇಕು. ನಿಮ್ಮ ಬರವಿಂಗೆ ಎನ್ನ ಚಿತ್ತವನ್ನು ಅತ್ತ ಇತ್ತ ವಾಲದಂತೆ ಸಮಾಧಾನಿಯಾಗಿಟ್ಟಿದ್ದೇನೆ. ಚಿತ್ತವನ್ನು ಸಮಾಧಾನಿಯಾಗಿ ಇಡುವ ತಂತ್ರಗಾರಿಕೆ ತನಗೆ ಒಲಿತಾಗ ತನ್ನ ಅಂಗದಲ್ಲಿಯೇ ಸಂಗಮವಾದ ಅರಿವಿನ ಅರಸನನ್ನು ಅಂಗನೆಗೆ ಕರೆಯಲು ಬರುತ್ತದೆ. ಇಲ್ಲದಿದ್ದರೆ ಚಿತ್ತ ನೆಟ್ಟ ವಸ್ತುವಿನ ಮೇಲೆ ಮನ ತನುವಿನೊಂದಿಗೆ ಜಿಗಿದು ವಸ್ತುವನ್ನು ಭೋಗಿಸುವ ಅಜ್ಞಾನದ ಸುಖದಲ್ಲಿ ತನು ಮೈಮರೆಯುತ್ತದೆ.

ಪ್ರತಿಯೊಂದು ದೇಹ ತನ್ನನ್ನು ತಾನು ತನ್ನ ಅರಿವಿನಿಂದ ಸುಧಾರಿಸಿಕೊಳ್ಳುವ ಪ್ರಯತ್ನದಲ್ಲಿ ಬಯಕೆ ಉಂಟಾದಾಗಲೇ ದೇಹ ಶರಣತ್ವ, ಬುದ್ಧತ್ವವನ್ನು ಪಡೆಯುತ್ತದೆ. ಅಂತಹ ದೇಹ ಮಹಾಜ್ಞಾನಿ ಎನ್ನಿಸಿಕೊಳ್ಳುತ್ತದೆ.

ನಿಮ್ಮ ಬರವಿಂಗೆ ಜ್ಞಾನದ ಹಾಸಿಗೆ ಹಾಸಿ ಆಸೆಬಡುತ್ತಿದ್ದೇನೆ:

ಭಗವದ್ಗೀತೆ, ಬೈಬಲ್, ಕುರಾನ್, ತ್ರಿಪಿಟಕ, ಗ್ರಂಥ ಸಾಹೇಬ ಗ್ರಂಥಗಳಲ್ಲಿದ್ದ ಜ್ಞಾನ ಜ್ಞಾನವಲ್ಲ. ಅದು ಮಹಾಜ್ಞಾನಕ್ಕೆ ಕರೆದುಕೊಂಡು ಹೋಗುವ ಸೂತ್ರ; ನಕ್ಷೆ. ಇಂತಹ ಸೂತ್ರಗಳನ್ನೇ ಪಠಿಸಿ ಜ್ಞಾನಿಯೆಂದು ಬೀಗುವ ಅಹಂಕಾರಿ ನಾನು. ನಾನು ಗಳಿಸಿದ ಈ ಜ್ಞಾನವನ್ನೇ ಸೆರಗಿನ ಹಾಸಿಗೆಯನ್ನಾಗಿ ಹಾಸುವೆ. ನಿಮ್ಮ ಬರುವಿಕೆಗಾಗಿ ಕಾಯುವೆ. ನಾನು ಗಳಿಸಿದ ಜ್ಞಾನದ ಹಾಸಿಗೆಯ ಮೇಲೆ ನೀನು ಮಲಗಿದರೆ ಅಜ್ಞಾನ ನಿರ್ನಾಮವಾಗುವುದು. ನಿನ್ನ ಜ್ಞಾನದ ಸುಖ ನಿನ್ನೊಂದಿಗೆ ಮಲಗಿದ ಸುಖ ನನಗೆ ದಕ್ಕುವುದು ಎಂದು ಹಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ನೀನು ಬಂದು ವಿರತವಿಲ್ಲದೆ ಕೂಡಿ ನಿನ್ನವಳೆಂದೆನಿಸಾ ಕಪಿಲಸಿದ್ಧ ಮಲ್ಲಿಕಾರ್ಜುನಾ:

ನಿಮ್ಮ ಬರವಿಂಗೆ ಕಣ್ಬೇಟಗೊಂಡೆನು. ಮನವೆಂಬ ಮಂಚವ ಪಚ್ಚಡಿಸಿದೆ, ಜ್ಞಾನದ ಸೆರಗ ಹಾಸಿಗೆಯಾಗಿ ಹಾಸಿ, ಚಿತ್ತ ಸುಯಿಧಾನಿಯಾಗಿ, ನಿಮ್ಮ ಬರವಿಂಗೆ ಆಸೆ ಪಡುತ್ತಿದ್ದೇನೆ. ನೀ ಬಂದು ವಿರತವಿಲ್ಲದೆ ಕೂಡಿ ನಿನ್ನವಳೆಂದು ಎನಿಸು ದೇವನೆ, ದೇವರ ದೇವನೆ, ಕಪಿಲಸಿದ್ಧ ಮಲ್ಲಿಕಾರ್ಜುನನೇ.

325

**ಎಲೆ ಅಯ್ಯಾ, ಪುರದ ಮೇಲುಪ್ಪರಿಗೆಯ ಕೆಲಸವನೇನೆಂಬೆನಯ್ಯಾ!**
**ಮುತ್ತಿನ ಕಳಸದ ಮೇಲೆ ಒಂದು ಅರಳಿದ ಪುಷ್ಪ.**
**ಆ ಪುಷ್ಪದ ಪರಿವೀಥಿಯೊಳಗೆ ಅಗ್ನಿಯ ಕಂಡೆನಾಗಿ,**
**ಕಪಿಲಸಿದ್ಧ ಮಲ್ಲಿನಾಥಾ ನಿಮ್ಮ ಶರಣ**
**ಚೆನ್ನಬಸವಣ್ಣ ತೋರಿದ ಹಾದಿ ಸುಪಥವಾಯಿತ್ತು .**
**ನಾನು ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು.**

ದೇಶವೆಂದರೆ ದೇಹ. ಪುರವೆಂದರೆ ಮಹಾಪುರುಷ ವಾಸ ಮಾಡಿದ ಪುರ; ದೇಹ. ದೇಹ ಹೆಣ್ಣಾದರೇನು, ಗಂಡಾದರೇನು? ಆ ದೇಹಗಳಲ್ಲಿ ಮಹಾ ಪುರುಷ ವಾಸವಾಗಿದ್ದಾನೆ. ಪುರುಷನಿದ್ದ ಇಂತಹ ದೇಹ ಅದ್ಭುತವಾದ ಕುಸುರಿ ಕೆಲಸದಿಂದ ರಚನೆಯಾಗಿದೆ. ಇದರ ಮೇಲುಪ್ಪರಿಗೆಯ ಕೆಲಸವನು ಏನೆಂದು ವರ್ಣಿಸುವುದು?

ಮುತ್ತಿನ ಕಳಸದ ಮೇಲೆ ಒಂದು ಅರಳಿದ ಪುಷ್ಪ: ಅದು ಬರೀ ಪುಷ್ಪವಲ್ಲ ಕಮಲ; ಬ್ರಹ್ಮಕಮಲ. ಸಕಲ ಭ್ರಮೆಗಳನ್ನೂ ಮಹಾ ಪುರುಷನ ಸಹಾಯದಿಂದ ಕಳೆದುಕೊಂಡ ಬ್ರಹ್ಮಕಮಲ. ಅದು ಜ್ಞಾನಾಗ್ನಿಯಿಂದ ಅರಳಿದ ಕಮಲ.

ನೋಡುವುದನ್ನೇ ನೋಡಿ ಅರಳಿ ನಿಂತಿದೆ. ನೋಡುವ ನೋಟದಲ್ಲಿರುವ ಸಕಲ ಅಜ್ಞಾನಗಳನ್ನು ಜ್ಞಾನಾಗ್ನಿಯಿಂದ ಸುಟ್ಟುಕೊಂಡು ಅರಳಿ ನಿಂತಿದೆ. ಸು-ಶಬ್ದ, ಕು-ಶಬ್ದಗಳನ್ನು ಕತ್ತರಿಸಿ ಹಾಕಿ ನಿಃಶಬ್ದದಿಂದ ಶಬ್ದವನ್ನು ಕೇಳಿ ಅರಳಿ ನಿಂತಿದೆ. ಸುಗಂಧ-ದುರ್ಗಂಧಗಳನ್ನು ಕಳೆದು ಅರಿವಿನ ಪರಿಮಳವನ್ನು ಸ್ವೀಕರಿಸಿ ಅರಳಿ ನಿಂತಿದೆ. ಕು-ಸ್ಪರ್ಶ, ಸು-ಸ್ಪರ್ಶಗಳನ್ನು ಕಳೆದು ನಿರ್ಗುಣದಿಂದ ಸ್ಪರ್ಶಿಸಿ ಅರಳಿ ನಿಂತಿದೆ. ಸಕಲ ಭ್ರಮೆಗಳನ್ನು ಕಳೆದುಕೊಂಡು ಅರಳಿ ನಿಂತಿದೆ. ರುಚಿ-ಅರುಚಿಗಳನ್ನು ಕಳೆದು ಅರಳಿ ನಿಂತಿದೆ. ಮುತ್ತಿನ ಕಳಸದ ಮೇಲೆ ಅರಳಿ ನಿಂತಿದೆ.

ನೀರಿನಿಂದಾದ ಮುತ್ತು; ಮತ್ತೆ ನೀರಾಗದ ಮುತ್ತು. ನೀರಿನಿಂದ ಹುಟ್ಟಿ ಬೆಳಗುವ ಮುತ್ತು. ಮುತ್ತಿನ ಕಳಸದ ಮೇಲೆ ಅರಳಿದ ಪುಷ್ಪ. ನೀರಿನಿಂದಲೇ ಮುತ್ತು. ನೀರಿನಿಂದಲೇ ಅರಳಿದ ಕಮಲ. ನೀರಿನಲ್ಲಿದ್ದೂ ನೀರನ್ನೇ ಉಂಡು ನೀರನ್ನು ಅಂಟಿಸಿಕೊಳ್ಳದ ಕಮಲ. ನೀರಿಂದಲೇ ಹುಟ್ಟಿ ಮುತ್ತಾಗಿ; ಮತ್ತೆ ನೀರಾಗದ ಮುತ್ತು.

ಹೇಗೆ ಜಲಬಿಂದು ಮುತ್ತಾಗಿದೆಯೋ ಹಾಗೆಯೇ ಜಲಬಿಂದು ಗರ್ಭಕ್ಕೆ ಹೋಗಿ ತನುವಾಗಿ ಹೊರಬಂದಿದೆ. ನೋಡಿ ಕೇಳಿ ಮುಟ್ಟಿ ರುಚಿಸಿ ಮೂಸಿಸಿ ಅರಳಿ ಬೆಳಗುತ್ತಲಿದೆ. ನುಡಿದು ಬೆಳಗುತ್ತಲಿದೆ. ಎಲೆ ಅಯ್ಯಾ, ಪುರದ ಮೇಲಪ್ಪರಿಗೆಯ ಕೆಲಸವನು ಏನೆಂಬೆನಯ್ಯಾ!

‘‘ಮುತ್ತು ಉದಕದಲಾಗದು, ಉದಕ ಮುತ್ತಿನಲಾಗದು, ತತ್ವ ಘಟಿಸಿದ ಸುಮುಹೂರ್ತದಲಲ್ಲದೆ, ಚಿತ್ತ ವೇದ್ಯವಾಗದು ಸದ್ಗುರುವಿನ ಕರುಣಕ್ಕಲ್ಲದೆ. ಕರ್ತೃ ಕೂಡಲಸಂಗಮ ದೇವರ ಒಲವಿನ ದಯದ ಚಿತ್ತವಿಡಿದಂಗಲ್ಲದೆ, ಶಿವತತ್ತ್ವ ಸಾಹಿತ್ಯವಾಗದು’’. ಇದು ಬಸವಣ್ಣನವರ ಸೂತ್ರ. ಸಿದ್ಧರಾಮ ಶಿವಯೋಗಿಗಳ ಸೂತ್ರವೂ ಹೀಗೇ ಇದೆ. ಕಪಿಲಸಿದ್ಧ ಮಲ್ಲಿನಾಥಾ ನಿಮ್ಮ ಶರಣ ಚೆನ್ನಬಸವಣ್ಣ ತೋರಿದ ಹಾದಿ ಸುಪಥವಾಯಿತ್ತು. ನಾನು ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು.

ಜಲಬಿಂದು ಮುತ್ತಾದುದು ತನುವಿಗೆ ಕಾಣುತ್ತದೆ. ಜಲಬಿಂದುವೇ ಗಟ್ಟಿಯಾಗಿ ತನುವಿನ ಮುತ್ತಾಗಿ ಬೆಳಗುವುದು ತನುವಿಗೆ ಕಾಣುವುದಿಲ್ಲ. ತನುವನ್ನು ಮನವೆಂಬ ಮಾಯೆ ಆವರಿಸಿರುವುದರಿಂದ ತನುವನ್ನು ತನ್ನಂತೆಯೇ ಇರುವ ಬೆಳಗುವ ಮುತ್ತಿನ ತನುವೆಂದು ತನುವಿಗೆ ನೋಡಲು ಸಾಧ್ಯವಾಗುವುದಿಲ್ಲ.

ಸರೋವರದ ಜಲದಲ್ಲಿ ಜಲವನುಂಡು ಜಲದಲ್ಲಿಯೇ ಬೆಳೆದು ಜಲವನ್ನು ತಾಗಿಸಿಕೊಳ್ಳದೆ ಜಲದ ಮೇಲೆ ಅರಳಿನಿಂತ ಕಮಲದ ಹೂಗಳೆಲ್ಲ ಸುಂದರ. ಅವು ಒಂದನ್ನೊಂದು ತಾಗುವುದಿಲ್ಲ. ಬಡಿದಾಡುವುದಿಲ್ಲ. ಕಾದಾಡುವುದಿಲ್ಲ. ಸಕಲ ಹೂಗಳೂ ಅರಳಿ ನಿಂತು ಸುಗಂಧವನ್ನು ಬೀರುತ್ತವೆ. ಅದರ ದ್ರವ್ಯವನ್ನು ಈಂಟುವಂತೆ ಸಕಲ ದುಂಬಿಗಳಿಗೂ ಆಮಂತ್ರಣ ಕೊಡುತ್ತವೆ.

ತನು ಹಾಗಲ್ಲ. ತನು ಕೂಡಾ ಕಮಲದಂತೆ ಅರಿವಿನಿಂದ ಬ್ರಹ್ಮ ಕಮಲವಾಗಿ ಅರಳಿದ್ದರೂ; ಅರಳಿದ ವಿಷಯ ತನುವಿಗೆ ಗೊತ್ತಿಲ್ಲ. ಭ್ರಮೆ ಕಳೆದುಕೊಂಡು ಅರಳಿ ನಿಂತು; ಬ್ರಹ್ಮವೇ ತಾನಾದ ತನುವನ್ನು ಸಂಪರ್ಕಿಸಬೇಕೆಂಬ ಅರಿವು ಕೂಡಾ ತನುವಿಗೆ ಇಲ್ಲ. ಇದ್ದರೂ ಸರಿಯಾದ ಅರಿವಿನ ತನುಗಳನ್ನು ಗುರುತಿಸಿ ಗುರುವೆಂದು ನಿರ್ಧರಿಸಲು ತನುವಿಗೆ ಸಾಧ್ಯವಾಗುತ್ತಿಲ್ಲ. ಇದಾವುದರ ಅವಶ್ಯಕತೆಯಿಲ್ಲದೆ, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಸಂಪರ್ಕಕ್ಕೆ ಹೋಗಿ ತಿಳಿಯಬಹುದೆಂಬ ಮಾಹಿತಿಯ ಸುಳಿವು ಕೂಡಾ ತನುವಿಗೆ ಸಿಕ್ಕುತ್ತಿಲ್ಲ. ಅರಳಿ ನಿಂತರೂ ತನುವಿನ ದುರ್ದೈವ; ಅರಳಿದ ವಿಷಯ ತನಗೆ ದೊರೆಯದೆ ಇರುವುದು.

ಅರಿವಿನಿಂದ ಅರಳಿ ನಿಂತ ತನುವಿಗೆ ಮಾತ್ರ ಜಗದಲ್ಲಿರುವ ಸಕಲ ತನುಗಳು ಅರಳಿ ನಿಂತು ಸುಗಂಧ ಸೂಸುವುದು ಗೋಚರಕ್ಕೆ ಬರುತ್ತದೆ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ''ಚೆನ್ನಬಸವಣ್ಣ ತೋರಿದ ಹಾದಿ ಸುಪಥವಾಯಿತ್ತು ನಾನು ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು'' ಎಂದು ಹಾಡಿದ್ದಾರೆ.

**326**

**ಎಲೆ ಬಸವಾ, ಎಲೆ ಚೆನ್ನಬಸವಾ,**
**ಸಟೆ ಏಕೋ ನಿಷ್ಠೆಯಾಯಿತ್ತಯ್ಯಾ,**
**'ಮೃತಿಕಾಲನಾಶಂ' ನಮೋ ಕಪಿಲಸಿದ್ಧ ಮಲ್ಲಿನಾಥಯ್ಯಾ.**
**ಬಸವಣ್ಣನಿಂದ ಪ್ರಾಣಲಿಂಗಸಂಬಂಧವಡಗಿತ್ತು.**

ಮನದ ಅಜ್ಞಾನವನ್ನು, ಚಿತ್ತವನ್ನು, ಮನ ಸಂಗ್ರಹ ಮಾಡಿಕೊಂಡ ಜ್ಞಾನವನ್ನು, ಕಂಗಳ ಅಜ್ಞಾನವನ್ನು ಕಳೆದುಕೊಳ್ಳುವ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಈಗಾಗಲೇ ಓದುಗರಿಗೆ ವಿವರಿಸಿದ್ದಾರೆ. ಇದು ಸುಲಭದ ಕೆಲಸವಲ್ಲ. ಮಹಾಜ್ಞಾನಿಗಳು, ಶರಣರು; ಬಯಕೆ ಉಳ್ಳ ಸಮರ್ಥ ವ್ಯಕ್ತಿಗೆ ಮಾತ್ರ ಹೇಳಬಹುದಾದ ಸೂತ್ರವನ್ನು ಸಕಲ ಓದುಗರಿಗೆ ಯಥೇಚ್ಛವಾಗಿ ಸರಳವಾಗಿ ಸುಗಮವಾಗಿ ನೀಡಿದ್ದಾರೆ.

ಬಹಿರಂಗವಾಗಿ ಅಕ್ಷರಗಳ ಮೂಲಕ ಸಿದ್ಧರಾಮ ಶಿವಯೋಗಿಗಳು ಸಕಲ ಓದುಗರಿಗೆ ನೀಡಿದರೂ ಕೂಡಾ ಸಮರ್ಥ ಓದುಗ ಮಾತ್ರ ಪಡೆಯಬಹುದಾಗಿದೆ. ಸಕಲರೂ ಈ ಸೂತ್ರವನ್ನು ಪಡೆಯಲು ಸಾಧ್ಯವಿಲ್ಲ. ಸುಮಾರು ಇಪ್ಪತ್ತೈದು ವರ್ಷಗಳ ಪರ್ಯಂತ ಕಲ್ಯಾಣದಲ್ಲಿ ನಡೆದ

ಸ್ವಯಂ ಜ್ಞಾನ ಕೃಷಿಯಲ್ಲಿ ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಭಾಗವಹಿಸಿದರೂ ಕೂಡಾ ಆಸಕ್ತ ಏಳುನೂರಾ ಎಪ್ಪತ್ತು ಜನರಿಗೆ ಮಾತ್ರ ಜ್ಞಾನ ಒಲಿಯಿತು. ಸ್ವಯಂ ಜ್ಞಾನ ಕೃಷಿಯಲ್ಲಿ ಅಷ್ಟು ಜನ ಮಾತ್ರ ತಮಗೆ ತಾವೇ ತೇರ್ಗಡೆ ಹೊಂದಿದ್ದೇವೆ ಎಂದು ಘೋಷಿಸಿಕೊಂಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಸಟೆ ಏಕೋನಿಷ್ಠೆಯಾಯಿತ್ತಯ್ಯಾ ಬಸವಣ್ಣಾ, ಚೆನ್ನಬಸವಣ್ಣಾ ಎಂದು ಅವರಿಬ್ಬರ ಮುಂದೆ ಘೋಷಿಸಿಕೊಂಡಿದ್ದಾರೆ.

ತನುವಿನ ಜ್ಞಾನೇಂದ್ರಿಯಗಳ ಮೂಲಕ ಸದಾ ಹರಿದಾಡುವ ಸುಳ್ಳು ಇಂದು ನನ್ನ ಜ್ಞಾನಕ್ಕೆ ವಶವಾಯಿತು ತಂದೆ ನಿನ್ನ ದಯದಿಂದ. ಎಂದು ಬಸವಣ್ಣನವರ ಮುಂದೆ ಘೋಷಣೆ ಮಾಡುತ್ತಾ ಸುಳ್ಳಿನ ಅವಸಾನವನ್ನು ಅರುಹಿದ್ದಾರೆ.

'ಹುಸಿಯ ನುಡಿಯಲು ಬೇಡ' ಎನ್ನುವ ಮಹಾ ಸೂತ್ರ ಬಸವಣ್ಣನವರದು. ಎಂತಹ ಸಚ್ಚಾರಿತ್ರವಂತನಿಗೂ ಅತ್ಯಂತ ಪ್ರಾಮಾಣಿಕನಿಗೂ ಸಾಧಿಸಲು ಸಾಧ್ಯವಾಗದ ಸೂತ್ರವಿದು. ದೇವಾನುದೇವತೆಗಳಿಗೂ ಸಾಧ್ಯವಾಗದ ಕಠಿಣ ಸೂತ್ರವಿದು.

ಬಸವಣ್ಣನವರ 'ಹುಸಿಯ ನುಡಿಯಲು ಬೇಡ' ಎನ್ನುವ ಸೂತ್ರ ಸಿದ್ಧರಾಮ ಶಿವಯೋಗಿಗೆ ಸಾಧ್ಯವಾದುದು ಸಾಮಾನ್ಯದ ಮಾತಲ್ಲ. ತಮಗೆ ಸಾಧ್ಯವಾದುದನ್ನು ಸಕಲ ಓದುಗರಿಗೂ ಪ್ರಸಾದ ರೂಪದಲ್ಲಿ ಹಂಚಿದುದು ಕೂಡಾ ಸಣ್ಣ ಮಾತಲ್ಲ.

ಕಣ್ಣಿನ ದೃಶ್ಯದ ಮೂಲಕ ತನುವಿನ ಸೌಂದರ್ಯದ ಹಾದರವನ್ನು ಅನುಭವಿಸುತ್ತಾ ಧ್ವನಿಯ ಮೂಲಕ ಅಕ್ಕ ತಂಗಿ ಚಿಕ್ಕವ್ವ, ಅತ್ತೆ, ನಾದಿನಿ, ಅಣ್ಣ, ತಮ್ಮ, ಚಿಕ್ಕಪ್ಪ ಎಂದು ನುಡಿದು ಹೇಳುವುದು ಸುಳ್ಳಲ್ಲವೇ? ನೋಡುವುದು ಒಂದಾದರೆ ನುಡಿಯುವುದು ಒಂದು. ಇಂತಹ ಅನೇಕ ಸುಳ್ಳುಗಳು ತನುವಿನಲ್ಲಿ ಜೀವನ ಪರ್ಯಂತ ನಡೆಯುತ್ತವೆ. ಆದರೂ ತನುವಿಗೆ ಸತ್ಯವಂತನೆಂದು ಕರೆಯಿಸಿಕೊಳ್ಳಲು ಬಲು ಇಷ್ಟ ಅದಕ್ಕೆ.

ಕಂಗಳ ಮೂಲಕ ಮನ ತನುವನ್ನು ಹಾದರದಿಂದ ನೋಡಿ ಉದ್ರೇಕಗೊಂಡು ಆ ತನುವಿನೊಂದಿಗೆ ಹಾದರದಲ್ಲಿ ಮನದ ಮೂಲಕವೇ ಭಾಗಿಯಾಗುತ್ತದೆ. ಹಾಗೆಯೇ ಕೂಡಲೇ ಬಾಯಿಗೆ ಜಿಗಿದು ಧ್ವನಿಯ ಮೂಲಕ ಅಕ್ಕ, ತಂಗಿ, ಅಣ್ಣ, ತಮ್ಮ ಎಂದು ಆದರದ ಪ್ರೀತಿಯ ಮಾತುಗಳನ್ನು ಸಕಲರೂ ಕೇಳುವಂತೆ ಆಡುತ್ತದೆ. ಮನಕ್ಕೆ ಹಾದರವೂ ಸುಖ; ಆದರದ ನಟನೆಯ ಮಾತುಗಳು ಕೂಡಾ ಸುಖ ನೀಡುತ್ತವೆ. ಇದು ಮನ ತನುವಿನ ಮೂಲಕ ಮಾಡುವ ಸ್ವಯಂ ಕೃತಾಪರಾಧ!

ನೋಡಿ ಹಾದರ ಮಾಡುವ ಸುಳ್ಳನ್ನು ಬಹಿರಂಗಗೊಳಿಸದೆ, ನೋಡಿ ಅಕ್ಕ ತಂಗಿ ಎಂದು ಕರೆಯುವ ಸುಳ್ಳು ಶಬ್ದವನ್ನು ಸಕಲರಿಗೂ ಕೇಳುವಂತೆ ಬಹಿರಂಗಗೊಳಿಸುತ್ತದೆ. ಏಕಕಾಲಕ್ಕೆ ಎರಡೆರಡು ಸುಳ್ಳುಗಳನ್ನು ಹೇಳುವ ಮನದ ತನುವನ್ನು ಪ್ರಾಮಾಣಿಕ ಎಂದು, ಅತ್ಯುತ್ತಮವಾದ ಸಾತ್ವಿಕ ತನುವೆಂದು ಪ್ರಮಾಣ ಪತ್ರ ನೀಡಿ ಕರೆಯಲು ಸಾಧ್ಯವೇ? ಆದರೂ ತನುಗಳೆಲ್ಲ ಹೀಗೇ ಇರುತ್ತವೆ. ತನುವನ್ನು ಆವರಿಸಿದ ಮನ ಕೂಡಾ ಹೀಗೇ ಇರುತ್ತದೆ. ಒಂದನ್ನು ಮತ್ತೊಂದು ಬೆನ್ನು ತಟ್ಟಿ ತನ್ನನ್ನು ತಾನೇ ಹೊಗಳಿಕೊಳ್ಳುವಂತೆ!

ಸ್ವಾಮಿಗಳು ಎನ್ನಿಸಿಕೊಂಡ, ಜ್ಞಾನಿಗಳು ಎನ್ನಿಸಿಕೊಂಡ, ಜಗದ್ಗುರುಗಳು ಎನ್ನಿಸಿಕೊಂಡ ತನುಗಳು ಈ ಸೂತ್ರವನ್ನು ಪಾಲಿಸಿ ತಮ್ಮ ತಮ್ಮ ಮಠ ಪೀಠಗಳ ಮೇಲೆ ಕುಳಿತಿದ್ದಾರೆಯೇ? ಅಸಮಾಧಾನದಿಂದ, ಚಿಂತೆಯಿಂದ, ದುರಾಲೋಚನೆಯಿಂದ ಮಠಕ್ಕೆ ಬಂದ ತನುಗಳಿಗೆ ಸಾಂತ್ವನ

ಹೇಳುತ್ತಿದ್ದಾರೆಯೆ? ಇದು ಸುಳ್ಳಿನ ಮಾತಲ್ಲವೇ?

ಶಾಲಾ ಕಾಲೇಜುಗಳನ್ನು, ಪ್ರಸಾದ ನಿಲಯಗಳನ್ನು ಮಾಡುವುದು ಸರಕಾರದ ಕೆಲಸ. ಸಂಘ ಸಂಸ್ಥೆಗಳ ಕೆಲಸವೇ ಹೊರತು ಸ್ವಾಮಿಗಳ ಕೆಲಸವಲ್ಲ; ಗುರುಗಳ ಕೆಲಸವಲ್ಲ. ಬಸವಣ್ಣನವರು ಅತ್ಯಂತ ಕಿರಿಯರಾಗಿ ಸಿದ್ಧರಾಮ ಶಿವಯೋಗಿಗಳಲ್ಲಿ ಅಡಗಿ ಕುಳಿತ ಅರಿವೆಂಬ ಗುರುದೇವನನ್ನು ಕುರಿತು ಪ್ರಾರ್ಥನೆ ಮಾಡಿದರು.

ಗುರುದೇವನೇ 'ನೀನಿದ್ದ ದೇಹದಲ್ಲಿ ಸಟೆಯ ಕಾರ್ಯ ನಡೆದಿದೆ' ಸುಳ್ಳು ನೋಡಿ ಹಾದರ ಮಾಡುವ ಮನವನ್ನು, ನೋಡಿದಂತೆ ನುಡಿಯಲು ಸಾಧ್ಯವಾಗದೆ ಮತ್ತೆ ಸುಳ್ಳು ನುಡಿಯಲು ಮನವನ್ನು ಶಿಕ್ಷಸಲು ನಿನಗೆ ಸಾಧ್ಯವಿಲ್ಲವೆ? ತಾನು ನೋಡಿದ್ದು ಸುಳ್ಳು, ತಾನು ನುಡಿದದ್ದು ಸುಳ್ಳು ಎಂದು ಮನಕ್ಕೆ ಗೊತ್ತಾಗುವಂತೆ ಅರಿವೆಂಬ ಗುರುದೇವನಾದ ನೀನು ತಿಳಿ ಹೇಳಿದರೂ ನಿನ್ನ ಭಯ ಮನಕ್ಕೆ ಎಳ್ಳಷ್ಟೂ ಇಲ್ಲವಲ್ಲ ಗುರುವೆ. ಎಂದು ಪರಿಪರಿಯಿಂದ ಬೇಡಿಕೊಂಡು 'ಹುಸಿಯ ನುಡಿಯಲು ಬೇಡ' ಎಂದು ಎಚ್ಚರಿಸಿ ಗುರುವಾಗದೆ ಗುರುವಿನ ಮುಂದೆ ಕಿರಿಯನಾಗಿ ಮಂಡಿಯೂರಿ ಬೇಡಿಕೊಂಡು ಹೇಳಿದ ಬಸವಣ್ಣನ ಆಶಯವೆತ್ತ?

ಗುರುವೆಂದರೇನೆಂದು ತಿಳಿಯದೆ ಗುರುವಾಗಿ ಹಾದರಕ್ಕೆ ಒಳಗಾದ ತನುಗಳೆತ್ತ? ಶರಣರದು, ದಾಸರದು, ಕ್ರಿಸ್ತ, ಕ್ರಿಷ್ಣ, ಬುದ್ಧ, ಪೈಗಂಬರರದ್ದು ಸ್ವಯಂಕೃಷಿ. ತನ್ನ ಅಜ್ಞಾನ ತಾನೇ ಕಳೆದುಕೊಂಡು ತನಗೆ ತಾನೇ ಜ್ಞಾನಿಯಾಗುವ ಸ್ವಯಂಕ್ರಾಂತಿ. ಇಂತಹ ಕ್ರಾಂತಿಯ ಕಿಡಿಯನ್ನು ಅಲ್ಲಮಪ್ರಭುಗಳು ಮನದ ಎದೆಗೆ ಸಿಡಿಲೊಡೆಯುವಂತೆ ಗುಡುಗಿದರು.

''ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ. ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ. ಕೂಡದ ಅಗಲದ ಕೂಟದ ಸುಖವನು ಗುಹೇಶ್ವರಾ ನಿಮ್ಮ ಶರಣ ಮಾತ್ರ ಬಲ್ಲ'' ಎಂದರು. ಈ ಸೂತ್ರ ಭೌತಶಾಸ್ತ್ರದ ವಿಜ್ಞಾನಿ ನ್ಯೂಟನ್ನನ ನಿಯಮದಂತಿದೆ. ತನುವಿನ ಸ್ವಯಂಜ್ಞಾನ ಕ್ರಾಂತಿಗೆ ಅತ್ಯುತ್ತಮವಾದ ಸೂತ್ರ. ಇಡೀ ಜಗತ್ತಿಗೆ ಮಹಾಜ್ಞಾನದ ಕೊಡುಗೆಯಾಗಿ ಹೊರಬಂದ ಅಲ್ಲಮಪ್ರಭುಗಳ ಮಹಾಸೂತ್ರ. ಈ ಸೂತ್ರವನ್ನು ಪಾಲಿಸಿ ಸಿದ್ಧರಾಮ ಶಿವಯೋಗಿಗಳು ಮಹಾಜ್ಞಾನಿಯಾದರು. ಅಜ್ಞಾನದ ಸಕಲ ಕೆಲಸಗಳಿಗೆ ಎಳ್ಳು ನೀರು ಬಿಟ್ಟರು.

**327**

**ಎಲೆ ಭವಗೇಡಿ ನಿನ್ನುವನು ತೋರದೆ ಕಾಡಿದೆ ಹಿಂದೆ.**
**ಅಯ್ಯಾ, ತನುಗುಣ ಸಾಹಿತ್ಯ ನೀನೆ.**
**ನೀನೆನ್ನ ಮನದ ಮಹೋತ್ಸವನೆ ಅಯ್ಯಯ್ಯಾ.**
**ಅವ್ವೆಯ ಅಯ್ಯನಾಗಿಯೆಂದಿಪ್ಪೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನನ್ನು ಕುರಿತು ಸಿದ್ಧರಾಮ ಶಿವಯೋಗಿಗಳು 'ಭವಗೇಡಿ' ಎಂದು ಕರೆದಿದ್ದಾರೆ. ಎಲೆ ಭವಗೇಡಿ, ಜನನ ಮರಣಗಳಿಲ್ಲದ ಭಗವಂತನೇ ನನಗೆ ನಿನ್ನ ದರುಶನವನ್ನು ಕರುಣಿಸದೆ ಅನಂತ ಕಾಲಗಳವರೆಗೆ ನನ್ನನ್ನು ಕಾಡಿದೆ. ತನುವಿನಲ್ಲಿ ತನ್ಮಯನಾಗಿ ನೀನಿದ್ದು ತನುವನ್ನು ಕಾಡುವುದೆ?

ಮನವನ್ನು ಸೃಷ್ಟಿಮಾಡಿ, ಮನದಿಂದ ತನುವನ್ನು ಕಾಡುವುದೆ? ತನುವು ನೀನೆ. ತನುವಿನಲ್ಲಿ

ಗುಣಗಳನ್ನು ಸೃಷ್ಟಿ ಮಾಡಿದ ತನುಗುಣ ಸಾಹಿತಿಯೂ ನೀನೆ. ಅದರ ಸಾಹಿತ್ಯವೂ ನೀನೆ ಆಗಿರುವಿ.

ತನುವನ್ನು ಸೃಷ್ಟಿಮಾಡಿದೆ. ತನುವನ್ನು ಕಾಡುವುದಕ್ಕಾಗಿ ಮನವನ್ನು ಸೃಷ್ಟಿಮಾಡಿದೆ. ತನುವಿನಲ್ಲಿದ್ದು ತನು ಮನಾದಿಗಳಿಗೆ ನೀನು ಕಾಣದಂತೆ; ನಿನ್ನನ್ನು ಹೊರಗಿಟ್ಟ ಮನ, ತನುವಿನಿಂದಲೇ ನಿನ್ನ ಉತ್ಸವಗಳನ್ನು ಮಾಡುವಂತೆ ಮನಕ್ಕೆ ಪ್ರೇರಣೆ ನೀಡಿದೆ. ಏನೀ ನಿನ್ನ ಅದ್ಭುತ ಚಮತ್ಕಾರ! ಅಯ್ಯಯ್ಯಾ ನೀನೆನ್ನ ಮನದ ಮಹೋತ್ಸವನೇ ಆಗಿರುವಿ.

ಎಲೆ ಭವಗೇಡಿ ಎಂದು ಸಿದ್ಧರಾಮ ಶಿವಯೋಗಿಗಳು ಭಗವಂತನನ್ನು ಬೈದಿಲ್ಲ. ಜನನ ಮರಣಗಳೇ ಇಲ್ಲದ ಮಹಾವೀರನೆ ಧೀರನೆ ಎಂದು ಕುಣಿಕುಣಿದು ಹಾಡಿದ್ದಾರೆ. ಭವಭವಾಂತರಗಳಲ್ಲಿಯೂ ನನ್ನಲ್ಲಿದ್ದ ನೀನು ನನಗೆ ದರುಶನ ನೀಡಲಿಲ್ಲವೇಕೆ ಎಂದು ಭಗವಂತನೊಂದಿಗೆ ಮಾತನಾಡಿದ್ದಾರೆ.

ತನುವೆಂದರೇನೆಂದು ತನುವಿಗೆ ಗೊತ್ತಿರಲಿಲ್ಲ. ಮನವೆಂದರೇನೆಂದು ತನುವಿಗೆ ಗೊತ್ತಿರಲಿಲ್ಲ. ಅರಿವೆಂದರೆ ಏನೆಂದು ತನುವಿಗೆ ಅರಿವಾಗಿರಲಿಲ್ಲ. ಶರಣರ ಕರುಣೆಯಿಂದ ಇಂದು ಮನಕ್ಕೆ ಅರಿವೆಂದರೇನೆಂದು ಗೊತ್ತಾಗಿದೆ. ತನುವೆಂದರೇನೆಂದು ಗೊತ್ತಾಗಿದೆ. ಹೀಗಾಗಿ ಮನವೇ ಅರಿವೆಂಬ ಗುರುದೇವನಿಗೆ ಭಕ್ತನಾಗಿ, ಆ ಗುರುದೇವನನ್ನೇ ಮಹಾದೇವನೆಂದು, ಸದಾಶಿವನೆಂದು ಕರೆದು; ಎಲೆ ಭವಗೇಡಿ, ಜನನ ಮರಣಗಳೇ ಇಲ್ಲದ ಭಗವಂತ ನೀನು.

ಕ್ಷಣ ಕ್ಷಣಕ್ಕೆ ಮರಣದ ಬಾಧೆಯನ್ನುಂಟು ಮಾಡಿ ಹುಟ್ಟಿಸಿ ಸಾಯಿಸುವ ಶಿಕ್ಷೆಯನ್ನು ನನಗೆ ಏಕೆ ನೀಡಿದೆ? ಜನನ ಮರಣಗಳೇ ಇಲ್ಲದ ನಿನ್ನ ದರುಶನ ಭಾಗ್ಯವನ್ನು ನನಗೆ ಏಕೆ ಕರುಣಿಸಲಿಲ್ಲ? ಅದರ ಸಕಲ ಸಾಹಿತ್ಯವನ್ನು ತನುವಿನಲ್ಲಿಯೇ ಬಚ್ಚಿಟ್ಟು ಅದರ ಗುಟ್ಟನ್ನು ಹೇಳದ ಬೆಡಗಿನ ಸಾಹಿತಿ ನೀನು.

ತನುವಿನ ಅರಿವಿನ ಸಾಹಿತ್ಯವನ್ನು ತನುವಿನಲ್ಲಿಯೇ ಇಟ್ಟು ಮನಕ್ಕೆ ಮಾಹಿತಿ ಕೊಡದ ಜಿಪುಣ ನೀನು. ತನುವನ್ನು ಮನವನ್ನು ಜನನ ಮರಣಗಳಿಂದ ಹಗಲಿರುಳೆನ್ನದೆ ಬಾಧಿಸಿದವನು ನೀನು. ತನುವಿನಲ್ಲಿ ನೀನಿದ್ದು ಜನನ ಮರಣಗಳ ಬಾಧೆಯನ್ನು ಉಣ್ಣದ ಮಹಾವೀರ ನೀನು. ತನುವು ನಿನ್ನದೆ, ಮನವು ನಿನ್ನದೆ. ಆದರೂ ನಿನ್ನ ಮಾಹಿತಿ ತನುಮನಾದಿಗಳಿಗಿಲ್ಲವೆಂದರೆ ಅದು ನಿನ್ನ ಚಮತ್ಕಾರವೇ ಆಗಿರಬೇಕಲ್ಲ.

ನಿನ್ನ ಚಮತ್ಕಾರವೇ ನಿನ್ನನ್ನು ಬಲ್ಲ ಬಸವಾದಿ ಶರಣರಿಂದ ತಿಳಿದುಕೊಂಡು ಅನುಭವಕ್ಕೆ ತಂದುಕೊಂಡೆ. ಇನ್ನು ನೀನು ನನಗೆ ಪರಿಚಯವಾದೆ. ಅದಕ್ಕೆ ನಾನು ನಿನ್ನನ್ನು ಭವಗೇಡಿ ಎಂದು ಕರೆದೆ. ನಿನ್ನನ್ನು ಎನಗೆ ತೋರದೆ ಅನಂತಕಾಲ ಏಕೆ ಕಾಡಿದೆ ತಂದೆ ಎಂದು ಕೇಳಲು ಸಾಧ್ಯವಾಗುವಂತೆ ನೀನೇ ಎನಗೆ ಕರುಣಿಸಿದೆ. ನೀನೆನ್ನ ಮನದ ಮಹೋತ್ಸವನೂ ಆಗಿರುವಿ.

ಅಯ್ಯಯ್ಯಾ ಅವ್ವೆಯ ಅಯ್ಯನಾಗಿಯೆಂದಿಪ್ಪೆ:

ಮನ ನನಗೆ ಅವ್ವೆ. ನೀನು ಎನಗೆ ಹಡೆದ ತಂದೆ. ನೀವೀರ್ವರು ತನುವಿನಲ್ಲಿದ್ದರೂ ಕೂಡಾ ನಿಮ್ಮ ದರುಶನ ಭಾಗ್ಯ ನನಗೆ ಆಗಿರಲಿಲ್ಲ. ಏಕೆಂದರೆ ಮನವೆಂಬ ನನ್ನ ಅವ್ವೆ ನಿನ್ನನ್ನು ಮರೆತಿದ್ದಳು. ನನ್ನಿಂದಾಗಿ ಮತ್ತೆ ನನ್ನ ಅವ್ವೆ ನಿನ್ನನ್ನು ಗುರುತಿಸಿದ್ದಾಳೆ. ಹೀಗಾಗಿ ನನ್ನ ಅವ್ವೆಗೆ ಅಯ್ಯನಾಗಿ ನೀನು ಯೆಂದಿಪ್ಪೆ ತಂದೆಯೆ? ಕಪಿಲಸಿದ್ಧ ಮಲ್ಲಿಕಾರ್ಜುನನೆ ಕಂದನ ಮುಖ ನೋಡಿಯಾದರೂ ನೀವಿಬ್ಬರೂ ಒಂದಾಗಿ. ನಿಮ್ಮಿಬ್ಬರ ಜಗಳದಲ್ಲಿ ನಾನು ಬಡವಾಗಿದ್ದೇನೆ. 'ಗಂಡ ಹೆಂಡತಿಯ ಜಗಳದಲ್ಲಿ ಕೂಸು ಬಡವಾಯಿತು' ಎಂದು ಜನ ಆಡಿಕೊಳ್ಳದಂತೆ ನನಗೆ ಉಪಕಾರ ಮಾಡು ಶಿವನೆ!

328

**ಎಲೆ ಭ್ರಾಂತುಗೊಂಡ ಮರುಳೆ, ನೀ ಕೇಳಾ, ಹಾ! ಹಾ!**
**ಅಯ್ಯಾ, ಈಶ್ವರ ತಾ ಮುನ್ನ ಹರಸಿ ಕಟ್ಟಿದ ನೊಸಲಪಟ್ಟವ**
**ಬೇರೆ ಮತ್ತೊಬ್ಬರು ಹೆಚ್ಚಿಸಿ ಕುಂದಿಸಿ ಕಟ್ಟಬಲ್ಲರೆ?**
**ಅಯ್ಯಾ ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ತಾ ಮುನ್ನ ಹರಸಿ ಕಟ್ಟಿದಂತಹುದಯ್ಯಾ.**

ಹಣೆಯಲ್ಲಿ ವಿಧಿ ಬರೆದ ಲಿಖಿತ ಯಾರೂ ತಪ್ಪಿಸಲು ಸಾಧ್ಯವಿಲ್ಲ ಎಂದು ಹೇಳುವುದುಂಟು. ಅದು ಭ್ರಾಂತಿಯ ಮಾತು. ಅರೆಮರುಳರು ಆಡುವ ಮಾತು. ಚಿಟಿಗೆಮ್ಮ ಬರೆದ ಹಣೆಬರಹ ಯಾರೂ ಬದಲಿಸಲು ಸಾಧ್ಯವಿಲ್ಲ ಎನ್ನುವುದೂ ಉಂಟು. ಇದು ಕೂಡಾ ಭ್ರಾಂತಿಯ ಮಾತು.

ಈಶ್ವರನು ಹರಸಿ ಗರ್ಭಕ್ಕೆ ಕಳುಹಿಸಿ; ಆ ತನುವಿನಲ್ಲಿಯೇ ಈಶ್ವರನಿದ್ದ ನೊಸಲ ಪಟ್ಟವ ಬೇರೆ ಮತ್ತೊಬ್ಬರು ಹೆಚ್ಚಿಸಿ ಕುಂದಿಸಿ ಬರೆದು ಕಟ್ಟಬಲ್ಲರೆ? ಆತನಿದ್ದ ತನುವದು ಸುಕ್ಷೇತ್ರ. ಆತನಿದ್ದ ಹಣೆಯದು ಮುಕ್ಕಣ್ಣನ ಹಣೆ. ಹಣೆಗಣ್ಣುಳ್ಳ ಈಶ್ವರನು ಇದ್ದ ಸ್ಥಳವನ್ನು ಮತ್ತೊಬ್ಬರು ಹೆಚ್ಚಿಸಿ ಕುಂದಿಸಿ ಬರೆಯಲು ಸಾಧ್ಯವೆ?

ಭ್ರಾಂತುಗೊಂಡ ಮನವೆಂಬ ಮರುಳೆ, ನೀ ಕೇಳು; ನೀನು ಹಣೆಗಣ್ಣುಳ್ಳ ಈಶ್ವರನನ್ನು ಅರಿಯದೆ ಇದ್ದುದಕ್ಕಾಗಿ ನಿನಗೆ ಮರುಳು ಹಿಡಿದಿದೆ. ಆತನನ್ನು ಮರೆತು, ಆತನಿದ್ದ ಕ್ಷೇತ್ರದಲ್ಲಿ ಅಂದರೆ ಆತನು ವಾಸ ಮಾಡಿದ ತನುವಿನ ಕ್ಷೇತ್ರದಲ್ಲಿಯೇ ನಿನ್ನ ಮರೆವಿನ ಸಾಮ್ರಾಜ್ಯ ಸ್ಥಾಪಿಸಿದ್ದಕ್ಕಾಗಿ ನಿನ್ನ ಅಜ್ಞಾನದ ಫಲ ನಿನಗೆ ದಕ್ಕಿದೆ.

ಈಶ್ವರ ವಾಸ ಮಾಡಿದ ತನುವನ್ನು ನೀನು ಸ್ವಾಧೀನಪಡಿಸಿಕೊಂಡಿರುವೆ. ಅಲ್ಲಿ ನಿನ್ನ ಸುಳ್ಳಿನ ಸಾಮ್ರಾಜ್ಯ ಸ್ಥಾಪನೆ ಮಾಡಿರುವಿ. ಆದರೆ ಈಶ್ವರನನ್ನೇ ಮರೆತಿರುವಿ.

ತನುವೆಂಬುದು ಈಶ್ವರ ಕಟ್ಟಿದ ಮನೆ. ಈಶ್ವರನೇ ಅದರ ಹಣೆಬರಹವನ್ನು ಬರೆದಿದ್ದಾನೆ. ಸ್ವತಹ ಆ ಮನೆಯಲ್ಲಿ ಆತನೇ ಇದ್ದಾನೆ. ಹಾಗೆಯೇ ಆ ಮನೆಗೊಬ್ಬ ಮಾನಸಿಯನ್ನು ಸೃಷ್ಟಿ ಮಾಡಿದ್ದಾನೆ. ಆಕೆ ಈಶ್ವರನಿಗೆ ಶರಣು ಹೋದರೆ ಸಾಕು ಕೂಡಲೆ ತನುವನ್ನು, ತನುವನ್ನು ಆವರಿಸಿದ ಮನವನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ತಾ ಮುನ್ನ ಹರಸಿಕಟ್ಟಿದ ಬರಹವನ್ನು ಕೂಡಲೇ ಅಳಸಿ ಹಾಕುತ್ತಾನೆ. ಇದು ಈಶ್ವರ ಲೀಲೆ. ಆತ ಬರೆದ ಬರೆಹವನ್ನು ಆತನೇ ಅಳಸಿ ಹಾಕುವ ಸ್ವಲೀಲೆ.

329

**ಎಲೆಯವ್ವ, ಆತನ ಬಾಯಲ್ಲಿ ಬೆಳೆವುತ್ತಲಿದ್ದೆ ನಾ,**
**ಎಲೆಯವ್ವ, ಆತನ ಸರದೊಳಗೆ ಕೂಡಿ ಸರಹುತ್ತಿದ್ದೆ ನಾ,**
**ಎಲೆಯವ್ವ, ಎಲೆಯವ್ವ, ಆತನ ಗಳದೊಳಗೆ ಕೂಡಿ ಗಳಹುತ್ತಿದ್ದೆನಾ,**
**ಎಲೆಯವ್ವ, ಎಲೆಯವ್ವ, ಆತನ ಅಪ್ಪುದಪ್ಪಿನೊಳಗೆ ಹುಟ್ಟಿ**
**ದಪ್ಪಗೊಂಡು ಬೆಳವುತ್ತಿದ್ದೆ ನಾ,**

**ಕಪ್ಪು ಕಪ್ಪುಗಳನೆ ನುಂಗಿ ತನ್ನ ಕಪ್ಪ ಮೆರೆವನವ್ವಾ**
**ಎನ್ನ ಕಪಿಲಸಿದ್ಧ ಮಲ್ಲಿನಾಥ, ದೇವರ ದೇವ.**

ಅರ್ಜುನ, ಭಗವಂತನೊಂದಿಗೆ ಕಾದು ಗೆಲಿದ. ದಾಸೀಮಾರ್ಯ ವಸ್ತ್ರವನಿತ್ತು ಗೆಲಿದ. ಬಲಿ ತನ್ನನ್ನೇ ಇತ್ತು ಗೆಲಿದ. ಮಾರ್ಕಂಡೇಯ ಮೃತ್ಯುಂಜಯ ಮಂತ್ರ ಹೇಳಿ ಗೆಲಿದ. ಲೋಕದ ಸಕಲ ತನುಗಳಲ್ಲಿ ಭಗವಂತನಿದ್ದರೂ ಕೂಡಾ ಭಗವಂತನನ್ನು ಎಲ್ಲೆಲ್ಲೊ ಹುಡುಕುತ್ತಲಿದೆ. 'ನಾನು ನಿನ್ನಲ್ಲಿಯೇ ಇದ್ದೇನೆ' ಎಂದು ನುಡಿಯದೇ ನುಡಿದು ಹೇಳುವ ಮಾತು ತನುವಿಗೆ ಕೇಳುತ್ತಿಲ್ಲ.

ಹೀಗಾಗಿ ಸಿದ್ಧರಾಮ ಶಿವಯೋಗಿಗಳು, ನುಡಿಯುವ ಆತನ ಬಾಯಲ್ಲಿ ಬೆಳೆವುತ್ತಲಿದ್ದೆ ನಾನು: ಆದರೂ ನುಡಿಯುವ ಆತನಿಗೇ ನಾನು ನುಡಿಯುವ ಶಬ್ದವಾದರೂ ಏನೆಂದು ಗೊತ್ತಿಲ್ಲದೇ ಹೋಯಿತು. 'ಓಂ ನಮಃ ಶಿವಾಯ' ಎಂಬುದು ತಾನೇ ಆಗಿದ್ದರೂ ಕೂಡಾ ಅದು ನಾನೇ ಎಂಬುದು ಗೊತ್ತಿಲ್ಲ ನುಡಿಯುವಾತನಿಗೆ. ಹೀಗಾಗಿ ಆತನ ಬಾಯಲ್ಲಿಯೇ ಇದ್ದು ಬೆಳೆಯುತ್ತಲಿದ್ದೇನೆ ನಾನು. ನಾನು ಬೆಳೆಯುವುದೆಂದರೆ ಆತ ಬೆಳೆದಂತೆಯೇ ಆದರೂ ನನ್ನನ್ನು ಕುರಿತು ಬಾಯಿಯ ಮೂಲಕ ನುಡಿಯುತ್ತಿದ್ದಾನೆ.

ಎಲೆಯವ್ವ, ಆತನ ಸರದೊಳಗೆ ಕೂಡಿ ಸರಹುತ್ತಿದ್ದೆ ನಾ:

ಎಲೆಯವ್ವ, ಮಂದಿರ ಮಸೀದಿ ಚರ್ಚ್‌ಗಳಲ್ಲಿ ಹುಡುಕಿ ಹುಡುಕೀ ಕಾಲಕಳೆಯುವಿ. ಆದರೆ ತನುವನ್ನು ಹಿಡಿದು ಹುಡುಕುವ ಸರದೊಳ ಸ್ವರವಾಗಿ 'ಓಂ'ಕಾರದ ಝುರಿಯಾಗಿ ಹರಿಯುತ್ತಿದ್ದೇನೆ ನಾನು. ಹುಡುಕುವ ನಿನ್ನ ತನುವಿನೊಳಗೆ ನಾನಿದ್ದರೂ ನಿನಗೆ ಸಿಕ್ಕುತ್ತಿಲ್ಲ.

ಎಲೆಯವ್ವ, ಎಲೆ ಎಲೆಯವ್ವ, ಆತನ ತನುವಿನ ಕಂಠದೊಳಗೆ ಕೂಡಿ ಮನ ಬಂದಂತೆ ಧ್ವನಿಸುತ್ತಿರುವ ಆ ಧ್ವನಿಯೇ ನಾನಾಗಿದ್ದರೂ ನಾನು ಯಾರು ಎಂದು ತಿಳಿಯಲು ಹೋಗದೆ ನಿನಗೆ ತಿಳಿದಂತೆ ನುಡಿಯುತ್ತಿರುವಿ ನೀನು.

ಎಲೆಯವ್ವ, ಎಲೆಯವ್ವ, ಆತನ ತನುವನ್ನು ಅಪ್ಪಿ ಆ ಅಪ್ಪುಗೆಯ ಒಪ್ಪದೊಳಗೆ ಹುಟ್ಟಿ ದಪ್ಪಗೊಂಡು ಬೆಳೆವುತ್ತಿದ್ದೇನೆ ನಾನು. ಆದರೂ ನಾನು ಯಾರೆಂದು ನಿನಗೆ ತಿಳಿದಿಲ್ಲ. ನನ್ನನ್ನು ಹುಡುಕುವ ನೀನೇ ನಾನಾಗಿರುವೆನೆಂದು ಕಂಡುಹಿಡಿದು ನಿನ್ನಲ್ಲಿಯೇ ನನ್ನನ್ನು ಹುಡುಕು ಎಲೆಯವ್ವ.

ಕಪ್ಪು ಕಪ್ಪುಗಳನೇ ನುಂಗಿ ತನ್ನ ಕಪ್ಪ ಮೆರೆವ ನೀಲಕಂಠನಾತ. ದೇವರ ದೇವ ಕಪಿಲಸಿದ್ಧ ಮಲ್ಲಿಕಾರ್ಜುನ ಆತ. ಹುಡುಕುವ ಜಾಗ ಮರೆತು ಹುಡುಕಿದರೆ ಸಿಗುವುದಾದರೂ ಹೇಗೆ ಎಲೆಯವ್ವ?

ಕೂಗಿ ಕೂಗಿ ಪ್ರಾರ್ಥಿಸುವಿ. ಮೌನದಿಂದ ಪ್ರಾರ್ಥಿಸುವಿ. ಗಾಯತ್ರಿ ಮಂತ್ರ ಜಪಿಸುವಿ. ಕಲ್ಲಲ್ಲಿ ಕೆತ್ತಿ ಕೆತ್ತಿದ ಕಲ್ಲನ್ನೇ ನಾನೆಂದು ಆರಾಧಿಸಿ ಉತ್ಸವ ಮಾಡಿ ಹಾಡಿ ಆಡಿ ಹೊಗಳುವಿ. ನನಗಾಗಿ ಛತ್ರಿ ಚಾಮರಗಳನ್ನು ಹಿಡಿದು ಬೀಸುವಿ. ಕ್ಷೀರಾಭಿಷೇಕ ಕುಂಕುಮ ಭಸ್ಮಾರ್ಚನೆಗಳನ್ನು ಮಾಡಿ ಬೇಡಿಕೊಳ್ಳುವಿ. ಎಲೆಯವ್ವ ಉರುಳು ಸೇವೆ ಮಾಡಿ, ದೀಡು ನಮಸ್ಕಾರ ಹಾಕಿ ಜ್ಯೋತಿ ಹೊತ್ತು ಆರಾಧಿಸುವ ನಿನ್ನ ಸಂಕಟ ನನಗೆ ವಿನೋದ ನೋಡವ್ವ!

ನಿನ್ನಲ್ಲಿರುವ ನನ್ನನ್ನು ನಿನಗೆ ಹುಡುಕಲು ಸಾಧ್ಯವಾಗುತ್ತಿಲ್ಲ. ಚೆನ್ನಬಸವಣ್ಣ ಹೇಳುವ ಮಾತಾದರೂ ಕೇಳು ಅವ್ವಾ. ''ತಜ್ಞಯವಾಗಿಹುದು ಓಂಕಾರ''. ಎಲೆಯವ್ವಾ ನಿನ್ನ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಚೆಲ್ಲದಂತೆ ಸುಂದರವಾಗಿ ಹೆಣೆದುಕೊಂಡ ನಿನ್ನ

ಚರ್ಮದಲ್ಲಿಯೇ ಓಂಕಾರವಾಗಿ ನಾನಿದ್ದೇನೆ. ನಿನ್ನನ್ನು ನೀನು ಒಮ್ಮೆ ಮುಟ್ಟಿಕೊಂಡು ನೋಡು ನಿನಗೆ ನಾನು ಸಹಜವಾಗಿ ದರ್ಶನ ನೀಡುತ್ತೇನೆ. ನೀನು ಮತ್ತೊಬ್ಬರನ್ನು ಮುಟ್ಟಿ ನೋಡು; ನಾನು ನಿನ್ನಲ್ಲಿಯೇ ಮರೆಯಾಗುತ್ತೇನೆ. ನಾನಿದ್ದ ಜಾಗದಲ್ಲಿ ನಿನಗೆ ಉದ್ರೇಕವಾಯಿತು. ಏಕೆಂದರೆ ನಿನ್ನನ್ನು ನೀನು ಮರೆತು ಮತ್ತೊಬ್ಬರನ್ನು ಮುಟ್ಟಿದೆ. ಪದಾರ್ಥ ಒಂದೇ ಎನ್ನುವ ಓಂಕಾರದ ಸ್ವರ ನಿನ್ನಲ್ಲಿಯೇ ಉಳಿಯಿತು. ನಿನ್ನ ಅಜ್ಞಾನದ ಉದ್ರೇಕ ಚರ್ಮವನ್ನು ಆವರಿಸಿತು.

ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸುಗಳೇ ನ.ಮ.ಶಿ.ವಾ.ಯ ಕಾರಗಳಾಗಿವೆ. ಚರ್ಮವೇ ಓಂಕಾರವಾಗಿದೆ ಎಂದು ಹೇಳುವ ಚೆನ್ನಬಸವಣ್ಣನವರ ಮಾತು ಸತ್ಯವಲ್ಲವೆ? ಇವು ಇಲ್ಲದ ತನುಗಳು ಲೋಕದಲ್ಲಿ ಒಂದಾದರೂ ಇದೆಯಾ? ಆದರೂ ತನುವೆಂದರೇನೆಂದು ತನುವಿಗೆ ಗೊತ್ತಿಲ್ಲ. ಏಕೆಂದರೆ ತನುವಿನಲ್ಲಿ ನೀನಿರುವುದು ತನುವಿಗೆ ಗೊತ್ತಿಲ್ಲ! ಎಲೆಯವ್ವ, ಎಲ್ಲವೂ ನಿನ್ನ ಮಾಯೆ!

**330**

**ಎಲೆಯವ್ವ, ಎಲೆ ಎಲೆಯವ್ವ,**
**ಹುಟ್ಟಿದ ಮಕ್ಕಳು ತಂದೆಗೆ ಬೇಟಗೊಂಬರೆ? ಅಯ್ಯಾ.**
**ಎಲೆಯವ್ವ, ಎಲೆ ಎಲೆಯವ್ವ,**
**ಹೆತ್ತ ಮಕ್ಕಳ ಕೈವಿಡಿವರೆ? ಎಲೆಯವ್ವ,**
**ಪಾಪವಿನಾಶಿ ನೀನಾಗಿ ನಿನಗೆ ಮೂಗಿನಳೈವ ದೆಸೆ ಕಾಣ!**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯ.**

ಪರಸತಿ ಪರಧನ ಪರದೈವಕ್ಕೆ ಅಳುಪಿದೆನಾದೊಡೆ ನಿಮ್ಮಾಣೆ; ನಿಮ್ಮ ಪ್ರಮಥರಾಣೆ ಎನ್ನುತ್ತಾಳೆ ಶರಣೆ ಸತ್ಯಕ್ಕ. ಇದೊಂದು ಸುಂದರವಾದ ಸೂತ್ರ. ಶರಣರು ಈ ಸೂತ್ರ ಪಾಲಿಸಿದರು. ಸತ್ಯ ಅವರ ಗೋಚರಕ್ಕೆ ಬಂತು. ಕೂಡಲೇ ಆ ಸತ್ಯಕ್ಕೆ ಶರಣು ಹೋದರು. ಶರಣರಾದರು. ಸಹಜವಾಗಿ ಸಹಜ ಜ್ಞಾನದಲ್ಲಿ ನಡೆದರು. ಸಹಜ ಜ್ಞಾನವನ್ನೇ ನುಡಿದರು.

ಮನವೆಂಬುದು ಹೆಣ್ಣು. ಅರಿವೆಂಬುದು ಗಂಡು. ಗಂಡು ಹೆಣ್ಣು ದೇಹವನ್ನು ಆಶ್ರಯಿಸಿವೆ. ದೇಹವನ್ನು ಮನೆಯನ್ನಾಗಿಸಿಕೊಂಡಿವೆ. ಹೀಗಾಗಿ ದೇಹದಲ್ಲಿರುವ ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ನಿರ್ಭಾವ ನಿರ್ಗುಣಗಳಿಗೆ ಬೇಧವಿಲ್ಲ. ಲೋಕದಲ್ಲಿ ವಾಸಮಾಡುತ್ತಿರುವ ದೇಹಗಳೆಲ್ಲ ಒಂದೇ ಆಗಿ ಕಾಣುತ್ತವೆ. ದೇಹದಲ್ಲಿ ಹರಿಯುತ್ತಿರುವ ರಕ್ತ, ಅದರಲ್ಲಿರುವ ಮಾಂಸ ಮೂಳೆ ಮಜ್ಜೆ ಮೇದಸ್ಸು ಕೂಡಾ ಒಂದೇ ಆಗಿದೆ.

ಮನದ ಅಜ್ಞಾನದಿಂದಾಗಿ ದೇಹವೇ ದೇಹಕ್ಕೆ ಹೆಣ್ಣಾಗಿ, ಗಂಡಾಗಿ ಕಾಣುತ್ತದೆ. ದೇಹದಲ್ಲಿಯೇ ಸಂಗಮವಾದ ಜ್ಞಾನದಲ್ಲಿ ದೇಹವನ್ನು ಆವರಿಸಿದ ಮನ ಕೂಡಿದರೆ ಮನ ಮತ್ತು ಜ್ಞಾನ ಕೂಡಿ ಜ್ಞಾನವೇ ಆಗುತ್ತದೆ. ಆಗ ದೇಹ ದೇಹವಾಗಿಯೇ ಕಾಣುತ್ತದೆ. ಅದು ಹೆಣ್ಣಾಗಿ ಗಂಡಾಗಿ ಕಾಣುವುದಿಲ್ಲ.

ಶರಣರು ದೇಹದಲ್ಲಿರುವ ಜ್ಞಾನವನ್ನು ಕಂಡು ಹಿಡಿದರು. ಆ ಜ್ಞಾನಕ್ಕೆ ದೇವರು-ಲಿಂಗಯ್ಯ-ಪುರುಷ-ಗಂಡ-ಪತಿ-ತಂದೆ ಎಂದು ಹೆಸರಿಟ್ಟು ಕರೆದರು. ಹಾಗೆಯೇ ದೇಹವನ್ನು ಆವರಿಸಿದ ಮನಕ್ಕೆ ಸತಿ ಹೆಂಡತಿ ಹೆಣ್ಣು ಅವ್ವ ತಾಯಿ ಎಂದು ಹೆಸರಿಟ್ಟು ಕರೆದರು.

ಮನವನ್ನೇ ಸತಿಯನ್ನಾಗಿಸಿ ಜ್ಞಾನವೆಂಬ ಲಿಂಗಯ್ಯನನ್ನೇ ಪತಿಯನ್ನಾಗಿಸಿ ಆ ಪತಿಗೆ ಸತಿ ಶರಣು ಹೋಗಿ ಸಂಪೂರ್ಣ ಶರಣಾಗತಿಯಾದಳು. ಹೀಗಾಗಿ ಶರಣ ಸತಿ ಲಿಂಗ ಪತಿ ಎಂದು ಘೋಷಿಸಿದರು. ಹೀಗೆ ತನ್ನ ತನುವಿನ ಜ್ಞಾನವನ್ನು ತನ್ನ ಮನದಿಂದಲೇ ಅನುಭವಕ್ಕೆ ತಂದುಕೊಂಡ ವ್ಯಕ್ತಿಯನ್ನು ಮಹಾಜ್ಞಾನಿ, ಶರಣ ಎಂದು ಕರೆದರು. ಇಂತಹ ಕಾಯಕ್ಕೆ ಮನವೇ ತಾಯಿಯಾಯಿತು; ಜ್ಞಾನವೇ ತಂದೆಯಾಯಿತು. ಹೀಗಾಗಿ ಬಸವಣ್ಣನವರು 'ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ' ಎಂದು ಎದೆ ತುಂಬಿ ಹಾಡಿದರು.

ತನುವಿನ ಜ್ಞಾನ ತನುವಿನ ಅನುಭವಕ್ಕೆ ಬಂದ ಮೇಲೆ ತನುವಿನಲ್ಲಿಯೇ ಪರರಿಂದ ಸಂಗ್ರಹವಾದ ಭಗವದ್ಗೀತೆ ಬೈಬಲ್ ಕುರಾನ್ ಉಪನಿಷತ್‌ಗಳ ಜ್ಞಾನವೆಂಬ ಧನವೆಲ್ಲ ಉದುರಿ ಬಿದ್ದವು. ಪರಧನವೆಂದರೆ ಪರರ ಸಂಪತ್ತು, ಪರರಿಂದ ಬಂದ ಅರಿವು, ಪರರಿಂದ ಬಂದ ಜ್ಞಾನ. ಇದನ್ನು ಶರಣರು ಪರಧನ ಎಂದು ಕರೆದರು.

ಮನವೆಂಬುದೇ ಹೆಣ್ಣು-ಸತಿ. ಮನವೆಂಬ ಹೆಣ್ಣು ಜ್ಞಾನವೆಂಬ ಗಂಡಿಗೆ ಸತಿಯಾದಾಗ ಆಕೆ ಪತಿಯುಳ್ಳ ಸತಿ. ಮನದಿಂದಲೇ ಕಾಯ ಹೆಣ್ಣು ಎಂದು ಗಂಡು ಎಂದು ಕರೆಯಿಸಿಕೊಳ್ಳುತ್ತದೆ. ಈ ಹೆಣ್ಣೇ ಜ್ಞಾನವೆಂಬ ಗಂಡಿಗೆ ಹೆಂಡತಿಯಾಗಿ ಸತಿ ಪತಿಗಳು ಒಂದಾದ ಜ್ಞಾನ ಕಾಯವಾಗುತ್ತದೆ. ಇಂತಹ ಜ್ಞಾನ ಕಾಯವೇ ಶರಣ ಕಾಯ. ಇಂತಹ ಶರಣ ಕಾಯಕ್ಕೆ ಸಕಲ ಕಾಯಗಳು ಹೆಣ್ಣಾಗಿ ಗಂಡಾಗಿ ಕಾಣುವುದಿಲ್ಲ. ಜ್ಞಾನಕಾಯಗಳಾಗಿಯೇ ಕಾಣುತ್ತವೆ. ಆಯಾ ಕಾಯಗಳಿಗೆ ಜ್ಞಾನ ತಿಳಿದಿರುವುದಿಲ್ಲ ಅಷ್ಟೇ. ಶರಣ ಕಾಯಕ್ಕೆ ಸಕಲ ಕಾಯಗಳೂ ವಿರಾಟಸ್ವರೂಪಿಗಳಾಗಿಯೇ ಕಾಣುತ್ತವೆ. ಹೀಗಾಗಿ ಬಸವಣ್ಣನವರು ''ಎನಗಿಂತ ಕಿರಿಯರಿಲ್ಲ'' ಎಂದು ಹೇಳುವ ಮೂಲಕ ತಮ್ಮ ವಿರಾಟಸ್ವರೂಪವನ್ನೇ ಮೆರೆದರು.

ಪರಕಾಯವೆಂದರೆ ಪರಮೇಶ್ವರನೆಂಬ ಜ್ಞಾನವಿದ್ದಕಾಯ. ಆ ಜ್ಞಾನವೆಂಬ ಪರಮೇಶ್ವರನೊಂದಿಗೆ ಮನವೆಂಬ ಪಾರ್ವತಿ-ದೇವಿ ವಾಸ ಮಾಡಿದ ಕಾಯ. ಜ್ಞಾನವೆಂಬ ಪರಮೇಶ್ವರ ಮನವೆಂಬ ಪಾರ್ವತಿ-ದೇವಿ ಸಕಲ ಕಾಯಗಳಲ್ಲಿ ವಾಸಮಾಡಿದ್ದಾರೆ. ಹೀಗಾಗಿ ಕಾಯ, ಪರಮೇಶ್ವರನಿದ್ದ ಪರಕಾಯವೂ ಹೌದು. ಪಾರ್ವತಿ-ದೇವಿ ವಾಸವಿದ್ದ ಪರಸತಿಯ ಕಾಯವೂ ಹೌದು! ಸತಿ ಪತಿಗಳು ಒಂದಾಗಿ ವಾಸ ಮಾಡುತ್ತಿರುವ ಅರಿವಿನ ಮಹಾಕಾಯವೂ ಹೌದು.

ಅರಿವಿಗೆ ಶರಣು ಹೋದ ಮನವೆಂಬ ಸತಿ, ಅರಿವೇ ಗುರುದೇವನೆಂದು, ಮಹಾದೇವನೆಂದು, ಸದಾಶಿವನೆಂದು, ಪರಬ್ರಹ್ಮನೆಂದು ಕರೆಯಿಸಿಕೊಂಡ ಪತಿದೇವನಿದ್ದ ಕಾಯವನ್ನು ಅಜ್ಞಾನದಿಂದ ಹೆಣ್ಣು ಎಂದು, ಗಂಡು ಎಂದು ನೋಡಿ ಹಾದರಕ್ಕೆ ಒಳಗಾಗಬಹುದೇ? ಇದು ಮಹಾಪಾಪದ ಕೆಲಸ. ಹೀಗಾಗಿ ಶಿವಶರಣೆ ಸತ್ಯಕ್ಕ ಪರಸತಿ ಪರಧನ ಪರದೈವಕ್ಕೆ ಅಳುಪಿದೆನಾದೊಡೆ ನಿಮ್ಮಾಣೆ; ನಿಮ್ಮ ಪ್ರಮಥರಾಣೆ ಎಂದು ಕಾಯವನ್ನು ಸತ್ಯದಿಂದ ಕಂಡು ಸತ್ಯವಾಗಿಯೇ ನುಡಿದಿದ್ದಾಳೆ ಸತ್ಯಕ್ಕ.

ಸಿದ್ಧರಾಮ ಶಿವಯೋಗಿ, ಕಾಯದಲ್ಲಿ ಶಿವನೆಂಬ ಅರಿವಿನ ತಂದೆ ಮನವೆಂಬ ತಾಯಿ ವಾಸಮಾಡಿದುದನ್ನು ಕಣ್ಣಾರೆ ಕಂಡ!

ಎಲೆಯವ್ವ, ಎಲೆ ಎಲೆಯವ್ವ, ಕಾಯದಿಂದ ಹುಟ್ಟಿದ ಮಕ್ಕಳು ಕಾಯದಲ್ಲಿಯೇ ವಾಸ ಮಾಡಿದ ತಂದೆಯನ್ನು ಮೋಹ ಮಾಡಲು ಸಾಧ್ಯವೆ? ಅಯ್ಯಾ. ಎಲೆಯವ್ವ, ಎಲೆ ಎಲೆಯವ್ವ

ನೀನು ಹೆತ್ತ ಮಕ್ಕಳ ಕೈಯನ್ನು ನೀನೆ ಹಿಡಿಯುವುದೆಂದರೇನು ತಾಯಿ? ಎಲೆಯವ್ವ, ಪಾಪವಿನಾಶಿನಿ ನೀನು. ನಿನ್ನ ಮೂಗಿನಲ್ಲಿರುವ ಐದು ನಲ್ಲೆಯರಿಗೆ ಕಪಿಲಸಿದ್ಧ ಮಲ್ಲಿಕಾರ್ಜುನನೊಬ್ಬನೆ ನೆಲೆ ಕಾಣಾ ತಾಯಿ.

ಅದ್ಭುತವಾದ ಸೂತ್ರ! ಓದಿ ಅರ್ಥಮಾಡಿಕೊಂಡು ಸ್ವಾನುಭಾವಕ್ಕೆ ಅಣಿಯಾಗುವ ಕಾಯವೇ ಕೈಲಾಸ! ಇಂತಹ ಕಾಯಕದಲ್ಲಿ ನಿರತವಾದ ಕಾಯವನ್ನೇ ಕೈಲಾಸ ಎಂದು ಕರೆದರು ಶರಣರು! ಕಾಯವೇ ಕೈಲಾಸ.

**331**

**ಎಸಳ ಕುಸುಮದಿಂದಲತ್ತ ಪಸರಿಸಿತು.**
**ಪಂಕವೆಂಬ ದೆಸೆ ಇದ್ದೆಸೆಗೆಟ್ಟರಾಡುವ**
**ಪರಿಯನೆನಗೆ ತೋರದಿರಯ್ಯಾ.**
**ಇದ್ದೆಸೆಯ ಮುದ್ದೆಸೆಯನೊದ್ದೆಸೆಯ ಮಾಡಿ**
**ಸಲಹು ಕಪಿಲಸಿದ್ದ ಮಲ್ಲಿಕಾರ್ಜುನಾ.**

ಕೆಸರಿನಿಂದ ಹುಟ್ಟಿದ ಕಮಲದಿಂದ ಸುಗಂಧ ಹರಡುವುದು. ಹೂ ಮತ್ತು ಹೂವಿನ ಪಕಳೆಗಳು ಸುಂದರ ಅದರ ಸುಗಂಧ ಮೂಗಿಗೆ ಪರಮಾನಂದವನ್ನು ಉಂಟು ಮಾಡುತ್ತದೆ. ಹೂ ನೋಡಿದ ಕಣ್ಣುಗಳು ಕೆಸರು ನೋಡುವುದಿಲ್ಲ. ಸುಗಂಧ ಹೀರಿ ಆನಂದವನ್ನು ಅನುಭವಿಸಿದ ಮೂಗು ಕೂಡಾ ಕೆಸರಿನ ನಾತ ಅದಕ್ಕೆ ತಾಗುವುದಿಲ್ಲ.

ಕೆಸರಿನಿಂದಲೇ ಕಮಲ ಹುಟ್ಟುತ್ತದೆ. ಕೆಸರು ಕಮಲಕ್ಕೆ ನೆಲೆಯನ್ನು ಒದಗಿಸಿದೆ. ಹೂವಾಗಿ ಅರಳಿ ಮಕರಂದವನ್ನು ಸೂಸಲು, ನೀರಿನ ಮೇಲೆಯೇ ನಿಂತು ನೀರು ತಾಗದಂತೆ ನೀರಿನ ಮೇಲೆ ಹರಡಿ ಅದರ ಬಳ್ಳಿಗೆ ಕೆಸರು ಒದಗಿಸಿದೆ.

ಹೂ ಬೇಕು, ಸುಗಂಧ ಬೇಕು, ಅದರ ಸುಂದರವಾದ ಬಳ್ಳಿ ಕೂಡಾ ಇಷ್ಟವೇ. ಬಳ್ಳಿಗೆ ನೆಲೆ ಒದಗಿಸಿದ ಕೆಸರು ಮಾತ್ರ ಬೇಡವೆಂದರೆ ಬಳ್ಳಿ ಬದುಕಲು ಸಾಧ್ಯವೆ? ಬಳ್ಳಿಗೂ ಹೂವಿಗೂ ಮಕರಂದಕ್ಕೂ ಕೆಸರು ನೀರು ಆಧಾರ. ಒಂದನ್ನು ಬಿಟ್ಟು ಒಂದಿಲ್ಲ. ಒಂದನ್ನು ಬಿಟ್ಟು ಒಂದು ಬದುಕುವುದಿಲ್ಲ.

ಮಹಾಜ್ಞಾನ ಪಡೆಯಲು ಸಂಸಾರವೇ ಬೇಡ ಎಂದರೆ ಹೇಗೆ? ಕೆಸರಿನಿಂದ ಹೊರಬಂದ ಕಮಲ ಹೇಗೆ ಬದುಕಲು ಸಾಧ್ಯವಿಲ್ಲವೋ ಹಾಗೆಯೇ ಸಂಸಾರದಿಂದ ಹೊರಬಂದು ಸನ್ಯಾಸಿಯಾಗಿ ಜ್ಞಾನ ಸಂಪಾದನೆ ಮಾಡುತ್ತೇನೆ ಎನ್ನುವ ಹಠವೂ ತೊಂದರೆಯನ್ನು ನೀಡುತ್ತದೆ.

ಕೆಸರು ಹೇಗೆ ಪುಷ್ಪಕ್ಕೆ ಅದರ ಪರಿಮಳಕ್ಕೆ ನೆಲೆ ನೀಡಿದೆಯೋ ಹಾಗೆಯೇ ಸಂಸಾರ ಕೂಡಾ ತನುವಿಗೆ ನೆಲೆ ನೀಡಿದೆ. ಕೆಸರನ್ನೇ ಆಧಾರ ಮಾಡಿಕೊಂಡು ಬಳ್ಳಿ ಬೆಳೆದು ಜಲದ ಮೇಲೆ ನಿಂತು ಪಕಳೆಗಳನ್ನು ಬಿಚ್ಚಿ ಸುಂದರವಾಗಿ ಅರಳಿ ನಿಂತಿದೆ. ಸುಗಂಧದ ಪರಿಮಳವನ್ನು ಹರಡಿದೆ.

ಶರಣರು ಸಂಸಾರವನ್ನು ಬಿಡಲಿಲ್ಲ. ಸಂಸಾರ ಶರಣರಿಗೆ ಬಾಧೆಯನ್ನು ಉಂಟು ಮಾಡಲಿಲ್ಲ. ಬದಲಾಗಿ ಮಹಾಜ್ಞಾನವೆಂಬ ಅರಿವಿನ ಪರಿಮಳದ ಪರಮಸುಖವನ್ನು ಉಣ್ಣಲು ನೆರವಾಯಿತು.

ಸಂಸಾರದಲ್ಲಿ ಇದ್ದು ಅದರ ನೆಲೆಯನ್ನು ಒದ್ದು ಕಾಡಿಗೆ ಹೋಗಿ ಜಪತಪಗಳನ್ನು ಮಾಡಿ

ಉದ್ದುದ್ದ ಗಡ್ಡ ಬೆಳೆಸಿ ಕಾಶಾಯವನ್ನು ಹೊದ್ದು ಪುನಹ ನಾಡಿಗೆ ಬಂದವರು ಬಹಳಷ್ಟು ಜನರಿದ್ದಾರೆ.

ನಾಡಿನ ಸುಖಕ್ಕಾಗಿ ಕಾಡಿಗೆ ಹೋಗಿ; ಪುನಹ ನಾಡಿಗೆ ಬಂದು ನಾಡಿನ ಜನತೆಗೆ ಬೋಧಿಸುವುದು ಒಂದು ಸೋಜಿಗವೇ ಸರಿ. ಕೆಸರಲ್ಲಿದ್ದು ಕೆಸರಲ್ಲಿಯೇ ಹುಟ್ಟಿ ಕೆಸರ ಮೇಲೆಯೇ ಅರಳಿ ನಿಂತ ಪುಷ್ಪಕ್ಕೆ ಕೆಸರೇ ಆಧಾರ.

ಕೆಸರು ಪುಷ್ಪಕ್ಕೆ ತಾಯಿಯ ಗರ್ಭವಿದ್ದಂತೆ. ಅದು ಹೊಕ್ಕಳು ಬಳ್ಳಿ. ಹೊಕ್ಕಳು ಬಳ್ಳಿಯಿಂದ ಹೊರಬಂದು ಅರಳಿ ನಿಂತ ಕಮಲ ಪುನಹ ಹೊಕ್ಕಳು ಬಳ್ಳಿಯನ್ನು ನೋಡಲು ಸಾಧ್ಯವೆ? ಅರಳಿ ಸುಗಂಧ ಬೀರುವುದು ಪುಷ್ಪದ ಕಾಯಕ.

ಕಾಯದಿಂದಲೇ ಹುಟ್ಟಿ ಕಾಯದಿಂದಲೇ ಅರಳುವ ಕಾಯಕವನ್ನು ಮರೆತ ಕಾಯವೆತ್ತ? ಕೆಸರಿನಿಂದಲೇ ಹುಟ್ಟಿ ಕೆಸರಲ್ಲಿಯೇ ಎದ್ದು ನಿಂತು ಕೆಸರನ್ನೇ ಉಂಡು ಕೆಸರ ಮೇಲೆ ಅರಳಿ ನಿಂತ ಪುಷ್ಪದ ಕಾಯಕವೆತ್ತ?

ಅರಳಿ ನಿಂತ ಕಮಲ ಇದ್ದ ನೆಲೆಯನ್ನು ಮರೆಯಲಿಲ್ಲ. ಮುದ್ದೆಯ ಆಸೆಗಾಗಿ ಇದ್ದ ನೆಲೆಯನ್ನು ಒದೆಯಲಿಲ್ಲ. ಬದಲಾಗಿ ಮುದ್ದೆಸೆಯನ್ನಾಗಿ ಮಾಡಿಕೊಂಡು ಕೆಸರನ್ನೇ ಹೊದ್ದು ಕೆಸರನ್ನೇ ಉಂಡು ಕೆಸರ ಮೇಲೆ ಅರಳಿ ನಿಂತಿತು. ಅರಳುವುದಕ್ಕಾಗಿ ಕಮಲಕ್ಕೆ ಕೆಸರು ಅಮೃತವಾಯಿತು. ಹೀಗಾಗಿ ಕೆಸರ ನೆಲೆಯಲ್ಲಿಯೇ ಇದ್ದ ಕಮಲ ಅರಳಿ ನಿಂತಿತು.

ಕಾಯದ ಹೊಕ್ಕಳು ಬಳ್ಳಿಯಿಂದಲೇ ಹೊರಬಂದ ಕಾಯಕ್ಕೆ ಕಾಯದ ಹೊಕ್ಕಳು ಬಳ್ಳಿಯೇ ಮುಳುವಾಯಿತು. ಕಾಯದಿಂದ ಹೊರಬಂದ ಕಾಯ, ಕಾಯದ ಮೋಹದ ಬಲೆಯಲ್ಲಿ ಸಿಲುಕಿ, ಕಾಯ ಕಾಯವನ್ನೇ ಭೋಗಿಸಿತು. ಬ್ರಹ್ಮಕಮಲವಾಗಿ ಅರಳುವ ಆಸೆ ಕಾಯದಲ್ಲಿ ಚಿಗುರಲೇ ಇಲ್ಲ.

ಊರ್ಧ್ವಮುಖಿಯಾಗಿ ಅರಳಿ ನಿಂತ ಕಮಲ ಸುಗಂಧ ಚೆಲ್ಲಿತು. ಊರ್ಧ್ವ ಮುಖಿಯಾಗಿ ಅರಳಿ ನಿಲ್ಲಬೇಕಾದ ಬ್ರಹ್ಮಕಮಲ ಭ್ರಮೆಯಿಂದಾಗಿ ಕಾಯದ ಗುಣದಿಂದಾಗಿ ಕಾಯದಿಂದಲೇ ಕಾಯವನ್ನು ಭೋಗಿಸುತ್ತ ಅಧೋಮುಖಿಯಾಯಿತು. ಇದ್ದೆಸೆಯನ್ನು ಒದ್ದ ಪಾಪದ ಫಲ! ಅರಿವೆಂಬ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರನ್ನು ಅರಿಯದ ಪಾಪದ ಫಲ ಕಾಯಗಳಿಗೆ ಸುತ್ತಿಕೊಂಡಿದೆ.

**332**

**ಎಸಳ ಕುಸುಮ ನಿವಾರಿಸಲು ಅಯ್ಯಾ,**
**ನಾನು ನಿನ್ನ ದೆಸೆಗೆ ಕಂಬೇಟಗೊಂಡೆನಯ್ಯಾ.**
**ಪಶು ಪಾಶ ಮೋಚನ ಅಯ್ಯಾ,**
**ನಿನ್ನ ದೆಸೆ ಇದ್ದೆಸೆಯಾಗಯ್ಯಾ.**
**ಶಶಿಧರಾ, ನಿಮ್ಮ ವಶಕ್ಕೆನ್ನ ತೆಗೆದುಕೊಳ್ಳಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪಶುಪತಿಯನ್ನು ಹೊತ್ತುಕೊಂಡ ಪಶು ನಾನು. ನೀನು ಎನ್ನ ಮೇಲೆ ಕುಳಿತು ನನ್ನನ್ನು ವಾಹನವನ್ನಾಗಿಸಿಕೊಂಡಿದ್ದರೂ ನೀನು ಯಾರು ಎಂದು ತಿಳಿಯದ ಅಜ್ಞಾನಿ ನಾನು. ನೀನಿದ್ದ

ನೆಲೆಯನ್ನೇ ಅರಿಯದ ನೆಲೆಗೇಡಿ ನಾನು.

ಪಶುವಿನ ಅಜ್ಞಾನ ಕಳೆದು ಮಹಾಜ್ಞಾನಿಯನ್ನಾಗಿ ಮಾಡುವ ಬಯಕೆಯನ್ನು ಹೊಂದಿದ ಭಗವಂತನನ್ನೇ ಮರೆತ ಅವಿವೇಕಿ ನಾನು. ಪಶು ಪಾಶ ವಿಮೋಚನನು ನೀನು ಅಯ್ಯಾ. ಇದ್ದ ದೆಸೆಯಲ್ಲಿಯೇ ಇದ್ದ ಭಗವಂತ ನೀನು. ನೀನಿದ್ದ ನೆಲೆಯನ್ನು ಅರಿಯದೆ ನಿನ್ನನ್ನೇ ಹೊತ್ತುಕೊಂಡು ನಿನ್ನನ್ನು ಅರಸುವ ನನ್ನ ಅಜ್ಞಾನವನ್ನು ನಿನ್ನ ವಶಕ್ಕೆ ತೆಗೆದುಕೊಳ್ಳಯ್ಯಾ.

ಶಶಿಧರಾ, ಕಪಿಲಸಿದ್ಧ ಮಲ್ಲಿಕಾರ್ಜುನ ನಾನು ನಿನ್ನ ದೆಸೆಗಾಗಿ ಕಂಬೇಟಗೊಂಡೆನು. ಅನಂತ ಕಾಲಗಳವರೆಗೆ ನಿನ್ನನ್ನು ಅರಿಯದ ನನಗೆ ನಿನ್ನ ಕರುಣೆಯಿಂದಾಗಿಯೇ ನನಗೆ ನಿನ್ನ ಮೇಲೆ ಮೋಹ ಉಂಟಾಗಿದೆ.

ತನುವಿಗೆ ಅಂಟಿದ ಅಜ್ಞಾನದ ಭ್ರಮೆಯ ದಳಗಳನ್ನು ಉದುರಿಸಿ ಬ್ರಹ್ಮಕಮಲವನ್ನಾಗಿ ಅರಳಿಸು ತಂದೆಯೇ.

**333**

**ಎಸಳ ಮಂಟಪದಲ್ಲಿ ಕುಸುಮನಾಳದ ಭೇದ**
**ಶಶಿಧರನ ಮಸ್ತಕದ ಧವಳಗಿರಿಯ**
**ಒಸರುವ ಆನಂದ ವಿಪರೀತ ಭಾಷ್ಪವಿನ**
**ಲೆಸೆದಿರ್ದುದ್ಯೆದೆ ಸದ್ಭಕ್ತಿಕ್ರೀಯು.**
**ಶಶಿಧರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ವಶದೊಳಗಿರ್ಪಂಗಲ್ಲದೆ ಕಾಣಲರಿದು.**

ನೀರಲ್ಲಿದ್ದು, ನೀರು ತಾಕದಂತೆ, ನೀರನ್ನೇ ಉಂಡು, ನೀರ ಮೇಲೆ ತನ್ನ ಎಲೆಗಳನ್ನು ಹರಡಿ, ನೀರಿನಿಂದಲೇ ಗಟ್ಟಿಯಾದ ತನುವಿನ ಮಂಟಪ ಬ್ರಹ್ಮ ಕಮಲದಂತೆ ಅರಳಿ ನಿಂತಿದೆ. ತನುವಿನ ಮಸ್ತಕದಲ್ಲಿ ಸಾಕ್ಷಾತ್ ಶಶಿಧರನೇ ವಾಸ ಮಾಡಿದ್ದಾನೆ.

ಜಲ ಗಟ್ಟಿಯಾಗಿ ಬೆಳ್ಳನೆಯ ಬೆಳ್ಳಿ ಬೆಟ್ಟದಂತೆ ತನು ಅರಳಿ ನಿಂತಿದೆ. ಇಂತಹ ಶಿವ ತನುವಿಗೆ ಶ್ರೀಶಂಕರರು ಶಿವಾನಂದ ಲಹರಿಯ ಮೂಲಕ ನೂರಾ ಒಂದು ಶತಕದ ಪುಷ್ಪನಮನಗಳನ್ನು ಅರ್ಪಿಸಿದ್ದಾರೆ. ಹಾಗೆಯೇ ತಾಯಿ ಪಾರ್ವತೀ ದೇವಿಯನ್ನು ಕುರಿತು ಹಾಡುತ್ತಾ ಆ ತಾಯಿಗೆ ಸೌಂದರ್ಯ ಲಹರಿಯ ನೂರಾ ಒಂದು ಪುಷ್ಪ ನಮನಗಳನ್ನು ಸಲ್ಲಿಸಿ ಆನಂದ ಭಾಷ್ಪವನ್ನೇ ಸುರಿಸಿದ್ದಾರೆ.

ಪರಮಾನಂದ ಭರಿತವಾದ ತನುವಿನ ಮಂಟಪದಲ್ಲಿ ಕುಸುಮ ನಾಳದ ಭೇದವನು ಅರಿತರೆ ಇದರಿಂದ ಒಸರುವ ಆನಂದ ಭಾಷ್ಪವೇ ವಿಪರೀತ. ಸದ್ಭಕ್ತಿ ಕ್ರೀಯು ವಿಪರೀತ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮದ ಐದೈದು ಮುಖದಿಂದ ಹರಿಯುವ ಭಕ್ತಿ ಕ್ರೀಯು ವಿಪರೀತ.

ಶಶಿಧರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ವಶದೊಳಗಿರ್ಪಂಗಲ್ಲದೆ ಕಾಣಲರಿಯದು:

ಕುಸುಮನಾಳದ ಎಸಳ ಮಂಟಪದಲ್ಲಿ ಸಹಸ್ರಾರು ದಳಗಳ ಮೂಲಕ ಬ್ರಹ್ಮಕಮಲ ಅರಳಿನಿಂತಿದೆ. ಇದರ ಭೇದವನ್ನು ಅರಿಯಲು ಹೋದರೆ 'ಒಡಲೊಳಗಿದ್ದು ಒಡಲಿಂಗೆ ಆಧಾರವಾಗಿದ್ದು ಒಡಲನ್ನು ಸೋಂಕದೆ ಒಡಲನ್ನು ಬೆಳಗುವ, ಬೆಳಗಿಂಗೆ ಬೆಳಗಾಗಿ ಬೆಳಗುವ ಶಶಿಧರನು ಕಾಣುತ್ತಾನೆ. ಆತನ ವಶದೊಳಗಿದ್ದವನಿಗಲ್ಲದೆ ಅನ್ಯರಿಗೆ ಕಾಣಲರಿಯದು.

ಆತನಿಗಾಗಿ ಹಗಲಿರುಳೆನ್ನದೆ ಕೃಷಿ ಮಾಡಿ ಕ್ರಿಯೆಯಲ್ಲಿ ತೊಡಗಿದ ಭಕ್ತನಿಗೆ ಕಾಣದೇ ಇರನು.

**334**

**ಎಸಳಸಸಿ ಕುಸುಮ ಭೂಷಣನೆ**
**ಅಯ್ಯಾ, ದೆಸೆಯಿದ್ದೆಸೆಗೆಟ್ಟೆ ನಾನಯ್ಯಾ.**
**ಶಶಿಧರಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ಎನ್ನ ವಶಕ್ಕೆ ತಂದಿರಿಸು ಅಯ್ಯಾ.**

ಅಯ್ಯಾ, ಎಸಳ ಸಸಿಯ ಕುಸುಮದಲ್ಲಿ ಸಂಗಮವಾದ ಕುಸುಮ ಭೂಷಣನೆ; ಭಗವಂತನೆ, ನಿನ್ನ ದರುಶನಕ್ಕಾಗಿ ಹಪಹಪಿಸುತ್ತಿದ್ದೇನೆ. ಇದ್ದ ನೆಲೆಯನ್ನು ಕಳೆದುಕೊಂಡು ಇದ್ದಲ್ಲಿಯೇ ಇದ್ದು, ನೀನಿದ್ದ ಜಾಗದಲ್ಲಿಯೇ ನಾನಿದ್ದೇನೆ ಎಂದು ತಿಳಿದುಕೊಂಡು ನೀನಿದ್ದ ನೆಲೆಯಲ್ಲಿಯೇ ನಾನಿದ್ದು ನಿನಗಾಗಿ ಹಗಲಿರುಳೆನ್ನದೆ ಪ್ರಾರ್ಥಿಸುತ್ತಿದ್ದೇನೆ.

ಚಂದ್ರನನ್ನು ಜಟೆಯಲ್ಲಿ ಧರಿಸಿಕೊಂಡು ಚಂದ್ರಶೇಖರನೆಂದು ಕರೆಯಿಸಿಕೊಂಡೆ; ಶಶಿಧರನೆಂದು ಕರೆಯಿಸಿಕೊಂಡೆ. ಗಂಗೆಯನ್ನು ಜಟೆಯಲ್ಲಿ ಧಾರಣೆ ಮಾಡಿಕೊಂಡು ಗಂಗಾಧರನೆಂದು ಕರೆಯಿಸಿಕೊಂಡೆ.

ಪಶುಪ್ರವೃತ್ತಿಯ ಅಜ್ಞಾನದ ಚರ್ಮ ಸುಲಿದು ಅದನ್ನೇ ಧರಿಸಿಕೊಂಡ ಚರ್ಮಾಂಬರಿ ನೀನು. ನನ್ನ ತನುವಿನಲ್ಲಿ ಸಂಗಮವಾಗಿದ್ದು ನನಗೆ ತಿಳಿದಿದ್ದರೂ ನನ್ನ ವಶಕ್ಕೆ ಬಾರದೇ ಇರುವುದಕ್ಕೆ ಕಾರಣವಾದರೂ ಏನು ತಂದೆ. ಅದೆಷ್ಟೋ ನಿನ್ನ ಮಕ್ಕಳನ್ನು ನೀನೇ ಹಡೆದು; ನೀನೇ ಆ ಮಕ್ಕಳಿಗೆ ನಿನ್ನ ಅರಿವಿನ ಪಾಲು ಕೊಡದಿದ್ದರೆ ಹೇಗೆ? ಇದು ನಿನಗೆ ನ್ಯಾಯವೇ? ನೀನು ಹಡೆದ ಮಕ್ಕಳಿಗೆ ನಿನ್ನ ಪರಿಚಯವಿಲ್ಲದಿದ್ದರೇನು? ಅವರು ನಿನ್ನ ವಾರಸುದಾರರಲ್ಲವೆ ತಂದೆ?

ಶಶಿಧರಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಎನ್ನ ವಶಕ್ಕೆ ತಂದಿರಿಸು ಅಯ್ಯಾ.

**335**

**ಎಸಳೆಸಳ ಸೋಹೆಯಲ್ಲಿದ್ದು ಅಟ್ಟಿಕರೆದಡೆ ಬಂದ**
**ನಾ ಅವನ ಬೆನ್ನ ಬೆನ್ನ ಹೊಗಲಿ ಹೊಗಲಿಯವ್ವಾ.**
**ಆ ಸುಳಿಗೊಂಡ ಸುಕ್ಷೋಣಿದ್ವಾರದೊಳಗೆ**
**ಲಕ್ಕದ ಮೇಲೆ ತೊಂಬತ್ತು ಆರು ಸಾಸಿರ ಲಿಂಗವವ್ವಾ.**
**ಅವನ ಬೆನ್ನ ಬೆಳಗಿನ ಆದಿಲಿಂಗ ನಾಳಪಟ್ಟಣ.**
**ರೂಪನಾಶನಾದ ಕಪಿಲಸಿದ್ಧ ಮಲ್ಲಿನಾಥನ.**

ತನುವೆಂದರೆ ಸಾಮಾನ್ಯವೆ? ಅರಿವಿನ ಲಿಂಗಯ್ಯ ತನ್ನ ಲೀಲೆಗಾಗಿ, ವಿನೋದಕ್ಕಾಗಿ ಕರೆದು ತಂದ ಮನೆ. ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ಪರಮಾನಂದದಿಂದ ನೋಡಲು ಕರೆದು ತಂದ ಬ್ರಹ್ಮ ಮನೆ.

ಓಂಕಾರವೆಂಬ ಪದರ ಪದರದ ಚರ್ಮ ಹೆಣೆದು. ಸೋರದೆ ಇದ್ದ, ರೂಪಕ್ಕೆ ಕಾರಣವಾದ ತನುವಿನಲ್ಲಿ ರೂಪವೇ ಇಲ್ಲದೆ ತಾನಿದ್ದು, ಸೋರುವ ಪದಾರ್ಥಗಳನ್ನು ಸೋರದೆ

ಹೆಣೆದ ಪದರ ಪದರಿನಲ್ಲಿ ತುಂಬಿದ ಮಹಾವೀರನವನು.

ತನುವಿನ ನಾಳದಿಂದಲೇ ಸೂಕ್ಷ್ಮಾತಿಸೂಕ್ಷ್ಮದ ಕುಸುರಿ ಕೆಲಸದಿಂದ ನಿರ್ಮಿಸಿದ ಬ್ರಹ್ಮಪಟ್ಟಣಕ್ಕೆ ಸುಂದರವಾದ ಬೆಳಗಿನರೂಪ ತುಂಬಿ ಅದಕ್ಕೆ ಆದಿಲಿಂಗವೆಂದು ಹೆಸರಿಟ್ಟ ಅನಾದಿಲಿಂಗ ಅವನು.

ಬ್ರಹ್ಮ ಪಟ್ಟಣದ ಲಕ್ಷ್ಯದ ಮೇಲೆ ತೊಂಬತ್ತಾರು ಸಾವಿರ ಅರಿವಿನ ಲಿಂಗಗಳನ್ನು ಸ್ಥಾಪಿಸಿದ ಅನಾದಿ ಬ್ರಹ್ಮನ ಬೆನ್ನ ಬೆನ್ನ ಬೆಳಕಿನ ಬಳಿ ಬಂದ ಆದಿ ನಾನು. ಆದಿಲಿಂಗವೇ ನಾನು. ಆತನೇ ನಿರ್ಮಿಸಿ, ಅದರ ಪದರ ಪದರದೊಳಗಿನ ಅಟ್ಟದ ಮೇಲಿದ್ದ ಆತನ ಬೆನ್ನ ಬೆನ್ನ ಬೆಳಗಿನಲ್ಲಿಯೇ ಸುಳಿಗೊಂಡ ಸುಕ್ಷೋಣಿ ದ್ವಾರದೊಳಗೆ ಲಕ್ಷ್ಯದ ಮೇಲೆ ತೊಂಬತ್ತಾರು ಸಾವಿರ ಲಿಂಗವವ್ವಾ. ಅವನ ಬೆಳಗಿನ ಆದಿಲಿಂಗ ನಾನು. ಅನಾದಿ ಲಿಂಗಯ್ಯನೇ ಸೃಷ್ಟಿ ಮಾಡಿದ ಆದಿಲಿಂಗ ನಾನು. ಬ್ರಹ್ಮನಾಳದಿಂದ ಉದಯಿಸಿದ ಬ್ರಹ್ಮಪಟ್ಟಣದ ರೂಪು ಬರೀ ರೂಪಲ್ಲ. ಅದರ ಸೊಗಸಿಗೆ ಅದರ ನಾಶಕ್ಕೆ ಕಾರಣವಾದ ನಿರೂಪನ ರೂಪು ಅದು.

ರೂಪವನ್ನು ಸೃಷ್ಟಿ ಮಾಡಿ, ರೂಪದಿಂದಲೇ ಬೆಳಗಿ, ರೂಪದೊಳಗೆ ಸಂಗಮವಾದ ನಿರೂಪನವನು. ರೂಪವನ್ನು ನಾಶ ಮಾಡಿ ತನ್ನ ನಿರೂಪದಲ್ಲಿ ಐಕ್ಯಗೊಳಿಸುವ ರೂಪನಾಶನನು ಅವನು. ಕಪಿಲಸಿದ್ಧ ಮಲ್ಲಿಕಾರ್ಜುನನು ಅವನು.

ಅವನ ಹೊಕ್ಕಳ ನಾಳದಿಂದ ಬ್ರಹ್ಮಪಟ್ಟಣ ನಿರ್ಮಿಸಿದ. ಅದಕ್ಕೆ ಪದರ ಪದರಿನ ಕುಸುರಿ ಕೆಲಸವನ್ನು ಮಾಡಿ ಮೇಲುಪ್ಪರಿಗೆಯ ಅಟ್ಟದ ಮೇಲೆ ತಾನೇ ಮಲಗಿದ. ಅವನ ಬೆನ್ನ ಬೆನ್ನ ಬೆಳಗಿನಿಂದ ಬಂದ ಬೆಳಕು ನಾನು. ಅವನ ಲೀಲೆಗಾಗಿ ನನ್ನಲ್ಲಿ ಭ್ರಮೆ ತುಂಬಿದ. ಅವನ ಬೆಳಕಿನಿಂದಲೇ ಪುನಃ ಬೆಳಗಿ ಬೆನ್ನ ಬೆಳಕಿನಲ್ಲಿಯೇ ಅಡಗಿಸಿಕೊಂಡ.

ಲಿಂಗಯ್ಯ ಸೃಷ್ಟಿ ಮಾಡಿದ ಲಿಂಗ ಸಾಮಾನ್ಯವಲ್ಲ. ಅದರಲ್ಲಿ ತನ್ನ ಸಕಲ ಲಕ್ಷ್ಯವನ್ನು ತುಂಬಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಲಿಂಗಗಳನ್ನು ಲಿಂಗದಲ್ಲಿಯೇ ಸ್ಥಾಪಿಸಿದ. ತನುವಿನ ಸುಳಿ ಸುಳಿಯಲ್ಲಿ ಬರೀ ಅಂಗಗಳೇ. ಸುಳಿಗೊಂಡ ಸುಕ್ಷೋಣಿ ದ್ವಾರದೊಳಗೆಲ್ಲ ಲಿಂಗಗಳೇ. ರೂಪನಾಶನನಾದ ಕಪಿಲಸಿದ್ಧ ಮಲ್ಲಿನಾಥನು ನಿರ್ಮಿಸಿದ ಆದಿಲಿಂಗ.

**336**

**ಎಸುಗೆ ಕಂಗಳಲ್ಲಿಕ್ಕು ಕುಸುಮದಂಬಿನ ಘಾಯ**
**ದೆಸೆಗೆಟ್ಟು ಹೋಹರ್ಯೆ ಮೂಜಗದವರು.**
**ಮದೀಶ ನಿಮ್ಮ ದೆಸೆಗವನು ಹೊದ್ದನ್ಯೆ**
**ಸಲಹು ಎನ್ನ ಕಪಿಲಸಿದ್ದ ಮಲ್ಲಿಕಾರ್ಜುನಾ.**

ಮನ್ಮಥನನ್ನು ಸೃಷ್ಟಿ ಮಾಡಿದವನು ಮುಕ್ಕಣ್ಣ. ಮನ್ಮಥನನ್ನು ಕೊಂದವನು ಕೂಡಾ ಮುಕ್ಕಣ್ಣನೇ ಆಗಿದ್ದಾನೆ. ಸೃಷ್ಟಿ ಮಾಡುವುದು ಕೊಲ್ಲುವುದು ಅವನ ಲೀಲೆ!

ಮನ್ಮಥ ವಿಷ್ಣುವಿನ ಮಗ. ಶ್ರೀಕೃಷ್ಣನ ಅವತಾರವರೇ ವಿಷ್ಣು. ವಿಷ್ಣು ಶ್ರೀ ಕೃಷ್ಣನ ಅವತಾರ ತಾಳಿ ಹದಿನಾರು ಸಾವಿರದ ಎಂಟು ಹೆಂಡಿರನ್ನು ಮಾಡಿಕೊಂಡ. ಇದು ಪುರಾಣ. ಅಷ್ಟೊಂದು ಜನ ಹೆಂಡಿರನ್ನು ಅಧಿಕೃತವಾಗಿ ಮಾಡಿಕೊಂಡ ಅವನನ್ನು ಜನ ಹೀಯಾಳಿಸಿದರೂ ಅವನಿಗೆ ಯಾವ ಅಳಕೂ ಇಲ್ಲ. ಅದೇನಿದ್ದರೂ ಅವನ ಹಿಂಬಾಲಕರಿಗೆ ಮಾತ್ರ.

ವಿಷ್ಣುವಿನ ಅವತಾರ ಕೃಷ್ಣನಾದರೆ, ವಿಷ್ಣುವಿನ ಮಗ ಮನ್ಮಥ. ಅವನು ಕೂಡಾ ಅವರಪ್ಪನನ್ನು ಮೀರಿಸಿದ. ಭೂಮಿಯ ಮೇಲೆ ಇರುವ ಸಕಲ ಜನರ ಕಣ್ಣುಗಳಿಗೂ ಕಾಮದ ಕುಸುಮ ಬಾಣವನ್ನು ಎಸೆದ.

ಕುಸುಮ ಬಾಣದ ಘಾಯದಿಂದ ಮೂಜಗದ ಕಣ್ಣುಗಳೆಲ್ಲ ದೆಸೆಗೆಟ್ಟು ಹೋದವು. ದೇವರ ದೇವನಾದ ದೇವೇಂದ್ರ, ಋಷಿಮುನಿಯ ಪತ್ನಿಯೊಂದಿಗೆ ಕಾಮಿಸಿದ. ಕಾಮದ ಬಯಕೆಗಾಗಿ ದೇವರ ವೇಷವನ್ನೂ ಕಳಚಿದ. ಮುನಿಯ ವೇಷವನ್ನು ಧರಿಸಿ ಮುನಿಯ ಪತ್ನಿಯೊಂದಿಗೆ ಭೋಗಿಸಿದ.

ಇದು ಋಷಿಗೆ ಗೊತ್ತಾಯಿತು. ಬೆಳಗಾಯಿತೆಂದು ಬೆಳಗಿನ ಕೆಲಸ ತೀರಿಸಲು ಹೋದ ಋಷಿಮುನಿ ಮರಳಿ ಕುಟೀರಕ್ಕೆ ಬಂದ. ತನ್ನಂತೆಯೇ ವೇಷ ಧರಿಸಿದ ದೇವೇಂದ್ರ ತನ್ನ ಪತ್ನಿಯೊಂದಿಗೆ ಕಾಮಕೇಳಿಯಲ್ಲಿ ತೊಡಗಿದುದನ್ನು ಕಣ್ಣಾರೆ ಕಂಡ. ದೇವೇಂದ್ರ ನಾಚಿ ನೀರಾದ. ನಿನ್ನ ಮೈತುಂಬಾ ಯೋನಿಯಾಗಲೆಂದು ಋಷಿಮುನಿ ದೇವೇಂದ್ರನನ್ನು ಶಪಿಸಿದ. ಏನೂ ತಪ್ಪು ಮಾಡದ ಹೆಂಡತಿಯನ್ನು ಕೂಡಾ ಋಷಿಮುನಿ ಕಲ್ಲಾಗು ಎಂದು ಶಾಪವಿತ್ತ. ಇದು ಮನ್ಮಥನ ಗೆಲುವು.

ಕುಸುಮ ಬಾಣಗಳಿಂದ ಕಂಗಳಿಗೆ ಗುರಿಮಾಡಿ ಎಸೆದ ಮನ್ಮಥನ ಗೆಲುವು. ಮನ್ಮಥ ಎಸೆದ ಕುಸುಮಬಾಣದಿಂದ ದೇವೇಂದ್ರನಿಗೆ ಸುಖವಾಯಿತು. ಋಷಿ ಪತ್ನಿಗೂ ಸುಖವಾಯಿತು. ಅವರಿಬ್ಬರ ಸುಖಕ್ಕಾಗಿ ಎಸೆದ ಮನ್ಮಥನ ಹೂಬಾಣ ನೋಡಿದ ಋಷಿಮುನಿಯ ಕಂಗಳಿಗೆ ಗಾಯವಾಯಿತು. ಋಷಿ ಮುನಿಯ ಶಾಪದಿಂದಾಗಿ ದೇವೇಂದ್ರನ ದೇಹದ ತುಂಬಾ ಯೋನಿಗಳು ಮೂಡಿದವು. ಋಷಿ ಪತ್ನಿ ಕಲ್ಲಾದಳು.

ಮನ್ಮಥನ ಹೂಬಾಣದ ಗಾಯ ಚಂದ್ರನನ್ನು ಕೂಡಾ ಬಿಡಲಿಲ್ಲ. ಚಂದ್ರನ ಗುರುದೇವನಾದ ಬೃಹಸ್ಪತಿಯನ್ನು ಕೂಡಾ ಬಿಡಲಿಲ್ಲ. ಆತನ ಪತ್ನಿಯನ್ನೂ ಬಿಡಲಿಲ್ಲ. ಚಂದ್ರನ ಕಂಗಳಿಗೆ ತಾಕಿದ ಮನ್ಮಥನ ಹೂಬಾಣ ಪಾಠ ಕಲಿಯಲು ಹೋದ ಗುರುಪತ್ನಿಯನ್ನೇ ಕಾಮದಿಂದ ನೋಡಿದ. ಗುರುಪುತ್ರ ಚಂದ್ರನನ್ನು ಕಾಮದ ಕಣ್ಣುಗ್ಗಳಿಂದ ನೋಡಿ ಭೋಗಕ್ಕೆ ಗುರಿಯಾದಳು. ಚಂದ್ರ ಶಾಪಕ್ಕೆ ಗುರಿಯಾದ. ಚಂದ್ರ ಮತ್ತು ಗುರುಪತ್ನಿಗೆ ಹುಟ್ಟಿದ ಮಗು ಬುಧಗ್ರಹವಾಗಿ ಶಾಪಕ್ಕೆ ತುತ್ತಾಯಿತು.

ದೇವಾನು ದೇವತೆಗಳ ಕಂಗಳಿಗೆ ಗುರಿಮಾಡಿ ಎಸೆದ ಮನ್ಮಥನ ಹೂಬಾಣ ಘೋರವಾದ ಗಾಯವನ್ನೇ ಮಾಡಿ ಇತಿಹಾಸ ರಚಿಸಿತು. ಮೂಜಗದ ತನು ಕುಲಗಳೆಲ್ಲ ತತ್ತರಿಸಿ ಹೋದವು.

ದಕ್ಷನ ಯಜ್ಞಕ್ಕೆ ಆಹುತಿಯಾದ ಸತಿಯನ್ನು ಕಳೆದುಕೊಂಡ ಶಿವ ಧ್ಯಾನಕ್ಕೆ ಜಾರಿದ. ಅದೆಷ್ಟೋ ವರ್ಷಗಳಾದರೂ ಏಳಲೇ ಇಲ್ಲ. ದೇವತೆಗಳಿಗೆ ಚಿಂತೆಯಾಯಿತು. ಜಗದ ಬೆಳವಣಿಗೆಯಾಗಬೇಕಾದರೆ ಶಿವ ಮದುವೆಯಾಗಬೇಕು. ಆತನನ್ನು ಎಚ್ಚರಿಸಲೇಬೇಕೆಂದು ಮನ್ಮಥನಿಗೆ ಮೊರೆ ಹೋದರು. ಮನ್ಮಥ ಆತನ ಸತಿ ರತಿಯೊಂದಿಗೆ ಹೂಬಾಣವಿಡಿದು ಶಿವನ ಮುಂದೆ ನೃತ್ಯ ಮಾಡಿದ. ಶಿವನಿಗೆ ಗುರಿಯಿಟ್ಟು ಮನ್ಮಥ ಹೂ ಬಾಣ ಬಿಟ್ಟ. ಮುಕ್ಕಣ್ಣ ತನ್ನ ಹಣೆಗಣ್ಣನ್ನು ತೆರೆದು ಕಾಮನನ್ನು ಸುಟ್ಟ.

ಕಣ್ಣಿನಲ್ಲಿಯೇ ಅಡಗಿದ ಮನ್ಮಥ ; ಮುಕ್ಕಣ್ಣನ ಹಣೆಗಣ್ಣಿಗೆ ತುತ್ತಾದ. ಅರಿವಿನ ಕಣ್ಣಿನಿಂದಾಗಿ ಅಜ್ಞಾನದ ಕಣ್ಣು ಸುಟ್ಟು ಹೋಯಿತು. ಬೇಡವಾದ ಕಣ್ಣನ್ನು ಕಣ್ಣಪ್ಪ ಶಿವನಿಗೆ ಅರ್ಪಿಸಿದಂತೆ. ಬೇಡವಾದ ಅಜ್ಞಾನದ ಕಣ್ಣನ್ನು ಕಣ್ಣಪ್ಪ ತನ್ನ ಅರಿವಿನ ಕಣ್ಣಿಗೆ ಅರ್ಪಿಸಿದಂತೆ.

ಇದು ನಮ್ಮ ದೇಶದ ಪುರಾಣ! ಎಷ್ಟೊಂದು ಅರಿವಿನ ಸಂಕೇತಗಳನ್ನು ಹೊತ್ತಿದೆ. ಮನ್ಮಥನ ಕಂಗಳನ್ನು ತಾನೇ ಸುಟ್ಟುಕೊಂಡು ಅರಿವಿನ ಕಂಗಳಿಂದ ನೋಡಿದರೆ ಸಾಕು ಸಕಲ ಕಂಗಳಿಗೂ ಅವನ ಸುಳುಹು ಥಳಥಳನೆ ಹೊಳೆದೀತು! ಇದು ಮನುಕುಲದ ಅರಿವಿಗಾಗಿ ಬರೆದ ದೇವರ ಪುರಾಣ. ಇದು ಮನುಕುಲಕ್ಕೆ ಬಲು ಜಟಿಲ. ಆದರೂ ವ್ಯಾಸರು ಅನೇಕ ಸರಳ ಸೂತ್ರಗಳಿಂದ ಅರಿವಿನ ಪುರಾಣಗಳನ್ನು ರಚಿಸಿದರು. ಪುರಾಣ ಕೇಳಿದ ತನುವಿನ ಮನೆಯಲ್ಲಿ ಬತ್ತಿಗಳು ಹೆಚ್ಚಾದವೇ ಹೊರತು ಅರಿವಿನ ಜ್ಯೋತಿ ಬೆಳಗಲೇ ಇಲ್ಲ.

ಶರಣರ ಕಥನವಲ್ಲದ ಕತೆಯೇ ಬೇರೆ. ಅವರು ಪುರಾಣ ಬರೆಯಲಿಲ್ಲ. ಸ್ವತಹ ಪ್ರಯೋಗಕ್ಕೆ ಹೋದರು. ಮನ್ಮಥನನ್ನು ಶಿವನಂತೆ ಹಣೆಗಣ್ಣು ತೆರೆದು ಸುಡಲಿಲ್ಲ. ಬದಲಾಗಿ ಹೂವಿನಂತೆ ಅರಳಿಸಿದರು.

ಘಟ್ಟಿವಾಳಯ್ಯ ಎಂಬ ಗಟ್ಟಿಗನ ಪುರಾಣವಿದು :

ಆತ ಸತ್ಸಂಗಕ್ಕೆಂದು ಮಹಾಮನೆಗೆ ಹೋಗಿದ್ದ. ಮನೆಗೆ ಹಿಂತಿರುಗಿ ಬರುವುದದೊಳಗೆ ಬಾಗಿಲು ಹಾಕಿತ್ತು. ಒಳಗೆ ಬಳೆಗಳ ಕುಲಕುಲ ಸದ್ದು. ಪಿಸು ಮಾತಿನ ಶಬ್ದ. ಸತಿ ಪರ ಪುರುಷನೊಂದಿಗೆ ಸುಖಿಸುತ್ತಿರುವುದನ್ನು ಕಣ್ಣಾರೆ ಕಂಡ. ಎಷ್ಟೊಂದು ಭಾವಪರವಶವಾಗಿ ಸುಖದಲ್ಲಿ ಭಾಗಿಯಿದ್ದಾರೆ. ಅವರ ಸುಖಕ್ಕೆ ಭಂಗ ತರುವುದು ಬೇಡವೆಂದು ಕಟ್ಟೆಯ ಮೇಲೆ ಕುಳಿತ. ಇಬ್ಬರು ಹೊರಬಂದು ನಾಚಿ ನೀರಾದರು. ಭಯದಿಂದ ಸತಿ-ಪರಪುರುಷರಿಬ್ಬರೂ ತಲ್ಲಣಗೊಂಡರು. ಘಟ್ಟಿವಾಳಯ್ಯ ಪ್ರಸನ್ನ ವದನದಿಂದ ಅವರಿಬ್ಬರನ್ನು ಹರಸಿದ. ಭಯ ಪಡಬೇಡಿ. ನೀವಿಬ್ಬರೂ ತಪ್ಪು ಮಾಡಿಲ್ಲ. ಈ ಮನೆಯಲ್ಲಿಯೇ ಅತಿಥಿಗಳಾಗಿ ನೀವಿಬ್ಬರೂ ವಾಸ ಮಾಡಿ. ನಿಮಗೆ ಬೇಡವಾದರೆ ಮತ್ತೊಂದು ಮನೆಯಲ್ಲಿ ಸುಖವಾಗಿ ಬಾಳಿ ಎಂದು ಸಿಹಿ ಉಣ್ಣಿಸಿ ಅವರಿಬ್ಬರನ್ನು ಹರಸಿದ.

ಮನ್ಮಥನ ಹೂ ಬಾಣಕ್ಕೆ ಗುರಿಯಾಗಿ, ತಲ್ಲಣಿಸಿ, ತಮ್ಮ ಸರ್ವಸ್ವವನ್ನೇ ಕಳೆದುಕೊಂಡು ಅಜ್ಞಾನಕ್ಕೆ ತುತ್ತಾದ ದೇವೇಂದ್ರನೆತ್ತ? ಋಷಿಯೆತ್ತ? ಋಷಿಪತ್ನಿಯೆತ್ತ? ಚಂದ್ರನೆತ್ತ, ಬೃಹಸ್ಪತಿಯತ್ತ, ಗುರುಪತ್ನಿಯತ್ತ? ಜಗದೀಶನೇ ಎನ್ನಿಸಿಕೊಂಡ ಶಿವನೆತ್ತ?

ಮನ್ಮಥನು ಎಸೆದ ಬಾಣಗಳನ್ನು ಹೂವಾಗಿ ಸ್ವೀಕರಿಸಿ ಅರಿವಿನ ಕಂಗಳಿಂದ ಅರಳಿ ನಿಂತು ಪರಮಾನಂದದಿಂದ ನೋಡಿದ ಘಟ್ಟಿವಾಳಯ್ಯನೆತ್ತ?

ತನುವಿನಲ್ಲಿಯೇ ಸಂಗಮವಾದ ಜ್ಞಾನ, ದೇವಾನು ದೇವತೆಗಳ ಕಾಲದಿಂದಲೂ ಬಸವಾದಿ ಶರಣರ ಕಾಲದವರೆಗೆ ದಾಸವರೇಣ್ಯರ ಕಾಲದವರೆಗೆ, ಕೃಷ್ಣ ಕ್ರಿಸ್ತ ಪೈಗಂಬರರ ಕಾಲದಿಂದ ಮಹಾವೀರ ಬುದ್ಧನ ಕಾಲದವರೆಗೆ ಆಯಾ ಕಾಲ ಘಟ್ಟದಲ್ಲಿ ತನುವಿನ ಮೂಲಕ ಅರಳುತ್ತಲೇ ಬಂದಿದೆ. ತನುವನ್ನು ಸೃಷ್ಟಿ ಮಾಡಿ ತನುವಿನಲ್ಲಿಯೇ ಸಂಗಮವಾಗಿ ಸಕಲ ತನುಗಳನ್ನು ಅರಿವಿನ ದೇವರಾಗಿ ಸಲುಹುತ್ತಲೇ ಬಂದಿದೆ. ಇದು ಸಿದ್ಧರಾಮ ಶರಣರ ಆಶಯ. ಸಕಲ ಜ್ಞಾನಿಗಳ ಆಶಯವೂ ಆಗಿದೆ.

**337**

**ಎಸೆವಡೆದು ಮೃಗದಂತೆ ಎನ್ನ ಮನ ಶಂಭುವೆ**
**ಕಲ್ಲೆನ್ನದು ಮುಳ್ಳೆನ್ನದು.**

**ಭಕ್ತಿಯೆಂಬ ಸಂಕಲೆಯನ್ನಿಕ್ಕೆನ್ನ ಮನಕ್ಕೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಾಣ ತಾಗಿದ ಮೃಗದಂತೆ ತನುವಿನ ಮನ, ತನುವನ್ನು ಅಲೆದಾಡಿಸುತ್ತದೆ. ಕಲ್ಲೆನ್ನದೆ ಮುಳ್ಳೆನ್ನದೆ ಎತ್ತೆಂದರತ್ತ ಅಲೆದಾಡಿಸುತ್ತದೆ. ಅರಿವೆಂದರೇನೆಂದು ಪರಿಚಯವಿಲ್ಲದೆ ಅಲೆದಾಡಿಸುತ್ತದೆ.

ಮನ ಸಂಗ್ರಹಿಸಿಕೊಂಡ ಅರಿವು ಮನದಲ್ಲಿಯೇ ಇದೆ. ಅದು ಮನ ತನುವಿನೊಂದಿಗೆ ಸುಖ ಪಡುವುದಕ್ಕಾಗಿ ಬಳಕೆಯಾಗುತ್ತದೆ.

ಮನದ ಸುಖ ತನುವನ್ನು ಘಾಸಿ ಮಾಡುತ್ತದೆ. ತನುವಿಗೆ ಗಾಯ ಮಾಡುತ್ತದೆ. ಮನದ ಅರಿವನ್ನು ಮನವೇ ಎಸೆದು, ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನ ದರ್ಶನಕ್ಕೆ ಹೋಗಲು ಮನ ಸಜ್ಜಾಗಬೇಕು. ಕಲ್ಲೆನ್ನದೆ ಮುಳ್ಳೆನ್ನದೆ ದಾರಿ ಸವೆಸಬೇಕು. ಇದು ಮನಕ್ಕೆ ಬಲು ಜಟಿಲ.

ಮನ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡುವುದು ಸುಲಭದ ಕೆಲಸವಲ್ಲ. ಅದರಲ್ಲೂ ಭಕ್ತಿಯನ್ನೇ ಸಂಕಲೆಯನ್ನಾಗಿ ಮಾಡಿಕೊಂಡು ಸದಾ ಗುರುವಿನ ಶ್ರೀಚರಣದಲ್ಲಿರುವುದು ಅತ್ಯಂತ ಕಠಿಣವಾದ ಕೆಲಸ.

ಸಕಲ ತನುಗಳಲ್ಲಿ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಮನಕ್ಕೆ ಗುರುದೇವನ ಪರಿಚಯವಿಲ್ಲದೆ, ತನುವನ್ನು ಕಳ್ಳನೆಂದು, ಬಂಧಿಕಾರನೆಂದು, ಹಾವಾಡಿಗನೆಂದು, ಹಾದರಿಗನೆಂದು, ಬಂಟ ಓಲೆಯಕಾರನೆಂದು ನುಡಿಯುವುದು ಅಪರಾಧವಲ್ಲವೆ? ಮನ ತನುವನ್ನು ಹಿಡಿದು ಅಪರಾಧವೆಸಗಿದರೆ ಅದು ತನುವಿನ ತಪ್ಪೇ? ಮನದ ತಪ್ಪೆಂದು ಮನವೇ ಗುರುತಿಸಬೇಕಲ್ಲ. ಸಕಲ ತನುಗಳು ಕೂಡಾ ಗುರುದೇವನು ಇದ್ದ ತನುಗಳೆಂದು ಗುರುತಿಸಲಿಕ್ಕೆ ಮನಕ್ಕೆ ಸಾಧ್ಯವಾಗಬೇಕಲ್ಲ? ಹಾಗೆ ಗುರುತಿಸಲು ಸಾಧ್ಯವಾದಾಗ; ಗುರುದೇವನೆ ನೀನಿದ್ದ ತನುವನ್ನು ನಿನ್ನದೆಂದು ಎನ್ನದಿದ್ದಡೆ ಅದೇ ದ್ರೋಹ ಎಂದು ಸಕಲ ತನುಗಳು ಬಸವಣ್ಣನಂತೆ ಹಾಡುತ್ತವೆ.

ತನುವನ್ನು ಆವರಿಸಿದ ಮನ, ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಕುರಿತು; ಎಲೆ ದೇವನೆ, ದೇವರ ದೇವನೆ, ನನಗೆ ನಿನ್ನ ದರುಶನವಿತ್ತು ಸಲಹು. ಅತ್ತಲಿತ್ತ ಹೋಗದಂತೆ ನಿನ್ನ ಅರಿವಿನ ಸಂಕೋಲೆಯನ್ನು ಹಾಕಿ ಸದಾ ನಿನ್ನನ್ನು ಹಾಡುವಂತೆ ಮಾಡು ಭಕ್ತಿಯ ಸಂಕಲೆಯನ್ನಿಕ್ಕಿ ಸಲಹು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನನ್ನು ಪ್ರಾರ್ಥಿಸಿದ್ದಾರೆ.

**338**

**ಏಕೆನ್ನ ಸಿರಿಗಳು ಕೆರೆಗಳು ಮರಗಳು ಫಲಗಳು**
**ಬೀಯದ ಮುನ್ನ ಒಯ್ಯನೆ ಮಾಡಿ ಭೋ.**
**ಹಾಲುಳ್ಳಲ್ಲಿ ಹಬ್ಬವನು.**
**ಎನ್ನ ಭಕ್ತಿ-ಮುಕ್ತಿ ಸವೆಯದ ಮುನ್ನ**
**ಲಿಂಗವೇ ಜಂಗಮವೆಂದು ಮಾಡಿ ಭೋ.**
**ಸ್ವಾತಂತ್ರ್ಯ ತನ್ನ ನೀವ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನು ಮನ ಪಕ್ವ ಆಗದ ಮುನ್ನ ತನುವಿನ ಅರಿವು ತನುವಿಗೆ ದೊರೆಯಲು ಸಾಧ್ಯವಾಗುವುದಿಲ್ಲ. ಹೊರಗಿನ ಸುಖಕ್ಕೆ ಮನ ಮರುಳಾದಂತೆ ಒಳಗಿನ ಅಂತರಾಳದ ಅರಿವಿನ ಸುಖಕೆ ಮರುಳಾದರೆ ಮಾತ್ರ ಅರಿವು ಒಲಿಯುತ್ತದೆ.

ಮಳೆಗರೆದರೆ ಮಾತ್ರ ಮರಗಳು ಫಲಗಳಿಂದ ಪಕ್ವವಾಗಿ ನಿಲ್ಲುತ್ತವೆ. ಕೆರೆಗಳು ತುಂಬಿ ಹರಿಯುತ್ತವೆ. ಹೊಲ ಗದ್ದೆಗಳು ನಳನಳಿಸುತ್ತವೆ. ಮಳೆ ಬಾರದಿದ್ದರೆ ರೈತ ಬಯಸಬಹುದು ಆದರೆ ಬಯಕೆ ಈಡೇರುವುದಿಲ್ಲ. ಹಾಲಿದ್ದರೆ ಮಾತ್ರ ಯಥೇಚ್ಛವಾಗಿ ಹಬ್ಬವನ್ನು ಆಚರಿಸಲು ಸಾಧ್ಯ.

ಅರಿವು ಎಂದರೆ ಗುರು. ಮನ, ಗುರುದೇವನಿಗೆ ಭಕ್ತಿ ಮಾಡಿ ಆತನಿಗೆ ಗುಲಾಮನಾಗದ ತನಕ ಮುಕ್ತಿ ದೊರೆಯದು. ಮನ, ತನ್ನ ಸಕಲ ಅವಗುಣಗಳನ್ನು ಕಳೆದುಕೊಂಡು, ಅರಿವೆಂಬ ಗುರುದೇವನಿಗೆ ಸಂಪೂರ್ಣ ಶರಣಾಗತನಾದರೆ ಆ ಮನವೇ ಭಕ್ತನಾಗುತ್ತದೆ. ಭಕ್ತನಾಗಿ ಗುರುದೇವನಿಗೆ ಭಕ್ತಿ ಮಾಡುತ್ತದೆ. ಅಂದರೆ ಮನದ ಮಾತು ತನು ಪಾಲಿಸುತ್ತಿತ್ತು. ಅರಿವೆಂಬ ಗುರುದೇವನ ಮಾತು ಮನ ಪಾಲಿಸುತ್ತಿರಲಿಲ್ಲ.

ಮನ ಎಲ್ಲಿಯವರೆಗೆ ಮನವಾಗಿಯೇ ಉಳಿಯುತ್ತದೆಯೋ ಅಲ್ಲಿಯವರೆಗೆ ಮನಕ್ಕೆ ಮುಕ್ತಿಯಿಲ್ಲ. ಮನ, ಹೊರಗಿನ ವಸ್ತುಗಳಿಗೆ ಬಯಕೆ ಮಾಡುವುದನ್ನು ಬಿಟ್ಟು, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಶರಣು ಹೋಗಿ, ಆ ಗುರುದೇವನ ಕಂಗಳಿಂದ ಹೊರಗಿನ ವಸ್ತುಗಳನ್ನು ನೋಡಿದಾಗ ಮನಕ್ಕೆ ವಸ್ತುವಿನ ಸತ್ಯ ಗೋಚರಿಸುತ್ತದೆ. ಆಗ ಮನಕ್ಕೆ ಅರಿವಾಗಿ ಗುರುದೇವನ ಮೇಲೆ ಭಕ್ತಿ ಹುಟ್ಟುತ್ತದೆ. ಭಕ್ತನಾಗಿ ಪರಿವರ್ತನೆಯಾಗುತ್ತದೆ. ಆಗ ಮೆಲ್ಲ ಮೆಲ್ಲನೆ ಭಕ್ತನಾಗುತ್ತದೆ. ಮೆಲ್ಲ ಮೆಲ್ಲನೆ ಯುಕ್ತನಾಗುತ್ತದೆ. ಮೆಲ್ಲ ಮೆಲ್ಲನೆ ಸಾರಿ ಶರಣಾಗತವಾಗಿ, ಶರಣನೆಂದು ಕರೆಯಿಸಿಕೊಳ್ಳುತ್ತದೆ.

ಮನ ತನುವಿನೊಂದಿಗೆ ಅರಿವಿನ ಕೃಷಿ ಮಾಡಿದಾಗಲೇ ಅದು ಭಕ್ತನಾಗುತ್ತದೆ, ಶರಣು ಹೋಗಿ ಶರಣನಾಗುತ್ತದೆ. ಭಕ್ತಿ ಮಾಡಿ ತನು ಮನ ಸವೆಯದ ಮುನ್ನ ಬರೀ ಮಾತಿನಿಂದ ಅನಂತ ಕಾಲ ಧ್ಯಾನ ಮಾಡಿದರೂ ಕೂಡಾ ಲಿಂಗ ಜಂಗಮನು ಒಲಿಯುವುದಿಲ್ಲ. ಮನಕ್ಕೆ ಮುಕ್ತಿ ದೊರೆಯುವುದಿಲ್ಲ.

ತನುವಿನಲ್ಲಿ ತನ್ಮಯವಾದ ಗುರುದೇವ ಯಾರ ಮಾತೂ ಕೇಳುವವನಲ್ಲ. ಮನ ಮಗ್ನವಾಗಿ ಗುರುದೇವನನ್ನು ಪೂಜಿಸುವ ಮುನ್ನ ಒಲಿಯುವವನೂ ಅಲ್ಲ. ಆತ ಸ್ವತಂತ್ರ. ಆತನಿಗೆ ಮನದ ಕೆಲಸ ಇಚ್ಛೆಯಾದರೆ ತನ್ನನ್ನು ತಾನು ಕೂಡಲೇ ಅರ್ಪಿಸಿಕೊಳ್ಳಬಲ್ಲ.

ತನ್ನಿಂದಲೇ ಸೃಷ್ಟಿಯಾದ ಮನವನ್ನು ಗುರುದೇವ ಮಹಾದೇವನನ್ನಾಗಿಸಬಲ್ಲ. ಕಪಿಲಸಿದ್ಧ ಮಲ್ಲಿಕಾರ್ಜುನನ್ನಾಗಿಸಬಲ್ಲ.

**339**

**ಐಕ್ಯೈಕ್ಯನೆಂತೆಂಬ ಆಡಕವನರಿದಿರ್ದಡೆ**
**ಅನೇಕವಿಧ ಸದ್ಭಕ್ತಿ ಪದವನರಿದು**
**ಆ ಗುರುವಿನಾ ಮನದ ಮತಿಯ ಬೆಳಗುವ**
**ನಿರ್ಮಳಾಂಗನು ಶಿಷ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.**

'ಐಕ್ಯ' ಎಂದರೆ ಸಾವು ಅಲ್ಲ. ಬದುಕಿದ್ದಾಗಲೆ ಸತ್ತಂತೆ ಇರುವುದು. ಶಬ್ದ ಸ್ಪರ್ಶ ವಾಸನೆ

ರುಚಿ ದೃಶ್ಯದಿಂದ ಉಂಟಾಗುವ ಅಜ್ಞಾನವನ್ನು ಗುರುವಿನ ಮೂಲಕ ಸ್ವಾನುಭಾವಕ್ಕೆ ಹೋಗುವ ಸೂತ್ರವನ್ನು ತಿಳಿದು ಆ ಸ್ವಾನುಭಾವದ ಮೂಲಕ ಕಿವಿಗೆ ಬಡಿದ ಶಬ್ದವನ್ನು ಅರಿತರೆ ಆ ಶಬ್ದ ನಿಃಶಬ್ದವಾಗುತ್ತದೆ.

ಶಬ್ದದಿಂದ ಉಂಟಾಗುವ ಲೋಕಾನುಭವವೇ ಬೇರೆ, ಶಬ್ದದಿಂದ ಉಂಟಾಗುವ ಸ್ವಾನುಭಾವವೇ ಬೇರೆ. ಲೋಕಾನುಭವದ ಶಬ್ದ ಸುಖ ಅಥವಾ ದುಃಖವನ್ನು ಸೃಷ್ಟಿಮಾಡುತ್ತದೆ. ಸ್ವಾನುಭಾವ ಶಬ್ದವನ್ನು ಅರಿವಿನಿಂದ ಕೇಳುತ್ತದೆ.

ಶಬ್ದ ಕೇಳಿದ ಕಿವಿ ದೇಹದಲ್ಲಿ ಸುಖದ ತರಂಗಗಳನ್ನು ಸೃಷ್ಟಿಮಾಡಿ ಸುಖದ ರಾಸಾಯನಿಕ ಕ್ರಿಯೆಗೆ ಒಳಗಾಗುತ್ತದೆ. ಹಾಗೆಯೇ ಶಬ್ದ ಕೇಳಿದ ಕಿವಿ ದುಃಖದ ರಾಸಾಯನಿಕ ಕ್ರಿಯೆಗೆ ಒಳಗಾಗುತ್ತದೆ.

''ಐಕ್ಯ'' ಎನ್ನುವ ತಂತ್ರಜ್ಞಾನವನ್ನು ಸಮರ್ಥ ಗುರು ಮುಖೇನ ತಿಳಿದು ಅಥವಾ ಆ ಗುರುದೇವನಿಗೆ ಅರ್ಥವಾಗದಿದ್ದರೆ ಶಿಷ್ಯ ಸ್ವತಹ ಸ್ವಾನುಭಾವಕ್ಕೆ ಹೋಗಿ ಅರಿವಿನಿಂದ ಆಲೋಚನೆಯಲ್ಲಿ ತೊಡಗಿದರೆ ಆ ಗುರುದೇವನ ಮನದ ಮತಿಯನ್ನು ಬೆಳಗುವ ಸಮರ್ಥ ಶಿಷ್ಯನಾಗಿ ನಿರ್ಮಳಾಂಗನಾಗಿ ಬೆಳಗುತ್ತಾನೆ.

ಗುರು ಶಬ್ದದ ಮೂಲಕ ಪಾಠ ಮಾಡಬಹುದು. ಶಿಷ್ಯ ಒಂದು ಹೆಜ್ಜೆ ಮುಂದೆ ಹೋಗಿ ಗುರು ತಿಳಿ ಹೇಳಿದ 'ಐಕ್ಯ' ಪದದ ಮೂಲಕ ಸ್ವಾನುಭಾವಕ್ಕೆ ಹೋಗಿ ಅರಿವಿನ ಮೂಲಕ 'ಶಬ್ದ' ಕೇಳುತ್ತಾನೆ. ಆಗ ಯಾವ ಪ್ರತಿಕ್ರಿಯೆ ದೇಹದಲ್ಲಿ ಉಂಟಾಗುವುದಿಲ್ಲ. ಬದಲಾಗಿ ಪ್ರಸನ್ನವದನನಾಗುತ್ತಾನೆ.

ಶಬ್ದ ಕೇಳಿದ ಪ್ರತಿಕ್ರಿಯೆ ದೇಹದ ಮೂಲಕ ಹೊರ ಬರುವುದಿಲ್ಲ. ದೇಹ ಯಾವ ರಾಸಾಯನಿಕ ಕ್ರಿಯೆಗೂ ಒಳಗಾಗುವುದಿಲ್ಲ. ಕೇಳಿದ ಶಬ್ದ ದೇಹದಲ್ಲಿಯೇ ಐಕ್ಯವಾಗುತ್ತದೆ.

ತಾಕಿದ ಸ್ಪರ್ಶ, ತಾಕಿದ ಚರ್ಮದಲ್ಲಿಯೇ ಐಕ್ಯವಾಗುತ್ತದೆ. ಸ್ಪರ್ಶದಿಂದ ಚರ್ಮದಲ್ಲಿ ಹಾವು ಹರಿದಾಡಿದಂತೆ ಭಾಸವಾಗುವುದಿಲ್ಲ. ದೇಹ ಉದ್ರೇಕಗೊಳ್ಳುವುದಿಲ್ಲ. ಚರ್ಮಕ್ಕೆ ಚರ್ಮ ತಾಕಿದ ಸಹಜ ಅನುಭವ ಚರ್ಮದಲ್ಲಿ ಉಂಟಾಗುತ್ತದೆ. ಏಕೆಂದರೆ ಚರ್ಮ ಹೆಣ್ಣು ಅಲ್ಲ ಗಂಡು ಅಲ್ಲ; ಅದು ಕೇವಲ ಚರ್ಮವೆಂದು, ಚರ್ಮ ಸ್ವಾನುಭಾವದಿಂದ ಸ್ಪರ್ಶಿಸಿದ ಚರ್ಮವನ್ನು ಅರಿಯುತ್ತದೆ. ಚರ್ಮದ ಜ್ಞಾನ ಚರ್ಮವೇ ಅರಿತು ಸಕಲ ಸ್ಪರ್ಶಗಳನ್ನು ಸುಖ ದುಃಖಗಳಿಲ್ಲದೆ ಚರ್ಮದಲ್ಲಿ ಅರಿತು ಸಕಲ ಸ್ಪರ್ಶಗಳನ್ನು ಸುಖ ದುಃಖಗಳಿಲ್ಲದೆ ಚರ್ಮದಲ್ಲಿ ಐಕ್ಯವಾಗುತ್ತದೆ.

ನೋಡಿದ ದೃಶ್ಯ ನೋಡಿದ ಕಣ್ಣಲ್ಲಿಯೇ ಐಕ್ಯವಾಗುತ್ತದೆ. ಮೂಸಿಸಿದ ಸುಗಂಧ ದುರ್ಗಂಧಗಳೆರಡು ಮೂಗಿನಲ್ಲಿ ಐಕ್ಯವಾಗಿ ಅರಿವಿನ ಪರಿಮಳದಿಂದ ಮೂಗು ಮೂಸಿಸಿ ಸ್ವಾನುಭಾವದಿಂದ ಬೆಳಗುತ್ತದೆ.

ರುಚಿ ಅರುಚಿಯೆನ್ನದೆ ನಾಲಿಗೆ ಪ್ರಸಾದವನ್ನು ಸ್ವೀಕರಿಸಿ ಐಕ್ಯತಾ ಸ್ವಾನುಭಾವವನ್ನು ಬೆಳಗುತ್ತದೆ.

''ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ? ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯಾ? ಘ್ರಾಣದೊಳಗೆ ಘ್ರಾಣವಿದ್ದು ವಾಸಿಸಲೇಕರಿಯರಯ್ಯಾ? ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯಾ? ಸ್ಪರ್ಶನದೊಳಗೆ ಸ್ಪರ್ಶನವಿದು ಮುಟ್ಟಲೇಕರಿಯರಯ್ಯಾ? ಪ್ರಾಣದೊಳಗೆ ಪ್ರಾಣವಿದ್ದು ನೆನೆಯಲೇಕರಿಯರಯ್ಯಾ?

ಕಾಯದೊಳಗೆ ಕಾಯವಿದ್ದು ಬಿಡದು, ಬೇರಾಗದು, ಕೂಡಲಸಂಗಮದೇವಾ, ನೀನಿಕ್ಕಿದ ಅಣಕದ ಭೇದವ ಭೇದಿಸಬಾರದಯ್ಯಾ''. ಎಂದು ಬಸವಣ್ಣನವರು ತನುವಿನ ಲೋಕಕ್ಕೆ ಅರಿವಿನ ಮಹಾ ಸೂತ್ರವನ್ನೇ ನೀಡಿದ್ದಾರೆ.

ಗುರುವರ್ಗಕ್ಕೆ ಶಿಕ್ಷಕರಿಗೆ ಪ್ರಾಧ್ಯಾಪಕರಿಗೆ ವಿಶ್ವವಿದ್ಯಾಲಯಗಳಿಗೆ ವಿವೇಕವಿದ್ದರೆ ಅರಿವಿನಿಂದ ಅರಿದರಿದು ಶಿಷ್ಯರಿಗೆ ಬೋಧಿಸುತ್ತಾರೆ. ಇಲ್ಲದಿದ್ದರೆ ಸರಕಾರದಿಂದ ಸಮಾಜದಿಂದ ಕೊಡಮಾಡಿದ ಹಣವನ್ನು ಶುನಿಯಂತೆ ತಿಂದು ಹೊತ್ತುಗಳಿಯುತ್ತಾರೆ.

ಗುರುವರ್ಗ ಅವಿವೇಕದಿಂದ ಶುನಿಯಂತೆ ಹೊತ್ತುಗಳೆದರೂ ಅಡ್ಡಿಯಿಲ್ಲ; ''ಐಕ್ಯೈಕ್ಯನೆಂತೆಂಬ ಆಡಕವನರಿದಿರ್ದಡೆ'' ಅಂದರೆ ಸ್ವಾನುಭಾವದಿಂದ ಶಿಶ್ಯ ತನಗೆ ತಾನೇ, ತನ್ನಲ್ಲಿ ತಾನೇ ಕೇಳುವ ಶಬ್ದವನ್ನು, ನೋಡುವ ದೃಶ್ಯವನ್ನು ಸ್ಪರ್ಶಿಸುವ ಸ್ಪರ್ಶನೆಯನ್ನು, ರುಚಿಸುವ ರುಚಿಯನ್ನು, ಮೂಸಿಸುವ ವಾಸನೆಯನ್ನು ಅರಿತರಿತು ಸ್ವಾನುಭಾವಕ್ಕೆ ಹೋದರೆ ತನ್ನಿಂದ ಸೃಷ್ಟಿಯಾದ ಅಜ್ಞಾನ ತನ್ನ ತನುವಿನಲ್ಲಿಯೇ ಇದ್ದ ಮಹಾಜ್ಞಾನದಲ್ಲಿ ಕರಗಿ ಐಕ್ಯವಾಗುತ್ತದೆ ಎನ್ನುತ್ತಾರೆ ಸಿದ್ಧರಾಮ ಶಿವಯೋಗಿಗಳು.

ಅನೇಕ ವಿಧ ಸದ್ಭಕ್ತಿ ಪದವನರಿದು ಆ ಗುರುವಿನ ಮನದ ಮತಿಯ ಬೆಳಗುವ ನಿರ್ಮಳಾಂಗನು ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಎಂತಹ ಅದ್ಭುತವಾದ ಸೂತ್ರ! ಗುರುವಿಗೆ ಹೇಳಲುಬಾರದಿದ್ದರೆ ಏನಾಯಿತು? ಗುರುವಿನ ಮನದ ಮತಿಯನು ಬೆಳಗುವ ಶಕ್ತಿ ಶಿಷ್ಯನಲ್ಲಿದೆ. ಅರಿದರಿದು ಆಲೋಚನೆ ಮಾಡಬೇಕು. ಗುರುವೇ ಹೇಳಬೇಕೆಂದು ಶಿಷ್ಯ ಕೂಡದೇ ಶಿಷ್ಯನೇ ಅರಿದರಿದು ಅರಿಯಲು ಹೋದರೆ ಗುರುವಿನ ಮನದ ಮತಿಯನ್ನು ಬೆಳಗುವ ಶಕ್ತಿ ಶಿಷ್ಯನಲ್ಲಿ ಇದೆ ಎಂದು ಶಿಷ್ಯನೇ ಕಂಡುಕೊಂಡು ತನಗೆ ತಾನೇ ಬೆಳಗುತ್ತಾನೆ.

**340**

**ಏಕೋ ದೇವಾಯೆಂದು ಮನೆಮನೆದಪ್ಪದೆ**
**ಗಿರಿಯ ತಡಿಯ ಕಡಲಮುಡಿಯ ಜಡೆಯನೆಂಬರು.**
**ಅಯ್ಯಾ, ಎಂದಡಾನು ನಗುತ್ತಲಿರ್ದ,**
**ಆ ಆಧಾರದಲ್ಲಿ ರೂಪು ಎಂಟು ಇಲ್ಲದಂದು**
**ಹೆಸರು ನಿನಗೇನು ಹೇಳಾ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ**
**ನೀನು ಆದಿಮುಖ ಶೂನ್ಯ ಕಾಣಾ.**

ದೇವರೆಂದರೆ ಯಾರು ಎಂದು ಜ್ಞಾನಿ ಮಾತ್ರ ಗುರುತಿಸಬಲ್ಲ. ಹೀಗಾಗಿ ಶಂಕರರು ಅಹಂಬ್ರಹ್ಮಾಸ್ಮಿ ಎಂದು ಕರೆದುಕೊಂಡರು. ತಿಳಿಯದವರು ಅಹಂಕಾರಿ ಎಂದರು. ಮಾತು ಹಿತ ಎನ್ನಿಸಿದ ಕೆಲವರು ಶಂಕರರನ್ನು ಆರಾಧಿಸಿದರು. ಅವರ ಅನುಯಾಯಿಗಳಾದರು.

ದೇವರನ್ನು ತಿಳಿಯಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಜ್ಞಾನಿಯನ್ನು ಕೂಡಾ ತಿಳಿಯಲು ಸಾಧ್ಯವಿಲ್ಲ. ಜ್ಞಾನಿಯನ್ನು ತಿಳಿಯಬೇಕಾದರೆ ಸ್ವತಹ ತಾನು ಜ್ಞಾನಿಯಾದಾಗಲೇ

ಸಾಧ್ಯವಾಗುವುದು.

ಏಕೋದೇವಾ ಎಂದು ಎಷ್ಟೋ ಜನ ಆರಾಧಿಸುತ್ತಾರೆ. ದೇವನೊಬ್ಬ ನಾಮ ಹಲವು ಎಂದು ಹೇಳುವುದೂ ಉಂಟು. ತಿಳಿದವರು ಹೇಳಿದ ಮಾತನ್ನೇ ಆಧಾರವಾಗಿಟ್ಟುಕೊಂಡು ಅನುಭವಕ್ಕೆ ತಂದುಕೊಳ್ಳದೇ ಏಕೋದೇವ ಎಂದು ಒದರಿದರೆ ಶಬ್ದ ಕೇಳುತ್ತದೆಯೇ ಹೊರತು ಅನುಭವಕ್ಕೆ ಬರುವುದಿಲ್ಲ.

ಶಿವ, ಗಂಗಾಧರ, ಅರ್ಧನಾರೀಶ್ವರ, ಶಂಕರ, ಈಶ್ವರ, ಏಕೋದೇವಾ, ಚರ್ಮಾಂಬರಿ, ನಾಗಭೂಷಣ ಎಂದು ದೇವರನ್ನು ಕೂಗಿ ಕೂಗಿ ಕರೆವರು. ಅಯ್ಯಾ, ಎಂದಡಾನು ನಗುತಲಿರ್ದ, ಆದಿ ಆಧಾರದಲ್ಲಿ ಪೃಥ್ವಿ ಅಪ್ಪು ತೇಜ ವಾಯು ಆಕಾಶ ಚಂದ್ರ ಸೂರ್ಯ ಆತ್ಮ-ಎಂಬ ಎಂಟು ತನುಗಳಿಂದ ಆದ ಪರಮಾತ್ಮ ನೀನು. ಇವು ಯಾವೂ ಇಲ್ಲದ ಅನಾದಿಯಂದು ನೀನು ಇರಲಿಲ್ಲವೆ?

ಅಂದು ಇಂದು ಎಂದೆಂದೂ ಇದ್ದ ನಿನ್ನನ್ನು ಗುರುತಿಸಿ ಕರೆದವರು ಯಾರು? ನೀನಿದ್ದ ತನುವಿನಲ್ಲಿ ನಿನಗೆ ನೀನೆ ನಿನ್ನನ್ನು ಗುರುತಿಸಿಕೊಳ್ಳುವ ಬಯಕೆ ನಿನಗಾದಾಗ ಶಂಕರನಂತೆ ಅಹಂಬ್ರಹ್ಮಾಸ್ಮಿ ಎಂದೆ. ನಾನೆ ಶಿವ ಎಂದೆ. ನಾನೇ ಅರ್ಧನಾರೀಶ್ವರ ಎಂದು ಕರೆದುಕೊಂಡೆ. ಹೀಗೆ ನಿನಗೆ ನೀನು ನೀನಿದ್ದ ತನು ಕರೆದುಕೊಂಡ ನಿನ್ನನ್ನು ಇತರರು ನಂಬಬೇಕಲ್ಲ!

ನಿನ್ನನ್ನು ನೀನು ನಾನೇ 'ಶಿವ' ಎಂದು ಕರೆದುಕೊಂಡರೂ ನಿನ್ನ ಕೂಗು ಕೇಳದವರು ಹಲವರಾದರೆ; ನಾನೇ 'ಶಿವ' ಎಂದು ಅನುಭವಕ್ಕೆ ತಂದುಕೊಳ್ಳದೆ ಕೂಗುವವರು ಹಲವರು.

ಏನೂ ನೋಡಲರಿಯದವರ ಮುಂದೆ 'ಕ್ರಿಷ್ಣ' ತನ್ನ 'ವಿರಾಟ' ಸ್ವರೂಪ ತೋರಿದನೆಂದು ವ್ಯಾಸ ಮಹರ್ಷಿಗಳು ಬರೆದ ತೆರನಂತೆ.

ಭಕ್ತ ನೆನಿಸುವೆನಯ್ಯಾ ಮೆಲ್ಲ ಮೆಲ್ಲನೆ, ಯುಕ್ತ ನೆನೆಸುವೆನಯ್ಯಾ ಮೆಲ್ಲ ಮೆಲ್ಲನೆ, ಸಾರಿ ಶರಣನೆನ್ನಿಸುವೆನಯ್ಯಾ ಮೆಲ್ಲಮೆಲ್ಲನೆ, ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ ಕೂಡಲ ಸಂಗಮದೇವಾ ನಿಮ್ಮಿಂದಧಿಕನೆನಿಸುವೆನಯ್ಯಾ' ಎಂದು ಬಸವಣ್ಣನವರು ಅನುಭವಕ್ಕೆ ತಂದುಕೊಂಡು ಪರಮಾನಂದದಿಂದ ನುಡಿದರು. ಎಲೆ ಶಿವನೇ ನಿನಗಿಂತಧಿಕನೆನಿಸಿಕೊಳ್ಳಲೂ ನನಗೆ ಬರುತ್ತದೆ ಎಂದು ಎದೆ ತಟ್ಟಿ ನುಡಿದರು. ಆದರೂ ಈ ಮಾತು ಶರಣರಿಗೆ ವೇದ್ಯವಾಗುತ್ತದೆಯೇ ಹೊರತು ಉಳಿದವರ ಅನುಭವಕ್ಕೆ ಬರುವುದಿಲ್ಲ.

ಅನುಭವಕ್ಕೆ ತಂದುಕೊಳ್ಳದೆ ಯಾವ ಮಾತನ್ನು ಆಡಿದರೂ ಉಪಯೋಗವಿಲ್ಲ. ಮಾತು ಮನದಲ್ಲಿ ಸಂಗ್ರಹವಾಗಿರುವುದರಿಂದ, ಮನ ತನುವನ್ನು ಆವರಿಸಿರುವುದರಿಂದ, ತನುವಿನಲ್ಲಿದ್ದ ಅರಿವಿನ ಶಕ್ತಿ ತನುವಿನ ಮುಖಾಂತರ ಹೊರಬರಲು ಸಾಧ್ಯವಾಗುತ್ತಿಲ್ಲ.

ಮನದಿಂದಾಗಿ ನೋಡುವ ಕಣ್ಣು, ಕೇಳುವ ಕಿವಿ, ಸ್ಪರ್ಶಿಸುವ ಚರ್ಮ, ರುಚಿಸುವ ನಾಲಿಗೆ, ಮೂಸಿಸುವ ಮೂಗು ಇವುಗಳಲ್ಲಿದ್ದ ಶಕ್ತಿ ಇವುಗಳಿಗೆ ಬಳಕೆ ಮಾಡಲು ಸಾಧ್ಯವಾಗುತ್ತಿಲ್ಲ. ಈ ಎಲ್ಲಾ ಜ್ಞಾನೇಂದ್ರಿಯಗಳಲ್ಲಿ ಶಿವನಿದ್ದಾನೆ. ಏಕೋ ದೇವನಿದ್ದಾನೆ. ದೇಹವೆಂಬುದು ಏಕೋದೇವನಿದ್ದ ಅರಿವಿನ ದೇವಾಲಯ! ಹೆಸರೇ ಇಲ್ಲದ ವೃಕ್ಷ!

ದೇಹದಲ್ಲಿದ್ದ ದೇವರು ದೇಹವನ್ನು ಆವರಿಸಿದ ಮನದ ಅನುಭವಕ್ಕೆ ಬಂದರೆ ಸಾಕು ಮನ ದೇಹಕ್ಕೆ ಇಟ್ಟ ಹೆಸರನ್ನು ಕಳೆದುಕೊಂಡು 'ಬುದ್ಧ' ಎಂದು ಕರೆದುಕೊಳ್ಳುತ್ತದೆ. 'ಅಹಂಬ್ರಹ್ಮಾಸ್ಮಿ' ಎಂದು ಕರೆದುಕೊಂಡು ಹೆಸರಿಲ್ಲದ ವೃಕ್ಷವಾಗಿ ಬೋಧಿವೃಕ್ಷವಾಗಿ ಬೋಧಿಸುತ್ತಾ ನಡೆದಾಡುತ್ತದೆ.

**341**

**ಏನಯ್ಯಾ, ಏನಯ್ಯಾ! ಮಕ್ಕಳಿಗೆ ಜನಕರು ಕಾಡುವರೋ?**
**ನಾನು ಗುರುಸ್ಥಲಕ್ಕೆ ಯೋಗ್ಯನಲ್ಲ, ಲಿಂಗಸ್ಥಲಕ್ಕೆ ಯೋಗ್ಯನಲ್ಲ,**
**ಜಂಗಮಸ್ಥಲಕ್ಕೆ ಯೋಗ್ಯನಲ್ಲ,**
**ನಾ ನಿಮ್ಮ ರಾಜಾಂಗಣದ ಕೂಲಿಕಾರ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಕುರಿತು ಬಸವಣ್ಣನವರು ''ತಂದೆ ನೀನು, ತಾಯಿ ನೀನು ಬಂಧು ನೀನು, ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲ ಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ'' ಎಂದು ಹಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ಕೂಡಾ 'ಏನಯ್ಯಾ, ಏನಯ್ಯಾ, ಮಕ್ಕಳಿಗೆ ತಂದೆ ಕಾಡುವುದು ಉಚಿತವೆ? ಎಂದು ತಂದೆಯನ್ನು ಪ್ರಶ್ನಿಸಿದ್ದಾರೆ; ಸಕಲ ಮಕ್ಕಳ ಪರವಾಗಿ.

ಗುರುಸ್ಥಲವೆಂದರೇನೆಂದು ನನಗೆ ಗೊತ್ತಿಲ್ಲ ಹೀಗಾಗಿ ನಾನು ಗುರುಸ್ಥಲಕ್ಕೆ ಯೋಗ್ಯನಲ್ಲ. ಲಿಂಗಸ್ಥಲವೆಂದರೇನೆಂದು ನನಗೆ ಗೊತ್ತಿಲ್ಲ ಹೀಗಾಗಿ ಲಿಂಗಸ್ಥಲಕ್ಕೆ ನಾನು ಯೋಗ್ಯನಲ್ಲ. ಜಂಗಮಸ್ಥಲವೆಂದರೆ ಏನೆಂದು ನನಗೆ ಗೊತ್ತಿಲ್ಲ. ಹೀಗಾಗಿ ನನಗೆ ಜಂಗಮ ಸ್ಥಲ ಗೊತ್ತಿಲ್ಲ.

ಒಂದು ತನುವಿನಲ್ಲಿ ಮೂರುಭಾಗ ಸೀಳಿ ನೋಡುವ ಶಾಸ್ತ್ರ ನಾನು ಕಲಿತಿಲ್ಲ. ಆದರೆ ನನಗೆ ತನುವೆಂದರೆ ತನುವೆಂದು ಮಾತ್ರ ಗೊತ್ತಿದೆ. ತನುವನ್ನು ತನುವಂತೆಯೇ ನೋಡುವ ತಿಳುವಳಿಕೆ ನನಗೆ ಇದೆ. ನಾನು ನಿನ್ನ ಮಗ. ನೀನು ನನ್ನ ತಂದೆ. ನಿಮ್ಮ ರಾಜಾಂಗಣದ ಕೂಲಿಕಾರ ನಾನು. ನನ್ನ ತಂದೆ ನೀನು, ನನ್ನ ಬಂಧು ನೀನು, ನನ್ನ ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲ ನನಗೆ. ಇಂತಹ ನಿನ್ನ ಮಗನನ್ನು ನೀನೇ ಕಾಡುವುದು ಸರಿಯೇ?

ನೀನು ಹೇಳಿದಂತೆ ಕೇಳುವ ಕೂಲಿಕಾರ ನಾನು. ಗುರುಸ್ಥಲ, ಲಿಂಗಸ್ಥಲ, ಜಂಗಮ ಸ್ಥಲಕ್ಕೆ ಯೋಗ್ಯನಾಗದೇ ಇರಬಹುದು. ಶಾಸ್ತ್ರವೇತ್ತರು ನಿನ್ನನ್ನು ತಿಳಿಯಲು ರಚಿಸಿದ ಸುಳುಹು ಮುಖ್ಯವೋ? ನೇರವಾಗಿ ನಿನ್ನನ್ನು ತಿಳಿದು ನಿನ್ನನ್ನೇ ತಂದೆಯೆಂದು ಕೂಗಿ ಕರೆಯುವ ಮಗ ಮುಖ್ಯವೋ?

ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನೆಂದು; ನೀನೇ ನನ್ನ ತಂದೆ ತಾಯಿ ಬಂಧು ಬಳಗವೆಂದು ಗುರುತಿಸಿ ಕೂಗಿ ಕರೆದ ಮಗನನ್ನು ಜನಕನಾದ ನೀನು ಕಾಡುವುದು ಉಚಿತವೆ?

ಏನಯ್ಯಾ, ಏನಯ್ಯಾ! ಹಡೆದ ಮಕ್ಕಳನ್ನು ಹಡೆದ ತಂದೆಯೇ ಕಾಡುವುದೆಂದರೇನು? ನಿನಗೆ ಹುಟ್ಟಿದ ಮಕ್ಕಳಿಗೆ ನಿನ್ನ ನೆನಪು ಇಲ್ಲದೇ ಇರಬಹುದು. ಆದರೆ ಮಕ್ಕಳನ್ನು ಹಡೆದ ತಂದೆಗೆ ಮಕ್ಕಳ ನೆನಪು ಇಲ್ಲದೆ ಕಾಡುವುದೆಂದರೇನು?

ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನು ನಿನ್ನ ವಾರಸುದಾರ. ನಿನ್ನ ರಾಜಾಂಗಣದ ಕೂಲಿಕಾರ. ನೀನು ನನ್ನ ಹಡೆದ ತಂದೆ. ನಿನ್ನ ಅರಿವಿನ ಸಮಪಾಲು ನಿನ್ನ ಮಕ್ಕಳಿಗೆ ಮಾತ್ರ ಸಲ್ಲಬೇಕು. ನೀನು ಹಡೆದ ಸರ್ವ ಮಕ್ಕಳಿಗೂ ಸಲ್ಲಬೇಕು. ಅದು ನಿನ್ನ ಧರ್ಮ.

342

**ಏನೆಂದೆನಲಿಲ್ಲದ ಅಖಂಡ ಪರಿಪೂರ್ಣ ಪರಮಾನಂದ ಪರಬ್ರಹ್ಮವು**
**ತಾನೆಂಬ ಅರಿವಿನ ಬಲದ ಅಹಂಕಾರವಿಲ್ಲವಾಗಿ, ಅದ್ವೈತಿಯಲ್ಲ ;**
**ಉಭಯವಿಟ್ಟರಸುವ ಗಜೆಬಜೆಯಲ್ಲಿ ಸಿಲುಕನಾಗಿ, ದ್ವೈತಿಯಲ್ಲ.**
**ಇಂತೀ ದ್ವೈತಾದ್ವೈತವೆಂಬ ಉಭಯ ನಾಮ**
**ನಷ್ಟವಾದ ಅಭೇದ್ಯ ಮಹಿಮನ**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿಮ್ಮ ಶರಣರೆ ಬಲ್ಲರು.**

ಏನೆಂದು ಎನ್ನಲು ಕೂಡಾ ಬಾರದಂತಹ ಅಖಂಡ ಪರಿಪೂರ್ಣ ಪರಮಾನಂದ ಪರಬ್ರಹ್ಮವು ಅದು ವಿರಾಟ ಸ್ವರೂಪ. ತಾನೆಂಬ ಅರಿವಿನ ಬಲದ ಅಹಂಕಾರವು ಕೂಡಾ ಆ ಪರಬ್ರಹ್ಮಕ್ಕೆ ಇಲ್ಲದ ಕಾರಣ ಅದು ಅದ್ವೈತಿಯಲ್ಲ.

ಪರಬ್ರಹ್ಮನೇ ಬೇರೆ; ಆ ಬ್ರಹ್ಮನನ್ನು ತಿಳಿಯುವ ನಾನು ಬೇರೆ ಎಂಬ ಭಯವನ್ನು ಇಟ್ಟು ಅದರಲ್ಲಿ ಹುಡಕುವ ಗಜೆಬಜೆಯಲ್ಲಿ ಆತ ಸಿಲುಕನಾಗಿ ದ್ವೈತಿ ಕೂಡಾ ಅಲ್ಲ.

ಅಹಂಬ್ರಹ್ಮಾಸ್ಮಿ ಎಂಬ ಅಹಂಕಾರವೂ ಇಲ್ಲ. ಬ್ರಹ್ಮ ಬೇರೆ ಆ ಬ್ರಹ್ಮನನ್ನು ತಿಳಿಯುವ ನಾನೇ ಬೇರೆ. ಉಭಯದ ಅಂದರೆ ಅದ್ವೈತ ದ್ವೈತ ಎಂಬ ಹೆಸರನ್ನು ಕೂಡಾ ನಷ್ಟ ಮಾಡಿಕೊಂಡು ಭೇದಿಸಲು ಸಾಧ್ಯವಾಗದಂತಹ ಅಭೇದ್ಯ ಮಹಿಮನು ಅವನು.

ಅಂತಹ ಪೂರ್ವಾಪೂರ್ವ ಆಚಾರ್ಯನು, ಪ್ರತಿ ಅಂಗದಲ್ಲಿ ಸಂಗಮವಾಗಿರುವನು. ಅವನಿಗೆ ದ್ವೈತವೆಂಬುದು ಒಂದೇ ಆಗಿದೆ. ಅದ್ವೈತವೆಂಬುದು ಕೂಡಾ ಒಂದೇ ಆಗಿದೆ.

ದ್ವೈತ ಅದ್ವೈತ ಎಂದು ಸೀಳುವುದು ಮನದ ಪಾಂಡಿತ್ಯ. ತನುವಿನಲ್ಲಿ ಸಂಗಮವಾದ ಅಖಂಡ ಪರಿಪೂರ್ಣ ಪರಮಾನಂದ ಬ್ರಹ್ಮವು ಅದ್ವೈತಿಯೆಂದರೂ ಸುಮ್ಮನೆ ಇದೆ. ದ್ವೈತಿ ಎಂದರೂ ಕೂಡಾ ಸುಮ್ಮನೆ ಇದೆ. ಏಕೆಂದರೆ ಆ ಎರಡೂ ಹೆಸರುಗಳ ಜ್ಞಾನ ಪರಮಾನಂದ ಬ್ರಹ್ಮದಲ್ಲಿ ಐಕ್ಯವಾಗಿ ಏನೆಂದು ಹೇಳಲು ಬಾರದಂತೆ ಹೆಸರು ನಷ್ಟ ಮಾಡಿಕೊಂಡು ಆನಂದವನ್ನು ಅನುಭವಿಸುತ್ತದೆ.

ಆಗ ಮನ, ಅದ್ವೈತಿ ತಾನೆಂಬ ಅರಿವಿನ ಬಲದ ಅಹಂಕಾರವನ್ನು ಕಳೆದುಕೊಳ್ಳುತ್ತದೆ. ದ್ವೈತಿಯೆಂಬ ಗಜಿಬಿಜಿಯನ್ನು ಕಳೆದುಕೊಳ್ಳುತ್ತದೆ. ದ್ವೈತಾದ್ವೈತಿಯೆಂಬ ಉಭಯ ನಾಮ ನಷ್ಟ ಮಾಡಿಕೊಂಡು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

343

**ಏನೆಂದೆನಿಸದ ವಸ್ತು, ಅಪ್ರಮಾಣಮೂರ್ತಿ**
**ಬಸವ ಎಂಬ ಪದಕ್ಕೆ ನಿಂದಿತ್ತಯ್ಯಾ ನಿಮ್ಮ ಪ್ರಸಾದ.**
**ಅರಿಯಬಾರದ ಬಸವನೆಂಬ ವಸ್ತುವನರುಹಿತ್ತಯ್ಯಾ ನಿಮ್ಮ ಪ್ರಸಾದ.**
**ಬಸವನೆಂಬ ನಿಜವ ನಿಮ್ಮಲ್ಲಿ ನಿಲಿಸಿತ್ತಯ್ಯಾ ನಿಮ್ಮ ಪ್ರಸಾದ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನಿಮ್ಮ ಅರ್ಪಿತ ಅನರ್ಪಿತವಾಯಿತ್ತಯ್ಯಾ.**

ನಿಮ್ಮ ಬಸವವಿಡಿದು.

ಜಗದಗಲ ಮುಗಿಲಗಲಕ್ಕೂ ವ್ಯಾಪಿಸಿಕೊಂಡ ವಸ್ತುವನ್ನು ಏನೆಂದು ಹೆಸರಿಟ್ಟು ಕರೆಯುವುದು? ಪಾತಾಳದಿಂದ ಅತ್ತತ್ತ ಬ್ರಹ್ಮಾಂಡದಿಂದ ಅತ್ತತ್ತ ವ್ಯಾಪಿಸಿಕೊಂಡ ವಸ್ತುವನ್ನು ಏನೆಂದು ಹೆಸರಿಟ್ಟು ಕರೆಯಲು ಸಾಧ್ಯ? ಪಂಚಭೂತಗಳಿಗೂ ಮಿಗಿಲಾದ ವಸ್ತುವನ್ನು ಏನೆಂದು ಹೆಸರಿಟ್ಟು ಕರೆಯಲು ಸಾಧ್ಯ? ಅಗಮ್ಯ ಅಪ್ರತಿಮ ಅಪ್ರಮಾಣ ಮೂರ್ತಿಯನ್ನು ಏನೆಂದು ಹೆಸರಿಟ್ಟು ಕರೆಯಲು ಸಾಧ್ಯ? ಇದೆಲ್ಲವನ್ನು ಶರಣರಿಗೆ ಪ್ರಸಾದದಂತೆ ಹಂಚಿದ ಬಸವಣ್ಣನವರ ಸ್ವರೂಪವೇ ಆಗಿ ಆ ವಸ್ತು 'ಬಸವ' ಪದಕ್ಕೆ ನಿಂದಿತ್ತಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಪರಮಾನಂದದಿಂದ ಹಾಡಿದ್ದಾರೆ.

ಪ್ರಮಾಣಿಸಲು ಬಾರದ, ಗಮನಕ್ಕೆ ನಿಲುಕದ, ಜಗದಗಲ ಮುಗಿಲಗಲ ವ್ಯಾಪಿಸಿಕೊಂಡ, ಅಪ್ರತಿಮ ವಸ್ತುವೊಂದು ಅಂಗದಲ್ಲಿ ಸಂಗಮವಾಗಿ ಕೂಡಲ ಸಂಗಮದೇವನೇ ತಾನಾಗಿದೆ ಎಂದು ಬಸವಣ್ಣನವರು ಶರಣರಿಗೆ ತಿಳಿಸಿಕೊಟ್ಟುದು ಸಾಮಾನ್ಯದ ಮಾತಲ್ಲ.

ಅರಿಯಬಾರದ ವಸ್ತುವನ್ನು ಅರಿಯುವುದಕ್ಕೆ, ಅರಿದರಿದು ನೋಡುವುದಕ್ಕೆ, ಅರಿಯಬಾರದ ವಸ್ತುವನ್ನು ಅರಿತು ಆ ವಸ್ತುವೇ ತಾನಾಗುವುದಕ್ಕೆ ಅನುಕೂಲ ಮಾಡಿಕೊಟ್ಟ ಬಸವಣ್ಣನವರ ಕಾಯದ ಕಾಯಕ ಅದ್ಭುತವಾದದ್ದು.

ಕಾಯದಲ್ಲಿಯೇ ಕೈಲಾಸ ಅಡಗಿದೆ ಎಂದು ಅನುಭವಕ್ಕೆ ಬರುವಂತೆ ತೋರಿಸುವ ಕಾಯಕ ಸಾಮಾನ್ಯವಲ್ಲ. ಅರಿತರೆ ಜಗತ್ತೇ ಬೆರಗುಗೊಳ್ಳುತ್ತದೆ. ಬುದ್ಧ ಕಠಿಣ ಮಾರ್ಗವನ್ನು ತುಳಿದ. ಮಹಾವೀರ ನಡೆದದ್ದು ಕೂಡಾ ಬಹಳ ಜಟಿಲವಾದ ಮಾರ್ಗವೇ ಆಗಿತ್ತು. ಆದರೆ ಬಸವಣ್ಣ ಆ ಎರಡೂ ಮಾರ್ಗಗಳನ್ನು ಸಂಪೂರ್ಣವಾಗಿ ಸರಳೀಕರಿಸಿದ.

ಅರಿಯಬಾರದ ವಸ್ತುವನ್ನು ಕಾಯದಲ್ಲಿ ತೋರಿ ಅದಕ್ಕೆ ಅರಿವೆಂದು ಹೆಸರಿಟ್ಟು ಕರೆದ. ಅದಕ್ಕೆ ಗುರುವೆಂದು ಕರೆದ. ಅದನ್ನೇ ಲಿಂಗವೆಂದು ಹೆಸರಿಟ್ಟು ಕರೆದು ಆ ಲಿಂಗವನ್ನೇ 'ಪತಿ' ಎಂದು ಕರೆದ. ಅರಿಯಬಾರದ ವಸ್ತು ಅರಿವಿಗೆ ಬಂದು 'ಲಿಂಗಪತಿ'ಯಾಯಿತು.

'ಲಿಂಗಪತಿ' ಎಂದು ಅರಿತ ಮನವನ್ನೇ 'ಸತಿ' ಎಂದು ಕರೆದ. ಸತಿ ಅಂಗದಲ್ಲಿಯೇ ಸಂಗಮವಾದ ಲಿಂಗದೇವನಿಗೆ ಶರಣು ಹೋಗಿ ಶರಣ ಸತಿ ಎಂದು ಕರೆಯಿಸಿಕೊಂಡಿತು.

ಅಂಗದಲ್ಲಿಯೇ ಲಿಂಗಯ್ಯನೆಂಬ ಪತಿದೇವನು ಶರಣನೆಂಬ ಸತಿಯು ವಾಸವಾದ ರಹಸ್ಯಮಯವಾದ ಗುಟ್ಟನ್ನು ಅರಿಯಲು ಬಂದ ಸಕಲ ಆಸಕ್ತರಿಗೆ ತಿಳಿಹೇಳಿದ. ಏಳುನೂರಾ ಎಪ್ಪತ್ತು ಜನ ಈ ಸಹಜ ಶಿಕ್ಷಣಕ್ಕೆ ಮಾರು ಹೋದರು.

ಸತಿ, ಸತಿಯಾಗಿ ಪತಿಯ ಸಂಗಮಾಡಿ ಅಂಗದಲ್ಲಿಯೇ ಪರಮಾನಂದದಿಂದ ವಿರಮಿಸಿದಳು. ಪತಿ ಸತಿಯಾಗಿ ಪತಿಯ ಸಂಗವ ಮಾಡಿ ಅಂಗದಲ್ಲಿಯೇ ಪರಮಾನಂದವನ್ನು ಪಡೆದನು. ಸತಿ ಪತಿಗಳ ಭಕ್ತಿ ಶಿವನಿಗೆ ಹಿತವಾಯಿತು.

ಅರಿಯಬಾರದ, ಏನೆಂದೆನ್ನಿಸದ, ಮರೆಯಾದ ವಸ್ತುವೊಂದನ್ನು ಬಸವಣ್ಣ ಸಕಲ ಕಾಯಗಳಲ್ಲಿಯೂ ಸಂಗಮವಾಗಿದೆ ಎಂಬುದನ್ನು ಕಾಯದ ಅರಿವಿಗೆ ತಂದುಕೊಟ್ಟನು.

ಅರಿಯಬಾರದ ವಸ್ತುವನ್ನು ಏನೆಂದೆನ್ನಿಸಿಕೊಳ್ಳದ ಯಾರೂ ಪ್ರಮಾಣಿಸಲು ಬಾರದ ಅಪ್ರಮಾಣ ವಸ್ತುವಿಗೆ ಸಿದ್ಧರಾಮ ಶಿವಯೋಗಿಗಳು ''ಬಸವ'' ಎಂದು ನಾಮಕರಣ ಮಾಡಿದರು. ಅದು ನಿಮ್ಮ ಪ್ರಸಾದ ಎಂದು ಪರಮ ಸಂತೋಷದಿಂದ ನುಡಿದರು.

ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ಸಕಲ ಕಾಯಗಳಿಗೆ ಅರ್ಪಿಸಿದ ವಸ್ತು ಅರ್ಪಿತವಾಯಿತ್ತು. ಏಕೆಂದರೆ ನೀನಿದ್ದ ಕಾಯ ನಿನ್ನನ್ನು ತಿಳಿಯದಾಯಿತು. ಬಸವನಿತ್ತ ಪ್ರಸಾದ ಕಾಯಕ್ಕೆ ಅರ್ಪಿತವಾಯಿತು.

ಅರಿಯಬಾರದ ಬಸವನೆಂಬ ವಸ್ತುವನರುಹಿತ್ತಯ್ಯಾ ನಿಮ್ಮ ಪ್ರಸಾದ:

ಕಾಯದಲ್ಲಿ ನೀನಿದ್ದರೂ ಕಾಯಕ್ಕೆ ನಿನ್ನ ಪರಿಚಯ ಮಾಡಿಕೊಳ್ಳದೆ ಹೋದೆ. ನೀನಿದ್ದ ವಿಷಯವನ್ನು ಬಸವ, ಕಾಯ ಮುಟ್ಟಿ ಕಾಯಕ್ಕೆ ತೋರಿದ. ನಿಮ್ಮ ಪ್ರಸಾದ ಕಾಯಕ್ಕೆ ಬಸವನಿಂದ ಸಾಧ್ಯವಾಯಿತ್ತು. ಅರಿಯಬಾರದ ವಸ್ತು ಬಸವನೆಂಬ ಪದಕ್ಕೆ ನಿಂದಿತ್ತು.

**344**

**ಏನೋ ಏನೋ ಗಂಡಾ,**
**ನಿಮ್ಮ ತಂದೆ ಬಂದೈದಾನೆ**
**ನಾನೇನುವನರಿಯೆನೈ.**
**ನೀನೆ ನಿಮ್ಮ ತಂದೆಯ ಸಂತೈಸಿ,**
**ಎನಗವರ ಕರುಣವ ಪಾಲಿಸಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ,**

ಸುಂದರವಾದ ಸೂತ್ರ. ಅರಿವಿನ ಮಹಾಸೂತ್ರ. ಆಧ್ಯಾತ್ಮದ ಅರಿವಿನ ಲೋಕದಲ್ಲಿದ್ದಾತನನ್ನು ಉತ್ತುಂಗದ ಎತ್ತರಕ್ಕೆ ಕರೆದುಕೊಂಡು ಹೋಗುವಂಥ ಮಹಾಸೂತ್ರ! ಲೌಕಿಕ ಓದುಗರಿಗೆ ಇದು ಅಸಹ್ಯ!

ಏನೋ ಏನೋ ಗಂಡಾ, ನಿಮ್ಮ ತಂದೆ ಬಂದಿದ್ದಾನೆ. ಆತ ಯಾಕೆ ಬಂದಿದ್ದಾನೆಂದು ನಾನು ಅರಿಯೆ. ನೀನೆ ನಿಮ್ಮ ತಂದೆಯನ್ನು ಸಂತೈಸು. ಎನಗವರ ಕರುಣವ ಪಾಲಿಸು ಎಂದು ಸಿದ್ಧರಾಮ ಶಿವಯೋಗಿ ಹೆಣ್ಣಾಗಿ ಗಂಡನಿಗೆ ತಿಳಿ ಹೇಳುತ್ತಾನೆ.

ಎಲೆ ಗಂಡನೆ, ನಿಮ್ಮ ತಂದೆ ನನ್ನ ಮೇಲೆ ಆಸೆಯಿಟ್ಟು ಬಂದಿದ್ದಾನೆ. ಎನಗೆ ಅವರು ಬೇಕು. ಅವರ ಕರುಣೆಯೂ ಬೇಕು. ನೀನೆ ಅವರನ್ನು ಸಂತೈಸು. ಅವರು ನಿಮ್ಮ ತಂದೆ. ನೀನು ನನ್ನ ಗಂಡ.

ಇದು ಲೋಕ ತಿರಸ್ಕೃತ ಮಾತು. ಆದರೆ ಆಧ್ಯಾತ್ಮದ ಅರಿವಿನ ಲೋಕದಲ್ಲಿರುವಾತನಿಗೆ ಮತ್ತು ಬರಿಸುವ ಮಾತು. ಶಿಶುನಾಳ ಷರೀಫ, ಉಮರ್‌ಖಯ್ಯಾಮ, ಕಬೀರ, ಕೃಷ್ಣಾರ್ಜುನರ ಮಾತು. ಗಂಡನಿದ್ದರೂ ಸಖನೊಂದಿಗೆ ಪರಮ ಸುಖಿಯಾಗಿರುವ ಮಾತು. ಸಖ ಸಖಿಯರ ಮಾತು.

ಜ್ಞಾನವೆಂದರೆ ಒಂದು ಜಡ ವಸ್ತುವಲ್ಲ. ಅದನ್ನು ಪುಸ್ತಕದ ಮೂಲಕ, ವಿಶ್ವವಿದ್ಯಾಲಯಗಳಲ್ಲಿ, ಶಾಲಾ ಕಾಲೇಜುಗಳಲ್ಲಿ ಕಲಿಯಲು ಸಾಧ್ಯವಿಲ್ಲ. ಜ್ಞಾನವೆಂದರೆ ತನ್ನಂತೆಯೇ ರೂಪ ಹೊತ್ತು ತನ್ನ ರೂಪದಲ್ಲಿಯೇ ಸಂಗಮವಾದ ನಿರೂಪದೇವರು. ಆತ ಸಖ! ಆ ಸಖನನ್ನು ತಿಳಿಯುವ ಮನವೇ ಸಖಿ! ಈಕೆ ಕೂಡಾ ರೂಪವನ್ನು ಆವರಿಸಿರುವ ನಿರೂಪ ದೇವತೆ. ಇವರಿಬ್ಬರ ಸಂಗಮವೇ ಅರ್ಧನಾರೀಶ್ವರರ ಸಂಗಮ.

ದೇಹವನ್ನೇ ದೇಗುಲ ಮಾಡಿಕೊಂಡು ಸಖ-ಸಖಿಯರು ಅನುಭವಿಸುವ ಅರಿವಿನ ಕಾತುರದ ಅನುಪಮ ಸುಖವನ್ನು ಸಿದ್ಧರಾಮ ಶಿವಯೋಗಿಳು ಅತ್ಯಂತ ಮಾರ್ಮಿಕವಾಗಿ, ಈ ಮೇಲಿನ ತಮ್ಮ ವಚನದಲ್ಲಿ ಬಣ್ಣಿಸಿದ್ದಾರೆ. ನಮ್ಮ ದೇಶದ ಪುರಾತನ ಜ್ಞಾನಿಗಳು ಜ್ಞಾನವನ್ನು

'ದೇವರು' ಎಂದು ಕರೆದಿದ್ದಾರೆ. 'ಶಿವ' ಎಂದು ಕರೆದಿದ್ದಾರೆ. ತಂದೆ, ಗಂಡ, ಗುರು, ಸಖಿ ಎಂದು ಕೂಡಾ ಹೆಸರಿಟ್ಟು ಕರೆದಿದ್ದಾರೆ. ಶರಣರು ದಾಸರು ಜ್ಞಾನಕ್ಕೆ ತಮ್ಮ ಅಂಕಿತನಾಮದ ಹೆಸರಿಟ್ಟು ಪರಮಾನಂದದಿಂದ ಹಾಡಿದ್ದಾರೆ. ಜ್ಞಾನದೊಂದಿಗೆ ಮಾತನಾಡಿದ್ದಾರೆ. ಕೂಡದ ಅಗಲದ ಕೂಟದ ಪರಮ ಸುಖವನ್ನು ಅನುಭವಿಸಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ಲೋಕದ ದೃಷ್ಟಿಯಲ್ಲಿ ಗಂಡು. ಆದರೂ ಜ್ಞಾನದ ದೃಷ್ಟಿಯಲ್ಲಿ ಹೆಣ್ಣು! ಮನಸ್ಸು ಹೆಣ್ಣು; ಜ್ಞಾನ ಗಂಡು.

ಅಂಗ ಎನ್ನುವುದು ಅದು ಹೆಣ್ಣು ಅಲ್ಲ ; ಗಂಡು ಕೂಡಾ ಅಲ್ಲ. ಹೆಣ್ಣು ಗಂಡು ಎನ್ನುವುದು ಅಜ್ಞಾನ. ಆಕಾರ ನೋಡಿ ಹೆಣ್ಣು ಗಂಡು ಎಂದು ಹೇಳುವುದು ಲೋಕದ ಮಾತು. ಪದಾರ್ಥ ನೋಡಿ ಖಚಿತವಾಗಿ ಹೇಳುವುದು ಜ್ಞಾನಿಗಳ ಮಾತು. ಅಂಗದ ಪದಾರ್ಥ ನೋಡಿದರೆ, ಚರ್ಮ ಕಣ್ಣು ಕಿವಿ ಮೂಗು ನಾಲಿಗೆ ಒಂದೇ ತರ ಇದೆ. ಒಂದೇ ಕೆಲಸ ಮಾಡುತ್ತವೆ. ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಕೂದಲು ಉಗುರು ಕೂಡಾ ಒಂದೇ ತರಹವಿದೆ. ಲೋಕ ರೂಪ ನೋಡಿ ಅಜ್ಞಾನದಿಂದ ಹೆಣ್ಣು ಗಂಡು ಎಂದು ನಿರ್ಧರಿಸಿದರೆ ಜ್ಞಾನಿಗಳು ಪದಾರ್ಥ ನೋಡಿ ಅಂಗ ಎಂದು ನಿರ್ಧರಿಸುತ್ತಾರೆ. ಪ್ರತಿ ಅಂಗದಲ್ಲಿ ಸಂಗಮವಾದ ಜ್ಞಾನವೆಂಬ ದೇವರಿಗೆ ಹಣೆಮಣಿದು ಗೌರವಿಸುತ್ತಾರೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ದೇಹವನ್ನೇ ಮನೆಯನ್ನಾಗಿಸಿಕೊಂಡು ಮನವನ್ನೇ ಹೆಂಡತಿಯನ್ನಾಗಿಸಿ, ಜ್ಞಾನವನ್ನೇ ಗಂಡನನ್ನಾಗಿಸಿ ಸುಖೀ ಸಂಸಾರ ಹೂಡಿದ್ದಾರೆ. ಸತಿ-ಪತಿಗಳು ಒಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎನ್ನುವಂತಹ ಸಂಸಾರ ಅವರದು.

ಜ್ಞಾನವೆಂಬ ಗಂಡನಿಗೆ 'ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಹೆಸರಿಟ್ಟು ಕರೆದು ಆ ಗಂಡನೊಂದಿಗೆ ಅಂಗ ಎಂಬ ಮನೆಯಲ್ಲಿ ಸಂಸಾರ ಹೂಡಿದ್ದಾರೆ.

ಜ್ಞಾನಿಗೆ ಮೌನದ ಸುಖ ಉಣ್ಣುವ ಬಯಕೆಯಾದಾಗ ಇದ್ದಾಗಲೇ ಐಕ್ಯಸ್ಥಲಕ್ಕೆ ಜಾರುತ್ತಾರೆ. ಆಗ ಸಿದ್ಧರಾಮ ಶಿವಯೋಗಿಗಳು ಗಂಡ ಮಲ್ಲಿನಾಥಯ್ಯನನ್ನು ಕುರಿತು ಏನೋ ಏನೋ ಗಂಡಾ, ನಿಮ್ಮ ತಂದೆ ಬಯಲುದೇವ ಬಂದಿದ್ದಾನೆ. ಅವನಿಗೆ ನನ್ನ ಮೇಲೆ ಬಯಕೆಯಾಗಿದೆ. ನೀನೆ ನಿಮ್ಮ ತಂದೆಯನ್ನು ಸಂತೈಸಿ ನನ್ನೊಂದಿಗೆ ಮಲಗಲು ಕಳುಹಿಸು. ಅವನ ಪರಮ ಸುಖಕ್ಕಾಗಿ ನಾನು ಕಾದಿದ್ದೇನೆ. ಅದು ನನ್ನ ಕೊನೆಯ ಬಯಕೆ. ಎಲೆ ಗಂಡನೆ, ಕಪಿಲಸಿದ್ಧ ಮಲ್ಲಿನಾಥಯ್ಯನೆ, ಎನಗೆ ಅವರ ಕರುಣವ ಪಾಲಿಸಯ್ಯ ಎಂದಿದ್ದಾರೆ.

ಗಂಡನಾದವನು ಹೆಂಡತಿಯ ಬಯಕೆಯನ್ನು ಈಡೇರಿಸಲೇಬೇಕು. ಇದು ಲೋಕದ ನಿಯಮ. ಗಂಡನ ಕರ್ತವ್ಯವೂ ಕೂಡಾ. ಹೆಂಡತಿಗೆ ಪರಮಾತಿ ಪರಮ ಸುಖ ಕೊಡುವ ಮಹಾಜ್ಞಾನದ ಬಯಕೆಯಾದಾಗ ಲೋಕದ ಗಂಡನಿಗೆ ಹೆಂಡತಿಯ ಬಯಕೆ ತೀರಿಸಲು ಸಾಧ್ಯವಾಗುವುದಿಲ್ಲ. ಮನವೇ ಮಹಾದೇವಿಯಾಗಿ ಆ ಮಹಾದೇವನಿಗೆ ಮೊರೆ ಹೋಗಬೇಕು. ಹಾಗೆಯೇ ಸಿದ್ಧರಾಮ ಶಿವಯೋಗಿಗಳು ಮಲ್ಲಿನಾಥಯ್ಯನಿಗೆ ಮೊರೆ ಹೋಗಿದ್ದಾರೆ. ಎಲೆ ಗಂಡನೆ ನಿಮ್ಮ ತಂದೆಗೆ ನನ್ನ ಮೇಲೆ ಬಯಕೆಯಾಗಿದೆ. ಆತ ಬಯಲುದೇವ. ಆತನಿಗೆ ಹುಟ್ಟಿದಾತ ನೀನು. ಆತನ ಸುಖ ಉಣ್ಣುವ ಆಸೆ ನನಗೂ ಆಗಿದೆ. ನಿಮ್ಮ ತಂದೆಯನ್ನು ನೀನೆ ಸಂತೈಸಿ ಕಳುಹಿಸು ಗಂಡನೇ, ಎನಗವರ ಕರುಣವ ಪಾಲಿಸಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯನೇ.

**345**

**ಏರಿಯನೇರಿ ಬರುವಲ್ಲಿ**
**ಮೂವತ್ತಾರು ಮಂಟಪದ ಮಣಿಯ ತುಂಬಿ**
**ಕೇರಿ ಕೇರಿಯ ತುದಿಯ ತಿರುಗಲು,**
**ಸುಂಕಿಗರಿನ್ನೂ ಹದಿನಾರು ಮಂದಿ**
**ಮೂವತ್ತಾರು ಮಂಟಪದಲ್ಲಡಗಿದರಯ್ಯಾ,**
**ಏರಿ ಬರುವ ಪುರುಷ ಮೂವರು ತಳವಾರರ ಕೂಡಿಕೊಂಡು,**
**ಮೂವತ್ತಾರು ಮಂಟಪದಲ್ಲಿ ಅಡಗಿದ**
**ಇನ್ನೂರ ಹದಿನಾರು ಸುಂಕಿಗರನರಸಲು**
**ಮೂವರು ತಳವಾರರು ತನ್ನ ನುಂಗಿದರಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಇಪ್ಪತ್ತೈದು ಆತ್ಮ ತತ್ತ್ವಗಳುಳ್ಳ ಹತ್ತು ವಿದ್ಯಾತತ್ವಗಳುಳ್ಳ ಹಾಗೂ ಒಂದು ಶಿವತತ್ವ ಕೂಡಿದ ಮೂವತ್ತಾರು ಮಂಟಪಗಳಿಂದ ಭರಿತವಾದ ತನುವು ಒಂದು ಸುಂದರವಾದ ಕೆರೆ. ಅದರ ಏರಿಯನೇರಿ ಗೆದ್ದೆನೆಂದು ಬೀಗುವುದರಲ್ಲಿಯೇ ಅಷ್ಟಮದಗಳು, ಅಷ್ಟಮಲಗಳುಳ್ಳ ಹದಿನಾರು ಸುಂಕಿಗರು ಮೂವತ್ತಾರು ಮಂಟಪದಲ್ಲಿ ಅಡಗಿ ಕುಳಿತಿದ್ದಾರೆ.

ಗೆದ್ದೆನೆಂದು ಕೆರೆಯ ಏರಿಯ ಮೇಲೆ ನಡೆದು ಬರುವ ಮಹಾಪುರುಷನನ್ನು ರಾಜಸ ತಾಮಸ ಸಾತ್ವಿಕರೆಂಬ ಮೂವರು ತಳವಾರರು ಮತ್ತೆ ಕೂಡಿಕೊಂಡರು. ಆ ಮಹಾ ಪುರುಷ ಮೂವತ್ತಾರು ಮಂಟಪದಲ್ಲಿ ಮತ್ತೆ ಅಡಗಿದ.

ಮೂವತ್ತಾರು ಮಂಟಪಗಳು ಆರರಂತೆ ಗುಣಿತಗೊಂಡು ಇನ್ನೂರಾ ಹದಿನಾರು ಸುಂಕಿಗರಾದರು. ಇವರನ್ನು ಅರಸಲು ಹೋಗಿ ಮೂವರು ತಳವಾರರು ತನ್ನ ನುಂಗಿದರಯ್ಯಾ. ಕಪಿಲಸಿದ್ಧ ಮಲ್ಲಿನಾಥಯ್ಯಾ.

ತನುವಿನಲ್ಲಿ ತನ್ಮಯವಾದ ಅರಿವು ತನುವಿಗೆ ಸಹಜವಾಗಿ ಬಳಸಿಕೊಳ್ಳಲು ಬಾರದಿದ್ದುದಕ್ಕಾಗಿ; ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವನ್ನು ಹುಡುಕಲು ಹೋಯಿತು. ತನ್ನ ಅರಿವನ್ನು ತಾನೇ ಪಡೆಯಲು ತನಗೆ ತನ್ನ ಅರಿಷಡ್ವರ್ಗಗಳು ಅಡ್ಡಿಪಡಿಸಿದವು. ತನ್ನದೇ ಆದ ಸಪ್ತವ್ಯಸನಗಳು ಅಡ್ಡಿಪಡಿಸಿದವು. ಅಷ್ಟಮದಗಳು, ಅಷ್ಟಮಲಗಳು ಮೂರು ಗುಣಗಳು ಅಡ್ಡಿಪಡಿಸಿದವು.

ತನುವನ್ನು ಆವರಿಸಿದ ಮನದ ಮೂಲಕ ತನುವಿನಲ್ಲಿ ಸಂಗಮವಾದ ಅರಿವನ್ನು ತಿಳಿದು ಆ ಅರಿವೇ ತಾನಾಗಲು ಸಾಂಖ್ಯಾಶಾಸ್ತ್ರ ಸಿದ್ಧವಾಯಿತು. ಮನ ಅದನ್ನು ಕಲಿತು ಪಂಡಿತನಾಯಿತು. ವೇದಗಳು ರಚನೆಯಾದವು. ಉಪನಿಷತ್ತುಗಳು ರಚನೆಯಾದವು. ಆದರೂ ತಿಳಿಯಲಿಲ್ಲವೆಂದು ಪುರಾಣಗಳು ರಚನೆಯಾದವು. ಮಹಾಭಾರತ ರಾಮಾಯಣಗಳು ರಚನೆಯಾದವು. ಭಗವದ್ಗೀತೆ ರಚನೆಯಾಯಿತು.

ಒಂದು ತನುವನ್ನು ತನುವು ಎಂದು ಸಹಜವಾಗಿ ತಿಳಿಯಲು, ತಿಳಿದು ಸಹಜವಾಗಿ ಇರಲು; ತನುವಿನಿಂದಲೇ ಕೋಟಿ ಕೋಟಿ ಪುಸ್ತಕಗಳು ಹೊರಬಂದವು. ಓದಿ ಓದಿ, ಬರೆದು

ಬರೆದೂ, ಓದಿಕೆಟ್ಟ ಕೂಚುಭಟ್ಟನಂತಾಯಿತು.

ಸಕಲ ವೃಕ್ಷಗಳಲ್ಲಿ ಹೂಗಳು ಸಹಜವಾಗಿ ಅರಳಿದಂತೆ ಸಕಲ ತನುಗಳಲ್ಲಿ ಸಹಜವಾದ ಬ್ರಹ್ಮಕಮಲ ಅರಳಲೇ ಇಲ್ಲ. ಓದಿದಂತೆಲ್ಲ ತನುವಿನ ಭ್ರಮೆ ಅಧಿಕವಾಯಿತು. ತನು ತನುವನ್ನು ಸಹಜವಾಗಿ ನೋಡುವುದು ತನುವಿನಲ್ಲಿಯೇ ಉಳಿಯಿತು. ತನುವಿನಲ್ಲಿ ಸಂಗಮವಾದ ಅರಿವಿನ ಹೂ ತನುವಿನಲ್ಲಿಯೇ ಉಳಿದು ತನುವನ್ನು ಆವರಿಸಿಕೊಂಡ ಮನದ ಭ್ರಮೆ ತನುವನ್ನೇ ಘಾಸಿಗೊಳಿಸಿತು. ಹೀಗೇಕೆ ಎಂದು ಚಿಂತಿಸಲು ಕೂಡಾ ತನುವಿಗೆ ಸಮಯ ಸಾಲುತ್ತಿಲ್ಲ. ಅಷ್ಟೊಂದು ಭ್ರಮೆಯಲ್ಲಿ ತನು ಬದುಕುತ್ತಿದೆ. ಇದು ತನುವಿನ ದುರ್ದೈವ. ತನುವನ್ನು ಆವರಿಸಿದ ಮನದ ದುರ್ದೈವ. ತನುವಿನಲ್ಲಿಯೇ ಸಂಗಮವಾಗಿ ತನುವಿಗೆ ಬಳಕೆಯಾಗದೆ ತನುವಿನಲ್ಲಿಯೇ ಕುಳಿತ ಗುರುದೇವನ ತನುವಿನ ದುರ್ದೈವ.

**346**

**ಏಳೆಂಟು ಠಾವಿನಲಿ ಮಠವ ಶುದ್ಧವ ಮಾಡಿ**
**ದಾರುಣಿಯ ಸುದ್ದಿಯನು ಹದುಳ ಮಾಡಿ**
**ಆರೈದು ಸಕಲ ನಿಷ್ಕಲದೊಳಗೆ ವೇದ್ಯಗೊಟ್ಟಾತ**
**ಗುರು ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಪ್ತ ವ್ಯಸನಗಳಿಂದ ಅಷ್ಟ ಮದಗಳಿಂದ ತನುವನ್ನು ಶುದ್ಧ ಮಾಡಿ, ನೆಲದ ಸುದ್ದಿಯನ್ನು ಮೃದು ಮಾಡಿ, ಆಧಾರಾದಿ ಸಹಸ್ರ ಚಕ್ರಗಳನು, ಐದು ಜ್ಞಾನೇಂದ್ರಿಯಗಳನ್ನು ನಿರ್ಮಲಗೊಳಿಸಿದಾತನೆಂದರೆ ಗುರು ಕಪಿಲಸಿದ್ಧ ಮಲ್ಲಿಕಾರ್ಜುನನೊಬ್ಬನೆ.

ಗುರುದೇವನು ನಿರ್ಮಲನು; ನಿರ್ಮಲಾಂಗನು. ಸಕಲ ಗಜಿಬಿಜಿಗಳಿಂದ ಅಂಗ, ಗೋಚರಿಸುತ್ತಿದ್ದರೂ ಅದು ನಿರ್ಮಲವಾಗಿಯೇ ಇದೆ. ಕಣ್ಣಲ್ಲಿ ಸಣ್ಣ ಧೂಳು ಬಿದ್ದರೂ ಅದು ಕಣ್ಣೀರ ಮೂಲಕ ಹೊರಗೆ ಬಂದಾಗಲೇ ಕಣ್ಣಿಗೆ ಸಮಾಧಾನ ಹೀಗಾಗಿ ತೋರುವ ಕಣ್ಣು ನಿರ್ಮಲ; ಅದು ಪರಿಶುದ್ಧವಾದುದು.

ಕಿವಿಯಲ್ಲಿ ಸಣ್ಣ ಕೀಟ ಹೋದರೂ ಅದಕ್ಕೆ ಉಳಿಗಾಲವಿಲ್ಲ. ಕಿವಿಯ ಅಂಟಿನೊಂದಿಗೆ ಹೊರ ತಳ್ಳುತ್ತದೆ. ಹೀಗಾಗಿ ಕಿವಿ ಕೂಡಾ ಶುದ್ಧ. ಮೂಗಿನಲ್ಲಿ ಚಿಕ್ಕ ಧೂಳಿನ ಕಣ ಹೋದರೂ ಅದು ಸೀನಿನ ಮೂಲಕ ಹೊರಗೆ ಬಂದು ಮೂಗನ್ನು ಶುಚಿಗೊಳಿಸುತ್ತದೆ. ಅದು ಕೂಡಾ ಸದಾ ಮುಕ್ತ ಮುಕ್ತ. ನಾಲಿಗೆಯ ಮೇಲೆ ತಾಗಿದ ಪದಾರ್ಥವನ್ನು ಅದು ಕೂಡಲೇ ಹೊರಗೆ ತಳ್ಳಿ ಸದಾ ನಿರ್ಮಲ; ಸದಾ ಸಹಜ! ಚರ್ಮವಂತೂ ಒಳಗಡೆ ಏನೂ ಬಿಡುವುದಿಲ್ಲ. ಒಳ ಹೊಕ್ಕ ಬೇಡವಾದ ದ್ರವ್ಯವನ್ನು ಬೆವರಿನ ಮೂಲಕ ಹೊರಚೆಲ್ಲಿ ತನುವನ್ನು ಸದಾ ನಿಷ್ಕಲ ಮಂಟಪದಂತೆ ಇರಿಸುತ್ತದೆ.

ಗುದದ್ವಾರದ ಆಧಾರದಿಂದ ಹಿಡಿದು ನೆತ್ತಿಯ ಸಹಸ್ರದವರೆಗೆ ತನು ಮುಕ್ತ. ಅದು ಸಹಜವಾಗಿಯೇ ಇದೆ. ತನಗೆ ತಾನು ನಿರ್ಮಲವಾಗಿಯೇ ಇದೆ. ಇದು ಏನನ್ನೂ ಯಾರಿಂದಲೂ ಕಲಿಯಬೇಕಿಲ್ಲ. ಸದಾ ಕಾಲದಲ್ಲಿ ಶುದ್ಧವಾಗಿದ್ದು ಯಾವ ಬೆಳೆ ಬೆಳೆದರೂ ಫಸಲು ಮಾತ್ರ ಸಮೃದ್ಧಿಯಾಗಿಯೇ ಬೆಳೆಯುತ್ತದೆ.

ಇದು ಕಂಡುಬರುವ ತನುವಿನ ಸುದ್ದಿ. ಇನ್ನು ಕಾಣಬಾರದ ತನುವಿನ ಸುದ್ದಿ ಒಂದಿದೆ. ಇದು ಅವ್ಯಕ್ತ. ಜಗದಗಲ ಮುಗಿಲಗಲ. ಮಿಗೆಯಗಲ. ಪಾತಾಳದಿಂದಲೂ ಅತ್ತತ್ತ.

ಬ್ರಹ್ಮಾಂಡದಿಂದಲೂ ಅತ್ತತ್ತ. ಇದು ಅಗೋಚರ. ಅಪ್ರಮಾಣ. ಅಪ್ರತಿಮವಾದ ಬಯಲ ಬ್ರಹ್ಮಾಂಡವೇ ಜೀವ ಜಲ ಬಿಂದುವಾಗಿ ಗರ್ಭಹೊಕ್ಕು; ಪಿಂಡಾಂಡವನ್ನಾಗಿಸಿ; ಅದರಲ್ಲಿ ತಾನು ಸಂಗಮವಾಗಿ ಕಂಡು ಬರುವ; ಪರಿಶದ್ಧವಾದ ತನುವನ್ನು ಹೊರಗೆ ತಂದಿದೆ.

ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತನುವಿನ ಮೂಲಕ ಸಹಜವಾಗಿ ನೋಡಬೇಕೆಂಬ ಹಂಬಲದಿಂದ ತನುವನ್ನು ಹೊತ್ತು ತಂದಿದೆ. ತನುವಿನಲ್ಲಿ ಸಂಗಮವಾಗಿದೆ. ತನುವೇ ಆಗಿದೆ. ತನುವಿಗೂ ತನಗೂ ಸಂಬಂಧವಿಲ್ಲದಂತೆ ತನುವನ್ನು ಬೆಳಗುತ್ತಲಿದೆ. ತನುವಿನಲ್ಲಿದ್ದೂ ; ತನುವನ್ನು ಸೋಂಕದೆ; ತನುವನ್ನು ಬೆಳಗುವ ಮಹಾತನುವು ಅದು!

ಅಗಮ್ಯ, ಅಗೋಚರ, ಅಪ್ರಮಾಣ, ಅಪ್ರತಿಮ ತನು ಅದು. ಏನೊಂದೂ ಅನ್ನಲು ಬಾರದಂತಹ ನಿಷ್ಕಲ ಬ್ರಹ್ಮವದು. ಅದಕ್ಕೆ ಸಪ್ತ ವ್ಯಸನಗಳಿಲ್ಲ. ಅಷ್ಟ ಮದಗಳಿಲ್ಲ. ನುಡಿಯಲು ಬಾಯಿಲ್ಲ. ನಡೆಯಲು ಕಾಲುಗಳಿಲ್ಲ. ಆರು ಚಕ್ರಗಳಿಲ್ಲ ಐದು ಇಂದ್ರಿಯಗಳಿಲ್ಲ. ಆಧಾರಾದಿ ಅಂತ್ಯ ಮೊದಲೇ ಇಲ್ಲ. ಇಂತಹ ವಿರಾಟ ಸ್ವರೂಪವೇ ನೋಡಲ್ಪಡುವ ರೂಪವುಳ್ಳ ಅಂಗದಲ್ಲಿ ಅಂಗವಾಗಿ ಮಹಾಲಿಂಗಯ್ಯನಾಗಿ ಸಂಗಮವಾಗಿದೆ!

ಇದು ಅಂಗ ಮತ್ತು ಲಿಂಗದ ಸುದ್ದಿ! ಲಿಂಗಯ್ಯ ಅರಿವಿನ ಅಂಗವನ್ನು ಸೃಷ್ಟಿ ಮಾಡಿ ಆ ಅಂಗದಲ್ಲಿಯೇ ತಾನು ಸಂಗಮವಾದ ಶ್ರೇಷ್ಠಾತಿ-ಶ್ರೇಷ್ಠ ಸುದ್ದಿ.

ಅಂಗವನ್ನು ಆವರಿಸಿದ ಮನದ ಸುದ್ದಿಯೇ ಬೇರೆ. ಇದು ವಿಚಿತ್ರ; ವಿರಾಟ ಸ್ವರೂಪದ ಕರಿನೆರಳು; ಬಿಸಿಲ್ಗುದುರೆ. ಇದನ್ನು ಇದೆಯೆನ್ನಲು ಬರುವುದಿಲ್ಲ; ಇಲ್ಲ ಎನ್ನಲು ಬರುವುದಿಲ್ಲ.

ಸೂರ್ಯನ ಬೆಳಕಿನಿಂದ ಹುಟ್ಟಿದ ಕತ್ತಲು ಇದ್ದಂತೆ. ಕತ್ತಲು ಇದೆ ಎಂದರೆ ಅದು ಇಲ್ಲ. ಇಲ್ಲ ಎಂದರೆ ಅದು ಇದೆ. ಏಕೆಂದರೆ ಬೆಳಕಿನಿಂದ ಹುಟ್ಟಿದ ಕತ್ತಲು, ಬೆಳಕು ಕಂಡರೆ ನಡುಗುವ ಕತ್ತಲು; ಬೆಳಕನ್ನೇ ಇಲ್ಲದಂತೆ ಮಾಡಿದೆ ಎಂದರೆ ಅದು ಸಾಮಾನ್ಯ ಸುದ್ದಿಯೆ? ಸೃಷ್ಟಿ ಮಾಡಿದ ಬೆಳಕನ್ನೇ ನುಂಗಿದೆ ಎಂದರೆ ಸಾಮಾನ್ಯ ಸುದ್ದಿಯೆ?

ನಿಷ್ಕಲ ಬ್ರಹ್ಮನಿಗೆ ಭ್ರಮೆಯ ಕತ್ತಲಲ್ಲಿ ಬದುಕುವಂತೆ ಮಾಡಿದೆ. ಸಪ್ತ ವ್ಯಸನಗಳನ್ನು ಅಷ್ಟ ಮದಗಳನ್ನು ಉಂಟು ಮಾಡಿ ಪರಿಶುದ್ಧ ಭೂಮಿಯನ್ನು ಬಂಜರು ಭೂಮಿಯನ್ನಾಗಿಸಿದೆ. ಆರು ಚಕ್ರಗಳನ್ನು ಕಾಣದಂತೆ ಮಾಡಿ ತನ್ನ ಅಜ್ಞಾನದ ಭದ್ರ ಕೋಟೆಯನ್ನು ಕಟ್ಟಿ ಬಂಧನದಲ್ಲಿಟ್ಟಿದೆ. ಪಂಚ ಜ್ಞಾನೇಂದ್ರಿಯಗಳಿಗೆ ತನ್ನ ಕರಿಗಂಬಳಿಯನ್ನು ಹೊದಿಸಿ ಅಜ್ಞಾನದ ಸಾಮಾಜ್ರ್ಯವನ್ನೇ ಸ್ಥಾಪಿಸಿದೆ. ಅದಕ್ಕೆ ಮನೋಲೋಕವೆಂದು ಹೆಸರಿಟ್ಟು ಮನಸ್ಸಿನ ಸಾಮಾಜ್ರ್ಯವನ್ನೇ ಕಟ್ಟಿದೆ.

ತನು ಒಂದೇ; ತನುವಿನ ಜ್ಞಾನ ಒಂದೇ. ಆದರೂ ಮನ ತನ್ನ ಅಜ್ಞಾನದಿಂದ ತನುವನ್ನೇ ಸೀಳಿ ಸ್ತ್ರೀ ತನುವೆಂದು ಪುರುಷ ತನುವೆಂದು ಎರಡು ಭಾಗ ಮಾಡಿದೆ. ಕ್ರೈಸ್ತ ಮುಸಲ್ಮಾನ ಹಿಂದುವೆಂದು. ಫಾರ್ಸಿ ಇಸಾಯಿ ಸಿಖ್ ಎಂದು, ಜೈನ ಬೌದ್ಧ ಸ್ಮಾರ್ಥ ಎಂದು, ರಾಜ ಪ್ರಧಾನಿ ಸೈನಿಕ ಎಂದು, ಶ್ರೀಮಂತ ಬಡವ ಭಿಕ್ಷುಕ ದಾನಿ ಜಿಪುಣ ಕಳ್ಳ ವೈರಿ ಎಂದು, ಸಂತ ಗುರು ಶಿಷ್ಯ ಎಂದು, ಜಾತಿ-ಮತ ಪಂಗಡ ದೇಶ ವಿದೇಶ ಗಡಿಗಳನ್ನಾಗಿ ವಿಂಗಡಿಸಿದ ಮನ, ತನುವನ್ನು ತನುವಿನೊಂದಿಗೆ ಎತ್ತಿಕಟ್ಟಿ ತನ್ನ ಅಜ್ಞಾನದ ಸಾಮ್ರಾಜ್ಯವನ್ನೇ ನಿರ್ಮಾಣ ಮಾಡಿದೆ.

ತನು ಶುದ್ಧ. ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನೂ ಶುದ್ಧ. ಆದರೆ ತನುವನ್ನು ಆವರಿಸಿದ ಮನದ ಅಜ್ಞಾನದ ಪೊರೆ ಕಿತ್ತಿ ಹೊರಬರುವುದು ತನುವಿಗೂ

ಬೇಡವಾಗಿದೆ. ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೂ ಬೇಡವಾಗಿದೆ. ತನುವಿನೊಂದಿಗೆ ಮನದ ಬಯಲಾಟ ಮಾತ್ರ ಜಾರಿಯಲ್ಲಿದೆ. ತನುವಿನ ಆಟ; ಬೇಲಿಯೇ ಎದ್ದು ಹೊಲ ಮೇದಂತೆ.

**347**

**ಏಳು ಸೀಮೆಯ ದಾಟಿಪ್ಪಳವ್ಯಯದ**
**ಸೋಮ ಕುಂಭವನು ಹೊತ್ತು ನಿತ್ಯತ್ವದಾ**
**ಸ್ವಾನುಭೂತೈಕ್ಯದಲಿ ತಾನು ಸಂಗಮವಾಗೆ**
**ಸೋಮ ಕೊಡನೊಡೆದುದ್ಧೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ಉಂಟಾಗುವ ವ್ಯಸನಗಳನ್ನು ದಾಟುವುದು ಸುಲಭದ ಮಾತಲ್ಲ. ವಸ್ತ್ರಾಭರಣಗಳಿಗೆ ಮಾರು ಹೋಗುವುದು. ಚರ್ಮಕ್ಕೆ ಸುಗಂಧ ದ್ರವ್ಯಗಳನ್ನು ಲೇಪನ ಮಾಡುವುದು. ಅದಕ್ಕಾಗಿ ಸುಳ್ಳು ಕಳುವುಗಳನ್ನು ರೂಢಿ ಮಾಡಿಕೊಳ್ಳುವುದು. ಧನ ಧಾನ್ಯಗಳನ್ನು ಸಂಗ್ರಹಿಸುವುದು. ಆಡಂಬರದ ವಾಹನಗಳನ್ನು ಖರೀದಿಸುವುದು, ಅನವಶ್ಯಕವಾಗಿ ಸೇವಕರನ್ನು ಇಟ್ಟುಕೊಳ್ಳುವುದು. ಪರದ್ರವ್ಯ, ಪರನಿಂದೆ, ಪರದ್ವೇಷ ಈ ಎಲ್ಲ ಸೀಮೆಗಳನ್ನು ದಾಟಿದರೆ ಸಿಗುವುದೇ ನಿಸ್ಸೀಮತ್ವ. ನಿತ್ಯತ್ವ. ಆಗ ತನು ಅವ್ಯಯದ ಪರಮಾನಂದವನ್ನು ಅನುಭವಿಸುವ ಜ್ಞಾನಭರಿತ ಕೊಡದಂತಾಗುವುದು.

ಸುಂದರವಾದ ಕೊಡವನ್ನು ಕುರಿತು ಷರೀಫರು 'ಏನ್‌ಕೊಡ ಏನ್‌ಕೊಡವು, ಹುಬ್ಬಳ್ಳಿ ಮಾಟದ ಚಂದುಳ್ಳ ಕೊಡವು. ತಿಕ್ಕಲಿಲ್ಲ ಬೆಳಗಲಿಲ್ಲ ಥಳ ಥಳ ಹೊಳೀತದ' ಎಂದು ಮೈದುಂಬಿ ಹಾಡಿದರು.

ಬ್ರಹ್ಮರಸ ಭರಿತವಾದ ಜ್ಞಾನದ ಕೊಡದಲ್ಲಿ ಗಾಳಿ ಬೆಂಕಿ ನೀರು ಭೂಮಿ ಆಕಾಶಗಳು ಐಕ್ಯವಾಗಿವೆ. ಉರಿಯುವ ಬೆಂಕಿ, ರಭಸದಿಂದ ಬೀಸುವ ಗಾಳಿ, ಭೋರ್ಗರೆದು ಹರಿಯುವ ಜಲ, ಲಾವಾರಸವನ್ನು ಚಿಮ್ಮುವ ಭೂಮಿ, ಬ್ರಹ್ಮಾಂಡವನ್ನು ವ್ಯಾಪಿಸಿಕೊಂಡ ಬಯಲು ಅಂಗದಲ್ಲಿ ಸಂಗಮವಾಗಿ ಬಸವಣ್ಣನವರಿಂದ ಸಂಗಮನಾಥ ಎಂದು ಕರೆಯಿಸಿಕೊಂಡಿದೆ.

ತನುವನ್ನು ಆವರಿಸಿದ ಮನಕ್ಕೆ ಈ ವಿಷಯ ಗೊತ್ತಾದರೆ ಸಾಕು ಅಂಗದಲ್ಲಿಯೇ ಸಂಗಮವಾದ ಸಂಗಯ್ಯನಿಗೆ ಶರಣು ಹೋಗಿ ಶರಣಾಗತನಾಗುತ್ತದೆ.

ಅಂಗವೆಂಬ ಮನೆಯಲ್ಲಿ ಶರಣ ಸತಿಯಾಗಿ ಲಿಂಗಪತಿಯಾಗಿ ಪರಮಾನಂದದಿಂದ ವಾಸ ಮಾಡುತ್ತಾರೆ. ಕೊಡ ಹಳೆಯದಾದ ಮೇಲೆ ಹೊಡೆದು ಹಾಕುತ್ತಾರೆ. ಹೀಗಾಗಿ ಶರಣರು 'ಎಮ್ಮವರಿಗೆ ಸಾವಿಲ್ಲ' ಎಂದು ಹಾಡಿದ್ದಾರೆ.

ತನು, ತನುವಿನೊಂದಿಗೆ ಸಂಗ ಮಾಡಿದರೆ ಅದು ಭಾವ ದುರ್ಭಾವಕ್ಕೆ ತುತ್ತಾಗುತ್ತದೆ. ಸುಖ ದುಃಖಗಳಿಗೆ ತುತ್ತಾಗುತ್ತದೆ. ಜನನ ಮರಣದ ಬಾಧೆಗೆ ತುತ್ತಾಗುತ್ತದೆ. ತನುವನ್ನು ಆವರಿಸಿದ ಮನ, ತನುವನ್ನೇ ಮನೆ ಮಾಡಿಕೊಂಡು, ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನನ್ನೇ ಪತಿ ಮಾಡಿಕೊಂಡು ತಾನು ಆತನಿಗೆ ಸತಿಯಾದರೆ, ತನು ಒಂದು ಸುಂದರವಾದ ಮನೆ. ಸತಿ ಪತಿಗಳು ವಾಸ ಮಾಡಿದ ಮನೆ. ಖಾಲಿ ಮನೆ! 'ಎಷ್ಟಿದ್ದರೇನಿದು

ಖಾಲಿ ಮನೆ' ಎಂದು ತತ್ವಪದಕಾರರು ಹಾಡಿದಂತೆ! ಅದು ಹಳೆಯದಾದಾಗ ಸತಿ ಪತಿಗಳು ಕೂಡಿಯೇ ಅದನ್ನು ಒಡೆದು ಕೆಡುವುತ್ತಾರೆ.

ಸ್ವಾನುಭೂತ್ಯೈಕ್ಯದಲಿ ತಾನು ಸಂಗಮವಾಗೆ ಸೋಮಕೊಡನೊಡೆದುದ್ದೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

**348**

**ಐಕ್ಯನೆಂಬಾತ ಅನ್ಯವನರಿಯ ತನ್ನುವನರಿಯ;**
**ಸಕಲವನರಿಯ ನಿಷ್ಕಲವನರಿಯ.**
**ಸರ್ವಸ್ವವೂ ಲಿಂಗವಾದಾತನಾಗಿ**
**ತನ್ನ ಮೀರಿದ ಪರತತ್ವ ಒಂದೂ ಇಲ್ಲವಾಗಿ,**
**ಎಲ್ಲಾ ತತ್ವಂಗಳಿಗೂ ಮಾತೃಸ್ಥಾನವಾದಾತನು.**
**ಲಿಂಗವನಗ್ರಹಿಸಿಕೊಂಡಿಪ್ಪ ಪರಮ ಸೀಮೆ ತಾನಾಗಿ,**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿ.**
**ಕಳೆಗಳ ಲಿಂಗಕಳೆಗಳ ಮಾಡಿದ ಲಿಂಗೈಕ್ಯನು.**

ಬಯಲೇ ಬಿಂದುವಾಗಿ, ಬಿಂದುವಿನ ಒಳ ಹೊರಗೆಂಬಂತೆ ಬಯಲು ವ್ಯಾಪಿಸಿಕೊಂಡು, ಜೀವ ಜಲಬಿಂದುವಾಗಿ, ಬಿಂದುವನ್ನೂ ಜಲವನ್ನೂ ಜೀವವನ್ನೂ ಅರಿಯದೆ; ಜೀವಜಲ ಬಿಂದುವಿನಲ್ಲಿ ಬಯಲು ಸಂಗಮವಾಗಿದೆ. ಇದು ಬಯಲ ಕೆಲಸ.

ಜೀವಕ್ಕೂ ಜಲಕ್ಕೂ ಗೊತ್ತಿಲ್ಲ; ತಾನು ಬಯಲ ಕುಡಿಯೆಂಬುದು. ಅಂತಹ ಸೂಕ್ಷ್ಮಾತಿ ಸೂಕ್ಷ್ಮ ಕೆಲಸ ಬಯಲ ಕೆಲಸ. ಆ ಜೀವ ಜಲಬಿಂದುವೇ ಅಂಗದ ಗರ್ಭಕ್ಕೆ ಹೊಕ್ಕು ಅಂಗವಾಗಿದೆ. ಲಿಂಗವಾಗಿದೆ. ಲಿಂಗಾಂಗವಾಗಿದೆ.

ಸಕಲವನು ನಿಷ್ಕಲವನು ಅರಿಯದೆ ಸರ್ವಸ್ವವೂ ಲಿಂಗವಾಗಿದೆ. ಬಯಲು ಅಣುವಿನಲ್ಲಿ ಸಂಗಮವಾಗಿದ್ದರೂ ಅದು ಜಗದಗಲ ಮುಗಿಲಗಲ! ಅದು ವಿರಾಟ ಸ್ವರೂಪವಾಗಿದ್ದರೂ ಜಗದಗಲ ಮುಗಿಲಗಲ!

ಜಗದಗಲ ಮುಗಿಲಗಲ ವ್ಯಾಪಿಸಿಕೊಂಡ ಬಯಲ ಬೀಜವೇ ಅಂಗದಲ್ಲಿ ಗರ್ಭಕ್ಕೆ ಹೊಕ್ಕು ಅಂಗವಾಗಿ ಲಿಂಗಾಂಗವಾಗಿ ಹೊರಬಂದಿದೆ. ಅಂಗವನ್ನೂ ಅಂಗವೇ ಅರಿಯಲು ಹೋದರೆ ಅದು ಬಯಲು. ಅಂಗವನ್ನು ಅಂಗ ಅರಿಯದಿದ್ದರೆ ಅದು ಬರೀ ಅಂಗ ಮಾತ್ರ. ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸುಗಳನ್ನು ಚರ್ಮದೊಂದಿಗೆ ಹೊಲಿದುಕೊಂಡ ಮಾಂಸದ ಮಡಿಕೆ ಮಾತ್ರ.

ಬಯಲು ಜೀವ ಸಂಕುಲವನ್ನೇ ಸೃಷ್ಟಿ ಮಾಡಿ, ಏನೂ ಅರಿಯದಂತೆ ಆ ಜೀವ ಸಂಕುಲದಲ್ಲಿಯೇ ಸಂಗಮವಾಗಿದೆ. ಸಕಲ ಜೀವ ಸಂಕುಲಗಳೂ ಸಹಜವಾಗಿವೆ. ಮನುಷ್ಯ ಮಾತ್ರ ಸಹಜವನ್ನು ತಿಳಿಯಬಲ್ಲ. ಅಸಹಜ ಅವಸ್ಥೆಯ ಸುಖ ದುಃಖಗಳನ್ನು ಉಣಬಲ್ಲ.

ಸಹಜತೆಯನ್ನು ತಿಳಿದು ಆ ಸಹಜಾವಸ್ಥೆಯೇ ತಾನಾದರೆ ಆತ ಐಕ್ಯ. ಬೆಲ್ಲ ಸಿಹಿ. ಆದರೆ ಬೆಲ್ಲ ತಾನು ಬೆಲ್ಲವೆಂದು ತಿಳಿಯುವಂತಿಲ್ಲ. ಏಕೆಂದರೆ ಅದು ಬೆಲ್ಲವೇ ಆಗಿದೆ. ಇಂತಹ ಒಂದು ಉದಾಹರಣೆಯನ್ನು ಕೂಡಾ ಬಯಲಿಗೆ ಹೋಲಿಸುವಂತಿಲ್ಲ.

ಬಯಲು ಸಕಲವೂ ತಾನಿದ್ದು, ನಿಷ್ಕಲವೂ ತಾನಿದ್ದು, ಇಡೀ ಬ್ರಹ್ಮಾಂಡವನ್ನೇ ಸೃಷ್ಟಿ

ಮಾಡಿದ ವಸ್ತುವೇ ತಾನಾಗಿದ್ದರೂ, ತನ್ನ ಮೀರಿದ ಪರತತ್ವ ಒಂದೂ ಇಲ್ಲವಾಗಿದ್ದರೂ, ಸಕಲ ತತ್ವಗಳಿಗೆ ಮಾತೃ ಸ್ಥಾನವೇ ತಾನಾಗಿದ್ದರೂ ಏನನ್ನೂ ಅರಿಯದಂತಿದೆ. ತನ್ನ ಗರ್ಭದಿಂದ ಸೃಷ್ಟಿಯಾದ ಸಕಲ ವಸ್ತುಗಳನ್ನೂ ತನ್ನ ಗರ್ಭದಲ್ಲಿಯೇ ಇಟ್ಟುಕೊಂಡು ಪೋಷಣೆ ಮಾಡುತ್ತಲಿದೆ. ಆದರೂ ಇದಾವುದೂ ಬಯಲ ಗಮನಕ್ಕಿಲ್ಲ. ಏಕೆಂದರೆ ಅದು ಅಗಮ್ಯ. ಅಪ್ರಮಾಣ. ಅಪ್ರತಿಮ ಲಿಂಗ.

ಅಂತಹ ಲಿಂಗವೇ ಅಂಗದಲ್ಲಿ ಸಂಗಮವಾಗಿ ಲಿಂಗಾಂಗವಾಗಿದೆ. ತನ್ನ ಇತಿಹಾಸವನ್ನು ತನಗೆ ತಾನೇ ತಿಳಿದುದಕ್ಕಾಗಿ ಅಂಗ ಲಿಂಗಾಂಗವಾಗಿದೆ. ತಿಳಿಯಲು ಬಂದು, ತಿಳಿದುದನು ಇರಲು ಬರುವುದಕ್ಕಾಗಿ ತಿಳಿದ ಜಾಗದಲ್ಲಿಯೇ ಐಕ್ಯನಾಗಿದೆ. ಅನ್ಯವನು ತನ್ನನ್ನು ಅರಿಯದಂತಾಗಿದೆ. ಸಕಲವನು ನಿಷ್ಕಲವನು ಅರಿಯದಂತಾಗಿದೆ. ಸರ್ವಸ್ವವೂ ಲಿಂಗವಾಗಿ ಜಗದಗಲ ಮುಗಿಲಗಲ ವ್ಯಾಪಿಸಿಕೊಂಡಿದೆ. ಪಾತಾಳದಿಂದ ಅತ್ತತ್ತ, ಬ್ರಹ್ಮಾಂಡದಿಂದ ಅತ್ತತ್ತ ಚಾಚಿಕೊಂಡಿದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿದೆ.

**349**

**ಐಗ್ರಾಮ ಚೌಗ್ರಾಮ ಅಯ್ಯ ನಿನ್ನಯ ಸೀಮೆ**
**ಅತ್ಯೋನ್ನತದ ಫಲಕೊಕ್ಕಸುರುತಿಹದು**
**ಒಸರುತಿಹ ಲಿಂಗವನು ವಶಕೆ ತಂದು ಶಿಷ್ಯಂಗೆ**
**ಹೆಸರಿಟ್ಟು ಕೊಟ್ಟಾತ ಗುರು ಕಪಿಲಸಿದ್ಧ ಮಲ್ಲಿಕಾರ್ಜುನ.**

ಅಯ್ಯಾ ಗುರುದೇವನೆ, ಮಹಾದೇವನೆ, ಸದಾಶಿವನೆ, ಪರಬ್ರಹ್ಮನೆ ನಿನ್ನ ಸೀಮೆಯನು ವರ್ಣಿಸಲು ಅಸಾಧ್ಯ? ಭೂಮಿಯನ್ನು ಸೃಷ್ಟಿ ಮಾಡಿದ ನಿಸ್ಸೀಮ ನೀನು. ಅದರಲ್ಲಿ ಸಕಲ ಜೀವರಾಶಿಗಳನ್ನು ಸೃಷ್ಟಿ ಮಾಡಿದ ಪರಮಾತ್ಮ ನೀನು. ಜಲ ನೀನು, ಅಗ್ನಿ ನೀನು, ಸುಳಿದು ಬೀಸುವ ಗಾಳಿ ನೀನು. ಒಳಹೊರಗೆನ್ನದೆ ಭರಿತವಾಗಿಹ ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾದ ಬಯಲು ನೀನು.

ಎಲ್ಲಿ ನೋಡಿದರೂ ನಿನ್ನ ಫಲ ಒಸರುತಿಹುದು. ಸಕಲದರಲ್ಲಿಯೂ ಸಂಗಮವಾದ ನಿನ್ನ ಗುಟ್ಟು ಬಲ್ಲವನು ಮಾತ್ರ ಬಲ್ಲ. ಜಗದ ಸಕಲ ಅಂಗಗಳಲ್ಲಿ ಅರಿವೆಂಬ ಲಿಂಗಯ್ಯನಾಗಿ ಸಂಗಮವಾಗಿ; ಆ ಲಿಂಗವನ್ನು ಅಂಗದ ವಶಕ್ಕೆ ತಂದು ಹೆಸರಿಟ್ಟು ಕೊಟ್ಟ ಗುರುದೇವ ನೀನು. ನಿನ್ನ ಕಥನವಲ್ಲದ ಕಥನವನ್ನು ತಿಳಿದ ಶಿಷ್ಯನೇ ಧನ್ಯನು.

ಗುರುದೇವನೇ ಐದು ಗ್ರಾಮಗಳಲ್ಲಿ ವಾಸ ಮಾಡಿದ ನಾಲ್ಕು ಗ್ರಾಮಗಳ ಒಡೆಯ ನೀನು. ಒಂದೊಂದು ಗ್ರಾಮದ ವಿಸ್ತೀರ್ಣವೂ ಅದ್ಭುತ. ಅದನ್ನು ಅಳೆಯುವುದಾದರೂ ಹೇಗೆ? ಗಾಳಿಯನ್ನು ಇಷ್ಟೇ ಎಂದು ಅಳೆಯಲು ಯಾರಿಗಾದರೂ ಸಾಧ್ಯವೆ? ನಿನ್ನ ಹೊರತು ಅದರ ವಿಸ್ತೀರ್ಣವನ್ನು ಕಂಡವರೇ ಇಲ್ಲ. ಅಂತಹ ಗಾಳಿ ಒಂದು ಗ್ರಾಮ ನಿನ್ನದಾಗಿದೆ.

ಭೂಮಿಯ ವಿಸ್ತೀರ್ಣವೂ ಅನಂತ. ಅದರ ಆಳ, ಅದರ ಉದ್ದ ಅದರ ಮೇಲೆ ಬೆಳೆದ ಗಿಡಮರಗಳು. ಸಸ್ಯ ಸಂಕುಲ, ಕೀಟ ಉರುಗ ಜಲಚರಗಳು ಸಕಲ ಪ್ರಾಣಿಗಳಿಗೆ ಪ್ರಾಣ ನೀಡಿ ಪೋಷಣೆ ಮಾಡುವ ಗ್ರಾಮದೊಡೆಯ ನೀನು.

ಗಾಳಿ ಎಂಬ ಗ್ರಾಮವೂ ನಿನ್ನದೇ. ಅದರ ಸೀಮೆಯೂ ನಿಸ್ಸೀಮ. ಅಳೆಯಲು

ಸಾಧ್ಯವೇ ಇಲ್ಲ. ಆಯಾ ಪ್ರಾಣಿಗಳಿಗೆ ಬೇಕಾಗುವ ಪ್ರಾಣವಾಯುವನ್ನು ನೀಡಿದ ಒಡೆಯ ನೀನು. ನಿನ್ನ ಗ್ರಾಮದ ವಿಸ್ತೀರ್ಣವನ್ನು ನೀನು ಮಾತ್ರ ಅಳೆಯಬಲ್ಲೆ.

ಅಗ್ನಿ ಎಂಬ ಗ್ರಾಮವೂ ನಿನ್ನದೇ. ಅದು ಎಲ್ಲಿಲ್ಲ. ಗಿಡ ಮರ ಬಳ್ಳಿಗಳಲ್ಲಿದ್ದು ಅದರ ಬೆಳವಣಿಗೆಗೆ ಅಳಿವಿಗೆ ಕಾರಣವಾಗಿದೆ. ಸಕಲ ತನುಗಳಲ್ಲಿ ಸಂಗಮವಾಗಿ ಅದರ ಸುಖ ದುಃಖಗಳಿಗೆ ಕಾರಣವಾಗಿದೆ.

ಜಲವೂ ನೀನೆ. ಜಲಜನಕ ಆಮ್ಲಜನಕವೂ ನೀನೆ. ಅವೆರಡನ್ನೂ ಸಂಗಮಗೊಳಿಸಿದ ಬಯಲ ದೇವನೂ ನೀನೇ!

ಜಲವನ್ನು ಗಟ್ಟಿಗೊಳಿಸಿ ಭೂಮಿಯಾಗಿಸಿದೆ. ಉರಿಯುವ ಜಲಜನಕವನ್ನು ಉರಿಸುವ ಆಮ್ಲಜನಕವನ್ನು ಒಂದು ಮಾಡಿ ಜಲವಾಗಿಸಿದೆ. ಜಲದಲ್ಲಿ ಅಗ್ನಿಯನ್ನು ಇಟ್ಟು ಜೀವಜಲವಾಗಿಸಿದೆ. ಆಮ್ಲಜನಕವನ್ನು ಬೇರ್ಪಡಿಸಿ ಸುಳಿದು ಬೀಸುವ ಗಾಳಿಯಾಗಿಸಿದೆ.

ನಾಲ್ಕು ಭೂತಗಳನ್ನು ಒಂದು ಮಾಡಿ ಅದರಲ್ಲಿ 'ಬಯಲು' ಎಂಬ ನೀನು ಬೆರೆತು ಭೂತನಾಥನಾಗಿ, ನಾಲ್ಕು ಗ್ರಾಮದ ಒಡೆಯನಾಗಿ ಮೆರೆದೆ. ಸಕಲ ಅಂಗಗಳಲ್ಲಿಯೂ ಅರಿವಿನ ಲಿಂಗವಾಗಿ, ಅಂಗವನ್ನು ಆವರಿಸಿದ ಮನಕ್ಕೆ ದೀಕ್ಷೆ ಕೊಟ್ಟು ಅವನನ್ನೇ ಶಿಷ್ಯನಾಗಿ ಮಾಡಿಕೊಂಡೆ. ಆ ಶಿಷ್ಯನಿಗೆ ಅರಿವು ಬೋಧ ಮಾಡಿ ಗುರುವಾಗಿ ಮೆರೆದೆ.

ಗುರುದೇವನೂ ನೀನೆ ಆಗಿರುವಿ. ಶಿಷ್ಯನೂ ನೀನೇ ಆಗಿರುವಿ! ಗುರು ಶಿಷ್ಯರೆಂಬ ಆಟವನು ಆಡುವ ವಿನೋದ ನಿನ್ನದು! ಐದು ಗ್ರಾಮಗಳಿಗೆ ಅಧಿಪತಿಯಾದ ನಾಲ್ಕು ಗ್ರಾಮಗಳ ಅಯ್ಯ ನೀನು. ಎಲ್ಲಿ ನೋಡಿದರೂ ನಿನ್ನಯ ದ್ರಾಕ್ಷಾಫಲವೇ ಗುತ್ತು ಗುತ್ತಾಗಿ ಬೆಳೆದಿಹುದು. ಒತ್ತಿ ನೋಡಿದರೆ ಒಸರುತಿಹ ಭಕ್ತಿರಸವು; ವಶಕೆ ತಂದು ಶಿಷ್ಯಂಗೆ ಹೆಸರಿಟ್ಟು ಕೊಟ್ಟಾತ ಗುರು ಕಪಿಲಸಿದ್ಧ ಮಲ್ಲಿಕಾರ್ಜುನನು ನೀನು!

**350**

**ಐದಕ್ಷರ ಆದಿಯಾದ, ಇಪ್ಪತ್ತೈದಕ್ಷರದ ಸಂಯೋಗದ**
**ಮೂವತ್ತಾರಕ್ಷರವಾನಂದದ**
**ಆನಂದ ಸಾನಂದ ಶೂನ್ಯ ತನ್ನಯ ಲಿಂಗ**
**ಭಾನುವಿನ ಪ್ರಭೆಯಲಿಪ್ಪ**
**ಹೇಮ ಕಲಶಕ್ಕೆಲಸದಿಂದ ಮೇಲೆ**
**ಆದಿಯಾಧಾರ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನಮಃ ಶಿವಾಯ ಎನ್ನುವ ಬೀಜಾಕ್ಷರಗಳನ್ನು ಶ್ರೀ ಗುರುವಿನಿಂದಲೇ ತಿಳಿಯಬೇಕು. ರಕ್ತ ಮೂಳೆ ಮಾಂಸ ಮಜ್ಜಾ ಮೇದಸ್ಸುಗಳಿಂದ ಕೂಡಿದ ದೇಹವು ಒಂದೇ. ಅದು ಹೆಣ್ಣೂ ಅಲ್ಲ; ಗಂಡೂ ಅಲ್ಲ. ಅದು ಅರಿವೆಂಬ ಗುರುದೇವನು ಸಂಗಮವಾದ ದೇವಾಲಯ.

ದೇಹವೆಂಬ ಅರಿವಿನ ದೇವರಿದ್ದ ದೇವಾಲಯವನ್ನು ದೇಹವನ್ನು ಆವರಿಸಿದ ಮನ ತಿಳಿಯಲೆಂದು; ಅದಕ್ಕೆ ಚಕಿತವಾಗಲೆಂದು ಬೆಡಗಿನ ಮೂಲಕ ಹೇಳಲಾಗಿದೆ. ದೇಹವೆಂಬುದು ನಮಃ ಶಿವಾಯ. ಅದು ಮಾಂಸಪಿಂಡವಲ್ಲ; ಮಂತ್ರಪಿಂಡ. ಈ ಮಂತ್ರವನ್ನು ಸದಾ ಪಠಿಸು. ಅನ್ಯ ದೇಹಗಳನ್ನು ಮಂತ್ರಪಿಂಡವೆಂದೇ ನೋಡು. ಅದರಲ್ಲಿ ಇಪ್ಪತ್ತೈದು ಆತ್ಮ ತತ್ವಗಳಿವೆ. ಭೂತ

ಪಂಚಕಗಳಿವೆ. ಶ್ರೋತ್ರಾದಿ ಜ್ಞಾನೇಂದ್ರಿಯ ಪಂಚಕಗಳಿವೆ. ಶಬ್ದಾದಿ ವಿಷಯ ಪಂಚಕಗಳಿವೆ. ವಾಗ್ಆದಿ ಕರ್ಮೇಂದ್ರಿಯ ಪಂಚಕಗಳು ಇವೆ. ಮನೋ ಆದಿ ಪಂಚಕಗಳು ಇವೆ. ಇವೆಲ್ಲ ಆತ್ಮವನ್ನು ತಿಳಿಯುವ ಇಪ್ಪತ್ತೈದು ತತ್ವಗಳು.

ವಿದ್ಯಾ ತತ್ವಗಳು ಹತ್ತು ಇವೆ. ಕರ್ಮ, ಕರ್ತೃ, ಮೂರ್ತಿ, ಅಮೂರ್ತಿ, ಶಿವಸಾದಾಖ್ಯಗಳೆಂದು ಐದು. ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯಾತೀತ ಎಂಬ ಐದು ಕಲೆಗಳು ಹಾಗೂ ಒಂದು ಶಿವತತ್ವ ಸೇರಿ ಒಟ್ಟು ಮೂವತ್ತಾರು.

ಇವೆಲ್ಲ ತಿಳಿದು ನಿತ್ಯ ಪಠಿಸಿದರೂ ದೇಹದಲ್ಲಿ ಶಾಂತಿ ನೆಲೆಸುವುದು ಸಾಧ್ಯವಾಗಲಿಕ್ಕಿಲ್ಲ.

ಕೋಟಿ ಸೂರ್ಯರನ್ನು, ಶತಕೋಟಿ ಸೂರ್ಯರನ್ನು ಬೆಳಗುವ ಪರಮಾನಂದದ ಪ್ರಭೆಯ ಬೆಳಗೇ ತಾನಿರುವಾಗ ಮತ್ತೆ ಮತ್ತೆ ದೇಹವನ್ನು ಸೀಳಿ ಸೀಳಿ ಅನೇಕ ತತ್ವಗಳಿಂದ ನೋಡುವುದರಿಂದ ಅದು ಪಂಡಿತ ಶಾಸ್ತ್ರಿಯಾಗಲು ಸಾಧ್ಯವೇ ಹೊರತು ಪರಮಾನಂದವನ್ನು ಹೊಂದಲು ಸಾಧ್ಯವಾಗುವುದಿಲ್ಲ.

ಆದಿಯಾಧಾರದಿಂದ ಹಿಡಿದು ಭಾನುವಿನ ಪ್ರಭೆಯಲಿಪ್ಪ ಹೇಮ ಕಲಶಕ್ಕೆಲಸದಿಂದ ಮೇಲೆ ಎನ್ನುತ್ತಾರೆ ಸಿದ್ಧರಾಮ ಶಿವಯೋಗಿಗಳು.

ಜಗದಗಲ ಮುಗಿಲಗಲ ಮಿಗೆಯಗಲ (ಪಂಚಭೂತಗಳು) ಇದ್ದಂತಹ ಮಹಾ ಜ್ಞಾನಪ್ರಭೆ ದೇಹದಗಲದಲ್ಲಿ ಬಂದು ಚುಳುಕಾಗಿರುವಾಗ ಅದನ್ನು ಐದು ಇಪ್ಪತ್ತೈದು ಮೂವತ್ತಾರು ಎಂದು ವಿಂಗಡಿಸಿ ನೋಡಿ ತಿಳಿಯಬಹುದೆ?

ದೇಹವೆಂಬ ದೇವಾಲಯದ ಶ್ರೀಪಾದಗಳು ಪಾತಾಳದಿಂದಲೂ ಅತ್ತತ್ತ ಚಾಚಿಕೊಂಡಿವೆ. ಶ್ರೀಮುಕುಟ ಬ್ರಹ್ಮಾಂಡದಿಂದ ಅತ್ತತ್ತಲೂ ಚಾಚಿಕೊಂಡಿದೆ. ಅಗಮ್ಯ ಅಪ್ರಮಾಣ ಅಪ್ರತಿಮವಾದ ಅರಿವೆಂಬ ಲಿಂಗವು ಅಂಗದಲ್ಲಿ ಬಂದು ಚುಳುಕಾಗಿರುವಾಗ ಅದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ಹೊರತು ಬೇರೇನೂ ಅಲ್ಲ ಎಂದು ಬಸವಾದಿ ಶರಣರು ದೇಹವನ್ನು ಬಣ್ಣಿಸಿದ್ದಾರೆ. ಅದನ್ನು ಮಹಾಜ್ಞಾನದ ಖಣಿ ಎಂದು ಕೊಂಡಾಡಿದ್ದಾರೆ. ಸಾಕ್ಷಾತ್ ಶಿವಮಯವೆಂದು ಷಡಕ್ಷರಿ ಮಂತ್ರವನ್ನು ಪಠಿಸಿದ್ದಾರೆ.

**351**

**ಐದಾರು ಏಳೆಂಟೆಂದೆಂಬ ಬಲೆಯಲ್ಲಿ ಸಿಲಿಕಿ**
**ಎಯ್ದೆ ಗಾರಾಗುತ್ತಲಿದ್ದೇನೆ.**
**ಮೀರಲಾರೆನು ಕರ್ಮಂಗಳನು**
**ಗಾರು ಮಾಡಿಹವು ಎನ್ನ ಬೇರೆ ಮತ್ತೊಂದು ಉಳ್ಳಡೆ ತೋರಾ,**
**ಸಾರುವ ಶ್ರುತಿಗಳಿಗಿಂದತ್ತಲಾದ ಮಹಾಘನ ನೀನು ನೀರ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ತಂದೆ.**

ಪಂಚೇಂದ್ರಿಯಗಳು, ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳೆಂಬ ಬಲೆಯಲ್ಲಿ ಸಲುಕಿ ಒದ್ದಾಡುತ್ತಲಿದ್ದೇನೆ. ಸ್ನಾನ ಪೂಜೆ ನಿತ್ಯ ನಿಯಮಗಳ ಮೂಲಕ ಅವುಗಳನ್ನು ಕಳೆದುಕೊಳ್ಳಲು ನನಗೆ ಸಾಧ್ಯವಾಗುತ್ತಿಲ್ಲ.

ನುಡಿಯುವಲ್ಲಿ ಆಚಾರ ಬಳಕೆಯಾಗುತ್ತಿದೆ. ನಡೆಯುವಲ್ಲಿ ಹಾದರ

ಬಳಕೆಯಾಗುತ್ತಲಿದೆ. ಹಾದರದಿಂದ ನುಡಿದು ಹಾದರದಿಂದ ನಡೆಯುವ ಹೇಡಿ ನಾನು. ತನುವಿಗೆ ಈ ಬಾಧೆಗಳನ್ನು ಏಕೆ ಕೊಟ್ಟೆ? ಬಾಲ್ಯ ಬ್ರಹ್ಮಚರ್ಯೆ ಗೃಹಸ್ತ ವಾನಪ್ರಸ್ತ ಆಚಾರಗಳು ಆಚಾರ ಮಾತ್ರ. ಒಂದರಲ್ಲಿಯೂ ಸರಿಯಾಗಿ ನಿಲ್ಲಲು ಆಗುವುದಿಲ್ಲ ಎಂದ ಮೇಲೆ ಈ ಶಬ್ದಗಳ ಗಜಿಬಿಜಿಯಾದರೂ ಯಾಕೆಬೇಕು?

ವೇದ ಆಗಮ ಉಪನಿಷತ್ತುಗಳು ರಾಮಾಯಣ ಮಹಾಭಾರತ ಭಗವದ್ಗೀತೆಗಳು, ಕುರಾನ್ ಬೈಬಲ್‌ಗಳು ನನ್ನನ್ನು ಪಾರು ಮಾಡಲು ಅರಿಯವು. ತನುವಿನಿಂದ ಹೊರಬಂದ ಪುಸ್ತಕಗಳು ತನುವನ್ನು ಸರಿಪಡಿಸಲು ಸಾಧ್ಯವೆ? ಸಾರುವ ಶೃತಿ ಸ್ಮೃತಿಗಳು ನಿನಗೆ ಸಾಟಿಯಾಗಲಾರವು.

ನೀನು ಮಹಾಘನ. ನೀರಮಲ್ಲಯ್ಯ ನೀನು.

''ತಿಳಿನೀರೆಂಬೆ ತಿಳಿನೀರೆಂಬೆ, ತಿಳಿ ನೀ ಎಂದು ಒಂದು ದಿನ; ಅಂದಿಲ್ಲೆಲೆ ಮಾನವಾ. ಕ್ಷಣಕ್ಷಣಕ್ಕೆ ತಿಳಿ ನೀ ಎಂದಡೆ, ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧ ಮಲ್ಲೇಂದ್ರ'

ನೆಲದ ಮೇಲಿರುವ ಏಳುನೂರಾ ಇಪ್ಪತ್ತು ಕೋಟಿ ಸಕಲ ತನುಗಳೆಲ್ಲ ನೆಲದ ಮರೆಯ ನಿಧಾನದಂತೆ ಅರಿವಿನ ಸಂಪತ್ತನ್ನು ಅಂಗದಲ್ಲಿ ಬಚ್ಚಿಟ್ಟುಕೊಂಡು ಓಲಾಡುವ ನೀರಮಲ್ಲಯ್ಯನೇ ಆಗಿವೆ.

ನೀರಬಿಂದು ಜಲಬಿಂದುವಾಗಿ ಅರಿವಿನ ಬಿಂದುವಾಗಿ ಗರ್ಭದಲ್ಲಿ ಹೊಕ್ಕು ಆ ನೀರಬಿಂದುವೇ ರಕ್ತವಾಗಿ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಸುಂದರವಾದ ಚರ್ಮದ ಕವಚದೊಂದಿಗೆ ಗರ್ಭದಿಂದ ಹೊರಬಂದ ತನುಗಳೆಲ್ಲ ನೀರಮಲ್ಲಯ್ಯ ವಾಸ ಮಾಡುವ ಅರಿವಿನ ತನುಗಳೇ ಆಗಿವೆ.

ನೀರು ಮಾತಾಡುವುದಿಲ್ಲ. ನೋಡುವುದಿಲ್ಲ. ಕೇಳುವುದಿಲ್ಲ, ರುಚಿಸಿ ಸ್ಪರ್ಶಿಸಲು, ಮೂಸಿಸಲು ನೀರಿಗೆ ಬರುವುದಿಲ್ಲ. ತಂದೆಯ ಮುಖಾಂತರ ನೀರಮಲ್ಲಯ್ಯ ತಾಯಿಗರ್ಭಕ್ಕೆ ಪ್ರವೇಶ ಮಾಡಿ ತನುವಾಗಿ ಹೊರಬಂದ ಮೇಲೆ; ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ತನ್ನ ಕಣ್ತುಂಬಿಕೊಂಡು ನೋಡುತ್ತಾನೆ. ಕೇಳುತ್ತಾನೆ, ಮೂಸಿ, ಮುಟ್ಟಿ, ರುಚಿಸಿ ಆನಂದದಿಂದ ಅನುಭವಿಸುತ್ತಾನೆ. ಅದೆಲ್ಲ ತಾನೇ ಎಂದು ಅನುಭವಕ್ಕೆ ಹೋದರೆ ತನಗೆ ತಾನೆ, ತನ್ನ ಅಗಾಧ ಶಕ್ತಿ ತಾನೇ ತಿಳಿಯುತ್ತಾನೆ.

ಮಲ್ಲಯ್ಯ; ತನ್ನ ಲೀಲೆಗಾಗಿ ನೀರು ಮಾಡಿ, ಆ ನೀರಲ್ಲೆ ತಾನು ಬಚ್ಚಿಟ್ಟುಕೊಂಡು ಬ್ರಹ್ಮಾಂಡವನ್ನು ರಚನೆ ಮಾಡಿದ. ತಾನು ರಚನೆ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡಲು, ನೋಡಿ ಆನಂದಪಡಲು ಗರ್ಭ ಹೊಕ್ಕು ತನುವಾಗಿ ಹೊರಬಂದ. ತಾನು ರಚನೆ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡುವ ಶಕ್ತಿ ನೀರಮಲ್ಲಯ್ಯ ತನುಕುಲಕ್ಕೆ ಮಾತ್ರ ಕೊಟ್ಟ. ಕ್ರಿಷ್ಣ ಕ್ರಿಸ್ತ ಪೈಗಂಬರರು ಮಾತ್ರ ನೋಡಿದರು. ಬಸವಾದಿ ಶರಣರು ದಾಸವರೇಣ್ಯರು ಮಾತ್ರ ನೋಡಿದರು. ನೋಡಲು ಬಯಕೆ ಹೊಂದಿದ ತನುಗಳು ಮಾತ್ರ ನೋಡಿದವು.

ಸಾರುವ ಶೃತಿಗಳಿಂದತ್ತಲಾದ ಮಹಾಘನ ಬ್ರಹ್ಮ ಸುಖದ ಬ್ರಹ್ಮ ಕಮಲ ಗರ್ಭದಲ್ಲಿಟ್ಟುಕೊಂಡು ಅರಳದ ತನುಗಳು ಮೊಗ್ಗಾಗಿ ಉಳಿದವು. ಅರಿವಿನ ನೀರಮಲ್ಲಯ್ಯ ಸಕಲ ತನುಗಳಲ್ಲಿ ಬಚ್ಚಿಟ್ಟುಕೊಂಡಿದ್ದಾನೆ. ತನಗೆ ಬಯಕೆಯಾದಾಗ ನೀರಿಂದ, ಅಂದರೆ ನೀರ ತನುವಿನಿಂದ ಹೊರಬಂದು ಬ್ರಹ್ಮಕಮಲವಾಗಿ ಅರಳಿ ನಿಲ್ಲುತ್ತಾನೆ. ನೀರ ತನುವಿಗೆ ಅಂಟದಂತೆ

ನೀರ ತನುವನ್ನು ಬೆಳಗಿಂಗೆ ಬೆಳಗಾಗಿ ಬೆಳಗುವ ಮೂಲಕ ಆ ತನುವಿನಲ್ಲಿಯೇ ಅರಳಿ ನಿಲ್ಲುತ್ತಾನೆ ನೀರಮಲ್ಲಯ್ಯ!

**352**

**ಐದು ಪುರದ ಪಟ್ಟಣದ ಪಾದ ಘಾತದ ಆ ಅಯ್ಯಾ**
**ಹಾವಸೆ ಕುಂದದಲ್ಲಾ! ಬಾವಿಯ ಹಾವಸೆ ಕುಂದದಲ್ಲಾ.**
**ಬಾವಿಯ ಕಟ್ಟಿದ ಕಲ್ಲೆಲ್ಲಾ ಬರೆಯ ಹಾವಸೆ ನೋಡಾ ಅಯ್ಯಾ.**
**ಹಾವಸೆ ಕುಂದದಲ್ಲಾ!**
**ಶಿಖರದ ಮೇಲಣ ಒರತೆ ಕುಂದದೇನು ಕಾರಣ**
**ಕಪಿಲಸಿದ್ಧ ಮಲ್ಲಿನಾಥಯ್ಯನೊ ಅಯ್ಯಾ.**

ತನುವೆಂಬ ಬಾವಿಯ ತುಂಬ ಅಮೃತ ಸಮಾನವಾದ ಅರಿವಿನ ಜಲ ಭರಿತವಾಗಿದೆ. ಕುಡಿದು ಮರಣವಿಲ್ಲದ ಮಹಾಯಾತ್ರೆ ಪೂರೈಸಲು ಹೋಗೋಣವೆಂದರೆ ಜಲ ಕಾಣುತ್ತಿಲ್ಲ. ಜಲ ಕಾಣದಂತೆ ಜಲದ ಮೇಲೆ ಬರೀ ಪಾಚಿ ಆವರಿಸಿದೆ. ಪಾಚಿ ಕುಂದುವುದಿಲ್ಲ. ಜಲ ಕುಡಿಯಲು ಬರುವುದಿಲ್ಲ. ಕುಡಿಯಲು ಹೋದಂತೆಲ್ಲ ಪಾಚಿ-ಅಡ್ಡಬಂದರೆ, ಜ್ಞಾನದ ಜಲ ಕುಡಿಯುವುದಾದರೂ ಹೇಗೆ?

ಐದು ಮಹಾಜ್ಞಾನದ ಪುರಗಳಾದ ಕಣ್ಣು ಕಿವಿ ಮೂಗು ನಾಲಿಗೆ ಚರ್ಮದ ಪಾದದಿಂದ ಹಿಡಿದು ನೆತ್ತಿಯವರೆಗೆ ಅಜ್ಞಾನದ ಹಾವಸೆ! ಬರೀ ಪಾಚಿ!

ಕಲ್ಲು ಕಟ್ಟಡದ ಬಾವಿಯ ತುಂಬಾ ಅರಿವಿನ ಅಮೃತ ಸಮಾನವಾದ ಜಲ ಭರಿತವಾಗಿದ್ದರೂ ಕಲ್ಲುಗಳಿಗೆಲ್ಲ ಬರೀ ಪಾಚಿ ಮೆತ್ತಿಕೊಂಡಿದೆ. ಜ್ಞಾನದ ತನು, ಮಹಾಜ್ಞಾನದ ತನುವೆಂದು, ತನುವಿನೊಂದಿಗೆ ಕರೆಯಿಸಿಕೊಳ್ಳದೆ ಜಾತಿ ಮತ ಪಂಥ ಶ್ರೀಮಂತ ಬಡವ ಭಿಕ್ಷುಕ ಹೆಣ್ಣು ಗಂಡು ಎಂದು ಕರೆಯಿಸಿಕೊಳ್ಳುತ್ತದೆ.

ತನುವೇ ತನುವನ್ನು ಕಾಮದಿಂದ ನೋಡುತ್ತಾ, ಕ್ರೋಧದಿಂದ ಕುದಿಯುತ್ತಾ, ಲೋಭ, ಮೋಹ, ಮದ, ಮತ್ಸರಗಳಿಂದ ಬಳಲುತ್ತಲಿದೆ. ಒಂದು ಬಾವಿಯಲ್ಲಿದ್ದ ಪಾಚಿಯನ್ನು ಮತ್ತೊಂದು ಬಾವಿ ಬಂದು ಬಾವಿಯಲ್ಲಿದ್ದ ಪಾಚಿಯನ್ನು ತೆಗೆಯಲು ಸಾಧ್ಯವೆ?

ಎಲ್ಲಿ ನೋಡಿದರೂ ಒಳಗೆ ಅರಿವಿನ ಜಲ! ಮೇಲೆ ಅಜ್ಞಾನದ ಪಾಚಿ! ಇದು ಜ್ಞಾನಭರಿತವಾದ ತನುವಿನ ಕತೆ. ಆದರೂ ತನುವಿನ ಪಾಚಿ ತನುವಿನ ಮೂಲಕ ಕಿತ್ತೆಸೆಯುವ ಪ್ರಯತ್ನ ತನು ಮಾಡುತ್ತಿಲ್ಲ.

ಗುರು ಎನ್ನುವ ಪಾಚಿ ಹಚ್ಚಿಕೊಂಡು ಶಿಷ್ಯನ ಅಜ್ಞಾನದ ಬಾವಿಯ ಪಾಚಿ ತೆಗೆಯಲು ಸಾಧ್ಯವೆ? ಅರಿವೆಂಬ ಗುರುದೇವನ ಅರಿವಿನ ಜಲಕ್ಕೆ ತೆಗೆಯಲು ಸಾಧ್ಯವಾಗದ ಪಾಚಿ ಮತ್ತೊಂದು ತನುವಿನ ಜಲದ ಮೂಲಕ ಮಂತ್ರಿಸಲು ಸಾಧ್ಯವೆ? ಕೆಳಗೆ ಪರಿಶುದ್ಧವಾದ ಜಲ! ಮೇಲೆ ಹರಡಿದ ಪಾಚಿ!

ಜ್ಞಾನ ಸಂಗಮವಾಗಿದೆ; ಆ ಮಹಾಜ್ಞಾನವನ್ನು ತನುವಿನ ಅಜ್ಞಾನ ಆವರಿಸಿಕೊಂಡಿದೆ. ಹೀಗಿದ್ದ ಮೇಲೆ ಪುಸ್ತಕಗಳಿಂದ, ಬೋಧೆಯಿಂದ, ಪಾಚಿ ಸರಿಯಲು ಸಾಧ್ಯವೆ? ಅಜ್ಞಾನದ ಪಾಚಿ ಸರಿಸಿಕೊಂಡು ಜಲ ಸೇವಿಸಲು ಹೇಳಬಹುದು. ಆದರೆ ಅಜ್ಞಾನದ ಹಚ್ಚಡವನ್ನೇ ಕಿತ್ತೆಸೆಯಲು ಸಾಧ್ಯವಿಲ್ಲ.

ಜ್ಞಾನ ಜಲದಲ್ಲಿ ಆ ಜಲದಿಂದಲೇ ಹುಟ್ಟಿದ ಪಾಚಿ ಆ ಜಲಕ್ಕೆ ಸರಿಸಿಕೊಳ್ಳಲು ಸಾಧ್ಯವಿಲ್ಲ ಎಂದ ಮೇಲೆ ಮತ್ತೊಬ್ಬರು ಪಾಚಿ ಸರಿಸಲು ಹೇಗೆ ಸಾಧ್ಯ?

ನೋಡುವ ಅರಿವಿನ ಕಣ್ಣಿನಲ್ಲಿ ನೋಡಲು ಬಾರದ ಅಜ್ಞಾನದ ಹಾದರದ ಕಣ್ಣೊಂದಿದೆ; ಹಾದರದ ಕಣ್ಣಿಗೆ ಸದಾ ಹಾದರ ಮಾಡಿ ಅನುಭವಿಸುವ ಸುಳ್ಳು ಸುಖದ ಚಿಂತೆ. ಅರಿವಿನ ಕಣ್ಣಿಗೆ ನೀನು ಸರಿಯಾಗಿ ನೋಡುತ್ತಿಲ್ಲ ಎಂದು ಅಜ್ಞಾನದ ಕಣ್ಣಿಗೆ ಪಾಠ ಮಾಡುವ ಕೆಲಸ. ಅರಿವಿನ ಪಾಠ ನಿಂತಿಲ್ಲ. ಅಜ್ಞಾನದ ಕೆಲಸ ನಿಂತಿಲ್ಲ. ಕಣ್ಣನ್ನೇ ಬಾವಿಯಂತೆ ಉಪಕರಣ ಮಾಡಿಕೊಂಡು ಅಜ್ಞಾನದ ದೃಶ್ಯಕ್ಕೆ ಜ್ಞಾನದ ದೃಶ್ಯ ಪಾಠ ಮಾಡುತ್ತಲೇ ಇದೆ; ಜಲದ ಮೇಲೆ ಪಾಚಿ ಹೇಗೆ ಇದೆಯೋ ಹಾಗೆಯೇ ಅಜ್ಞಾನದ ಕಣ್ಣು ಅರಿವಿನ ಕಣ್ಣು ಕಣ್ಣಿಗೆ ಉಪಕರಣ ಮಾಡಿಕೊಂಡು ಎರಡೂ ಕೆಲಸಗಳನ್ನು ನಡೆಸಿದೆ.

ತನಗೆ ಬೇಕಾದಂತೆ ನೋಡಿದರೆ ಅಜ್ಞಾನದ ಕಣ್ಣಿಗೆ ಸುಖ. ಕಣ್ಣೊಳಗೆ ಇದ್ದು ಅರಿವಿನ ಕಣ್ಣಾಗಿ ನೋಡಿದ ಕಣ್ಣಿಗೆ ಮುಜುಗರ. ಜ್ಞಾನದ ಮೇಲೆ ಅಜ್ಞಾನದ ಪಾಚಿ ಬಂದರೆ ಯಾವ ವೈದ್ಯ ಶಸ್ತ್ರ ಚಿಕಿತ್ಸೆ ಮಾಡಿ ತೆಗೆಯಲು ಸಾಧ್ಯ?

ಶಿಖರದ ಮೇಲಣ ಒರತೆ ಕುಂದದು ಅದೇನು ಕಾರಣ ಕಪಿಲಸಿದ್ಧ ಮಲ್ಲಿನಾಥಯ್ಯನೊ ಅಯ್ಯಾ :

ತನುವೆಂಬುದು ಅರಿವಿನ ಅಮೃತ ಜಲವಿದ್ದ ಮಹಾಬಾವಿ. ಅದು ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂಬ ಐದು ಜ್ಞಾನದ ಮಹಾ ಇಂದ್ರಿಯಗಳ ಮೂಲಕ ನಿರಂತರವಾಗಿ ಧಾರಾಕಾರವಾಗಿ ಹರಿಯುತ್ತಲಿದೆ. ಹರಿಯುವ ಈ ಅರಿವಿನ ಒರತೆಯೂ ನಿಲ್ಲದು. ಹರಿಯುವ ಅರಿವಿನ ಜಲದ ಮೇಲೆ ಅಜ್ಞಾನದ ಪಾಚಿಯೂ ನಿಲ್ಲದು.

ಜ್ಞಾನಿ ಎಂದು ಜ್ಞಾನದಿಂದಲೇ ನೋಡಬೇಕಾದ ಅಂಗ ಮಂಗನಂತೆ ಅಜ್ಞಾನದಿಂದ ನೋಡುತ್ತಲಿದೆ. ಅಂಗದಲ್ಲಿ ಅರಿವು ಸಂಗವುವಾಗಿದೆ. ಅಂಗವನ್ನು ಅಜ್ಞಾನದ ಪಾಚಿ ಆವರಿಸಿಕೊಂಡಿದೆ. ಅರಿವಿನ ಮಲ್ಲಯ್ಯನೇ, ಮಹಾಜ್ಞಾನಿಯೇ, ನಿನಗಂಟಿದ ಅಜ್ಞಾನದ ಪಾಚಿ ನೀನೇ ಕಳೆದುಕೋ ತಂದೆ ಎಂದು ಕೂಗಿ ಕರೆಯುವುದೊಂದೇ ಬಾಕಿ!

**353**

**ಐದೆ ಬಿನ್ನಾಣಿಕೆ ಬಿನ್ನಾಣಿಯ ಬಸುರಲ್ಲಿ ಹುಟ್ಟಿದವಳು**
**ಬಾಯಲ್ಲಿ ಬಳೆದೊಟ್ಟವಳು; ಬಾಯಲ್ಲಿ ತಲೆಯಾದವಳು;**
**ತಲೆಯೊಳಗೆ ಮೊಲೆಯಾದವಳು; ಮೊಲೆಯೊಳಗೆ ನಾಭಿಯಾದವಳು;**
**ನಾಭಿಯೊಳಗೆ ಬಸುರಾದವಳು; ಬಸುರೊಳಗೆ ಬೆನ್ನಾದವಳು;**
**ಬೆನ್ನೊಳಗೆ ಕಾಲಾದವಳು;**
**ಗಂಡಂಗೆ ಕೈಯೆಂದು ಬಾಯಲ್ಲಿ ಹಿಡಿದು ಹರಿದವಳು**
**ಕಪಿಲಸಿದ್ಧ ಮಲ್ಲಿನಾಥಯ್ಯನ ಬಾಯಲ್ಲಿ ಭೋಗಿಯಾದವಳು.**
**ಇಂತಪ್ಪ ವಿದ್ಯದ ಬೇಟದ ಮಾತಿನ ಕೊಂಬ ಹೇಳಿದಡೆ,**
**ಅಲ್ಲಿಗೆ ಬಂದಡೆ ತಾಕಂಡಯ್ಯಾ, ಐದೆ ಬಿನ್ನಾಣಿಕೆ!**

ಮನವೆಂಬ ಬಿನ್ನಾಣಗಿತ್ತಿ ಈಕೆ ಸದಾ ಸುಮಂಗಲಿ. ಸಾವಿಲ್ಲದ ಕೇಡೇ ಇಲ್ಲದ, ರೂಹೇ

ಇಲ್ಲದ ಚೆಲುವನ ಗರ್ಭದಲ್ಲಿ ಹುಟ್ಟಿದವಳು. ಈಕೆ ನಿತ್ಯ ಸುಮಂಗಲಿ. ಈಕೆಯನ್ನು ಹಡೆದವನು ಕೂಡಾ ಯಾರಿಗೂ ಹುಟ್ಟಿದವನಲ್ಲ. ಯಾರಿಗೂ ಹುಟ್ಟದ, ಹುಟ್ಟು ಸಾವುಗಳಿಲ್ಲದ ಚೆಲುವನ ಬಸುರಲ್ಲಿ ಮನವೆಂಬ ಸುಮಂಗಲಿ ಹುಟ್ಟಿದವಳು.

ಗಂಡು ಬಸುರಾಗುವುದೆಂದರೇನು? ಬಸುರಾಗಿ, ಎಂದೆಂದೂ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ನಿತ್ಯ ಸುಮಂಗಲಿ ಎಂಬ ಚೆಲುವೆಗೆ ಜನ್ಮಕೊಟ್ಟು ಆಕೆಯನ್ನೇ ವರಿಸುವುದು ಎಂದರೇನು? ಇದು ಚೆಲುವ ಮತ್ತು ಚೆಲುವೆಯರ ಬಿನ್ನಾಣ!

ಬಾಯಲ್ಲಿ ಬಳೆದೊಟ್ಟವಳು; ಬಾಯಲ್ಲಿ ತಲೆಯಾದವಳು; ತಲೆಯೊಳಗೆ ಮೊಲೆಯಾದವಳು; ಮೊಲೆಯೊಳಗೆ ನಾಭಿಯಾದವಳು; ನಾಭಿಯೊಳಗೆ ಬಸುರಾದವಳು; ಬಸುರೊಳಗೆ ಬೆನ್ನಾದವಳು; ಬೆನ್ನೊಳಗೆ ಕಾಲಾದವಳು; ಗಂಡಂಗೆ ಕೈಯೆಂದು ಬಾಯಲ್ಲಿ ಹಿಡಿದು ಹರಿದವಳು ಕಪಿಲಸಿದ್ಧ ಮಲ್ಲಿನಾಥನ ಬಾಯಲ್ಲಿ ಭೋಗಿಯಾದವಳು. ಇಂತಪ್ಪ ವಿದ್ಯದ ಬೇಟದ ಮಾತಿನಕೊಂಬ ಹೇಳಿದಡೆ, ಅಲ್ಲಿಗೆ ಬಂದಡೆ ತಾ ಕಂಡಯ್ಯ , ಸುಮಂಗಲಿಯ ಬಿನ್ನಾಣಿಕೆ!

ಶಿವ ಹೆಣ್ಣಲ್ಲ; ಗಂಡು ಕೂಡಾ ಅಲ್ಲ! ಅಂಗ ಎನ್ನುವ ಗಂಡಿಗೆ ಜನ್ಮಕೊಟ್ಟು ಅದರಲ್ಲಿ ತಾನು ಸಂಗಮವಾಗಿ ಮಹಾಪುರುಷನಾದವನು! ಅಂಗ ಎನ್ನುವ ಹೆಣ್ಣಿಗೆ ಜನ್ಮ ಕೊಟ್ಟು ಅದರಲ್ಲಿ ತಾನು ಸಂಗಮವಾಗಿ ಪರಮ ಪುರುಷನಾದವನು! ಇವನು ಒಂಟಿಯಾಗಿ ಇರಲು ಒಲ್ಲದೆ ಮನವೆಂಬ ಸುಮಂಗಲಿಗೆ ಬಸಿರಾಗಿ ಆಕೆಗೆ ಜನ್ಮಕೊಟ್ಟು ಆಕೆಯನ್ನೇ ಶಿವೆಯನ್ನಾಗಿಸಿಕೊಂಡು ಆಕೆಯನ್ನೇ ವರಿಸಿದವನು.

ಅಂಗಕ್ಕೆ ಬಾಯಿ ಉಂಟು; ತಲೆಯುಂಟು; ಮೊಲೆಯುಂಟು; ನಾಭಿ ಉಂಟು. ನಾಭಿಯ ಬಳ್ಳಿಯೊಳಗೆ ಒಂದು ಬಸುರುಂಟು. ಅಂಗಕ್ಕೆ ಬೆನ್ನುಂಟು. ಕೈಯುಂಟು.

ಪರಮ ಪುರುಷನಾದ ಪರಮೇಶ್ವರನಿಗೆ; ಆತನ ಬಸುರಲ್ಲಿ ಹುಟ್ಟಿ ಆತನನ್ನೇ ವರಿಸಿದ ಐದೆ ಎನ್ನುವ ಸುಮಂಗಲಿಗೆ ಇವರಿಬ್ಬರೂ ಅದಾವುದೂ ಇಲ್ಲ. ಅಂದರೆ ಅಂಗಾಂಗಳೇ ಇಲ್ಲ.

ಅಂಗದ ಕಣ್ಣೊಳಗೆ ಸೇರಿ ಕಣ್ಣಾದವರು; ಕಂಗಳಾದವರು! ಕಿವಿಯೊಳಗೆ ಸಂಗಮವಾಗಿ ಕಿವಿಯಾದವರು. ಚರ್ಮದೊಳಗೆ ಸಂಗಮವಾಗಿ ಚರ್ಮವಾದವರು. ನಾಭಿಯೊಳಗೆ ಸಂಗಮವಾಗಿ ನಾಭಿಯಾದವರು. ನಾಲಿಗೆಯೊಳಗೆ ಸಂಗಮವಾಗಿ ನಾಲಿಗೆಯಾದವರು. ನಾಸಿಕದೊಳಗೆ ಸಂಗಮವಾಗಿ ನಾಸಿಕವಾದವರು. ಕಾಯದೊಳಗೆ ಸಂಗಮವಾಗಿ ಅಕಾಯಿಗಳಾಗಿ ಕಾಯದಲ್ಲಿಯೇ ಸಂಸಾರ ಹೂಡಿದವರು.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮಕ್ಕೆ ಬಾಯಿಲ್ಲ. ಇವು ಸಾವಿಲ್ಲದ ಸರದಾರನ ವಾಸಸ್ಥಾನ. ಮಾತೇ ಇಲ್ಲದ ಮೌನಿಯ ವಾಸಸ್ಥಾನ. ಗಂಡ ಮೌನದ ಮಾತನಾಡಿದರೆ ಗಂಡನ ಕಾಯವನ್ನೇ ಬಾಯಾಗಿಸಿಕೊಂಡು ಕೈಯೆಂದು ಬಾಯಲ್ಲಿ ಹಿಡಿದು ಹರಿದವಳು.

ನೋಡುವ ಕಣ್ಣನ್ನು ಸುಮಂಗಲಿ ವಶಪಡಿಸಿಕೊಂಡು ನೋಡಿದೆನೆಂದು ಬಾಯಲ್ಲಿ ಮಾತನಾಡಿಸಿದಳು. ನೋಡಲು ಬಾರದ ಬಾಯಲ್ಲಿ ನೋಡಿದೆನೆಂದು ಮಾತನಾಡಿಸಿದಳು. ಸುಮಂಗಲಿಯ ಈ ಮಾತನ್ನು ಲೋಕ ನಂಬುವಂತೆ ಮಾಡಿದಳು. ನೋಡಿ ಮಾತೇ ಆಡದ ಗಂಡ ಮೌನಿಯಾದ! ಗಂಡ ಮೌನಿ; ಹೆಂಡತಿ ಮಾತುಗಾರಳು. ಆತ ಮೌನದಿಂದ ಮುಕ್ಕಣ್ಣನಾಗಿ ನೋಡಿದರೆ; ಈಕೆ ನೋಡಿದೆನೆಂದು ನೋಡಲು ಬಾರದ ಬಾಯಿಯ ಮೂಲಕ ಮಾತನಾಡಿದಳು. ಏನೀ ಸೌಂದರ್ಯಲಹರಿಯ ಮಾತುಗಾರಿಕೆ! ಕಾಯದಲ್ಲಿ ಅಕಾಯರುಗಳಾಗಿ ಆಡುವ ಶಿವ ಶಿವೆಯರ ಆಟ! ಶಿವನ ಶಿವಾನಂದ ಲಹರಿಯ ಮೌನದ ಆಟ! ಶಂಕರರು ಇದನ್ನು

ಕಂಡು 'ಸೌಂದರ್ಯಲಹರಿ' 'ಶಿವಾನಂದ ಲಹರಿ' ಎಂದು ಕಾಯವನ್ನು ಬಣ್ಣಿಸಿದರು. ಕಾಯದಲ್ಲಿ ಸಂಗಮವಾದ ಶಿವ-ಶಿವೆಯರನ್ನು ಬಣ್ಣಿಸಿದರು.

ನುಡಿಯಲು ಬಾರದ ಕಿವಿಯಲ್ಲಿ ಶಿವ ಮೌನಿಯಾದರೆ, 'ಐದೆ' ಕೇಳಲು ಬಾರದ ಬಾಯಿಂದ ನಾನು ಕೇಳಿದೆನೆಂದು ನುಡಿದಳು.

ಶಿವ ಮುಟ್ಟಿ ಮೌನಿಯಾದರೆ, ಸುಮಂಗಲೆ ನಾನೇ ಮುಟ್ಟಿದೆನೆಂದು ಮುಟ್ಟಲು ಬಾರದ ಬಾಯಿಂದ ನುಡಿದಳು. ಚರ್ಮಕ್ಕೆ ನುಡಿಯಲು ಬರುವುದಿಲ್ಲವೆಂದು ಗೊತ್ತಿದ್ದರೂ ಇದು ಶಿವ ಶಿವೆಯರ ಆಟ. ಕಾಯವೆಂಬ ಕೈಲಾಸದಲ್ಲಿ ನಡೆದ ಆಟ. ಈ ಆಟವನ್ನು ಸಕಲ ಕಾಯಗಳು ಹೌದೌದೆನ್ನುವಂತೆ ಸಾಕ್ಷೀಕರಿಸಿದವು.

ಶಿವ ಮೂಸಿಸಿ ಅರಿವಿನ ಪರಿಮಳ ಅನುಭವಿಸಿ ಮೌನಿಯಾದರೆ, ಸುಮಂಗಲೆ ನಾನು ಮೂಸಿಸಿದೆನೆಂದು ಅದು ಸುಗಂಧ ದುರ್ಗಂಧವೆಂದು ಮೂಸಿಸಲು ಬಾರದ ಬಾಯಿಂದ ನುಡಿದು ಹೇಳಿದಳು. ಸಕಲ ಕಾಯಗಳು ಕೇಳಿ ಸುಮ್ಮನಾದವು. ಶಿವೆಯ ಆಟದ ಮುಂದೆ ಶಿವನ ಆಟ ನಡೆಯುವುದಿಲ್ಲ.

ಶಿವ ಸಕಲ ಪದಾರ್ಥವನ್ನು ಪ್ರಸಾದವೆಂದು ಸ್ವೀಕರಿಸಿ ರುಚಿಸಿ ಮೌನಿಯಾದರೆ ಸುಮಂಗಲಿ ಇದು ರುಚಿಯಾಗಿದೆ; ರುಚಿಯಿಲ್ಲವೆಂದು ರುಚಿಸಲು ಬಾರದ ಬಾಯಿಯ ಮೂಲಕ ರುಚಿ ಅರುಚಿ ಎಂದು ನುಡಿದು ಹೇಳಿದಳು. ಶಿವನ ಮೌನದ ಸುಖ, ಮಾತಿಲ್ಲದವನ ಸುಖ ಉಣ್ಣಲು 'ಐದೆ' ಗೆ ಬರಲಿಲ್ಲ!

ಕಪಿಲಸಿದ್ಧ ಮಲ್ಲಿನಾಥನ ಬಾಯಲ್ಲಿದ್ದು ಭೋಗಿಯಾದ ಮಾತಿನ ಮಲ್ಲಿಗೆ ಆತನ ವಿದ್ಯೆ ನಾಟಬೇಕಲ್ಲ? ಶಿವ-ಶಿವೆಯರ ಬಿನ್ನಾಣದ ಈ ಆಟವನ್ನು ಸಾಕ್ಷಿಯಾಗಿ ನೋಡಲು ಕಾಯಕ್ಕೆ ಬರಬೇಕಲ್ಲ?

ಇವರಿಬ್ಬರನ್ನು ಹೊತ್ತ ಕಾಯ ಸುಂದರ. ಅದರ 'ಕೈ' ಸುಂದರ. ಅದರ ಐದು ಭಾಗಗಳೂ'ಐದೆ' ಬಿನ್ನಾಣಿಕೆಯನು ತಾ ಕಂಡಯ್ಯಾ ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**354**

**ಐ ನಾ ಯೆಂಬ ಅಕ್ಷರದ ಭೇದವನರಿತಡೆ**
**ಅಪ್ಪುದರಿದೊಂದೂ ಇಲ್ಲ.**
**ಸೀಮೆಯ ಮೀರಿದ ಸಂಬಂಧ**
**ಸಂಬಂಧವ ಮೀರಿದ ಸೀಮೆ, ಅನುಮತವ ಮೀರಿದ ಅಧಿಕ್ಯ**
**ಅಕ್ಷರವೆರಡರ ಅಧಿಕಾರ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಸಂಯೋಗ.**

ಒಂದಕ್ಷರ ಅಂಗವನ್ನು ಅದರ ಐದು ಭಾಗಗಳನ್ನು ಸೂಚಿಸಿದರೆ ಮತ್ತೊಂದು ಅಕ್ಷರ ಅದು ನಾನು ಎಂದು ಹೇಳುತ್ತದೆ. ಅಂಗ ನಾನು ಎಂದು ಹೇಳುವ ಅಹಂಕಾರಿ ಮನ ಅಂಗದೊಂದಿಗೆ ಸಂಬಂಧ ಮಾಡಿದೆ. ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗಯ್ಯನನ್ನೇ ಮರೆತು ಹೋಗಿದೆ.

ಸ್ವರ್ಗಕ್ಕೆ ನಿಮ್ಮಲ್ಲಿ ಯಾರಾದರೂ ಹೋಗಬಹುದೆ ಎಂದು ಶಿಷ್ಯರನ್ನು ಗುರುಗಳು ಪ್ರಶ್ನಿಸಿದಾಗ ಕನಕದಾಸರು ಎದ್ದು ನಿಂತು ಗುರುಗಳೆ, 'ನಾ' ಹೋದರೆ ಹೋಗಬಹುದು ಎಂದರಂತೆ. ಕಾಯ 'ನಾನು' ಎನ್ನುವ ಅಹಂಕಾರ ಹೋದರೆ ಕಾಯವೇ ಕೈಲಾಸವಾಗುತ್ತದೆ

'ನಾನು' ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನೊಂದಿಗೆ ಸಂಗ ಮಾಡಬೇಕಾಗಿತ್ತು. ಆದರೆ 'ನಾನು' ಎಂಬ ಮನ ಅಂಗದೊಂದಿಗೆ ಸಂಗ ಮಾಡಿದೆ. ಅರಿವೆಂಬ ಗುರುದೇವರು ವಾಸ ಮಾಡಿದ ಅಂಗವನ್ನು ತನ್ನ ಅಜ್ಞಾನದ ಸುಖದುಃಖಗಳಿಗೆ ಬಳಸಿಕೊಂಡಿದೆ.

ಅರಿವೆಂಬ ಗುರುದೇವರು ಜಗದಗಲ ಮುಗಿಲಗಲ. ಮಿಗೆಯಗಲ ಪಾತಾಳದಿಂದಲೂ ಅತ್ತತ್ತ ಆತನ ಶ್ರೀಪಾದ. ಬ್ರಹ್ಮಾಂಡದಿಂದಲೂ ಅತ್ತತ್ತ ಆತನ ಶ್ರೀಮುಕುಟ. ಅಗಮ್ಯ; ಆತ ಯಾರ ಗಮನಕ್ಕೂ ನಿಲುಕದ ಅವ್ಯಕ್ತನು ಅಗೋಚರನು ಆಗಿದ್ದಾನೆ. ಯಾರೂ ಪ್ರಾಮಾಣಿಸಲು ಬಾರದಂತಹ ಅಪ್ರಮಾಣನು ಆಗಿದ್ದಾನೆ. ಅಂತಹ ಅರಿವೆಂಬ ಸದ್ಗುರುದೇವನು ಸರ್ವಾಂಗದಲ್ಲಿ ಬಂದು ಚುಳುಕಾಗಿ ವಿರಾಟ ಸ್ವರೂಪನೇ ತಾನಾಗಿದ್ದಾನೆ.

ಅಂಗದಲ್ಲಿ ಸಂಗಮವಾದ ಅಕ್ಷರೋತ್ತಮನನ್ನು ಅಕ್ಷರಗಳಿಂದ ಅಳೆಯಲು ಸಾಧ್ಯವೆ? 'ಐದು' ಇಂದ್ರಿಯಗಳು 'ನಾನು' ಅವು ನನ್ನವು ಎನ್ನಲು ಹೋದರೆ ಐದು ಭೂತಗಳನ್ನು ಅಂಗದಲ್ಲಿ ಚುಳುಕಾಗಿಸಿದ್ದಾನೆ. 'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ, ನಿಮ್ಮ ದಾನವನು ಉಂಡ ಕುನ್ನಿ 'ನಾನು'. ನಾನು ಎನ್ನುವ ಅಹಂಕಾರ ನನ್ನಲ್ಲಿ ನಷ್ಟ ಆಗದಿದ್ದರೆ ನೀ ಕೊಡಮಾಡಿದ ಅಂಗ ನನ್ನ ಅಹಂಕಾರಕ್ಕೆ ಮಾತ್ರ ಬಳಕೆ ಆಗುತ್ತದೆ. ನನ್ನ ಸುಖದುಃಖಗಳಿಗೆ ಮಾತ್ರ ಬಳಕೆ ಆಗುತ್ತದೆ. ಐದು, ಆರು, ಏಳೆಂಟು ಜನ ನನ್ನ ಸಂಬಂಧಿಗಳಿಗೆ ಮಾತ್ರ ಬಳಕೆಯಾಗುತ್ತದೆ.

ಸೀಮೆಯ ಮೀರಿದ ನಿನ್ನ ಸೀಮಾತೀತ ಸಂಬಂಧವೆತ್ತ? ನನ್ನ ಸಂಬಂಧವೆತ್ತ? ಅಪ್ಪುದು ಅರಿದುದು ಒಂದೂ ಇಲ್ಲ. ಅಕ್ಷರವೆರಡರ ಅಧಿಕಾರ ನೆಲ ಕಚ್ಚಿದಾಗಲೇ ಕಪಿಲಸಿದ್ಧ ಮಲ್ಲಿಕಾರ್ಜುನನ ಸಂಯೋಗ!

ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿನ್ನ ದರುಶನದಿಂದ 'ಐ' 'ನಾ' ಎಂಬ ಎರಡಕ್ಷರದ ಭೇದವನು ಅರಿತೆ, ಐದು ಇಂದ್ರಿಯಗಳು ನನ್ನವಲ್ಲ; ಅವು ನಿನ್ನ ಜ್ಯೋತಿರ್ಲಿಂಗಗಳು. ಆ ಜ್ಯೋತಿರ್ಲಿಂಗಗಳಲ್ಲಿ 'ನಾನು' ಸಂಗಮವಾಗಿ ನನ್ನ ಅಜ್ಞಾನದ ಅಹಂಕಾರದ ಕತ್ತಲನ್ನು ಕಳೆದುಕೊಂಡೆ ನನ್ನ ಸೀಮೆಯ ಮೀರಿದ ನಿನ್ನ ಸೀಮಾತೀತದ ಸಂಬಂಧವನ್ನು ಪಡೆದುಕೊಂಡೆ ತಂದೆ; ಕಪಿಲಸಿದ್ಧ ಮಲ್ಲಿಕಾರ್ಜುನನೇ.

355

**ಐ ಬ್ರಹ್ಮದಿಂದತ್ತಲಾದ ಸೀಮೆಯ,**
**ಆ ಸೀಮೆಯ ಮೀರಿದ ಸಂಬಂಧ,**
**ಆ ಸಂಬಂಧ ಅಯ್ಯನ ರೂಪು,**
**ಆ ಅಯ್ಯ ವಾಙ್ಮನಕ್ಕ ಗೋಚರನೆಂಬರು.**
**ಆ ಅಯ್ಯ ಭಕ್ತ ಕಾರಣ ಪರಶಿವಮೂರ್ತಿಯೆಂದೆಂಬರು.**
**ಆವುದು ಹುಸಿ? ಆವುದು ದಿಟ?**

**ಈ ಉಭಯದ ಸಂಸಿದ್ಧವ ನಿನ್ನವರು ನೀವು ಬಲ್ಲಿರಿ,**
**ಆನೇಕೆಂದರಿಯೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪಂಚೇಂದ್ರಿಯಗಳನ್ನು ತನ್ನ ಸ್ವಾಧೀನಪಡಿಸಿಕೊಂಡು ಅಲ್ಲಿ ತನ್ನ ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದ ಮನ, ತನಗೆ ಇಚ್ಛೆಯಾದಂತೆ ನೋಡುತ್ತದೆ. ತನಗೆ ಇಚ್ಛೆಯಾದಂತೆ ಕೇಳುತ್ತದೆ. ತನಗೆ ಇಚ್ಛೆಬಂದಂತೆ ಮುಟ್ಟಿ ಮೂಸಿಸಿ ರುಚಿಸುತ್ತದೆ. ತನಗೆ ಇಚ್ಛೆಬಂದಂತೆ ಸಂಬಂಧ ಕಲ್ಪಿಸಿಕೊಂಡು ಭಾವಿಸಿ ಭ್ರಮಿಸುತ್ತದೆ.

ಮನವೆಂಬುದು ಭ್ರಮಾಲೋಕದ ಬ್ರಹ್ಮ. ಚರ್ಮ ನೋಡಿ ಸಂಬಂಧ ಕಲ್ಪಿಸಿಕೊಂಡು ಸುಖಿಸುವುದು ಅದರ ಸೀಮೆ. ಚರ್ಮದೊಂದಿಗೆ ಚರ್ಮವನ್ನು ಸ್ಪರ್ಶಿಸಿ ಸುಖಿಸುವುದು ಅದರ ಕೆಲಸ.

ಚರ್ಮದಲ್ಲಿಯೇ ವಾಸಮಾಡಿ; ಆ ಚರ್ಮವನ್ನೇ ಸುತ್ತಿಕೊಂಡು, ವಾಂಙ್ಮನಕ್ಕೆ ಅಗೋಚರವಾದ ಆ ಪರಶಿವಮೂರ್ತಿಯ ಕೆಲಸವೇ ಬೇರೆ. ಆತನನ್ನು ಚರ್ಮಾಂಬರಿ ಎಂದು ಕರೆಯುವರು.

ಚರ್ಮದಲ್ಲಿಯ ಹೆಣ್ಣು ಗಂಡು ಎಂಬ ಅಜ್ಞಾನವನ್ನು ತಾನೇ ಸುತ್ತಿಕೊಂಡು; ಅದನ್ನೇ ಕೈಲಾಸವನ್ನಾಗಿಸಿದ ಕೈಲಾಸವಾಸಿಯಾತ. ಸಕಲ ಕಾಯಗಳೂ ಕೈಲಾಸ! ಕಾಯವನ್ನು ಆವರಿಸಿದ ಮನವೆಂಬ ಮಾಯೆಗೆ ಕಾಯ ಕಾಣುತ್ತದೆ; ಹೆಣ್ಣು ಗಂಡೆಂಬ ಅಜ್ಞಾನ ಕಾಣುತ್ತದೆ. ರೂಪ ಕುರೂಪ ಕಾಣುತ್ತದೆ. ಶ್ರೀಮಂತ ಬಡವ ಕಾಣುತ್ತಾನೆ. ಭಿಕ್ಷುಕ ದರಿದ್ರ ಕಾಣುತ್ತಾನೆ. ಅಧಿಕಾರಿ ಜವಾನ ಸೇವಕ ಕಾಣುತ್ತಾನೆ. ಮಂತ್ರಿ ಶಾಸಕ ಪ್ರಧಾನಿ ಕಾಣುತ್ತಾನೆ. ಕಾಗದ ಕರೆನ್ಸಿಯಾಗಿ, ಲೋಹ ಚಿನ್ನವಾಗಿ ಕಾಣುತ್ತದೆ. ಕರೆನ್ಸಿ ಚಿನ್ನವುಳ್ಳ ಕಾಯವನ್ನು ಕಾಯದ ಮೂಲಕ ಕೊಂದು ಕಾಯವನ್ನು ಆವರಿಸಿದ ಮನವೆಂಬ ಮಾಯೆ ಕಾಯದಲ್ಲಿ ತನ್ನ ಭ್ರಮಾ ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದೆ. ನಾನೇ ಬ್ರಹ್ಮ ಎಂಬ ಅಜ್ಞಾನದ ಸೀಮೆಯನ್ನು ಅದು ದಾಟುವುದೇ ಇಲ್ಲ. ಏನಿದ್ದರೂ ಆ ಚರ್ಮದ ಸೀಮೆಯೊಳಗೇ ತನ್ನ ವಾಸ.

ಚರ್ಮದಲ್ಲಿಯೇ ವಾಸಮಾಡಿದ ಪರಶಿವಮೂರ್ತಿಯ ಇರುವಿಕೆಯೇ ಬೇರೆ. ಚರ್ಮವನ್ನೇ ಕೈಲಾಸಮಾಡಿಕೊಂಡು; ಮನ ಹೊದ್ದುಕೊಂಡ ಅಜ್ಞಾನದ ಚರ್ಮವನ್ನು ತಾನುಟ್ಟುಕೊಂಡು ಅದರ ಆಟವನ್ನು ಗಮನಿಸುತ್ತಾ; ಅದಕ್ಕೆ ಪಾಠ ಮಾಡುತ್ತಾ; ಮನವೆಂಬ ಮಾಯೆಯ ಸಂಬಂಧ ಮೀರಿದ ನಿಸ್ಸೀಮ ಸಂಬಂಧವನ್ನು ಚರ್ಮದಲ್ಲಿ ಸೃಷ್ಟಿಸಿದ್ದಾನೆ.

ಕಾಯ, ಕಾಯವನ್ನು ಮುಟ್ಟಿದರೆ ಸಾಕು. ಕಾಯವನ್ನು ಆವರಿಸಿದ ಮನವೆಂಬ ಮಾಯೆಯ ಕಾಯಕ ಕಾಯದಲ್ಲಿಯೇ ಸೃಷ್ಟಿಯಾಗಿ ಕಾಯ ಕಾಮಕ್ಕೆ ತುತ್ತಾಗುತ್ತದೆ; ಕ್ರೋಧ ಲೋಭ ಮೋಹ ಮದ ಮತ್ಸರಗಳು ಸೃಷ್ಟಿಯಾಗುತ್ತವೆ. ಸಪ್ತವ್ಯಸನಗಳು, ಅಷ್ಟಮದಗಳು ಕಾಯದಲ್ಲಿಯೇ ಹುಟ್ಟಿ ಕಾಯ, ಕಾಯವನ್ನೇ ಹರಿದು ತಿನ್ನುತ್ತದೆ.

ಕಾಯದಿಂದ ಕಾಯವನ್ನು ನೋಡಲು ಬರುವುದಿಲ್ಲ, ಮುಟ್ಟಲು ಬರುವುದಿಲ್ಲ, ಕೇಳಲು ಬರುವುದಿಲ್ಲ, ರುಚಿಸಿ ಮೂಸಿಸಲು ಬರುವುದಿಲ್ಲ ಎಂದರೆ ಕಾಯವನ್ನು ಕಾಯ ಎನ್ನಲು ಸಾಧ್ಯವೆ? ಇದು ಕಾಯವನ್ನು ಆವರಿಸಿದ ಮನವೆಂಬ ಮಾಯೆಯ 'ಐ' ಬ್ರಹ್ಮನ ಕಾಯಕ. ಭ್ರಮೆಯ ಕಾಯಕ.

ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಕಾಯಕವೇ ಬೇರೆ. ಆತನ ಕಾಯವೂ ಬೇರೆ!

‘ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ? ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯಾ? ಘ್ರಾಣದೊಳಗೆ ಘ್ರಾಣವಿದ್ದು ವಾಸಿಸಲೇಕರಿಯರಯ್ಯಾ? ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯಾ? ಸ್ಪರ್ಶನದೊಳಗೆ ಸ್ಪರ್ಶನವಿದ್ದು ಮುಟ್ಟಲೇಕರಿಯರಯ್ಯಾ? ಪ್ರಾಣದೊಳಗೆ ಪ್ರಾಣವಿದ್ದು ನೆನೆಯಲೇಕರಿಯರಯ್ಯಾ? ಕಾಯದೊಳಗೆ ಕಾಯವಿದ್ದು ಬಿಡದು, ಬೇರಾಗದು. ಕೂಡಲಸಂಗಮದೇವಾ, ನೀನಿಕ್ಕಿದ ಅಣಕದ ಭೇದವ ಭೇದಿಸಬಾರದಯ್ಯಾ’.

ಕಣ್ಣೊಳಗೊಂದು ಕಣ್ಣಿದೆ; ಒಂದು ಕುರುಡು ಕಣ್ಣು ಅಜ್ಞಾನದ ಕಣ್ಣು. ಮತ್ತೊಂದು ಮುಕ್ಕಣ್ಣನ ಕಣ್ಣು. ಕಣ್ಣು ಇವೆರಡೂ ಕಣ್ಣುಗಳಿಗೆ ಉಪಕರಣವಾಗಿದೆ.

ಅಜ್ಞಾನದ ಕಣ್ಣು ರೂಪ ನೋಡಿ ಆ ರೂಪದೊಂದಿಗೆ ಭೋಗಿಸಲು ಹೋದರೆ ಮುಕ್ಕಣ್ಣನ ಕಣ್ಣು, ನೀನು ಸರಿಯಾಗಿ ನೋಡುತ್ತಿಲ್ಲ ನಿನ್ನದು ಅಜ್ಞಾನದ ಕೆಲಸ ಎಂದು ಕಣ್ಣಿಗೆ ಕಣ್ಣಿನ ಮೂಲಕ ಭೋದೆ ಮಾಡುತ್ತದೆ. ಹೀಗೆ ಐದು ಇಂದ್ರಿಯಗಳಲ್ಲಿಯೇ ಇಂದ್ರಿಯಾತೀತ ಸಂಬಂಧ ಸಂಗಮವಾಗಿದೆ. ಇದಕ್ಕೆ ಕಾಯ ಸಾಕ್ಷಿಯಾಗಿದೆ.

ಯಾವುದು ಸತ್ಯ? ಯಾವುದು ಸುಳ್ಳು? ಎಂದು ಕಾಯವೇ ನಿರ್ಧರಿಸಬೇಕಾಗಿದೆ.

ಅಜ್ಞಾನದ ಕಣ್ಣು ಅರಿವಿನ ಕಣ್ಣಿಗೆ ಶರಣು ಹೋಗಬೇಕಾಗಿದೆ. ಕಣ್ಣೊಳಗೊಂದು ಅರಿವಿನ ಕಣ್ಣಿದೆ; ಅದನ್ನು ಅಜ್ಞಾನದ ಕಣ್ಣಿನಿಂದಲೇ ಕಂಡು ಅರಿವಿನ ಕಣ್ಣಿಗೆ ಶರಣು ಹೋಗುವವನೇ ಶರಣ.

ಈ ಉಭಯದ ಸಂಸಿದ್ಧವ ನಿನ್ನವರು ನೀವು ಬಲ್ಲಿರಿ, ಆನೇಕೆಂದರಿಯೆ ಕಪಿಲಸಿದ್ಧ ಮಲ್ಲಿಕಾರ್ಜುನಾ:

ಅರಿವಿನ ಕಾಯವನ್ನು ಕಾಯವನ್ನು ಆವರಿಸಿದ ಮಾಯಾಮಯವಾದ ಮನೋಕಾಯದ ಮೂಲಕವೇ ಅರಿತು; ಅರಿವೆಂಬ ಗುರುದೇವನ ಕಾಯಕ್ಕೆ ಶರಣು ಹೋಗಿ ಶರಣನೇ ತಾನಾಗುವ ಕಲೆಯನ್ನು ಶರಣರು ಮಾತ್ರ ಬಲ್ಲರು. ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಮಾತ್ರ ಬಲ್ಲನು. ಉಳಿದ ಕಾಯಗಳು ಬೂಟಾಟಿಕೆಯ ಕಾಯಗಳು. ಕಾಯಕ್ಕೆ ಕಾವಿ ಹೊದ್ದು ಮಠ ಪೀಠಗಳ ಮೇಲೆ ಕುಳಿತ ಮಾಯಾಮಯವಾದ ಕಾಯಗಳು.

ಅರಿವೆಂಬ ಗುರುದೇವನೇ ವಾಸಮಾಡಿದ ಕಾಯವನ್ನು, ಕಾಯವನ್ನು ಆವರಿಸಿದ ಮನೋಕಾಯವೇ ಮೋಸಮಾಡುತ್ತಿರುವಾಗ ಇನ್ನು ಉಳಿದ ಕಾಯಗಳನ್ನು ಕಾಯದಲ್ಲಿಯೇ ಸಂಗಮವಾದ ಗುರುದೇವನೇ ಕಾಯಬೇಕು.

**356**

**ಐವರ ಎನ್ನ ದುಃಖ,**
**ನಿನ್ನ ಅಡಿ ಮಸ್ತಕದಲೆ ಇದ್ದಲ್ಲಿ**
**ಹುಟ್ಟು ಹೊಂದಿಲ್ಲದೆ ಹೋಗು.**
**ಅಯ್ಯ, ನಿನ್ನ ದೆಸೆಗರಸುತ್ತಲಿದ್ದೇನೆ**
**ಕವಿಲೆಯ ಕಂದನಂತೆ.**
**ನಾನಿದ್ದೇನೆಂದು ಬಾರಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನ ದುಃಖ ಅಷ್ಟಿಷ್ಟಲ್ಲ. ನಿರಂತರ ದುಃಖ ಅನುಭವಿಸುತ್ತದೆ. ಇರುಳೊಂದೆ ಸಕಲ

ಸುಖ ದುಃಖಗಳನ್ನು ಮರೆತು ಪರಮ ಸುಖದೊಂದಿಗೆ ನಿದ್ರಿಸುತ್ತದೆ.

ನಿದ್ರಿಸುವ ತನು ಬಲು ಜಾಣ. ಅದು ಹೆಣ್ಣೆಂಬುದನ್ನು ಗಂಡೆಂಬುದನ್ನು ಮರೆತು ನಿದ್ರಿಸುತ್ತದೆ. ಅಷ್ಟೇ ಏಕೆ? ತಾನು ಯಾರು? ತನ್ನ ಹೆಸರೇನು? ತನ್ನ ಜಾತಿ ಮತ ಧರ್ಮವನ್ನು ಕೂಡಾ ಮರೆತಿರುತ್ತದೆ. ತನ್ನ ಅಧಿಕಾರದ ದರ್ಪ ಅಹಂಕಾರಗಳನ್ನು ಸಹಿತ ಮರೆತಿರುತ್ತದೆ. ಶಾಸಕ ಸಚಿವ ಪ್ರಧಾನಿ ರಾಷ್ಟ್ರಾಧ್ಯಕ್ಷ ಎನ್ನುವುದನ್ನು ಮರೆತಿರುತ್ತದೆ. ಏಕೆಂದರೆ ಅದರ ಅಜ್ಞಾನದ ಐದು ತಲೆಗಳು ಮತ್ತು ಮಸ್ತಕಗಳು ಪರಮಾತ್ಮನ, ಅರಿವೆಂಬ ಗುರುದೇವನ ಅಡಿದಾವರೆಗಳಲ್ಲಿ ಒರಗಿರುತ್ತವೆ.

ಹುಟ್ಟು ಸಾವುಗಳ ಭಯವಿಲ್ಲದೆ ಇರುಳಿನಲ್ಲಿ ಭಗವಂತನೊಂದಿಗೆ ಮಲಗಿದ ತನು ಎಚ್ಚರವಾದ ಮೇಲೆ ಪುನಹ ತನ್ನ ಹಗಲಿನ ಸುಳ್ಳು ಸುಖಗಳು ಸುಳ್ಳು ದುಃಖಗಳು ತನುವನ್ನು ಕಾಡಲು ಶುರು ಮಾಡುತ್ತವೆ.

ಇರುಳು ಸುಖವಾಗಿ ಇದ್ದ ನೆನಪು ಹಗಲಾಗುವುದರೊಳಗೆ ಮರೆತು ಹೋಗುತ್ತದೆ. ಜ್ಞಾನಿ ಎಂಬುದನ್ನು ಮರೆತುದಕ್ಕಾಗಿ ಅದಕ್ಕೆ ಜಾಗ್ರತದಲ್ಲಿ ಸುಳ್ಳು ಸುಖ; ಸುಳ್ಳು ದುಃಖ. ರಾತ್ರಿ ಸುಖಿಸಿದಂತೆ ಹಗಲು ಕೂಡಾ ಇರಬಹುದಲ್ಲಾ ಎಂದು ಚಿಂತಿಸಿದರೆ ಸಾಕು; ಆ ಚಿಂತನೆಗೆ ಒಳಗಾದರೆ ಸಾಕು ಅರಿವೆಂಬ ಗುರುದೇವ ತನುವಿನ ಸಹಾಯಕ್ಕೆ ಬರುತ್ತಾನೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಈ ಐವರಿಂದಲೆ ಎನಗೆ ದುಃಖ. ಈ ಐವರಿಂದಲೇ ಎನಗೆ ಸುಖ. ಇವೆರಡೂ ಸುಳ್ಳು ಎಂದು ನನಗೆ ಗೊತ್ತಿಲ್ಲ. ಏಕೆಂದರೆ ನಿನ್ನ ಅರಿವಿನ ಪಾದದಲ್ಲಿ ನನ್ನ ತಲೆ ಮತ್ತು ಮಸ್ತಕ ಇದೆ ಎಂಬುದೂ ನನಗೆ ಗೊತ್ತಿಲ್ಲ. ಹೀಗಾಗಿ ಹುಟ್ಟು ಸಾವುಗಳ ಕಷ್ಟ ಅನುಭವಿಸುತ್ತಿದ್ದೇನೆ.

ಅಯ್ಯ, ನಿನ್ನ ದೆಸೆಯಲ್ಲಿದ್ದೂ ನಿನ್ನ ದೆಸೆಗಾಗಿ ಹಗಲಿರುಳೆನ್ನದೆ ಹುಡುಕುತ್ತಲಿದ್ದೇನೆ. ಕವಿಲೆಯ ಕಂದನಂತೆ :

ನನಗೇನು ಗೊತ್ತು? ಕಂದು ಬಣ್ಣದ ಹಸು ನಾನು. ನಿನ್ನ ಅರಿವಿನ ಬೆಳಕಿನಿಂದ ಹುಟ್ಟಿದ ಕವಿಲೆ ನಾನು. ನನ್ನನ್ನು ಹಡೆದು ನನ್ನೊಳಗೆ ಮನೆ ಮಾಡಿದ ಪಶುಪತಿ ನೀನು. ನಾನಿದ್ದೇನೆಂದು ಬಂದು ನೀನು ಹರಸುವವರೆಗೆ ನನ್ನ ಅಂಧಕಾರದ ಕತ್ತಲು ಕಳೆಯುವುದಿಲ್ಲ; ನನ್ನ ಮರೆವಿನ ಕತ್ತಲು ಕಳೆದು ಅರಿವಾಗುವುದಿಲ್ಲ. ನಿನ್ನಲ್ಲಿ ನಾನಿದ್ದೇನೆಂದು ಬಂದು ನನ್ನನ್ನು ಬಿಗಿದಪ್ಪಿಕೊಳ್ಳಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

**357**

**ಐವರ ಸಂಗಡ ಉದಯದಲಿ ಹೊರವಂಟಿರಾದೊಡೆ, ಕೇಳಿರಣ್ಣಾ,**
**ಮಧ್ಯಾಹ್ನಕ್ಕೆ ಬಂದಿರಾದಡೆ,**
**ಕಳೆಯುಳಿದು ಕಳೆಯ ನಿಂದಿರಾದಡೆ,**
**ಬಟ್ಟೆ ಸರಿಸ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿಗೆ ಹೋಯಿತ್ತು.**

ದೇವಾಲಯದ ಗರ್ಭಗುಡಿಯ ಎದುರುಗಡೆ ಒಂದು ಆಮೆಯ ಚಿತ್ರವನ್ನು ಕಲ್ಲಿನಲ್ಲಿ ಕೆತ್ತಿರುತ್ತಾರೆ. ಹಾಗೆ ಕೆತ್ತಿಸಲು ಹೇಳಿದ ವ್ಯಕ್ತಿ, ಕೆತ್ತಿದ ವ್ಯಕ್ತಿಗಳಿಬ್ಬರೂ ಸುಂದರವಾದ ಅರಿವಿನ ಸಂಕೇತವನ್ನು ಬಿಟ್ಟು ಹೋಗಿದ್ದಾರೆ. ದೇವಾಲಯ ಕೂಡಾ ಒಂದು ಅರಿವಿನ ಸಂಕೇತ; ಅಂಗದ ಮೇಲೆ ಧರಿಸಿದ ಲಿಂಗ ಹೇಗೆ ಒಂದು ಅರಿವಿನ ಪರಿಕರವೋ ಹಾಗೆಯೇ ದೇವಾಲಯವೂ ಕೂಡಾ.

ಅಂಗವೇ ಒಂದು ದೇವಾಲಯ! ಅದರಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನನ್ನು ನೋಡಲು, ಆರಾಧಿಸಲು ದೇಹ ಮತ್ತು ದೇಹವನ್ನು ಆವರಿಸಿದ ಮನ ಸಹಾಯ ಮಾಡಬೇಕು. ಬೆಳಕಾದರೆ ಸಾಕು ಮನ ದೇಹದೊಂದಿಗೆ, ಪಂಚೇಂದ್ರಿಯಗಳೊಂದಿಗೆ ವಿಹಾರಕ್ಕೆ ಹೊರಡುತ್ತದೆ.

ನೋಡಿದರೆ, ಕೇಳಿದರೆ, ಮೂಸಿಸಿ, ರುಚಿಸಿದರೆ, ಮುಟ್ಟಿದರೆ, ಭಾವಿಸಿದರೆ, ನೆನೆದರೆ ಪಂಚೇಂದ್ರಿಯಗಳು ದೇಹದೊಂದಿಗೆ ಹಾದರಕ್ಕೆ ನಿಲ್ಲುತ್ತವೆ. ತಂತಾನೆ ದೇಹ ಆಪತ್ಕಾಲದ ಅಜ್ಞಾನ ಕೂಪದಲ್ಲಿ ಮುಳುಗುತ್ತದೆ.

ದೇಹಕ್ಕೆ ತಾನು ದೇವಾಲಯ, ತನ್ನೊಳಗೆ ಅರಿವಿನ ದೇವರಿದ್ದಾನೆ, ಎಂದು ದೇಹಕ್ಕೆ ಎಚ್ಚರವಾದರೆ ಪಂಚೇಂದ್ರಿಯಗಳನ್ನು ಆಮೆಯಂತೆ ಜ್ಞಾನೇಂದ್ರಿಯಗಳೊಳಗೆ ಸೆಳೆದುಕೊಂಡು ಬರೀ ಚಿಪ್ಪನ್ನು ಮಾತ್ರ ಹೊರಗೆ ಬಿಡುತ್ತದೆ. ಆಮೆಯ ಚಿಪ್ಪು ಜಡ; ಅದರ ಐದು ಭಾಗಗಳು ಚೇತನ!

ಉದಯದಲ್ಲಿ ಹೊರ ವಂಟರೂ ದೇಹಕ್ಕೆ ಏನೂ ತೊಂದರೆಯಾಗುವುದಿಲ್ಲ. ರಾತ್ರಿಯಲ್ಲಿ ಮಲಗಿದಾಗಲೂ ಏನೂ ಅರಿಯದಂತೆ ದೇಹ ಅರಿವಿನೊಂದಿಗೆ ಮಲಗಿ ನಿದ್ರಿಸುತ್ತಿತ್ತು. ಹೆಣ್ಣು ಗಂಡು ಜಾತಿ ಮತ ಹುದ್ದೆ ಸ್ಥಿತಿ-ಗತಿಗಳ ಪರಿಚಯವನ್ನು ದೇಹ ರಾತ್ರಿ ಮರೆತು ಹೋಗಿತ್ತು. ರಾತ್ರಿ ತನ್ನ ಅರಿವಿನ ಸ್ಥಿತಿಯಲ್ಲಿದ್ದ ದೇಹ ಆಮೆಯಂತೆ ಮಲಗಿತ್ತು.

ಉದಯದಲ್ಲಿ ಹೊರವಂಟು ಮಧ್ಯಾಹ್ನ ಬರುವುದರೊಳಗೆ ಅದರ ಅರಿವಿನ ಕಳೆಯನ್ನು ಕಳೆದುಕೊಂಡು ಜೋಲು ಮೋರೆಯಲ್ಲಿ ನಿಂದಿತ್ತು. ಎಚ್ಚರದಲ್ಲಿದ್ದಾಗ ದೇಹದ ಚೈತನ್ಯ ಇಮ್ಮಡಿಗೊಳ್ಳಬೇಕಿತ್ತು. ಆದರೆ ಮಲಗಿದಾಗ ಇದ್ದಂತೆ ಎಚ್ಚರದಲ್ಲಿ ಇಲ್ಲ. ಇದು ದೇಹ ಮತ್ತು ದೇಹದ ಸಂಗ ಮಾಡಿದ ಮನದ ಹಣೆಬರಹ. ಎಚ್ಚರದಲ್ಲಿದ್ದಾಗ ಅಜ್ಞಾನದ ಸುಖದಲ್ಲಿ ಜಾರಬೇಕೆಂದು ದೇಹ ಮತ್ತು ಮನ ನಿರ್ಧರಿಸಿದರೆ ಯಾರು ಏನು ಮಾಡಿಯಾರು? ತನ್ನ ಹಣೆಬರಹ ತಾನೇ ಬರೆದುಕೊಂಡಿದೆ; ಇರುಳಲ್ಲಿ ಇಲ್ಲದ ಅಜ್ಞಾನ ಉದಯದಲ್ಲಿ ಏಕೆ ಕಾಡುತ್ತಲಿದೆ? ಎಂದು ಅರಿವಿನಿಂದ ಆಲೋಚನೆ ಮಾಡಿ ಅರಿವಿನ ನಿರ್ಧಾರಕ್ಕೆ ಬರಬೇಕು.

ಉದಯದಲ್ಲಿ ಐವರು ಅರಿವಿನ ಹಿರಿಯರೊಡನೆ ಹೊರವಂಟು ಮಧ್ಯಾಹ್ನಕ್ಕೆ ಬರುವುದರೊಳಗಾಗಿ ಅಜ್ಞಾನದ ಕಳೆಯನು ಅಳಿದು ಅರಿವಿನ ಕಳೆಯಲ್ಲಿ ಹಸನ್ಮುಖಿಯಾಗಿ ನಿಲ್ಲಬೇಕು. ಅಜ್ಞಾನದ ಬಟ್ಟೆ ಸರಿಸಿ, ಅರಿವಿನ ಬಟ್ಟೆಯಲ್ಲಿ ನಡೆದೊಡೆ ದೇಹವೇ ಕಪಿಲಸಿದ್ಧ ಮಲ್ಲಯ್ಯನ ಆಲಯ!

**358**

**ಒಂದ ತೋರಿದಡದರ ಹಿಂದು ಮುಂದರಿದನೈ**
**ಸಂದುಗೆಟ್ಟಾನಂದ ಸಕಲ ನಿಷ್ಕಲದಲ್ಲಿ.**
**ಮುಂದಿಪ್ಪ ಬ್ರಹ್ಮಾಂಡದಂತರವನು ಅರಿದಾತ**
**ಆನಂದಮಯ ಶಿಷ್ಯನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುದೇವ ಒಂದು ಎಳೆ ತೋರಿಸಿದರೆ ಸಾಕು ಹಚ್ಚಡವನ್ನೇ ನುಂಗುವ ಶಿಷ್ಯರು ಕೆಲವರೇ ಇರುತ್ತಾರೆ. ಅಂತವರನ್ನು ಪ್ರಥಮ ಅಧಿಕಾರಿ ಎಂದು ಕರೆಯುತ್ತಾರೆ.

ಒಂದ ತೋರಿದಡದರ ಹಿಂದು ಮುಂದರಿದನೈ ಸಂದುಗೆಟ್ಟಾನಂದ ಸಕಲ ನಿಷ್ಕಲದಲ್ಲಿ:

ಜಾಣ ಶಿಷ್ಯನಿಗೆ ಎರಡರ ಮಗ್ಗಿ ಕಲಿಸಿದರೆ ಸಾಕು ಇಪ್ಪತ್ತರವರೆಗೆ ಮಗ್ಗಿ ಬರೆದು

ಗುರುದೇವನಿಗೆ ತೋರಿಸುತ್ತಾನೆ. ಹಾಗೆಯೇ ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ತನುವನ್ನು ಆವರಿಸಿದ ಮನವೆಂಬ ಶಿಷ್ಯನಿಗೆ ತೋರಿದರೆ ಸಾಕು ಶಿಷ್ಯ ಸದ್ಗುರುವಿನಲ್ಲಿ ಸಂಗಮವಾಗಿ ಸಂಗಮನಾಥನೇ ತಾನಾಗುತ್ತಾನೆ.

ಶಿಕ್ಷಣ ಎನ್ನುವುದು ಹೊರಗಡೆ ಇಲ್ಲ. ತನುವಿನಲ್ಲಿಯೇ ತನ್ಮಯವಾಗಿದೆ. ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಮರೆವು ಆದುದರಿಂದ ತನುವಿನ ಉಪ ಜೀವನಕ್ಕೆ ಬೇಕಾದ ಶಿಕ್ಷಣವನ್ನು ಮನ ತನುವಿನ ಮೂಲಕ ಪಡೆಯುತ್ತದೆ. ತನುವಿನ ಜೀವನಕ್ಕೆ ಬೇಕಾದ ಶಿಕ್ಷಣವನ್ನು ತನು ಸಂಪೂರ್ಣ ಮರೆತು ಹೋಗಿದೆ.

ಬದುಕುವುದಕ್ಕಾಗಿ, ಭೂಮಿಯ ಮೇಲೆ ಜೀವಿಸಿದ ಯಾವ ಪ್ರಾಣಿ ಪಕ್ಷಿಗಳು ಬದುಕುವುದನ್ನು ಕಲಿಯುವುದಿಲ್ಲ. ಹಸಿವಾದಾಗ ಆಹಾರವನ್ನು ಹುಡುಕುತ್ತಾ ಹೊರಗಡೆ ಹೋಗುತ್ತವೆ. ತಿಂದು ನಿದ್ರಿಸಿ ಆನಂದ ಪಡುತ್ತವೆ. ಆದರೆ ವ್ಯಕ್ತಿ ಮಾತ್ರ ಹಗಲಿರುಳೆನ್ನದೆ ದುಡಿಯುತ್ತಾನೆ.

ದುಡಿದು ದುಡಿದು ದುಡಿಯುವುದರಲ್ಲಿಯೇ ಮಗ್ನನಾಗಿದ್ದಾನೆ. ಕಾಯಕವೆಂದರೆ ದುಡಿಯುವುದಲ್ಲ. ತಿನ್ನುವುದಕ್ಕಾಗಿ ದುಡಿಯುವುದಲ್ಲ. ಕಾಯಕ್ಕಾಗಿ ದುಡಿಯುವುದು. ಕಾಯಕದೊಳಗೊಂದು ಕಾಯವಿದೆ. ಕಾಯವನ್ನು ಆವರಿಸಿದ ಕಾಯವೊಂದಿದೆ. ಕಾಯವನ್ನು ಆವರಿಸಿದ ಕಾಯ, ಕಾಯದೊಳಗೆ ಸಂಗಮವಾದ ಕಾಯಕ್ಕಾಗಿ ಕಾಯಕ ಮಾಡಬೇಕು.

ಕಾಯದ ಮುಂದಿಪ್ಪ ಈ ಕಾಯದಲ್ಲಿ ಬ್ರಹ್ಮಾಂಡವೇ ಅಡಗಿದೆ. ಕೈಲಾಸವೆ ಬಚ್ಚಿಟ್ಟುಕೊಂಡಿದೆ. ಈ ಕಾಯವನ್ನು, ಕಾಯವನ್ನು ಆವರಿಸಿದ ಮನೋಕಾಯದಿಂದಲೇ ಅರಿಯಬೇಕು. ಹಗಲಿರುಳೆನ್ನದೆ ತಿನ್ನುವುದಕ್ಕಾಗಿ ಮಾತ್ರ ದುಡಿದರೆ; ದುಡಿದು ದುಡಿದು ಸ್ಥೂಲಕಾಯಕ್ಕೆ ಮುಪ್ಪು ಆವರಿಸುತ್ತದೆ.

ಕಾಯದಲ್ಲಿ ಸಂಗಮವಾದ ಅರಿವಿನ ಸಂಗಯ್ಯ ಮುಪ್ಪಿನ ಕಾಯವನ್ನು ತಳ್ಳಿ ಬಯಲಾಗಿ ಬಯಲಲ್ಲಿ ಸೇರುತ್ತಾನೆ. ತಿನ್ನುವುದಕ್ಕಾಗಿ ದುಡಿದ ಕಾಯಕ್ಕೆ ಮುಪ್ಪಡರಿ ಮಣ್ಣು ಸೇರುತ್ತದೆ.

'ನೆರೆ ಕೆನ್ನೆಗೆ, ತೆರೆಗಲ್ಲಕೆ, ಶರೀರ ಗೂಡುವೋಗದ ಮುನ್ನ, ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ, ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ ಪೂಜಿಸು ಕೂಡಲಸಂಗಮದೇವನ'.

ಕಾಯದೊಂದಿಗೆ ಅರಿವಿನ ಸಂಗಯ್ಯನನ್ನು ಹುಡುಕಿ ಆತನ ಕಾಯದಲ್ಲಿ ಸಂಗಮವಾಗುವ ಕಾಯಕ ಮಾಡಿದ ಕಾಯವೇ ಜಾಣ ಕಾಯ. ಇಂತಹ ಶ್ರೇಷ್ಠವಾದ ಕಾಯಕ ಮಾಡಲು ಕಾಯ ಜೀವದಿಂದ ಇರಬೇಕಾಗುತ್ತದೆ. ಅರಿವಿನ ಕಾಯದಲ್ಲಿ ಸಂಗಮವಾಗುವ ಕಾಯಕ ಮಾಡುವುದಕ್ಕಾಗಿ ದುಡಿಯಬೇಕೆ ಹೊರತು ತಿನ್ನುವುದಕ್ಕಾಗಿ ದುಡಿಯುವುದಲ್ಲ.

ಕಾಯದ ಮುಂದಿರುವ ಕಾಯದಲ್ಲಿ ಬ್ರಹ್ಮಾಂಡವೇ ಅಡಗಿದೆ. ಅರಿವಿನ ಸಂಪತ್ತು ಭರಿತವಾಗಿದೆ. ಅದನ್ನು ಅರಿತು ಆ ಕಾಯಕ್ಕಾಗಿ ಹಗಲಿರುಳು ದುಡಿಯುವ ಕಾಯವೇ ಶ್ರೇಷ್ಠ ಕಾಯ. ಆನಂದಮಯ ಕಾಯ. ಅದು ಕಪಿಲಸಿದ್ಧ ಅರಿವಿನ ಮಲ್ಲಯ್ಯನಿಗೆ ಬೇಕಾದ ಕಾಯ.

ಒಂದ ತೋರಿದಡದರ ಹಿಂದುಮುಂದರಿದನ್ನೈ ಸಂದುಗೆಟ್ಟಾನಂದ ಸಕಲ ನಿಷ್ಕಲದಲ್ಲಿ:

ಗುರುದೇವ ಒಂದು ಸೂತ್ರ, ಹೇಳುವುದರೊಳಗಾಗಿ ಆ ಸೂತ್ರದ ಹಿಂದುಮುಂದನು ಅರಿದು ಮತ್ತೊಂದು ಸೂತ್ರವನ್ನು ಹಿಡಿದು ತನಗೆ ತಾನೇ ತನ್ನ ಕಾಯವ ಹಿಡಿದು ಅಕಾಯ ಭಕ್ತನಾಗುತ್ತಾನೆ.

ಅರಿವಿನ ಸಂಗಯ್ಯನೆಂಬ ಲಿಂಗಯ್ಯನನ್ನೇ ಪತಿಯನ್ನಾಗಿ ಮಾಡಿಕೊಂಡು ಆತನಿಗೆ ಶರಣು ಹೋಗಿ ಶರಣ ಸತಿಯಾಗುತ್ತಾನೆ. ಶರಣ ಸತಿಯಾಗಿ ಲಿಂಗಪತಿಯಾಗಿ ಸ್ಥೂಲಕಾಯವನ್ನೇ ಕೈಲಾಸವಾಗಿಸಿಕೊಂಡು ಸತಿ-ಪತಿಗಳಿಬ್ಬರು ಅಲ್ಲಿಯೇ ವಾಸ ಮಾಡುತ್ತಾರೆ. ಆಗ ಕಾಯವೇ ಕೈಲಾಸವಾಗುತ್ತದೆ.

ಕಾಯಕವೇ ಕೈಲಾಸವೆಂದು ತಪ್ಪು ತಿಳಿದುಕೊಂಡರೆ ಯಾರು ಏನು ಮಾಡಿಯಾರು? ದುಡಿದು ದುಡಿದು ಸಾಯುವುದು ಅದರ ಹಣೆಯಲ್ಲಿ ಬರೆದುಕೊಂಡಿದೆ. ಅದನ್ನು ತಾನೇ ಕೆಡಿಸಿಕೊಂಡು ಕಾಯ ಆಲೋಚನೆಯಲ್ಲಿ ತೊಡಗಬೇಕು. ಕಾಯ ತನ್ನ ಸ್ವಂತ ವಿಚಾರವನ್ನೇ ಕಳೆದುಕೊಂಡಿದೆ. ಕಾಯಕ್ಕೆ ಯಾವ ಕಾಯಗಳ ಬೋಧೆಯ ಅವಶ್ಯಕತೆಯೂ ಇಲ್ಲ. ನೆರೆಹೊರೆಯ ಕಾಯಗಳು, ಹಡೆದ ಕಾಯಗಳು, ಗುರುಕಾಯಗಳು ಹೇಳಿದ ಮಾತು ಕೇಳಿ ಕೆಟ್ಟಿದೆ. ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರು ಕಾಯವೊಂದಿದೆ; ಆ ಕಾಯ ಹೇಳುವ ಮಾತನ್ನೇ ಕಾಯ ಕೇಳದಂತಾಗಿದೆ.

ಸ್ಥೂಲ ಕಾಯಕ್ಕೂ, ಜ್ಞಾನ ಕಾಯಕ್ಕೂ, ಮನೋಕಾಯಕ್ಕೂ ಅಂತರವಿಲ್ಲ. ಇದು ತ್ರಿಕೂಟ ಸಂಗಮವೆಂದು ಅರಿತ ಕಾಯವೇ ಆನಂದಮಯ ಕಾಯ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**359**

**ಒಂದರಲ್ಲಿ ಓಂಕಾರ ಭವಿಸಿತ್ತು.**
**ಎರಡರಲ್ಲಿ ವ್ಯಾಪ್ತಿ ಭವಿಸಿತ್ತು.**
**ಮೂರರಲ್ಲಿ ಮುಕ್ತ್ಯಂಗನೆಯ ಸಂಗ ಸಮನಿಸಿತ್ತು.**
**ನಾಲ್ಕರಲ್ಲಿ ಆ ಎಂಬ ಅಕ್ಷರದಂತವನರಿದೆ.**
**ಅಯ್ದರಲ್ಲಿ ಆ ಬ್ರಹ್ಮಶುದ್ಧವ ನಿರೀಕ್ಷಿಸಿದೆ.**
**ಆರರಲ್ಲಿ ಅವ್ಯಯ ಅನಿಮಿಷಸ್ಥಾನವ ಕಂಡೆ.**
**ಮೀರಿದೆ ಮೂವತ್ತಾರ,**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ 'ತತ್ವಮಸಿ'**
**ಸಂಗಮದಲ್ಲಿ ಸಂಯೋಗಿಯಾದೆ.**

'ಅ'ಕಾರ 'ಉ'ಕಾರ 'ಮ'ಕಾರವೆಂಬ ಮೂರಕ್ಷರವನ್ನು ಒಳಗೊಂಡ ಓಂಕಾರದಲ್ಲಿ ಮುಕ್ತಂಗನೆ ನಾಟ್ಯಮಾಡುತ್ತಿದ್ದಾಳೆ. ಕುಣಿದಾಡುತ್ತ ಕೈ ಮಾಡಿ ಕರೆಯುತ್ತಿದ್ದಾಳೆ. ಆಕೆಯ ಸಂಗ ಮಾಡಿದ ಅಂಗಕ್ಕೆ ಸಮತತ್ವ ಸಮನಿಸಿತ್ತು.

ತ್ವಜ್ಞಮಯವಾಗಿಹುದು ಓಂಕಾರ ಎಂದು ಚೆನ್ನಬಸವಣ್ಣ ಹೇಳುತ್ತಾರೆ. ಮೂರಕ್ಷರವನ್ನು ಒಳಗೊಂಡ ಈ ಒಂದಕ್ಷರ ಇಡೀ ಜಗದ ಸಕಲ ಪ್ರಾಣಿ ಪಶು ಪಕ್ಷಿ ಜಲಚರ ಉರಗ ಕೀಟ ಸಸ್ಯ ಗಿಡ ಮರಗಳನ್ನು ವ್ಯಾಪಿಸಿಕೊಂಡಿದೆ. ಎಲ್ಲಿ ನೋಡಿದರೂ ಓಂಕಾರದ ನಾದ ಝೇಂಕರಿಸುತ್ತಲಿದೆ. ಚರ್ಮದ ಹೊದಿಕೆಯಿಲ್ಲದ ಒಂದು ಪ್ರಾಣಿಯೂ ಇಲ್ಲ, ಓಂಕಾರ ಎನ್ನುವ ಮೂರಕ್ಷರಗಳುಳ್ಳ ಮುಕ್ತಂಗನೆ ನಾನೇ ಓಂಕಾರವೆಂದು, ಸಮತತ್ವ ತಿಳಿದು ಅನುಭವಿಸಿ ಪರಮ ಸಂತೋಷವನ್ನು ವ್ಯಕ್ತಪಡಿಸುವ ಮನುಷ್ಯನನ್ನು ಕೈ ಮಾಡಿ ಕರೆಯುತ್ತಿದ್ದಾಳೆ.

ತ್ವಜ್ಮಯವಾಗಿಹುದು ಓಂಕಾರ ಎಂದು ಚೆನ್ನಬಸವಣ್ಣ ಹೇಳಿದ ಸಮತತ್ವ ಮನುಷ್ಯನನ್ನು ಮಾತ್ರ ಕುರಿತು ಹೇಳಿದ ಮಾತಲ್ಲ. ಮನುಷ್ಯ ಮಾತ್ರ ತಿಳಿದು ಆನಂದಿಸಬಲ್ಲ. ಹಾಗೆ ನೋಡಬಲ್ಲ; ಅದು ಸತ್ಯ ಎಂದು ಅರಿಯಬಲ್ಲ; ಅನುಭವಿಸಿ ಆ ಮೂರಕ್ಷರ ತಾನೇ ಆಗಿ ಕುಣಿದಾಡುವ ಶಕ್ತಿ ತನಗಿದೆ ಎಂದು ಪರಮಾನಂದದಿಂದ ಅಭಿವ್ಯಕ್ತಿಪಡಿಸಬಲ್ಲ.

ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಸೋರದಂತೆ ಸುಂದರವಾಗಿ, ತತ್ವಭರಿತವಾಗಿ ಹೆಣೆದುಕೊಂಡ ಚರ್ಮದ ಲೀಲೆಯೇ ಅನಂತ. ಹೀಗಾಗಿಯೇ ಚೆನ್ನಬಸವಣ್ಣ ಈ ತತ್ತ್ವ ಭರಿತವಾದ ತನುವಿಗೆ 'ಓಂ ನಮಃ ಶಿವಾಯ' ಎಂಬ ಆರಕ್ಷರದಿಂದ ಕರೆದ.

ಆ ಮೀನ್, ಆಆಮ್, ಓಂ- ಎಂದು ಇಡೀ ಜಗದ ಮನುಕುಲ 'ಅ'ಕಾರ 'ಉ'ಕಾರ 'ಮ'ಕಾರವೆಂಬ ಮೂರಕ್ಷರಗಳನ್ನು ಪಠಿಸುತ್ತಲಿದೆ. ಹೀಗೆ ಪಠಿಸುವ ಮೂರಕ್ಷರಗಳುಳ್ಳ 'ಓಂ' ಕಾರ ತಾನೇ ಆಗಿದ್ದರೂ ತಾನೇ ಎನ್ನುವುದನ್ನು ಮರೆತು, ತನು ಪಠಿಸುತ್ತಲಿದೆ.

'ಓಂ ನಮಃ ಶಿವಾಯ' ತಾನೇ ಇದ್ದು ತನ್ನಂತೆಯೇ ಇರುವ ಸಕಲ ಸತ್ಯವೂ ಒಂದೇ ಆಗಿದೆ ಎಂದು ಅನುಭವಕ್ಕೆ ಬರುತ್ತಿಲ್ಲ. ಅದೆಲ್ಲ ಶಿವಮಯವೆಂಬುದು ಕೂಡಾ ತನುವಿಗೆ ಅನುಭವಕ್ಕೆ ಬರುತ್ತಿಲ್ಲ. ಅದೆಲ್ಲ ಸುಂದರವೆಂಬುದು ಕೂಡಾ ಅನುಭವಕ್ಕೆ ಬರುತ್ತಿಲ್ಲ. ಗುರು ಹೇಳಿದ ಬೀಜಾಕ್ಷರವೆಂದು ಶಿಷ್ಯನಾಗಿ ಪಠಿಸುವುದು ಬಿಡುತ್ತಿಲ್ಲ. ಇದು ತನುವನ್ನು ಆವರಿಸಿದ ಮನದ ಮಹಿಮೆ.

'ಓಂ ನಮಃ ಶಿವಾಯ' ಎಂಬ ಮಂತ್ರವ ಮೀರಲಮ್ಮದೆ ನಿಂದವು ವೇದ, ಓಂ ನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದವು ಶಾಸ್ತ್ರ, ಓಂ ನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದವು; ತರ್ಕ ಭಯಂಕರ ಭ್ರಮೆಗೊಂಡಿತ್ತು ಮಂತ್ರ-ತಂತ್ರ, ಶಿವನಂತುವ ನರಿಯದೆ ಚಿಂತಿಸುತ್ತಿದ್ದಿತ್ತು ಲೋಕ ಕೂಡಲಸಂಗಮದೇವ ಶ್ವಪಚನ ಮೆರೆದಡೆ ಜಾತಿ ಭೇದವ ಮಾಡಲಮ್ಮವು'. (ಬಸವಣ್ಣನವರ ಈ ವಚನದ ಹೆಚ್ಚಿನ ವಿವರಕ್ಕಾಗಿ 'ಜ್ಞಾನ ಭಂಡಾರಿ ಬಸವಣ್ಣ' ಗ್ರಂಥದ 81 ನೇ ವಚನಾನುಭಾವ ನೋಡಿ).

ಮೀರಿದೆ ಮೂವತ್ತಾರ, ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ 'ತತ್ವಮಸಿ' ಸಂಗಮದಲ್ಲಿ ಸಂಯೋಗಿಯಾದೆ:

ಮೂವತ್ತಾರು ತತ್ವಗಳಿಗೆ ಮೀರಿದ ತತ್ವ ತನುವಿನಲ್ಲಿ ತನ್ಮಯವಾಗಿದೆ. ಆದರೆ ತನುವನ್ನು ಆವರಿಸಿದ ಮನದಿಂದಾಗಿ, ತನುವಿನಿಂದಲೇ ಹೊರಬಂದ ತತ್ವವನ್ನು ತನುವೇ ಓದಿ ಓದಿ ಕೆಡುತ್ತಲಿದೆ; 'ಓದಿಕೆಟ್ಟ ಕೂಚು ಭಟ್ಟ' ಎನ್ನುವಂತೆ.

ಪುಸ್ತಕಗಳನ್ನು ಓದಿ ತನುವನ್ನು ಸುಧಾರಿಸಿಕೊಳ್ಳಬೇಕಿಲ್ಲ. ತನುವನ್ನು ಆವರಿಸಿದ ಮನ ತನುವನ್ನು ಹಿಡಿದು ತನುವಿನಿಂದಲೇ ಹೊರಬಂದ ಪುಸ್ತಕಗಳನ್ನು ತನುವಿನ ಮೂಲಕ ಓದಿ, ತನುವನ್ನು ರಂಜನೆಗೆ ಒಳಪಡಿಸುತ್ತದೆ. ತನುವಿನಲ್ಲಿಯೇ ಸಂಗಮವಾದ ನಿರಂಜನ ತತ್ವವನ್ನು ತಿಳಿಯದೇ ಹೋಗುತ್ತದೆ.

ವೇದ ಆಗಮ ಉಪನಿಷತ್‌ಗಳನ್ನು, ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ತನು ಹಿಡಿದು ಓದುವ ಮನ ತನುವಿನಲ್ಲಿ ಇಲ್ಲವಾಗಬೇಕಿತ್ತು. ಆದರೆ ತನುವಿನಿಂದಲೇ ಹೊರಬಂದ ಗ್ರಂಥಗಳನ್ನು ಶ್ರೇಷ್ಠಾತಿ ಶ್ರೇಷ್ಠವೆಂದು ತನುವಿನ ಮೂಲಕವೇ ಬೊಗಳಿ, ತನುವನ್ನೇ ನಿಕೃಷ್ಠಗೊಳಿಸಿದೆ. ತನುವಿನಿಂದ ಹೊರ ಬಂದ ಗ್ರಂಥಗಳನ್ನೇ ತನುವಿನ ಮೂಲಕ ಪೂಜಿಸಲು ಮನ ತನುವಿಗೆ ಕೆಲಸ ಹಚ್ಚಿದೆ.

ತನುವಿನಲ್ಲಿ ಸಂಗಮವಾದ 'ತತ್ವ' ತನುವೇ ಉಳಿಸಿಕೊಂಡು ಮನ ಹೇಳಿದಂತೆ ತನು ಕೇಳುತ್ತಲಿದೆ. ತತ್ವ ಓದಿದರೆ ಮನ ಇಲ್ಲವಾಗಬೇಕು. ಇದ್ದ ಘನ ತನುವಿನ ಮೂಲಕ ವಿರಾಟ ಸ್ವರೂಪಿಯಾಗಿ ಎದ್ದು ತೋರಬೇಕು. ಆದರೆ ಮನದ ಬಲವೇ ಅಧಿಕವಾಗಿ ತತ್ವವೇತ್ತ, ಪಂಡಿತ, ಶಾಸ್ತ್ರಿ, ಪ್ರವಚನಪಟು, ಆಚಾರ್ಯ ಎನ್ನಿಸಿಕೊಂಡು ತನುವಿನ ಮೂಲಕ ತಲೆ ಎತ್ತಿಕೊಂಡು ನಿಂತಿದೆ. 'ತತ್ವಮಸಿ' ಸಂಗಮದಲ್ಲಿ ಸಂಯೋಗಿಯಾಗದೆ!

ತನುವಿನಲ್ಲಿಯೇ ಸಂಗಮವಾದ ತತ್ವ ಅರಿತು, ಆ ತತ್ವವೇ ತಾನೆಂದು ತಿಳಿದು ಅಲ್ಲಿಯೇ ಸಂಗಮವಾದ ಮನವೇ ಘನಮನವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**360**

**ಒಂದು ಕೋಳಿ ಕೂಗುತ್ತದೆ ಇರುಳು ಹಗಲೆನ್ನದೆ;**
**ಅದನರಿಯರಲ್ಲಾ ಮರ್ತ್ಯದ ಗಣಂಗಳು.**
**ಅರಿದಡೆ ಭವ ಬಂಧವಿಲ್ಲ, ಮರೆದಡೆ ಜನನ ಮರಣಕ್ಕಳವಿಲ್ಲ!**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ತನ್ಮಯವಾದ ಅರಿವನ್ನು, ಸಿದ್ಧರಾಮ ಶಿವಯೋಗಿಗಳು ಮಲಗಿದವರನ್ನು ಎಚ್ಚರಿಸುವ ಕೋಳಿ ಎಂದು ಕರೆದಿದ್ದಾರೆ. ಹಗಲು ಇರುಳು ಎನ್ನದೆ ತನುವನ್ನು ಆವರಿಸಿದ ಮನಕ್ಕೆ ಪಾಠ ಮಾಡುವ ಎಚ್ಚರದ ಕೋಳಿ!

ಈ ಭೂಮಿಯ ಮೇಲೆ ಏಳುನೂರಾ ಇಪ್ಪತ್ತು ಕೋಟಿ ತನುಗಳು ವಾಸ ಮಾಡಿವೆ. ಪ್ರತಿ ತನುವಿನಲ್ಲಿಯೂ ಅರಿವೆಂಬ ಗುರುದೇವನೊಬ್ಬ ವಾಸ ಮಾಡಿದ್ದಾನೆ. ಆತ ಹಗಲು ಇರುಳು ಎನ್ನದೆ (24 X 7) ತನುವನ್ನು ಆವರಿಸಿದ ಮನಕ್ಕೆ ಪಾಠ ಮಾಡುತ್ತಾನೆ. ಈ ಭೂಮಿಯ ಮೇಲೆ ವಾಸ ಮಾಡಿದ ಶೇಕಡಾ ಒಂದು ಭಾಗವೂ ಆತನನ್ನು ಅರಿಯದು. ಒಂದು ಭಾಗವೇಕೆ ಒಂದರಲ್ಲಿ ನೂರು ಭಾಗ ಮಾಡಿದಾಗ ಅದರ ಒಂದು ಭಾಗವೂ ಅರಿಯದು. ಇದು ತನುವಿನ ದುರ್ದೈವ!

ಕಾಯದಲ್ಲಿ ಅರಿವೆಂಬ ಗುರುದೇವನ ಕಾಯವೊಂದು ಸಂಗಮವಾಗಿದೆ. ಆ ಅರಿವಿನ ಕಾಯಕ್ಕೆ ಯಾವ ಪಾಠದ ಅವಶ್ಯಕತೆಯೂ ಇಲ್ಲ. ಕಾಯವನ್ನು ಮನವೆಂಬ ಮತ್ತೊಂದು ಕಾಯ ಆವರಿಸಿದೆ. ಆ ಕಾಯಕ್ಕೆ ಯಾವ ಪಾಠವೂ ನಿಲ್ಲುವುದಿಲ್ಲ. ಸ್ಥೂಲ ಕಾಯ ಇವೆರಡೂ ಕಾಯಗಳಿಗೆ ವಾಸ ಸ್ಥಾನವಾಗಿದೆ; ಉಪಕರಣವಾಗಿದೆ.

ಮನೋಕಾಯ ಸ್ಥೂಲ ಕಾಯವನ್ನು ಹಿಡಿದು ಸಾತ್ವಿಕವಾಗಿದೆ; ರಾಜಸಿಗನಾಗಿದೆ; ತಾಮಸಿಗನಾಗಿದೆ; ಜ್ಞಾನಿಯಾಗಲು ಮಾತ್ರ ಕಾಯಕ್ಕೆ ಸಾಧ್ಯವಾಗುತ್ತಿಲ್ಲ.

ಮನೋಕಾಯ ಸ್ಥೂಲ ಕಾಯವನ್ನು ಹಿಡಿದು ಗುರುವಿನ ವೇಷ ಹಾಕಬಹುದು; ಆದರೆ ಗುರುವಲ್ಲ. ಶಿಷ್ಯನ ವೇಷ ಹಾಕಬಹುದು; ಶಿಷ್ಯನಲ್ಲ. ಕಳ್ಳನ ವೇಷ ಹಾಕಬಹುದು; ಕಳ್ಳನಲ್ಲ. ರಾಜಕಾರಣಿಯ ವೇಷ ಹಾಕಬಹುದು; ರಾಜಕಾರಣಿಯಲ್ಲ. ಹಾದರಿಗ ವೇಶ್ಯೆ ವಿಟ ಭ್ರಷ್ಟ ಲಂಚಬಡಕ ಕೊಲೆಗಡುಕ ಪ್ರಾಮಾಣಿಕ ಹೀಗೆ ಮನ ತನುವನ್ನು ಹಿಡಿದು ಅನೇಕ ವೇಷಗಳನ್ನು ಹಾಕಬಹುದು; ಅದು ವೇಷವೇ ಹೊರತು ಸಹಜವಲ್ಲ.

ಕಾಯದಲ್ಲಿ ಸಹಜ ಕಾಯವೊಂದು ಸಂಗಮವಾಗಿದೆ. ಅದನ್ನು ಅರಿವೆಂಬ ಗುರುದೇವನ

ಕಾಯವೆಂದು 'ಗುರು' ಎಂದು ಭಾರತ ಕರೆದಿದೆ. ಅರಿವಿನ ಸಹಜ ಕಾಯಕ್ಕೆ ಸಿದ್ಧಾರ್ಥ 'ಬುದ್ಧ' ಎಂದು ಹೆಸರಿಟ್ಟು ಕರೆದ.

ಮನೋಕಾಯ ಹಿಡಿದು ಸ್ಥೂಲ ಕಾಯದಲ್ಲಿ ವಾಸ ಮಾಡಿದ ಸಿದ್ಧಾರ್ಥ, ಸಹಜ ಕಾಯಕ್ಕೆ ಪಲ್ಲಟಗೊಂಡ. ಆಗ ತನ್ನನ್ನು ಬುದ್ಧ ಎಂದು ಕರೆದುಕೊಂಡ. ಮನೋಕಾಯದಲ್ಲಿದ್ದ ಸಿದ್ಧಾರ್ಥ ತನಗೆ ಬುದ್ಧತ್ವ ಪ್ರಾಪ್ತಿಯಾಯಿತು ಎಂದು ಘೋಷಿಕೊಂಡ. ಮನೋಕಾಯದ ಸಿದ್ಧಾರ್ಥ ಸಹಜ ಕಾಯದಲ್ಲಿ ಉದುರಿಬಿದ್ದ. ಸ್ಥೂಲಕಾಯ ಸಹಜ ಕಾಯ ಒಂದಾಯಿತು. ಸ್ಥೂಲ ಕಾಯವನ್ನು ಆವರಿಸಿದ ಮನೋಕಾಯ ಸಹಜ ಕಾಯದಲ್ಲಿ ಸಂಗಮವಾಯಿತು. ಇದು ಸಕಲ ಕಾಯಗಳಿಗೂ ಸಾಧ್ಯವೆಂದು ಬುದ್ಧ ಸಾರಿದ.

ಸೂಕ್ಷ್ಮ ಕಾಯದಿಂದ ಸಹಜ ಕಾಯಕ್ಕೆ ಪ್ರಯಾಣಿಸುವ ಸೂತ್ರವನ್ನು ಬುದ್ಧ ಬರೆದ. ಅದಕ್ಕೆ ತ್ರಿಪಿಟಿಕ ಎಂದು ಹೆಸರಿಸಿದ. ಕಾಯಗಳು ಬುದ್ಧ ಬರೆದ ಗ್ರಂಥಕ್ಕೆ, ಬುದ್ಧನ ಕಾಯಕ್ಕೆ ಮಾರು ಹೋದವು. ಬುದ್ಧನಿಗೆ ಶಿಷ್ಯನಾದವು. ಬುದ್ಧನ ಸ್ಥೂಪ ನಿರ್ಮಿಸಿ ಆರಾಧಿಸಿದವು. ಬೌದ್ಧ ಧರ್ಮ ಸ್ವೀಕರಿಸಿದವು. ಬೌದ್ಧರಾದವು. ಸ್ವತಹ ಬುದ್ಧರಾಗಲಿಲ್ಲ. ಇದು ಕಾಯವನ್ನು ಆವರಿಸಿದ ಮನವೆಂಬ ಮಾಯಾಂಗನೆಯ ಮಹಿಮೆ!

ಶಿಶುನಾಳ ಷರೀಫರು ಈ ಮನವೆಂಬ ಮಾಯೆಗೆ ಕೋಡಗ ಎಂದು ಕರೆದರು. 'ಕೋಡಗನ್ನ ಕೋಳಿ ನುಂಗಿತ್ತ ನೋಡವ್ವ ತಂಗಿ ಕೋಡಗನ್ನ ಕೋಳಿ ನುಂಗಿತ್ತ' ಎಂಬ ಸೂತ್ರ ರಚಿಸಿ ಊರೂರು ಅಲೆದು ಹಾಡಿದರು. ಅಂಗವನ್ನು ಆವರಿಸಿದ ಮನವೆಂಬ ಮಂಗವನ್ನು ಅಂಗದಲ್ಲಿಯೇ ಸಂಗಮವಾದ 'ಅರಿವಿನ ಕೋಳಿ' ನುಂಗಲೇ ಇಲ್ಲ. ಬದಲಾಗಿ ಮನವೆಂಬ ಮಂಗವೇ 'ಕೋಡಗನ್ನ ಕೋಳಿ ನುಂಗಿತ್ತ ನೋಡವ್ವ ತಂಗಿ ಕೋಡಗನ್ನ ಕೋಳಿ ನುಂಗಿತ್ತ' ಎಂದು ವಯ್ಯಾರದಿಂದ ನಾಡಿನ ತನುಗಳೆಲ್ಲ ಹಾಡಿದವು! ಇದು ಮನವೆಂಬ ಮಾಯಾಂಗನೆಯ ಮಹಿಮೆ!

ಸಹಜ ಕಾಯವನ್ನು ಸಿದ್ಧಾರ್ಥ 'ಬುದ್ಧ' ಎಂದು ಕರೆದ. ವ್ಯಾಸರು 'ಕೃಷ್ಣ'ಎಂದು ಕರೆದರು. ವಾಲ್ಮೀಕಿ 'ರಾಮ' ಎಂದು ಕರೆದ. ಬಸವಣ್ಣ 'ಕೂಡಲಸಂಗಯ್ಯ' ಎಂದು ಕರೆದ. ಸಿದ್ಧರಾಮ ಶಿವಯೋಗಿ 'ಕಪಿಲಸಿದ್ಧ ಮಲ್ಲಿಕಾರ್ಜುನ'ಎಂದು ಕರೆದ. ವರ್ಧಮಾನ 'ಮಹಾವೀರ' ಎಂದು ಕರೆದ. ಕ್ರಿಸ್ತ ಪೈಗಂಬರರು 'ಅಲ್ಲಾ' , 'ಗಾಡ್' ಎಂದು ಕರೆದರು.

ಮನವೆಂಬ ಮಾಯಾಂಗನೆಯ ಮುಂದೆ ಯಾರ ಆಟವೂ ನಡೆಯಲಿಲ್ಲ. 'ರಾಮ', 'ಕೃಷ್ಣ', 'ಬುದ್ಧ', 'ಮಹಾವೀರ'ರಿಗೆ, ಬಸವಾದಿ ಶರಣರಿಗೆ, ದಾಸವರೇಣ್ಯರಿಗೆ ಮಂದಿರಗಳು ನಿರ್ಮಾಣವಾದವು! ಎಲ್ಲಿ ನೋಡಿದರೂ ಮಸೀದೆಗಳು, ಚರ್ಚ್‌ಗಳು! 'ಅಲ್ಲಾ'ನ ದರುಶನ ಮಾತ್ರ ಆಗಲಿಲ್ಲ.

ಅಂಗದ ಮೇಲೆ ಧರಿಸಿದ 'ಲಿಂಗ' ,'ಶಿಲುಬೆ'ಗಳು ನರ್ತನ ಮಾಡಿದವು. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ಅಂಗದಲ್ಲಿಯೇ ಉಳಿದ. ಅಂಗವನ್ನು ಆವರಿಸಿದ ಮನವೆಂಬ ಮರ್ಕಟ ಅಂಗದಲ್ಲಿಯೇ ತನ್ನ ಅಜ್ಞಾನದ ಸಾಮ್ರಾಜ್ಯವನ್ನು ಸ್ಥಾಪಿಸಿತು. ಇದನರಿಯದೆ ಮರ್ತ್ಯದ ಗಣಂಗಳು ಮರ್ಕಟಕ್ಕೆ ತುತ್ತಾಗಿದ್ದಾರೆ.ಅರಿತರೆ ಭವವಿಲ್ಲ, ಬಂಧನವಿಲ್ಲ. ಮರೆತರೆ ಜನನ ಮರಣಕ್ಕೆ ಅಳವಿಲ್ಲ; ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಹಾಡಿದ್ದಾರೆ.

**361**

**ಒಂದು ಮೂಲಸ್ತಂಭವಿಡಿದ ದೇವಾಲಯದಲ್ಲಿ**

**ಚಂದಚಂದದ ಬಾಗಿಲು ಮೂವತ್ತಾರು**
**ಒಂದೊಂದು ಎಂಟೆಂಟೆಂಬ ಘನಕ್ಕೆ ಘನ ಸಂತಸ ಸುಖವಾಯಿತ್ತಯ್ಯಾ.**
**ಇಂದ್ರಿಯಾರ್ಪಣ ಸುಖಗೋಷ್ಠಿ ಸಾಧ್ಯವಾಯಿತ್ತಯ್ಯಾ.**
**ನಿಮ್ಮ ದಯದಿಂದ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಅರಿವೆಂಬ ಗುರುದೇವನು ಸಾಮಾನ್ಯನಲ್ಲ. ಅವನು ಜಗದಗಲ ಮುಗಿಲಗಲ. ಅವನು ವಿರಾಟಸ್ವರೂಪ. ಅಂತಹ ಗುರುದೇವನು ಕಾಯದ ಸೃಷ್ಟಿಗೆ ಕಾರಣವಾಗಿದ್ದಾನೆ. ಕಾಯದಲ್ಲಿಯೇ ಅಕಾಯ ಕಾಯವಾಗಿ ಸಂಗಮವಾಗಿದ್ದಾನೆ. ಕಾಯವನ್ನು ಆವರಿಸಿದ ಮನಕ್ಕೆ ಗುರುದೇವನಿಗೆ ಶಿಷ್ಯನಾಗಬೇಕೆಂಬ ಬಯಕೆಯಾಗಬೇಕು. ಆ ಗುರುದೇವನೊಂದಿಗೆ ಸಂಗಮವಾಗಿ ಅಲ್ಲಿಯೇ ಲೀನವಾಗಬೇಕೆಂಬ ಉತ್ಕಟ ಇಚ್ಛೆಯಾಗಬೇಕು. ಅಂದಾಗ ಮಾತ್ರ ಕಾಯದಲ್ಲಿರುವ ಸಕಲ ಇಂದ್ರಿಯಗಳು ಉದುರಿಬಿದ್ದು; ಅರಿವಿನ ಸುಖಗೋಷ್ಠಿ ಕಾಯದಲ್ಲಿಯೇ ಆರಂಭವಾಗುತ್ತದೆ.

ದೇಹವೆಂಬುದು ದೇವಾಲಯ. ಅರಿವಿನ ದೇವಾಲಯ. ಒಂದೇ ಒಂದು ಮೂಲಸ್ತಂಭದ ದೇವಾಲಯ. ಅದಕ್ಕೆ ಚಂದ ಚಂದದ ಮೂವತ್ತಾರು ತತ್ವಗಳುಳ್ಳ ಬಾಗಿಲುಗಳಿವೆ.

ಅರಿವೆಂಬ ಗುರುದೇವನಿಗೆ ಮನ ಶಿಷ್ಯನಾಗುವುದೊಂದೇ ತಡ ಕಾಯಕ್ಕಂಟಿದ ಅರಿಷಡ್ವರ್ಗಗಳು, ಅಷ್ಟಮದಗಳು, ಅಷ್ಟಮಲಗಳು ಉದುರಿಬಿದ್ದು, ಮನ ಘನಮನವಾಗುತ್ತದೆ. ಮನೋಕಾಯ, ಸ್ಥೂಲಕಾಯ, ಜ್ಞಾನಕಾಯಗಳು ಒಂದೇ ಕಾಯದಲ್ಲಿ ಸಂಗಮವಾಗಿ ಮೂರೊಂದಾದ ಘನವಾಗುತ್ತದೆ. ಒಂದೇ ಸ್ತಂಭದ ದೇವಾಲಯವಾಗುತ್ತದೆ. ಅರಿವೆಂಬ ದೇವರಿದ್ದ ದೇವಾಲಯವಾಗುತ್ತದೆ.

ನೋಡುವ ನೋಟವೆಲ್ಲ ಶಿವಮಯವಾಗುತ್ತದೆ. ಕೇಳುವ ಶಬ್ದ, ಮುಟ್ಟುವ ಸ್ಪರ್ಶ, ವಾಸಿಸುವ ಪರಿಮಳ, ರುಚಿಸುವ ರುಚಿಗಳೆಲ್ಲ ರುಚಿ ಅರುಚಿ ಕಳೆದುಕೊಂಡು ಅಮೃತವಾಗುತ್ತದೆ. ಹೀಗೆ ಸ್ಥೂಲಕಾಯದಲ್ಲಿ ಅರಿವಿನ ಪರಮಸಂತೋಷ ಉಂಟಾಗುತ್ತದೆ.

ಕಾಯವನ್ನು ಆವರಿಸಿದ ಸಕಲ ಅಜ್ಞಾನದ ಇಂದ್ರಿಯಗಳು ಅರಿವೆಂಬ ಗುರುದೇವನ ಕಾಯಕ್ಕೆ ಅರ್ಪಣೆಯಾಗುತ್ತವೆ. ಕಾಯವನ್ನು ಆವರಿಸಿದ ಮನವೇ ಅರಿವೆಂಬ ಗುರುದೇವನಿಗೆ ಶಿಷ್ಯನಾಗಿ, ಗುರುಶಿಷ್ಯರ ಅರಿವಿನ ಸುಖದ ಗೋಷ್ಠಿ ಸ್ಥೂಲಕಾಯದಲ್ಲಿಯೇ ಉಂಟಾಗುತ್ತದೆ. ಗುರುಶಿಷ್ಯರ ಸಂವಾದಕ್ಕೆ ಸ್ಥೂಲಕಾಯ ಸಾಕ್ಷಿಯಾಗುತ್ತದೆ. ಅದು ಅನುಭವಮಂಟಪವಾಗುತ್ತದೆ. ಅನುಭಾವಿಗಳೀರ್ವರ ಅನುಭಾವವನ್ನು ಆಲಿಸುತ್ತಾ ಸ್ಥೂಲಕಾಯ ಮೈ ಮರೆಯುತ್ತದೆ.

ಸೂಕ್ಷ್ಮಕಾಯ ಅರಿವಿನ ಕಾಯಕದಲ್ಲಿ ತೊಡಗಿದಾಗ ಅರಿವೆಂಬ ಗುರುದೇವನ ಕಾಯದೊಂದಿಗೆ ಸಂಪರ್ಕಿಸಿದಾಗ ಮಾತ್ರ ಇದೆಲ್ಲ ತಂತಾನೆ ಸಿದ್ಧಿಯಾಗುತ್ತದೆ; ಸಾಧ್ಯವಾಗುತ್ತದೆ; ಕಪಿಲಸಿದ್ಧಮಲ್ಲಿನಾಥನ ದಯದಿಂದ.

**362**

**ಒಂದೂ ಅಲ್ಲದ ನೆಲನ ಸುರಿವುದ ಒಲೆಯ ಸುರಿವುದ ಕೇಳಿರಣ್ಣಾ.**
**ಒರಟಂಗೆ ಶಿಕ್ಷೆ ದೀಕ್ಷೆ ಮಾಡುವುದ ಸುಡುವುದಯ್ಯಾ.**
**ಒಂದೂ ಅಲ್ಲದವಂಗೆ ಕೊಟ್ಟು ದೀಕ್ಷೆಯ**
**ಸುಟ್ಟ ಫಲವೆಂದ ಕಪಿಲಸಿದ್ಧ ಮಲ್ಲಿನಾಥದೇವರ ದೇವ.**

ಒಂದು ಕಾಯ ಮತ್ತೊಂದು ಕಾಯಕ್ಕೆ ದೀಕ್ಷೆಯನ್ನು ಕೊಡಲು ಬರುವುದಿಲ್ಲ. ಅಷ್ಟೇಕೆ ಗಂಡ ಹೆಂಡತಿಯಾಗಿ ಒಂದಾಗಿರಲು ಕೂಡಾ ಸಾಧ್ಯವಿಲ್ಲದಷ್ಟು ತೊಂದರೆಗಳು ಕಾಯದಲ್ಲಿ ಉಂಟಾಗುತ್ತವೆ. ಅಂದ ಮೇಲೆ ಒಂದು ಕಾಯವನ್ನು ಗುರುವಾಗಿಸಿಕೊಂಡು ಮತ್ತೊಂದು ಕಾಯ ಶಿಷ್ಯನಾಗಿ ದೀಕ್ಷೆ ಪಡೆಯಲು ಸಾಧ್ಯವೆ? ಒಂದು ಕಾಯಕ್ಕೆ ದೀಕ್ಷೆ ಕೊಟ್ಟು ಶಿಷ್ಯತ್ವ ಸ್ವೀಕರಿಸಲು ಸಾಧ್ಯವೆ? ಗುರುವಾಗಿ ಸುರಿದರೂ ಗುರುಕಾಯ ಸುಡುವುದು, ಸುರಿದುದನ್ನು ಸ್ವೀಕರಿಸಿದರೂ ಶಿಷ್ಯಕಾಯ ಸುಡುವುದು. ಎರಡೂ ಕಾಯಗಳು ಉರಿಯುವುದು ನಿಲ್ಲುವುದಿಲ್ಲ.

ಒರಟಂಗೆ ಶಿಕ್ಷೆ ದೀಕ್ಷೆ ಮಾಡುವುದರಿಂದ ಸುಡುವುದಯ್ಯಾ. ಒಂದೂ ಅಲ್ಲದವಂಗೆ ಕೊಟ್ಟು ದೀಕ್ಷೆಯ ಸುಟ್ಟ ಫಲವೆಂದ ಕಪಿಲಸಿದ್ದ ಮಲ್ಲಿನಾಥ ದೇವರ ದೇವ:

''ಒಲೆ ಹತ್ತಿ ಉರಿದೊಡೆ ನಿಲಬಹುದಲ್ಲದೆ ಧರೆ ಹತ್ತಿ ಉರಿದಡೆ ನಿಲಲುಬಾರದು. ಏರಿ ನೀರುಂಬಡೆ, ಬೇಲಿ ಕೆಯ್ಯ್ಯಮೇವಡೆ, ನಾರಿ ತನ್ನ ಮನೆಯಲ್ಲಿ ಕಳುವಡೆ, ತಾಯಿ ಮೊಲೆವಾಲು ನಂಜಾಗಿ ಕೊಲುವಡೆ, ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ!''

ದೀಕ್ಷೆ ತೆಗೆದುಕೊಂಡು ಕೊರಳಲ್ಲಿ ಲಿಂಗ, ಜನಿವಾರ, ಶಿಲುಬೆ ಧರಿಸಿದ ಕಾಯಗಳು ಅತ್ಯಂತ ಪರಮ ಸಂತೋಷದಿಂದ ಇರಲು ಸಾಧ್ಯವಾಗುತ್ತಿಲ್ಲ. ದೀಕ್ಷೆ ಪಡೆದ ಕಾಯಗಳು ನಿತ್ಯ ಪ್ರಾರ್ಥನೆ ಮಾಡಿದರೂ ಕೂಡಾ ಸುಡುವುದು ನಿಂತಿಲ್ಲ. ದೀಕ್ಷೆ ಕೊಟ್ಟು ಕೊರಳಲ್ಲಿ ಜನಿವಾರ, ಶಿಲುಬೆ, ಲಿಂಗ ಧರಿಸಿ ಮುದ್ರೆ ಒತ್ತಿದ ಗುರು ಕಾಯಗಳು ಕೂಡಾ ಸುಡುತ್ತಲಿವೆ. ದೀಕ್ಷೆ ಕೊಡುವುದು ಒಂದು ಕಾಯಕವೆಂದು ಕಾಯ ತಿಳಿದುಕೊಂಡಾಗ, ಏನೂ ತಿಳಿಯದವನಿಗೆ ದೀಕ್ಷೆ ಕೊಟ್ಟಂತೆ ಆಗಲಿಲ್ಲವೆ? ದೀಕ್ಷೆ ಕೊಟ್ಟವನೂ ಸುಡುತ್ತಾನೆ, ದೀಕ್ಷೆ ತೆಗೆದುಕೊಂಡವನೂ ಸುಡುತ್ತಾನೆ. ಕಾಯಕ್ಕೆ ದೀಕ್ಷೆ ಎನ್ನುವುದು ಒಂದು ಸಂಪ್ರದಾಯವಾಗಿದೆ. ಅದೊಂದು ಬದುಕುವ ದಾರಿಯಾಗಿದೆ.

ಸ್ಥೂಲ ಕಾಯವನ್ನು ಮನೋಕಾಯವೇ ಸುಡುತ್ತಿರುವಾಗ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರು ಕಾಯ ಗಹಗಹಿಸಿ ನಗುತ್ತಿರುವಾಗ, ಕಾಯಕ್ಕೆ ಮತ್ತೊಂದು ಕಾಯ ಗುರುವಾಗಿ ಶಿಕ್ಷೆ ಕೊಡಲು ಸಾಧ್ಯವೆ? ಅಥವಾ ದೀಕ್ಷೆ ಕೊಡಲು ಸಾಧ್ಯವೆ? ಒಲೆ ಹತ್ತಿ ಉರಿದಡೆ ನಿಲಬಹುದು ಧರೆ ಹತ್ತಿ ಉರಿದಡೆ ನಿಲಲುಬಾರದು.

ಸ್ಥೂಲ ಕಾಯವನ್ನು ಸದಾ ರಕ್ಷಣೆ ಮಾಡಬೇಕಾದ ಮನೋ ಕಾಯವೇ ಸ್ಥೂಲ ಕಾಯವನ್ನು ಸುಡುತ್ತಿರುವಾಗ, ಸ್ಥೂಲ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ಇವೆರಡರ ಚಿನ್ನಾಟ, ಕಚ್ಚಾಟ ನೋಡಿ ನಗುತ್ತಿರುವಾಗ ಯಾರಿಗೆ ದೀಕ್ಷೆ ಕೊಡುವುದು.

ಮನೋ ಕಾಯ ಒರಟ; ಅವನಿಗೆ ದೀಕ್ಷೆ ನಿಲ್ಲುವುದಿಲ್ಲ. ಸ್ಥೂಲ ಕಾಯಕ್ಕೆ ದೀಕ್ಷೆ ಕೊಡಲು ಸಾಧ್ಯವಿಲ್ಲ; ಏಕೆಂದರೆ ಅದಕ್ಕೆ ಏನೂ ತಿಳಿಯುವುದಿಲ್ಲ. ಹೀಗಾಗಿ ಕೊರಳಲ್ಲಿ ಧರಿಸಿದ ಶಿಲುಬೆ, ಲಿಂಗ, ಜನಿವಾರಗಳು ತುಂಟ ದನಗಳಿಗೆ ಕಟ್ಟುವ ಗುದಿಗೆಯಂತಾಗುತ್ತವೆ.

ದನಕ್ಕೆ ಗುದಿಗೆ ಕಟ್ಟಿದರು ಕೂಡಾ ಅದು ಬೇಲಿಹಾರಿ ಹೊಲ ಮೇಯುವುದನ್ನು ಹೇಗೆ ಬಿಡುವುದಿಲ್ಲವೋ ಹಾಗೆಯೇ ಲಿಂಗ, ಜನಿವಾರ, ಶಿಲುಬೆ ಧರಿಸಿಕೊಂಡ ಕಾಯಗಳು ಕ್ಲಬ್, ವೇಶ್ಯಾವಾಟಿಕೆ, ಲಂಚ, ಭ್ರಷ್ಟಾಚಾರದಲ್ಲಿ ಪಾಲ್ಗೊಳ್ಳುವುದು ಬಿಡುವುದಿಲ್ಲ.

ಒಂದೂ ಅಲ್ಲದವಂಗೆ ದೀಕ್ಷೆಯ ಕೊಟ್ಟು ಸುಟ್ಟ ಫಲವೆಂದ ಕಪಿಲಸಿದ್ಧ ಮಲ್ಲಿನಾಥ ದೇವರ ದೇವ ಎಂದರು ಸಿದ್ಧರಾಮ ಶಿವಯೋಗಿಗಳು.

ಏರಿ ನೀರುಂಬಡೆ, ಬೇಲಿ ಕೆಯ್ಯ್ಯಮೇವಡೆ, ನಾರಿ ತನ್ನ ಮನೆಯಲ್ಲಿ ಕಳುವಡೆ, ತಾಯಿ ಮೊಲೆಹಾಲು ನಂಜಾಗಿ ಕೊಲುವಡೆ, ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ! ಎಂದರು

ಬಸವಣ್ಣ. ಇವರಿಬ್ಬರ ಸೂತ್ರವೂ ಸುಂದರವಾಗಿವೆ.

ಸ್ಥೂಲ ಕಾಯದಲ್ಲಿ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಸ್ಥೂಲ ಕಾಯವನ್ನು ಆವರಿಸಿದ ಮನೋಕಾಯ ಸ್ಥೂಲ ಕಾಯವನ್ನು ಕ್ಷಣ ಕ್ಷಣಕ್ಕೂ ಸುಡುತ್ತಿರುವಾಗ, ಅಲ್ಲಿಯೇ ಇದ್ದ ಅರಿವೆಂಬ ಗುರುದೇವನಿಗೆ ದೀಕ್ಷೆ ಕೊಡಲು ಸಾಧ್ಯವಾಗದಿರುವಾಗ ಮತ್ತೊಂದು ಕಾಯ ಗುರುವಾಗಿ ದೀಕ್ಷೆ ಕೊಡಲು ಸಾಧ್ಯವೆ?

ಮನೋಕಾಯುವೆಂಬುದು ಒರಟ. ಅದಕ್ಕೆ ದೀಕ್ಷೆ ನಿಲ್ಲುವುದಿಲ್ಲ. ಸ್ಥೂಲ ಕಾಯವೆಂಬುದು ಜಡ ಅದಕ್ಕೆ ದೀಕ್ಷೆ ಎಂದರೆ ಏನೆಂಬುದು ಗೊತ್ತಿಲ್ಲ. ಇವೆರಡನ್ನೂ ನೋಡಿ, ಇವೆರಡು ಕಾಯಗಳ ಜವಾಬ್ದಾರಿಯನ್ನು ಹೊತ್ತ ಅರಿವೆಂಬ ಗುರುದೇವನ ಕಾಯವೇ ಸುಮ್ಮನಿರುವಾಗ, ಮತ್ತೊಂದು ಕಾಯ ಬಂದು ಕಾಯಕ್ಕೆ ಗುರುವಾಗಿ ದೀಕ್ಷೆ ಕೊಟ್ಟರೆ ಅದು ದೀಕ್ಷೆಯಲ್ಲ; ಶಿಕ್ಷೆ. ದೀಕ್ಷೆ ಕೊಟ್ಟ ಕಾಯಕ್ಕೂ ಶಿಕ್ಷೆ, ದೀಕ್ಷೆ ಪಡೆದ ಕಾಯಕ್ಕೂ ಶಿಕ್ಷೆ. ಎರಡೂ ಕಾಯಗಳೂ ಸುಡುವುದಯ್ಯಾ. ಒಂದೂ ಅಲ್ಲದವಂಗೆ ಕೊಟ್ಟ ದೀಕ್ಷೆಯ ಸುಟ್ಟ ಫಲ!

**363**

**ಒಂದೊಂದು ಪರಿಯ ಬೊಂಬೆಗಳು ಬಂದು**
**ಬಂದಾಡಲ್ಕೆ ಕಂಡು ಕಂಡು ನೊಂದೆನಯ್ಯಾ.**
**ಅದರ ದಂದ ಹೊದ್ದಿಹದೆಂದು, ಒಬ್ಬಳು ಹೆಂಗೂಸಿಂಗೆ ಗಂಡರು ನಾಲ್ವರು.**
**ಆಕೆ ಗರ್ಭಿಣಿಯಾಗದ ಮುನ್ನವೆ ಪ್ರಸೂತೆಯಾದಳು ನೋಡಾ.**
**ಗಂಭೀರ ಸ್ಥಳಕ್ಕೆ ನೀವು ಹೋದಿರಾದಡೆ,**
**ಬಂಜೆಯ ಮಕ್ಕಳು ಮೂವರೈದಾರೆ. ಆರು ಗೃಹಂಗಳಂ ಕಟ್ಟಿಕೊಂಡು**
**ಮೂವತ್ತಾರನೆ ಮಂಟಪದಲ್ಲಿ ಪರಮಸೀಮೆಯಂ ಮೀರಿದ**
**ಅವರ ಹಿಂದು ಮುಂದರಿತು ಅವುಪಡುವ ನಿಗ್ರಹಂಗಳಂ ಕಂಡು,**
**ಈ ಮಂದಮತಿಯಪ್ಪ ಬೊಂಬೆಗಳ ಹಿಂದು ಮುಂದ ನಾಶವಂ ಮಾಡಿ,**
**ತಂದೆ ನಿಮ್ಮ ಅಂದವ ತೋರಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ಒಂದೇ. ಕಾಯವನ್ನು ಆವರಿಸಿದ ಮನವೆಂಬ ಮಾಯೆಯಿಂದಾಗಿ, ಕಾಯವೇ ಕಾಯವನ್ನು ಕಾಯವೆಂದು ನೋಡದೆ, ಪರಿಪರಿಯಿಂದ ನೋಡುತ್ತಲಿದೆ. ಕಾಯವೇ ಕಾಯಕ್ಕೆ ಹೆಣ್ಣಾಗಿ ಕಾಣುತ್ತಲಿದೆ. ಕಾಯವೇ ಕಾಯಕ್ಕೆ ಗಂಡಾಗಿ ಕಾಣುತ್ತಲಿದೆ. ತಂದೆ ತಾಯಿ ಬಂಧುವಾಗಿ ಗೆಳೆಯನಾಗಿ ನೆರೆಹೊರೆಯವನಾಗಿ, ಗುರುವಾಗಿ ಶಿಷ್ಯನಾಗಿ, ಜಾತಿ ಮತ ಪಂಥಗಳಿಂದ, ಹಿಂದು ಮುಸ್ಲಿಮ್ ಕ್ರೈಸ್ತ ಫಾರ್ಸಿ ಪಂಜಾಬಿ ಜೈನ ಬೌದ್ಧನಾಗಿ ವೀರಶೈವ ಲಿಂಗಾಯತನಾಗಿ ಕಾಣುತ್ತಲಿದೆ.

ಒಂದೊಂದು ಪರಿಯ ಬೊಂಬೆಗಳು ಬಂದು ಬಂದಾಡಲ್ಕೆ ಕಂಡು ಕಂಡು ನೊಂದೆನಯ್ಯಾ:

ಕಾಯವೆಂಬುದು ಕೈಲಾಸ! ಅರಿವೆಂಬ ಶಿವ ವಾಸ ಮಾಡಿದ ಸುಕ್ಷೇತ್ರ! ಕಾಯವನ್ನು ಮನವೆಂಬ ಮಾಯೆ ಹೊದ್ದಕಾರಣ ತನಗೆ ತಾನೇ ಅದು ಬೊಂಬೆಯಾಗಿದೆ. ಅದಕ್ಕದೇ ಪರಿಪರಿಯ ಬೊಂಬೆಯಾಗಿದೆ.

ಬಯಲ ಬಿಂದುವಿನಿಂದಲೇ ಭೂಮಿ ಅಗ್ನಿ ಜಲ ವಾಯು ಎಂಬ ನಾಲ್ಕು ಭೂತಗಳು

ಹುಟ್ಟಿದವು. ಬಯಲ ಬಿಂದುವಿನ ಬೆಳಕಿನಿಂದಲೇ ಮನವೆಂಬ ಮಾಯೆ ಹುಟ್ಟಿದಳು. ಕಾಯದಲ್ಲಿ ಐದು ಭೂತಗಳು ಚುಳುಕಾದವು. ಐದು ಭೂತಗಳು ಒಂದೇ ಆಗಿ ಕಾಯದ ಲೆಕ್ಕಕ್ಕೆ ಬಂದವು.

ಇಡೀ ಬ್ರಹ್ಮಾಂಡವನ್ನೇ ವ್ಯಾಪಿಸಿಕೊಂಡ ಬಯಲು ಕಾಯದಲ್ಲಿ ಚುಳುಕಾಗಿ ಕಾಯದಿಂದಲೇ ಬ್ರಹ್ಮಾಂಡವನ್ನು ನೋಡುತ್ತಲಿದೆ. ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡಬೇಕೆಂಬ ಆಸೆಯಿಂದಾಗಿ ಕಾಯವನ್ನು ಸೃಷ್ಟಿ ಮಾಡಿದ ಬಯಲು ಕಾಯದಲ್ಲಿ ಚುಳುಕಾಗಿದೆ.

ಬಯಲ ಬೆಳಕಿನಿಂದಲೇ ಮನವೆಂಬ ಮಾಯೆ ಹುಟ್ಟಿ, ಕಾಯವನ್ನು ಹೊದ್ದು ಕಾಯವನ್ನೇ ಕಾಣದಂತೆ ಮಾಡಿಕೊಂಡಿದೆ. ತನ್ನ ಮಾಯಾಮಯವಾದ ಕತ್ತಲ ಸಾಮ್ರಾಜ್ಯವನ್ನು ಕಾಯದಲ್ಲಿಯೇ ಕಟ್ಟಿ ತಾನೇ ಅದಕ್ಕೆ ಅಧಿಪತಿಯಾಗಿದೆ.

ಬಯಲೆಂದರೆ ಅರಿವಿನ ಶಿವ. ಬಯಲ ಬಿಂದುವಿನಿಂದ ಹುಟ್ಟಿದ ನೆರಳ ಬಿಂದುವೇ ಮನವೆಂಬ ಮಾಯೆ. ಈ ಎರಡೂ ಬಿಂದುಗಳು ಒಂದಾಗಿ ಕಾಯದ ಗರ್ಭ ಹೊಕ್ಕು ಕಾಯವೇ ಆಗಿ ಕಾಯದಿಂದಲೇ ಹೊರಬಂದು ಕಾಯ ಎನ್ನಿಸಿಕೊಂಡಿದೆ.

ಕಾಯದಲ್ಲಿ ಶಿವಕಾಯ ಸಂಗಮವಾಗಿದೆ. ಸ್ಥೂಲಕಾಯ ಶಿವಕಾಯಕ್ಕೆ ಕೈಲಾಸವಾಗಿದೆ. ಶಿವಕಾಯದ ಬೆಳಕಿನಿಂದ ಹುಟ್ಟಿದ ನೆರಳೆಂಬ ಮನೋಕಾಯ ಸ್ಥೂಲಕಾಯವನ್ನು ಆವರಿಸಿದೆ.

ಶಿವಕಾಯವೆಂದರೆ ಅರಿವಿನ ಕಾಯವೂ ಹೌದು, ಗುರು ಕಾಯವೂ ಹೌದು, ಲಿಂಗ ಕಾಯವೂ ಹೌದು, ಜಂಗಮ ಕಾಯವೂ ಹೌದು. ಶಿವ, ಗುರುವೂ ಆಗಿದ್ದಾನೆ; ಲಿಂಗವೂ ಆಗಿದ್ದಾನೆ; ಜಂಗಮವೂ ಆಗಿದ್ದಾನೆ. ಇಂತಹ ಶಿವನಿಂದಲೇ ಹುಟ್ಟಿದ ಮನವೆಂಬ ಮಾಯೆ ಶಿವನನ್ನು ತಿಳಿದು ಶಿವೆಯೇ ತಾನಾಗಬೇಕಿತ್ತು. ಆದರೆ ಶಿವನನ್ನು ತಿಳಿಯದಿದ್ದಕ್ಕಾಗಿ ಶಿವದ್ರೋಹಿ ಯಾಗಿದೆ. ಗುರುದ್ರೋಹಿಯಾಗಿದೆ. ಲಿಂಗ ದ್ರೋಹಿಯಾಗಿದೆ. ಜಂಗಮ ದ್ರೋಹಿಯಾಗಿದೆ.

ಬಯಲ ದೇವನಿಗೆ ಭೂತನಾಥ ಎಂಬ ಹೆಸರೊಂದಿದೆ. ಪೃಥ್ವಿ, ಅಗ್ನಿ, ಜಲ, ವಾಯುಗಳನ್ನು ಸೃಷ್ಟಿಮಾಡಿ ಅವೆಲ್ಲವುಗಳನ್ನು ಒಂದು ಮಾಡಿಕೊಂಡು ತನ್ನ ಗರ್ಭದಲ್ಲಿಟ್ಟು ಕೊಂಡಾತನೇ ಭೂತನಾಥ.

ಮನವೆಂಬ ಮನೋಕಾಯ ಶಿವಕಾಯವನ್ನು ಅರಿತು ಶಿವೆಯಾಗಿದೆ, ಸ್ಥೂಲಕಾಯವನ್ನು ಆವರಿಸಿದ್ದಕ್ಕಾಗಿ ಅಗ್ನಿ ಜಲ ವಾಯು ಪೃಥ್ವಿಯೆಂಬ ಭೂತಗಳು ಮನವೆಂಬ ಮಾಯೆಗೆ ಗಂಡಂದಿ ರಾಗಿವೆ. ಆಕೆ ಬಂಜೆ; ಗರ್ಭಿಣಿಯಾಗದ ಮುನ್ನವೆ ಸಾತ್ವಿಕ ರಾಜಸ ತಾಮಸ ಎಂಬ ಮೂವರು ಮಕ್ಕಳನ್ನು ಹಡೆದಳು. ಆ ಮಕ್ಕಳು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಆರು ಮನೆಗಳನ್ನು ಕಾಯವೆಂಬ ಮನೆಯಲ್ಲಿಯೇ ಕಟ್ಟಿಕೊಂಡು ವಾಸವಾದರು.

ಕಾಯವೆಂಬ ಅನುಭವ ಮಂಟಪದಲ್ಲಿ ಅರಿವಿನ ಮೂವತ್ತಾರು ಮಂಟಪಗಳಿವೆ. ಆ ಮೂವತ್ತಾರನೇ ಮಂಟಪದಲ್ಲಿ ಪರಮ ಸೀಮೆಯನು ಮೀರಿದ ಅರಿವಿನ ಶಿವ ವಾಸವಾಗಿದ್ದಾನೆ.

ಹಿಂದು ಮುಂದು ಅರಿತು ಅವು ಪಡುವ ನಿಗ್ರಹಗಳಂ ಕಂಡು, ಈ ಮಂದಮತಿಯಪ್ಪ ಬೊಂಬೆಗಳ ಹಿಂದು ಮುಂದಳ ಅಜ್ಞಾನವನು ನಾಶ ಮಾಡಿ ತಂದೆ ನಿಮ್ಮ ಅಂದವನ್ನು ಕಾಯದಲ್ಲಿಯೇ ತೋರಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಮಾಯೆ ಅರಿವಿನ ಶಿವನನ್ನೇ ಬೇಡಬೇಕಾಗಿದೆ.

**364**

**ಒಪ್ಪಿದ ಭೇದವನು ಅಪ್ಪು ರೂಪಾದುದನು,**

**ತಪ್ಪದೆ ತತ್ವಮಸಿಯೆನಿಸುವ ಭೇದವ,**
**ಗುರುವಿನ ಒಪ್ಪದಲಿ ಕಂಡೆ ಕಾಣಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲ ತನುವಾದುದನು ತನು ಮಾತ್ರ ಕಂಡುಕೊಳ್ಳಲು ಸಾಧ್ಯ. ಜಲದ ಭೇದವನು ಭೇದಿಸುವುದಕ್ಕೆ ತನುವಿಗೆ ಮಾತ್ರ ಸಾಧ್ಯವಾಗುತ್ತದೆ. ಜಲಬಿಂದುವಿನಿಂದಲೇ ಗಿಡ ಮರ ಬಳ್ಳಿ ಪಶು ಪಕ್ಷಿ ಜಲಚರಗಳು, ಸಕಲ ಜೀವರಾಶಿಗಳು ಉದಯವಾಗಿವೆ ಎಂದು ಸಂತ ಪೈಗಂಬರರು ಕೂಡಾ ಕುರಾನ್‌ನಲ್ಲಿ ಉಲ್ಲೇಖಿಸಿದ್ದಾರೆ.

''ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ, ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ. ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ, ಅಗ್ನಿ ಕರಗಿ ಕರ್ಪೂರ ಉಳಿದುದಕ್ಕೆ ಬೆರಗಾದೆನಯ್ಯಾ. ಎನ್ನ ಅಜಗಣ್ಣನ ಯೋಗಕ್ಕೆ'' ಎಂದು ಶಿವಶರಣೆ ಮಸರಕಲ್ಲಿನ ಮುಕ್ತಾಯಕ್ಕ ಹೇಳಿದ್ದಾಳೆ.

''ತಿಳಿನೀರೆಂಬೆ ತಿಳಿನೀರೆಂಬ, ತಿಳಿ ನೀ ಎಂದು ಒಂದು ದಿನ ಅಂದಿಲ್ಲೆಲೆ ಮಾನವಾ. ಕ್ಷಣ ಕ್ಷಣಕ್ಕೆ ತಿಳಿ ನೀ ಎಂದಡೆ, ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧ ಮಲ್ಲೇಂದ್ರ?'' ಎಂದು ಸಿದ್ಧರಾಮ ಶಿವಯೋಗಿಗಳು ತಮ್ಮ ಮತ್ತೊಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

ಜಲವೇ ತನುವಾಗಿದೆ. ತನುವಿನ ರೂಪದಲ್ಲಿ ನಿರೂಪದ ತತ್ವ ಬಚ್ಚಿಟ್ಟುಕೊಂಡಿದೆ. ತನುವನ್ನು ಆವರಿಸಿದ ಮನವೆಂಬ ನಿರೂಪದಿಂದಲೇ ನಿರೂಪದ ತತ್ವವನ್ನು ಭೇದಿಸಿ ತಿಳಿಯಬೇಕು. ನಿರೂಪದ ತತ್ವವೇ, ನಿರೂಪವೆಂಬ ಮನಕ್ಕೆ ಹಗಲಿರುಳು ಎನ್ನದೆ ಗುರುವಾಗಿ ಬೋಧಿಸುವುದು ತನಗೆ ತಾನೆ ತಿಳಿಯುತ್ತದೆ.

ಇಂದೆಂತಹ ತಿಳಿ ನೀರ ಕೆಲಸ. ನೀರಲ್ಲಿಯೇ ನೀರಾಗಿ ನೀರತತ್ವ ತಿಳಿಯುವ ಕೆಲಸ. ನೀರಬೊಂಬೆ ನಿರಾಳವೆಂಬ ತತ್ವದ ಗೆಜ್ಜೆಕಟ್ಟಿಕೊಂಡು ನೀರಬೊಂಬೆಯೊಂದಿಗೆ ಮುದ್ದಾಡುತ್ತಿರುವ ಅಪರೂಪದ ಅರಿವಿನ ಕೆಲಸ. ನೀರ ಬೊಂಬೆಯಲ್ಲಿ ಅರಿವಿನ ಕರ್ಪೂರದ ಪುತ್ಥಳಿ, ಅಗ್ನಿಯ ಸಿಂಹಾಸನವನು ಅದಕೆ ಇಕ್ಕಿ, ಅಗ್ನಿ ಕರಗಿ ಕರ್ಪುರ ಉಳಿದುದಕ್ಕೆ ಬೆರಗಾದೆನಯ್ಯಾ! ಎಂತಹ ಸುಂದರವಾದ ಸೂತ್ರವನ್ನು ನೀರಬೊಂಬೆಗೆ ಕೊಡಮಾಡಿದ್ದಾಳೆ ಮುಕ್ತಾಯಕ್ಕ!

ಉದಕದೊಳಗೆ ಬಯಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು ಎನ್ನುತ್ತಾರೆ ಬಸವಣ್ಣ! ಜಲದ ಬೊಂಬೆ; ಜೀವ ಜಲದ ಬೊಂಬೆ. ಜೀವ ಜಲ ಬೊಂಬೆಯ ಮೂಲಕ ಬೊಂಬೆಯ ಗರ್ಭಕ್ಕೆ ಹೋಗಿ ತತ್ವ ತುಂಬಿದ ಜಲಬೊಂಬೆಯಾಗಿ ಬಯಲಿಗೆ ಬಂದಿದೆ. ಎಲ್ಲಿ ನೋಡಿದರೂ ತತ್ವ ಹೊತ್ತುಕೊಂಡ ಅರಿವಿನ ಬೊಂಬೆಗಳೇ ಕಾಣುತ್ತವೆ. ಜಲಬೊಂಬೆಯಲ್ಲಿ ಜಲತತ್ವ ಸಂಗಮವಾಗಿರುವುದರಿಂದ ಅದಕ್ಕೆ ನೋಡಲು ಕೇಳಲು ರುಚಿಸಲು ಸ್ಪರ್ಶಿಸಲು ಮೂಸಿಸಲು ಬರುತ್ತದೆ.

ತತ್ವ ಹಿಡಿದು ನೋಡಿದರೆ ಜಗದ ಸಕಲ ಬೊಂಬೆಗಳೂ ತತ್ವವೇತ್ತ ಬೊಂಬೆಗಳಾಗಿಯೇ ಕಾಣುತ್ತವೆ. ತತ್ವ ಬಿಟ್ಟು ನೋಡಿದರೆ ಹೆಣ್ಣಾಗಿ ಗಂಡಾಗಿ ಕಾಣುತ್ತವೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಜಲದಬೊಂಬೆಯಲ್ಲಿ ಕಾಣಿಸಿಕೊಂಡು ತನಗೆ ತಾನೆ ಸುನಾಮಿಯಂತೆ ಆಗುತ್ತದೆ. ಜಾತಿ ಮತ ಪಂಥ ಧರ್ಮಗಳು ಜಲಬೊಂಬೆಯಲ್ಲಿ ಕಾಣಿಸಿಕೊಂಡು ಬೊಂಬೆ ಬೊಂಬೆಯ ಜೊತೆಗೆ ಯುದ್ಧಕ್ಕೆ ಸಿದ್ಧವಾಗುತ್ತದೆ.

ಜಲ ಬೊಂಬೆಯಲ್ಲಿ ಪ್ರಳಯದ ಕಸಹುಟ್ಟಿ ಬೊಂಬೆಯ ನಾಶಕ್ಕೆ ಬೊಂಬೆಯೇ

ಕಾರಣವಾಗುತ್ತದೆ. ಜಲ ಜಲದೊಂದಿಗೆ ಯುದ್ಧ ನಡೆದಿದೆ. ಜಲದ ಬೊಂಬೆಯಲ್ಲಿರುವ ಜಲತತ್ವ ತಣ್ಣಗೆ ಕುಳಿತಿದೆ. ತತ್ವದ ಮಾತು ತತ್ವವೇತ್ತ ಬೊಂಬೆಗೆ ತಿಳಿಯುತ್ತಿಲ್ಲ. ಉದಕದೊಳಗೆ ಬಚ್ಚಿಟ್ಟುಕೊಂಡು ಬಯಕೆಯ ಕಿಚ್ಚು ಉದಕವನ್ನೇ ಸುಡುತ್ತಲಿದೆ.

ಉದಕಕ್ಕೆ ಉದಕ ಬೋಧಿಸಲು ಸಾಧ್ಯವೆ? ಉದಕಕ್ಕೆ ಉದಕ ಗುರುವಾಗಲು ಸಾಧ್ಯವೆ? ಉದಕಕ್ಕೆ ಉದಕ ಶಿಷ್ಯನಾಗಲು ಸಾಧ್ಯವೆ?

ಸಸಿಯೊಳಗೆ ಹೊಕ್ಕ ಉದಕಕ್ಕೆ ರುಚಿಯ ಮೆರಗು ಬಂದಿದೆ. ಮೊಗ್ಗಿನೊಳಗೆ ಹೊಕ್ಕ ಉದಕಕ್ಕೆ ಪರಿಮಳದ ಕಂಪು ಬಂದಿದೆ. ಬೊಂಬೆಯೊಳಗೆ ಹೊಕ್ಕ ಉದಕ ಅರಿವಿನ ಪರಿಮಳವಾಗಿ ಅರಳಿದೆ.

ಉದಕದ ಬೊಂಬೆಯೇ ಹೆಣ್ಣಾಗಿದೆ, ಗಂಡಾಗಿದೆ. ಗುರುವಾಗಿದೆ, ಶಿಷ್ಯನಾಗಿದೆ. ಹಿಂದು ಮುಸಲ್ಮಾನ ಕ್ರೈಸ್ತ ಪಂಜಾಬಿಯಾಗಿದೆ. ಜೈನ ಫಾರ್ಸಿ ಬೌದ್ಧನಾಗಿದೆ. ಬೊಂಬೆಯೇ ಬೊಂಬೆಯೊಂದಿಗೆ ಜಗಳಕ್ಕೆ ನಿಂತಿದೆ.

ತಿಳಿ ನೀರು ನೀರಲ್ಲಿಯೇ ತಿಳಿದು ತಿಳಿತಿಳಿಯಾಗಬೇಕು. ಅರಿವಿನ ವೃಕ್ಷವಾಗಬೇಕು ಬೋಧೀ ವೃಕ್ಷವಾಗಬೇಕು.

ವೃಕ್ಷ ವೃಕ್ಷಕ್ಕೆ ಬೋಧಿಸುವುದಿಲ್ಲ. ತನಗೆ ತಾನೇ ಬೋಧಿಸಿಕೊಂಡು ಮೊಗ್ಗು ಬಿಟ್ಟು, ಹೂವಾಗಿ ಅರಳಿ, ಕಾಯಾಗಿ ಮಾಗಿ ಸಿಹಿ ಫಲವನ್ನು ಬಿಡುತ್ತದೆ. ಬೀಜದಲ್ಲಿ ವೃಕ್ಷದ ಸಕಲ ಗುಣಗಳನ್ನು ತುಂಬಿ ತಾನು ತಿನ್ನದೆ ಕೆಳಗೆ ಬೀಳುತ್ತದೆ. ಹೀಗಾಗಿ ವೃಕ್ಷದ ತನ್ನ ಸಂತಾನ ಎಲ್ಲೆಲ್ಲೂ ಹರಡಿದೆ. ವೃಕ್ಷದ ಬೇರು ಭೂಮಿಯಲ್ಲಿ ಹರಡಿರುವುದರಿಂದ ಅದಕ್ಕೆ ಚಲನೆ ಇಲ್ಲ. ಆರೂ ಋತುಗಳಲ್ಲಿ ಯಾವ ಮರಕ್ಕೂ ಗಾಯ ಮಾಡದೆ ತಾನೂ ಗಾಯ ಮಾಡಿಕೊಳ್ಳದೆ ಸುಂದರವಾಗಿ ಅರಳಿನಿಂತ ಮಾತೇ ಇಲ್ಲದ ಮೌನಿ ವೃಕ್ಷ!

ನೀರಬೊಂಬೆ ಕೂಡಾ ಸುಂದರವಾದ ಅರಿವಿನ ವೃಕ್ಷ! ಸಿದ್ದಾರ್ಥ ಇದನ್ನು ಬೋಧಿ ವೃಕ್ಷ ಎಂದು ಕರೆದ. ತತ್ವಪದಕಾರರು 'ಗಿಡ ನೋಡ ತಂಗೆಮ್ಮಾ ಬುಡಮೇಲಾಗಿಹುದು' ಎಂದು ಹಾಡಿದ್ದಾರೆ. ಸರ್ವ ಋತುಗಳಲ್ಲಿಯೂ ಕೂಡಾ ಅರಿವಿನ ಸಿಹಿ ಫಲಗಳನ್ನು ನಡೆದಾಡುತ್ತಾ ಕೊಡುವ ಶ್ರೇಷ್ಠಾತಿ ಶ್ರೇಷ್ಠ ವೃಕ್ಷ!

ನೀರು ಬೊಂಬೆಯಾದುದನು, ಅದರಲ್ಲಿ ತತ್ವ ಅಡಗಿದುದನ್ನು, ಅದರಿಂದಲೇ ತಿಳಿದು, ಅದಕ್ಕೆ ಅದೇ ಗುರುವಾದುದನ್ನು, ಗುರುವಿನ ದಯದಿಂದಲೇ ಒಪ್ಪದಲಿ ಕಂಡೆ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ತಮಗೆ ತಾವೇ ಹಾಡಿಕೊಂಡಿದ್ದಾರೆ.

**365**

**ಒಲಿವೆ ನಿನ್ನವರ ನೀನೆಂದಡೆ,**
**ಒಲಿವೆ ನಿನ್ನವರ ಮೂರ್ತಿಧ್ಯಾನದಲ್ಲಿ ಮೂರ್ಛೆವೋದರೆ,**
**ಒಲಿವೆ ವಿಭೂತಿ ರುದ್ರಾಕ್ಷಿ ಲಾಂಛನಧಾರಿಯ,**
**ಮಾನಸ ವಾಚಕ ಕಾಯಕದಲ್ಲಿ ನೀನೆಂದಡೆ ಒಲಿವೆ,**
**ಅಲ್ಲದಿದ್ದಡೆ ವೈತಾಳಿಕ ಸಂಯೋಗದ ಹಾಂಗೆ**
**ವೈಶಿಕವ ಬಳಸಿದಡೆ ಏಕೊಲಿವೆಯಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಒಲಿವೆ ನಿನ್ನವರ ನೀನೆಂದಡೆ :

ಕಾಯಕ್ಕೆ ಕಾಯದಲ್ಲಿಯೇ ಸಂಗಮವಾದ ಜ್ಞಾನ ಒಲಿಯುವುದು ಬಲು ಕಷ್ಟದ ಕಾಯಕ. ಕಾಯವನ್ನು ಆವರಿಸಿದ ಮನೋಕಾಯಕ್ಕೆ ಜ್ಞಾನ ಒಲಿಯುವುದು ಕೂಡಾ ಅತ್ಯಂತ ಜಟಿಲವಾದ ಕಾಯಕ.

ಜ್ಞಾನ ಕಾಯದಲ್ಲಿ ಮನೋ ಕಾಯವನ್ನು ತೊಡಗಿಸಿಕೊಂಡು, ಸ್ಥೂಲ ಕಾಯವನ್ನು ಮನೆ ಮಾಡಿಕೊಂಡು ಜ್ಞಾನಕಾಯ ಮನೋಕಾಯ ಒಂದಾದವರೆ ಜ್ಞಾನಿಗಳು. ಮನೋಕಾಯದಿಂದ ಜ್ಞಾನಕಾಯಕ್ಕೆ ಸಂಪೂರ್ಣ ಶರಣು ಹೋದವರೇ ಶರಣರು. ಜ್ಞಾನ ಕಾಯಕ್ಕೆ ಮನೋಕಾಯದಿಂದ ದಾಸು ಹೋಗಿ ದಾಸಾನುದಾಸರಾದವರೇ ದಾಸರು. ಇಂತಹ ಶರಣರು, ದಾಸರು ಮಾತ್ರ ನಿನ್ನವರು.

ನನಗೆ ನೀನು ಎಂದರೆ ಯಾರು ಎನ್ನುವುದು ಗೊತ್ತಿಲ್ಲ. ನನಗೆ ಅಂದರೆ ಮನಕ್ಕೆ, ಜ್ಞಾನ ಎಂದರೆ ಏನು ಎನ್ನುವುದು ಗೊತ್ತಿಲ್ಲ. ದೇವರು ಎಂದರೆ ಯಾರು ಎನ್ನುವುದು ಕೂಡಾ ಗೊತ್ತಿಲ್ಲ. ಹೀಗಾಗಿ ತನ್ನದೇ ಆದ ಒಂದು ದೇವರನ್ನು ಕಲ್ಲು ಕಟ್ಟಿಗೆ ಲೋಹದಲ್ಲಿ ಕೆತ್ತಿ ಅದಕ್ಕೆ ಪ್ರಾಣ ಪ್ರತಿಷ್ಠಾನದ ನಾಟಕವಾಡಿ, ಆ ದೇವರನ್ನೇ ದೇವರೆಂದು ಆರಾಧಿಸಿ, ಅಡ್ಡಬಿದ್ದು, ದೀಡ ನಮಸ್ಕಾರ ಹಾಕಿ, ಜ್ಯೋತಿ ಹೊತ್ತು ತನಗೆ ಬೇಕಾದ ಜ್ಞಾನವನ್ನು, ತನಗೆ ಬೇಕಾದ ಸಂಪತ್ತನ್ನು, ತನಗೆ ಬೇಕಾದ ವಿಷಯ ವಸ್ತುಗಳನ್ನು ಮನ ಬೇಡುತ್ತದೆ.

ಸಾವಿರಾರು ವರುಷಗಳಿಂದ ದೇವರ ವಿಷಯದಲ್ಲಿ ಮನ ತನುವನ್ನು ಅಡ್ಡದಾರಿ ಹಿಡಿಸಿ ಬೇಡುತ್ತ ಬಂದಿದೆ. ಆದರೂ ದೇವರು ಯಾವ ದೇಹಕ್ಕೂ ಒಲಿತಿಲ್ಲ. ಒಲಿಯಲು ಅವನು ಹೊರಗಿಲ್ಲ. ದೇಹದೊಳಗೆ ಇದ್ದ ದೇವರನ್ನು ದೇಹವನ್ನು ಆವರಿಸಿದ ಮನ ಕಂಡು ಹಿಡಿದು ಆ ದೇವರಿಗೆ ಶರಣು ಹೋದ ದೇಹಗಳೇ ದೇವರ ದೇಹಗಳು. ಅಂದರೆ ಜ್ಞಾನ ಮತ್ತು ಮನ ಒಂದಾದ ದೇಹಗಳು. ಇಂಥವರ ಸಂಗವನ್ನು ಯಾವ ದೇಹ ಮಾಡುತ್ತದೆಯೋ ಅಂಥವರಿಗೆ ಮಾತ್ರ ನೀನು ಒಲಿವೆ. ಏಕೆಂದರೆ ಅವರು ಜ್ಞಾನಿಗಳು. ಜ್ಞಾನದ ಮಾತುಗಳನ್ನು ಮಾತ್ರ ಆಡುತ್ತಾರೆ. ಜ್ಞಾನಕ್ಕೆ ಕರೆದುಕೊಂಡು ಹೋಗುವ ಮಾತುಗಳನ್ನು ಮಾತ್ರ ಆಡುತ್ತಾರೆ. ಅವರು ಮಾತ್ರ ನಿನ್ನವರು.

ನೀನು ಆರಾಧಿಸುವ ದೇವರು ಸುಳ್ಳು. ನೀನು ಪೂಜಿಸುವ ಮೂರ್ತಿ ಸುಳ್ಳು, ನೀನು ಹೋಗುವ ಪುಣ್ಯಕ್ಷೇತ್ರಗಳೂ ಸುಳ್ಳು. ಅದೆಲ್ಲ ಮನ ದೇಹದೊಂದಿಗೆ ಮಾಡಿಕೊಂಡ ಕಾಂಟ್ರ್ಯಾಕ್ಟ. ಗುತ್ತಿಗೆ; ಹೊರಗುತ್ತಿಗೆ.

ಮನಕ್ಕೆ ಎಲ್ಲಿಯವರೆಗೆ ಜ್ಞಾನಿಗಳ ಪರಿಚಯವಾಗುವುದಿಲ್ಲವೋ ಅಲ್ಲಿಯವರೆಗೆ ದೇಹ ಮತ್ತು ಮನದ ಹೊರಗುತ್ತಿಗೆ ನಿಲ್ಲುವುದಿಲ್ಲ. ಜ್ಞಾನಿಗಳ ಪರಿಚಯ ಮನಕ್ಕೆ ಆದರೆ ಸಾಕು, ಅವರು ಮನವನ್ನು ಹಿಡಿದು ತನ್ನ ನಿಜದೇವರ ದರುಶನ ಮಾಡಿಸುತ್ತಾರೆ. ಆಗ ಮನ ಮೂರ್ತಿ ಪೂಜೆ ಮಾಡುವುದನ್ನು ಬಿಟ್ಟು ದೇವರನ್ನು ಕಂಡು ದೇವರು ತಾನು ಒಂದಾದ ದೇವರನ್ನು ಆರಾಧಿಸುತ್ತದೆ. ಅವರ ಸಂಗ ಮಾಡುತ್ತದೆ.

ಭಸ್ಮ ಧರಿಸುವುದೆಂದರೆ ಸಾಮಾನ್ಯವಲ್ಲ. ಮನ ತನ್ನ ಅರಿಷಡ್ವರ್ಗಗಳನ್ನು ಅಷ್ಟ ಮದಗಳನ್ನು ಸಪ್ತವ್ಯಸನಗಳನ್ನು ಸುಟ್ಟುಕೊಂಡು ಅದರ ಭಸ್ಮವನ್ನು ಹಣೆಗೆ ಧರಿಸಿದ ಸಂಕೇತ. ಅದು ತನ್ನ ಅಜ್ಞಾನವನ್ನು ತಾನೇ ಸುಟ್ಟುಕೊಂಡ ಮೇಲೆ ವಿಭೂತಿ ಹಣೆಗೆ ಧರಿಸುವ ಸಂಕೇತ. ಏನೂ ತಿಳಿಯದೆ ವಿಭೂತಿ ಧರಿಸುವುದು ತನಗೆ ತಾನೇ ಮೋಸಕ್ಕೆ ಒಳಗು ಮಾಡಿಕೊಂಡಂತೆ.

ಹಾಗೆಯೇ ರುದ್ರಾಕ್ಷಿ ಧರಿಸುವುದೆಂದರೆ ಮೈತುಂಬ ಅರಿವಿನ ಕಣ್ಣುಗಳನ್ನು ಧಾರಣೆ ಮಾಡಿಕೊಂಡು ಅಜ್ಞಾನವನ್ನು ಹೊಡೆದೋಡಿಸಿದ ಸಂಕೇತ. ರುದ್ರಾಕ್ಷಿ ಧರಿಸಿದರೂ ಭಸ್ಮ ಧರಿಸಿದರೂ ಕೂಡಾ ದೇಹದಲ್ಲಿ ಕಾಮ ಕ್ರೋಧಾದಿ ಅರಿಷಡ್ವರ್ಗಗಳು ಸುಳಿದಾಡುತ್ತಿದ್ದರೆ ಧರಿಸಿದ ವಿಭೂತಿ ರುದ್ರಾಕ್ಷಿ ಕಾವಿ ಬಟ್ಟೆಗೆ ಅವುಗಳನ್ನು ತಡೆದು ನಿಲ್ಲಿಸುವ ಶಕ್ತಿ ಇಲ್ಲ. ಅಂದ ಮೇಲೆ ಭಸ್ಮ ರುದ್ರಾಕ್ಷಿ ಕಾವಿ ಧರಿಸುವುದು ತಪ್ಪೆಂದು ಮನಕ್ಕೆ ಹೊಳೆಯುವುದೇ ಇಲ್ಲ. ಬದಲಾಗಿ ವಿಷಯ ಸುಖಕ್ಕೆ ಇಂಬು ನೀಡುತ್ತವೆ. ಅಂದ ಮೇಲೆ ಧರಿಸಿದ ಕಾಯಗಳು ಆಲೋಚನೆಗೆ ತೊಡಗಲೇಬೇಕು. ತನಗೆ ತಾನೇ ಮೋಸ ಮಾಡಿಕೊಳ್ಳುವುದು, ಉಳಿದ ಕಾಯಗಳಿಗೆ (ತಾನು ಜ್ಞಾನಿ ಎಂದು ಸುಳ್ಳು ಲಾಂಛನಗಳನ್ನು ತೋರಿ) ಮೋಸ ಮಾಡುವುದು ಅಕ್ಷಮ್ಯ ಅಪರಾಧ. ಶರಣ ಅದ್ಯಾವುದನ್ನು ಧರಿಸುವುದಿಲ್ಲ. ಏಕೆಂದರೆ ಸ್ವತಃ ಆತನ ಕಾಯ ಭಸ್ಮಕಾಯವಾಗಿರುತ್ತದೆ. ಕಾಯದ ತುಂಬ ಅರಿವಿನ ಕಣ್ಣುಗಳು ಮೂಡಿರುತ್ತವೆ.

ರುದ್ರಾಕ್ಷಿ ಭಸ್ಮ ಕಾವಿ ಧರಿಸಿದ ಕಾಯಗಳು ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಜ್ಞಾನಕಾಯದ ಸಂಗ ಮಾಡದಿದ್ದರೆ ವೈಶಿಕವನ್ನು ಬಳಸಿದಂತೆ. ಅಂತಹ ಕಾಯಕ್ಕೆ ಜ್ಞಾನ ಲಭಿಸುವುದಿಲ್ಲ.

ಅಂಥವರನ್ನು ಶರಣರೆಂದು ತಿಳಿದು ಸಂಗ ಮಾಡಿದರೆ ವೈಶಿಕ ವಿಷಯಗಳಿಗೆ ಓಲೈಸುವವರ ಸಂಯೋಗದಂತೆ. ಅಂಥ ಕಾಯಗಳಿಗೆ ಹೇಗೆ ಒಲಿಯುವನು ಕಪಿಲಸಿದ್ಧ ಮಲ್ಲಿಕಾರ್ಜುನಾ.

**366**

**ಒಂದೊಂದು ಪರಿಯ ಪ್ರಕೃತಿಯ ಬೊಂಬೆಗಳಾಡಲಿಕೆ**
**ಕಂಡೂ ಕಾಣದ ಸೀಯ್ಯರವರು.**
**ಗಂಡುಗಲಿ ಕಾಮನನು ಭಂಡು ಮಾಡಿಯೆ ತಗುಳ್ದ**
**ಗಂಡುಗಲಿ ಶರಣರಾಳಯ್ಯಾ ನಾನು.**
**ಕಾಮಹರ ನಿಸ್ಸೀಮ ಕಪಿಲಸಿದ್ಧ ಮಲ್ಲೇಶಾ**
**ಶರಣು ಶರಣೆಂಬೆನಯ್ಯಾ ನಿಮ್ಮವರ ಶ್ರೀಚರಣಕ್ಕೆ.**

ಭೂಮಿಯ ಮೇಲೆ ನಾನಾ ಪರಿಯ ಪ್ರಕೃತಿಯ ಬೊಂಬೆಗಳಿವೆ. ಪ್ರಕೃತಿಯಿಂದ ಬಂದು ಪ್ರಕೃತಿಯನ್ನೇ ಮರೆತಿವೆ. ತಾನಾರು ಎನ್ನುವ ಪರಿಚಯವಿಲ್ಲ. ತನ್ನಂತೆಯೇ ಇರುವ ತನುಗಳ ಪರಿಚಯವೂ ತನುವಿಗೆ ಇಲ್ಲ.

ಶ್ರೇಷ್ಠಾತಿ ಶ್ರೇಷ್ಠ ಮನುಜನೆಂದು ಪ್ರಕೃತಿ ದತ್ತವಾದ ಬಿರುದು ಪಡೆದಿದ್ದರೂ ಅದು ಬಿರುದು ಮಾತ್ರ ಆಗಿದೆ ಹೊರತು ಬ್ರಹ್ಮಾಂಡದ ಸುಖ ತನಗಿಲ್ಲ. ಬ್ರಹ್ಮ ಸುಖ ತನ್ನಲ್ಲಿ ಬಚ್ಚಿಟ್ಟುಕೊಂಡಿದ್ದರೂ ಅದನ್ನು ಬಿಚ್ಚಿ ಹುಡುಕಿ ಉಣ್ಣುವ ತಾಕತ್ತು ಕೂಡಾ ತನಗಿಲ್ಲ

ಪ್ರಕೃತಿಯ ಬೊಂಬೆಗಳು ಆದರೂ ಕಳ್ಳ ಪೊಲೀಸನ ಆಟವಾಡುತ್ತಲಿವೆ.

ಎಲ್ಲವೂ ನೀರಬೊಂಬೆಗಳೇ ಆಗಿವೆ. ನಿರಾಳದ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತಲಿವೆ. ಬ್ರಹ್ಮಾಂಡದ ಬಯಲನ್ನೇ ಮಡಚಿ ಬಚ್ಚಿಟ್ಟುಕೊಂಡಿವೆ. ಆದರೂ ತನುವಿಗೆ ಗೊತ್ತಿಲ್ಲ. ಗೊತ್ತಿರುವ ತನುವನ್ನು ಕಂಡು ಹಿಡಿಯಲು ತನುಗಳಿಗೆ ಸಾಧ್ಯವಾಗುತ್ತಿಲ್ಲ.

ಗಂಡುಗಲಿ ಕಾಮನನ್ನು, ತನ್ನ ಉರಿಗಣ್ಣಿನಿಂದ ಸುಟ್ಟು ಬೂದಿ ಮಾಡಿದ ಮುಕ್ಕಣ್ಣನನ್ನು,

ಕಾಮ ಭರಿತವಾದ ಕಾಯಗಳು ಕಂಡು ಹಿಡಿಯುವುದಾದರೂ ಹೇಗೆ? ಕಾಯ ಬದುಕುವ ಕಾಯಕದಲ್ಲಿ ನಿರತವಾಗಿದೆ. ಕಾಯದೊಂದಿಗೆ ಕಾಯ ಕಾಮದ ಸುಖದಲ್ಲಿ ನಿರತವಾಗಿದೆ. ಕಾಯದಲ್ಲಿಯೇ ಸಂಗಮವಾದ ಕಾಮಹರನನ್ನು ಕಂಡುಕೊಳ್ಳುವ ಕಾಯಕ ಕಾಯಕ್ಕೆ ಪರಿಚಯವೇ ಇಲ್ಲ.

ಕಾಯದಲ್ಲಿಯೇ ಸಂಗಮವಾದ ಕಾಮಹರನನ್ನು ಕಂಡು ಅವನಿಗೆ ಹಣೆಮಣಿದು ಶರಣು ಹೋದ ಶರಣರು ಮಾತ್ರ, ಗಂಡುಗಲಿಗಳು. ಅಂತಹ ಗಂಡುಗಲಿ ಶರಣರಿಗೆ ಆಳಾಗುವುದು ಕಾಯಗಳಿಗೆ ಬರಬೇಕಲ್ಲ? ಗಂಡುಗಲಿ ಕಾಮನನ್ನು ಭಂಡುಮಾಡಿ ಹೊರದಬ್ಬಿದ ನಿಸ್ಸೀಮರನ್ನು ಕಳ್ಳ ಪೊಲೀಸನ ಆಟವಾಡುವ ಕಾಯಗಳಿಗೆ ಬರಬೇಕಲ್ಲ?

ಕಾಯಕ್ಕೆ ಕಾಯಗಳೇ ಕಳ್ಳನೆಂದು, ಭ್ರಷ್ಟನೆಂದು, ಶಾಸಕನೆಂದು, ಸಚಿವನೆಂದು, ಹೆಣ್ಣೆಂದು, ಗಂಡೆಂದು ಮುಂತಾದ ಹೆಸರಿನಿಂದ ಗುರುತಿಸಿ ಕರೆಯುತ್ತವೆ. ಕಾಯವನ್ನು ತನ್ನಂತೆಯೇ ಇರುವ ಕಾಯವೆಂದು ಅದು ಬ್ರಹ್ಮಕಾಯವೆಂದು ಗುರುತಿಸುವ ಕಾಯಕದಲ್ಲಿ ಕಾಯ ನಿರತವಾದಾಗ ಅದಕ್ಕೆ ಪರಮ ಸುಖ ತನ್ನಲ್ಲಿಯೇ ದೊರೆಯುತ್ತದೆ. ತನ್ನಂತೆಯೇ ಸಕಲ ಕಾಯಗಳು ಬ್ರಹ್ಮಕಾಯಗಳೇ ಆಗಿವೆ ಎಂದು ಗುರುತಿಸಿ ಸಕಲ ಕಾಯಗಳಿಗೂ ಕಾಯ ಶರಣು ಸಮರ್ಪಿಸುತ್ತದೆ.

ಕಾಯದಲ್ಲಿಯೇ ಸಂಗಮವಾದ ಕಾಮಹರನನ್ನು ಕಂಡು ಹಿಡಿದು ಅವನಿಗೆ ಶರಣು ಹೋಗಿ ಕಾಯವನ್ನು ಆವರಿಸಿದ ಕಾಮನನ್ನು ಭಂಡುಮಾಡಿ ಹೊರದಬ್ಬಿದ ಶರಣನೇ ಗಂಡುಗಲಿ. ಅವನು ತನಗೆ ತಾನೇ ಬುದ್ಧನೆಂದು ಕರೆದುಕೊಂಡ. ಮಹಾವೀರನೆಂದು ಕರೆದುಕೊಂಡ!

ಅಂತಹ ಗಂಡುಗಲಿ ಶರಣರ ಆಳಯ್ಯಾ ನಾನು ಎಂದು ಸಿದ್ಧರಾಮ ಶಿವಯೋಗಿಗಳು ಡಂಗುರ ಹೊಡೆದು ಸಕಲ ಕಾಯಗಳಿಗೆ ತಿಳಿಯುವಂತೆ ಸಾರಿದ್ದಾರೆ. ಅಂಥವರ ಶ್ರೀಚರಣಕ್ಕೆ ಶರಣು ಹೋಗಿ ಶರಣೆಂಬೆನಯ್ಯಾ ಎಂದಿದ್ದಾರೆ. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲೇಶನಿಗೆ ಶರಣು ಹೋಗಿ ಬ್ರಹ್ಮರಸವನ್ನು ಪಾನಮಾಡಿದ್ದಾರೆ. ಕಾಮಹರ ನಿಸ್ಸೀಮನ ಸಂಗಮಾಡಿ, ಗಂಡುಗಲಿ ಕಾಮನನ್ನು ಭಂಡುಮಾಡಿ ಹೊರಬಿದ್ದ ಗಂಡುಗಲಿಗಳೇ ತಾವಾಗಿದ್ದಾರೆ. ಶರಣರಿಗೆ ಆಳಾಗಿ ಶರಣರಿಗೆ ಶರಣು ಹೋಗಿ ಶರಣರೇ ತಾವಾಗಿದ್ದಾರೆ.

ಕಥನವಲ್ಲದ ಕಥನವನ್ನು ಓದಿ ಕಾಮನೊಂದಿಗೆ ಯುದ್ಧಮಾಡುವ ಕಾಯಕ ಸಕಲ ಕಾಯಗಳಿಗೂ ಲಭ್ಯವಾಗಲಿ ಎಂಬ ಮಹದಾಸೆಯ ಹೊಂದಿ ಒಂದೊಂದು ಪರಿಯ ಪ್ರಕೃತಿಯ ಬೊಂಬೆಗಳ ಆಟವನ್ನು ದಾಖಲಿಸಿದ್ದಾರೆ. ಕಂಡೂ ಕಾಣದ ಮಹನೀಯರವರು. ಅಂಥ ಮಹಿನೀಯರನ್ನು ಗಂಡುಗಲಿಗಳು ಮಾತ್ರ ಕಾಣಲು ಸಾಧ್ಯ!

**367**

**ಒಂದೊಂದು ಮಠದಲ್ಲಿ**
**ತುಂಬಿ ಒಂಬತ್ತರಾಳಾದ**
**ಸಂಭ್ರಮದಿ ಮೊರೆವುತದೆ ಅಯ್ಯಾ.**
**ಆನತದ ಮೀರಿಪ್ಪ**
**ಮೇಣು ಆದಿಯ ಆಧಾರದಿಂದತ್ತಲಿ**
**ತುಂಬಿದಾ ಕೊಡದಲಿ ಒಂದು ಬಿಂದು ಭವಿಸಲು**

**ಸಂದುದಖಿಳ ಬ್ರಹ್ಮಾಂಡವು.**
**ಎನ್ನ ತಂದೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ನಿಮ್ಮ ಭಕ್ತಿಯಾದಂದ ವಾರುಧಿಯ ಪರಿಯಾಯ.**

ಒಂಬತ್ತು ಬಾಗಿಲುಗಳುಳ್ಳ ಅರಿವಿನ ಮಠ, ಸಂಭ್ರಮದ ಮಠ. ಆದಿ ಆಧಾರದಿಂದಲೂ ಅತ್ತತ್ತಲಿದ್ದ ಅರಿವಿನ ಮನೆ. ಇಂಥ ಮಠವನ್ನು ದೇಹ ಅಂಗ ತನು ಶರೀರ ಕಾಯ ಎಂದು ಕರೆದಿದ್ದಾರೆ. ಶರಣರು ಇದನ್ನು ಲಿಂಗಾಂಗ ಎಂದು ಕರೆದಿದ್ದಾರೆ.

ತತ್ವಪದಕಾರರು ತನುವನ್ನು ಒಂಬತ್ತು ತೂತಿನ ಚಿತ್ತಾರದ ಕೊಡ ಎಂದು ಕೂಡಾ ಕರೆದಿದ್ದಾರೆ.

ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಹೊರಳೆಗಳು, ಒಂದು ಬಾಯಿ, ಜನನಾಂಗ ಒಂದು, ಗುದದ್ವಾರ ಒಂದು. ಹೀಗೆ ಒಂಬತ್ತು ಅರಿವಿನ ದ್ವಾರಗಳುಳ್ಳ ಸಂಭ್ರಮದ ದೇಹವನ್ನು ಸಿದ್ಧರಾಮ ಶಿವಯೋಗಿಗಳು ಮಠ ಎಂದು ಕರೆದಿದ್ದಾರೆ.

ಆದಿ ಆಧಾರದಿಂದ ಅತ್ತತ್ತಲಿರುವ ಬ್ರಹ್ಮಾಂಡವೇ ಬಿಂದುವಾಗಿ ಕಾಯದಲ್ಲಿ ಅಡಗಿದೆ. ಬಯಲೇ ಜೀವ ಜಲಬಿಂದುವಾಗಿ, ಪಿಂಡವಾಗಿ, ರಕ್ತ ಮೂಳೆ ಮಾಂಸ ಮಜ್ಜೆಯಾಗಿ ಇವು ಸೋರದಂತೆ ಚರ್ಮವಾಗಿ, ಸುಂದರವಾಗಿ ಹೊಲಿದುಕೊಂಡು ಕಾಯವೆಂಬ ಹೆಸರು ಪಡೆದ ಕೈಲಾಸವಾಗಿದೆ.

ತುಂಬಿದ ಕೊಡದಲಿ ಒಂದು ಬಿಂದು ಭವಿಸಲು ಸಂದುದಖಿಳ ಬ್ರಹ್ಮಾಂಡವು :

ವಾರಿಕಲ್ಲ ಕೊಡನ ತುಂಬಾ ಮುತ್ತು ಮಾಣಿಕವು ತುಂಬಿ ಎತ್ತುವವರಿಲ್ಲದೆ ಸಖಿಯನರಸುತಿಪ್ಪೆ ಎಂದಿದ್ದಾಳೆ ಶಿವಶರಣೆ ಮಸರಕಲ್ಲಿನ ಮುಕ್ತಾಯಕ್ಕ.

ತನುವು ಸಂಭ್ರಮದ ಒಂಬತ್ತು ದ್ವಾರಗಳಿಂದ ಭರಿತವಾಗಿದೆ. ಅದರಲ್ಲಿಯ ಒಂದು ದ್ವಾರಕ್ಕೆ ಸೃಷ್ಟಿಕರ್ತ ಪರಮಾತ್ಮನಿಗೆ ಜನ್ಮ ಕೊಡುವ ಶಕ್ತಿ ಅದಕ್ಕಿದೆ. ಆ ಮಹಾದ್ವಾರದ ಮುಖಾಂತರ ತುಂಬಿದ ಕೊಡವೊಂದಕ್ಕೆ ಒಂದು ಬಿಂದು ಭವಿಸಲು ಸಂದುದಖಿಳ ಬ್ರಹ್ಮಾಂಡವು.

ಎನ್ನ ತಂದೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿಮ್ಮ ಭಕ್ತಿಯಾದಂದ ವಾರುಧಿಯ ಪರಿಯಾಯ. ಸಿದ್ಧರಾಮ ಶಿವಯೋಗಿ :

ಬ್ರಹ್ಮಾಂಡವೇ ಒಂದು ಬಿಂದುವಾಗಿ ಅಂಗದಲ್ಲಿ ಸಂಗಮವಾಗಿ, ಅಂಗದ ಒಂದು ದ್ವಾರದ ಮೂಲಕ ಅಂಗವೆಂಬ ತುಂಬಿದ ಕೊಡವನ್ನು ಪ್ರವೇಶ ಮಾಡಿ, ಅಖಿಲ ಬ್ರಹ್ಮಾಂಡವೇ ತಾನಾಗಿ ಲಿಂಗಾಂಗವಾಗಿ ಹೊರಬಂದಿದೆ. ಪರಿಯಾಯ ಪಾಲ್ಗಡಲವಾಗಿ ನಿಂತಿದೆ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**368**

**ಒಂದೊಂದು ವೇಷ ದುರ್ವೇಷದಲ್ಲಿ ಬಂದುದ**
**ಮಾಡಿತ ಮೇಲೆ ಕಂಡ ! ಓ ಓ ! ಅಯ್ಯಾ .**
**ಪೂರ್ವಾಚಾರಿಯ ಮರೆಯದಿರಾ, ಹಾ ! ಹಾ ! ಅಯ್ಯಾ ,**
**ಅಲ್ಲಿ ಭಕುತಿ ವಿಕೃತಿಗಳ ಮಾಡುವರೆ ?**
**ಕಪಿಲಸಿದ್ಧ ಮಲ್ಲೇಶ್ವರನನು ಕಂಡಾ !**

ತನು. ಆದರೂ ತನುವಿನ ವೇಷ ಅನಂತ. ತನು, ತನುವೆಂದು; ತಾನು ಶುದ್ಧ ತನುವೆಂದು ತನುವೇ ತಿಳಿದುಕೊಂಡಾಗ ತನುವಿನ ವೇಷ ಕಳಚುವುದು.

ತನು, ತನುವೆನ್ನುವುದನ್ನೇ ತನು ಸಾವಿರಾರು ವರುಷಗಳಿಂದ ಮರೆತು ಹೋಗಿದೆ. ತನುವಿನ ಸಂಪತ್ತು ತನುವಿನಲ್ಲಿಯೇ ಬಚ್ಚಿಟ್ಟುಕೊಂಡಿರುವುದರಿಂದ ಮನ ತನುವಿಗೆ ವೇಷ ಹಾಕಿದೆ. ಹೆಣ್ಣಿನ ವೇಷ; ಗಂಡಿನ ವೇಷ ! ಜಾತಿ ಮತ ಪಂಥಗಳ ವೇಷ ! ಗುರು ಶಿಷ್ಯನ ವೇಷ ! ಶ್ರೀಮಂತ ಬಡವನ ವೇಷ ! ಅಧ್ಯಕ್ಷ ಪ್ರಧಾನಿ ಸಚಿವ ಶಾಸಕನ ಸೈನಿಕನ ವೇಷ ; ಜಿಲ್ಲಾಧಿಕಾರಿ ಜವಾನನ ವೇಷ!

ಮನ ಹೀಗೆ ತನುವಿಗೆ ವೇಷ ಹಾಕಿರುವುದರಿಂದ ತನುವಿನಲ್ಲಿ ಅರಿವೆಂಬ ಗುರುದೇವನು ಮನಕ್ಕೆ ಅರಿವಿನ ಪಾಠ ಮಾಡುತ್ತಿದ್ದಾನೆ. ಆದರೂ ಮನ ಕೇಳುತ್ತಿಲ್ಲ. ಆತ ತನುವಿನ ಸೃಷ್ಠಿಗೆ ಕಾರಣವಾದ ಪೂರ್ವಾಚಾರಿ. ಆ ಪೂರ್ವಾಚಾರಿಯನ್ನೇ ಬದಿಗಿಟ್ಟು ಮನ ತನುವಿಗೆ ವೇಷ ಹಾಕಿ; ಹಾಕಿದ ವೇಷದೊಂದಿಗೆ ತನುವಿನ ಮೂಲಕ ಸುಖಿಸುತ್ತಲಿದೆ.

ಹಾ ! ಹಾ ! ಅಯ್ಯಾ , ಅಲ್ಲಿ ಭಕುತಿ ವಿಕೃತಿಗಳ ಮಾಡುವರೆ ? :

ತನುವಿನಲ್ಲಿ ಅಜ್ಞಾನದ ಭಕ್ತಿಯ ಢೋಂಗಿಯೂ ನಡೆದಿದೆ. ಹಾಗೆಯೆ ಹಾದರದ ವಿಕೃತಿಯೂ ನಡೆದಿದೆ. ಮನ, ತನುವಿನೊಂದಿಗೆ ಮಾಡುತ್ತಿರುವ ಢೋಂಗಿ ಭಕುತಿಯನ್ನು, ವಿಕೃತಿಯ ಹಾದರವನ್ನು ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಪಾಠ ಮಾಡಿ ಖಂಡಿಸುವುದು ಕೂಡಾ ನಡೆದಿದೆ.

ಅರಿವೆಂಬ ಗುರುದೇವನ ಪಾಠ ನಿಂತಿಲ್ಲ ; ಮನವೆಂಬ ವೇಶಿಯ ಹಾದರವೂ ನಿಂತಿಲ್ಲ. ಓ! ಓ ! ಅಯ್ಯಾ , ಪೂರ್ವಾಚಾರಿಯೆಂಬ ಗುರುದೇವನನ್ನು ಮರೆತ ಫಲ ತನು ಮನಗಳೆರಡೂ ಉಣ್ಣುತ್ತಲಿವೆ. ಪೂರ್ವಾಚಾರಿಯನ್ನು ಮರೆತ ಫಲ ತನುವು ಭೋಗಿಸುತ್ತಲಿದೆ. ಮನದ ಕಿವಿ ಕಿವುಡಾಗಿದೆ. ತನುವಿನೊಂದಿಗೆ ಹಾದರದ ಸುಖದಿಂದ ಮನ ಸುಖಿಸುತ್ತಲಿದೆ. ಇದು ಹಾದರ, ಇದು ಹಾದರದ ವೇಷ; ನಾನು ತನುವಿನೊಂದಿಗೆ ಸಂಗ ಮಾಡಬಾರದಿತ್ತು ಎಂದು ಮನಕ್ಕೆ ಹೊಳೆಯುವುದಿಲ್ಲ.

ತನು, ಪೂರ್ವಾಚಾರಿ ವಾಸ ಮಾಡಿದ ಕೈಲಾಸ. ಮನವೆಂಬ ನಾನು ಆ ಪೂರ್ವಾಚಾರಿಯ ದಾಸಾನು ದಾಸನಾದಾಗಲೇ ತನುವಿಗೆ ಅಂಟಿದ ಸಕಲ ಅಜ್ಞಾನದ ಕಲೆಗಳು ಉದುರಿ ಬೀಳುತ್ತವೆ ಎಂಬುದು ಮನಕ್ಕೆ ಹೊಳೆದಾಗಲೇ ತನು ಸುಖವಾಗಿರುತ್ತದೆ.

ತನುವಿನ ವೇಷ ಕಳಚಿ ಕೊಳ್ಳಬೇಕಲ್ಲ ಎಂದು ತನುವಿನಲ್ಲಿಯೇ ಪೂರ್ವಾಚಾರಿಯ ಸುಳುಹುಗಳು ಸುಳಿ ಸುಳಿದು ಮನವನ್ನು ಶಾಂತಗೊಳಿಸುತ್ತವೆ.

ತನುವಿನ ಸಕಲ ವಿಕೃತಿಗಳೂ ಉದುರಿ; ಅರಿವಿನ ಭಕ್ತಿ ಪ್ರಾರಂಭವಾಗುತ್ತದೆ.

**369**

**ಒಡಗೂಡಿದ ಒಚ್ಚತನವ ಬಿಡುಮರು ಬಲ್ಲರೆ,**
**ಮೃಡ ನಿಮ್ಮ ಶರಣರಲ್ಲದೆ?**
**ಕಡಲೊಳಗಣ ಮುತ್ತಿಪ್ಪ ಕಡು ಪೂತದ ಭೇದವನು**
**ಜಡ ಜೀವಿಗಳು ಬಲ್ಲರೆ ಮೃಡ ನಿಮ್ಮ ಶರಣರಲ್ಲದೆ?**

ಕಪಿಲಸಿದ್ಧ ಮಲ್ಲಿಕಾರ್ಜುನಾ.

ಜನನ ಮರಣಂಗಳಿಲ್ಲದಂತೆ, ತೆರಹಿಲ್ಲದಂತೆ, ನುಡಿಗೆ ಎಡೆಗೊಡದೆ, ಅಂಗದಲ್ಲಿಯೇ ಸಂಗಮವಾಗಿದ್ದೂ ಅಂಗಕ್ಕೆ ಅರಿವಾಗದಂತೆ ಸುಖದಿಂದ ಇರುವ ಕರುಣಾಕರನು ಆತ. ಕರುಣಸಾಗರದೊಳಗೆ ಮುಳಗಾಡುವ ಕರುಣಾಮಯನು ಆತ.

ಮನವನ್ನು ಸೃಷ್ಟಿ ಮಾಡಿ; ಮನಕ್ಕೆ ತನ್ನ ದರುಶನ ನೀಡಲು ಅನುದಿನವೂ ಮನಕ್ಕೆ ಪಾಠ ಮಾಡುವ ಮಹಾ ಮಹಿಮನು ಆತ. ಆತನ ಲೀಲೆ ಅನಂತ. ಒಡಲೊಳಗೆ ಒಡಗೂಡಿದ ಒಚ್ಚತನವ ಬಿಡುಮರು ಬಲ್ಲರೆ, ಮೃಡ ನಿಮ್ಮ ಶರಣರಲ್ಲದೆ?

ಕೌಶಿಕನ ಅರಸಿಯಾದರೂ, ಅಕ್ಕ ಅರಸನನ್ನು ಅರಸುತನವನ್ನು ಧಿಕ್ಕರಿಸಿ ಭಗವಂತನೊಂದಿಗೆ ಮಾತನಾಡುತ್ತಾ ಆತನ ಸಂಗಾತಿಯಾಗಿ ಪರಮಸುಖಿಯಾದಳು. ಹೀಗಾಗಿ ಅಕ್ಕ ಯಾರನ್ನೂ ಬೇಡಲಿಲ್ಲ. ಹಸಿವಾದಡೆ ಭಿಕ್ಷಾನ್ನಗಳನ್ನೆ ಮೃಷ್ಟಾನ್ನದಂತೆ ಸವಿದಳು. ತೃಷೆಯಾದಡೆ ಕೆರೆಭಾವಿಗಳ ಆಶ್ರಯ ಪಡೆದಳು. ಶಯನಕ್ಕಾಗಿ ಪಾಳುಬಿದ್ದ ದೇವಾಲಯಗಳಲ್ಲಿ ವಿರಮಿಸಿದಳು. ಆತ್ಮಸಂಗಾತಕ್ಕಾಗಿ ಮಲ್ಲಿಕಾರ್ಜುನನೊಂದಿಗೆ ವಿಶ್ರಮಿಸಿದಳು. ಭಗವಂತನೊಂದಿಗೆ ಮಾತನಾಡುವ ಉಣ್ಣುವ ಮಲಗುವ ಕಲೆಯನ್ನು ಕಲಿತು ಸದಾ ಸಹಜ ಸುಖದಲ್ಲಿ ಬದುಕಿದಳು. ಬದುಕುವ ಈ ಕಲೆಯನ್ನು ವಚನದ ಮೂಲಕ ಸಕಲರೂ ಉಣ್ಣಲೆಂದು ಎಂದೆಂದಿಗೂ ಹಳಸದ ಬುತ್ತಿ ಬಿಟ್ಟು ಹೋದಳು.

ಒಂದು ದೇಹದಲ್ಲಿ ಅತ್ಯಂತ ಸುಖಮಯವಾದ ಭಗವಂತನ ಸಂಸಾರವೂ ಇದೆ. ಅಜ್ಞಾನದ ಸದಾ ಉಪದ್ರವ ಕೊಡುವ ಮನದ ಸಂಸಾರವೂ ಇದೆ. ಭಗವಂತ ಮನದೊಂದಿಗೆ ಮಾತನಾಡುವ ಮಾತು ಮನದ ಗಮನಕ್ಕೆ ಬಾರದೆ ಮನದ ಉಪಟಳ ತನುವಿನೊಂದಿಗೆ ಹಗಲಿರುಳು ಎನ್ನದೆ ನಡೆದೇ ಇದೆ. ಮನದ ಉಪಟಳವನ್ನು ಏನೊಂದೆನ್ನದೆ ಸಹಜವಾಗಿ ಸ್ವೀಕರಿಸುವ ಪರಮಾತ್ಮನ ಕಾಯಕವೂ ಕಾಯದಲ್ಲಿ ನಡೆದಿದೆ. ಜಡಜೀವಿಗಳು ಬಲ್ಲರೆ ಮೃಡ ನಿಮ್ಮ ಶರಣರಲ್ಲದೆ?

ಅನ್ಯ ವಿಷಯಗಳಿಗೆ ಆಸ್ಪದ ಕೊಡದಂತೆ ಕರುಣ ಸಾಗರದೊಳಗೆ ಮುಳುಗಾಡುವ ಕರುಣಾಕರನು ಕಪಿಲಸಿದ್ಧ ಮಲ್ಲಿಕಾರ್ಜುನ. ಅಣು ಅಣುವಿನಲ್ಲಿ ರೋಮ ರೋಮದಲ್ಲಿ ತೆರಹಿಲ್ಲದಂತೆ ಅಂಗದೊಂದಿಗೆ ಒಡಗೂಡಿ ಲಿಂಗವಾಗಿ ವಿರಮಿಸಿದ್ದಾನೆ. ತಾನು ವಾಸ ಮಾಡಿದ ಅಂಗವನ್ನು ಲಿಂಗಾಂಗವನ್ನಾಗಿಸಿಕೊಂಡು ಅಂಗದಲ್ಲಿಯೇ ಪರಮ ಸುಖದಿಂದ ವಿರಮಿಸಿದ್ದಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಬಲ್ಲ ಸಿದ್ಧರಾಮ ಶಿವಯೋಗಿ ಆತನ ಸಂಗ ಮಾಡುವ ಮೂಲಕ ಮನವನ್ನು ಘನಮನವನ್ನಾಗಿಸಿ, ಸಖನಿಗೆ ಸಖಿಯಾಗಿ ಸುಖಿಯಾಗಿರುವ ಕಲೆಯನ್ನು ಸಕಲ ಓದುಗರಿಗೆ ನೀಡಿದ್ದಾನೆ. ಈ ಒಚ್ಚತನವ ಬಿಡುವರೆತ್ತ ಬಲ್ಲರು?

**370**

**ಒಡಲು ಪ್ರಾಣವನ್ನು ಇಕ್ಕಿ ಒಡಗೂಡಿದ**
**ಶರಣರ ಒಡಗೂಡಿರಿಸಾ ಎನ್ನನು**
**ನುಡಿಯ ಬ್ರಹ್ಮಕ್ಕಾನಾರನೂ ಅಯ್ಯಾ ಎನ್ನೆ**
**ಅಡಿಗಡಿಗೆ ಎನ್ನ ಜರಿಯದೆ,**

**ಎಲೆ ಮೃಡನೆ, ಶೂನ್ಯ ತಾನಾದ ಕರುಣನಾಗು**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ಅರಿವೇ ಗುರು. ಅರಿವೇ ಮಹಾದೇವ. ಅರಿವೇ ಸದಾಶಿವ. ಅಂತಹ ಸದಾಶಿವನೊಂದಿಗೆ ಸಿದ್ಧರಾಮ ಶಿವಯೋಗಿಗಳು ಮಾತನಾಡುವ ದೃಶ್ಯವನ್ನು ಅವರೇ ಸಾಕ್ಷೀಕರಿಸಿ ಚಿತ್ರಿಸಿದ್ದಾರೆ.

ಒಡಲೊಳಗಿದ್ದು ಒಡಲನ್ನು ಸೋಂಕದೆ ಒಡಲನ್ನು ಬೆಳಗುವ ಭಗವಂತ ಒಡಲನ್ನು ಒಡಲಿನ ಪ್ರಾಣವನ್ನು ಒಂದು ಮಾಡಿ ತನಗೆ ಬೇಕಾದ ಒಡಲಿನೊಂದಿಗೆ ಇದ್ದಾನೆ. ಅಂತಹ ಒಡಲೇ ಶರಣನ ಒಡಲು! ಭಗವಂತನಿಗೆ ಸಂಪೂರ್ಣ ಶರಣು ಹೋದ ಒಡಲು! ಅಂತಹ ಶರಣರ ಸಂಗದೊಂದಿಗೆ ಎನ್ನನ್ನು ಒಡಗೂಡಿ ಇರಿಸಾ ಎಂದು ಭಗವಂತನನ್ನೇ ಬೇಡಿದ್ದಾರೆ.

ಕರುಣಾಮಯಿ ಏಸುಕ್ರಿಸ್ತ ಭಗವಂತನೊಂದಿಗೆ ಮಾತನಾಡಿದ; ಕರುಣಾಮಯಿ ಪೈಗಂಬರರು ಭಗವಂತನೊಂದಿಗೆ ಮಾತನಾಡಿದರು. ಮಹಾವೀರ ಬುದ್ಧ ಭಗವಂತನೆನ್ನುವವನು ಇಲ್ಲವೇ ಇಲ್ಲವೆಂದು ಕರೆದರು. ಸತ್ಯ, ಚೈತನ್ಯ, ಅರಿವು ಎಂದು ನಾಮಕರಣ ಮಾಡಿದರು. ಆ ಅರಿವಿನೊಂದಿಗೆ ಒಂದಾದರು. ಅಂಗಕ್ಕೆ ಅಂಟಿದ ಅಜ್ಞಾನವೆಲ್ಲ ಉದುರಿಬಿತ್ತು.

ಶ್ರೀ ಶಂಕರಾಚಾರ್ಯರು ಬ್ರಹ್ಮನೆಂದು ಕರೆದರು. ಆ ಬ್ರಹ್ಮ ಕೂಡಾ ನಾನೇ ಎಂದು ಘೋಷಿಸಿದರು. ಆತನ ಶ್ರೀಚರಣಕ್ಕೆ ಮಣಿದು ಆತನಲ್ಲಿಯೇ ಒಂದಾದ ತಾನು ಆತನಲ್ಲದೆ ಅನ್ಯ ಆಗಲು ಸಾಧ್ಯವೇ?

ಶ್ರೀಕೃಷ್ಣ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತಾನೇ ಭಗವಂತ ಎಂದು ಘೋಷಿಸಿಕೊಂಡ. ಅರ್ಜುನಾ, ನಿನಗೆ ಗೊತ್ತಿಲ್ಲ. ಏನೂ ಮಾತನಾಡದೆ ನೀನು ನನ್ನಲ್ಲಿ ಶರಣು ಹೋಗು. ಸಂಪೂರ್ಣ ಶರಣಾಗತನಾಗು ಎಂದ. ಇದು ಅಹಂಕಾರದ ಮಾತೆಂದು ಓದುಗರು ತಿಳಿಯಬಹುದು. ಹಾಗೆ ತಿಳಿಯುವುದು ಸಹಜ ಕೂಡಾ. ಕೃಷ್ಣ ಅರ್ಜುನ ಇಬ್ಬರು ಮನುಷ್ಯರೇ. ಅವನು ರಾಜ; ಇವನು ಕೂಡಾ ರಾಜ. ಆತ ಭಗವಂತ ಈತ ಭಕ್ತನಾಗಲು ಹೇಗೆ ಸಾಧ್ಯ? ಎಂಬ ಆಲೋಚನೆ ಹುಟ್ಟುವುದು ಸಹಜ. ಆದರೆ ವ್ಯಾಸ ಮಹರ್ಷಿಗಳು ಮಹಾಜಾಣರು. ಶ್ರೀಕೃಷ್ಣ ಅರ್ಜುನ ಬೇರೆ ಬೇರೆ ಅಲ್ಲ. ಅವರಿಬ್ಬರೂ ಒಂದೇ. ಒಂದೇ ದೇಹದಲ್ಲಿರುವ ಇಬ್ಬರು ವಿದೇಹಿಗಳು! ಒಬ್ಬ ಶ್ರೀಕೃಷ್ಣ; ಮತ್ತೊಬ್ಬ ಅರ್ಜುನ!

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ಒಬ್ಬನಾದರೆ ಅಂಗವನ್ನೇ ಆವರಿಸಿದ ಮನವೆಂಬ ಭಕ್ತ ಮತ್ತೊಬ್ಬ ! ಆ ಭಕ್ತನೇ ಅರಿವಿನ ಲಿಂಗಯ್ಯನಿಗೆ ಶರಣುಹೋಗಿ ಶರಣಾಗತನಾಗಿದ್ದಾನೆ. ಶರಣನಾಗಿದ್ದಾನೆ.

ದೇಹವನ್ನೇ ಮನೆ ಮಾಡಿಕೊಂಡ ಕೃಷ್ಣನೊಬ್ಬ. ದೇಹವನ್ನು ಆವರಿಸಿದ ಅರ್ಜುನನೊಬ್ಬ. ಅರ್ಜುನ ಕೃಷ್ಣನಿಗೆ ಶರಣು ಹೋದಾಗ ಮಾತ್ರ ದೇಹಕ್ಕೆ ಅಂಟಿದ ಅಜ್ಞಾನದೊಂದಿಗೆ ಯುದ್ಧ ಮಾಡಿ ಜಯ ಸಾಧಿಸಬಹುದಾಗಿದೆ!

ಮನವನ್ನೇ ಶಿಷ್ಯನನ್ನಾಗಿಸಿಕೊಂಡು ಅರಿವನ್ನೇ ಗುರುದೇವನನ್ನಾಗಿಸಿಕೊಂಡು ತನಗೆ ತಾನೇ ಪ್ರಶ್ನೆ ಮಾಡಿಕೊಂಡು ಉತ್ತರ ಪಡೆಯುವ ಕಲೆ ಭಾರತ ದೇಶದಲ್ಲಿ ಮಾತ್ರ ಇದೆ. ಹೀಗಾಗಿ ಸಕಲ ರಾಷ್ಟ್ರಗಳಿಗೂ ಭಾರತ ಗುರುವೆಂದು ಕರೆಯಿಸಿಕೊಂಡಿದೆ.

ಈಗ 'ಗುರು' ಎನ್ನುವ ಮಾತು ಮಾತ್ರ ಜಾರಿಯಲ್ಲಿದೆ. 'ಗುರು' ಎಂದರೆ ಯಾರು ಎನ್ನುವುದು ಮಾತ್ರ 'ಗುರು'ವೆಂದು ಘೋಷಣೆ ಮಾಡಿಕೊಂಡವನಿಗೂ ಗೊತ್ತಿಲ್ಲ. ಶಿಷ್ಯನಾಗಿ

‘ಗುರು’ವೆಂದು ಘೋಷಣೆ ಮಾಡಿದವನಿಗೂ ಗೊತ್ತಿಲ್ಲ.

ಕ್ರಿಷ್ಣ, ಕ್ರಿಸ್ತ, ಬುದ್ಧ, ಮಹಾವೀರ, ಶಂಕರ, ಶರಣರು, ದಾಸರು ಇವರು ಯಾರಿಗೂ ಗುರುವಾಗಲಿಲ್ಲ. ಯಾರನ್ನೂ ಶಿಷ್ಯರನ್ನಾಗಿಕೊಳ್ಳಲಿಲ್ಲ. ತನುವಿನಲ್ಲಿಯೇ ಗುರುದೇವನನ್ನು ಹುಡುಕಿಕೊಂಡರು. ಆ ಗುರುದೇವನಿಗೆ ತಾವೇ ಶಿಷ್ಯರಾದರು. ‘ಅಹಂ ಬ್ರಹ್ಮಾಸ್ಮಿ’ ಎಂದು ಶಂಕರ ಬ್ರಹ್ಮನೊಂದಿಗೆ ಮಾತನಾಡಿದ. ನಾನೇ ಭಗವಂತ ಎಂದು ಕ್ರಿಷ್ಣ ಅರ್ಜುನನ್ನು ಬರಸೆಳೆದುಕೊಂಡ. ಬುದ್ಧನಿಗೆ ಸಿದ್ಧಾರ್ಥ ಶಿಷ್ಯನಾದ. ಮಹಾವೀರನಿಗೆ ವರ್ಧಮಾನ ಶಿಷ್ಯನಾದ. ಪೈಗಂಬರರು ಅಲ್ಲಾನಿಗೆ ಪ್ರಿಯವಾದರು. ಬಸವಾದಿ ಶರಣರು ಅರಿವಿನ ಲಿಂಗದೊಂದಿಗೆ ಮಾತನಾಡಿ ಆತನಿಗೆ ಶರಣುಹೋದರು. ದಾಸರು ಅರಿವೆಂಬ ಗುರುದೇವನಿಗೆ ದಾಸಾನು ದಾಸರಾದರು.

ನುಡಿಯ ಬ್ರಹ್ಮಕ್ಕೆ ಆನಾರನೂ ಅಯ್ಯಾ ಎನ್ನೆ. ಅಡಿಗಡಿಗೆ ಎನ್ನ ಜರಿಯದೆ, ಎಲೆ ಮೃಡನೆ, ಶೂನ್ಯ ತಾನಾದ ಕರುಣನಾಗು:

ಭಗವದ್ಗೀತೆ, ಬೈಬಲ್, ಕುರಾನ್, ವೇದ ಆಗಮ ಉಪನಿಷತ್‌ಗಳಲ್ಲಿ ಬ್ರಹ್ಮನ ಮಾತುಗಳಿವೆ. ಈ ಮಾತುಗಳನ್ನು ನುಡಿದು ಅಂಗಕ್ಕೆ ‘ಗುರು’ ವೇಷಹಾಕಿ ನುಡಿದರೆ ಅಂಗದೊಳಗೆ ಸಂಗಮವಾದ ಅರಿವೆಂಬ ‘ಗುರು’ದೇವ ಎನ್ನನ್ನು ಜರಿಯದೆ ಬಿಡುವುದಿಲ್ಲ.

ಎಲೆ ಮೃಡನೆ, ನನ್ನನ್ನು ಒಮ್ಮೆ ನಿನ್ನಂತೆ ಶೂನ್ಯನಾಗಿಸಬಾರದೆ? ಆ ನಿನ್ನ ಪದವಿಯನ್ನು ನನಗೆ ಕರುಣಿಸಬಾರದೆ? ಕರುಣಾಕರ ನೀನು, ಕರುಣಾಮಯಿ ನೀನು. ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು. ನನ್ನನ್ನು ಒಮ್ಮೆ ನೀನು ನಿನ್ನಂತೆ ಮಾಡಿಕೊಳ್ಳಾ ಎಂದು ಭಗವಂತನೊಂದಿಗೆ ಮಾತನಾಡಿದ್ದಾರೆ ಸಿದ್ಧರಾಮಶಿವಯೋಗಿಗಳು.

‘ಬ್ರಹ್ಮ’ ನುಡಿಗಳಿಗಾಗಿ ನಾನು ಯಾರನ್ನೂ ಬೇಡುವುದಿಲ್ಲ. ಅವು ಬರೀ ನುಡಿಗಳು. ನುಡಿದರೆ ಬ್ರಹ್ಮನಾಗಲಾರ. ಹೀಗಾಗಿ ‘ಬ್ರಹ್ಮ’ನೇ ನೀನು ಒಮ್ಮೆ ನನ್ನನ್ನು ನಿನ್ನಂತೆ ಮಾಡಿಕೊ ಎಂದು ನೇರವಾಗಿ ಬ್ರಹ್ಮನೊಂದಿಗೆ ಮಾತನಾಡುತ್ತಾ ಬ್ರಹ್ಮನೇ ತಾನಾಗುವ ಸೂತ್ರವನ್ನು ಓದುಗರಿಗೆ ಕರುಣಿಸಿದ್ದಾರೆ.

**371**

**ಒಪ್ಪು ಮೂರಾರರಲಿ,**
**ಅಪ್ಪು ತಾನೆಂಟರಲಿ**
**ತಪ್ಪದೆ ತುರಿಯದನಿಮಿಷವನಾದಾ**
**ತತ್ವ ಮಸಿಯಪ್ಪ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವು ತತ್ತ್ವವಾಗಿ ತನುವಿನಲ್ಲಿಯೇ ಸಂಗಮವಾಗಿದೆ. ತನುವನ್ನು ಆವರಿಸಿದ ಮನದಿಂದಲೇ ಅದನ್ನು ತಿಳಿಯಬೇಕು. ಸಾತ್ವಿಕ ರಾಜಸ ತಾಮಸ ಗುಣಗಳಿಂದ ಕಾಯದೊಂದಿಗೆ ಸುಖಿಸುವ ಮನವನ್ನು ಕಾಯದಿಂದಲೇ ಸಾಕ್ಷಿಯಾಗಿ ನೋಡುತ್ತಾ ಕಾಯದಿಂದಲೇ ಪ್ರತಿಭಟಿಸಬೇಕು. ಮನದಿಂದ ಕಾಯದಲ್ಲಿಯೇ ಸಂಗಮವಾದ ಅರಿವಿನಿಂದ ನೋಡಿದಾಗ ಅದು ಮನದ ಚೇಷ್ಟೆಯೆಂದು ಕೂಡಲೇ ಅರಿವಾಗಿ ತ್ರಿಗುಣಗಳು ಉದುರಿ ಬೀಳುತ್ತವೆ.

ಕಾಯ ಷಟಸ್ಥಲ ಪ್ರಭೆಯಿಂದ ಪ್ರಕಾಶಮಾನವಾಗಿ ಬೆಳಗುತ್ತದೆ. ಅಷ್ಟಾಂಗ

ಸಂಪನ್ನನಾಗುತ್ತದೆ. ಅನಿಮಿಷ ಸುಖದಿಂದ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

ಅನಿಮಿಷ ಎಂದರೆ ತತ್ತ್ವ. ಅದು ಅಲ್ಲಮನು ಹೌದು ಮತ್ಸೇಂದ್ರನೂ ಹೌದು. ಅನಿಮಿಷನೂ ಹೌದು. ತತ್ತ್ವವೇತ್ತ ಕಾಯಕ್ಕೆ ಇಟ್ಟ ಹೆಸರು. ತತ್ತ್ವವೇ ತಾನಾದಾ ಕಾಯಕ್ಕೆ ಇಟ್ಟ ಅರಿವಿನ ಹೆಸರು.

ಮೂರು ಗುಣಗಳು ಇರುವುದು ಕಾಯದಲ್ಲಿಯೇ. ಆರು ತತ್ತ್ವಗಳು ಇರುವುದು ಕೂಡಾ ಕಾಯದಲ್ಲಿಯೇ. ಕಾಯದಲ್ಲಿಯೇ ಹುಟ್ಟಿದ ಅರಿಷಡ್ವರ್ಗಗಳನ್ನು ತ್ರಿಗುಣಗಳನ್ನು ಕಾಯದಲ್ಲಿಯೇ ಸಂಗಮವಾದ ತತ್ವದಿಂದಲೇ ಹೊರಚೆಲ್ಲಿ ತ್ರಿಗುಣಾತೀತನಾಗುವುದು ಕೂಡಾ ಕಾಯದಿಂದಲೇ.

ಆದಯ್ಯ ಶರಣರು ಅಷ್ಟಾಂಗ ಯೋಗವನ್ನು ಈ ಕೆಳಗಿನಂತೆ ಬಳಕೆ ಮಾಡಬಹುದು ಎಂದು ವಿವರಿಸಿದ್ದಾರೆ.

ಹಿಂಸೆಯನಳಿದ ಶೌಚತ್ವದಿಂದ ಬ್ರಹ್ಮಚರ್ಯದಿಂದ ತತ್ವಂಗಳನು ಆಹ್ವಾನಿಸುತಿಪ್ಪುದು ಯಮಯೋಗ. ವಿವೇಕ ವಿಚಾರದಿಂದ ತತ್ವಗಳನ್ನು ಅರಿತು ಆಚರಿಸಿ ಅಡಿಯಿಟ್ಟು ನಡೆಯುವುದೇ ನಿಯಮಯೋಗ. ಪದ್ಮಾಸನ ಸಿದ್ಧಾಸನ ಬದ್ಧಾಸನ ವಜ್ರಾಸನ ಮಯೂರಾಸನ ಕೂರ್ಮಾಸನ ಕುಕ್ಕುಟಾಸನ ಮಂಡೂಕಾಸನ ಗೋಮುಖಾಸನ ಗರುಡಾಸನ ಅರ್ಧಾಸನ ವೀರಾಸನ ಸ್ಮಶಾನಾಸನ ಹಸ್ತಾಸನ ಮಸ್ತಕಾಸನ ಕುಠಾರಾಸನ ಸಿಂಹಾಸನ ಮಧ್ಯಲವಣಿ ಶಿರೋಲವಣಿಯೊಳಗಾದ ಆಸನ ಬಂಧಂಗಳಿಂದ ಆಚರಿಸುವುದು ಆಸನಯೋಗ.

ತತ್ವ ಮೂವತ್ತಾರಕ್ಕೆ ಪ್ರಣಮ ಮೂಲವೆಂದು ಅರಿತು ಷಡಾಧಾರ ಚಕ್ರಂಗಳ ಅಕ್ಷರ ವರ್ಣಂಗಳನು ತಿಳಿದು ಮೇಗಣ ಅಜನಾಳ ಬ್ರಹ್ಮಸ್ಥಾನ ತುರಿಯಾತೀತದ ಓಂಕಾರಮಪ್ಪ ಪ್ರಣವವನು ಅರಿವುದು ಪ್ರಾಣಾಯಾಮಯೋಗ.

ಪ್ರತ್ಯಾಹಾರಯೋಗ ಕ್ರಮಗಳಿಂದ ಸತ್ಪ್ರಣವವನಾಹ್ವಾನಿಸುವುದು ಪ್ರತ್ಯಾಹಾರಯೋಗ.

ಪಣವಕ್ಕೆ ಅತೀತವಾದ ಪರಶಿವ ಮೂರ್ತಿ ಮನದಲ್ಲಿ ಚಿಗುತು ಅಂತರಂಗದಲ್ಲಿ ಧ್ಯಾನಾರೂಢನಾಗಿ ಧ್ಯಾನಿಸುವುದು ಧ್ಯಾನಯೋಗ.

ಆ ಪರಶಿವ ಮೂರ್ತಿಯೇ ಇಷ್ಟಲಿಂಗವೆಂಬ ಭಾವನೆಯಿಂದ ಅಷ್ಟವಿಧಾರ್ಚನೆ ಷೋಡಶೋಪಚರ್ಯಂಗಳಿಂದ ಇಷ್ಟಲಿಂಗ ಧಾರಣದಿಂದ ಇಪ್ಪುದು ಧಾರಣಯೋಗ.

ಅಪ್ರಶಿಖಾಸ್ಥಾನದಿಂದ ಉತ್ತರವಿಭಾಗೆಯೆ ಅಜಪೆಯಿಂದ ಅತ್ತಣ ಚಿತ್ರಭೆಯಿಂದ ಉಜ್ವಲ ತೇಜ ಸ್ವಯಂಪ್ರಕಾಶ ದಿವ್ಯತೇಜದಿಂದ ಒಪ್ಪಿಪ್ಪ ಮಹಾಘನ ಪರವಸ್ತುವನು ಇದಿರಿಟ್ಟು ವೀಕ್ಷಿಸಿ ಆ ಮಹಾಪ್ರಕಾಶದಲ್ಲಿ ಒಡಗೂಡಿ ತಾನು ತಾನಾಗಿ ಜಗದ್ವಿ ಹರಣೆಯನು ಏನೆಂದು ಅರಿಯದ ಪರಮಕಾಷ್ಠೆಯ ಸಮಾಧಿಯಲ್ಲಿ ಇಪ್ಪುದು ಸಮಾಧಿಯೋಗ.

ಹೀಗೆ ಮೂರು ಆರು ಎಂಟನು ಅರಿಯುವ ಸಕಲ ತತ್ವಗಳು ಕಾಯದಲ್ಲಿಯೇ ಸಂಗಮವಾಗಿವೆ. ಆ ತತ್ವಗಳನ್ನು ಕಾಯವನ್ನು ಆವರಿಸಿದ ಮನದಿಂದಲೇ ಅರಿಯಲು ಹೋದಾಗ, ಅರಿಯಲು ಹೋದ ಮನವೇ ಘನಮನವಾಗಿ ನಿಲ್ಲುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**372**

**ಒಬ್ಬರ ಮನವ ನೋಯಿಸಿ,**

**ಒಬ್ಬರ ಮನವ ಘಾತವ ಮಾಡಿ,**
**ಗಂಗೆಯ ಮುಳುಗಿದಡೇನಾಗುವುದಯ್ಯಾ?**
**ಚಂದ್ರನು ಗಂಗೆಯ ತಡಿಯಲ್ಲಿದ್ದಡೇನು?**
**ಕಲಂಕ ಬಿಡದಾಯಿತ್ತಯ್ಯಾ.**
**ಅದು ಕಾರಣ, ಮನವ ನೋಯಿಸದವನೆ**
**ಒಬ್ಬರ ಘಾತವ ಮಾಡದವನೆ,**
**ಪರಮ ಪಾವನ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

'ಎನ್ನ ತಪ್ಪು ಅನಂತಕೋಟಿ; ನಿಮ್ಮ ಸೈರಣೆಗೆ ಲೆಕ್ಕವಿಲ್ಲ' ಎಂದು ಬಸವಣ್ಣನವರು ಹೇಳಿದ್ದಾರೆ. ಮನ ಕಾಯವನ್ನು ಆವರಿಸಿ, ಕಾಯವನ್ನು ಹಿಡಿದು ತನ್ನ ಸುಖಕ್ಕಾಗಿ ಅನಂತಕೋಟಿ ತಪ್ಪುಗಳನ್ನು ಮಾಡುತ್ತದೆ. ಮನ ತನ್ನ ಸುಖಕ್ಕಾಗಿ ಮಾಡಿದ ತಪ್ಪು ಮನವನ್ನೇ ನೋಯಿಸುತ್ತದೆ. ನಿರಪರಾಧಿ ತನು ಕೂಡಾ ಮನದಿಂದಾಗಿ ಘಾಸಿಗೊಳ್ಳುತ್ತದೆ.

ಗುರುದೇವನನ್ನು ಗುರುಪತ್ನಿಯನ್ನು ಘಾಸಿಗೊಳಿಸಿದ ಚಂದ್ರ, ಚಂದ್ರಶೇಖರನ ಜಟೆಯನ್ನು ಅಲಂಕರಿಸಿ ಗಂಗೆಯ ಮುಳುಗಿದಡೇನು? ಗಂಗೆಯ ತಡಿಯಲ್ಲಿದ್ದಡೇನು? ಗುರುದೇವನನ್ನು ಗುರುಪತ್ನಿಯನ್ನು ನೋಯಿಸಿದ ಕಳಂಕ ತೊಲಗಲು ಸಾಧ್ಯವೆ? ಇಲ್ಲ. ಸಾಧ್ಯವೇ ಇಲ್ಲ. ಚಂದ್ರನಿಗೆ ಅಂಟಿದ ಹಾದರದ ಕಳಂಕ ಚಂದ್ರನಲ್ಲಿಯೂ ಉಳಿಯಿತು. ಇತಿಹಾಸದಲ್ಲಿ ಕೂಡಾ ಅಚ್ಚಳಿಯದೆ ಉಳಿಯಿತು.

ಮನವ ನೋಯಿಸದವನು, ಒಬ್ಬರನ್ನೂ ಘಾತವ ಮಾಡದವನು ಪರಮಪಾವನ ನೋಡಾ:

ಮನವಿಲ್ಲದ ತನುವೇ ಇಲ್ಲ. ಅಂದ ಮೇಲೆ ನೋಯಿಸುವುದು ಘಾತವ ಮಾಡುವುದು ಮನದ ಕೆಲಸ. ಮನಕ್ಕೆ ತನುವನ್ನು ನೋಯಿಸುವುದೆಂದರೆ ಬಲು ಸುಖ. ಅದು ಮತ್ತೊಬ್ಬರನ್ನು ಘಾಸಿ ಮಾಡಿ ನೋಯಿಸುತ್ತದೆ. ಹಾಗೆಯೇ ತಾನು ವಾಸ ಮಾಡಿದ ತನುವನ್ನು ಕೂಡಾ ಘಾಸಿ ಮಾಡಿ ನೋಯಿಸುತ್ತದೆ. ಏಕೆಂದರೆ ಮನ ವಾಸ ಮಾಡಿದ ತನು ಅದು ತನ್ನದಲ್ಲ. ಮನವನ್ನು ತನುವನ್ನು ಸೃಷ್ಟಿ ಮಾಡಿದ ಮಾಲಕನದ್ದು. ಆತ ಗಂಗಾಧರ!

ಜಲಜನಕವನ್ನು ಆಮ್ಲಜನಕವನ್ನು ಒಂದುಗೂಡಿಸಿ ಗಂಗೆಯನ್ನು ಮಾಡಿದ. ಆ ಗಂಗೆಯನ್ನೇ ಧಾರಣೆ ಮಾಡಿಕೊಂಡು ಗಂಗಾಧರನೆಂದು ಕರೆಯಿಸಿಕೊಂಡ. ಗಂಗೆಯ ಒಂದು ಬಿಂದುವೇ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಅವು ಚೆಲ್ಲದಂತೆ ಸುಂದರವಾದ ಚರ್ಮವೂ ಆಗಿ ತನುವೆಂದು ಕರೆಯಿಸಿಕೊಂಡಿತು.

ಗಂಗೆಯ ಬಿಂದುವಿನ ನೆರಳೇ ಮನವಾಗಿ ತನುವನ್ನು ಆವರಿಸಿತು. ಹೀಗೆ ತನುವನ್ನು, ಮನವನ್ನು ಸೃಷ್ಟಿ ಮಾಡಿ ಆ ತನುವಿನಲ್ಲಿಯೇ ಸಂಗಮವಾದ ತನು ಮನಗಳ ಮಾಲೀಕನೆಂದು ಕರೆಯಿಸಿಕೊಂಡಾತನೇ ಗಂಗಾಧರ.

ಈ ಪ್ರಪಂಚದಲ್ಲಿ ಏಳುನೂರಾ ಮೂವತ್ತುಕೋಟಿ ತನುಗಳಿವೆ ಎಂದು ತನುಗಳ ಲೆಕ್ಕಕ್ಕಿದೆ. ಈ ತನುಗಳ ಮಾಲೀಕನೆಂದರೆ ಸರಕಾರವಲ್ಲ. ಅದರ ಸೃಷ್ಟಿಕರ್ತ! ಮನ ತನುವಿಗೆ ಕೊಡುವ ಅನಂತಕೋಟಿ ಉಪಟಳವನ್ನು ಸಹಿಸಿಕೊಂಡು ತನುವನು, ತನುವನ್ನು ಆವರಿಸಿದ ಮನವನ್ನು ಒಂಚೂರೂ ಘಾಸಿಮಾಡದೆ, ನೋಯಿಸದೆ ಹಗಲಿರುಳು ಎನ್ನದೆ ರಕ್ಷಣೆ

ಮಾಡುತ್ತಿದ್ದಾನೆ. ತಾನು ಸೃಷ್ಟಿ ಮಾಡಿದ ಮನವನ್ನು ರಕ್ಷಣೆ ಮಾಡುತ್ತಿದ್ದಾನೆ. ತಾನು ಸೃಷ್ಟಿ ಮಾಡಿದ ಮನವನ್ನು ತನ್ನಂತೆ ಮಾಡಿಕೊಳ್ಳುವ ಪ್ರಯತ್ನವೇ ಆತನದು. ಹಗಲಿರುಳೆನ್ನದೆ ತನುವನ್ನು ಘಾತವ ಮಾಡುವ ಪ್ರಯತ್ನವೇ ಮನದ್ದು.

ಮನ ಅನಂತಕೋಟಿ ತಪ್ಪು ಮಾಡಿದರೂ ತಪ್ಪು ಮಾಡಿದ ಮನವ ನೋಯಿಸದೆ ಘಾತವ ಮಾಡದ ಪರಮಪಾವನನು ಅವನು. ಎಂತಹ ಸುಂದರವಾದ ಸೂತ್ರವಿದು!

'ಎನ್ನ ತಪ್ಪು ಅನಂತಕೋಟಿ; ನಿಮ್ಮ ಸೈರಣೆಗೆ ಲೆಕ್ಕವಿಲ್ಲ' ಎಂದು ಬಸವಣ್ಣ ಸಕಲ ತಪ್ಪುಗಳನ್ನು ತಮ್ಮ ಮೇಲೆ ಹೇರಿಕೊಂಡು ಓದುಗರಿಗೆ ಅದ್ಭುತವಾದ ಸೂತ್ರಕೊಟ್ಟರು. ಮನದ ತೊಳಲಾಟ ಬಸವಣ್ಣನಿಗೂ ತಪ್ಪಲಿಲ್ಲ ಎಂದು ನೇರಾನೇರ ಆರೋಪಿಸಿತು ಸಾರಸ್ವತ ಲೋಕ. ಬಸವಣ್ಣನ ಈ ಸೂತ್ರ ಪಡೆದ ಅನುಭಾವಿಗಳು ಕುಣಿಕುಣಿದಾಡಿದರು. ಈ ಸೂತ್ರವನು ಉಂಡ ಸಿದ್ಧರಾಮಶಿವಯೋಗಿ ಪರಮಪಾವನನಾದ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ.

**373**

**ಒಬ್ಬರಸು ಮೋಹಿತನಾಗಿ, ಅಂದೇ ಲಗ್ನವಾಗಿ,**
**ಅಂದೇ ರತಿಯಾಗಿ ಅಂದೇ ಪತಿ ಮೃತಿಯಾದ-**
**ದರಿದ್ರ ನಾರಿಯ ತೆರೆನಾಯಿತ್ತೆನ್ನ ಮನ.**
**ಒಬ್ಬರಸು ಭೂಪ್ರದಕ್ಷಿಣೆ ಮಾಡಿ**
**ಭೂದೇವಿಯ ಮಗನ ಜನನವಾರ್ತೆಯ ನಂದೇ ಕೇಳಿ,**
**ಅಂದೇ ಮಗನ ಮೃತಿಯಾದರಸನ ಮನವಾದ ತೆರೆನಾಯಿತ್ತೆನ್ನ ಮನ.**
**ತನ್ನ ಕೊಟ್ಟು ತಾ ಹೋದಡೆ ಗುರುಸ್ಥಲ ಹೋಯಿತ್ತು .**
**ಲಿಂಗಸ್ಥಲ ಹೋಯಿತ್ತು , ಜಂಗಮಸ್ಥಲ ಮೊದಲೇ ಹೋಯಿತ್ತು.**
**ಇನ್ನಾರ ಪಾದವಿಡಿವೆ? ಕಪಿಲ ಸಿದ್ಧ ಮಲ್ಲಿಕಾರ್ಜುನ**
**ಚೆನ್ನಬಸವ ಮಹಾಪ್ರಭುವೆ.**

ಸೃಷ್ಠಿ ಮಾಡಿದ ಅರಸನನ್ನೇ ಲಗ್ನವಾಗಿ ಅಂದೇ ರತಿಯಾಗಿ ಅಂದೇ ಪತಿ ಮೃತಿಯಾದ ನಾರಿಯ ತೆರೆನಾಯಿತ್ತೆನ್ನ ಮನ. ಅದ್ಭುತವಾದ ಸೂತ್ರ! ತನ್ನನ್ನು ತಿಳಿದು, ಪರಮಾನಂದ ಹೊಂದಲಿಕ್ಕಾಗಿ ಸೃಷ್ಟಿ ಮಾಡಿದ ಅರಸನನ್ನೇ ಪಕ್ಕಕ್ಕೆ ಸರಿಸಿ, ತಾನೇ ಅರಸನಂತೆ ಮೆರೆಯುವ ಮನವನ್ನು ಅದರ ಮೋಹವನ್ನು ತನು ಕಳಚಿಕೊಳ್ಳುವುದಾದರೂ ಹೇಗೆ?

ಸೃಷ್ಟಿ ಮಾಡಿದ ಅರಸನೆಂದರೆ ಮತ್ತಾರೂ ಅಲ್ಲ. ಆತ ಸಾಕ್ಷಾತ್ ಈಶ್ವರ. ಮನ ತನಗೆ ತಾನೇ ಈಶ್ವರಿಯಾದಾಗ ಈಶ್ವರನೊಂದಿಗೆ ಸಂಗಮವಾಗಿ ಅರ್ಧನಾರೀಶ್ವರಿಯ ಪಟ್ಟ ಪಡೆಯುತ್ತಾಳೆ. ಈಶ್ವರನ ಅರ್ಧಾಂಗಿಯೆನ್ನಿಸಿಕೊಂಡು ಕಾಯದಲ್ಲಿಯೇ ಮೆರೆಯುತ್ತಾಳೆ. ಕಾಯವನ್ನೇ ಕೈಲಾಸವನ್ನಾಗಿಸಿ ಆ ಕಾಯದಲ್ಲಿ ಅರಸ ಅರಸಿಯರಿಬ್ಬರೂ ಸಂಸಾರ ಹೂಡುತ್ತಾರೆ. ಆದರೆ ಮನವೆಂಬ ಆಕೆ ತಾನು ಬಂದ ಕೆಲಸವನ್ನೇ ಮರೆತಿದ್ದಾಳೆ. ತನಗಾಗಿ ಸೃಷ್ಟಿ ಮಾಡಿದ ಈಶ್ವರನನ್ನೂ ಮರೆತಿದ್ದಾಳೆ. ತಮ್ಮಿಬ್ಬರಿಗಾಗಿ ಇದ್ದ ಕಾಯವನ್ನೇ ಕಸದ ತಿಪ್ಪೆಯನ್ನಾಗಿಸಿದ್ದಾಳೆ. ಆದರೂ ಈಶ್ವರ ಮನವನ್ನು ನಿಂದಿಸದೆ; ಯಾವ ಬಾಧೆಗೂ ಈಡು ಮಾಡದೆ ತಿಪ್ಪೇರುದ್ರನಾಗಿ ಪರಮಾನಂದದಿಂದ ತಿಪ್ಪೆಯಂತಿರುವ ಕಾಯದಲ್ಲಿಯೇ ಮೈಮರೆತು

ಧ್ಯಾನದಲ್ಲಿ ನಿರತನಾಗಿದ್ದಾನೆ.

ಮನದ ಆಟ ಒಂದೊಂದು ಅಲ್ಲ, ತನಗೆ ಇಚ್ಛೆ ಬಂದಂತೆ ಕಾಯವನ್ನು ಬಳಸಿಕೊಂಡು ಕಾಯದೊಂದಿಗೆ ಸುಖಿಸುತ್ತದೆ. ಕಾಯವನ್ನು ಹಿಡಿದು ಅದಕ್ಕೆ ಗುರುವೇಷ ಧರಿಸಿ, ಶಿಷ್ಯನನ್ನಾಗಿ ಮಾಡಿಕೊಳ್ಳಲು ಮತ್ತೊಂದು ಕಾಯವನ್ನು ಹುಡುಕುತ್ತದೆ.

ಕಾಯವನ್ನೇ ಜಂಗಮನನ್ನಾಗಿಸುತ್ತದೆ. ಜಂಗಮಸ್ಥಲ ಲಿಂಗಸ್ಥಲವೆಂದು ಹೇಳುತ್ತಾ ಶಬ್ದದೊಂದಿಗೆ ಕಾಯವನ್ನು ಯಾಮಾರಿಸಿ, ಕಾಯದ ಪಾದವನ್ನು ಕಾಯವೇ ಹಿಡಿಯುವಂತೆ ಮಾಡುತ್ತದೆ. ಕಾಯದಲ್ಲಿ ಮನ, ನೆತ್ತಿ ಪಾದ ಮುಖ ಬೆನ್ನು ಹೊಟ್ಟೆ ಕೈ ಎಂದು ಮುಂತಾದ ಭೇದವನ್ನು ಸೃಷ್ಟಿ ಮಾಡಿ ಕೈಲಾಸವೆಂದು ಎನ್ನಿಸಿಕೊಂಡ ಕಾಯವನ್ನೂ ಮೈಮರೆಯುವಂತೆ ಮಾಡಿದೆ.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಸನಿಗೆ ತನ್ನನ್ನು ತಾನು ಕೊಟ್ಟು ತಾ ಆತನಿಗೆ ಆಳಾದರೆ ಗುರುವಿನ ವೇಷ ಕಳಚಿ ಗುರುಸ್ಥಲ ಹೋಗುತ್ತದೆ. ಅಂಗದ ಮೇಲಿರುವ ಲಿಂಗ ಕಳಚಿ ಲಿಂಗಸ್ಥಲ ಹೋಗುತ್ತದೆ. ಜಂಗಮನ ವೇಷ ಕಳಚಿ ಜಂಗಮಸ್ಥಲವೂ ಹೋಗುತ್ತದೆ.

ಕಾಯ ಕಾಯದ ಪಾದ ಹಿಡಿಯುವುದೆಂದರೇನು? ಕಾಯ ಕಾಯದಲ್ಲಿರುವ ಭಿನ್ನತೆಯೆಂಬ ಮಹಾರೋಗ ಕಳಚಿ ಬಿದ್ದು ಕಾಯವೇ ಕೈಲಾಸವಾಗುತ್ತದೆ. ಕಾಯದಲ್ಲಿಯೂ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನ ಸೃಷ್ಟಿ ಮಾಡಿದ ಮನ ಆತನ ಪಾದವನ್ನೇ ಹಿಡಿದು ಆತನಲ್ಲಿಯೇ ಸಂಗಮವಾಗುತ್ತದೆ.

**374**

**ಒಬ್ಬ ಸಿದ್ಧ ಸಾಧಕ ಚಿಗರಿಯ ಸಾಕುತಲಿದ್ದಾನೆ ;**
**ಮತ್ತೊಬ್ಬ ಸಿದ್ಧ ಸಾಧಕ ಚಿಗರಿಯ ಮರಿಯ ಸಾಕುತಲಿದ್ದಾನೆ.**
**ಆ ಸಿದ್ಧ ಸಾಧಕನ ನುಂಗಲು ಬರುತ್ತವೆ ಚತುರ್ದಶ ವ್ಯಾಘ್ರಂಗಳು.**
**ನುಂಗಲು ಬಂದ ವ್ಯಾಘ್ರಂಗಳ ಚಿಗರಿಯು ಚಿಗರಿಯ ಮರಿಯು**
**ಹೊಡೆದುದ ಕಂಡು ನಾನಂಜಿ ಸಾಗರವ ಹೊಕ್ಕೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಉದಕದ ಬುಗ್ಗಿಯ ರಸದಲ್ಲಿ ಹುಟ್ಟಿದ ಚಿಗರಿ. ಆ ಬುಗ್ಗಿಯ ರಸದಲ್ಲಿಯೇ ಹುಟ್ಟಿದ ಸಿದ್ಧ ಸಾಧಕ. ಅಲ್ಲಿಯೇ ಹುಟ್ಟಿದ ಚಿಗರಿಯ ಮರಿ. ಅಲ್ಲಿಯೇ ಹುಟ್ಟಿದ ವ್ಯಾಘ್ರಂಗಳು! ಒಂದನ್ನು ನುಂಗಿ ಒಂದು ಬದುಕಿದೆ. ಕೈಗೆಟುಕದ ಮಾಯಾಮಯವಾದ ಚಿಗುರೆಯೂ ಅಲ್ಲಿಯೇ ಇದೆ. ಅದರ ಮರಿಯು ಅಲ್ಲಿಯೇ ಇದೆ. ಅವು ಎಷ್ಟು ದೂರ ಹರಿದಾಡಿದರೂ ಅವುಗಳ ಸೂತ್ರ ಮಾತ್ರ ಸಿದ್ಧ ಸಾಧಕನ ಕೈಯಲ್ಲಿ !

ಸಿದ್ಧ ಸಾಧಕ ಸಾಕುವುದೇನೋ ಸತ್ಯ. ಆದರೆ ಆತ ಹಾಕಿದ ಮೇವಿನಿಂದ ಅವು ಬೆಳೆಯುತ್ತಿಲ್ಲ. ಚಿಗರಿಯು ಸೃಷ್ಟಿಸಿದ ವ್ಯಾಘ್ರಂಗಳನುಂಡು ಬದುಕಿದ ಚಿಗರಿ ಚಿಗರಿಯ ಮರಿಯ ಚರಿತ್ರೆಯೂ ಅದ್ಭುತ. ಸಿದ್ಧ ಸಾಧಕನನ್ನೇ ನುಂಗಲು ಬಂದ ವ್ಯಾಘ್ರಂಗಳೇ ಚಿಗುರಿಗೆ ಆಹಾರ. ಅದರ ಮರಿಗೆ ಕೂಡಾ ವ್ಯಾಘ್ರಂಗಳೇ ಆಹಾರ.

ಸಿದ್ಧ ಸಾಧಕ ಇದನುಕಂಡು ಅಂಜಿ ಸಾಗರವ ಹೊಕ್ಕ. ಸಾಗರವನ್ನು ಸೃಷ್ಟಿಸುವುದೂ ತಡವಲ್ಲ. ಅದರೊಳಗೆ ತಾನು ಅಡಕವಾಗುವುದೂ ತಡವಲ್ಲ. ಇದೇ ಸಾಗರವನ್ನು ಬೊಗಸೆಯಲ್ಲಿ

ಹಿಡಿದು ಸೇವಿಸಿ ಸಾಗರವನ್ನೇ ಇಲ್ಲವಾಗಿಸುವುದೂ ತಡವಲ್ಲ. ಕ್ಷಣಾರ್ಧದಲ್ಲಿ ಮಾಡುವನು. ನೀರು ಕುಡಿದಷ್ಟೇ ಸರಳ ಆತನಿಗೆ ಈ ಕೆಲಸ.

ತಾನು ಸೃಷ್ಟಿ ಮಾಡಿದ ಚಿಗರಿಯ ನೋಡಿ ತಾನೇ ಅಂಜುವುದು ಎಂದರೆ ಆತನ ಲೀಲೆಯೇ ಸರಿ. ಆತನ ಹೆಸರೇ ಸಿದ್ಧ ಸಾಧಕ. ಆತ ನಿರ್ಭಯ. ಇದೆಲ್ಲ ಆತನ ಲೀಲೆ. ಒಂದು ಬಿಂದುವಿನಲ್ಲಿ ಹುಟ್ಟಿದ ಚಿಗರಿ; ಅದರ ಮರಿ. ಒಂದು ಬಿಂದುವಿನಲ್ಲಿಯೇ ಹುಟ್ಟಿದ ವ್ಯಾಘ್ರಂಗಳು. ಕೋಡಗನನ್ನು ಕೋಳಿ ನುಂಗಿದಂತೆ. ಅಜ್ಞಾನವನ್ನು ಜ್ಞಾನ ನುಂಗಿದಂತೆ. ಕತ್ತಲನ್ನು ಬೆಳಕು ನುಂಗಿದಂತೆ. ಸಿದ್ಧ ಸಾಧಕನಿಗೆ ಇದು ಸರಳ ಕೆಲಸ.

**375**

**ಒಲುಮೆಯ ನಲ್ಲನನು**
**ಒಲಿಸಿ ನೆರೆದೆನೆಂಬ ಮರುಳತನವನೇನೆಂಬೆನಯ್ಯಾ,**
**ಒಲಿಸಲೇಕೆ ? ತಾನೆ ಒಲಿದಾನು.**
**ನಿನ್ನಲ್ಲಿ ದೃಢಕೆ ಸಂಬಂಧ ಸಮನಿಸಲುಳ್ಳಡೆ ತಾನೆ ಒಲಿದಾನು.**
**ನಿನ್ನಲ್ಲಿ ದೀಕ್ಷಾತ್ರಯ ಸಂಪನ್ನತೆಯುಳ್ಳಡೆ ತಾನೆ ಒಲಿದಾನು.**
**ಒಲಿದಾನು. ಒಲಿಸದಡೊಲಿವನೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸದಾ ನಲ್ಲೆಯ ಧ್ಯಾನದಲ್ಲಿರುವವನನ್ನು ನಲ್ಲ ಎಂದು ಕರೆಯಬಹುದು. ಅವನು ಒಲುಮೆಯನಲ್ಲ. ನಲ್ಲೆಗೆ ಸ್ವತಃ ತಾನೇ ಒಲಿದಿದ್ದಾನೆ. ಅವನನ್ನು ಪುನಃ ನಲ್ಲೆ ಒಲಿಸಿಕೊಳ್ಳುವ ಅವಶ್ಯಕತೆಯೇ ಇಲ್ಲ. ಆದರೆ ನಲ್ಲನೆಂದರೆ ಯಾರೆಂದು ನಲ್ಲೆಗೆ ಗೊತ್ತಿಲ್ಲ. ನಲ್ಲನ ಪ್ರೇಮ ನಲ್ಲೆಯ ಮೇಲೆ ಮಾತ್ರ ಸಂಪೂರ್ಣ ಇದೆ. ಆ ನಲ್ಲನಿಗೆ ನಲ್ಲೆಯಾಗಿ ನಲ್ಲನನ್ನು ಒಲಿಸಿಕೊಳ್ಳುವ ಭಾಗ್ಯ ನಲ್ಲೆಗೆ ಮಾತ್ರ ಇದೆ.

ನಲ್ಲೆಗೆ ತನುವಿನ ಮೇಲೆ ಮೋಹ. ನಲ್ಲನಿಗೆ ನಲ್ಲೆಯ ಮೇಲೆ ಪ್ರೇಮ. ನಲ್ಲನ ಪ್ರೇಮ ನಲ್ಲೆಗೆ ತಿಳಿಯುತ್ತಿಲ್ಲ. ನಲ್ಲೆಯ ತನುವಿನ ಮೋಹ ಕಳಚಿ ಬೀಳುತ್ತಿಲ್ಲ.

ತನುವನ್ನು ಹಿಡಿದು ನಲ್ಲೆ ನಲ್ಲನನ್ನು ಹುಡುಕಿದರೆ ಒಲುಮೆಯ ನಲ್ಲನು ನಲ್ಲೆಗೆ ದೊರೆಯಲು ಸಾಧ್ಯವೆ? ನಲ್ಲೆಯ ಮರುಳುತನಕ್ಕೆ ನಲ್ಲನ ಕನಿಕರ ಮದ್ದಾಗಿ ನೆರವಾಗುತ್ತಿಲ್ಲ. ಏಕೆಂದರೆ ನಲ್ಲೆಯ ಮೋಹಕ್ಕೆ ನಲ್ಲ ಒಲಿಯುವುದಿಲ್ಲ. ಆತನದು ಏನಿದ್ದರೂ ಪ್ರೇಮರಸ. ನಲ್ಲೆಯದು ಬರೀ ಕಾಮರಸ. ಆತನ ಪ್ರೇಮವೂ ನಿಲ್ಲುತ್ತಿಲ್ಲ; ನಲ್ಲೆಯ ಮೋಹದ ಕಾಮವೂ ನಿಲ್ಲುತ್ತಿಲ್ಲ. ಇಬ್ಬರೂ ಒಂದೆಡೆಯಿದ್ದರೂ ನಲ್ಲನ ಪ್ರೇಮ ನಲ್ಲೆಯ ಕಾಮಕ್ಕೆ ತಿಳಿಯುತ್ತಿಲ್ಲ.

ಗಂಡ ಶಿವಲಿಂಗ ದೇವರ ಭಕ್ತ; ಹೆಂಡತಿ ಮಾರಿಮಸಣೆಯ ಭಕ್ತೆಯಂತಾಗಿದೆ. ಒಲಿಸಿ ನೆನೆದೆನೆಂಬ ಮರುಳತನವನೇನೆಂಬೆನಯ್ಯಾ, ಒಲಿಸಲೇಕೆ? ತಾನೇ ಒಲಿದಾನು. ಮನವೆಂಬ ನಲ್ಲೆಯಲ್ಲಿ ದೃಢತೆ ಸಂಬಂಧ ಸಮನಿಸಲುಳ್ಳಡೆ ತಾನೆ ಒಲಿದಾನು.

ಸಿದ್ಧರಾಮ ಶಿವಯೋಗಿಗಳ ಅದ್ಭುತವಾದ ಚಮತ್ಕಾರೀ ಸೂತ್ರವಿದು. ಸಾಧಕರಿಗೆ ಕಲ್ಲುಸಕ್ಕರೆಯನ್ನು ತಿನ್ನಿಸಿದಂತೆ. ಕಲ್ಲುಸಕ್ಕರೆಯ ಕೊಳ್ಳಿರೊ ಎಂದು ದಾಸರು ಸಂತೆಯಲ್ಲಿ ಉಚಿತವಾಗಿ, ಗೆಜ್ಜೆ ಕಟ್ಟಿಕೊಂಡು ಕುಣಿ ಕುಣಿದು ಮಾರಿದರು. ಕೊಳ್ಳುವವರು ಬೇಕಲ್ಲ !

ಸಿದ್ಧರಾಮ ಶಿವಯೋಗಿಯ ಈ ಸೂತ್ರವಾದರೂ ಅಷ್ಟೆ ! ಅರಗಿಸಿಕೊಳ್ಳುವ ಓದುಗನಿಗೆ ಮಾತ್ರ ಈ ಸೂತ್ರ ದಕ್ಕಬಲ್ಲದು.

ನಿನ್ನಲ್ಲಿ ದೀಕ್ಷಾತ್ರಯ ಸಂಪನ್ನತೆಯುಳ್ಳಡೆ ತಾನೇ ಒಲಿದಾನು. ಒಲಿದಾನು. ಒಲಿಸದಡೊಲಿವನೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

ವೇದಾ ದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ ಎಂಬ ದೀಕ್ಷಾತ್ರಯ ಸಂಪನ್ನತೆಯಿದ್ದರೆ ಮಾತ್ರ ನಲ್ಲ ನಲ್ಲೆಗೆ ಒಲಿದಾನು ಎನ್ನುತ್ತಾರೆ ಸಿದ್ಧರಾಮ ಶಿವಯೋಗಿಗಳು. ಈ ದೀಕ್ಷಾತ್ರಯಗಳ ಮೂಲಕವೇ ಆತನನ್ನು ಒಲಿಸಿಕೊಳ್ಳಬೇಕು.

ಶ್ರೀಗುರುವು ತನ್ನ ಹಸ್ತವನ್ನು ಶಿಷ್ಯನ ಮಸ್ತಕದಲ್ಲಿ ಸಂಯೋಗವನು ಮಾಡಿದುದು ವೇಧಾ ದೀಕ್ಷೆ. ಶ್ರೀಗುರು ಪ್ರಣವ ಪಂಚಾಕ್ಷರಿಯ ಮಂತ್ರವನು ಕರ್ಣದಲ್ಲಿ ಉಪದೇಶಿಸಿದುದು ಮಂತ್ರದೀಕ್ಷೆ. ಆ ಮಂತ್ರಸ್ವರೂಪವನ್ನೇ ಲಿಂಗಸ್ವರೂಪವನ್ನಾಗಿಸಿ ಸರ್ವಾಂಗದಲ್ಲಿ ಸಂಬಂಧಿಸಿದುದೇ ಕ್ರಿಯಾದೀಕ್ಷೆ. ವೇಧಾ ದೀಕ್ಷೆಯಿಂದ ಕಾರಣ ತನುವಿನ, ಮಂತ್ರದೀಕ್ಷೆಯಿಂದ ಸೂಕ್ಷ್ಮ ತನುವಿನ, ಕ್ರಿಯಾದೀಕ್ಷೆಯಿಂದ ಸ್ಥೂಲ ತನುವಿನ ಪೂರ್ವಾಶ್ರಯವನು ಕಳೆದು ಅಂಗವನ್ನು ಅರಿವಿನ ಲಿಂಗ ಸಂಬಂಧಿಯಾಗಿ ಮಾಡಿದ.

ಕಾಮ ಸಂಬಂಧದ ತನ್ನ ಪೂರ್ವಾಶ್ರಯವನು ಕಳೆದುಕೊಂಡ ಮನವೆಂಬ ನಲ್ಲೆಯು ಘನಮನವಾಗಿ ಒಲುಮೆಯ ನಲ್ಲನನು ಕೂಡಿದಳು.

ಒಲಿಸಲೇಕೆ ? ತಾನೇ ಒಲಿದಾನು. ಎನ್ನುವುದು ಬಲು ಸರಳ ಮಾತು. ಆರೂ ಸ್ಥಳಗಳನ್ನು ಹಾರಿ ನಲ್ಲನನು ಕೂಡುವ ಗಟ್ಟಿಗಿತ್ತಿ ನಲ್ಲೆಯ ಮಾತು.

ಒಲಿಸದಡೊಲಿವನೆ ಎನ್ನುವ ಮಾತು ಸಾಧಕನ ಮಾತು. ಹಂತ ಹಂತವಾಗಿ ಶ್ರೀಗುರುವಿನ ಸಹಾಯದಿಂದ ಆರು ಸ್ಥಲಗಳನ್ನು ಮೆಟ್ಟಿಲನ್ನಾಗಿಸಿಕೊಂಡು ಒಲುಮೆಯ ಅರಿವಿನ ನಲ್ಲನನ್ನು ಕೂಡಿ ಪರಮ ಸುಖವನ್ನು ಅನುಭವಿಸುವ ಮಾತು.

ಸ್ವಪ್ರಯತ್ನದಿಂದಲೂ ಸಾಧ್ಯ. ಶ್ರೀ ಗುರುವಿನ ಸಹಾಯದಿಂದಲೂ ಸಾಧ್ಯ ಎನ್ನುವುದನ್ನು ಸಿದ್ಧರಾಮ ಶಿವಯೋಗಿಗಳು ತಮ್ಮ ವಚನದ ಮೂಲಕ ಓದುಗರಿಗೆ ಮಾಹಿತಿಯನ್ನು ನೀಡಿದ್ದಾರೆ.

**376**

**ಒಳಗಣವರೈವರ ಎನ್ನ ಕಣ್ಣಿಂಗೆ ತಳವೆಳಗು ಮಾಡಯ್ಯಾ.**
**ಬೆಳವಿಗೆಯ ಬೀಜವ ಬಿತ್ತಿ,**
**ಆ ಫಲದ ರುಚಿಯನುಂಡುಕೊಳ್ಳಯ್ಯಾ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವು ಬೋಧೀವೃಕ್ಷದ ಐದು ಮಹಾ ಶಾಖೆಗಳು. ಈ ಐದೂ ಶಾಖೆಗಳಲ್ಲಿ ಸಾಕ್ಷಾತ್ ಅರಿವೆಂಬ ಗುರುದೇವನೇ ಸಂಗಮವಾಗಿದ್ದಾನೆ. ಆ ಗುರುದೇವನೆ ಮಹಾದೇವ. ಆಗುರುದೇವನೆ ಸದಾಶಿವ; ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ.

ಅರಿವೆಂಬ ಗುರುದೇವನು ಬೆಳವಿಗೆಯ ಬೀಜದೊಂದಿಗೆ ಗರ್ಭಪ್ರವೇಶ ಮಾಡಿ ಮರುಜವಣಿಯ ಫಲದೊಂದಿಗೆ ಐದು ಶಾಖೆಗಳ ಮೂಲಕ ವಿಸ್ತರಿಸಿದ್ದಾನೆ. ಶಂಕರ ಈ ಫಲದ

ರುಚಿಯನುಂಡು 'ಅಹಂ ಬ್ರಹ್ಮಾಸ್ಮಿ' ಎಂದ. ಸಿದ್ಧಾರ್ಥ ಮರುಜವಣಿಯ ಫಲವನು ಉಂಡು ಬುದ್ಧನಾದ. ವರ್ಧಮಾನ ಮಹಾವೀರನಾದ. ದಾಸರು ದಾಸಾನು ದಾಸರಾದರು. ಶರಣರು ಶರಣು ಹೋದರು.

ಮರುಜವಣಿಯ ಫಲವನುಂಡ ಫಲ ಉಂಡವರಿಗೆಲ್ಲ ದಕ್ಕಿತು. ಉಣ್ಣದವನು ಉಂಡವರನ್ನು ಆರಾಧಿಸಿದರೆ ಉಂಡಂತಲ್ಲ. ಉಂಡಂತೆ ಆಗುವುದಿಲ್ಲ ಕೂಡಾ.

ಒಳಗಣ್ಣವರ್ರೈವರ ಎನ್ನ ಕಣ್ಣಿಂಗೆ ತಳವೆಳಗು ಮಾಡಯ್ಯಾ :

'ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ?' ಕಾಯಕ್ಕೆ ಎರಡು ಕಣ್ಣುಗಳಿವೆ. ಆ ಎರಡೂ ಕಣ್ಣುಗಳಲ್ಲಿರುವ ದೃಶ್ಯ ಒಂದೇ. ಆ ಎರಡೂ ಕಣ್ಣುಗಳು ಕೂಡಾ ಒಂದೇ. ಕಣ್ಣು ಒಂದು. ದೃಶ್ಯ ಎರಡು ಇವೆ.

ಎರಡು ದೃಶ್ಯಗಳಲ್ಲಿ ಒಂದು ಅರಿವಿನ ದೃಶ್ಯ; ಮತ್ತೊಂದು ಮನದ ದೃಶ್ಯ! ಅದು ನನ್ನದು. ಅಹಂಕಾರದ ದೃಶ್ಯ. ಕಾಮದ ದೃಶ್ಯ. ಅಜ್ಞಾನದ ದೃಶ್ಯ.

ಕಣ್ಣಿನಲ್ಲಿ ಅರಿವಿನ ಕಣ್ಣು ಸಂಗಮವಾಗಿದೆ; ಅಹಂಕಾರದ ಕಣ್ಣು; ಕಣ್ಣನ್ನು, ಅರಿವಿನ ಕಣ್ಣನ್ನು ಆವರಿಸಿದೆ. ಅರಿವಿನ ಕಣ್ಣು ಒಳಕಣ್ಣಾದರೆ ಅಹಂಕಾರದ ಕಣ್ಣು ಹೊರಕಣ್ಣು ಆಗಿದೆ. ಕಣ್ಣು; ಇವೆರಡೂ ಕಣ್ಣುಗಳಿಗೆ ಉಪಕರಣವಾಗಿದೆ. ಅಹಂಕಾರದ ಕಣ್ಣನ್ನು ಭ್ರಮಾಕಣ್ಣೆಂದು ಕರೆದಿದ್ದಾರೆ. ಅರಿವಿನ ಕಣ್ಣನ್ನು ಮುಕ್ಕಣ್ಣನ ಕಣ್ಣು; ಒಳಕಣ್ಣು; ಕಣ್ಣೊಳಗಿದ್ದ ಕಣ್ಣು ಎಂದು ಕರೆದಿದ್ದಾರೆ. ಬ್ರಹ್ಮ ಕಣ್ಣು ಎಂದು ಕೂಡಾ ಕರೆದಿದ್ದಾರೆ.

ಭ್ರಮಾಕಣ್ಣು ಕಾಣುತ್ತದೆ. ಆದರೆ ಆ ಕಣ್ಣಿಗೆ ಕಾಣುವುದೆಲ್ಲ ಸತ್ಯವಲ್ಲ. ಬರೀ ಸುಳ್ಳು. ಉದಾಹರಣೆಗೆ: ಕಣ್ಣು ಹೆಣ್ಣು ಅಲ್ಲ; ಗಂಡು ಕೂಡಾ ಅಲ್ಲ. ಆದರೆ ನೋಡಿ ಹೆಣ್ಣೆಂದು ನಿರ್ಧರಿಸುತ್ತದೆ. ಗಂಡೆಂದು ನಿರ್ಧರಿಸುತ್ತದೆ. ತಾನು ಗಂಡು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡುತ್ತದೆ. ಹೆಣ್ಣು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಗಂಡನ್ನು ನೋಡುತ್ತದೆ. ನೋಡಿ ಸುಮ್ಮನಾಗುವುದಿಲ್ಲ; ನಿರಪರಾಧಿ ಕಾಯಕ್ಕೆ ಕಾಮದ ಮುದ್ರೆ ಒತ್ತಿ ತಳಮಳಕ್ಕೆ ಈಡುಮಾಡುತ್ತದೆ. ಕಾಮದಿಂದ ರಕ್ಕಸನಂತಾದ ಕಾಯ ಕಾಯವನ್ನೇ ಹರಿದು ತಿನ್ನುತ್ತದೆ.

ಹೊರಕಣ್ಣಿನಿಂದಾಗಿ ಅರಿವಿನ ಕಾಯ ರಕ್ಕಸನ ಹೆಸರು ಪಡೆಯುತ್ತದೆ. ಕಾಯವನ್ನೇ ಕಾಯ ಹೊಗಳುತ್ತದೆ. ಕಾಯವನ್ನೇ ಕಾಯ ತೆಗಳುತ್ತದೆ. ಒಂದು ಕಾಯ ಸಾತ್ವಿಕ, ಮತ್ತೊಂದು ಕಾಯ ರಾಜಸಿಗ, ಮಗದೊಂದು ಕಾಯ ತಾಮಸಿಗ ಎಂದು ಅರಿವಿನ ಕಾಯ ಸುಳ್ಳು ಹೆಸರಿನಿಂದ ಕಾಯದಿಂದಲೇ ಕರೆಯಿಸಿಕೊಳ್ಳುತ್ತದೆ.

ಇದೆಲ್ಲ ಹೊರಕಣ್ಣಿನಿಂದಾದ ಗಾಯ ಎಂದು 'ಕಾಯ' ತಿಳಿಯುವುದೇ ಇಲ್ಲ. ಹಳದಿ ಲೋಹವನ್ನು ನೋಡಿದ ಕಣ್ಣು ಚಿನ್ನ ಎಂದು ಕೂಗುವಂತೆ ಕಾಯಕ್ಕೆ ಪ್ರೇರಣೆ ನೀಡಿ; ಕಾಯವನ್ನು ಖರೀದಿಸುವಂತೆ ಮಾಡುತ್ತದೆ. ಮತ್ತೊಂದು ಕಾಯವನ್ನು ಕದ್ದು ಪಡೆಯುವಂತೆ ಮಾಡುತ್ತದೆ; ಕೊಂದು ಪಡೆಯುವಂತೆ ಮಾಡುತ್ತದೆ.

ಕೊಂದು ಪಡೆದವ ರಾಜ, ಕದ್ದು ಪಡೆದವ ಕಳ್ಳ, ಖರೀದಿ ಮಾಡಿದವ ಶ್ರೀಮಂತ. ಕಾಯ ಒಂದೇ; ಹೆಸರು ಮಾತ್ರ ಬೇರೆ ಬೇರೆ. ಬಣ್ಣ ಯಾವುದಾದರೇನು? ಲೋಹ ಒಂದೇ! ಒಳಕಣ್ಣು ಲೋಹ ಎಂದು ನೋಡಿ ಸುಮ್ಮನಾದರೆ; ಹೊರಕಣ್ಣು ಚಿನ್ನ ಎಂದು ನೋಡಿ

ನಿರಪರಾಧಿ ಕಾಯಕ್ಕೆ ಕಳ್ಳ ಶ್ರೀಮಂತ ರಾಜನ ಪಟ್ಟ ಕಟ್ಟುತ್ತದೆ. ಒಂದು ಕಾಯ ಮತ್ತೊಂದು ಕಾಯಕ್ಕೆ ಕಾಯದಿಂದಲೇ ಶಿಕ್ಷೆ ನೀಡುತ್ತದೆ. ಇದು ಹೊರಕಣ್ಣಿನ ಮಹಿಮೆ!

ಒಳಕಣ್ಣಿನಿಂದ ನೋಡಿದರೆ ಲೋಹ! ನೋಡಿದ. ಲೋಹವೆಂದೇ ನೋಡಿದ! ಅದು ಹಳದಿಯಾದರೇನು ಕಪ್ಪಾದರೇನು? ಲೋಹ ಲೋಹವಲ್ಲವೆ? ಹೊರಕಣ್ಣಿನಿಂದ ನೋಡಿದರೆ ಅದು ಚಿನ್ನ. ಖರೀದಿಸುವ ಆಸೆ; ಕದಿಯುವ ಆಸೆ; ಕೊಂದಾದರೂ ಪಡೆಯುವ ಆಸೆ!

ಒಳಕಣ್ಣು ಬಳಸಿದ ಕಾಯ; ಬುದ್ಧ ಕಬೀರ ಕ್ರಿಸ್ತ ಕ್ರಿಷ್ಣ ಪೈಗಂಬರ ದಾಸ ಶರಣ ನಾನಕ ಎಂದು ಕರೆಯಿಸಿಕೊಂಡಿತು. ಹೊರಕಣ್ಣು ಬಳಸಿದ ಕಾಯ ದಾನಿ ಭಿಕ್ಷುಕ ರಾಜ ಕಳ್ಳ ಅಧಿಕಾರಿ ಶಾಸಕ ವಿಷಯಲಂಪಟ ಕ್ರೂರಿ ಹೆಣ್ಣು ಗಂಡು ಜಾತಿ ಮತ ಪಂಥ ಧರ್ಮ ಮುಂತಾದ ಹೆಸರಿನಿಂದ ಕರೆಯಿಸಿಕೊಂಡಿತು.

ಸಾತ್ವಿಕ ರಾಜಸ ತಾಮಸದ ಪಾತ್ರಗಳೆಂದರೆ ಹೊರಕಣ್ಣಿಗೆ ಬಲು ಇಷ್ಟ. ಹೀಗಾಗಿ ಬುದ್ಧ ಪೈಗಂಬರ ಕ್ರಿಷ್ಣ ಕ್ರಿಸ್ತನ ಪೂಜೆ ಮಾಡುವುದು, ಬಸವಾದಿ ಶರಣರ ದಾಸರ ಪೂಜೆ ಮಾಡುವುದು ಹೊರಕಣ್ಣಿಗೆ ಬಲು ಇಷ್ಟ.

ಒಳಕಣ್ಣಿನ ಫಲದ ರುಚಿಯನುಂಡವರನ್ನು ಪೂಜಿಸುವುದರಿಂದ ಒಳಕಣ್ಣಿಗೆ ಪ್ರವೇಶ ಮಾಡಲು ಸಾಧ್ಯವೆ? ಅವರಿಗೆ ಮಂದಿರ ಮಸೀದೆ ಚರ್ಚ್ ಕಟ್ಟುವುದರಿಂದ ಒಳಕಣ್ಣಿಗೆ ಪ್ರವೇಶ ಮಾಡಲು ಸಾಧ್ಯವೆ ಹೇಗೆ ಎಂದು ಹೊರಕಣ್ಣೇ ಆಲೋಚನೆಗೆ ತೊಡಗಬೇಕು. 'ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ; ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ!' ಅಲ್ಲಮ ಪ್ರಭುಗಳ ಈ ಸೂತ್ರ ಹೊರಕಣ್ಣಿಗೆ ಹೊಳೆಯಬೇಕು. ಹೊರಕಣ್ಣು ಒಳಕಣ್ಣಿನತ್ತ ಪಯಣಿಸಿ ಅಲ್ಲಿಯೇ ಸಂಗಮವಾಗಬೇಕು. ಆ ಫಲದ ರುಚಿಯನುಂಡು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಬೇಕು.

**377**

**ಒಳಗೆಯೆಂದಡೆ ಹೊರಗೆ ಹತ್ತುವೆ.**
**ಹೊರಗೆಯೆಂದಡೆ ಒಳಗೆ ಹತ್ತುವೆ.**
**ಅಯ್ಯಾ , ಹಾ! ಅಯ್ಯಾ , ಹಿಡಹಿಡಿಯೊಳಗೊಂಬತ್ತೆಡೆಯ**
**ತಿರುಗಿ ಹೋದೆಯಯ್ಯಾ.**
**ಹಾ! ಅಯ್ಯಾ, ಕಣ್ಣೀರ ಕಣ್ಣೊಳಗಡಗುವೆ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಗುರುದೇವನೆಂದರೆ ಒಬ್ಬ ವ್ಯಕ್ತಿಯಲ್ಲ; ಅವ್ಯಕ್ತ ಶಕ್ತಿ ! ತನುವಿನಲ್ಲಿಯೇ ತನ್ಮಯವಾದ ಶಕ್ತಿ! ತನುವಿನೊಂದಿಗೆ, ತನುವನ್ನು ಆವರಿಸಿದ ಮನದೊಂದಿಗೆ ಸದಾ ಮಾತನಾಡುವ ದೇವರು. ಆತನನ್ನು ಗುರುದೇವ, ಮಹಾದೇವ, ಸದಾಶಿವ, ಸಾಕ್ಷಾತ್ ಪರಬ್ರಹ್ಮ ಎಂದು ಕರೆದಿದ್ದಾರೆ ಪುರಾತರು;

ಪುರಾತರು ಎಂದರೆ ಆತನೊಂದಿಗೆ ಮಾತನಾಡುವವರು. ಆತನಿಗೆ ಶರಣುಹೋಗಿ ಶರಣರಾದವರು. ಆತನಿಗೆ ದಾಸಾನುದಾಸರಾದವರು.

ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿಯೇ ತನ್ಮಯವಾದ ದೇವರನ್ನು ಕಂಡು; ಆತನಿಗೆ ಕಪಿಲಸಿದ್ಧ ಮಲ್ಲಿನಾಥಯ್ಯ ಎಂದು ಹೆಸರಿಟ್ಟು ಕರೆದಿದ್ದಾರೆ. ಆತನನ್ನು ತನುವಿನಲ್ಲಿ

ಹುಡುಕುವ ವಿಧಾನವನ್ನು ಈ ವಚನದ ಮೂಲಕ ಓದುಗರಿಗೆ ವಿವರಿಸಿದ್ದಾರೆ.

ಒಳ ಹೊರಗೆನ್ನದೆ ಭರಿತವಾದ ಅರಿವಿನ ದೇವರು ಒಳಗೆ ಎಂದರೆ ಹೊರಗೆ ಹತ್ತುವೆ. ಹೊರಗೆಯೆಂದಡೆ ಒಳಗೆ ಹತ್ತುವೆ. ಅಯ್ಯಾ, ಹಾ! ಅಯ್ಯಾ, ಹಿಡಹಿಡಿಯೊಳಗೆ ಒಂಬತ್ತೆಡೆ ತಿರುಗಿ ಹೋದೆಯಯ್ಯಾ.

ತನುವಿನ ಒಂಬತ್ತು ಬಾಗಿಲಗಳ ಮೂಲಕ ಒಳಹೋಗುವೆ. ಹೊರಗೂ ಹೋಗುವೆ. ನೀನು ಒಳಗಿದ್ದಾಗ ನನ್ನನ್ನು ನಾನು ಮುಟ್ಟಿಕೊಂಡರೆ ನನ್ನ ಸ್ಪರ್ಶ ಸುಖಕ್ಕೆ ನಿನ್ನ ದರುಶನವಿತ್ತು ನಾನು ನೀನು ಒಂದೇ ಎಂದೆ. ನೀನು ನನ್ನ ಕಂದ ಎಂದೆ! ಹಿಡಿಹಿಡಿಯೊಳಗೆ ಹೊರಗೆ ನೋಡಿದರೆ ಇಲ್ಲವಾದೆ. ನನ್ನ ತರಹದ ಕಾಯದೊಳಗೆ ನೀನಡಗಿದೆ. ನೋಡಲು ಹೋದರೆ ಕೂಡಲೇ ಮಾಯವಾಗಿ ಹೆಣ್ಣಾಗಿ ಕಂಡೆ; ಗಂಡಾಗಿ ಕಂಡೆ. ನಿನ್ನ ತನುವಿನ ಒಂಬತ್ತು ದ್ವಾರಗಳು ಮುಚ್ಚಿಹೋದವು. ನೀನಿದ್ದ ಕಾಯದಲ್ಲಿ ಕಾಮದೇವ ತನ್ನ ರತಿಯೊಂದಿಗೆ ನಾಟ್ಯವಾಡಿದ. ಹಿಡಿಹಿಡಿಯುವುದರೊಳಗೆ ಕಳೆದು ಹೋದೆ. ಒಳಗೆ ಎನ್ನುವುದರೊಳಗಾಗಿ ಹೊರಗೆ ಹೋದೆ; ಹೊರಗೆ ಎಂದರೆ ಒಳಗೆ ಬರುವಿ.

ಗುರುದೇವನೆ ನಿನ್ನ ಲೀಲೆ ಅನಂತ! ನನ್ನ ದರುಶನಕ್ಕಾಗಿಯೇ ಬಂದ ನೀನು ನನ್ನೊಂದಿಗೆ ಚೆನ್ನಾಟ ಆಡುವಿ. ಅನಂತ ಜನ್ಮಗಳವರೆಗೆ ನಿನ್ನ ಮರೆಯಲ್ಲಿ ನಾನಿದ್ದರೂ ನೀನು ಯಾರೆಂದು ನನಗೆ ತಿಳಿದಿರಲಿಲ್ಲ. ನನ್ನ ಬೆನ್ನ ಹಿಂದೆ ನೀನಿದ್ದು ನನಗೆ ಪಾಠ ಮಾಡಿದರೂ ನಾನು ಯಾರೆಂದು ನನಗೆ ತಿಳಿದಿರಲಿಲ್ಲ. ಜಗದ ಸಕಲ ತನುಗಳಲ್ಲಿ ನೀನು ಅಡಗಿದ್ದರೂ ನನಗೆ ನಿನ್ನನ್ನು ನೋಡಲು ಬಂದಿರಲಿಲ್ಲ. ಏಕೆಂದರೆ ನನ್ನಂತೆಯೇ ಇರುವ ಸಕಲ ತನುಗಳನ್ನು ನಾನು ಹೆಣ್ಣೆಂದು ಗಂಡೆಂದು ನೋಡಿದೆ.

ಶ್ರೀಮಂತ, ಬಡವ, ಭಿಕ್ಷುಕನೆಂದು ಅಳೆದೆ. ರಾಜ, ಪ್ರಧಾನಿ, ಸೈನಿಕನೆಂದು ಅಳೆದೆ. ಎಲ್ಲಿ ನೋಡಿದರೂ ಜಾತಿ, ಮತ, ಪಂಥಗಳೇ ಕಂಡವು. ತನುವಿನ ಧರ್ಮ ಒಂದೇ ಎಂದು ಮನ ಒಪ್ಪಲೇ ಇಲ್ಲ. ನೀನು ನಡೆದಾಡುವ ಒಂಬತ್ತು ಬಾಗಿಲುಗಳು ಮನದ ವಶವಾದವು. ಅಲ್ಲಿ ಮನ ತನ್ನ ಸುಳ್ಳಿನ ಸಾಮ್ರಾಜ್ಯವನ್ನೇ ಸ್ಥಾಪಿಸಿತು.

ಒಡಲೊಳಗಿದ್ದು, ಒಡಲಸೋಂಕದೆ, ಒಡಲ ಬೆಳಗುವ ನಿನ್ನನ್ನು ಮನ ಒಡಲ ಹೊರಗಿಟ್ಟು ನಿನಗಾಗಿ ಆಲಯವನ್ನು ನಿರ್ಮಿಸಿತು. ಕಲ್ಲಲ್ಲಿ ದೇವರನ್ನು ಕೆತ್ತಿ ತನ್ನಂತೆ ಅದಕ್ಕೆ ಕಿರೀಟ ವಸ್ತ್ರಾಲಂಕಾರ ಮಾಡಿತು. ಗಂಡು ದೇವರಿಗೆ ಒಂದು ಹೆಣ್ಣು ದೇವರನ್ನು ಕೆತ್ತಿ ಕಲ್ಯಾಣ ಉತ್ಸವ ಮಾಡಿ ಚತ್ರಿ ಚಾಮರಗಳನ್ನು ಬೀಸಿ ಶಯನ ಗೃಹಕ್ಕೆ ಕಳುಹಿಸಿ ಹಗಲಿರುಳೆನ್ನದೆ ಆರಾಧಿಸಿತು.

ಮನ, ಕಾಯದೊಂದಿಗೆ ತಾನು ಮಾಡಿದ ದೇವರನ್ನು ಪರಿಪರಿಯಿಂದ ಆರಾಧಿಸಿತು; ತನ್ನನ್ನು ಮಾಡಿ, ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರನ್ನು ಸಂಪೂರ್ಣ ಮರೆತು ಹೋಯಿತು. ಹಾ! ಅಯ್ಯಾ, ಎಂದು ಗೋಗರೆದು ದೇವರಿಗಾಗಿ ಕಣ್ಣೀರ ಹರಿಸಿತು. ಕಣ್ಣೀರ ಕಣ್ಣೊಳಗಡಗಿದ ದೇವರನ್ನು ಮನ ಕಾಣಲೇ ಇಲ್ಲ.

ಜಾಣ ಓದುಗ ಮಾತ್ರ ಅರಿವಿನ ದೇವರನ್ನು ಹುಡುಕುವ ಕಲೆಯನ್ನು ಕಲಿಯಬಲ್ಲ. ಕಲಿತು, ಆ ದೇವರೊಂದಿಗೆ ಒಂದಾಗಿ ಪರಮಸುಖವನ್ನು ಅನುಭವಿಸಬಲ್ಲ.

**378**

**ಓಂ ಜಯ ಪರಮೇಶ್ವರಂ ಪರಮಾತ್ಮಂ**

**ಈಶ್ವರನುರ್ವಿಪರ್ವಿ ಅಡಗಿಕೊಂಡಿಪ್ಪನು,**
**ಒರ್ಬ್ಬಣಿಗೆಯಾಗಿ ಯೋಗಿಗಳ ಮನದ**
**ಸಂಸಾರ ತೆಪ್ಪದೊಳಗೆ ಆನೀಗ ಅದ್ದು ಅಳಲುತ್ತಿದ್ದೇನಯ್ಯಾ,**
**ಬೇಗ ಬಾರ ಬಾರಯ್ಯಾ ಬಾರಾ,**
**ವಜ್ರಲೇಪದಲಿ ಬಿದ್ದಿದ್ದೇನೆ,**
**ಬೇಗ ಬಂದೆತ್ತಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಪರಮಾತ್ಮನ ವಾಸಸ್ಥಾನವೆಂದರೆ ಭೂಮಿಯ ಮೇರು ಪರ್ವತವೆಂದು ತಿಳಿದು ಯೋಗಿಗಳು ಅಲ್ಲಿಯೇ ಅನುಷ್ಠಾನ ಮಾಡುತ್ತಿರುವುದು ಜನಜನಿತ. ಅವರದೇ ಆದ ಸಂಸಾರ. ಆ ಸಂಸಾರ ಕೂಡಾ ಜನಜನಿತ. ಜನಪ್ರಿಯ. ಜನಕೂಡಾ ಯೋಗಿಗಳನ್ನೇ ಅನುಸರಿಸುತ್ತಾರೆ.

ಪರಮಾತ್ಮನನ್ನು ಕಾಣುವ ಬಯಕೆಯಾದ ವ್ಯಕ್ತಿ ಹಿಮಾಲಯದ ಕಡೆ ಮುಖ ಮಾಡುತ್ತಾನೆ. ನಾನು ಹಿಮಾಲಯದ ಮಹಾತ್ಮರೊಂದಿಗೆ ಸಾಕಷ್ಟು ದಿನ ಕಳೆದೆನೆಂದು ಪುನಹ ನಗರಕ್ಕೆ ಬಂದು ತಮಟೆ ಬಾರಿಸುತ್ತಾನೆ.

ಜಪತಪಗಳನ್ನು ಮಾಡುವ ವಿಧಾನವನ್ನು ಕ್ರಮಬದ್ಧವಾಗಿ ಕಲಿತು ಅನೇಕ ಶಿಬಿರಗಳನ್ನು ಮಾಡಿ ಆಸಕ್ತ ಜನಕ್ಕೆ ಪಾಠ ಮಾಡುತ್ತಾನೆ.

ಏನೂ ಗೊತ್ತಿಲ್ಲದ ಜನ. ಏನೂ ಗೊತ್ತಿಲ್ಲದ ಯೋಗಿ ಆತನ ವೇಷ! ಐದಾರು ಲಕ್ಷ ಪಡೆದು ಐದಾರು ತಿಂಗಳಲ್ಲಿ ಹಠಯೋಗ ಕಲಿಸುವ ಶಿಬಿರಗಳನ್ನು ರಚಿಸಿ ಜನರನ್ನು ಯಾಮಾರಿಸುತ್ತಾನೆ.

ಜನ ನಂಬುತ್ತಾರೆ. ಐದಾರು ಲಕ್ಷಗಳನ್ನು ಕಳೆದುಕೊಂಡು ಯೋಗಿಗಳಿಂದ ಯೋಗ ಕಲಿತು ಬಂದು ಅವರು ಕೂಡಾ ಯೋಗ ಕಲಿಸುವ ಯೋಗ ಗುರುಗಳಾಗುತ್ತಾರೆ. ಇದು ಯೋಗಿಗಳ ಸಂಸಾರ.

ಇದು ಯೋಗಿಗಳ ವಜ್ರಲೇಪ. ಇವರ ಮಾತಿಗೆ ಶರಣು ಹೋಗುವವರೆ ಹೆಚ್ಚು. ಇಂತಹ ವಜ್ರ ಲೇಪದಲ್ಲಿ ನಾನು ಸಿಕ್ಕಿಹಾಕಿಕೊಂಡಿದ್ದೇನೆ. ನಾನು ಎಂದರೆ ಯಾರೆಂದು ಯೋಗಿಗೂ ತಿಳಿಯುತ್ತಿಲ್ಲ. ತಿಳಿದಂತೆ ನಟಿಸುವ ಆತನಿಗೆ ತಿಳಿಸಲೂ ಸಾಧ್ಯವಾಗುತ್ತಿಲ್ಲ. ಬೇಗ ಬಂದೆತ್ತಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯಾ.

**379**

**ಓರಂತೆ ಮಾಡಯ್ಯಾ ನಿನ್ನವರೊಳಗೆ**
**ಮನ್ನಣೆಯಿಂದ ಮೆಚ್ಚಿಸಯ್ಯಾ.**
**ನಿನ್ನವರ ಪಾದೋದಕವ ಮೆಚ್ಚಿಸಯ್ಯಾ ,**
**ನಿನ್ನವರ ಪ್ರಸಾದವ ನಚ್ಚಿಸಿ ಮಚ್ಚಿಸಿ**
**ಮನಕ್ಕೆ ನೀನೇ ಮಂಗಳವಾಗಿ**
**ಅಚ್ಚಿಗಬಡಿಸದಂತಿರಿಸಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನಿನ್ನವರೊಳಗೆ ಮನ್ನಣೆಯಿಂದ ಮೆಚ್ಚಿಸಯ್ಯಾ. ನಿನ್ನವರ ಪಾದೋದಕ ಮೆಚ್ಚಿಸಯ್ಯಾ,

ನಿನ್ನವರ ಪ್ರಸಾದವ ನಚ್ಚಿಸಿ ಮಚ್ಚಿಸಿ ಮನಕ್ಕೆ ನೀನೇ ಮಂಗಳವಾಗಿ ಅಚ್ಚಿಗ ಬಡಿಸದಂತಿರಿಸಾ ಎಂದು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

ನಿನ್ನವರು ಎಂದರೆ, ಅರಿವನ್ನು ಒಲಿಸಿಕೊಂಡು ಸದಾ ಅರಿವಿನಿಂದ ಇರುವವರು. ಅರಿವೇ ತಾವಾದವರು. ಗುರುದೇವನೇ ತಾವಾದವರು. ಸಕಲರನ್ನು ಗುರುದೇವನಂತೆ ಕಾಣುವವರು. ಯಾರಿಗೂ ಗುರುವಾಗದವರು. ಯಾರಿಗೂ ಶಿಷ್ಯರಾಗದೆ ಅರಿವೆಂಬ ಗುರುದೇವನಿಗೆ ಶಿಷ್ಯರಾದವರು.

ಮನವೇ ಹೆಂಡತಿಯಾಗಿ, ಅರಿವನ್ನೇ ಗಂಡನನ್ನಾಗಿಸಿಕೊಂಡು ದೇಹವೆಂಬ ಮನೆಯಲ್ಲಿ ಸಂಸಾರ ಹೂಡಿದವರು. ಸಖಾ ಸಖೀ ಒಂದಾದವರು.

ಇಂಥವರನ್ನು ಸಿದ್ಧರಾಮ ಶಿವಯೋಗಿಗಳು ನಿನ್ನವರು ಎಂದು ಕರೆದಿದ್ದಾರೆ.

ಸಿದ್ಧರಾಮ ಶಿವಯೋಗಿಗಳಲ್ಲಿ ಆ ಶಕ್ತಿ ಇರುವುದನ್ನು ಕಂಡುಕೊಂಡ ಪ್ರಭುದೇವರು ಅವರನ್ನು ಕಲ್ಯಾಣಕ್ಕೆ ಕರೆದುಕೊಂಡು ಹೋದರು. ಮನ-ಘನ ಒಂದಾದ ಬಸವಣ್ಣನನ್ನು ಚೆನ್ನಬಸವಣ್ಣನನ್ನು, ಏಳೂನೂರಾ ಎಪ್ಪತ್ತು ಅಮರ ಗಣಂಗಳನ್ನು ತೋರಿಸಿ ಇವರೆಲ್ಲ ನಿನ್ನವರು ಎಂದು ದಿಟವಾಗಿ ಹೇಳಿದರು.

ಮನ ಮತ್ತು ಅರಿವನ್ನು ಒಂದು ಮಾಡಿಕೊಂಡವರನ್ನು ಹುಡುಕುವುದಕ್ಕೆ ಮನಕ್ಕೆ ಸಾಧ್ಯವಾಗುವುದಿಲ್ಲ. ಇನ್ನು ಅಂಥವರ ಸಂಗ ಮಾಡುವುದು ದೂರದ ಮಾತು.

ದೇಹಕ್ಕೆ ಬಡಿಯುವ ಸಕಲ ಅಜ್ಞಾನವನ್ನು ಪ್ರಸಾದ ಮಾಡಿಕೊಳ್ಳುವ ಶರಣರನ್ನು ನೋಡುವ ಭಾಗ್ಯ ಕಣ್ಣಿಗೆ ಲಭ್ಯವಾಗುವುದೆಂದರೆ ಸಾಮಾನ್ಯ ಮಾತಲ್ಲ. ಕಣ್ಣಿನಲ್ಲಿ ಶರಣರನ್ನು ನೋಡುವ ಬಯಕೆ ಹುಟ್ಟಬೇಕು. ಸಿದ್ಧರಾಮ ಶಿವಯೋಗಿಗಳಿಗೆ ಬಯಕೆ ಹುಟ್ಟಿದ ನಿಮಿತ್ಯ ಪ್ರಭುದೇವರ ದರುಶನವಾಯಿತು.

ಪ್ರಭುದೇವರು ಸಮರ್ಥರು. ಸಿದ್ಧರಾಮ ಶಿವಯೋಗಿಗಳಿಗೆ ಅರಿವೆಂಬ ಗುರುದೇವನನ್ನು ಅವರ ಅಂಗದಲ್ಲಿಯೇ ತೋರಿಸಬಹುದಾಗಿತ್ತು. ಆದರೂ ಪ್ರಭುದೇವರು ಆ ಕೆಲಸ ಮಾಡಲಿಲ್ಲ. ಕಲ್ಯಾಣಕ್ಕೆ ಕರೆದುಕೊಂಡು ಹೋಗಿ ಬಸವಾದಿ ಶರಣರನ್ನು ಪರಿಚಯಿಸಿದರು.

ಚೆನ್ನಬಸವಣ್ಣ ಸಿದ್ಧರಾಮರಿಗೆ ಸೂಚನಾ ಗುರುವಾಗಿ ಗುರುದೇವನನ್ನು ಪರಿಚಯಿಸಿದ. ನಿನ್ನಲ್ಲಿಯೇ ಇರುವ ಅರಿವೇ ನಿನಗೆ ಗುರು. ನಿನ್ನ ಮನವೇ ಈ ಗುರುದೇವನಿಗೆ ಶಿಷ್ಯ ಎಂದು ಖಚಿತವಾಗಿ ತಿಳಿಯುವಂತೆ ಹೇಳಿದ.

ತನ್ನ ಅಜ್ಞಾನವನ್ನು ತನ್ನ ಜ್ಞಾನದಿಂದಲೇ ಕಳೆದುಕೊಳ್ಳುವ ಉತ್ಕ್ರಾಂತಿ ಕಲ್ಯಾಣದಲ್ಲಿ ಎಲ್ಲೆಂದರಲ್ಲಿ ನಡೆದಿತ್ತು. ಬೀದಿ ಬೀದಿಯಲ್ಲಿಯೂ ಅದೇ ಸುದ್ದಿ; ಅದೇ ಅರಿವಿನ ಮಾತು. ಸಿದ್ಧರಾಮ ಶಿವಯೋಗಿಗಳ ಮನ ಕಲ್ಯಾಣದ ಶರಣರಿಗೆ ಶರಣು ಹೋಯಿತು. ಶರಣರ ಜ್ಞಾನದ ಗರಡಿಯಲ್ಲಿ ತಮಗೆ ತಾವೇ ಪಳಗಿದರು. ತಮಗೆ ತಾವೇ ಬೆಳಕಾದರು. ಮನಕ್ಕೆ ಮಂಗಳವಾಯಿತು.

**380**

**ಕಂಗಳಂಗಳದಲಿಹ ಮಂಗಳಾಂಗನ ಬೆಳಗು**
**ಹಿಂಗದಂತಾದುದೈ ಸಕಲದೊಳಗೆ.**
**ಮಂಗಳಮಯನೆ ಕಪಿಲಸಿದ್ಧ ಮಲ್ಲೇಶ್ವರಾ**

ಲಿಂಗ ನಿಮ್ಮಿಂದರಿದು ಧನ್ಯನಾದೆ.

ನೋಡೂದ ನೋಡಲರಿಯದೆ ಸತ್ತಿತ್ತೀ ಜಗವೆಲ್ಲ. ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ. ಕೂಡದ ಅಗಲದ ಕೂಟದ ಸುಖವನು ಗುಹೇಶ್ವರಾ ನಿಮ್ಮ ಶರಣ ಮಾತ್ರ ಬಲ್ಲ ಎಂದು ಅಲ್ಲಮಪ್ರಭುಗಳು ಹೇಳಿದರೆ ಸಿದ್ಧರಾಮ ಶಿವಯೋಗಿಗಳು ಮೇಲಿನಂತೆ ಹೇಳಿದ್ದಾರೆ.

ಜಗದಲ್ಲಿರುವ ಪ್ರತಿ ಕಾಯದ ಕಣ್ಣ ಅಂಗಳದಲ್ಲಿ ಬೆಳಗಿಂಗೆ ಬೆಳಗಾಗಿ ಬೆಳಗುವ ಮಂಗಳಾಂಗನೂ ಇದ್ದಾನೆ. ಹಾಗೆಯೇ ಏನೇನೂ ನೋಡಲು ಬಾರದ ಮಂಗವೂ ಇದೆ. ಹೀಗಾಗಿಯೇ ನೋಡೂದ ನೋಡಲರಿಯದೆ ಸತ್ತಿತ್ತೀ ಜಗವೆಲ್ಲ ಎಂದು ಪ್ರಭುಗಳು ಹೇಳಿದರು.

ಕಂಗಳ ಅಂಗಳದಲ್ಲಿ ವಾಸ ಮಾಡಿದ ಮಂಗಳಮಯನ ಕಂಗಳಿಂದ ನೋಡಿದರೆ ಸತ್ಯವೇ ಗೋಚರಿಸುತ್ತದೆ. ಸತ್ಯದ ಹೊರತು ಮತ್ತೇನೂ ಕಾಣುವುದಿಲ್ಲ. ಅಲ್ಲಿಯೇ ವಾಸ ಮಾಡಿದ ಮನವೆಂಬ ಮರ್ಕಟನ ಕಣ್ಣಿಂದ ನೋಡಿದರೆ ತಿರುಗು ಮರುಗಾಗಿ ಕಾಣುತ್ತದೆ. ಸತ್ಯ ಕಾಣುವುದೇ ಇಲ್ಲ.

ಉದಾಹರಣೆಗೆ ಕಲ್ಲು ಮಣ್ಣು ಕಟ್ಟಿಗೆ ಲೋಹವನ್ನು ಕಣ್ಣಿನಿಂದ ನೋಡಿದರೆ ಕಣ್ಣಿಗೆ ಸತ್ಯವೇ ಕಾಣುತ್ತದೆ. ಸತ್ಯ ದೇಹದಲ್ಲಿ ಯಾವ ರಸಾಯನಿಕ ಕ್ರಿಯೆಯನ್ನು ಸೃಷ್ಟಿಸುವುದಿಲ್ಲ. ಅದೇ ಮಣ್ಣು ಮತ್ತು ಕಲ್ಲನ್ನು ಪಡೆದು ಮಸೀದೆ ಚರ್ಚ್ ದೇವಾಲಯ ಮಾಡಿದರೆ ಸತ್ಯಕಂಡ ಕಂಗಳ ಅಂಗಳದಲ್ಲಿ ಮರ್ಕಟ ಸೃಷ್ಟಿಯಾಗಿ ಮುಸಲ್ಮಾನ ಕ್ರೈಸ್ತ ಹಿಂದು ಎನ್ನುವ ಅಜ್ಞಾನ ಸೃಷ್ಟಿಯಾಗುತ್ತದೆ.

ಮಣ್ಣು ಕಲ್ಲು ನೋಡಿದ ಮಂಗಳಾಂಗನು ಕಣ್ಣಲ್ಲಿಯೇ ಉಳಿದು ಅದು ಮಣ್ಣು ಕಲ್ಲು ಎಂದು ಪಾಠ ಮಾಡಿದರೂ ಕಣ್ಣಲ್ಲಿಯೇ ಸೃಷ್ಟಿಯಾದ ಮನವೆಂಬ ಮರ್ಕಟ ಕೇಳಬೇಕಲ್ಲ? ಮಣ್ಣು ಕಲ್ಲುಗಳಿಂದ ಭರಿತವಾದ ಕಟ್ಟಡವನ್ನೇ ಮಸೀದೆ ಚರ್ಚ್ ದೇವಾಲಯವೆಂದು ತಿಳಿದು ಮುಸಲ್ಮಾನ ಕ್ರೈಸ್ತ ಹಿಂದುವಾಗಿ ಪ್ರಾರ್ಥಿಸುವುದಕ್ಕಾಗಿ ಪೂಜಿಸುವುದಕ್ಕಾಗಿ ಹೋಗುತ್ತದೆ.

ಕಂಗಳ ಅಂಗಳದಲ್ಲಿದ್ದ ಅರಿವಿಗೆ ಮಣ್ಣು ಮಣ್ಣಾಗಿಯೇ ಕಾಣುತ್ತದೆ. ಕಂಗಳ ಅಂಗಳದಲ್ಲಿದ್ದ ಮನವೆಂಬ ಮರ್ಕಟಕ್ಕೆ ಮಣ್ಣೇ ಮಸೀದೆ ಚರ್ಚ್ ದೇವಾಲಯವಾಗಿ ಕಾಣುತ್ತದೆ.

ಕಲ್ಲು ಒಂದೇ. ಕಲ್ಲನ್ನು ಕಲ್ಲು ಎಂದು ಹೇಳುವ ಬಾಯಿ, ಕೆತ್ತಿದ ಕಲ್ಲನ್ನು ದೇವರೆಂದು ಹೇಳುತ್ತದೆ. ಕಲ್ಲನ್ನು ಕಲ್ಲು ಎಂದು ನೋಡುವ ಕಣ್ಣು ಕೆತ್ತಿದ ಕಲ್ಲನ್ನು ದೇವರು ಎಂದು ನೋಡುತ್ತದೆ. ಒಂದು ಕಲ್ಲು ಮಲ್ಲಿಕಾರ್ಜುನ ಅದೇ ಕಲ್ಲು ಭ್ರಮರಾಂಬ. ತಿರುಪತಿಯಲ್ಲಿ ಕೆಳಗೆ ಪದ್ಮಾವತಿಯನ್ನು ಆರಾಧಿಸುತ್ತದೆ; ಮೇಲೆ ವೆಂಕಟರಮಣನನ್ನು ಆರಾಧಿಸುತ್ತದೆ. ಮಸೀದೆ ಚರ್ಚ್‌ಗಳಲ್ಲಿ ಪ್ರಾರ್ಥಿಸಿ ದೇವಾಲಯಗಳಲ್ಲಿ ಆರಾಧಿಸುತ್ತದೆ.

ಮನಕ್ಕೆ ಸತ್ಯ ಗೋಚರಿಸುವುದಿಲ್ಲ; ಅರಿವಿಗೆ ಸುಳ್ಳು ಕಾಣುವುದಿಲ್ಲ. ನೋಡುವ ಸತ್ಯವನ್ನು ನೋಡಲು ಅರಿಯದೆ ಜಗತ್ತಿನ ಕಾಯಗಳೆಲ್ಲ ಕೆಟ್ಟುಹೋಗಿವೆ.

ಪ್ರತಿ ಕಾಯದಲ್ಲಿ ಅರಿವು ಇದೆ. ಅದು ಸದಾ ಮಂಗಳಮಯ. ಮಂಗಳಮಯ ಕಿರಣಗಳೊಂದಿಗೆ ಬೆಳಗುತ್ತಲಿದೆ. ಆ ದಿವ್ಯ ಬೆಳಕನ್ನು ಪಕ್ಕಕ್ಕೆ ಸೇರಿಸಿ ಮನವೆಂಬ ಮರ್ಕಟ ತನ್ನ ಕಣ್ಣಿಂದ ನೋಡುತ್ತದೆ. ಅದು ನೋಡುವುದೆಲ್ಲ ಸುಳ್ಳು. ಮಣ್ಣು ಕಲ್ಲನ್ನು ದೇವರೆನ್ನುತ್ತದೆ. ಲೋಹವನ್ನು ಚಿನ್ನವೆಂದು ಹೇಳಿ ಲೋಹಕ್ಕಾಗಿ ಯುದ್ಧ ಮಾಡುತ್ತದೆ. ದೇವರಿಗಾಗಿ ಯುದ್ಧ ಮಾಡುತ್ತದೆ.

ಮಸೀದೆ ಚರ್ಚ್ ದೇವಾಲಯಗಳನ್ನು ಮಣ್ಣಿನಿಂದಲೇ ನಿರ್ಮಾಣ ಮಾಡಿ; ಮಣ್ಣನ್ನು ಮಣ್ಣೆಂದು ಹೇಳಲು ಸಾಧ್ಯವಾಗದಷ್ಟು ಅಜ್ಞಾನವನ್ನು ಹೇರಿಕೊಂಡಿದೆ. ಒಂದನ್ನು ನೋಡಿದರೆ

ಒಂದಕ್ಕೆ ಆಗುವುದಿಲ್ಲ. ನೋಡುವ ಕಣ್ಣು ಹಿಂದುವೊ? ಮುಸಲ್ಮಾನನೋ? ಕ್ರೈಸ್ತನೋ? ಶ್ರೀಮಂತನೋ ಏನು ಬಡವನೋ? ಅಕ್ಷರಸ್ಥನೋ ಏನು ಅನಕ್ಷರಿಯೋ?

ನೋಡುವ ಸತ್ಯವನ್ನು ನೋಡಲು ಬಂದ ಕಣ್ಣು ಮಾತ್ರ ಅಕ್ಷರೋತ್ತಮನ ಕಣ್ಣು. ಅದಕ್ಕೆ ಅಕ್ಷರಗಳ ಅವಶ್ಯಕತೆಯಿಲ್ಲ. ಅದು ಹುಟ್ಟಿನಿಂದಲೂ ಮಂಗಳಮಯ. ಈ ಮಂಗಳಮಯ ಬೆಳಕಿನಲ್ಲಿ ಆಶ್ರಯ ಪಡೆದ ಮನವೆಂಬ ಮರ್ಕಟಕ್ಕೆ ಅರಿವಿನ ಬೆಳಕನು ಉಣ್ಣುವ ಆಸೆಯಾದಾಗ ಆ ಅರಿವೇ ತಾನಾಗುತ್ತದೆ.

ಕಾಯವನ್ನು ಕಾಯದಂತೆ ನೋಡುತ್ತದೆ. ಕಾಯದಲ್ಲಿಯ ಕಾಮದ ಕಣ್ಣು ಮಂಗಳಮಯ ಬೆಳಕಿಗೆ ಆಹಾರವಾಗುತ್ತದೆ. ಕಣ್ಣಲ್ಲಿರುವ ಕಾಮದ ಕಣ್ಣನ್ನು ಕಣ್ಣಿ ಅಂಗಳದಲ್ಲಿಯೇ ಇರುವ ಕಾಮಹರನು ತನ್ನ ಮಂಗಳಮಯ ಬೆಳಕಿನಿಂದ ಭಸ್ಮ ಮಾಡುತ್ತಾನೆ.

ಮಂಗಳಮಯನೆ ಕಪಿಲಸಿದ್ಧ ಮಲ್ಲೇಶ್ವರನೇ ಮನವೆಂಬ ನಾನು, ಮಂಗಳಮಯನೇ ಆದ ಅರಿವಿನ ಲಿಂಗವೇ ಆದ ನಿನ್ನನ್ನು ಅರಿದರಿದು ಧನ್ಯನಾದೆ ನಾನು.

**381**

**ಕಂಗಳ ಬೇಟೆಯನಾಡುವ ಕಾಮನ ಸಂಗಕ್ಕೆನ್ನ ಸಲಿಸದೆ,**
**ಮಂಗಳಮಯವಪ್ಪ ಉರುತರ ಭಕುತಿಯ ಸಂಗಕ್ಕೆನ್ನ ಸಲಿಸಯ್ಯಾ,**
**ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಂಗಳು ಎರಡಾದರೂ ದೃಶ್ಯ ಒಂದೇ; ಕಣ್ಣನ್ನು ಮನವೆಂಬ ಮನ್ಮಥ ಆವರಿಸಿದ್ದಾನೆ. ಕಣ್ಣಲ್ಲಿ ಮಂಗಳಮಯನಾದ ಅರಿವಿನ ಶಿವನೂ ಸಂಗಮವಾಗಿದ್ದಾನೆ. ಈತನನ್ನು ಮುಕ್ಕಣ್ಣ ಎಂದು ಕೂಡಾ ಕರೆದಿದ್ದಾರೆ.

ಕಣ್ಣು ಇರುವುದೇ ಮುಕ್ಕಣ್ಣನಿಗಾಗಿ. ಕಣ್ಣನ್ನು ಮನ್ಮಥ ಆವರಿಸಿರುವುದರಿಂದ ಮನ್ಮಥನ ಬೇಟೆಗಾಗಿ ಕಣ್ಣು ಮತ್ತು ದೃಶ್ಯ ಬಳಕೆಯಾಗುತ್ತಲಿದೆ. ಮುಕ್ಕಣ್ಣ ಕಣ್ಣಲ್ಲಿ ಧ್ಯಾನಸ್ಥನಾಗಿದ್ದಾನೆ. ಹೀಗಾಗಿ ಮುಕ್ಕಣ್ಣನ ಕಾಯಕ ಕಾಯದಲ್ಲಿ ನಿರಂತರವಾಗಿ ನಡೆದಿದೆ.

ಇಡೀ ಕಾಯಕ್ಕೆ ಕಾಮದ ಬಲೆ ಬೀಸಿ, ಕಾಯವನ್ನು ತನ್ನ ವಶಕ್ಕೆ ಪಡೆದು ಕಣ್ಣಿನ ಮೂಲಕ ಮನ್ಮಥ ರತಿಯನ್ನು ನೋಡುತ್ತಾನೆ. ಆ ಸ್ಥಾನದಲ್ಲಿಯೇ ಮಂಗಳಮಯನಾದ ಶಿವನಿದ್ದಾನೆ; ಮುಕ್ಕಣ್ಣನಿದ್ದಾನೆ ಎನ್ನುವುದು ಮನ್ಮಥನಿಗೆ ಕಾಮಕ್ಕೆ ಸಕಾಣುವುದೇ ಇಲ್ಲ.

ಏಕೆಂದರೆ ಕಾಮಕ್ಕೆ ಕಣ್ಣಿಲ್ಲ. ಕಾಮ ಎಂದರೆ ಗಂಡಲ್ಲ; ಹೆಣ್ಣು ಕೂಡಾ ಅಲ್ಲ. ಕಣ್ಣಲ್ಲಿ ಹುಟ್ಟಿ ಇಡೀ ಕಾಯವನ್ನು ತನ್ನಂತೆ ಮಾಡಿಕೊಳ್ಳುತ್ತದೆ. ಕಿವಿಯಲ್ಲಿ ಹುಟ್ಟಿ ಇಡೀ ಕಾಯವನ್ನು ತನ್ನಂತೆ ಮಾಡಿಕೊಳ್ಳುತ್ತದೆ. ಚರ್ಮ, ಮೂಗು, ನಾಲಿಗೆಯಲ್ಲಿ ಹುಟ್ಟಿ ಇಡೀ ಕಾಯವನ್ನು ತನ್ನಂತೆ ಮಾಡಿಕೊಳ್ಳುತ್ತದೆ.

ಕಾಮದ ರುಚಿಗಾಗಿ ಕಾಯವನ್ನು ಕಾಮ ಹೆಣ್ಣನ್ನಾಗಿ ಗಂಡನ್ನಾಗಿ ಮಾಡಿಕೊಂಡಿದೆ. ಶಿವನನ್ನು ಸೃಷ್ಟಿಮಾಡುವ ಶಕ್ತಿ ರತಿ ಮನ್ಮಥನಲ್ಲಿದೆ. ಕಾಮದ ರುಚಿಯ ಚೇಷ್ಟೆಯಿಂದಾಗಿ ತಾನು ಅಸಾಮಾನ್ಯ ಎಂದು ಅದಕ್ಕೆ ತಿಳಿಯುತ್ತಿಲ್ಲ. ಹೀಗಾಗಿ ಕಣ್ಣಲ್ಲಿ ಹುಟ್ಟಿ ಕಾಯವನ್ನು ವ್ಯಾಪಿಸಿ ಕಾಯದೊಂದಿಗೆ ಸುಖಿಸಿ ತಣ್ಣಗಾಗುತ್ತದೆ. ಅದೆಷ್ಟೋ ಶಿವಸಂಗಮವಾದ ಬೀಜಗಳನ್ನು ಹಾಳು ಮಾಡುತ್ತದೆ. ಇದು ಕಾಯದ ತಪ್ಪಲ್ಲ; ಕಾಮದ ತಪ್ಪು. ಕಾಮದ ತಪ್ಪು ಕೂಡಾ ಅಲ್ಲ;

ಕಣ್ಣಲ್ಲಿಯೇ ಸಂಗಮವಾದ ಕಣ್ಣಪ್ಪನ ಲೀಲೆ. ಮುಕ್ಕಣ್ಣನ ಲೀಲೆ.

ಕಣ್ಣಲ್ಲಿಯೇ ಇದ್ದ ಮುಕ್ಕಣ್ಣ ಕಣ್ಣನ್ನು ಕಾಯವನ್ನು ಕಾಮದ ಸಂಗಕ್ಕೆ ಸಲ್ಲಿಸಿದ್ದಾನೆ. ತಾನು ಅಲ್ಲಿಯೇ ಧ್ಯಾನಸ್ಥನಾಗಿದ್ದಾನೆ; ಅಂಗದಲ್ಲಿ ಅನಂಗನಾಗಿ!

ಕಾಯದ ಹೃದಯ ಸ್ಥಾನದಲ್ಲಿರುವ ಶಿವ ಅಕಾಯನು ಆಗಿದ್ದಾನೆ. ಕಾಯದಲ್ಲಿದ್ದರೂ ಕಾಯಕ್ಕೆ ಸೋಂಕದೆ ಕಾಯವನ್ನು ಬೆಳಗುವ ಅಕಾಯನಾಗಿದ್ದಾನೆ.

ಕಾಯವನ್ನು ಆವರಿಸಿದ ಕಾಮ ಕೂಡಾ ಅಕಾಯವೇ ಆಗಿದೆ. ಒಂದು ಕಾಮದ ಕಾಯವಾದರೆ ಮತ್ತೊಂದು ಶಿವಕಾಯ; ಅರಿವಿನ ಕಾಯ. ಕಾಮದ ಕಾಯ ಅರಿವಿನ ಶಿವಕಾಯವನ್ನು ಮೋಹಿಸಲು ಹೋದರೆ ಕಾಮದ ಕಾಯ ಸುಟ್ಟು ಭಸ್ಮವಾಗುತ್ತದೆ. ಆ ಭಸ್ಮ ಶಿವನಿದ್ದ ಕಾಯಕ್ಕೆ ಸಮರ್ಪಣೆಯಾಗುತ್ತದೆ.

ಕಣ್ಣಲ್ಲಿಯೇ ಸೃಷ್ಟಿಯಾದ ಕಾಮ ಮುಕ್ಕಣ್ಣನ ಹಣೆಗಣ್ಣಿಗೆ ತುತ್ತಾಗುತ್ತದೆ.

ಕಣ್ಣ ಹೃದಯಸ್ಥಾನದಲ್ಲಿರುವ ಮಂಗಳಮಯನಾದ ಧ್ಯಾನಸ್ಥ ಅರಿವಿನ ಶಿವನನ್ನು ಮೋಹಿಸುವ ಬಯಕೆ ಕಾಮದ ಕಣ್ಣಲ್ಲಿ ಹುಟ್ಟಿದಾಗ ಭಕುತಿಯ ಸಂಗ ಏರ್ಪಡುತ್ತದೆ.

ಶಿವನನ್ನು ಮೋಹಿಸುವ ಭಕುತಿಯ ಬಯಕೆಯನ್ನು ಶಿವ ಮಾತ್ರ ಕರುಣಿಸಬಲ್ಲ. ಹೀಗೆ ಅನುಭವದಿಂದ ಶಿವನನ್ನು ಕೇಳುವ ಇಚ್ಛೆ ಕಾಮದ ಕಣ್ಣಲ್ಲಿ ಉಂಟಾದಾಗ ಕಾಮದ ಕಣ್ಣು ಅರಿವಿನ ಕಣ್ಣಲ್ಲಿ ಸಂಗಮವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**382**

**ಕಂಜಕರ್ಣಿಕೆ ನಿನ್ನ ಅಂಜನದ ನೇತ್ರವನು**
**ಕುಂಜರನ ಮಸ್ತಕದ ಸುಧೆಯ ಕೂಪ**
**ಭುಂಜಿಸುವ ಮಧುಕರನ ಕಂಜನಾಳದ ಸುದ್ದಿ**
**ಅಜಲೋಕದಾರೈದ ಸುದ್ದಿಯನು**
**ಓರಂತೆ ಅರಿದಾತ ತಾನು ನೀನಪ್ಪನೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯಕ್ಕೆ ಅರಿವಾದರೆ ಕಾಯ ಮೂರು ಅವತಾರಗಳನ್ನು ಹೊಂದಿದೆ ಎಂದು ಕಾಯಕ್ಕೆ ತಿಳಿಯುತ್ತದೆ. ಆದರೆ ಕಾಯಕ್ಕೆ ಅರಿವಾಗಬೇಕಲ್ಲ; ತನಗೆ ಅರಿವಾಗಬೇಕೆಂದು ಕಾಯ ಕಾಯವನ್ನು ಆವರಿಸಿದ ಮನ ಪ್ರಯತ್ನಿಸಬೇಕಲ್ಲ; ಅದು ಸಾಧ್ಯವಾಗದ್ದರಿಂದ, ಸಾಧ್ಯವಾದ ಕಾಯ ಅರಿವನ್ನು ಸಾಧಿಸಿ ಅರಿವನ್ನೇ ಬಳಸುವ ಕಾಯದ ಮಾತು ಕಾಯ ಕೇಳುವುದಿಲ್ಲ. ಇದು ಕಾಯದ ದುರ್ದೈವವೇ ಸರಿ.

ಕಾಯದ ಒಂದು ಅವತಾರ ವಿಷ್ಣುವಾದರೆ, ಮತ್ತೊಂದು ಅವತಾರ ಬ್ರಹ್ಮ; ಮಗದೊಂದು ಅವತಾರ ಸಾಕ್ಷಾತ್ ಶಿವ.

ಸ್ಥೂಲಕಾಯ ವಿಷ್ಣುವಾದರೆ; ಸೂಕ್ಷ್ಮ ಕಾಯ ಬ್ರಹ್ಮ; ಕಾರಣ ಕಾಯ ಶಿವ. ಕಾಯ ಹೀಗೆ ಮೂರು ಅವತಾರಗಳನ್ನು ಹೊಂದಿದೆ. ಬ್ರಹ್ಮಕಾಯಕ್ಕೆ ಭ್ರಮೆ ಆವರಿಸಿರುವುದರಿಂದ ಸ್ವತಃ ಅದು ಬ್ರಹ್ಮರಕ್ಕಸನಾಗಿ ಸ್ಥೂಲಕಾಯವನ್ನು ಆವರಿಸಿದೆ.

ಕಾಯದಲ್ಲಿ ಶಿವ ಸಂಗಮಗೊಂಡಿರುವುದು ಸೂಕ್ಷ್ಮಕಾಯಕ್ಕೆ ಅರಿವಾಗುವುದೇ ಇಲ್ಲ;

ಭ್ರಮೆ ಬ್ರಹ್ಮನ ಸಂತಾನವಾಗಿರುವುದರಿಂದ ಅದು ಭೌತಿಕ ವಸ್ತುಗಳನ್ನು ಸೃಷ್ಟಿಸುವ ಕಾಯಕದಲ್ಲಿ ತೊಡಗಿದೆ. ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುವ ಕಾಯಕವನ್ನು ಕಾಯ ಕಾಯವನ್ನು ಆವರಿಸಿದ ಮನ ಮರೆತು ಹೋಗಿದೆ.

ಸ್ಥೂಲಕಾಯವೆಂದರೆ ಸಾಮಾನ್ಯವಲ್ಲ ಅಲ್ಲಿ ವಿಷ್ಣು ಸಂಗಮವಾಗಿದ್ದಾನೆ. ನೇತ್ರದಲ್ಲಿ ಅರಿವಿನ ಅಂಜನ ಭರಿತವಾಗಿದೆ. ಮಸ್ತಕದಲ್ಲಿ ಅಮೃತ ಭರಿತವಾಗಿದೆ. ಇಡೀ ಕಾಯವೇ ಸುಧೆಯ ಕೂಪವಾಗಿದೆ. ಎಲ್ಲಿ ಈಂಟಿದರೂ ಸುಧೆಯೇ ಸುಧೆ.

ಮನ ದುಂಬಿಯಾಗಿ ಅರಿವಿನ ಮಧುವನ್ನು ಹೀರುವ ಕಲೆಯನ್ನು ಕಲಿತುಕೊಳ್ಳಬೇಕು. ಇಂತಹ ಸುದ್ದಿಯನ್ನು ಬಲ್ಲ ಶರಣ ಮಾತ್ರ ಹೇಳಲು ಸಾಧ್ಯ. ಆ ಶರಣನ ಜ್ಞಾನ ಕಲೆಯನ್ನು ಕಲಿತುಕೊಳ್ಳುವುದಕ್ಕಾಗಿ ಮನಕ್ಕೆ ಬಯಕೆಯಾಗಬೇಕು.

ಇದು ಸಾಮಾನ್ಯ ಮಾತಲ್ಲ. ಬ್ರಹ್ಮನ ಮಾತು. ಸ್ವತಃ ಭ್ರಮೆ ಕಳೆದುಕೊಂಡು ಬ್ರಹ್ಮನಾಗುವ ಮಾತು. ಬ್ರಹ್ಮ ಲೋಕದ ಮಾತು.

ನೇತ್ರದಿಂದ, ಕಿವಿಯಿಂದ, ಚರ್ಮದಿಂದ, ಜಿಹ್ವೆಯಿಂದ, ನಾಸಿಕದಿಂದ ತನುವಿನ ಕೂಪದೊಳಗಿದ್ದ ಸುಧೆಯನ್ನು ಮನಕ್ಕೆ ಈಂಟಲು ಬರಬೇಕು. ನೇತ್ರದಲ್ಲಿದ್ದ ಅಂಜನದ ಅರಿವಾದಾಗ ಆ ಅಂಜನವನ್ನೇ ಬಳಕೆ ಮಾಡಿಕೊಂಡು ಕಾಯದ ಅಂತರಾಳದ ದಾರಿಯನ್ನು ಕಂಡುಕೊಂಡು ಪಯಣಿಸಬೇಕು.

ಇದನ್ನು ಅರಿದಾತ ತಾನು ನೀನಪ್ಪನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

ತಾನೆಂದರೆ ಮನ. ನೀನೆಂದರೆ ಶಿವ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ. ತಾನು ಮತ್ತು ಶಿವ ಕಾಯವೆಂಬ ಕೈಲಾಸದಲ್ಲಿಯೇ ವಾಸವಾಗಿದ್ದಾರೆ. ಆದರೂ ತಾನು ಶಿವನ ಸಂತಾನವೆಂಬುದು ಮನಕ್ಕೆ ಗೊತ್ತಿಲ್ಲ.

ಮನವೇ ಬ್ರಹ್ಮ, ಕಾಯವೇ ವಿಷ್ಣು, ಅರಿವೇ ಶಿವ ಎಂಬ ಸುದ್ದಿ ಕಾಯಕ್ಕೆ ಗೊತ್ತಿಲ್ಲ. ತನ್ನನ್ನು ತಾನು ತಿಳಿಯಲು ಹಗಲಿರುಳೆನ್ನದೆ ಮಾಡುತ್ತಿರುವ ಶಿವನ ಉಪನ್ಯಾಸ ಅರಿವಿಗೆ ಬರುತ್ತಿಲ್ಲ. ಹೀಗೆ ಕಾಯ ತ್ರಿಕೂಟ ಸಂಗಮವಾದರೂ; ಆ ಸಂಪತ್ತನ್ನು ಕಾಯ ಹೊಂದಿದ್ದರೂ ಅದನ್ನು ತಿಳಿದು ಕಾಯ ಸಹಜನಾಗುತ್ತಿಲ್ಲ.

ಅರಿದರಿದು ಅರಿವು ತಾನೆಂದು ತಿಳಿಯದೆ ತಾನು ನೀನಪ್ಪನೈ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಸುಂದರವಾದ ಸೂತ್ರವನ್ನು ಕರುಣಿಸಿದ್ದಾರೆ. ಅವರ ಕರುಣೆ ಅಪಾರ!

**383**

**ಕಂಜಕರ್ಣಿಕೆ ನಿನ್ನ ರಂಜನೆಯ ಪರಿ ಹೊಸತು,**
**ಭಂಜಿಸುತ್ತದೆ ಲೋಕವೀರೇಳನು**
**ಕಂಜನಾಳದ ಒಳಗೆ ಕುಂಜರನ ಗಮನದಲಿ**
**ರಂಜಿಸುತ್ತದೆ ಸ್ಥೂಲ ಸೂಕ್ಷ್ಮದಲ್ಲಿ.**
**ಆಯಂಜನಾನಾಯೆಂಬ ಅಕ್ಷರದ ಹತ್ತಾರ**
**ರಂಜಿಸಲ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಧ್ಯಾತ್ಮ ಕ್ಷೇತ್ರದಲ್ಲಿ ಇಡೀ ವಿಶ್ವಕ್ಕೆ ಭಾರತ 'ಗುರು' ಎಂದು ಕರೆಯಿಸಿಕೊಂಡಿದೆ. ಪರಿಪರಿಯ ಶಬ್ದ ಬಳಸಿ ಇಡೀ ವಿಶ್ವವನ್ನು ಚಕಿತಗೊಳಿಸಿದೆ.

ದೇಹ ಇರುವುದು ಒಂದೇ ಎಂದು ವಿಶ್ವ ಹೇಳಿದರೆ; ಭಾರತ ಅದನ್ನು ಅಲ್ಲಗಳೆದು ಮೂರು ಎಂದು ವಾದಿಸುತ್ತಾ ಇಡೀ ವಿಶ್ವವನ್ನೇ ಚಕಿತಗೊಳಿಸಿ ಹೌದು ಎನ್ನುವಂತೆ ಮಾಡುತ್ತದೆ. ಇಡೀ ವಿಶ್ವ ದೇಹ ಒಂದಲ್ಲ ಮೂರು ಎಂದು ವಾದಿಸಿದರೆ; ಅದು ಸರಿ ಅಲ್ಲ; ಇರುವುದು ಒಂದೇ ದೇಹ ಎಂದು ಖಚಿತವಾಗಿ ನಂಬುವಂತೆ ಭಾರತದ ಜ್ಞಾನ ವಿಜ್ಞಾನಿಗಳು ಹೇಳುತ್ತಾರೆ.

ವಿಶ್ವ ಭೌತಿಕ ವಿಜ್ಞಾನದಲ್ಲಿ ಮುಂದುವರೆದಿದ್ದರೆ; ಬಾರತ ಜ್ಞಾನದಲ್ಲಿ ಇಡೀ ವಿಶ್ವಕ್ಕೆ 'ಗುರು' ಎಂದು ಕರೆಯಿಸಿಕೊಂಡಿದೆ. ಏಕೆಂದರೆ ಭಾರತದಲ್ಲಿರುವ ತನುಗಳೊಂದೆ 'ಗುರು' ತನುಗಳಲ್ಲ; ಇಡೀ ವಿಶ್ವದಲ್ಲಿ ಇರುವ ಏಳುನೂರಾ ಮೂವತ್ತು ಕೋಟಿ ತನುಗಳೆಲ್ಲ 'ಗುರು' ತನುಗಳೇ ಆಗಿವೆ ಎಂದು ಇಡೀ ವಿಶ್ವವನ್ನೇ ನಂಬುವಂತೆ ಭಾರತ ಪ್ರತಿಪಾದಿಸುತ್ತದೆ. ಹೌದೌದೆಂದು ಖಚಿತವಾಗಿ ನಂಬುವಂತೆ ವೈಜ್ಞಾನಿಕವಾಗಿ ಹೇಳುತ್ತದೆ.

ಬ್ರಹ್ಮ ವಿಷ್ಣು ಮಹೇಶ್ವರ ಎನ್ನುವ ದೇವರು ಹೊರಗಿಲ್ಲ. ದೇಹದಲ್ಲಿಯೇ ಸಂಗಮವಾಗಿದ್ದಾರೆ. ಬ್ರಹ್ಮನ ರಾಣಿ, ಮಹೇಶ್ವರನ ರಾಣಿ, ವಿಷ್ಣುವಿನ ರಾಣಿ ಅವರು ಕೂಡಾ ಹೊರಗಿಲ್ಲ. ದೇಹದಲ್ಲಿಯೇ ಸಂಗಮವಾಗಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಬ್ರಹ್ಮನ ರಾಣಿಯೇ ನಿನ್ನ ರಂಜನೆಯ ಪರಿಯೇ ಹೊಸತು. ಸ್ಥೂಲ ಸೂಕ್ಷ್ಮದಲ್ಲಿ ನೀ ಹುಟ್ಟಿದೆ. ಅಲ್ಲಿ ಹದಿನಾಲ್ಕು ಲೋಕಗಳನ್ನು ಕಟ್ಟಿದವಳು ಕೂಡಾ ನೀನೇ ಆಗಿರುವೆ. ನಿನ್ನ ಶಕ್ತಿ ಮತ್ತು ಯುಕ್ತಿಯಿಂದ ವಿಷ್ಣುವಿನ ಹೊಕ್ಕಳದ ನಾಳದ ಮೂಲಕ ನೀನು ಜನಿಸಿ, ಬ್ರಹ್ಮ ಕಮಲದಲ್ಲಿ ನೀನು ನಿನ್ನ ಅರಸನಾದ ಬ್ರಹ್ಮನೊಂದಿಗೆ ಪವಡಿಸಿದೆ.

ಬ್ರಹ್ಮನ ರಾಣಿಯೇ ನೀ ಕಟ್ಟಿದ ಹದಿನಾಲ್ಕು ಅಜ್ಞಾನದ ಲೋಕಗಳನ್ನು ನೀನೇ ಮುರಿದು ಹಾಕಿದೆ. ರಂಜನೆಯಿಂದ ಮೆರೆಯುವ ಸ್ಥೂಲ ಸೂಕ್ಷ್ಮಗಳೆರಡನ್ನು ನಿರಂಜನಗೊಳಿಸಿದ ಬ್ರಹ್ಮನ ರಾಣಿ ನೀನು.

ಸ್ಥೂಲ ಸೂಕ್ಷ್ಮದಲ್ಲಿ ನಿಂತು ಅಂಜನ ಹಾಕಿ ನಿರಂಜನನು ಒಲಿಸಿಕೊಂಡ ಅಕ್ಷರೋತ್ತಮಳು ನೀನು. ರಂಜನೆಗಳು ಎರಡುಂಟು. ಒಂದು ಭೌತಿಕ ರಂಜನೆ; ಮತ್ತೊಂದು ಆಂತರಿಕ ರಂಜನೆ. ಮನವೆಂಬ ನೀನು ಭೌತಿಕ ರಂಜನೆಯಲ್ಲಿ ಮಗ್ನಳಾಗಿದ್ದಾಗ ಬ್ರಹ್ಮನನ್ನು, ವಿಷ್ಣುವನ್ನು, ಮಹೇಶ್ವರನನ್ನು ನಿನ್ನ ತಾಳಕ್ಕೆ ತಕ್ಕಂತೆ ಕುಣಿಸಿದೆ.

ಅಂತರಾಳಕ್ಕೆ ಪ್ರಯಾಣ ಬೆಳೆಸಿ ಬ್ರಹ್ಮನ ಮಡದಿಯಾಗಿ ಸರಸ್ವತಿ ಎಂಬ ಹೆಸರನ್ನು ಪಡೆದೆ. ಮಹೇಶ್ವರ ಮಡದಿಯಾಗಿ ಈಶ್ವರಿ ಎಂಬ ಹೆಸರನ್ನು ಪಡೆದೆ. ವಿಷ್ಣುವಿನ ಮಡದಿಯಾಗಿ ಲಕ್ಷ್ಮಿ ಎಂಬ ಹೆಸರನ್ನು ಪಡೆದೆ. ಆಗ ನಿನ್ನ ಸಕಲ ಭೌತಿಕ ರಂಜನೆಗಳೆಲ್ಲವನ್ನು ನೀನೇ ಮುರಿದು ಹಾಕಿ ನಿರಂಜನಳಾದೆ. ನೀನು ಬರೆದ ಅಕ್ಷರಗಳೆಲ್ಲ ನಿನ್ನಿಂದಲೇ ರಂಜಿಸಲ್ಪಟ್ಟು ; ನೀನು ಹಾಕಿದ ಅಂಜನಕ್ಕೆ ಒಳಗಾಗಿ ನಿನ್ನಿಂದಲೇ ನಿರಂಜನಗೊಂಡವು. ಆಗ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ರಂಜಿಸಿದವು.

**384**

**ಕಂಜದೊಳಗಣ ಹಳದಿ ರಂಜಿಸುವ ಭೇದಕ್ಕೆ**

**ಅಂಜುತೈದಾರೆ ಸಕಲ ಯೋಗಿಗಳೆಲ್ಲ ಧಾತುಗೆಟ್ಟು**
**ಹಳದಿರಿತಿ ಧಾತುವ ನುಂಗಿದಾತ ಶಿವಯೋಗಿ.**
**ಈ ಯೋಗಿಯನಿತೀ ನಿಜ ನಿಷ್ಪತ್ತಿಯ**
**ಓತೊಮ್ಮೆ ಅರಿದಡೆ, ಆತನೆ ಶಿವಯೋಗಿ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮನಿಲ್ಲದ ತನುವೇ ಇಲ್ಲ. ಬ್ರಹ್ಮನನ್ನು ಮರೆಮಾಚಿ ಆ ಬ್ರಹ್ಮನಿಂದಲೇ ಹುಟ್ಟಿದ ಮನವೆಂಬ ಭ್ರಮೆ ಇಲ್ಲದ ತನು ಕೂಡಾ ಈ ಪ್ರಪಂಚದಲ್ಲಿ ಇಲ್ಲವೇ ಇಲ್ಲ.

ಭ್ರಮೆಯನ್ನು ಸೃಷ್ಟಿ ಮಾಡಿದ ಬ್ರಹ್ಮನತ್ತ ಹೋಗಬೇಕೆಂಬ ಒಲವು ಭ್ರಮೆಗೆ ಇಲ್ಲ. ಭ್ರಮೆಯೆಂಬ ಮನಕ್ಕೆ ತಾನೇ ಸೃಷ್ಟಿ ಮಾಡಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗಗಳ ಮೇಲೆ ಮೋಹವಿದೆ. ಸಪ್ತವ್ಯಸನಗಳ ಮೇಲೆ ಮೋಹವಿದೆ. ಅಷ್ಟ ಮದಗಳ ಮೇಲೆ ಮೋಹವಿದೆ.

ಮನವೆಂಬ ಭ್ರಮೆಗೆ ತನ್ನದೇ ಆದ ಕಿವಿಗಳುಂಟು. ತನ್ನದೇ ಆದ ಕಣ್ಣುಗಳುಂಟು. ತನ್ನದೇ ಆದ ಚರ್ಮ ಮೂಗು ನಾಲಿಗೆ ಉಂಟು. ಹಾಗೆಯೇ ತನ್ನದೇ ಆದ ಭಾವ ಕೂಡಾ ಉಂಟು. ತನ್ನದೇ ಆದ ಕರುಣೆ ಕೂಡಾ ಉಂಟು. ದೇಹದಲ್ಲಿ ಬ್ರಹ್ಮ ತಾನು ಏನೇನು ಸೃಷ್ಟಿ ಮಾಡಿರುವನೋ ಹಾಗೆಯೇ ಬ್ರಹ್ಮನಿಂದ ಸೃಷ್ಟಿಯಾದ ಮನವೆಂಬ ಭ್ರಮೆ ಕೂಡಾ ಬ್ರಹ್ಮನ ಸೃಷ್ಟಿಗೆ ಪ್ರತಿಸೃಷ್ಟಿಯನ್ನು ದೇಹದಲ್ಲಿಯೇ ಮಾಡಿದೆ.

ಒಂದು ಕಣ್ಣಿನಲ್ಲಿ ಅರಿವು ಮತ್ತೊಂದು ಕಣ್ಣಿನಲ್ಲಿ ಮರೆವು ಸೃಷ್ಟಿಯಾಗಿದೆ. ಇದು ಮನವೆಂಬ ಭ್ರಮೆಯ ಸೃಷ್ಟಿ. ಒಂದು ಕಿವಿ ಅರಿವಿನದು, ಮತ್ತೊಂದು ಕಿವಿ ಮರೆವಿನದು. ಒಂದು ಚರ್ಮ ಅರಿವಿನದಾದರೆ, ಮತ್ತೊಂದು ಚರ್ಮ ಮರೆವಿನದು. ಹೀಗೆ ಮೂಗು ನಾಲಿಗೆಯಲ್ಲಿ ಕೂಡಾ ಭ್ರಮೆ ನಾಟ್ಯವಾಡುತ್ತಲಿದೆ.

ಕಂಜದೊಳಗಣ ಹಳದಿ ರಂಜಿಸುವ ಭೇದಕ್ಕೆ ಅಂಜುತೈದಾರೆ ಸಕಲ ಯೋಗಿಗಳೆಲ್ಲ ಧಾತುಗೆಟ್ಟು:

ಕಣ್ಣಿಗೆ ಸತ್ಯ ಕಾಣುತ್ತದೆ. ಕಾಮಾಲೆಯ ಜಡ್ಡು ಹತ್ತಿದ ಕಣ್ಣಿಗೆ ನೋಡಿದ್ದೆಲ್ಲ ಹಳದಿಯಾಗಿಯೇ ಕಾಣುತ್ತದೆ. ಹೀಗಾಗಿ ನೋಡುವ ಸತ್ಯ ಮರೆಯಾಗಿ ಸತ್ಯವಸ್ತುವೇ ಮತ್ತೊಂದು ವಸ್ತುವಾಗಿ ಕಾಣುತ್ತದೆ. ವಸ್ತುವಿನಲ್ಲಿರುವ ಸತ್ಯ ನೋಡಿದರೆ ವಸ್ತು ತನಗೆ ಬೇಡ. ಹೀಗಾಗಿ ವಸ್ತುವನ್ನು ''ಕೂಡಲಿಲ್ಲ ; ಅಗಲಲಿಲ್ಲ ; ಕೂಡದ ಅಗಲದ ಕೂಟದ ಸುಖ'' ದೇಹದಲ್ಲಿಯೇ ಸಿದ್ಧವಾಗುತ್ತದೆ.

ಉದಾಹರಣೆಗೆ ಮಣ್ಣು ಕಲ್ಲುಗಳನ್ನು ತುಳಿಯುತ್ತಾ ಹೋಗುತ್ತೇವೆ. ತುಳಿದ ಮಣ್ಣು ಕಲ್ಲಿನಲ್ಲಿ ದೇವರನ್ನು ಮಾಡಿದರೆ ಕಣ್ಣಿಗೆ ಕಾಮಾಲೆಯ ಜಡ್ಡು ಬರುತ್ತದೆ. ಇಡೀ ದೇಹದಲ್ಲಿ ಭಕ್ತಿಯ ಭ್ರಮಾರಸವನ್ನು ಸೃಷ್ಟಿ ಮಾಡಿ ಕೈಮುಗಿದು ಬಾಗುತ್ತದೆ. ಆ ದೇವರಿಗೆ ವಸ್ತ್ರಾಭರಣ ಉಡಿಸಿ, ಆಲಯ ಕಟ್ಟಿ, ಹೊನ್ನ ಕಳಶವನ್ನು ಇಟ್ಟು ಉರುಳು ಸೇವೆಯನ್ನು ಮಾಡುತ್ತದೆ.

ಕಾಮಾಲೆಯ ಜಡ್ಡು ಹತ್ತಿದ ಕಣ್ಣು ಕಲ್ಲಲ್ಲಿ ದೇವರನ್ನು ನೋಡಿದರೆ, ನಿಜ ಕಣ್ಣು ಕಲ್ಲು ನೋಡುತ್ತದೆ. ಕಲ್ಲು ನೋಡುವ ಕಣ್ಣು ಕಣ್ಣಲ್ಲಿಯೇ ಇದೆ; ದೇವರನ್ನು ನೋಡುವ ಕಣ್ಣು ಕಣ್ಣಲ್ಲಿಯೇ ಇದೆ.

ಒಂದು ಹಳದಿ ಕಣ್ಣು; ಭ್ರಮಾ ಕಣ್ಣು. ಮತ್ತೊಂದು ಬ್ರಹ್ಮನ ಕಣ್ಣು, ನಿಜಕಣ್ಣು. ಬ್ರಹ್ಮನಿಂದಲೇ, ಬ್ರಹ್ಮನನ್ನು ನೋಡಲು ಸೃಷ್ಟಿಯಾದ ಕಣ್ಣು ಬ್ರಹ್ಮನ ಕಣ್ಣನ್ನೇ ರಂಜಿಸುತ್ತದೆ. ಹೀಗೆ ರಂಜಿಸುವ ಭೇದವನ್ನು ಭೇದಿಸಲು ಯೋಗಿಗಳಿಗೆ ಕೂಡಾ ಸಾಧ್ಯವಾಗದೆ ಅಂಜುತ್ತಿದ್ದಾರೆ.

ಹಳದಿಯ ರೋಗ ಕಣ್ಣಿಗೊಂದೇ ತಾಕಿಲ್ಲ. ಕಿವಿ ಮೂಗು ನಾಲಿಗೆ ಚರ್ಮಕ್ಕೆ ಕೂಡಾ ತಾಕಿದೆ. ಹೀಗಾಗಿ ಇಡೀ ದೇಹವೇ ಹಳದಿ ರೋಗದಿಂದ ನರಳುತ್ತಲಿದೆ.

ಹಳಿದಿರಿತಿ ಧಾತುವ ನುಂಗಿದಾತ ಶಿವಯೋಗಿ :

ಸಿದ್ಧರಾಮ ಶಿವಯೋಗಿಗಳ ಸೂತ್ರ ಅದ್ಭುತ. ಪಂಚ ಜ್ಞಾನೇಂದ್ರಿಯಗಳಿಗೆ ಅಂಟಿಕೊಂಡ ಭ್ರಮಾ ರೂಪದ ಕಾಮಾಲೆ ಕಾಯಿಲೆಯನ್ನು ಪಂಚ ಜ್ಞಾನೇಂದ್ರಿಯಗಳಲ್ಲಿಯೇ ಸಂಗಮವಾದ ಬ್ರಹ್ಮ ಮಾತ್ರ ನುಂಗಲು ಸಾಧ್ಯ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಬ್ರಹ್ಮ (ಅರಿವು) ಸಂಗಮವಾಗಿದ್ದಾನೆ; ಮನವೆಂಬ ಭ್ರಮೆ ಆವರಿಸಿದೆ. ಭ್ರಮಾ ಕಣ್ಣಿಗೆ ದೇವರು ಕಂಡರೆ ಬ್ರಹ್ಮ ಕಣ್ಣಿಗೆ ಕಲ್ಲು ಕಾಣುತ್ತದೆ. ಭ್ರಮಾ ಕಣ್ಣು ಬ್ರಹ್ಮ ಕಣ್ಣಿಗೆ ಪಯಣಿಸಿ ಬ್ರಹ್ಮ ಕಣ್ಣಿನ ಮೂಲಕ ನೋಡಿದರೆ ಭ್ರಮಾ ಕಣ್ಣನ್ನು ಬ್ರಹ್ಮ ಕಣ್ಣು ನುಂಗುತ್ತದೆ. ಮತ್ತೆ ಅದು ಎಂದೂ ಹೊರಗೆ ಬರುವುದೇ ಇಲ್ಲ.

ಈ ಯೋಗಿಯ ನಿಜ ನಿಷ್ಪತ್ತಿಯನ್ನು ಒಮ್ಮೆ ಅರಿದಡೆ ಸಾಕು ಆತನೇ ಶಿವಯೋಗಿ; ಆತನೇ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

**385**

**ಕಂಠ ಪ್ರಮಾಣ ಜಲವ ಹೊಕ್ಕು**
**ಪದುಮಾಸನವ ಕೊಂಡು ಇದ್ದೆನವ್ವಾ.**
**ಮುಖ ಮುಗಿದು ಆತನ ಧ್ಯಾನಿಸುತ್ತಿರ್ದೆನವ್ವಾ.**
**ಆತ ಬಂದು ಮುಟ್ಟಲೊಡನೆ ಮುಖವರಳ್ದು ಹಿಡಿವೆನು.**
**ಕಪಿಲಸಿದ್ಧ ಮಲ್ಲಿಕಾರ್ಜುನನ.**

ತನುವಿನಲ್ಲಿ ಜ್ಞಾನ ಸಂಗಮವಾಗಿದೆ. ಸಂಗಮವಾದ ಆ ಜ್ಞಾನಕ್ಕೆ ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಹೆಸರಿಟ್ಟು ಕರೆದರು. ತನುವನ್ನು ಮನ ಆವರಿಸಿದೆ. ಆ ಮನಕ್ಕೆ ಸಿದ್ಧರಾಮ ಶಿವಯೋಗಿ ಎಂದು ಆತನ ತಂದೆ ತಾಯಿಗಳು ನಾಮಕರಣ ಮಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗೆ ಕಪಿಲಸಿದ್ಧ ಮಲ್ಲಿಕಾರ್ಜುನ ಯಾರೆಂದು ಗೊತ್ತಾಗಿದೆ. ಆತ ಎಲ್ಲಿದ್ದಾನೆ ಎಂಬ ಮಾಹಿತಿ ಕೂಡಾ ಆತನಿಗೆ ಲಭ್ಯವಾಗಿದೆ. ಹೀಗಿದ್ದರೂ ಸಿದ್ಧರಾಮ ಶಿವಯೋಗಿ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳಲು ಕಂಠಮಟ್ಟದ ಜಲದಲ್ಲಿ ಮುಳುಗಿ ಪದ್ಮಾಸನವನ್ನು ಹಾಕಿಕೊಂಡು ಮುಖದಿಂದಲೇ ಮಲ್ಲಿಕಾರ್ಜುನನಿಗೆ ಸಂಪೂರ್ಣ ಶರಣು ಹೋಗಿ ನೀನು ಬಂದು ನನ್ನನ್ನು ಅಪ್ಪಿಕೊಳ್ಳುವವರೆಗೆ ಮೇಲೇಳುವುದಿಲ್ಲವೆಂದು ಹಟ ತೊಟ್ಟು ಜಲದಲ್ಲಿ ಕುಳಿತಿದ್ದಾನೆ.

ಸಿದ್ಧಾರ್ಥನಿಗೆ ಬುದ್ಧನ ಪರಿಚಯವಾಗಿತ್ತು. ಆದರೂ ಆ ಬುದ್ಧನೊಂದಿಗೆ ಸಂಪೂರ್ಣ ಶರಣಾಗತನಾಗಲು ಸಿದ್ಧಾರ್ಥನಿಗೆ ಎಂಟುವರ್ಷಗಳಷ್ಟು ಕಾಲಾವಧಿ ಬೇಕಾಯಿತು.

ಹಾಗೆ ನೋಡಿದರೆ ಸಿದ್ಧಾರ್ಥ ಬುದ್ಧ ಇವರಿಬ್ಬರೂ ಬೇರೆ ಬೇರೆ ಅಲ್ಲ. ವರ್ಧಮಾನ ಮಹಾವೀರ ಇವರಿಬ್ಬರೂ ಕೂಡಾ ಬೇರೆ ಬೇರೆ ಅಲ್ಲ. ಆದರೂ ಒಬ್ಬರು ಮತ್ತೊಬ್ಬರೊಂದಿಗೆ

ಬೆರೆಯಲು ವರ್ಷಗಳೇ ಗತಿಸಿದವು. ವರ್ಧಮಾನ ತನ್ನ ಬಟ್ಟೆಗಳ ಪರಿವೆಯೇ ತನಗಿಲ್ಲದಂತೆ ಗಿರಿಕಂದರಗಳ ಮುಳ್ಳು ಗೊರಚೆಗಳನ್ನು ತರಚಿಕೊಳ್ಳುತ್ತ ಹಾಗೆಯೇ ಮುಂದೆ ಮುಂದೆ ಸಾಗಿದ. ತನು ಹೊದ್ದುಕೊಂಡ ಬಟ್ಟೆಗಳು ಮುಳ್ಳುಕಂಟಿಗಳಿಗೆ ಸಿಕ್ಕು ಕಿತ್ತು ಹೋದವು. ವರ್ಧಮಾನನಿಗೆ ಎಚ್ಚರವಾಗಲೇ ಇಲ್ಲ. ಮಹಾವೀರ ಸಿಕ್ಕಾನೋ ಇಲ್ಲವೊ ಎಂಬ ಚಿಂತೆಯಲ್ಲಿ ಸಂಪೂರ್ಣ ಮುಳುಗಿ ಹೋಗಿದ್ದ. ಮಹಾವೀರ ವರ್ಧಮಾನನಿಗೆ ದಕ್ಕಿದ. ವರ್ಧಮಾನ ಮತ್ತೆ ಬಟ್ಟೆ ಧರಿಸಲೇ ಇಲ್ಲ. ಆತನ ಸಂಗಾತಕ್ಕೆ ಮಹಾವೀರನಿದ್ದ. ಆತನಿಗೆ ಬಟ್ಟೆಯೇಯಿಲ್ಲ. ಇಬ್ಬರೂ ಉಟ್ಟ ಬಟ್ಟೆಯಲ್ಲೇ ಉಳಿದರು. ಬಟ್ಟೆಯ ಮೇಲೆ ಬಟ್ಟೆ ಧರಿಸಲು ಅವರಿಗೆ ಇಷ್ಟವಾಗಲೇ ಇಲ್ಲ. ಅಜ್ಞಾನದ ಬಟ್ಟೆಯನ್ನು ಎಸೆದು ಬತ್ತಲಾದರು; ಬಯಲಲ್ಲಿ ಬಯಲಾದರು.

ಸಿದ್ಧಾರ್ಥ ಬುದ್ಧನನ್ನು ಪ್ರಾಪ್ತಿಮಾಡಿಕೊಳ್ಳಲು ಆಹಾರಗಳನ್ನೇ ತ್ಯಜಿಸಿದ. ಜಲ ಪಾನೀಯಗಳನ್ನು ಬಿಟ್ಟ. ಬುದ್ಧನಿಗಾಗಿ ಹಗಲಿರುಳೆನ್ನದೆ ಪರಿತಪಿಸಿದ. ಆತ ಯಾರು ಎಂದು ಗೊತ್ತಾದ ಮೇಲೂ ಈ ಅವಸ್ಥೆ ಅವರಿಗೆ ಬಂದಿತ್ತು. ಕೃಷಿ ಇಲ್ಲದೆ ಯಾವ ವಸ್ತುವೂ ತನ್ನದಾಗುವುದಿಲ್ಲ. ಬುದ್ಧತ್ವ, ಶರಣತ್ವ ಪ್ರಾಪ್ತಿ ಹಾಗೆಯೇ ಲಭಿಸುವುದಿಲ್ಲ.

ಸಿದ್ಧಾರ್ಥ, ವರ್ಧಮಾನ, ಸಿದ್ಧರಾಮ ಶಿವಯೋಗಿಗಳು ರಾಜನಂತೆ ಬದುಕಿದವರು. ಅವರು ಬದುಕುವುದಕ್ಕಾಗಿ ಹೆಣಗಬೇಕಿರಲಿಲ್ಲ. ಎಳ್ಳಷ್ಟೂ ಕಷ್ಟ ಪಡಬೇಕಿರಲಿಲ್ಲ. ಆದರೂ ಜ್ಞಾನ ಪ್ರಾಪ್ತಿಗಾಗಿ ಹಗಲಿರುಳೆನ್ನದೆ ಸ್ವಯಂ ಕೃಷಿ ಮಾಡಿದರು.

ಲೋಕ ಅನ್ನಕ್ಕಾಗಿ ಐಷಾರಾಮಿಗಾಗಿ ಆಯುಷ್ಯ ಕಳೆದರೆ, ಜ್ಞಾನಿಗಳು ಜ್ಞಾನ ಪ್ರಾಪ್ತಿಗಾಗಿ ಹೆಣಗಿದರು. ತಮ್ಮ ಜ್ಞಾನವನ್ನು ತಾವೇ ಒಲಿಸಿಕೊಂಡು ಆ ಜ್ಞಾನಕ್ಕೆ ದಾಸಾನುದಾಸರಾದರು. ಆ ಜ್ಞಾನಕ್ಕೆ ಶರಣು ಹೋದರು. ಆ ಜ್ಞಾನವನ್ನೇ ಸಿದ್ಧಾರ್ಥ ಬುದ್ಧ ಎಂದು ಕರೆದ. ವರ್ಧಮಾನ ಮಹಾವೀರ ಎಂದು ಕರೆದ. ಸಿದ್ಧರಾಮ ಶಿವಯೋಗಿ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಕರೆದ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಜ್ಞಾನದೊಂದಿಗೆ ಸಂಗಮವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು. ಇವರಿಬ್ಬರನ್ನು ಹೊತ್ತ ಕಾಯವೇ ಕೈಲಾಸವೆಂದು ಕರೆಯಿಸಿಕೊಂಡಿತು. ಇದು ನಿಜವಾದ ಕಾಯಕ. ಈ ಕಾಯಕದಲ್ಲಿ ತೊಡಗಿದ ಕಾಯವೇ ಕೈಲಾಸ!

**386**

**ಕಂಡಲ್ಲಿ ಕರೆಯೆ ಮಾಯ, ನಿಂದಲ್ಲಿ ನಿರಾಮಯ.**
**ಇವಗೆ ಕೂರ್ತು ವಿಕಳಾವಸ್ಥೆಗೊಂಡೆನವ್ವಾ.**
**ಮತ್ತೆ ಮುಂದೆ ನಿಂದವರ ಸಾರೆಂಬೆನು, ಹಿಂದುಗಳೆವೆನು.**
**ಮುಂದಕ್ಕೆ ಸಾರಿದವರ ನೋಡುತ್ತಿದ್ದೆನವ್ವಾ.**
**ಕಂಡವರ ಸಾರೆಂಬೆ ; ನಿಂದ ಬಯಲ ನೆರೆವೆ.**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯನವ್ವಾ.**

ತನ್ನ ತಾನು ನೋಡಿದಲ್ಲಿ ನಿರಾಮಯ. ಹೊರಗೆ ನೋಡಿದಲ್ಲಿ ಮಾಯ. ಹಿರಿಯರಾದವರು ನಿನ್ನ ನೀ ತಿಳಿ, ನಿನ್ನ ನೀನು ನೋಡಿಕೋ ಎಂದು ಮತ್ತೆ ಮತ್ತೆ

ಹೇಳುವುದುಂಟು. ಹಾಗೆ ಹೇಳುವುದು ಹಿರಿಯರಿಗೆ ಸಂಪ್ರದಾಯವಾಗಿದೆ. ಶಾಸ್ತ್ರಗಳಿಗೆ ಕೂಡಾ ಸಂಪ್ರದಾಯವಾಗಿದೆ. ಹೇಳುವ ಹಿರಿಯರಿಗೂ ಕೇಳುವ ಕಿರಿಯರಿಗೂ ತನ್ನನ್ನು ತಾನು ನೋಡಿಕೊಳ್ಳಲು ಬರುವುದಿಲ್ಲ. ಹಾಗೆ ತನ್ನನ್ನು ತಾನು ನೋಡಿಕೊಳ್ಳುವುದನ್ನು ನೋಡಿಕೊಂಡು ಗೆದ್ದವರಿಂದ ಕಲಿಯಬೇಕು. ತನ್ನನ್ನು ತಾನು ಹೇಗೆ ನೋಡಿಕೊಳ್ಳಬೇಕೆಂಬುದನ್ನು ಮುಟ್ಟಿಕೊಂಡು ಮುಟ್ಟಿ ಕೈಹಿಡಿದು ತೋರಿಸುವ ಗುರುಗಳು ಬೇರೆಯೇ ಇರುತ್ತಾರೆ.

ಸದ್ಗುರು ವಿದ್ಯಾನಂದ ಶರಣರನ್ನು ಭೇಟಿಯಾದಾಗ, ಅವರು ಮುಟ್ಟಿಕೊಂಡು, ನನ್ನನ್ನು ಮುಟ್ಟಿ, ನನಗೆ ತಮ್ಮನ್ನು ಮುಟ್ಟಲು ಹೇಳಿ, ನೋಡಿದೆಯಾ! ಏನಾದರೂ ವ್ಯತ್ಯಾಸವಿದೆಯೇ? ಸ್ವರೂಪ ಒಂದೇ ಆಗಿದೆ. ಎಂದು ಹೇಳಿದರು. ನನಗೆ ಆಗ ಏನೂ ತಿಳಿಯಲಿಲ್ಲ. ಸ್ವಲ್ಪ ದಿನಗಳೇ ಬೇಕಾದವು.

ಓದಿ ನನ್ನನ್ನು ನಾನು ತಿಳಿಯುವುದಕ್ಕಿಂತ ಏನೂ ಓದದೆ ನನ್ನನ್ನು ನಾನು ತಿಳಿಯುವುದು ಸುಲಭದ ದಾರಿ.

ತಾನು ಇತರರನ್ನು ನೋಡಿದಾಗ ತನ್ನಲ್ಲಿ ಉಂಟಾಗುವ ಹಾದರವನ್ನು ತಾನೇ ಗಮನಿಸಬೇಕು. ನುಡಿಯುವಾಗ ಆದರದ ಮಾತುಗಳು; ಇದನ್ನು ಕೂಡಾ ತಾನೇ ಗಮನಿಸಬೇಕು. ಇತರ ದೇಹವನ್ನು ನೋಡುವಾಗ ಹಾದರ, ಆ ದೇಹದೊಂದಿಗೆ ನುಡಿಯುವಾಗ ಆದರ! ಅದರಂತೆ ಇರುವ ತನ್ನ ದೇಹವನ್ನು ನೋಡಿಕೊಂಡಾಗ ತನ್ನಲ್ಲಿ ಯಾವುದೇ ತರಹದ ಉದ್ರೇಕ ಉಂಟಾಗುವುದಿಲ್ಲ. ಈ ಮೂರನ್ನು ಗಮನಿಸಿ ತನ್ನಲ್ಲಿ ತಾನೇ ಪರೀಕ್ಷಿಸಿಕೊಳ್ಳಬೇಕು.

ಆಗ ತನಗೆ ತಾನೇ ಅರಿವಾಗುವುದು. ತಾನು ಬಹುರೂಪೀ ಎಂದು. ತಾನು ಅತ್ಯಂತ ನಿಕೃಷ್ಟ ಮನುಷ್ಯ ಎಂದು. ತನ್ನ ಒಳಮುಖ ಹಾದರಕ್ಕೆ ಒಳಗಾಗಿದ್ದರೆ ತನ್ನ ಹೊರಮುಖ ಆದರದ ನಾಟಕೀಯಕ್ಕೆ ಒಳಗಾಗಿದೆ, ಹೊರಮುಖ ಕೀರ್ತಿಗಾಗಿ ಹವಣಿಸುತ್ತದೆ. ಒಳಮುಖದಲ್ಲಿ ಹಾದರ ಮತ್ಸರ ವೈರತ್ವ, ದ್ವೇಷ ಅಸೂಯೆಗಳೇ ತುಂಬಿವೆ. ಇದು ಹೀಗೇಕೆಂದು ಚಿಂತನೆಗೆ ಒಳಗಾದರೆ, ಪರಿಹಾರಕ್ಕಾಗಿ ಗುರುದೇವ ಸಿಕ್ಕುತ್ತಾನೆ. ತನ್ನ ಹೊರಮುಖವನ್ನು ಹಿಡಿದು ಅಂತರಾಳದ ತನ್ನ ಅರಿವಿನ ಮುಖದಲ್ಲಿ ಲೀನಗೊಳಿಸುತ್ತಾನೆ. ಆಗ ಹೊರಗೆ ನೋಡಿದಲ್ಲಿ ತನ್ನನ್ನು ಹಾದರಕ್ಕೆ ಕೈ ಮಾಡಿ ಕರೆಯುವ ತನ್ನ ಮಾಯೆ ತನ್ನ ಅರಿವಿನಲ್ಲಿಯೇ ಬತ್ತಿ ಹೋಗುತ್ತದೆ. ವಿಕಳಾವಸ್ಥೆಗೊಳ್ಳದೆ, ನಿಂದಲ್ಲಿಯೇ ನಿರಾಮಯನಾಗುತ್ತಾನೆ.

ಸಕಲ ತನುಗಳನ್ನು ತನ್ನಂತೆ ಅರಿವಿನಿಂದ ಕಾಣುತ್ತಾನೆ. ಚರ್ಮ ಮತ್ತು ಚರ್ಮದೊಳಗೆ ಭರಿತವಾದ ಪದಾರ್ಥಗಳೆಲ್ಲ ಒಂದೇ ಆಗಿವೆ. ಹೆಣ್ಣು ಗಂಡೆಂಬ ತನ್ನ ಅಜ್ಞಾನ ತನ್ನ ಅರಿವಿನಲ್ಲಿಯೇ ಸಂಗಮವಾಗಿ ಸಕಲರನ್ನು ಅರಿವಿನಿಂದ ನೋಡುತ್ತಾನೆ.

ಸಕಲ ತನುಗಳಲ್ಲಿ ಒಡಮೂಡುವ ಅಜ್ಞಾನದ ಚೇಷ್ಟೆ ಅದು ತನುವಿನದಲ್ಲ ಎಂದು ತನ್ನ ಅರಿವಿಗೆ ಬರುತ್ತದೆ. ಚೇಷ್ಟೆಗೆ ಗುರಿಯಾದ ತನುವನ್ನು ನಿಂದಿಸುವುದಿಲ್ಲ. ಅದಕ್ಕೆ ಬಾಧೆಯನ್ನುಂಟು ಮಾಡುವುದಿಲ್ಲ. ಸಾಧ್ಯವಾದರೆ ತನುವಿನ ಚೇಷ್ಟೆಗೆ ಕಾರಣವಾದ ಮನದ ಮೈದಡುವುತ್ತಾನೆ. ಮನಕ್ಕೆ ತನ್ನ ಚೇಷ್ಟೆಯ ಮಾಹಿತಿಯನ್ನು ನೀಡಿ, ತನ್ನದೇ ಆದ ಅರಿವಿನ ಸಂಗ ಮಾಡಲು ಹೇಳುತ್ತಾನೆ.

ಅರಿವಿನ ಚಮತ್ಕಾರವನ್ನು ಬಲ್ಲ ನಿರಾಮಯ ಗುರುದೇವನಿಗೆ ಮಾತ್ರ ಈ ಕಲೆ ಬರುತ್ತದೆಯೇ ಹೊರತು ಸಕಲರಿಗೂ ಇದು ಸಾಧ್ಯವಾಗುವುದಿಲ್ಲ. ಮನ ಬಯಕೆ ಮಾಡಿದರೆ ಸಕಲರಿಗೂ ಈ ಕಲೆ ಬಂದೇ ಬರುತ್ತದೆ. ಏಕೆಂದರೆ ಅರಿವು ಇಲ್ಲದ ತನುಗಳು ಭೂಮಿಯ

ಮೇಲೆ ಇಲ್ಲವೇ ಇಲ್ಲ. ಆದರೆ ಮನ ಅರಿವಿನೊಂದಿಗೆ ಸಂಗಮಿಸುವ ಕಲೆಯನ್ನು ಕಲಿಯುತ್ತಿಲ್ಲ. ಅದೊಂದನ್ನು ಬಿಟ್ಟು ಸಕಲ ವಿದ್ಯೆಗಳಲ್ಲಿ ಮನ ಪಾರಂಗತನಾಗುತ್ತದೆ.

ಅರಿವೊಂದನ್ನು ಬಿಟ್ಟು ಮನ ಎಷ್ಟು ವಿದ್ಯೆಗಳನ್ನು ಕಲಿತರೂ ಅದು ಮಂಗಕ್ಕೆ ಸಮಾನ. ಅರಿವೆಂಬ ಗುರುದೇವನಿಗೆ ಅಲ್ಲ !

**387**

**ಕಂಡು ಕಂಟಣಿಸಿ ಓಸರಿಸದಿಪ್ಪಳು ನೋಡಾ.**
**ಆಕೆಯಂತಿರಬೇಡವೆ ಹಿರಿಯರು?**
**ಆ ಮನ ವಿಚ್ಛಂದವಾಗದೊಂದೆಯಂದದಲಿಪ್ಪ**
**ನಿಮ್ಮದೊಂದು ಸಮತಾಗುಣ**
**ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನೆ ; ನೀನು ಸಾಮಾನ್ಯನಲ್ಲ. ಅಸಾಮಾನ್ಯ. ಸಾಕ್ಷಾತ್ ಭಗವಂತ. ಅಂಗವನ್ನು ಸೃಷ್ಟಿ ಮಾಡಿದೆ. ಆ ಅಂಗದಲ್ಲಿ ನೀನು ಸಂಗಮವಾಗಿ ನಿನ್ನ ಪರಿಚಯದ ಭಾಗ್ಯ ಅಂಗಕ್ಕೆ ಇಲ್ಲದಂತೆ ಮಾಡಿದೆ.

ಅಂಗದಲ್ಲಿ ಮನವನ್ನು ಸೃಷ್ಟಿ ಮಾಡಿದೆ. ಆ ಮನಕ್ಕೆ ನಿನ್ನನ್ನು ಕಂಡರೆ ಸಾಕು ಅಸಹ್ಯ ಪಡುವಂತೆ ಮಾಡಿದೆ. ನಿನ್ನೊಂದಿಗೆ ಬಾಳಿ ಬದುಕಿ ನಿನ್ನ ಅರ್ಧಾಂಗಿ ಎನ್ನಿಸಿಕೊಂಡು ಸತಿಯಾಗಬೇಕಾದ ಮನದಲ್ಲಿ ನಿನ್ನ ಸಮತಾಗುಣವನ್ನು ತುಂಬಲಿಲ್ಲ.

ಭಗವಂತನೇ ನೀನು ಸೃಷ್ಟಿ ಮಾಡಿದ ತನು ಮನವೆಂಬ ಇವರಿಬ್ಬರು ನಿನ್ನನ್ನು ಮರೆತು ಒಂದಾಗಿದ್ದಾರೆ. ನಿನ್ನಂತೆ ಇರುವ ಭಗವಂತನನ್ನು ಕಲ್ಲಲ್ಲಿ ಕಟ್ಟಿಗೆಯಲ್ಲಿ ಮಣ್ಣಲ್ಲಿ ಲೋಹದಲ್ಲಿ ಕೆತ್ತಿದ್ದಾರೆ. ಅವುಗಳಿಗೆ ಆಲಯಗಳನ್ನು ಕಟ್ಟಿಸಿ; ನಿನ್ನಂತೆ ಇರುವ ವಸ್ತುಗಳನ್ನು ನೀನೇ ಎಂದು ಆರಾಧಿಸುತ್ತಿದ್ದಾರೆ.

ಹಿರಿಯರು ಪುರಾತನರು ಹಾಗಲ್ಲ. ಅವರು ನಿನ್ನ ಸಂಗ ಮಾಡಿದವರು. ಹಗಲಿರುಳು ನಿನ್ನನ್ನೇ ಹಾಡಿ, ನಿನ್ನನ್ನೇ ಬೇಡಿ, ನಿನ್ನನ್ನೇ ಕಾಡಿದರು. ನಿನ್ನಲ್ಲಿಯೇ ಸಂಗಮವಾಗಿ ಸಂಗಮನಾಥನೇ ತಾವಾದವರು. ಮನವೆಂಬ ಮಾಯೆಯನ್ನು ಗೆದ್ದು ಘನಮನರಾದವರು. ನಿನ್ನನ್ನು ಹುಡುಕುತ್ತ ನಿನ್ನನ್ನು ಅರಸಿ ಬಂದವರಿಗೆ ನಿನ್ನ ದರುಶನ ಭಾಗ್ಯ ಕಲ್ಪಿಸುವವರು.

ಭಗವಂತನೇ ನೀನು ಸೃಷ್ಟಿ ಮಾಡಿದ ಅಂಗದಲ್ಲಿ ನೀನಿದ್ದರೂ, ನಿನ್ನನ್ನು ಅಂಗವನ್ನು ಬೇರ್ಪಡಿಸಿ ತನ್ನ ಸ್ವಾಧೀನಕ್ಕೆ ಪಡೆದ ಮನಕ್ಕೆ ನೀನು ಪಾಠ ಮಾಡಬಾರದೆ? ನಿನ್ನದೊಂದು ಸಮತಾ ಗುಣವನ್ನು ಮನದಲ್ಲಿ ತುಂಬಿ ಸೃಷ್ಟಿ ಮಾಡಬಾರದೆ? ಅಂತಹುದೊಂದು ಸಮತಾ ಗುಣ ನನ್ನನ್ನು ಬಂದು ಮುತ್ತಿಗೆ ಹಾಕಬಾರದೆ? ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ.

**388**

**ಕಂಡೆನಯ್ಯಾ, ನೀನೊಡ್ಡಿದೊಡ್ಡಣೆಯ,**

**ಕಿರಿಕಿರಿದಾಗಿ ತರಿದಡೆ ಹಿರಿಹಿರಿದಾಗಿ ನೆನೆವೆನು;**
**ಕಾಯವ ಬೇಡಿದಡೀವೆನು.**
**ಪ್ರಾಣ ನಿಮ್ಮದಾಗಿ, ಉಳಿದ ಹಂಗು ನಮಗಿಲ್ಲ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ದೇಹದ ಸತ್ಯವನ್ನು ದೇಹವೇ ತಿಳಿಯಲು ಎಷ್ಟೊಂದು ಕಷ್ಟ! ಸತ್ಯವೇ ಅಸತ್ಯವನ್ನು ಸುಳ್ಳನ್ನು ಸೃಷ್ಟಿ ಮಾಡಿ, ತನ್ನನ್ನು ದೇಹವನ್ನು ಕಾಣದಂತೆ ದೇಹದ ಮೇಲೆ ಹೇರಿಕೊಂಡಿದೆ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಸತ್ಯದೊಂದಿಗೆ ಮಾತನಾಡುತ್ತಿದ್ದಾರೆ.

ನೀನೊಡ್ಡಿದೊಡ್ಡಣೆಯನ್ನು ನಿನ್ನನ್ನು ತಿಳಿಯುವ ಮೂಲಕ ತಿಳಿದೆನಯ್ಯಾ. ನಿನ್ನನ್ನು ಕಾಣದಂತೆ, ನೀನೇ ಸೃಷ್ಟಿ ಮಾಡಿದ ದೇಹವನ್ನು ಕಾಣದಂತೆ, ದೇಹದ ಮೇಲೊಂದು ಮನವೆಂಬ ಸುಳ್ಳನ್ನು ಸೃಷ್ಟಿ ಮಾಡಿದೆ.

ನಿನ್ನನ್ನು ಕಾಣಲು ಹೋದವರಿಗೆ ಅನಂತ ತೊಂದರೆಗಳನ್ನು ಕೊಟ್ಟು ನೀನು ಕಾಣದಂತೆಯೇ ಮಾಡಿರುವೆ. ಏನೀ ನಿನ್ನ ಲೀಲೆ. ನಿನ್ನನ್ನು ಕಂಡ ಕ್ರಿಸ್ತ, ಪೈಗಂಬರರು ಕುಣಿ ಕುಣಿದಾಡಿದರು. ಕ್ರಿಸ್ತ ನಿನ್ನನ್ನು ದೇವರೆಂದ.

ನಾನು ದೇವರನ್ನು ಕಂಡಿದ್ದೇನೆ. ಆತನೊಂದಿಗೆ ಮಾತನಾಡುತ್ತೇನೆ. ನಾನು ಮಾತ್ರ ನಿಮ್ಮನ್ನು ದೇವರೊಂದಿಗೆ ಮಾತನಾಡಿಸಬಲ್ಲೆ. ಹಾಗೂ ಕರೆದೊಯ್ಯಬಲ್ಲೆ. ನಾನು ದೇವನ ದೂತ. ನಿಮ್ಮೆಲ್ಲರಿಗೆ ಆತನ ಪರಿಚಯ ಮಾಡಿಸಲು ನನ್ನನ್ನು ಭೂಮಿಗೆ ಕಳುಹಿಸಿದ್ದಾನೆ ಎಂದು ಸತ್ಯವಾಗಿ ನುಡಿದ. ಜನ ನಂಬಲಿಲ್ಲ. ನಂಬಿದ ಆತನನ್ನು ಶಿಲುಬೆಗೆ ಏರಿಸಿದರು. ಹಣೆಗೆ ಮುಳ್ಳಿನ ಕಿರೀಟ ಜಡಿದರು.

ನಿನ್ನನ್ನು ನಂಬಿದವನಿಗೆ ನೀನು ಕಿರಿ ಕಿರಿ ಮಾಡಿದೆ. ಜನಕ್ಕೆ ತೊಂದರೆ ಕೊಡುವಂತೆ ಮಾಡಿದೆ. ಆದರೂ ಆತ ನಿನ್ನನ್ನು ಹಿರಿಹಿರಿದಾಗಿ ನೆನೆದ.

ಅಯ್ಯೋ ಪರಮಾತ್ಮ, ಅವರು ಏನು ಮಾಡುತ್ತಿದ್ದಾರೆಂದು ಅವರಿಗೂ ಗೊತ್ತಿಲ್ಲ. ನಾನು ನಿನ್ನನ್ನು ಕಂಡಿದ್ದೇನೆ. ನಿನ್ನೊಂದಿಗೆ ಮಾತನಾಡುತ್ತಿದ್ದೇನೆ. ಆದರೂ ಅವರಿಗೆ ತಿಳಿಯುತ್ತಿಲ್ಲ. ನಿನ್ನನ್ನು ಪರಿಚಯಿಸಲು ಹೋದರೆ ಅವರನ್ನು ಎತ್ತಿಕಟ್ಟಿ ನನ್ನನ್ನು ಅವರಿಂದ ಶಿಕ್ಷಿಸುವಂತೆ ಮಾಡಿದೆ.

ಹೇ ದೇವನೆ ನನಗೆ ಮಾಡಿದ ಹಿಂಸೆಯನ್ನು ಅವರಲ್ಲಿರುವ ನೀನೇ ಅವರನ್ನು ಮನ್ನಿಸು. ಏಕೆಂದರೆ ನಿನ್ನನ್ನು ತಿಳಿಯುವ ಇಚ್ಛೆ ಅವರಿಗೆ ಇಲ್ಲ. ನಿನ್ನನ್ನು ಅವರಿಗೆ ತಿಳಿಸಿಕೊಳ್ಳುವ ಇಚ್ಛೆಯೂ ನಿನಗೆ ಇಲ್ಲ. ಇದು ನೀನು ಕೊಟ್ಟ ಕಾಯ. ನೀನು ಇದ್ದ ಕಾಯ. ನಿನ್ನದೇ ಆದ ಕಾಯವನ್ನು ನೀನಿದ್ದ ಕಾಯಗಳಿಂದಲೇ ದಂಡಿಸುತ್ತಿರುವಿ. ಇದು ನಿನ್ನ ಲೀಲೆ. ನೀನೇ ಒಡ್ಡಿದ ಒಡ್ಡಣೆ. ಕಾಯ ನಿನ್ನದೆ. ಪ್ರಾಣವೂ ನಿನ್ನದೇ. ನನಗೆ ಯಾವ ಹಂಗೂ ಇಲ್ಲ ಎಂದು ಕ್ರಿಸ್ತ ಹಿಂಸೆ ಮಾಡುತ್ತಿರುವ ಜನರನ್ನು ಕುರಿತು ದೇವರೊಂದಿಗೆ ಮಾತನಾಡಿದ.

ಕ್ರಿಸ್ತನ ಈ ಸೂತ್ರ ಹಿಂಸಿಸಿದ ಯಾರಿಗೂ ಹೊಳೆಯಲಿಲ್ಲ. ಅರ್ಥವಾಗಲಿಲ್ಲ. ಅನುಯಾಯಿಗಳು ಹುಟ್ಟಿಕೊಂಡರು. ಕ್ರಿಸ್ತನಿಗೆ ಬಳಸಿದ ಶಿಲುಬೆಯನ್ನು ಆತನ ಚಿತ್ರವನ್ನು ಆರಾಧ್ಯ ದೈವವಾಗಿ ಬಳಸಿಕೊಂಡು ಕೊರಳಲ್ಲಿ ಧರಿಸಿಕೊಂಡರು. ಸತ್ಯ ದೇಹದಲ್ಲಿಯೇ ಮರೆಯಾಯಿತು. ಅಸತ್ಯದ ಶಿಲುಬೆ ಸತ್ಯ ಸಂಗಮವಾದ ದೇಹದ ಮೇಲೆ ನರ್ತನೆ ಮಾಡಿತು.

389

**ಕಂಡೆನು ಎಂದೆಂಬೆ, ಉಂಡುಂಡು ಕಾಬಡೆ**
**ಖಂಡಜ್ಞಾನಿಗಳಾದ ಪಾಪವೇನು ?**
**ಮಂಡಳದ ಸದ್ದಿಯನು ಕಂಡ ಶಿಶುಲೋಕಕ್ಕೆ**
**ಉಂಡುತಿಲ್ಲದೆ ಎಯ್ದಿತಾನಂದದ**
**ಖಂಡೇಂದು ಶೇಖರನ ಕಂಡಿದ್ದ ಕೂಟವನು**
**ಕಂಡವರು ಹೇಳಿರೈ ಕಪಿಲಸಿದ್ಧ ಮಲ್ಲಿಕಾರ್ಜುನನ.**

ಮೂರೊಂದಾದವನು ಅಖಂಡನು. ಅಪ್ರತಿಮನು. ಅಪ್ರಮಾಣನು. ಅಗಮ್ಯನು. ಅವನು ಒಂದಾದವನು. ಒಂದನ್ನೇ ಕಾಣುತ್ತಾನೆ. ಒಂದು ವಸ್ತುವಿನಲ್ಲಿ ಎರಡನ್ನು ಕಾಣುವುದಿಲ್ಲ.

ಅಂಗವನ್ನು ನೋಡಿ ಅಂಗವೆಂದು ಹೇಳುವವನು ಅಖಂಡಜ್ಞಾನಿ. ಅಂಗದಲ್ಲಿ ಲಿಂಗ ಸಂಗಮವಾಗಿರುವುದರಿಂದ ಅದು ಲಿಂಗಾಂಗ. ಅಂಗ. ಅದನ್ನು ಹೆಣ್ಣೆಂದು ನೋಡುವುದಿಲ್ಲ; ಗಂಡೆಂದು ನೋಡುವುದಿಲ್ಲ. ಹಾಗೆ ನೋಡುವ ನೇತ್ರ, ಖಂಡ ನೇತ್ರ. ಖಂಡ ನೇತ್ರ ಖಂಡೇಂದು ಶೇಖರನ ಕಂಡು ಅವನಲ್ಲಿ ಕೂಟಸ್ಥನಾಗಿ ಅಖಂಡ ನೇತ್ರವಾಗಿದೆ. ಪರಿಪೂರ್ಣ ನೇತ್ರವಾಗಿದೆ. ಪರಿಪೂರ್ಣ ನೇತ್ರ ಪರಿಪೂರ್ಣ ವ್ಯಕ್ತಿಯನ್ನೇ ನೋಡುತ್ತದೆ.

ವ್ಯಕ್ತಿ ಅಪರಿಪೂರ್ಣನಿರಬಹುದು. ನೋಡಲ್ಪಡುವ ಕಣ್ಣು ಅಖಂಡವಾದಾಗ ಆ ಅಖಂಡ ವಸ್ತುವೇ ಕಾಣುತ್ತದೆ. ಕಾಮಾಲೆ ಕಣ್ಣಿಗೆ ಹಳದಿಯಾಗಿ ಕಂಡರೆ ಅದು ವಸ್ತುವಿನ ದೋಷವಲ್ಲ; ಕಣ್ಣಿನ ವ್ಯಾಧಿ; ಅಂಗದ ವ್ಯಾಧಿ! ವ್ಯಾಧಿ ಹೋಗುವುದಿಲ್ಲ; ಅದು ಅಜ್ಞಾನ. ಅಜ್ಞಾನವನ್ನು ಜ್ಞಾನದಿಂದಲೇ ಕಳೆದುಕೊಳ್ಳಬೇಕು.

ಶಾಸ್ತ್ರವನು ಓದಿ ನುಡಿದು ಹೇಳುವುಡೆ ಖಂಡಜ್ಞಾನ ಅಖಂಡನಾದಂತೆ ಅಲ್ಲ. ಖಂಡ ಎನ್ನುವುದು ಒಂದು ಪಾಪದ ವಸ್ತು ಕೂಡಾ ಅಲ್ಲ. ಒಂಟಿ ಜೀವ. ಅದು ಒಂಟಿ ಇರುವವರೆಗೆ ಖಂಡವೇ ಆಗಿರುತ್ತದೆ. ಅಖಂಡದಲ್ಲಿ ಕೂಡುವ ಬಯಕೆಯಾದಾಗ ಉತ್ಕಟ ಇಚ್ಛೆಯಾದಾಗ ಅಖಂಡೇಶ್ವರನಲ್ಲಿ ಕೂಡಿ, ಕೂಡದ ಅಗಲದ ಕೂಟವನು ಅನುಭವಿಸುತ್ತದೆ.

ಅಖಂಡ ವಸ್ತುವಿಗೆ ಅಖಂಡವೇ ಕಾಣುತ್ತದೆ. ಕಲ್ಲನ್ನು ನೋಡಿ ಕಲ್ಲು ಎನ್ನುತ್ತಾನೆ. ದೇವರೆಂದು ಕೈ ಮುಗಿಯುವುದಿಲ್ಲ. ತನುವಿನಲ್ಲಿ ಭಕ್ತಿರಸ ಹುಟ್ಟುವುದಿಲ್ಲ. ಬದಲಾಗಿ ಅರಿವಿನ ರಸ ಹುಟ್ಟುತ್ತದೆ. ಅದೇ ಬ್ರಹ್ಮರಸ.

ಅಂಗದಲ್ಲಿ ಮತ್ತೆ ಮತ್ತೆ ಸೃಷ್ಟಿಯಾಗುವ ಸುಳ್ಳು ರಸವನ್ನು ಬ್ರಹ್ಮ ರಸ ಸುಟ್ಟು ಹಾಕುತ್ತದೆ. ಆ ಅಂಗ ಲಿಂಗಾಂಗವಾಗಿ ಕಾಣುತ್ತದೆ. ಏಕೆಂದರೆ ತಾನು ಲಿಂಗಾಂಗವೇ ಆಗಿದ್ದಾನೆ. ಹೀಗಾಗಿ ಅಂಗ ಮತ್ತೆ ಮತ್ತೆ ರಸಾಯನಿಕ ಕ್ರಿಯೆಗೆ ಒಳಗಾಗುವುದಿಲ್ಲ. ಅಂಗವನ್ನು ಆವರಿಸಿದ ನವರಸಗಳು ಬತ್ತಿ ಹೋಗುತ್ತವೆ.

ಭಗವದ್ಗೀತೆ ಬೈಬಲ್ ಖುರಾನ್ ಕೇಳಿದರೆ ಓದಿದರೆ ಭಕ್ತಿರಸ ಉಂಟಾಗಬಹುದು. ಅದು ಉಂಡ ಸುಖವಲ್ಲ. ಓದಿದಾಗ, ಕೇಳಿದಾಗ ನೋಡಿದಾಗ ಅಂಗದಲ್ಲಿ ಉಂಟಾಗುವ ರಸಾಯನಿಕ ಕ್ರಿಯೆ. ಮನ ಮತ್ತೆ ಮತ್ತೆ ಅಂಗವನ್ನು ಕೂಡಿ, ಅಂಗದಲ್ಲಿ ರಸಾಯಿನಿಕ ಕ್ರಿಯೆ ಉಂಟು ಮಾಡುತ್ತದೆ. ಅದು ಕೂಡಿದ ಕೂಟವಲ್ಲ.

ಉದಾಹರಣೆಗೆ ಕೆತ್ತಿದ ಕಲ್ಲನ್ನು ನೋಡಿದ ಕೂಡಲೇ ಮನ ಅಂಗದಲ್ಲಿ ಕೂಡಿ ಭಕ್ತಿಯ ಸುಳ್ಳು ರಸ ಉತ್ಪನ್ನ ಮಾಡಿ ಅಂಗವನ್ನು ಕೈ ಮುಗಿಯುವಂತೆ ಮಾಡುತ್ತದೆ. ಒಂದು ಕಲ್ಲ ಮೇಲೆ ಕಾಲನೂರಿ ನಿಂತು; ಮತ್ತೊಂದು ಕಲ್ಲಿಗೆ ಕೈಮುಗಿಯುವ ಮನ ಕೂಟಸ್ಥ ಮನವಲ್ಲ. ಮನಕ್ಕೆ ಸತ್ಯ ದರುಶನವಾಗಿಲ್ಲ. ಹೀಗಾಗಿ ಕಲ್ಲಮೇಲೆ ನಿಂತು ಕಲ್ಲಿಗೆ ಕೈಮುಗಿಯುತ್ತದೆ.

ಕಲ್ಲ ಮೇಲೆ ನಿಂತ ವಸ್ತುವಿಗೆ ಕಲ್ಲಿನ ಭಯವಿಲ್ಲ. ಕಲ್ಲಿನ ಮೇಲೆ ನಿಂತು ಕೆತ್ತಿದ ಕಲ್ಲನ್ನು ನೋಡಿ ದೇವರೆಂದು ಕೈ ಮುಗಿಯುತ್ತದೆ. ಒಂದು ಬ್ರಹ್ಮನಾದರೆ ಮತ್ತೊಂದು ಭ್ರಮೆ, ಒಂದು ಅಖಂಡ ವಸ್ತುವಾದರೆ, ಮತ್ತೊಂದು ಖಂಡ ವಸ್ತು. ಖಂಡ ವಸ್ತು ಯಾವ ಪಾಪವನ್ನೂ ಮಾಡಿಲ್ಲ. ಅದು ಪಾಪದ ವಸ್ತುವೂ ಅಲ್ಲ. ಅಖಂಡ ವಸ್ತುವಿನಿಂದಲೇ ಸೃಷ್ಟಿಯಾಗಿದೆ. ಅಖಂಡವನ್ನು ನೋಡಿ, ಅಖಂಡದಲ್ಲಿಯೇ ಕೂಡಿ ನೋಡಿದಾಗ ಅದಕ್ಕೆ ಸತ್ಯ ವಸ್ತುವೇ ಕಾಣುತ್ತದೆ. ತಾನು ಕಲ್ಲ ಮೇಲೆ ನಿಂತದ್ದು ಅರಿವಾಗಿ ಕಲ್ಲನ್ನೇ ನೋಡುತ್ತದೆ. ಕೂಡಲೇ ಭ್ರಮಾರಸ ಬತ್ತಿ ಹೋಗುತ್ತದೆ. ಬ್ರಹ್ಮರಸದಲ್ಲಿ ತೇಲಿ ಹೋಗುತ್ತದೆ.

ಎಲ್ಲಿ ನೋಡಿದರೂ ಬ್ರಹ್ಮರಸ ಭರಿತವಾದ ತನುಗಳೇ ಕಾಣುತ್ತವೆ. ಹೀಗಾಗಿ ಬಸವಣ್ಣ 'ಎನಗಿಂತ ಕಿರಿಯರಿಲ್ಲ' ಎಂದು ಹೇಳಿದ. ಇದು ಆತ ಕಂಡ ವಿರಾಟ ಸ್ವರೂಪ. ವಿರಾಟ ಸ್ವರೂಪನು ಆಗುವುದೆಂದರೆ ಭ್ರಮೆಯನ್ನು ಕಳೆದುಕೊಳ್ಳುವುದು. ತನ್ನ ಭ್ರಮೆ ತೊಲಗಬೇಕೆಂದರೆ ತನ್ನದೇ ಆದ ಬ್ರಹ್ಮನ ಪರಿಚಯ ತನಗಾಗಬೇಕು.

ಕಲ್ಲು ನೋಡಿ ದೇವರೆಂದು ಕೈಮುಗಿಯುವವನಿಗೆ, ಕಲ್ಲಮೇಲೆ ನಿಂತವನ ಪರಿಚಯವಾಗಬೇಕು. ಕಲ್ಲ ಮೇಲೆ ನಿಂತು ಕಲ್ಲಿಗೆ ಕೈಮುಗಿಯುವವನು ತಾನೇ ಆಗಿರುವುದರಿಂದ ಇದು ಸ್ವಲ್ಪ ಜಟಿಲ.

**390**

**ಕಂಬುವಿನ ಭೇದದಲಿ ಅಂಬಿತ್ತು ಅಜಕೋಟಿ,**
**ಕಂಬುವಿಂ ಭವಿಸಿತ್ತು ಜಗವೆಲ್ಲವು.**
**ಆ ಕಂಬು ಯೋಗಕ್ಕೆ ತಾನಿಂಬಪ್ಪ ತಾತ್ಪರ್ಯ**
**ಶಂಭು ನೀನಹೆ ಶುದ್ಧ ನೆಲೆ ತಾನದು.**
**ಸಂಭ್ರಮದ ಬಿಂಬದಿಂದೊಂಬತ್ತು ನಾಳದಲಿ**
**ತುಂಬಿಯಾಳಾಪದಾ ಮಧು ಪುಷ್ಪದ**
**ಸಂಭ್ರಮದ ಖೇಚರದ ಆನಂದ ರಚನೆಯ**
**ಶಂಭು ನೀನಾದೆ, ಕಪಿಲಸಿದ್ಧ ಮಲ್ಲೇಶ್ವರಾ.**

ಭಗವಂತ ಅಂಗವನ್ನು ಸೃಷ್ಟಿ ಮಾಡಿ, ಅದರಲ್ಲಿ ತಾನು ಸಂಗಮವಾಗಿ, ತನ್ನ ಕಂಠದಿಂದಲೇ ಇಡೀ ಜಗತ್ತನ್ನು ಸೃಷ್ಟಿ ಮಾಡಿದ್ದಾನೆ. ಹಾಗೆಯೇ ಇಡೀ ಜಗತ್ತನ್ನು ನಾಶ ಮಾಡುತ್ತಾನೆ.

ಆತನ ಕಂಠದಿಂದ ಅಜಕೋಟಿ ಮಾತಿನ ಬಾಣಗಳು ಹೊರಬಂದಿವೆ. ಸಂಭ್ರಮದ ಪುಷ್ಪಮಳೆಯನ್ನು ಸುರಿಸಿವೆ. ಹಾಗೆಯೇ ಬೆಂಕಿ ಮಳೆಯನ್ನು ಕೂಡಾ ಸುರಿಸಿವೆ.

ಮಾತಿನ ಬಾಣಗಳಿಂದಲೇ ಅಂಗಕ್ಕೆ ಬೆಲೆ. ಮಾತಿನ ಬಾಣಗಳಿಂದಲೇ ಅಂಗ ಹೆಸರು ಪಡೆದಿದೆ. ಮಾತಿನ ಬಾಣಗಳಿಂದಲೇ ರಾಮಾಯಣ ಸೃಷ್ಟಿಯಾಯಿತು. ರಾಮ ವನವಾಸಕ್ಕೆ

ಹೋದ. ರಾವಣ ಸೃಷ್ಟಿಯಾಗಿ ಸೀತೆಯನ್ನು ಅಪಹರಿಸಿದ. ಮಡಿವಾಳನ ಮಾತು ರಾಮ ವಿಪರೀತವಾಗಿ ತಿಳಿದು ಸೀತೆಯನ್ನು ಕಾಡಿಗೆ ಅಟ್ಟಿದ.

ಮಾತು ರಾಮನನ್ನು ವನವಾಸಕ್ಕೆ ಅಟ್ಟಿತು. ರಾವಣನೊಂದಿಗೆ ಯುದ್ಧವನ್ನು ಮಾಡಿಸಿತು. ಇಡೀ ರಾಮಾಯಣ ಕಂಠದಿಂದ ಹೊರಬಂದ ಮಾತಿನಿಂದಲೇ ಸಿದ್ಧವಾಗಿದೆ. ಕಾಯದ ಕಂಠದಲ್ಲಿ ಅಜಕೋಟಿ ಮಾತಿನ ಬಾಣಗಳು ತುಂಬಿವೆ. ಮಾತಿನಿಂದಲೇ ಜಗತ್ತಿನ ಸೃಷ್ಟಿಲಯಗಳು.

ಸಿದ್ಧರಾಮ ಶಿವಯೋಗಿಗಳ ಈ ವಚನ ಅದ್ಭುತವಾದ ಸೂತ್ರ. ಮಾತಿನ ಮರ್ಮವನ್ನು ಅರಿತು ಮಧು ಪುಷ್ಪದಂತೆ ಸಂಭ್ರಮದಿಂದ ಸ್ವೀಕರಿಸುವ ಶಕ್ತಿಯೂ ಇದರಲ್ಲಿದೆ ಎಂದು ಮಾತಿನ ಲೋಕಕ್ಕೆ ತೋರಿಸಿಕೊಟ್ಟಿದ್ದಾರೆ. ಅದು ಮಾತಿನಿಂದಲೇ!

ಕಂಠದಿಂದ ಉತ್ಪನ್ನವಾದ ಮಾತನ್ನು ಕಂಠದಿಂದಲೇ ಸ್ವೀಕರಿಸುವ ಶಕ್ತಿಯಿದ್ದರೂ ಕಾಯಕ್ಕೆ ಅರಿವಾಗುತ್ತಿಲ್ಲ. ಹೀಗಾಗಿ ಕಾಯದಿಂದಲೇ ಹೊರಬಂದ ಮಾತು ಕಾಯಕ್ಕೆ ಬಾಣವಾಗಿ ಚುಚ್ಚಿ, ಮಾತು ಸೃಷ್ಟಿ ಮಾಡಿದ ಕಾಯವನ್ನೇ ಘಾಸಿಗೊಳಿಸುತ್ತದೆ.

ದ್ರೌಪದಿಯ ಕಾಯದಿಂದ ಹೊರಬಂದ ಮಾತು ದುರ್ಯೋಧನನ ವಜ್ರ ಕಾಯವನ್ನು ಘಾಸಿಗೊಳಿಸಿತು. ಐವರು ದ್ರೌಪದಿಯನ್ನು ದ್ರೌಪದಿಗೆ ಸಂಬಂಧಪಟ್ಟ ಗಂಡಂದಿರನ್ನು ವನವಾಸಕ್ಕೆ ಕಳುಹಿಸಿದರೂ ದುರ್ಯೋಧನನನ್ನು ಬಾಧಿಸಿದ ದ್ರೌಪದಿಯ ಮಾತು ವಜ್ರ ಶರೀರದಲ್ಲಿ ನಾಟ್ಯ ಮಾಡುತ್ತಿತ್ತು.

ಪಾಂಡವರೊಂದೇ ವನವಾಸಕ್ಕೆ ಹೋಗಲಿಲ್ಲ. ವನವಾಸಕ್ಕೆ ಕಳುಹಿಸಿದ ದುರ್ಯೋಧನ ಅರಮನೆಯಲ್ಲಿದ್ದರೂ ಕೂಡಾ ದ್ರೌಪದಿಯ ಮಾತಿನ ಯಾತನೆಯನ್ನು ಘೋರವಾಗಿ ಅನುಭವಿಸಿದ. ಕಾಯದ ಕಂಠದಿಂದ ಹೊರಬಂದ ಮಾತು ಕಾಯಕ್ಕೆ ಹೇಗೆ ಕಂಟಕವಾಗುತ್ತದೆ ಎಂಬುದನ್ನು ವ್ಯಾಸಮಹರ್ಷಿ ಮಹಾಭಾರತದ ಉದ್ದಕ್ಕೂ ಹೆಣೆದಿದ್ದಾರೆ.

ಅಜಕೋಟಿ ಮಾತುಗಳಿಂದ ಹೊತ್ತಿ ಉರಿಯುತ್ತಿದ್ದ ಕೌರವರ ಕುರುಕ್ಷೇತ್ರವನ್ನು ಭಗವಂತನ ಒಂದು ಗೀತೆಯ ಮಾತಿನ ಮೂಲಕ ಶಮನ ಮಾಡಿದ್ದಾರೆ ವ್ಯಾಸಮಹರ್ಷಿಗಳು. ಮಾತೇ ಮೃತ್ಯು; ಮಾತೇ ಅಮೃತ; ತಿಳಿಯದಿದ್ದರೆ ಮೃತ್ಯು. ತಿಳಿದರೆ ಅಮೃತ!

ಕಂಠದಿಂದ ಹೊರಬಂದ ವಿಷವನ್ನು, ಕಂಠದಲ್ಲಿಯೇ ಅಮೃತವನ್ನಾಗಿಸಿ ಇಟ್ಟುಕೊಳ್ಳಬಹುದೆಂದು ನೀಲಕಂಠ ತೋರಿಸಲಿಲ್ಲವೆ? ಇದು ಕತೆಯಲ್ಲ; ಕಾಯದ ಕಂಠದಿಂದ ಹೊರಬಂದ ಮಾತುಗಳನ್ನು ಕಾಯವೇ ತಿಳಿಯಲೆಂದು ಹೇಳಿದ 'ನೀಲಕಂಠ ಸೂತ್ರ'

ಕಾಯದ ದುರ್ದೈವ. ಶಿವರಾತ್ರಿಯಂದು ಶಿವನನ್ನು ನೀಲಕಂಠ ರೂಪದಲ್ಲಿ ಆರಾಧಿಸಿ, ಕಾಯ ಕಾಲಕಳೆಯಿತು. ನೀಲಕಂಠ ತಾನೇ ಎನ್ನುವುದನ್ನು ಕಾಯ ತಿಳಿಯಲೇ ಇಲ್ಲ.

ಮಾತು ಕಂಠದ ಮೂಲಕ ಹೊರಗೆ ಚೆಲ್ಲುವವನು ಮನುಷ್ಯ. ಸಕಲ ಮಾತುಗಳಲ್ಲಿಯೂ ಮಧು ಭರಿತವಾಗಿದೆ. ಮಾತು ಮಧು ಭರಿತ ಪುಷ್ಪ! ಅದನ್ನು ತುಂಬಿಯಂತೆ ಸಂಭ್ರಮದಿಂದ ಈಂಟುವವನೇ ಮಹಾದೇವ! ಆತ ಮಾತಿನ ರಚನೆಯ ಮಹಾದೇವ!

ಮಾತು ಮನುಷ್ಯನಿಗೆ ಗೊತ್ತಿಲ್ಲ. ಮನುಷ್ಯನಾಡುವ ಮಾತು ಮಹಾದೇವನಿಗೆ ಗೊತ್ತಿದೆ. ಮನುಷ್ಯನ ಮಾತು ಮನುಷ್ಯನಿಗೆ ವಿಷದ ಬಾಣಗಳಾಗಿ ತಾಕಿದರೆ ಮನುಷ್ಯನಲ್ಲಿಯೇ ಸಂಗಮವಾದ ಮಹಾದೇವ ಸಂಭ್ರಮದಿಂದ ಸ್ವೀಕರಿಸುತ್ತಾನೆ. ಆದರೇನು ಮನುಷ್ಯ ಮಾತನ್ನು ಬೇಧಿಸಿ ಮಾತಿನ ಅಮೃತವನ್ನು ಈಂಟುವ ಕಲೆಯ ಮೇಲೆ ಆತನಿಗೆ ಆಸಕ್ತಿಯೇ ಇಲ್ಲ.

‘ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ’ ಎಂದು ಹೇಳಿದ ಬಸವಣ್ಣನ ಸೂತ್ರವೂ ಅದ್ಭುತವೇ ಆಗಿದೆ. ಪ್ರತಿ ಮಾತಿನಲ್ಲಿಯೂ ಪ್ರತಿ ವಚನದಲ್ಲಿಯೂ ಅರಿವಿನ ಅಮೃತ ಭರಿತವಾಗಿದೆ. ಅದನ್ನು ಅರಿವಿನಿಂದ ಪಾನ ಮಾಡಿದರೆ, ಮಾಡಿದ ತಾನೇ ನೀಲಕಂಠನಾಗುತ್ತಾನೆ. ಬುದ್ಧನಾಗುತ್ತಾನೆ. ಮಹಾವೀರನಾಗುತ್ತಾನೆ.

ಕಂಠದಿಂದ ಹೊರಬಂದ ಅಜಕೋಟಿ ಬಾಣಗಳನ್ನೆಲ್ಲ ಕಂಠದಿಂದಲೇ ಹೊರಬಂದ ಒಂದು ‘ಬ್ರಹ್ಮಾಸ್ತ್ರ’ ನಾಶ ಮಾಡಬಲ್ಲದು; ಒಂದು ‘ಪಾಶುಪತಾಸ್ತ್ರ’ ನಾಶ ಮಾಡಬಲ್ಲುದು.

ಭಾರತದೇಶದ ಅರಿವಿನ ಹಿರಿಯರು ಮಾನವ ಕುಲಕ್ಕೆ ಎಂತಹ ಅದ್ಭುತ ಸೂತ್ರವನ್ನು ಕರುಣಿಸಿದ್ದಾರೆ. ಒಮ್ಮೆ ಯೋಚಿಸಿ. ‘ಬ್ರಹ್ಮಾಸ್ತ್ರ’ ಎಂದರೆ ಅರಿವಿನ ಅಸ್ತ್ರ. ಅಜ್ಞಾನದ ಮಾತುಗಳನ್ನು ಜ್ಞಾನದ ಮಾತಿನಿಂದ ಬೇಧಿಸುವ ಅಸ್ತ್ರ. ‘ಪಾಶುಪತಾಸ್ತ್ರ’. ಪಶು ಸಮಾನವಾದ ಮಾತುಗಳನ್ನು ಪಶುಪತಿಯಾಗಿ ಕೇಳಿ ಬೇಧಿಸುವ ಅಸ್ತ್ರ.

ಬ್ರಹ್ಮನೆಂಬುವವನೂ ಇಲ್ಲ; ಪಶುಪತಿ ಎಂಬುವವನೂ ಇಲ್ಲ. ತನುವಿನ ಭ್ರಮಾರೂಪದ ಅಜ್ಞಾನವನ್ನು ತನುವಿನಲ್ಲಿಯೇ ಸಂಗಮವಾದ ಬ್ರಹ್ಮಮಯವಾದ ಜ್ಞಾನದಿಂದ ಕಳೆದುಕೊಳ್ಳುವವನೇ ಬ್ರಹ್ಮ.

ಪಶು ಸಮಾನವಾದ ತನುವಿನಲ್ಲಿ ತನ್ಮಯವಾದ ಅರಿವೇ ‘ಪಶುಪತಿ’ ತನ್ನ ಅರಿವಿನಿಂದಲೇ ಪಶು ಸಮಾನವಾದ ಪ್ರವೃತ್ತಿಯನ್ನು ಕಳೆದುಕೊಳ್ಳಬೇಕು. ಹೀಗೆ ಕಳೆದುಕೊಂಡವನೇ ‘ಪಶುಪತಿ’. ಎಂತಹ ಸುಂದರವಾದ ಸೂತ್ರ. ಇದನ್ನು ಬಳಸಿಕೊಂಡು ವಿಜ್ಞಾನಿಯಾಗಿ ಬದುಕಬೇಕಾದ ಮನುಷ್ಯನೇ ಅಜ್ಞಾನಿಯಾಗಿ ದೇವರನ್ನು ಆರಾಧಿಸುತ್ತಿದ್ದಾನೆ. ಪ್ರಾರ್ಥಿಸುತ್ತಿದ್ದಾನೆ. ಅವನ ಪ್ರಾರ್ಥನೆ ಆರಾಧನೆ ‘ 3ಓ ’ ಅದು ಹೊರಮುಖದ ಕಾಯಕ. ಅದು ‘ **ಓ3** ’ ಆದಾಗ ಮಾತ್ರ ಗೆಲ್ಲುತ್ತಾನೆ. ಅಂದರೆ ಕಾಯದ ಕಾಯಕ ಒಳಮುಖ ಆದಾಗ ಮಾತ್ರ ಅದು ಕೈಲಾಸವಾಗುತ್ತದೆ. ಆಡುವ ಮಾತುಗಳು ಕೇಳುವ ಮಾತುಗಳೆಲ್ಲ ಅಮೃತವಾಗುತ್ತವೆ.

**391**

**ಕಡದ ಕಂಬದ ನಡುವೆ**
**ಮೃಡ ನಿನ್ನ ಒಡಲಾಗಿ ಕಂಬ ನೀರಾಯಿತಯ್ಯಾ.**
**ಅಯ್ಯಾ, ಸಾಕಲ್ಯವ ನಿಃಕರಿಸಿ**
**ಅನೇಕ ನಿರವಯವನೆಯ್ದಿ,**
**ಆಕಾರಕ ಸಿದ್ಧ ದೇವರ ದೇವನೇ ಕೇಳು**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

‘‘ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ, ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ’’ ಎನ್ನುವ ಮುಕ್ತಾಯಕ್ಕಳ ಸೂತ್ರ, ಸಿದ್ಧರಾಮ ಶಿವಯೋಗಿಗಳ ಈ ಸೂತ್ರದ ತಿರುಳು ಒಂದೇ ಆಗಿದೆ.

ಬಯಲಲ್ಲಿದ್ದ ಜಲಜನಕವನ್ನು ಆಮ್ಲಜನಕವನ್ನು ಒಂದು ಮಾಡಿ ನೀರನ್ನಾಗಿಸಿ, ಆ ನೀರನ್ನೇ ಬೊಂಬೆಯನ್ನಾಗಿಸಿ, ಆ ಬೊಂಬೆಯ ಕೈಯಲ್ಲಿ ಬಯಲಕೊಟ್ಟು ಬೊಂಬೆ ಬೊಂಬೆಯ ಜೊತೆಗೆ ಮುದ್ದಾಡಿಸುತ್ತಿರ್ದನಯ್ಯಾ.

ಬಯಲುದೇವ ಬಯಲಲ್ಲಿದ್ದ ಎರಡು ವಸ್ತುಗಳನ್ನು ಪಡೆದು, ನೀರ ಕಂಬ ಮಾಡಿ, ಅದನ್ನೇ ತಾನು ಯರವಲು ಪಡೆದು ಮೃಡನ ಒಡಲಾಗಲು ಕಂಬ ನೀರಾಯಿತಯ್ಯಾ.

ಒಡಲೇ ಏನೆಲ್ಲಾ ಅಲ್ಲ. ಅದು ಮೃಡನ ವಾಸಸ್ಥಾನ. ಆತನ ಬಯಲ ಒಡಲಿಗೆ ಒಡಲು ಆಧಾರವಾಗಿದೆ. ಆತನ ಒಡಲು ಒಡಲನ್ನು ಸೋಂಕಿಲ್ಲ. ಒಡಲಿಂಗೆ ಆತನ ಒಡಲು ಆಧಾರವಾಗಿದೆ. ಒಡಲನ್ನು ಸೋಂಕದೇ ಒಡಲನ್ನು ಮೃಡನ ಬಯಲ ಒಡಲು ಬೆಳಗುತ್ತಲಿದೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತಲಿದೆ.

ಸಾಕಾರದ ಒಂದು ಒಡಲಲ್ಲಿ ನಿರಾಕಾರದ ಒಡಲುಗಳು ಎರಡಿವೆ. ಒಂದು ಮೃಡನ ಒಡಲು ಮತ್ತೊಂದು ಆತನಿಂದಲೇ ಸೃಷ್ಟಿಯಾದ ಮನೋಮಯವಾದ ಒಡಲು; ಈ ಒಡಲು ಸಾಕಾರ ಒಡಲಿನ ಸಂಗಮಾಡಿ ತಮ್ಮನ್ನು ಸೃಷ್ಟಿ ಮಾಡಿದ ಒಡೆಯನನ್ನೇ ಮರೆತಿವೆ.

ಮನೋಮಯವಾದ ಒಡಲು ತನ್ನನ್ನು ಒಡಲನ್ನು ಸೃಷ್ಟಿ ಮಾಡಿದ ಒಡಲೊಡೆಯನ ಸಂಗ ಮಾಡಬೇಕಿತ್ತು. ಆದರೆ ಒಡಲ ಸಂಗ ಮಾಡಿರುವುದರಿಂದ ಸಾಕಾರವನ್ನೇ ಮೆಚ್ಚಿಕೊಂಡಿದೆ. ಆತ ನಿರಾಕಾರ. ಮನೋಮಯವಾದ ಒಡಲು ಕೂಡಾ ನಿರಾಕಾರ. ಮನೋಮಯವಾದ ಒಡಲು ನಿರಾಕಾರನಾದ ಒಡಲೊಡೆಯನ ಸಂಗ ಮಾಡುವುದೊಂದೆ ತಡ ಮೃಡನೇ ತಾನಾಗುತ್ತದೆ. ಮೃಡನ ಒಡಲಿಗೆ ಆಸರೆಯಾದ ನೀರಕಂಬ ನೀರಾಗುತ್ತದೆ.

ಸಾಕಾರವೇ ಸತ್ಯ ಎಂದು ಅಹಂಕಾರದಿಂದ ಮೆರೆದ ಹಿರಣ್ಯಕಶ್ಯಪ ತಾನು ಪುಡಿ ಪುಡಿ ಮಾಡಿದ ಕಂಬದಲ್ಲಿ ಒಡಲೊಡೆಯ ಒಡಮೂಡಿದಂತೆ ! ತಾನೇ ಸತ್ಯ ಎಂದು ತಿಳಿದ ಒಡಲಲ್ಲಿಯೇ ಒಡಲೊಡೆಯನಿದ್ದಾನೆ. ಆ ಒಡೆಯ ಸೃಷ್ಟಿ ಮಾಡಿದ ಮನೋ ಒಡಲೆಂಬ ಆತನ ಒಡತಿಯೂ ಇದ್ದಾಳೆ. ಇವರಿಬ್ಬರ ದರುಶನ ಒಡಲಿಗಾದರೆ ಸಾಕು ಅಹಂಕಾರದ ಒಡಲು ನೀರಾಗುತ್ತದೆ.

ಒಡಲೊಡೆಯನಿಂದ ಹುಟ್ಟಿದ ವಸ್ತುವಿಗೆ ಒಡೆಯನ ಪರಿಚಯವಾಯಿತು. ಒಡೆಯ ಬಯಲು. ಆತನಿಂದ ಹುಟ್ಟಿದ ಒಡಲು ಬಯಲು !

ಬಯಲಲ್ಲಿದ್ದ ಆಮ್ಲಜನಕವೂ ಬಯಲು; ಬಯಲಲ್ಲಿದ್ದ ಜಲಜನಕವೂ ಬಯಲು. ಇವೆರಡೂ ಒಂದಾದದ್ದು ಬಯಲ ದೇವನ ಸಹಾಯದಿಂದ. ಜಲವಾಗಿದ್ದು ಆತನಿಂದಲೇ. ಜಲ ಗಟ್ಟಿಯಾಗಿ ಭೂಮಿಯಾಗಿದ್ದು ಕೂಡಾ ಬಯಲದೇವನ ಸಹಕಾರದಿಂದಲೇ. ಭೂಮಿಯ ಮೇಲೆ ಕಾಣಿಸಿಕೊಂಡ ಜಲರಾಶಿ, ಜಲಚರ, ಉರುಗ ಪ್ರಾಣಿ ಪಶು ಪಕ್ಷಿಸಂಕುಲ ಗಿಡ ಮರ ಬಳ್ಳಿ ಸಕಲ ಸೃಷ್ಟಿ ಕೂಡ ಬಯಲಿನಿಂದಲೇ. ಆತನ ಸೃಷ್ಟಿಯಿಂದಾದ ಜಲದಿಂದಲೇ. ಸಾಕಾರವನ್ನು ನಿರಾಕರಿಸಿ ನಿರಾಕಾರನಾದ ನಿರವಯನೂ ಆತನೇ. ನಿರಾಕಾರವನ್ನು ಬಿಟ್ಟು ಆಕಾರಕ್ಕೆ ಒಳಗಾದವನೂ ಅವನೇ. ಅವನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ಅವನೇ ನೋಡಬೇಕೆಂದು ಬಯಸಿ ಒಡಲಾದ. ಇದು ಆತನ ಸಾಕಾರದ ಅವತಾರ. ಸಾಕಾರವನ್ನು ನಿಃಕರಿಸಿ, ನಿರಾಕಾರ ಒಡಲಾಗಿ ಒಡಲೊಳಗೆ ನಿಂತ. ಇದು ಒಡಲೊಡೆಯನ ನಿರಾಕಾರದ ಅವತಾರ. ಇವೆರಡನ್ನೂ ತಿಳಿಯುವ ಮನೋ ಒಡಲ ಒಡಲೊಡತಿಯನ್ನು ಒಡಲೊಳಗೆ ಸೃಷ್ಟಿ ಮಾಡಿದ. ಇದು ಕೂಡಾ ಆತನ ನಿರಾಕಾರದ ಅವತಾರ. ಒಡಲೊಡತಿ ಒಡಲೊಡೆಯನನ್ನು ಒಡಲಲ್ಲೇ ಕೂಡಿದಾಗ ಒಡಲು ನೀರಾಗುವುದು.

ಒಡಲು ಬರೀ ನೀರಲ್ಲ ; ನಿರಾಕಾರ; ನಿರಾಮಯರಾದ ಸತಿಪತಿಗಳಿಬ್ಬರೂ ಈಜಾಡುವ ಕಡಲು; ಪಾಲ್ಗಡಲು. ವಿಷ್ಣು ಲಕ್ಷ್ಮಿಯ ವಾಸಸ್ಥಾನ. ಬ್ರಹ್ಮ ಸರಸ್ವತಿಯ ವಾಸಸ್ಥಾನ. ಶಿವ ಪಾರ್ವತಿಯರ ವಾಸ ಸ್ಥಾನ. ಆಕಾರವುಳ್ಳ ಸಿದ್ಧ ದೇವರ ದೇವನೇ ಆದ ಕಪಿಲಸಿದ್ಧ

ಮಲ್ಲಿನಾಥಯ್ಯನ ವಾಸ ಸ್ಥಾನ; ಅದು ಕೈಲಾಸ!

**392**

**ಕಣ್ಬೇಟವೆಂಬ ಕಾನನದಲ್ಲಿ ಅರಸುತ್ತಿದ್ದೇನೆ.**
**ಭಕ್ತಿಯೆಂಬ ಹೊಮ್ಮಿಗವ ಸೋವುತ್ತಿದ್ದೇನೆ.**
**ಲಿಂಗತ್ರಯವೆಂಬ ಬಲೆಗಾಗಿ ಮಿಗ ಸಿಕ್ಕಿ ಬಲೆ ಹರಿದೊಂದಾದಡೆ,**
**ಎಯ್ದಿದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ಪರಮ ಮುಕ್ತಿ ರಾಜ್ಯವನು.**

ಮನಸ್ಸು ತನಗೆ ಬೇಕಾದ ಬೇಟೆಯನ್ನು ಕಣ್ಣನ್ನೇ ಬಲೆಯನ್ನಾಗಿಸಿಕೊಂಡು ಬುದ್ಧಿಯಿಂದ ತನುವಿನ ಮೂಲಕ ತಿನ್ನುತ್ತದೆ. ಸರಿಯಾದ ಪದಾರ್ಥಕ್ಕೆ ಬಲೆ ಬೀಸಿ ಹಿಡಿಯಬೇಕೆಂಬ ಅರಿವು ಕಣ್ಣಿಗೆ ಇಲ್ಲ. ಎಲ್ಲಿ ನೋಡಿದರೂ ಕಾಡು. ತನಗೆ ಬೇಕಾದ ಪದಾರ್ಥಗಳೇ ಹರಿದಾಡುತ್ತಲಿವೆ. ಅದನ್ನು ಹಿಡಿದು ಉಣ್ಣುವುದರಲ್ಲಿಯೇ ಹಂದಿ ಮಗ್ನವಾಗಿದೆ.

ಕಾಡಹಂದಿಗೆ ಹೇಗೆ ಗೊತ್ತಾಗಬೇಕು? ಯಾವುದನ್ನು ಬೇಟೆಯಾಡಬೇಕು; ಯಾವುದನ್ನು ಬೇಟೆಯಾಡಬಾರದು ಎಂದು ತನ್ನ ಬಲೆಗೆ ಬಿದ್ದದ್ದೆಲ್ಲಾ ಭುಂಜಿಸುವುದೇ ಅದರ ಕೆಲಸವಾಗಿದೆ.

ಒಂದು ಕಣ್ಣಲ್ಲಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗಗಳು ಭರಿತವಾಗಿವೆ. ಸಪ್ತವ್ಯಸನಗಳು, ಅಷ್ಟಮದಗಳು ಭರಿತವಾಗಿವೆ. ನೋಡಿ ಕಾಮದ ಬಲೆ ಬೀಸುತ್ತದೆ. ಸಿಕ್ಕರೆ ಹರಿದು ತಿನ್ನುತ್ತದೆ. ಬೇಟೆ ಸಿಗದಿದ್ದಲ್ಲಿ ಕ್ರೋಧದಿಂದ ಇಡೀ ಕಾಯವೆಂಬ ಕಾಡು ಗಡಗಡನೆ ತತ್ತರಿಸುವಂತೆ ಒದರುತ್ತದೆ. ಬೇಟೆಯ ಬಲೆಯಲ್ಲಿ ಬಿದ್ದ ವಸ್ತು ಮತ್ತಾರಿಗೂ ಸಿಗದಂತೆ ಲೋಭದಿಂದ ಬಚ್ಚಿಡುತ್ತದೆ. ಸಿಕ್ಕವಸ್ತುವನ್ನೇ ಮೋಹಿಸಿ ಮೋಹಿಸಿ ಕಾಲಕಳೆಯುತ್ತದೆ. ಅಂತಹ ವಸ್ತು ತನ್ನಲ್ಲಿ ಬಿಟ್ಟು ಮತ್ತಾರಲ್ಲಿಯೂ ಇಲ್ಲವೆಂಬ ಮದ ಅದಕ್ಕೆ. ಮತ್ತೊಬ್ಬರಲ್ಲಿ ಇದ್ದದ್ದು ಕಂಡರೆ ಮತ್ಸರ ಅದಕ್ಕೆ.

ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಕಣ್ಣ ಮೂಲಕ ಸೃಷ್ಟಿ ಮಾಡಿಕೊಂಡು ವಿಲವಿಲನೆ ಒದ್ದಾಡುತ್ತದೆ. ಸುಖವು ಕಣ್ಣಲ್ಲಿಯೇ ಸೃಷ್ಟಿಯಾಗುತ್ತದೆ; ದುಃಖವೂ ಕಣ್ಣಲ್ಲಿಯೇ ಸೃಷ್ಟಿಯಾಗುತ್ತದೆ. ಕಣ್ಣಲ್ಲಿರುವ ಅಜ್ಞಾನದ ಬಲೆಯ ದೋಷ ಎಂದು ಕಣ್ಣಿಗೆ ಗೊತ್ತಾಗುವುದಿಲ್ಲ.

ಸದಾ ಬೇಟೆಯನ್ನು ಹುಡುಕುವುದೇ ಕಣ್ಣಿನ ಕೆಲಸ. ಬಲೆಯನ್ನು ಹಿಡಿದು ಬಚ್ಚಿಟ್ಟುಕೊಂಡ ಗೂಡು ನೋಡುವುದೇ ಅದರ ಕೆಲಸ. ನೋಡಿ ನೋಡಿ ಕಣ್ಣು ಸೋತರೂ; ನೋಡುವ ಕಣ್ಣಿಗೆ ಪೊರೆ ಬಂದು ಕಣ್ಣು ಕಾಣದಂತಾದರೂ ಕಣ್ಣ ಆಲೋಚನೆ ಮಾಯುವುದಿಲ್ಲ.

ಅರಿವಿನ ಭಕ್ತಿರಸ ಕಣ್ಣಲ್ಲಿ ಹುಟ್ಟಿದಾಗ ಅಜ್ಞಾನದ ಪೊರೆ ತಂತಾನೆ ಹರಿಯುತ್ತದೆ. ಕಣ್ಣು ಅರಿವಿನ ಕಣ್ಣಲ್ಲಿ ಬೆರೆತು ಆ ಅರಿವಿನ ಕಣ್ಣೆ ತಾನಾಗುತ್ತದೆ. ಕಣ್ಣು ಕಣ್ಣಿಗೆ ಕನ್ನಡಕದಂತೆ ಉಪಕರಣವಾಗುತ್ತದೆ.

ಕಣ್ಣು ಎರಡಿದ್ದರೂ ದೃಶ್ಯ ಒಂದೇ. ಹೀಗಾಗಿ ಕಣ್ಣನ್ನು ಒಂದೇ ಎನ್ನಲು ಕೂಡಾ ಅಡ್ಡಿಯಿಲ್ಲ. ಒಂದೇ ಕಣ್ಣಲ್ಲಿ ಎರಡು ದೃಶ್ಯಗಳು ಇವೆ. ಸದಾ ಅಜ್ಞಾನದ ಬೇಟೆಯಾಡಲು ಸಜ್ಜಾಗಿ ನಿಂತಿರುವುದು ಒಂದು ಕಣ್ಣಾದರೆ ಅದರ ಅಜ್ಞಾನದ ಕಾಯಕವನ್ನು ತಡೆದು ಮೈದಡವಿ ಎಚ್ಚರಿಸುವ ಕಣ್ಣು ಮತ್ತೊಂದು. ಕಣ್ಣು ಈ ಎರಡೂ ದೃಶ್ಯಗಳಿಗೆ ಉಪಕರಣವಾಗಿದೆ. ಹೀಗಾಗಿ

ಎರಡು ದೃಶ್ಯಗಳುಳ್ಳ ಎರಡು ಕಣ್ಣುಗಳು ಕಾಣುವ ಒಂದು ಕಣ್ಣಿನಲ್ಲಿ ಸಂಗಮವಾಗಿವೆ.

ಪ್ರತಿ ಕಾಯಕ್ಕೂ ಮೂರು ಕಣ್ಣುಗಳಿವೆ. ಕಾಣುವ ಎರಡೂ ಕಣ್ಣುಗಳಿಗೆ ದೃಶ್ಯ ಒಂದೇ. ಅದೂ ಅಜ್ಞಾನದ ದೃಶ್ಯ ಮಾತ್ರ. ಈ ಅಜ್ಞಾನದ ದೃಶ್ಯದಿಂದ ಬಲೇ ಬೀಸಿ ಹಿಡಿಯುವ ಕೆಲಸದಲ್ಲಿ ಮಗ್ನವಾಗಿದೆ. ಅದು ಅಜ್ಞಾನ. ನೀನು ನೋಡುವುದೆಲ್ಲ ಹಾದರ ಒಮ್ಮೆ ವಸ್ತುವಿನ ಸತ್ಯದ ಮೇಲೆ ನಿನ್ನ ಬಲೆ ಬೀಸು; ಆ ವಸ್ತುವನ್ನು ಒಮ್ಮೆ ನೋಡು ಎಂದು ದೃಶ್ಯದಿಂದಲೇ ಅರಿವಿನ ದೃಶ್ಯ ಪಾಠ ಮಾಡಿದರೂ ಆ ದೃಶ್ಯವನ್ನು ನೋಡುವ ತವಕ ಒಮ್ಮೆಯೂ ಅಜ್ಞಾನದ ಕಣ್ಣಿಗೆ ಹುಟ್ಟುವುದೇ ಇಲ್ಲ.

ತನುವನ್ನು ನೋಡಿ ಕಾಮದ ಬಲೆ ಬೀಸಿ ಹಾದರಕ್ಕೊಳಗಾದ ಕಣ್ಣು ತನುವನ್ನು ಅರಿವಿನಿಂದ ನೋಡುವುದಿಲ್ಲ. ಚರ್ಮ ಹೆಣ್ಣಲ್ಲ, ಗಂಡೂ ಅಲ್ಲ. ಆದರೆ ಹೆಣ್ಣೆಂದು ಗಂಡೆಂದು ನೋಡಿ ಕಾಮದ ಬಲೆ ಬೀಸುತ್ತದೆ. ನೋಡುವ ಕಣ್ಣು ಕೂಡಾ ಹೆಣ್ಣೂ ಅಲ್ಲ; ಗಂಡು ಕೂಡಾ ಅಲ್ಲ. ಆದರೂ ಗಂಡು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡಿ ಕಾಮದ ಬಲೆ ಬೀಸುತ್ತದೆ.

ಅಜ್ಞಾನದ ಬಲೆ ಹರಿದು ಮೂರು ಒಂದಾದಡೆ ಮುಕ್ಕಣ್ಣನೇ ತಾನಾಗುತ್ತಾನೆ. ನೋಡುವ ಸತ್ಯವನ್ನೇ ನೋಡುತ್ತಾನೆ. ಮಿಕ ಸಿಕ್ಕಿ ಬಲೆ ಹರಿದು ಒಂದಾಗುತ್ತದೆ. ಆದರೂ ನೋಡಲು ಸಾಧ್ಯವಾಗುತ್ತಿಲ್ಲ.

ಅಜ್ಞಾನದ ನೇತ್ರದ ಪೊರೆ ಹರಿದು ಹಾಕಲು ಜ್ಞಾನದ ಕಣ್ಣಿನ ಅರಿವಿನ ಅಗ್ನಿ ಚಿಮ್ಮುತ್ತಿಲ್ಲ. ಅರಿವಿನ ಅಗ್ನಿಯ ನೇತ್ರಕ್ಕೆ ಅಜ್ಞಾನದ ಬಲೆಯು ಬೀಳುತ್ತಿಲ್ಲ. ಜ್ಞಾನದ ಬಲೆಯನ್ನು ಬಳಕೆ ಮಾಡಿಕೊಳ್ಳಲು ಸಾಧ್ಯವಾಗದೆ ಮಿಕದ ಬಾಯಿಗೆ ಬಿದ್ದ ಕಾಯ ವಿಲವಿಲನೆ ಒದ್ದಾಡುತ್ತಲಿದೆ. ಮಿಕ ಸಿಕ್ಕಿ ಬಲೆ ಹರಿದು ಒಂದಾದಡೆ ಪರಮ ಮುಕ್ತಿಯ ರಾಜ್ಯ ತನ್ನದೇ.

**393**

**ಕತ್ತಲೆಯ ಕಾನನದಿ ಇತ್ತರದ ಮಧ್ಯದಲಿ**
**ಸುತ್ತಿಪ್ಪುದದು ಅಖಿಲ ಲೋಕಕಾಗಿ.**
**ಬೇರು ನಾಶವು ಆಗಿ, ದೀಪ್ತಿ ಅತಿ ಪ್ರಜ್ವಲ್ಯ**
**ಮೂಲಾಧಾರಕ್ಕೆ ಮುನ್ನ ಬಸವಣ್ಣನು.**
**ಬಸವಣ್ಣನ ಕರುಣ ಸದಮಲಜ್ಞಾನಕ್ಕೆ**
**ದಸೆ ನಾನು ಆದೆನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕತ್ತಲೆಯ ಕಾಯ ಕಾಯವನ್ನು, ಕಾಯಕ್ಕೆ ಜನ್ಮ ಕೊಟ್ಟ ಕಾಯವನ್ನು ಮುತ್ತಿಗೆ ಹಾಕಿ ಇಡೀ ಲೋಕದ ಕಾಯಗಳನ್ನು ಕಾಡುತ್ತಲಿದೆ. ಎರಡು ಕಾಯಗಳಿಗೆ ಮುತ್ತಿಗೆ ಹಾಕಿದ ಕಾಯದ ಮಾಯವನ್ನು ಬಿಡಿಸಿಕೊಳ್ಳಲು ಕಾಯಕ್ಕೆ ಸಾಧ್ಯವಾಗುತ್ತಿಲ್ಲ.

ಕಾಯವನ್ನು ಆವರಿಸಿದ ಕಾಯದ ಮಾಯೆಯ ಬೇರು ಬಲು ಆಳವಾಗಿ ಹಬ್ಬಿವೆ. ಅದರ ಬೇರು ನಾಶ ಮಾಡಿಕೊಳ್ಳಲು ಕಾಯದ ಮಾಯೆಯೇ ಸಜ್ಜಾಗಬೇಕು. ತನ್ನ ಬೇರು ತಾನೇ ಕಿತ್ತಿಕೊಳ್ಳಲು ಸಿದ್ಧವಾಗುವುದೊಂದೇ ತಡ ಅರಿವಿನ ದೀಪ್ತಿ ಪ್ರಜ್ವಲಮಾನವಾಗಿ ಇಡೀ ಕಾಯವನ್ನು ಬೆಳಗುವುದು.

ಕಾಯಕ್ಕೂ ಕಾಯದ ಮಾಯಕ್ಕೂ ಜ್ಞಾನದ ಸುಳುಹು ನೀಡಿದವರೇ ಬಸವರಸರು. ಜ್ಞಾನಲೋಕಕ್ಕೆ ಬಸವರಸರ ಕರುಣೆ ಅಪಾರವಾದುದು.

ಬುದ್ಧ, ಮಹಾವೀರ, ಪೈಗಂಬರ, ಕ್ರಿಷ್ಣ, ಕ್ರಿಸ್ತರ ಸೂತ್ರವನ್ನು ಹಿಂದಿಕ್ಕಿದ ಬಸವರಸರ ಸೂತ್ರ ಸದಮಲಜ್ಞಾನಕ್ಕೆ ದಸೆ ನೀಡಿತು. ಹೀಗಾಗಿ ಏಳುನೂರಾ ಎಪ್ಪತ್ತು ಜ್ಞಾನಿಗಳು ಏಕಕಾಲಕ್ಕೆ ಜನ್ಮ ತಳೆಯಲು ಸಾಧ್ಯವಾಯಿತು. ಇದು ಜ್ಞಾನ ಲೋಕದ ಪ್ರಪಂಚವನ್ನೇ ಬೆರಗುಗೊಳಿಸುವ ಮಾತು.

ಬಸವಣ್ಣನ ಸೂತ್ರದ ದೀಪ್ತಿಯ ಬೆಳಕಿಗೆ ಅಜ್ಞಾನದ ಬೇರು ಸುಟ್ಟು ಕಾಯ ಪ್ರಜ್ವಲ್ಯಮಾನ್ಯವಾಗಿ ಬೆಳಗಿತು. ಮೂಲಾಧಾರಕ್ಕೆ ಮುನ್ನ ಬಸವಣ್ಣ.

ಬಸವಣ್ಣನ ಕರುಣದಿಂದ ಸದಮಲ ಜ್ಞಾನದ ರಸಾಪಾನ ಮಾಡುವ ದಸೆ ನನಗೆ ಲಭಿಸಿತು. ಹೀಗಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನಾಗಲು ಕಾರಣವಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಬ್ರಹ್ಮಜ್ಞಾನಿಯಾಗುವ ಬಸವಣ್ಣನ ಸೂತ್ರದ ಮಾಹಿತಿಯನ್ನು ಓದುಗರಿಗೆ ಕೂಡಾ ನೀಡಿದ್ದಾರೆ.

**394**

**ಕತ್ತಲೆಯೊಳಗಡಗಿದ ನೆಳಲಿನ ಬೀಜ**
**ಬಿತ್ತದ ಮುನ್ನ ಮಾಮರನಾಯಿತ್ತು .**
**ತನ್ನ ನೆಳಲೆಲ್ಲಾ ಬೆಳದಿಂಗಳು.**
**ನೋಡ ಹೋದವರ ಕಣ್ಣೆಲ್ಲಾ ಒಡೆದವು.**
**ಉಲುಹಿದ್ದೂ ಉಲುಹಿಲ್ಲ ; ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ,**
**ಆ ಮರದ ಹೋಟೆಯೊಳಗಣ ಮಧುವಿನಂತಿದ್ದನು.**

ಕತ್ತಲೆಯನ್ನು ಹೆಣೆದುಕೊಂಡು ಹೊರಬಂದ ನೆಳಲಿನ ಬೀಜ, ಬಿತ್ತುವ ಮುನ್ನ ಮಾಮರನಾಯಿತ್ತು . ತನ್ನ ನೆಳಲೆಲ್ಲಾ ಬೆಳದಿಂಗಳು. ಬಿಸಿಲ ಬೆಳಕಿನ ಕಿರಣಗಳೇ ಚಂದಿರನ ಮೇಲೆ ಬಿದ್ದು ಕತ್ತಲಲ್ಲಿ ಬೆಳಗುವ ಬೆಳದಿಂಗಳಂತೆ. ಇದು ಬೆಳಕಿನ ಆಟ. ಬೆಳಕಿನ ಕತ್ತಲಿನ ಆಟವೇ ವಿಚಿತ್ರ!

ಬೆಳಕು ಕತ್ತಲನ್ನು ನುಂಗಿ ಬೆಳಗುವುದು ಕಾಣುತ್ತದೆ. ಬೆಳಗಿದ ಬೆಳಕನ್ನೇ ನುಂಗಿ ಕತ್ತಲು ಆವರಿಸುವುದು ಕೂಡಾ ಗೋಚರಕ್ಕೆ ಬರುತ್ತದೆ. ತನುವಿನ ಕತ್ತಲಲ್ಲೂ ಬೆಳಗುವ ಬೆಳಕು, ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕು ಮಾತ್ರ ಕಾಣುವುದಿಲ್ಲ. ಕತ್ತಲು ನುಂಗಿ ಬೆಳಗುವ ಕಣ್ಣಿಗೆ ಮಾತ್ರ ಸಕಲವೂ ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕೇ ಕಾಣುತ್ತದೆ.

ಬೆಳಕಿನ ಕಿರಣಗಳೇ ಕತ್ತಲನ್ನು ಸೃಷ್ಟಿ ಮಾಡಿತು. ಬೆಳಕಿನಿಂದ ಹುಟ್ಟಿದ ಕತ್ತಲೇ ಬೆಳಕನ್ನು ನುಂಗಿ ಬೆಳಕು ಕಾಣದಂತೆ ಮಾಡಿತು. ತಾನು ಬೆಳಕಿನಿಂದ ಹುಟ್ಟಿದ ಕೂಸು ಎನ್ನುವುದನ್ನು ಕೂಡಾ ಕತ್ತಲು ಮರೆತು ಹೋಯಿತು. ಕತ್ತಲೇ ಕತ್ತಲಿಗೆ ವಿಧಿಯಾಗಿ ಕಾಡಿತು.

ಬೆಳಕು ಅರ್ಧದಿನ ಬೆಳಗಿ ತನ್ನ ಶಿಫ್ಟ್ ಮುಗಿಸುವ ಹೊತ್ತಿಗೆ, ಕತ್ತಲ ಶಿಫ್ಟ್ ಪ್ರಾರಂಭವಾಗುತ್ತದೆ. ಕತ್ತಲನ್ನು ಬೆಳಗಿದ ಬೆಳಕನ್ನೇ ತನ್ನ ಗರ್ಭದಲ್ಲಿ ಇಟ್ಟುಕೊಂಡು ತನ್ನ ಕರಾಳ ರಾತ್ರಿಯ ಪರದೆಯನ್ನು ಲೋಕದ ಕಣ್ಣಿಗೆ ಹೊದಿಸಿ ತನ್ನ ಶಕ್ತಿಯನ್ನು ಪ್ರದರ್ಶಿಸುತ್ತದೆ.

ಸಿದ್ಧರಾಮ ಶಿವಯೋಗಿಗಳು ಈ ಎರಡನ್ನೂ ಬಿಟ್ಟು ಹೇಳಿದ ಕತ್ತಲೇ ಬೇರೆ. ಇದು ಬೆಳಗುವುದಿಲ್ಲ. ಇದರ ಬೀಜವೂ ಕತ್ತಲು. ಬೆಳೆದು ಮಾಮರವಾಗಿದೆ. ಅದು ಕತ್ತಲೆ ; ಹೊರಚೆಲ್ಲುವ ಬೀಜಗಳು ಕೂಡಾ ಕತ್ತಲೆ ಆಗಿವೆ.

ಕಪ್ಪನೆಯ ಮೊಟ್ಟೆ; ಅದರಲ್ಲಿ ಅಡಗಿದ ಮರಿ ಮಾತ್ರ ಬೆಳಕು. ಬೆಳಗಿಂಗೆ ಬೆಳಗಾಗಿ

ಬೆಳಗುವ ಬೆಳಕು. ತಾನೇ ಮೊಟ್ಟೆಯನ್ನು ಒಡೆದು ಹೊರಬರಲು ಸಾಧ್ಯವಿಲ್ಲ. ಮೊಟ್ಟೆಯ ನೆಳಲೇ ಬೆಳಗುವ ಮರಿಯತ್ತ ಪ್ರಯಾಣ ಬೆಳೆಸಿ ಅದರ ಸಂಗ ಮಾಡಿದಾಗ ಬೆಳಗುವ ಮರಿ ಕತ್ತಲನ್ನು ನುಂಗಿ ಹೊರಬಂದು ಬೆಳಗಲು ಶುರು ಮಾಡುತ್ತದೆ.

ನೋಡ ಹೋದವರ ಅಜ್ಞಾನದ ಕತ್ತಲ ಕಣ್ಣುಗಳೆಲ್ಲ ಒಡೆದು ಹೊರಬರುತ್ತವೆ. ಕತ್ತಲೆಯೊಳಡಗಿದ ನೆಳಲಿನ ಬೀಜದಂತೆ ಅದರ ಹೋಟೆಯೊಳಗಣ ಅರಿವಿನ ಮಧುವಿನ ತೆರನಂತೆ ಕಪಿಲಸಿದ್ಧ ಮಲ್ಲಿಕಾರ್ಜುನದೇವ ಅಡಗಿ ಕುಳಿತಿದ್ದಾನೆ.

ಅಮೂರ್ತ ರೂಪದ ಕಥನವಲ್ಲದ ಶರಣರ ಈ ಕಥನವನ್ನು ತನ್ನ ತೆಕ್ಕೆಗೆ ತೆಗೆದುಕೊಂಡು, ನೆಳಲ ಸಹಾಯದಿಂದ ಬೆಳಕ ಕಂಡವನೇ ಜಾಣ. ಅವನು ಜಾಣರ ಜಾಣ.

**395**

**ಕಥನ ಬ್ರಹ್ಮಾಂಡದಲ್ಲಿ ಮಥನಿಸುವ ಭೇದವನು**
**ಸುಚಿತ್ತದಿಂದವೆ ಕಂಡೆ.**
**ಸಾಕ್ಷಾತ್ ಉರುತರ ಕೈವಲ್ಯ ಪರಮ ಸೀಮೆಯ ಮೀರಿ**
**ಒಡಲಿಪ್ಪುದದು ನಿತ್ಯ ಸಾನಂದದಾ ಆನಂದ ಸ್ಥಾನದಲ್ಲಿ.**
**ಆನಿಪ್ಪ ಲೋಕದಲ್ಲಿ ತಾನಿಪ್ಪ**
**ನಿಷ್ಕಳದ ಪುಷ್ಕರದಲ್ಲಿ ಸ್ವಾನುಭಾವ ದೀಕ್ಷೆ**
**ನಾನಿಪ್ಪ ಸಂಯೋಗ ಮೂರರ ಮೇಲಿಪ್ಪ**
**ಮುಕ್ತ್ಯಾಂಗನೆಯರ ಕೂಟ**
**ನೀನು ನಾನಾದೆ ಕಪಿಲಸಿದ್ಧ ಮಲ್ಲೇಶ್ವರ.**

ಬ್ರಹ್ಮಾಂಡವು ಪಿಂಡಾಂಡದಲ್ಲಿ ಸಂಗಮವಾಗಿದ್ದರೂ ಅದರ ಕಥನವೇ ವಿಚಿತ್ರ. ಬ್ರಹ್ಮನದು ಒಂದು ಲೋಕ ; ವಿಷ್ಣುವಿನದು ಒಂದು ಲೋಕ ; ಮಹೇಶ್ವರನದು ಒಂದು ಲೋಕ ಹೀಗೆ ಕಥನ ಮೂರು ಲೋಕಗಳನ್ನಾಗಿ ವಿಂಗಡಿಸಿ ಅನಂತ ಲೋಕಗಳ ಹೆಸರಿನೊಂದಿಗೆ ವಿಂಗಡಿಸಿ ನೋಡುತ್ತದೆ. ಈ ಕಥನ ಸೃಷ್ಟಿಯಾದದ್ದೇ ಮನದಿಂದ. ಅದು ಪುನಃ ತಾನೇ ನಿರ್ಮಿಸಿದ ಅನಂತ ಲೋಕಗಳನ್ನು ಮುರಿದು ತನ್ನ ಭ್ರಮೆಯನ್ನು ಕಳೆದುಕೊಂಡು ತನುವಿನ ಲೋಕದಲ್ಲಿಯೇ ಬ್ರಹ್ಮನಾಗಿ ನಿಲ್ಲುತ್ತದೆ. ಆಗ ಭ್ರಮೆಯೇ ಬ್ರಹ್ಮನಾಗಿ ವಿಷ್ಣುವಿನ, ಮಾಹೇಶ್ವರನ ಸಾಕ್ಷಾತ್ಕಾರವಾಗುತ್ತದೆ.

ಸಕಲ ಕಥನಗಳನ್ನು ತನುವಿನಲ್ಲಿಯೇ ತನುವಿನ ಮೂಲಕ ಮಥನಿಸಿ ನೋಡಿದಾಗ ಮನಕ್ಕೆ ಕಥನವಲ್ಲದ ತನುವಿನ ಕಥನ ಗೋಚರಕ್ಕೆ ಬರುತ್ತದೆ. ಚಿತ್ತ ಸುಚಿತ್ತವಾದಾಗಲೇ ಇದು ಸಾಧ್ಯವಾಗುತ್ತದೆ.

ತನುವಿನ ಚಿತ್ತ ತನುವಿನ ಮೇಲೆ ನೆಟ್ಟಾಗ ಅದು ಹೆಣ್ಣಾಗಿ ಗಂಡಾಗಿ ಕಾಣುತ್ತದೆ. ಮನವೇ ತನುವಿಗೆ ಹೆಣ್ಣು ಗಂಡಿನ ಪಾತ್ರ ಧರಿಸಿ ಭ್ರಮಾಲೋಕಕ್ಕೆ ತಳ್ಳುತ್ತದೆ. ಮನಕ್ಕೆ ಅರಿವಾದಾಗ ಮನದ ಚಿತ್ತ ಅರಿವೆಂಬ ಗುರುದೇವನಲ್ಲಿ ಲೀನವಾಗಿ ಸುಚಿತ್ತವಾಗುತ್ತದೆ. ಆ ಸುಚಿತ್ತದಿಂದಲೇ ನೋಡಿದಾಗ ಕಾಯವೇ ಕೈವಲ್ಯವಾಗುತ್ತದೆ. ನಿತ್ಯ ಸಾನಂದದ ಆನಂದ ಸ್ಥಾನದಲ್ಲಿ ತಾನಿಪ್ಪುದು ಸುಚಿತ್ತಕ್ಕೆ ತನಗೆ ತಾನೇ ಭಾಸವಾಗುತ್ತದೆ.

ಚಿತ್ತ ಸುಚಿತ್ತವಾದ ಸ್ವಾನುಭಾವದ ದೀಕ್ಷೆ ತನಗೆ ತಾನೆ ತನ್ನಲ್ಲಿ ಉಂಟಾಗುತ್ತದೆ.

ತನುವಿನ ಮೂಲಕ ಸಾತ್ವಿಕನಾಗಿ ಅಭಿನಯಿಸಿದ್ದು ಮನವೇ. ರಾಜಸಿಗನಾಗಿ

ಅಭಿನಯಿಸಿದ್ದು ಕೂಡಾ ಮನವೆ. ತಾಮಸಿಗನಾಗಿ ಅಭಿನಯಿಸಿದ್ದು ಕೂಡ ಮನವೇ ಆಗಿದೆ. ಈ ಎಲ್ಲಾ ಆಲೋಚನೆಗಳನ್ನು ಮರೆತು ಶ್ರೀಮಂತನಾಗಿ ಬಡವನಿಗೆ ಭಿಕ್ಷೆ ನೀಡಿದ್ದು ಕೂಡಾ ಮನವೇ. ಬಡವನಾಗಿ ಶ್ರೀಮಂತನಿಂದ ದಾನ ಪಡೆದದ್ದು ಕೂಡಾ ಮನವೇ.

ಲೋಹವನ್ನು ಮರೆತು ಚಿನ್ನವೆಂದು ಹೆಸರಿಸಿದ್ದು ಕೂಡಾ ಮನವೇ. ಚಿನ್ನದ ಕಿರೀಟಕ್ಕಾಗಿ ಯುದ್ಧ ಮಾಡಿ ರಾಜನೆನ್ನಿಸಿಕೊಂಡದ್ದು ಕೂಡಾ ಮನವೇ. ಪ್ರಧಾನಿಯಾಗಿ, ಕಾಲಾಳಾಗಿ, ಸೇನಾಧಿಪತಿಯಾಗಿ, ಪ್ರಜೆಯಾಗಿ, ಹೆಣ್ಣಾಗಿ, ಗಂಡಾಗಿದ್ದು ಕೂಡಾ ಮನವೇ ಆಗಿದೆ. ಮನ ತನುವಿಗೆ ಹಲವಾರು ವೇಷ ಹಾಕಿದರೇನು ತನು ಮಾತ್ರ ಒಂದೇ. ಅದರ ವೇಷ ಅನಂತ. ಅದರ ಪಾತ್ರಗಳೂ ಅನಂತ. ಅದರ ಕಥನಗಳೂ ಅನಂತ. ಏಕೆಂದರೆ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ತನುವನ್ನು ಆವರಿಸಿದ ಮನ ಮರೆತುದಕ್ಕಾಗಿ ತನುವಿನಲ್ಲಿಯೇ ಅನೇಕ ಕಥನಗಳು ಉಂಟಾದವು. ಇದು ಮನ ಮತ್ತು ಚಿತ್ತದ ಸೃಷ್ಟಿ; ಅದರ ಆಟ !

ಮನಕ್ಕೆ ಅರಿವೆಂಬ ಘನ ಪರಿಚಯವಾದ ಕೂಡಲೇ ಅದು ಘನಮನವಾಗುತ್ತದೆ. ಚಿತ್ತ ಸುಚಿತ್ತವಾಗುತ್ತದೆ. ಚಿತ್ತ ಮನಗಳು ಇದ್ದ ಕಾಯವೇ ಕೈವಲ್ಯವಾಗುತ್ತದೆ.

ಮನ ಮತ್ತು ಚಿತ್ತಕ್ಕೆ ಸ್ವಾನುಭವದ ದೀಕ್ಷೆಯಾಗಿ ಮುಕ್ಯಾಂಗನೆಯಾಗುತ್ತದೆ. ಕಾಯ ತ್ರಿಕೂಟ ಸಂಗಮವಾಗುತ್ತದೆ. ತಾನು ಭಾವಿಸಿದ ಕಥನಗಳೆಲ್ಲ ಕಾಯದಲ್ಲಿಯೇ ಮಥನಕ್ಕೆ ಒಳಗಾಗಿ ಕಥನವಲ್ಲದ ಅರಿವಿನ ಕಥನಕ್ಕೆ ಕಾಯ ಈಡಾಗಿ ತಾನಿದ್ದ ಕಾಯವೇ ಕೈಲಾಸವಾಗುತ್ತದೆ. ಅರಿವಿನ ಅಮೃತ ಭರಿತವಾದ ಕೈವಲ್ಯ ಕಲ್ಪವಲ್ಲರಿಯಾಗುತ್ತದೆ.

ನಾನು ಎನ್ನುವ ಮನವೇ ಅರಿವೆಂಬ ಘನದಲ್ಲಿ ಸಂಗಮವಾಗಿ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**396**

**ಕನಕದ ಗಿರಿಗೆ ಕಾಂತಿಯಿಟ್ಟಿತು ಪ್ರಭೆ**
**ವಿನಯದ ಅನುಭಾವಕ್ಕೆ ಚಿನ್ನದ ವರ್ಣವನೇಕೀಕರಿಸಲು**
**ಅನುವಾಯಿತ್ತು ನಾಲ್ಕೆಸಳ ಪೀಠ**
**ಆ ಪೀಠದಲ್ಲಿ ದಾಸ ನಿಂದು ಆಚಾರವಿಡಿದು ನಡೆಯಲು**
**ಭೂಮಿಯ ಕಳೆದುಕೊಂಡನಯ್ಯಾ ನಿಮ್ಮ ಶರಣ ಚೆನ್ನಬಸವಣ್ಣನು.**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**
**ಚೆನ್ನಬಸವಣ್ಣನಿಂದ ಬದುಕಿದೆನಯ್ಯಾ.**

ತನುವೆಂಬುದು ಅರಿವಿನ ಮನೆ. ಈ ಮನೆಯಲ್ಲಿ ಅರಿವೆಂಬ ಗುರುದೇವನು ಇದ್ದಾನೆ. ಮನವೆಂಬ ಶರಣನು ಇದ್ದಾನೆ. ಮನಕ್ಕೆ ಅರಿವಾದಾಗ ಆ ಮನವೇ ಗುರುದೇವನಿಗೆ ಭಕ್ತನಾಗಿ ಭಕ್ತಿ ಮಾಡುತ್ತಾನೆ; ಶರಣು ಹೋಗಿ ಶರಣನಾಗುತ್ತಾನೆ; ದಾಸಾನು ದಾಸನಾಗುತ್ತಾನೆ. ಹೀಗಾಗಿ ದಾಸರು ತನುವನ್ನು ದಾಸಪೀಠ ಎಂದು ಹೆಸರಿಟ್ಟು ಕರೆದರು.

ಶರಣರು ತನುವನ್ನು ಸದುವಿನಯದ ಅನುಭಾವವುಳ್ಳ ಅನುಭವ ಮಂಟಪ ಎಂದು ಕರೆದರು. ಆಗ ತನು ಕಾಂತಿಯಿಂದ ಬೆಳಗಿತು. ಕನಕದ ಗಿರಿಯಂತೆ ಥಳ ಥಳನೆ ಹೊಳೆಯಿತು.

ತನುವೆಂಬ ಅರಿವಿನ ಪೀಠದಲ್ಲಿ ಶರಣ ನಿಂತು ಕಂಡ ತನುವಿನ ಅನುಭಾವದ

ಪೀಠಗಳಿಗೆಲ್ಲ ಶರಣು ಹೋದ. ಶರಣು ಶರಣಾರ್ಥಿ ಎಂದ. ದಾಸ ಪೀಠಕ್ಕೆ ದಾಸು ಹೋದ. ದಾಸ ಪೀಠದಲ್ಲಿಯೇ ನಿಂತು ದಾಸ ದಾಸಾನು ದಾಸನಾದ.

ಅನುಭಾವದ ಪೀಠ ಎಂದು ತನು ಶರಣನಿಂದ ಕರೆಯಿಸಿಕೊಂಡಿತು. ಕಾಂತಿಯಿಂದ ಪ್ರಭಾವಳಿಯ ಪ್ರಭೆ ತನುವಿನ ಸುತ್ತಲೂ ಬೆಳಗಿ ಮಿರಮಿರನೆ ಮಿಂಚಿತು. ಜ್ಞಾನಿಗಳು ಅದನ್ನು ನಾಲ್ಕೆಸಳ ಪೀಠದಂತೆ ಕಂಡರು. ಅದು ದೇವರಿದ್ದ ಮನೆಯಾಯಿತು. ಆ ದೇವರಿಗೆ ಶರಣು ಹೋದ ಶರಣ; ದಾಸನಾದ ದಾಸ ತನುವಿನ ಮನೆಯಲ್ಲಿ ನಿಂತು ಆಚಾರವಿಡಿದು ನಡೆದರು. ಆಚಾರವಿಡಿದು ನೋಡಿದರು.

ಲೋಕಕ್ಕೆ ತನು ಹೆಣ್ಣಾಗಿ ಗಂಡಾಗಿ ಕಂಡಿತು. ರಾಜನಾಗಿ ಪ್ರಧಾನಿಯಾಗಿ ಸಚಿವ ಶಾಸಕನಾಗಿ ಕಂಡಿತು. ಅಧಿಕಾರಿ ಜವಾನನಾಗಿ, ಶ್ರೀಮಂತ ಬಡವ ಭಿಕ್ಷುಕನಾಗಿ ಕಂಡಿತು.

ಅರಿವಿನಿಂದ ನೋಡಬೇಕಾದ ತನು, ತನುವನ್ನೇ ಮರೆವಿನಿಂದ ನೋಡಿತು. ಹೆಣ್ಣೆಂದು ಗಂಡನ್ನು ಮೋಹಿಸಿತು. ಗಂಡೆಂದು ಹೆಣ್ಣನ್ನು ಕಾಮದಿಂದ ಹರಿದು ತಿನ್ನಲು ಅಣಿಯಾಯಿತು. ಗುರುವೆಂದು ಶಿಷ್ಯ ನೋಡಿದ; ಶಿಷ್ಯನೆಂದು ಗುರುವು ನೋಡಿದ.

ಹೊಂಬಣ್ಣ ಕಾಂತಿಯ ಪ್ರಭೆಯುಳ್ಳ ಅನುಭಾವದ ಅರಿವಿನ ಮನೆಯೆಂದು ನೋಡಲು ಲೋಕಕ್ಕೆ ಸಾಧ್ಯವಾಗಲೇ ಇಲ್ಲ. ದೇವರು ದೇವರನ್ನು ಆರಾಧಿಸುವ, ದಾಸನಿದ್ದ ದಾಸಪೀಠವೆಂದು ನೋಡಲು ಲೋಕಕ್ಕೆ ಸಾಧ್ಯವಾಗಲಿಲ್ಲ.

ಅರಿವಿನ ಲಿಂಗಯ್ಯನಿಗೆ ಶರಣು ಹೋದ ಶರಣನಿದ್ದ ಮನೆಯೆಂದು ನೋಡಲು ತನುವಿಗೆ ಸಾಧ್ಯವಾಗಲೇ ಇಲ್ಲ. ಶರಣ ಸತಿ ಲಿಂಗ ಪತಿಯಿದ್ದ, ಸತಿ ಪತಿಗಳು ವಾಸ ಮಾಡಿದ ಅರಿವಿನ ಮನೆಯನ್ನಾಗಿ ನೋಡಲು ತನುಗಳಿಗೆ ಸಾಧ್ಯವಾಗಲೇ ಇಲ್ಲ.

ಲೋಕ, ಗೋಚರಕ್ಕೆ ಬರುವ ದೇವರನ್ನು ಮಾತ್ರ ದೇವರೆಂದು ಕರೆಯುತ್ತದೆ. ಹೀಗಾಗಿ ತನುವಿನಿಂದ ನಿರ್ಮಾಣ ಮಾಡಿದ ದೇವರನ್ನು ತನು ಆರಾಧಿಸುತ್ತದೆ. ತನುವನ್ನು ಮಾಡಿ, ತನುವಿನಲ್ಲಿಯೇ ಇದ್ದು, ತನುವಿಗೆ ಅರಿವಿನ ಪಾಠ ಮಾಡುವ ದೇವರನ್ನು ತನು ಮರೆತು ಹೋಗುತ್ತದೆ.

ತನು ಭೂಮಿಯನ್ನು ನೋಡುತ್ತದೆ; ಹೇಮವನ್ನು ನೋಡುತ್ತದೆ; ಕಾಮಿನಿಯನ್ನು ನೋಡುತ್ತದೆ ; ತಾನು ಸೃಷ್ಟಿ ಮಾಡಿದ ದೇವರನ್ನು ನೋಡುತ್ತದೆ. ಇವೆಲ್ಲವುಗಳನ್ನು ಆರಾಧಿಸುತ್ತದೆ. ತನ್ನನ್ನು ಇವೆಲ್ಲವುಗಳನ್ನು ಸೃಷ್ಟಿ ಮಾಡಿ, ತನುವಿನಲ್ಲಿಯೇ ಇದ್ದ ದೇವರನ್ನು ಮರೆಯುತ್ತದೆ.

ಅರಿವಿನ ದೇವರಿಗೆ, ಮಣಿದು ಅನುಭಾವದ ಹಿರಿಯನಾಗಿ ತನುವಿನ ಮೂಲಕ ಮರೆದು, ಸಕಲ ತನುಗಳನ್ನು ಅನುಭಾವದ ಅರಿವಿನಿಂದ ಮನ ನೋಡಲು ಹೋದರೆ ತನುಗಳೆಲ್ಲ ಅರಿವಿನ ದೇವರಿದ್ದ ಮನೆಯಾಗಿಯೇ ಕಾಣುತ್ತವೆ. ದೇವ ಭಕ್ತನಿದ್ದ ಮನೆಯದು ದೇವಾಲಯ. ನಿಜ ದೇವರಿದ್ದ ದೇವಾಲಯ ಕಂಡು ತನು ಬಾಗುತ್ತದೆಯೇ ಹೊರತು ಮೋಹಿಸುವುದಿಲ್ಲ; ಕಾಮಿಸುವುದಿಲ್ಲ. ಬದಲಾಗಿ ಪ್ರಾರ್ಥಿಸುತ್ತದೆ ; ಆರಾಧಿಸುತ್ತದೆ.

ಗುರು ಕಾಣುವುದಿಲ್ಲ; ಶಿಷ್ಯ ಕಾಣುವುದಿಲ್ಲ. ತನು ಗುರು ಶಿಷ್ಯರಿದ್ದ ಮನೆಯಾಗಿ ಕಾಣುತ್ತದೆ. ಶರಣ ಸತಿಯಾಗಿ ಅರಿವಿನ ಲಿಂಗಯ್ಯನನ್ನೇ ಪತಿಯನ್ನಾಗಿಸಿಕೊಂಡು ಅವರಿಬ್ಬರೂ ವಾಸ ಮಾಡಿದ ಅಂಗವಾಗಿ ಕಾಣುತ್ತದೆ.

ಭೂಮಿಯ ಕಳೆದುಕೊಂಡನಯ್ಯಾ ನಿಮ್ಮ ಶರಣ ಚೆನ್ನಬಸವಣ್ಣನು :

ಭೂಮಿ ಅದರ ಗರ್ಭದಲ್ಲಿ ಹುಟ್ಟಿದ ಹೇಮ, ತನು ಅದರ ಗರ್ಭದಲ್ಲಿ ಹುಟ್ಟಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಕಳೆದುಕೊಳ್ಳಲು ಸಾಧ್ಯವಾಯಿತು. ಭೂಮಿ ಜಡ; ಹೇಮವೂ ಜಡ. ಹಾಗೆಯೆ ತನು ಕೂಡಾ ಭೂಮಿಯಂತೆ ಜಡ. ಏಕೆಂದರೆ ತನುವಿನಲ್ಲಿ ತನ್ಮಯವಾದ ಅರಿವೇ ಗುರುವಾದ ಮೇಲೆ ಆ ಗುರುದೇವನನ್ನು ಆರಾಧಿಸುವ ಮನವೇ ಭಕ್ತನಾದ ಮೇಲೆ, ತನುವೆಂಬುದು ಅವ್ಯಕ್ತ ಗುರು, ಅವ್ಯಕ್ತ ಭಕ್ತರಿದ್ದ ಮನೆಯಾಯಿತು. ಹೀಗಾಗಿ ತನುವೆಂಬುದು ಕೂಡಾ ಭೂಮಿಯಂತೆ ಜಡವಾಯಿತು. ತನುವಿನಲ್ಲಿ ಹುಟ್ಟಿದ ಅರಿಷಡ್ವರ್ಗಗಳು ಅಷ್ಟ ಮದಗಳು ಸಪ್ತ ವ್ಯಸನಗಳು ಅರಿವಿಗೆ ಆಹುತಿಯಾದವು. ಹೀಗಾಗಿ ಭೂಮಿ ಕಳೆದುಕೊಂಡನಯ್ಯಾ ನಿಮ್ಮ ಶರಣ ಚೆನ್ನಬಸವಣ್ಣನು ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನ ಸೂತ್ರವನ್ನು ಬಣ್ಣಿಸಿದ್ದಾರೆ.

ಕಪಿಲಸಿದ್ಧ ಮಲ್ಲಿನಾಥಯ್ಯ, ಚೆನ್ನಬಸವಣ್ಣನಿಂದಾಗಿ ನನಗೆ ಅರಿವಿನ ದರ್ಶನವಾಯಿತು. ಅಜ್ಞಾನ ಸುಟ್ಟು ಬೂದಿಯಾಯಿತು. ನೀವೇ ದೇವರೆಂದು ತಿಳಿದು ನೀವಿದ್ದ ತನುವಿನ ಮನೆಯಲ್ಲಿಯೇ ನಿಮ್ಮನ್ನು ಆರಾಧಿಸಲು ನನಗೆ ಸಾಧ್ಯವಾಯಿತು. ಇಲ್ಲದಿದ್ದರೆ ದೇವಾಲಯಗಳನ್ನು ಕೆರೆ ಕಟ್ಟೆಗಳನ್ನು ಕಟ್ಟುತ್ತಾ ಅಹಂಕಾರದಿಂದ ಬೆಂದು ಸತ್ತು ಹೋಗುತ್ತಿದ್ದೆ. ಚೆನ್ನಬಸವಣ್ಣನಿಂದ ಬದುಕಿದೆನಯ್ಯಾ ಎಂದು ಹಾಡಿದ್ದಾರೆ. ಅವರು ಹೇಳಿದ ಸೂತ್ರವನ್ನು ಓದುಗರಿಗೆ ಪ್ರಸಾದ ರೂಪದಲ್ಲಿ ಹಂಚಿದ್ದಾರೆ.

**397**

**ಕಪ್ಪಿನ ಬಣ್ಣದಾಕೆ ಇಪ್ಪಿರವನರಿಯರು,**
**ಆಬೆಯ ಕೈಯೊಳಗಾದರು, ಕೋಟಿ ಹರಿವಿರಂಚಾದಿಗಳು**
**ಗುರುವಾಜ್ಞೆಯಿಂದ ಅಯ್ಯನಪ್ಪ ಅಕ್ಷರದ್ವಯವನರಿವಡೆ**
**ಆಬೆಯ ಕೈಗೆ ತಾವು ಹೊರಗಪ್ಪರು**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕಾಬರು.**

ಕಡು ಕತ್ತಲು ತನ್ನ ಕತ್ತಲನ್ನು ತಿಳಿಯದು. ಆದರೂ ಬೆಳಕಿನ ಮಾತನಾಡುವುದನ್ನು ಬಿಡದು. ಬೆಳಕಿನ ಶಾಸ್ತ್ರ ಪುರಾಣಗಳನ್ನು ಓದಿದರೇನು? ಅದು ಕತ್ತಲೆ ಆಗಿದೆ. ಬೆಳಕಾಗಿದ್ದರೆ ಅದಕ್ಕೆ ಬೆಳಕಿನ ಶಾಸ್ತ್ರ ಓದುವುದು ಬೇಕಿಲ್ಲ.

ಕತ್ತಲ ಹಿರಿಯರು ಕತ್ತಲೊಳಗೆ ಹುಟ್ಟಿ ಕತ್ತಲಲ್ಲಿಯೇ ಬೆಳಕಿನ ಸಾಮ್ರಾಜ್ಯ ಕಟ್ಟಿಕೊಂಡಿದ್ದಾರೆ. ಆದರೆ ತಾವು ಎಲ್ಲಿದ್ದೇವೆ ಎಂಬ ಇರುವನು ಅರಿಯರು. ಕಪ್ಪು ಸುಂದರಿಯೇ ಹಾಗೆ. ಆಕೆಗೆ ಮನಸೋತವರು ಕೋಟಿ ಕೋಟಿ ಜನ. ಅವರೆಲ್ಲ 'ಅಹಂ ಬ್ರಹ್ಮಾಸ್ಮಿ' ಎಂಬ ಉಚ್ಚರಣೆಯನ್ನು ಮಾಡುತ್ತಾರೆ. ಹಾಗೆ ಅನ್ನುವುದು ಕೂಡಾ ಭ್ರಮೆಯಿಂದ ಎನ್ನುವುದನ್ನು ಅರಿಯುತ್ತಿಲ್ಲ. ಕಪ್ಪು ಸುಂದರಿಯ ಮಾಯಾಮಯವಾದ ಪೊರೆ ಅವರೆಲ್ಲರನ್ನು ಬಂಧಿಸಿದೆ. ತನ್ನ ಕಬಂಧ ಬಾಹುವಿನಲ್ಲಿ ಸಕಲ ಹಿರಿಯರನ್ನು ಅಪ್ಪಿಕೊಂಡು ತನಗೆ ಬೇಕಾದಂತೆ ಅವರೊಂದಿಗೆ ಮುದ್ದಿಸುತ್ತಿದ್ದಾಳೆ.

ಗುರುದೇವನ ಬೆಳಕಿನಿಂದ ಜನ್ಮ ಪಡೆದ ಕಪ್ಪುಸುಂದರಿ ತಾನು ಬೆಳಕಿನಿಂದ ಹುಟ್ಟಿದವಳೆಂಬುದನ್ನೇ ಮರೆತಿದ್ದಾಳೆ. ಭ್ರಮಾಮಯವಾದ ಸಾಮ್ರಾಜ್ಯವನ್ನು ಕಟ್ಟಿ ಅದರಲ್ಲಿಯೇ ವಾಸ ಮಾಡುತ್ತಿದ್ದಾಳೆ. ಆಕೆಯ ಬೆನ್ನಿಗೆ ಆಕೆಗೆ ಜನ್ಮ ಕೊಟ್ಟ ಗುರುವಿದ್ದಾನೆ.

ಗುರುವಿನ ಆಜ್ಞೆಯಿಂದ 'ಗುರು' ಎನ್ನುವ ಎರಡಕ್ಷರವನ್ನು ಅರಿದೊಡೆ ತನುವನ್ನು ಆವರಿಸಿಕೊಂಡ ಕತ್ತಲು ಹರಿದು ಬೆಳಕಾಗುವುದು. ತನು ಕತ್ತಲಿನಿಂದ ಹೊರಗಾಗುವುದು. ಕತ್ತಲೆ ಬೆಳಕನ್ನು ಪ್ರವೇಶ ಮಾಡಿ ಬೆಳಕಿಗೆ ಶಿಷ್ಯನಾಗುವುದು.

ಗುರುದೇವನೂ ಬೆಳಕೇ. ಆತನಿಂದಲೇ ಹುಟ್ಟಿದ ಕತ್ತಲು ಆತನನ್ನೇ ಕೂಡಿ ಬೆಳಕಾಗುವುದು. ಬೆಳಕು ಕತ್ತಲಿನ ಆಟ ಸಂಪೂರ್ಣ ಮುಗಿದು ಬೆಳಗಿಂಗೆ ಬೆಳಕಾಗಿ ಬೆಳಗಾಗುವುದು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುವುದು.

**398**

**ಕಬ್ಬುನ ಪರುಷವ ಮುಟ್ಟಿ**
**ಪರುಷವಾಗದೊಡಾ ಪರುಷಕ್ಕೆ ಕೊರತೆಯಲ್ಲವೆ?**
**ಅಯ್ಯಾ, ನಿಮ್ಮ ಪೂಜಿಸಿ ನೀವೆಯಾಗದೊಡೆ**
**ನಿಮ್ಮ ದೇವತ್ವಕ್ಕೆ ಹಾನಿಯಲ್ಲವೆ?**
**ಅಯ್ಯಾ ನಿಮ್ಮ ದೇವತ್ವಕ್ಕೆ ಹಾನಿಯಾಗದಂತೆ ಮಾಡಾ**
**ಎನ್ನ·ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಬ್ಬಿಣ ಪರುಷವ ಮುಟ್ಟಿ ಚಿನ್ನವಾದಡೇನು? ಚಿನ್ನ ಕೂಡಾ ಲೋಹವಲ್ಲವೆ? ಕಬ್ಬಿಣ ಪರುಷವ ಮುಟ್ಟಿ ಪರುಷವಾಗಬೇಕು. ಬೆಳಕಿನಿಂದ ಹುಟ್ಟಿದ ಕತ್ತಲು ಪುನಃ ಬೆಳಕನ್ನು ಕಂಡು ಬೆಳಕಾದಂತೆ.

ಕಬ್ಬಿಣ ಪರುಷವನ್ನು ಸೋಂಕಿ ಪರುಷವಾಗದಿದ್ದಡೆ ಪರುಷಕ್ಕೆ ಕೊರತೆಯಲ್ಲವೆ? ಕಬ್ಬಿಣಕ್ಕೆ ಚಿನ್ನವಾಗಬೇಕೆಂಬ ಬಯಕೆಯಿದ್ದರೆ ಯಾರೇನು ಮಾಡಿಯಾರು. ಅದಕ್ಕೆ ಪರುಷವಾಗಬೇಕೆಂಬ ಬಯಕೆ ಹುಟ್ಟಿದರೆ, ಪರುಷವನ್ನು ತಾಕಿ ಪರುಷವೇ ಆಗುತ್ತದೆ.

ದೇವರನ್ನು ಪೂಜಿಸಿ ದೇವರೇ ಆಗದಿದ್ದೊಡೆ ದೇವರ ದೇವತ್ವಕ್ಕೆ ಹಾನಿಯಲ್ಲವೆ? ಅಯ್ಯಾ ನಿಮ್ಮ ದೇವತ್ವಕ್ಕೆ ಹಾನಿಯಾಗದಂತೆ ಮಾಡಾ:

ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಸುಂದರವಾದ ಸೂತ್ರವನ್ನೇ ಕೊಟ್ಟಿದ್ದಾರೆ.

ದೇವರನ್ನು ಪೂಜಿಸಿದ ಮೇಲೆ ದೇವರೇ ಆಗಬೇಕಿತ್ತು. ಆದರೆ ಹಾಗೆ ಆಗುತ್ತಿಲ್ಲ. ಏಕೆಂದರೆ ಲೋಕ ಪೂಜಿಸುವ ದೇವರು ದೇವರೆ ಅಲ್ಲ.

ಕಲ್ಲಿನಿಂದ ದೇವರನ್ನು ಮಾಡಿ, ಆ ದೇವರಿಗೆ ಕಲ್ಲಿನಿಂದಲೇ ಆಲಯ ನಿರ್ಮಿಸಿ, ಉತ್ಸವಗಳನ್ನು ಮಾಡಿ ಆರಾಧಿಸಿದರೆ ಕಲ್ಲ ಹೃದಯಕರಗಿ ನೀರಾಗಲು ಸಾಧ್ಯವೆ? ಕಲ್ಲನ್ನು ಮರೆತು ಕಲ್ಲನ್ನೇ ದೇವರೆಂದು ಸಾವಿರ ವರುಷ ಆರಾಧಿಸಿದರೇನು? ಕಟೆದ ಕಲ್ಲು ದೇವರಾಗಲು ಸಾಧ್ಯವೆ? ಆ ದೇವರು, ಪೂಜಿಸಿದ ಭಕ್ತನನ್ನು ತನ್ನಂತೆ ಮಾಡಿಕೊಳ್ಳಲು ಸಾಧ್ಯವೆ? ಅದು ಎಂದಿಗೂ ಸಾಧ್ಯವಾಗುವುದಿಲ್ಲ.

ಕಲ್ಲಲ್ಲಿ ಹೆಣ್ಣು ಬೊಂಬೆಯ ಕೆತ್ತಿ ಹೆಣ್ಣು ದೇವರೆಂದು ಆರಾಧಿಸಿದರೆ ಆ ದೇವತೆ ಪೂಜಿಸಿದ ಭಕ್ತನಿಗೆ ಒಲಿಯಲು ಸಾಧ್ಯವೆ? ಗಂಡು ಬೊಂಬೆಯನ್ನು ಕೆತ್ತಿ ಗಂಡು ದೇವರೆಂದು ಆರಾಧಿಸಿದರೆ ಆ ದೇವರು ಒಲಿಯಲು ಸಾಧ್ಯವೆ?

ತಾನು ಮಾಡಿದ ದೇವರು ದೇವರಲ್ಲ. ಅದು ಕಲ್ಲು ಎಂದು ತನಗೆ ಅರಿವಾದಾಗ,

ಕಲ್ಲ ಮೇಲೆ ನಿಂತು ಕಲ್ಲನ್ನೇ ದೇವರೆಂದು ಆರಾಧಿಸುವುದನ್ನು ನಿಲ್ಲಿಸುತ್ತಾನೆ. ತಾನು ಮಾಡಿದ ದೇವರು ದೇವರಲ್ಲ; ತನ್ನನ್ನು ಮಾಡಿ ತನ್ನ ತನುವಿನಲ್ಲಿಯೇ ತನ್ಮಯನಾಗಿ ತನಗೆ ಪಾಠ ಮಾಡುವ ದೇವರೇ ದೇವರೆಂದು ತಿಳಿದು ಆ ಅರಿವಿನ ದೇವರಿಗೆ ಆರಾಧಿಸುತ್ತಾನೆ.

ತನ್ನನ್ನು ಸೃಷ್ಟಿ ಮಾಡಿ, ತನ್ನ ತನುವಿನಲ್ಲಿಯೇ ಸಂಗಮವಾದ ದೇವರೆ ನಿಜದೇವರೆಂದು ನಂಬಿ, ತನುವನ್ನು ಆವರಿಸಿದ ಮನವನ್ನೇ ಆ ದೇವರಿಗೆ ಭಕ್ತನನ್ನಾಗಿಸಿಕೊಂಡು ಆರಾಧಿಸಿದಾಗ ಆ ದೇವರು ಆ ಭಕ್ತನನ್ನು ತನ್ನಂತೆ ಮಾಡಿಕೊಳ್ಳುತ್ತಾನೆ.

ಭಕ್ತನ ತನುವಿನಲ್ಲಿಯೇ ತನ್ಮಯವಾದ ದೇವರನ್ನು ಭಕ್ತ ಆರಾಧಿಸಿದರೂ ಆ ದೇವರು ಒಲಿಯದಿದ್ದರೆ ಆ ದೇವರ ದೇವತ್ವಕ್ಕೇ ಹಾನಿ; ಭಕ್ತನಿಗಲ್ಲ. ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿಮ್ಮ ದೇವತ್ವಕ್ಕೆ ಹಾನಿಯಾಗದಂತೆ ಮಾಡಾ ಎಂದು ಸಿದ್ಧರಾಮ ಶಿವಯೋಗಿಗಳು ತನ್ನ ಓದುಗರ ಪರವಾಗಿ ಅರಿವಿನ ದೇವರನ್ನು ಬೇಡಿಕೊಂಡಿದ್ದಾನೆ.

**399**

**ಕಮಲ ಸಿಂಹಾಸನದ ವಿಮಲಾತ್ಮನನು ಮಾಡಿ**
**ಸುಮನ ಗುರುಲಿಂಗ ಜಂಗಮುವನೊಂದು ಮಾಡಿ**
**ಪರಮ ಜ್ಞಾನೋದಯ ಚೇತನದೊಳಿಟ್ಟ**
**ಶ್ರೀಗುರು ಚೆನ್ನಬಸವಣ್ಣ ಪರಂಜ್ಯೋತಿರ್ಮಯನಯ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಭ್ರಮಾ ಭರಿತವಾದ ತನುವನ್ನು ಹಿಡಿದು ಬ್ರಹ್ಮನನ್ನಾಗಿಸಿದ ಶ್ರೀಗುರುವೆ, ನೀನು ಜ್ಯೋತಿರ್ಮಯನಯ್ಯಾ. ಕಾಯದಲ್ಲಿ ಬ್ರಹ್ಮಕಮಲವನ್ನು ಅರಳಿಸಿದ ಪರಮಾತ್ಮ ನೀನು. ಕಾಯವನ್ನೇ ಕಮಲದ ಸಿಂಹಾಸನವನ್ನಾಗಿಸಿ ಆ ಸಿಂಹಾಸನದ ಮೇಲೆ ನಿತ್ಯ ನಿರ್ಮಲನಾದ ವಿಮಲಾತ್ಮನನು ಕೂಡಿಸಿ ಮನವನ್ನೇ ಸುಮನವನ್ನಾಗಿಸಿ ಆರಾಧಿಸಲು ಹಚ್ಚಿದ ಪರಂಜ್ಯೋತಿರ್ಮಯನು ನೀನಯ್ಯಾ.

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಎನಗೆ ತೋರಿಸಿದ ಶ್ರೀಗುರು ನೀನು. ಅಂಗದಲ್ಲಿಯೇ ಸದ್‌ಗುರುದೇವನನ್ನು ತೋರಿದ ಶ್ರೀಗುರು ನೀನು. ಅಂಗದಲ್ಲಿಯೇ ಜಂಗಮನನ್ನು ಎನಗೆ ತೋರಿದ ಜಗದೀಶ ನೀನು. ಅಂಗಲಿಂಗ ಜಂಗಮರನ್ನು ಒಂದು ಮಾಡಿ ಒಂದರಲ್ಲಿಯೇ ಮೂರೊಂದಾದ ಘನವನ್ನು ಎನಗೆ ತೋರಿದ ಶ್ರೀಗುರು ನೀನು.

ಅಂಗದಲ್ಲಿ ಮನವನ್ನು ತೋರಿ ಆ ಮನವನ್ನು ಹಿಡಿದು ಭಕ್ತನನ್ನಾಗಿಸಿದ ಮಹಾಂತ ನೀನು. ಆ ಭಕ್ತನ ಮೂಲಕವೇ ಸದ್‌ಗುರುವಿಗೆ ಗುಲಾಮನಾಗಲು ಹೇಳಿದ ಪುಣ್ಯಾತ್ಮ ನೀನು.

ಅಜ್ಞಾನದ ಅಂಗದಲ್ಲಿ ಮಹಾಜ್ಞಾನದ ಪರಂಜ್ಯೋತಿಯನ್ನು ಬೆಳಗಿಸಿ ಆ ಅಂಗವನ್ನು ಪರಮ ಸಂತೋಷದಿಂದ ನೋಡಿದ ಪರಮಾತ್ಮ ನೀನು.

ಸಿದ್ಧರಾಮ ಶಿವಯೋಗಿ ಶ್ರೀಗುರುದೇವನನ್ನು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎಂದು ಹೆಸರಿಟ್ಟು ಕರೆದು, ಶ್ರೀಗುರುವನ್ನು ಸದ್ಗುರುವನ್ನು ಒಂದು ಮಾಡಿ ತನ್ನಂಗದಲ್ಲಿಯೇ ಅವರಿಬ್ಬರನ್ನೂ ಒಂದಾಗಿ ನೋಡಿದ. ತಾನು ಭಕ್ತನಾಗಿ ಅವರಿಬ್ಬರನ್ನೂ ಕೂಡಿಸಿ ಒಬ್ಬರನ್ನಾಗಿ ಅಂಗದಲ್ಲಿಯೇ ಆರಾಧಿಸಿದ.

**ಕರ ಕಂಗಳನು ಮನೆಯ ತೆರಹು ಮಾಡಿಯೆ**
**ಶ್ರೋತ್ರ ಕರದೊಳಗೆ ಶಿವಲಿಂಗ ಸ್ಥಾಪ್ಯಗೊಳಿಸಿ**
**ನೆನಹುಗೆಟ್ಟಾ ಸೀಮೆ ನಿಷ್ಕಳದ ಪದವುವನು**
**ಅರಿಹಿದಾತ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವೆಂಬುದು ಅರಿವಿನ ಮನೆ. ಅದು ಗುರುದೇವನ ಮನೆ. ಭಗವಂತನ ಮನೆ. ಆತನ ಮನೆಯನ್ನು ಮನವೆಂಬ ಅಜ್ಞಾನ ಸ್ವಾಧೀನ ಪಡಿಸಿಕೊಂಡು ತನಗೆ ಬೇಕಾದಂತೆ ಬಳಸಿಕೊಳ್ಳುತ್ತಲಿದೆ.

ಕರ ಕಂಗಳನು ಮನೆಯ ತೆರಹು ಮಾಡಿಯೆ ಶ್ರೋತ್ರ ಕರದೊಳಗೆ ಶಿವಲಿಂಗ ಸ್ಥಾಪ್ಯಗೊಳಿಸಿ: ಎನ್ನುವ ಸಿದ್ಧರಾಮ ಶಿವಯೋಗಿಗಳ ಈ ಸೂತ್ರವೇ ಅದ್ಭುತವಾಗಿದೆ.

ಕರ ಎಂದರೆ ಕೈ. ಅದು ಇಷ್ಟಲಿಂಗದ ಪೀಠ ಎಂದು ತಿಳಿದುಕೊಳ್ಳುವವರೇ ಬಹಳಷ್ಟಿದ್ದಾರೆ. ಅಂಗದ ಮೇಲೆ ಲಿಂಗ ಕಟ್ಟಿಕೊಂಡು ಅಂಗೈಯಲ್ಲಿ ಹಿಡಿದು ಪೂಜಿಸುವ ಒಂದು ವ್ಯವಸ್ಥೆ ಜಾರಿಗೆ ಬಂದುದನ್ನು ಅರಿವಿನಿಂದ ಆಲೋಚನೆ ಮಾಡಿದರೆ, ಆಲೋಚನೆ ಮಾಡಿದ ಅಂಗಕ್ಕೆ ಕೂಡಲೇ ಮನವರಿಕೆಯಾಗುತ್ತದೆ.

ಓಡಾಡುವ ಚಂಚಲ ಮನಸ್ಸನ್ನು ನೇತ್ರದ ಮೂಲಕ ಸ್ಥಿರೀಕರಿಸುವ ಒಂದು ಉಪಕರಣ ಮಾತ್ರ ಲಿಂಗ ಎಂದು ತನಗೆ ತಾನೇ, ತನ್ನ ಅರಿವಿಗೆ ಬರುತ್ತದೆ. ಒಂದು ವೇಳೆ ತನು ಆಲೋಚನೆಗೆ ಒಳಗಾಗದೆ ಸಾವಿರಾರು ವರುಷಗಳವರೆಗೆ ಲಿಂಗವನ್ನು ಆರಾಧಿಸಿದರು ಕೂಡಾ ಮನ ತನುವಿನೊಂದಿಗೆ ಅರಿವಿನ ಲೋಕಕ್ಕೆ ಕಾಲಿಡಲು ಸಾಧ್ಯವಾಗುವುದಿಲ್ಲ.

ಲಿಂಗ ಪೂಜಿಸುವ ವಸ್ತುವಲ್ಲ. ಅಂಗದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕಾಗಿ ಮಾಡಲ್ಪಟ್ಟ ಉಪಕರಣ. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ನೋಡಲು ಅಂಗ ಮತ್ತು ನೇತ್ರವನ್ನು ಆವರಿಸಿದ ಚಂಚಲ ಮನಕ್ಕೆ ಸಾಧ್ಯವಾಗದ್ದಕ್ಕಾಗಿ, ನೇತ್ರದಲ್ಲಿರುವ ಆ ಅಜ್ಞಾನಿ ಮನವನ್ನು ತೆರಹುಗೊಳಿಸುವುದಕ್ಕಾಗಿ ಅದಕ್ಕೆ ದೃಷ್ಟಿಯ ಮೂಲಕ ಹೆಳವನನ್ನಾಗಿಸುವ ಶಿಕ್ಷೆ ಕೊಡುವುದಕ್ಕಾಗಿ ಸಿದ್ಧಗೊಳಿಸಿದ ಉಪಕರಣವೇ ಲಿಂಗ!

ಕಾಮದ ಕಣ್ಣುಗಳನ್ನು ಸುಡುವುದಕ್ಕಾಗಿ, ಕಾಮಹರನನ್ನು ಪ್ರಾರ್ಥಿಸುವುದಕ್ಕಾಗಿ ಸಿದ್ಧಪಡಿಸಿದ ಸೂತ್ರ. ಈ ಸೂತ್ರದ ಉಪಕರಣವನ್ನು ಬಳಸುತ್ತಾ ದೃಷ್ಟಿ ಅದರ ಮೇಲೆ ನೆಟ್ಟು, ನೇತ್ರದಲ್ಲಿ ಹರಿದಾಡುವ ಅಜ್ಞಾನದ ಹಾವನ್ನು ಹೆಳವನನ್ನಾಗಿಸುವುದಕ್ಕಾಗಿ ಬಳಸುವ ಶರಣರ ಸೂತ್ರ.

ಆದರೆ ಮನ ಬಲು ಜಾಣ! ಈ ಸೂತ್ರದ ಉಪಕರಣವನ್ನೇ 'ಲಿಂಗ' ಎಂದು ಅಂಗದ ಮೇಲೆ ಧರಿಸಿ ಅಂಗದೊಂದಿಗೆ ಆರಾಧಿಸುತ್ತಾ ಪೂಜಿಸಿತು. ಅಜ್ಞಾನಿ ತನುವನ್ನು, ತನುವಿನಲ್ಲಿರುವ ಅಜ್ಞಾನಿ ನೇತ್ರವನ್ನು, ಮನ ತನ್ನ ವಶಕ್ಕೆ ಪಡೆದು, ಜ್ಞಾನಕ್ಕಾಗಿ ಬಳಕೆಯಾಗಬೇಕಾದ 'ಲಿಂಗ' ಎನ್ನುವ ಉಪಕರಣವನ್ನೇ ಲಿಂಗವಾಗಿಸಿಕೊಂಡು ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನೇ ಮರೆಯಿಸಿತು.

ಅಂಗದಲ್ಲಿ, ಕಂಗಳಲ್ಲಿ, ಕಿವಿಗಳಲ್ಲಿ ಮನವೆಂಬ ಅಜ್ಞಾನ ಆವರಿಸಿದೆ. ಅದನ್ನು ಮನವೇ ತೆರಹುಗೊಳಿಸಿಕೊಳ್ಳಬೇಕು. ಆದರೆ ಮನ ಅರಿವಿನ ಲಿಂಗಯ್ಯನಿದ್ದ ಅಂಗವನ್ನು

ವಶಪಡಿಸಿಕೊಂಡಿದೆ. ಆತನ ಕಿವಿಗಳನ್ನು, ಕಂಗಳನ್ನು ವಶಪಡಿಸಿಕೊಂಡಿದೆ. ಹೀಗಾಗಿ ಅಂಗ, ಮತ್ತೊಂದು ಅಂಗವನ್ನು ತನ್ನಂತೆ ನೋಡಲು ಸಾಧ್ಯವಾಗುತ್ತಿಲ್ಲ. ಹೆಣ್ಣನ್ನು ನೋಡಿ ಗಂಡು, ಗಂಡನ್ನು ನೋಡಿ ಹೆಣ್ಣು ಕಾಮದಿಂದ ಉದ್ರೇಕಗೊಂಡು ಒಂದನ್ನು ಒಂದು ಹರಿದು ತಿನ್ನುತ್ತದೆ.

ಸಂತಾನಕ್ಕಾಗಿ, ಅರಿವಿನ ಲಿಂಗಯ್ಯನು ಜನ್ಮ ತಾಳುವುದಕ್ಕಾಗಿ ಮಾತ್ರ ಇದ್ದ ಕಾಮ ಅಂಗದಲ್ಲಿ ರಕ್ಕಸನ ಅವತಾರವೆತ್ತಿದೆ. ಕಣ್ಣು ಹೆಣ್ಣು ಅಲ್ಲ, ಗಂಡು ಕೂಡಾ ಅಲ್ಲ. ಅಂಗ ಹೆಣ್ಣು ಅಲ್ಲ. ಗಂಡೂ ಅಲ್ಲ. ಆದರೂ ಮನ ವಾಸ ಮಾಡಿದ ಅಜ್ಞಾನದ ಕಣ್ಣು ಗಂಡು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡಿ ಕಾಮಿಸಿ ಕಾಯವನ್ನೇ ಹರಿದು ತಿನ್ನುತ್ತದೆ.

ಇಂತಹ ಅಜ್ಞಾನದ ಮನ ವಾಸ ಮಾಡಿದ ಕಾಯವನ್ನು, ಕಾಯದ ಕಂಗಳನ್ನು, ಕಾಯದ ಕಿವಿಗಳನ್ನು ತೆರಹುಗೊಳಿಸಿ ಕಾಯದಲ್ಲಿಯ ಅರಿವಿನ ಲಿಂಗಯ್ಯನನ್ನು ಸ್ಥಾಪಿಸಿ ಆತನನ್ನೇ ಬಳಕೆ ಮಾಡುವ ಹಿರಿದಾದ ಸೂತ್ರವನ್ನು ಶ್ರೀಗುರು ಚೆನ್ನಬಸವಣ್ಣ ಸಿದ್ಧರಾಮ ಶಿವಯೋಗಿಗಳಿಗೆ ತೋರಿದ. ಸಿದ್ಧರಾಮ ಶಿವಯೋಗಿಗಳು ತಮ್ಮ ವಚನದ ಮೂಲಕ ಸರ್ವ ಓದುಗರಿಗೂ ತಿಳಿಸಿದ್ದಾರೆ. ಸಕಲ ಸಂಪ್ರದಾಯಗಳನ್ನು ತೊರೆದು ಅಗೋಚರದ ಆಚರಣೆಗೆ ಒಳಗಾದ ಕಾಯವೇ ಕೈಲಾಸವಾಗಲು ಸಾಧ್ಯ.

**401**

**ಕರಗಳಾನತವಾಗೆ ಮುಖಗಳು ಹಲವಾಗೆ**
**ತನುಪ್ರಾಣಯಿಷ್ಟಕೆ ತನ್ನ ರೂಪೆ**
**ಆ ನೀ ನೆನಹಿನ ಹಲವ ನುಂಗಿ ಬೆಳಗ ನೆಲೆಯ**
**ತೋರಬಲ್ಲಡೆ ಗುರುಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುಗಳ ವೇಷ ಮೂರು: ಸಾತ್ವಿಕ ತನು, ರಾಜಸ ತನು, ತಾಮಸ ತನು. ತನುಗಳು ಕೂಡಾ ಮೂರು: ಸ್ಥೂಲ ತನು, ಸೂಕ್ಷ್ಮ ತನು, ಕಾರಣ ತನು.

ತನು ಒಂದೇ ಆದರೂ ಅದರ ಪಾತ್ರ ಅನೇಕ. ಅದರ ಮುಖಗಳು ಕೂಡಾ ಹಲವಾರು. ಬೆಳಿಗ್ಗೆ ಪೂಜಿಸುವ ಮೂಲಕ ಸಾತ್ವಿಕ ಪಾತ್ರ, ನಂತರ ಹಿರಿತನದ ವೇಷ ಹಾಕಿ ರಾಜಸ ಪಾತ್ರ. ಸಂಜೆ ತಾಮಸ ವೇಷದಲ್ಲಿ ತೂರಾಡುತ್ತದೆ.

ಸಾತ್ವಿಕನೆಂದು ಅನ್ನಿಸಿಕೊಳ್ಳಲು ಸಾತ್ವಿಕನ ಪಾತ್ರ. ಆದರೆ ತನಗೆ ಇಷ್ಟವಾದ ರಾಜಸಿಗ ತಾಮಸಿಗನಾಗಿ ಸುಖಿಸುತ್ತದೆ. ಹಾಗೆಯೇ ತನುವಿಗೆ ಸಾತ್ವಿಕನ ಪಾತ್ರದ ಸುಖವು ಕೂಡಾ ಒಂದು.

ಹಲವಾರು ಮುಖಗಳನ್ನು ಕೊಡವಿ ಕಿತ್ತೊಗೆದು ಸಹಜವಾಗಿ ಇರಲು ತನುವಿಗೆ ಹಲವಾರು ಜನ್ಮಗಳೇ ಬೇಕಾಗುತ್ತವೆ. ಏಕೆಂದರೆ ತನು ಹಲವಾರು ಪಾತ್ರಗಳ ಮೂಲಕ ಸುಖಿಸುವುದಕ್ಕಾಗಿ ಕೃಷಿ ಮಾಡುತ್ತದೆ. ಆದರೆ ಸಹಜವಾಗಿ ಇರಲು ಯಾವ ಕೃಷಿಯನ್ನು ಮಾಡುವುದಿಲ್ಲ.

ಸೂಕ್ಷ್ಮ ಕಾಯ ಸಂಪೂರ್ಣವಾಗಿ ಕಾರಣ ಕಾಯಕ್ಕೆ ಅಂದರೆ ಜ್ಞಾನ ಕಾಯಕ್ಕೆ ಶರಣಾಗತನಾದಾಗ ಕಾಯದ ಸಕಲ ಪಾತ್ರಗಳೂ ಕಳಚಿ ಬೀಳುತ್ತವೆ. ಜ್ಞಾನ ಕಾಯಕ್ಕೆ ಶರಣು ಹೋದ ಸೂಕ್ಷ್ಮಕಾಯ ಶರಣನಾಗುತ್ತದೆ. ಸೂಕ್ಷ್ಮ ಕಾಯದ ಹಲವಾರು ನೆನಹಿನ ಮುಖಗಳನ್ನು ಜ್ಞಾನಕಾಯ ನುಂಗಿ ಹಾಕುತ್ತದೆ.

ಜ್ಞಾನಕಾಯವೆಂದರೆ ಬೆಳಗುವ ಬೆಳಕು. ತನು ಪ್ರಾಣ ಇಷ್ಟವನ್ನು ಒಂದು ಮಾಡಿ,

ಕಾಯದ ಮೂಲಕ ಕಾಯವಾಗಿ ಬೆಳಗಿ ಕಾಯವೇ ಕೈಲಾಸವಾಗುತ್ತದೆ. ಸಕಲ ಕಾಯಗಳು ತನ್ನಂತೆ ಇರುವ ಕೈಲಾಸದ ಕಾಯಗಳಾಗಿ ಕಾಯಕ್ಕೆ ತೋರುತ್ತವೆ.

ಜ್ಞಾನಕಾಯಕ್ಕೆ ಪ್ರಯಾಣ ಮಾಡುವ ಕಲೆ ಸೂಕ್ಷ್ಮ ಕಾಯಕ್ಕೆ ಗೊತ್ತಾಗಬೇಕು. ಇದು ಅತ್ಯಂತ ಸೂಕ್ಷ್ಮವೂ ಸರಳವೂ ಆದ ಕಲೆಯಾದರೂ ಇದನ್ನು ಕಲಿಯಲು ಕಾಯ ತನ್ನ ಆಯುಷ್ಯ ಪೂರ್ತಿ ಹೆಣಗುತ್ತದೆ. ಆದರೂ ಜ್ಞಾನ ಕಾಯದ ಆಶ್ರಯ ಸೂಕ್ಷ್ಮ ಕಾಯಕ್ಕೆ ದೊರೆಯದೆ ಕಾಯದ ಪ್ರಾಣ ಹಾರಿ ಹೋಗುತ್ತದೆ.

ಕತ್ತಲೆಯ ಕಾಯಕ್ಕೆ ಬೆಳಗುವ ನೆಲೆ ದೊರೆಯದೆ; ಬೆಳಗುವ ಸುಳ್ಳು ಮಾತುಗಳನ್ನು ಆಡುತ್ತಾ ಆಡುತ್ತಾ ಅಸು ನೀಗುತ್ತದೆ.

ಜ್ಞಾನದ ನಿಜ ಬೆಳಕನ್ನು ಕಾಣದೆ, ಕಾಯಕ್ಕೆ ಕಾವಿ ತೊಡಿಸಿ, ತಾನು ಬೆಳಕಿನ ಕಾಯ ಎಂದು ಹೇಳುತ್ತಾ, ತನ್ನಂತೆಯೇ ಇರುವ ಬೆಳಕಿನ ಕಾಯಗಳಿಂದ ನಮಸ್ಕಾರ ಮಾಡಿಸಿಕೊಳ್ಳುವುದು ಅಜ್ಞಾನವೆಂದು ಮನಕ್ಕೆ ಅರಿವಾಗುವುದೇ ಇಲ್ಲ.

ಮನೋಕಾಯಕ್ಕೆ ಅಜ್ಞಾನ ಸುಖವಾದರೆ, ಸ್ಥೂಲ ಕಾಯಕ್ಕೆ ಜ್ಞಾನ ಕಾಯದ ಬಲವಾದ ಪೆಟ್ಟು ಬೀಳುತ್ತದೆ. ಮನೋಕಾಯ ಮಾಡುವ ಸಕಲ ಅಜ್ಞಾನಗಳು ಸ್ಥೂಲ ಕಾಯದಲ್ಲಿ ಸಂಗ್ರಹವಾಗಿ, ಜ್ಞಾನ ಕಾಯ ಸ್ಥೂಲ ಕಾಯಕ್ಕೆ ಮತ್ತೆ ಮತ್ತೆ ನೆನಪು ಮಾಡಿ ನಿದ್ದೆ ಹತ್ತದಂತೆ ಮಾಡುತ್ತದೆ.

ಸೂಕ್ಷ್ಮ ಕಾಯಕ್ಕೆ ಹಲವಾರು ಮುಖಗಳು. ಸ್ಥೂಲ ಕಾಯಕ್ಕೆ ಒಂದೇ ಮುಖ. ಜ್ಞಾನ ಕಾಯಕ್ಕೂ ಒಂದೇ ಮುಖ. ಸ್ಥೂಲ ಕಾಯ ಜ್ಞಾನ ಕಾಯದ ಸಂಪತ್ತು. ಆದರೆ ತನಗೆ ತೋಚಿದಂತೆ ಹಲವಾರು ಮುಖಗಳ ಮೂಲಕ ಸೂಕ್ಷ್ಮಕಾಯ ಸ್ಥೂಲ ಕಾಯವನ್ನು ಬಳಸುತ್ತಲಿದೆ.

ಸ್ಥೂಲ ಕಾಯದ ಮೂಲಕ ಅಜ್ಞಾನದ ಸುಖ ದುಃಖಗಳ ಪ್ರಯಾಣವೂ ಇದೆ. ಮಹಾಜ್ಞಾನದ ಬೋಧೆಯೂ ಇದೆ. ಸೂಕ್ಷ್ಮ ಕಾಯಕ್ಕೆ ಜ್ಞಾನ ಕಾಯದ ಬೋಧೆ ಕೇಳುತ್ತಿಲ್ಲ. ಅದರ ಸುಖ ದುಃಖಗಳ ಪ್ರಯಾಣ ಕೂಡಾ ನಿಲ್ಲುವುದಿಲ್ಲ. ಹೀಗೆ ಮುಂದುವರಿಯುತ್ತಾ ಒಮ್ಮೆ ಸ್ಥೂಲ ಕಾಯದ ಆಯುಷ್ಯ ಮುಗಿದು ಹೋಗುತ್ತದೆ.

ಕಾಯ ವೈದ್ಯನಾಗಿ, ಅಭಿಯಂತರನಾಗಿ, ಜಿಲ್ಲಾಧಿಕಾರಿಯಾಗಿ ಗುರುತಿಸಿಕೊಂಡರೇನು? ಮಠಾಧೀಶನಾಗಿ ಗುರುವಾಗಿ ಗುರುತಿಸಿಕೊಂಡರೇನು? ಶಾಸಕ ಸಚಿವ ಪ್ರಧಾನಿ ರಾಷ್ಟ್ರಾಧ್ಯಕ್ಷನಾಗಿ ಗುರುತಿಸಿಕೊಂಡರೇನು? ಉಪನ್ಯಾಸಕ, ವ್ಯಾಪಾರಿ, ಉದ್ಯೋಗಿಯಾಗಿ ಗುರುತಿಸಿಕೊಂಡರೇನು? ಪಾದ್ರಿಯಾಗಿ, ಮೌಲ್ವಿಯಾಗಿ, ಪೂಜಾರಿಯಾಗಿ ಗುರುತಿಸಿಕೊಂಡರೇನು? ಜ್ಞಾನಿಯಾಗುವ ತವಕ ಇಲ್ಲದಿದ್ದರೆ ಇಡೀ ಕಾಯದ ಆಯುಷ್ಯವೇ ನರಕ. ತನಗೆ ತಾನೇ ಅಜ್ಞಾನಿಯಾಗಿ ಹಲವಾರು ಪಾತ್ರಗಳನ್ನು ಧರಿಸುತ್ತಾ ಸುಳ್ಳು ಸುಖ ದುಃಖಗಳನ್ನು ಉಣ್ಣುತ್ತ ವ್ಯರ್ಥವಾಗಿ ಸಾಯಬೇಕಾಗುತ್ತದೆ. ತನಗೆ ತಾನೇ ಬೆಳಗಿಂಗೆ ಬೆಳಗಾಗಿ ಬೆಳಗುವ ಜ್ಞಾನ ಬೆಳಕಿನ ನೆಲೆಯನ್ನು ಕಂಡುಕೊಳ್ಳದೆ ಕಾಯದ ಆಯುಷ್ಯ ಮುಗಿದು ಹೋಗುತ್ತದೆ.

**402**

**ಕರಣಂಗಳ ಕಳೆದು ಇರವಿನ ಬ್ರಹ್ಮನಿಜದಲ್ಲಿ ನಿಂದಿತ್ತಯ್ಯಾ.**
**ಆತ್ಮ ಸಂಗ ಸಂಯೋಗದ ಇರವು ನಿಮ್ಮಲ್ಲಿ ನಿಜವಾಯಿತ್ತಯ್ಯಾ.**

**ಕಪಿಲಸಿದ್ಧ ಮಲ್ಲಿನಾಥಯ್ಯ ,**
**ನಿಮ್ಮ ಚೆನ್ನಬಸವಣ್ಣನ ಕೃಪೆ ನಿಮ್ಮಿಂದ**
**ಸಾಧ್ಯವಾಯಿತ್ತಯ್ಯಾ ಪ್ರಭುವೆ.**

ಭೌತಿಕ ವಿಷಯಗಳನ್ನು ಬೋಧಿಸುವ ಗುರು ಬಲು ಬೇಗ ಸಿಕ್ಕುತ್ತಾನೆ. ಆಂತರಿಕ ಜ್ಞಾನವನ್ನು ತಿಳಿ ತಿಳಿಯಾಗಿ ತಿಳಿ ಹೇಳುವ ಗುರುದೇವ ಸಿಕ್ಕುವುದು ದುರ್ಲಭ. ಒಂದು ವೇಳೆ ಸಿಕ್ಕರೂ ಕೂಡಾ ಆತನೇ ಆಂತರಿಕ ನಿಜವನ್ನು ಬೋಧಿಸುವ ಗುರು ಎಂದು ನಿರ್ಧರಿಸುವುದು ಸುಲಭ ಸಾಧ್ಯವಲ್ಲ.

ಚೆನ್ನಬಸವಣ್ಣನವರ ಹತ್ತಿರ ಪಾಠ ಕಲಿಯಲು ಅಲ್ಲಮ ಪ್ರಭುಗಳು ಸಿದ್ಧರಾಮ ಶಿವಯೋಗಿಗಳನ್ನು ಕಲ್ಯಾಣಕ್ಕೆ ಕರೆದುಕೊಂಡು ಬಂದರೂ ಕೂಡ ಚೆನ್ನಬಸವಣ್ಣನವರೇ ನಿಜ ಗುರು ಎಂದು ನಿರ್ಧರಿಸಲು ಸಾಧ್ಯವಾಗಲಿಲ್ಲ ಎಂದು ಅವರೇ ಹೇಳಿಕೊಂಡಿದ್ದಾರೆ.

ಎಲ್ಲಿಯವರೆಗೆ ಆಂತರಿಕ ಗುರುದೇವನ ಪರಿಚಯವಾಗುವುದಿಲ್ಲವೋ ಅಲ್ಲಿಯವರೆಗೆ ತನಗೆ ಪಾಠ ಮಾಡುವ ಗುರುದೇವನ ಪರಿಚಯ ಕೂಡಾ ಆಗುವುದಿಲ್ಲ. ಇದು ಸತ್ಯ. ಬಾಹ್ಯ ಪಾಠಗಳನ್ನು ಕೇಳಿ ರೂಢಿಗತನಾದ ಶಿಷ್ಯನಿಗೆ ಸಕಲರೂ ಒಂದೇ ಆಗಿ ಕಾಣುತ್ತಾರೆ. ಆಂತರಿಕ ಸತ್ಯವನ್ನು ತಿಳಿ ಹೇಳುವ ಗುರುದೇವನ ಮೇಲೆ ಹಲವಾರು ಬಾರಿ ಅನುಮಾನಗಳು ಹುಟ್ಟುತ್ತವೆ. ಲೋಕದ ಜ್ಞಾನವನ್ನು ಬೋಧಿಸುವ ಗುರು ದೇವನಂತೆ ಆಂತರಿಕ ಗುರುದೇವನನ್ನು ಕೂಡಾ ಶಿಷ್ಯ ವಿಶ್ವಾಸಕ್ಕೆ ತೆಗೆದುಕೊಳ್ಳುವುದಿಲ್ಲ. ಎಲ್ಲಿಯವರೆಗೆ ತನ್ನ ಕರಣಂಗಳೆಲ್ಲ ನಿಜ ಕಿರಣಂಗಳಾಗಿ ಮಾರ್ಪಡುವುದಿಲ್ಲವೊ ಅಲ್ಲಿಯವರೆಗೆ ಗುರುದೇವನನ್ನು ಶಿಷ್ಯ ವಿಶ್ವಾಸಕ್ಕೆ ತೆಗೆದುಕೊಳ್ಳುವುದಿಲ್ಲ.

ಈ ವಿಷಯ ಗುರುದೇವನ ಗಮನಕ್ಕೆ ಬಂದರೂ ಕೂಡ ಆತನಿಗೆ ಗೊತ್ತಾಗದಂತೆ ಪಾಠ ಮುಂದುವರೆಸುತ್ತಾನೆ. ಶಿಷ್ಯನ ತನುವಿನಲ್ಲಿಯೇ ಸಂಗಮವಾದ ಸಂಗಮನಾಥನನ್ನು ಪರಿಚಯಿಸುವ ಜವಾಬ್ದಾರಿಯನ್ನು ಗುರುದೇವ ಹೊತ್ತುಕೊಂಡಿರುವುದರಿಂದ ಅದ್ಯಾವುದನ್ನು ಗಮನಿಸದೆ ಆತ ಹಿಡಿದ ಕೆಲಸವನ್ನು ಆತ ಪೂರೈಸುತ್ತಾನೆ.

ಶಿಷ್ಯನ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಸಂಗತಿಗಳನ್ನು ಹೇಳುತ್ತಾ ಆತನಿಗೆ ಗುಲಾಮನಾಗಲು ಶಿಷ್ಯನಿಗೆ ಬೋಧಿಸಿ ತಾನು ಹಿಂದೆ ಸರಿಯುತ್ತಾನೆ. ಶಿಷ್ಯನ ತನುವಿನಲ್ಲಿಯೇ ತನ್ಮಯವಾದ ನಿಜ ಗುರುವಿನ ಪರಿಚಯ ಶಿಷ್ಯನಿಗೆ ಆಗುವುದೊಂದೆ ತಡ ಕಾಯದಲ್ಲಿದ್ದ ಆತನ ಕರಣಂಗಳೆಲ್ಲ ಕಾಯದಲ್ಲಿಯೇ ಕಳಚಿ ಬೀಳುತ್ತವೆ.

ಕರಣಂಗಳೇ ಜ್ಞಾನಕಿರಣಂಗಳಾಗಿ ಕಾಯದಲ್ಲಿ ಬೆಳಗುತ್ತವೆ. ಕಾಯದ ಇರುವಿನ ನಿಜ ಬ್ರಹ್ಮದಲ್ಲಿಯೇ ಭ್ರಮ ಲೀನವಾಗುತ್ತದೆ. ಆತ್ಮಸಂಗ ಮಾಡಿದ ಭ್ರಮ ಬ್ರಹ್ಮನೇ ತಾನಾಗುತ್ತದೆ.

ಕಾಯವನ್ನು ಆವರಿಸಿದ ಅಜ್ಞಾನ ಕಾಯದಲ್ಲಿಯೇ ಸಂಗಮವಾದ ಜ್ಞಾನದೊಂದಿಗೆ ಬೆರೆತು ಕಪಿಲಸಿದ್ಧ ಮಲ್ಲಿನಾಥಯ್ಯನೇ ತಾನಾಗುತ್ತದೆ.

ಸಿದ್ಧರಾಮ ಶಿವಯೋಗಿ ಆತನ ಸದ್ಗುರುವಿಗೆ ಕಪಿಲಸಿದ್ಧ ಮಲ್ಲಿನಾಥಯ್ಯ ಎಂದು ಹೆಸರಿಟ್ಟು ಕರೆದು, ಗುರುದೇವನೇ, ಎನ್ನ ಹಡೆದ ತಂದೆಯೇ, ನಿಮ್ಮ ಕೃಪೆಯಿಂದ ನಿಮ್ಮ ಚೆನ್ನಬಸವಣ್ಣನ ದರುಶನ ನನಗಾಯಿತು. ನೀವೇ ಆತನನ್ನು ನನ್ನಲ್ಲಿಗೆ ಕಳುಹಿಸಿ ನಿಮ್ಮ ಪರಿಚಯ ಮಾಡಿಕೊಂಡಿರಿ. ನಿಮ್ಮ ದರುಶನವಾದ ನಂತರ ನನಗೆ ನಿಮ್ಮ ಚೆನ್ನಬಸವಣ್ಣನ ಪರಿಚಯ ಸಾಧ್ಯವಾಯಿತು.

ಸದ್ಗುರುವಿನ ದರುಶನವಾದ ನಂತರ ಶ್ರೀ ಗುರುವಿನ ನಿಜ ದರುಶನವಾಗುತ್ತದೆ. ಶ್ರೀ

ಗುರುವಿನ ತಾಳ್ಮೆ ಅಪಾರ ಪ್ರಭುವೇ. ನಿಮ್ಮಿಂದ ನಿಮ್ಮ ಕೃಪೆಯಿಂದ ಚೆನ್ನಬಸವಣ್ಣನ ಕೃಪೆ ಎನಗೆ ಸಾಧ್ಯವಾಯಿತು. ಪ್ರಭುವೆ ಎಂದು ಸಿದ್ಧರಾಮ ಶಿವಯೋಗಿಗಳು ಗುರು ದೇವನನ್ನು ಪರಿಚಯಿಸಿದ ಗುರುದೇವನನ್ನು ಸ್ಮರಿಸಿದ್ದಾರೆ.

**403**

**ಕರಣಂಗಳೆಲ್ಲವನು ಹದುಳದಿಂದವೆ ಬೆಳಗಿ**
**ಕರುಣದಿಂದಿರಿಸಿದನು ತೂಗಿ ತೂಗಿ.**
**ಕರಣ ಹರಣುಪಕಾರವಾಗಿಪ್ಪ ಗಿರ್ವಾಣ ಪದವನರಿದಾತ**
**ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನ.**

ಜ್ಞಾನದಿಂದ ಬೆಳಗಿಂಗೆ ಬೆಳಗಾಗಿ ಬೆಳಗುವ ಕರಣಂಗಳನ್ನು ಅರಿವೆಂಬ ಗುರುದೇವನು ಹದುಳದಿಂದಲೇ ಇಟ್ಟಿದ್ದಾನೆ. ಈತ ಕಾಯಕ್ಕೆ ಜನ್ಮ ನೀಡಿ ಕಾಯದಲ್ಲಿಯೇ ಸಂಗಮವಾದ ಕಾಯದ ಅಧಿಪತಿ; ಕಾಯದ ಮುಖ್ಯಸ್ಥ.

ಕಣ್ಣು ಜ್ಞಾನೇಂದ್ರಿಯ. ಇದನ್ನು ಇಡಬೇಕಾದ ಜಾಗದಲ್ಲಿಯೇ ಇಟ್ಟಿದ್ದಾನೆ. ಆತನ ಕರುಣೆ ಅಪಾರ. ಆತನ ಕಣ್ಣು ನೋಡುವ ವಸ್ತುವನ್ನೇ ನೋಡುತ್ತದೆ. ತೂಗಿ ತೂಗಿ ನೋಡಿ ತೃಣವೆಂದು ನಿರ್ಧರಿಸಿ ಸುಮ್ಮನಾಗುತ್ತದೆ.

ಕಣ್ಣಿಗೆ ಹೊಂದಿಕೊಂಡು ನನ್ನದೊಂದು ಕಣ್ಣು ಇದೆ. ಇದು ಮನದ ಕಣ್ಣು. ಕಣ್ಣನ್ನು ಆವರಿಸಿದ ಕಣ್ಣು. ನನ್ನ ಕಣ್ಣಿನಿಂದ ನಾನು ನೋಡಿದರೆ ಲೋಹ ಚಿನ್ನವಾಗಿ ಕಾಣುತ್ತದೆ. ಅಂಗ ಹೆಣ್ಣಾಗಿ ಗಂಡಾಗಿ ಕಂಡು ಕಾಮ ಕಾಯವನ್ನು ಹರಿದು ತಿನ್ನುತ್ತದೆ.

ಕರುಣಾಮಯನು ಕಾಯದಲ್ಲಿ ಕರುಣೆಯಿಂದ ಇರಿಸಿದ ಕಣ್ಣಾದರೂ ಏನು ಮಾಡೀತು? ಅದು ಬಳಕೆಗೆ ಬಾರದ ಬಟ್ಟೆಯಾಗಿ ಇದ್ದ ಜಾಗದಲ್ಲಿಯೇ ಇದೆ. ಅದೇ ಜಾಗದಲ್ಲಿ ಇದ್ದ ನನ್ನ ಅಜ್ಞಾನದ ಮಾಯಾ ಮಯವಾದ ಕಣ್ಣು ಮಾತ್ರ ನೋಡಲು ನಿಂತಿದೆ. ಇದು ನೋಡುವುದನ್ನು ನೋಡಲು ಬಾರದ ಅಸತ್ಯದ ಕಣ್ಣು. ಹೀಗಾಗಿ ಅಲ್ಲಮಪ್ರಭುಗಳು ''ನೋಡೂದನ್ನು ನೋಡಲರಿಯದೆ ಕಟ್ಟಿತ್ತೀ ಜಗವೆಲ್ಲ'' ಎಂದು ಜಗದ ಕುರುಡು ಕಣ್ಣುಗಳನ್ನು ಜರಿದರು. ಆದರೂ ಪ್ರಭುಗಳ ಈ ಮಾತು ಜಗದ ಕಣ್ಣುಗಳ ಅರಿವಿಗೆ ಬರಬೇಕಲ್ಲ? ಅರಿವಿನ ಮಾತಾಗಿ ಕೇಳಿ ಈ ಸೂತ್ರವನ್ನು ಪಾಲಿಸಬೇಕಲ್ಲ? ಇದು ಕಣ್ಣಿಗೆ ಸಾಧ್ಯವಾಗುವುದಿಲ್ಲ. ಏಕೆಂದರೆ ಕಣ್ಣಿಗೆ ಕಿವಿಯಿಲ್ಲ !

ಜಗದೀಶನು ಕರಣ ಹರಣುಪಕಾರವಾಗಿಪ್ಪ ಗಿರ್ವಾಣ ಪದವನರಿದಾತನು. ಕಾಯದಲ್ಲಿ ಇಡಬೇಕಾದ ಜಾಗದಲ್ಲಿ ಕಣ್ಣಿಟ್ಟು ಆ ಕಣ್ಣಲ್ಲಿ ಸ್ವತಹ ತಾನೇ ಬಚ್ಚಿಟ್ಟುಕೊಂಡಿದ್ದಾನೆ. ಹೀಗಾಗಿ ಈ ನಾಡಿನ ಜ್ಞಾನಿಗಳು ಆತನನ್ನು ಮುಕ್ಕಣ್ಣ ಎಂದು ಹೆಸರಿಟ್ಟು ಕರೆದಿದ್ದಾರೆ. ಈತನಿಂದಲೇ ಹುಟ್ಟಿದ ಮನ ಕಣ್ಣನ್ನು ಬಳಸಿ ತನ್ನ ದೃಶ್ಯದ ಮೂಲಕ ನೋಡುವುದರಿಂದ ಸತ್ಯವಸ್ತುಗಳು ಇದಕ್ಕೆ ಕಾಣುವುದಿಲ್ಲ.

ಅಜ್ಞಾನದ ಕಣ್ಣು ಕಲ್ಲನ್ನು ದೇವರೆಂದು ಕಂಡು ಕೈ ಮುಗಿಯುತ್ತದೆ. ನೀನು ಕಂಡ ದೃಶ್ಯ ಸತ್ಯವಲ್ಲವೆಂದು, ಅದು ಕಲ್ಲೆಂದು ಕಣ್ಣಪ್ಪನ ಕಣ್ಣು ಅಂದರೆ ಮಕ್ಕಣ್ಣನ ಕಣ್ಣು ದೃಶ್ಯದ ಮೂಲಕ ಮನದ ಅಜ್ಞಾನದ ಕಣ್ಣಿಗೆ ಪಾಠ ಮಾಡಿದರೂ ಕೂಡಾ ಈತನ ಜ್ಞಾನದ ಕಿರಣ ಅಜ್ಞಾನದ

ಕರಣಂಗಳಿಗೆ ತಾಕುವುದೇ ಇಲ್ಲ.

ಉಪಕಾರವಾಗಿರುವಂತಹ ಗಿರ್ವಾಣದ ಈ ಪದವನರಿಯಲು ಮನಕ್ಕೆ ಸಾಧ್ಯವಾಗುವುದೇ ಇಲ್ಲ. ಆದರೂ ಸಕಲ ಕರಣಂಗಳನ್ನು ಹದುಳದಿಂದಲೇ ಬೆಳಗಿಂಗೆ ಬೆಳಗಾಗಿ ಬೆಳಗುವುದನ್ನು ತೂಗಿ ತೂಗಿ ಬೆಳಗುವುದನ್ನು ಅರಿವೆಂಬ ಗುರುದೇವ ನಿಲ್ಲಿಸಿಲ್ಲ. ಈತ ಕಾಯವನ್ನು ಕೈಲಾಸವಾಗಿಸಿಕೊಂಡು ಸಕಲ ಕರಣಂಗಳನೆಲ್ಲ ಕಿರಣಂಗಳನ್ನಾಗಿರಿಸಿಕೊಂಡಾತ.

ಸದ್ಗುರುದೇವನ ಈ ಅರಿವನ್ನು ಅರಿದಾತನೆಂದರೆ ಶ್ರೀಗುರು ಮಾತ್ರ. ಶ್ರೀಗುರುದೇವನು ಕಾಯವುಳ್ಳಾತ. ಮನೋಮಯವಾದ ಕಾಯಕ್ಕೆ ಕಾಯದಲ್ಲಿಯೇ ಸಂಗಮವಾದ ಸದ್ಗುರುವನ್ನು ತೋರುವಾತ. ಕರಣ ಹರಣುಪಕಾರವಾಗಿಪ್ಪ ಗಿರ್ವಾಣ ಪದವನರಿದಾತ. ಅರಿದರಿದು ಅರಿಯುವಂತೆ ಮನೋಮಯ ಕಾಯಕ್ಕೆ ಉಪಕಾರ ಮಾಡುವಾತ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದಾತ.

**404**

**ಕರಣ ಕಂದೆರವುದನು ಆರಯ್ಯಾ ಅರಿವರು ?**
**ಕರಣೇಂದ್ರಿಯಂಗಳ ರತ ನಿತ್ಯರಲ್ಲದೆ.**
**ನೆನಹಿನ ಬ್ರಹ್ಮಾಂಡವೊಳಕೊಂಡ ಸೀಮೆಯನು**
**ತನು ಮಧ್ಯಕರದಲಿ ಕಂಡೆ.**
**ಪ್ರಸಾದ ತ್ರೈಲಿಂಗವ ಮರಳಿ ಸಕಾಲಕ್ಕಾನೆ ನಿಷ್ಕಲಕೆ ನಿತ್ಯನೈ**
**ಅಜಾತರೂಪ ಕಪಿಲಸಿದ್ಧ ಮಲ್ಲಿಕಾರ್ಜುನ.**

ಕರಣವೇ ಜ್ಞಾನ ಕಿರಣವಾಗಿ ಅರಿವಿನ ಭಗವಂತನಿರುವತ್ತ ಕುಣಿಯುತ್ತ ಕಣ್‌ದೆರೆದು ಹೋಗುವುದನ್ನು ಆರಯ್ಯಾ ಅರಿವರು ? ಕರಣೇಂದ್ರಿಯಗಳು ಪ್ರಾಪಂಚಿಕ, ಲೌಕಿಕ ವಿಷಯದತ್ತ ಸೆಳೆದೊಯ್ಯುವುದನ್ನೇ ಗಮನಿಸಿದ ಲೋಕ ಭಗವಂತನೊಂದಿಗೆ ಕೂಟಸ್ಥವಾಗಿ ರತಿಕ್ರೀಡೆಯಲ್ಲಿ ತೊಡಗುವುದನ್ನು ಲೋಕ ಗಮನಿಸಲು ಸಾಧ್ಯವೆ ? ಅದು ಸಾಧ್ಯವಾಗುವುದೇ ಇಲ್ಲ. ನಿತ್ಯರೂ ಸತ್ಯರೂ ಆದಂತಹ ಶಿವ ಶರಣರು ಮಾತ್ರ ಗಮನಿಸುತ್ತಾರೆಯೇ ಹೊರತು ಅನ್ಯರಿಗೆ ಸಾಧ್ಯವಾಗುವುದಿಲ್ಲ.

ಅಂಗುಲಿಮಾಲ ನಿತ್ಯವೂ ಮಾನವ ಕುಲವನ್ನೇ ದ್ವೇಷಿಸುತ್ತಿದ್ದ. ಮಾನವನಾಗಿಯೂ ಮಾನವನನ್ನು ಕೊಂದು ಆತನ ಬೆರಳು ಕಡಿದು ಕೊರಳಲ್ಲಿ ಧರಿಸಿದರೆ ಮಾತ್ರ ಆತನಿಗೆ ತೃಪ್ತಿ. ನೂರಾರು ಬೆರಳುಗಳು ಅಂಗುಲಿಮಾಲನ ಕೊರಳಲ್ಲಿ ಆಭರಣಗಳಾಗಿ ಓಲಾಡುತ್ತಿದ್ದವು.

ಮಾನವನಿಗೆ ಮಾನವನೆಂದರೆ ಭಯವಾಗಿತ್ತು. ಅವನತ್ತ ಸುಳಿಯುವ ಒಬ್ಬ ಮಾನವನೂ ಇರಲಿಲ್ಲ. ಮಾನವ ಬಂದರೆ ಸಾಕು ಕತ್ತಿ ಹಿಡಿದು ಕಡಿದು ಕೊರಳಲ್ಲಿ ಬೆರಳು ಹಾಕಿಕೊಂಡು ವಿಕೃತದ ನಗೆ ಬೀರುವ, ಮಾನವನಿದ್ದ ದಾರಿಯತ್ತ ಬರಲು ಮಾನವನಿಗೆ ಭಯವಾಗುತ್ತಿತ್ತು. ಅವನು ವಾಸ ಮಾಡಿದ ಕಾಡೇ ಕಾಡಿನತ್ತ ಹೆಜ್ಜೆ ಇಡುವ ಮಾನವನನ್ನು ತಡೆದು ನಿಲ್ಲಿಸುತ್ತಿತ್ತು.

ನಿರ್ಭಯಿ ಮಾನವನೊಬ್ಬ ಅತ್ತ ನಡೆದ. ಆತ ಬುದ್ಧ, ಅನುಯಾಯಿಗಳು ಭಯದಿಂದ ಬುದ್ಧನನ್ನು ತಡೆದು ನಿಲ್ಲಿಸಿದರು. ಬುದ್ಧ ನಿಲ್ಲಲಿಲ್ಲ. ಅಂಗುಲಿಮಾಲನಿರುವತ್ತ ನಡೆದ.

ನಿರ್ಭಯದ ನಡಿಗೆಯನ್ನು ಕಂಡು ಅಂಗುಲಿಮಾಲ ಗಡಗಡನೆ ನಡುಗಿದ.

ಮಾನವ ಮಾನವನನ್ನು ನೋಡಿ ಅಂಜುವುದೆಂದರೇನು? ಮಾನವ ಮಾನವನನ್ನು ನೋಡಿ ಅಂಜಿಸಿ ಸಾಯಿಸುವುದೆಂದರೇನು? ಇದು ಮಾನವ ಕುಲಕ್ಕೆ ಅಪಚಾರದ ಮಾತು. ಮಾನವನ ಕರಣೇಂದ್ರಿಯಗಳು ಕಣ್ ತೆರೆಯದಿದ್ದರೆ ಮಾನವನನ್ನೇ ಕೊಂದು ತಿನ್ನುತ್ತವೆ.

ಕರಣೇಂದ್ರಿಯಗಳಿಗೆ ಮಾನವನನ್ನೇ ತಿನ್ನುವ ಆಸೆ. ಮಾನವನಲ್ಲಿ ಆಶ್ರಯ ಪಡೆದು ಮಾನವನನ್ನೇ ಕೊಂದು ತಿನ್ನುವ ಆಸೆ. ಅವು ಕಣ್ತೆರೆದರೆ ಸಾಕು ಮಾನವನಲ್ಲಿದ್ದ ಮಹಾಮಾನವನನ್ನು ತಿನ್ನಲು ಹೋಗುತ್ತವೆ.

ಕರಣೇಂದ್ರಿಯಗಳೊಂದಿಗೆ ಮಾನವನೂ ಮಹಾಮಾನವನೊಂದಿಗೆ ಕೂಟಸ್ಥನಾಗಿ ಇಲ್ಲವಾಗುತ್ತಾನೆ. ಆಗ ಕರಣೇಂದ್ರಿಯಗಳೇ ಕಿರಣೇಂದ್ರಿಯಗಳಾಗಿ ಮಹಾಮಾನವನನ್ನು ಬೆಳಗಿಂಗೆ ಬೆಳಗಾಗಿ ಬೆಳಗುತ್ತವೆ.

ಸಿದ್ಧಾರ್ಥ ಕೂಡಾ ಮಾನವ. ಈತನ ಕರಣೇಂದ್ರಿಯಗಳು ಕೂಡಾ ಈತನೊಂದಿಗೆ ಮಹಾಮಾನವನನ್ನು ತಿನ್ನಲು ಮುಂದೆ ಮುಂದೆ ಸಾಗಿದವು. ಈತ ಸಾಮಾನ್ಯನೇ? ಬುದ್ಧ! ಸಿದ್ಧಾರ್ಥನ ಕರಣೇಂದ್ರಿಯಗಳನ್ನು ತಿಂದು ಹಾಕಿದ. ಕರಣೇಂದ್ರಿಯಗಳೇ ಜ್ಞಾನಕಿರಣಗಳಾಗಿ ಬೆಳಗಿದವು. ಬೆಳಗಿನಲ್ಲಿ ಬೆಳಗಾಗಿ ಬುದ್ಧನನ್ನು ಬೆಳಗಿದವು.

ಮಾನವ ಮಹಾಮಾನವನನ್ನು ತಿನ್ನಲು ಹೋಗಿ ಸತ್ತು ಹೋದ. ಅಲ್ಲಿಯೇ ಕೂಟಸ್ಥನಾದ. ಮಾನವನೇ ಮಹಾಮಾನವನಾದ. ಸಿದ್ಧಾರ್ಥನೇ ಬುದ್ಧನಾದ. ಸಿದ್ಧಾರ್ಥ ಬುದ್ಧನಲ್ಲಿ ಕಳೆದು ಹೋದ.

ಮಾನವನ ಮಧ್ಯದಲ್ಲಿಯೇ ಮಹಾಮಾನವನಿದ್ದುದನ್ನು ಮಾನವ ಮರೆತು ಹೋಗಿದ್ದ. ಮಾನವನಿಗೆ ನೆನಪುಗಳ ಭ್ರಮೆ ಆವರಿಸಿದೆ. ಆ ಭ್ರಮೆಯ ಸೀಮೆಯಲ್ಲಿಯೇ ಮೈಮರೆತಿದ್ದಾನೆ. ಅಜ್ಞಾನದ ಸೀಮೆ ದಾಟಿದರೆ ಸಾಕು 'ಅಹಂ ಬ್ರಹ್ಮಾಸ್ಮಿ' ಎಂಬುದು ಆತನಿಗೇ ಗೊತ್ತಾಗುತ್ತದೆ. ಕೂಡಲೇ ಭ್ರಮೆಗಳ ಸೀಮೆಯನ್ನು ಕೊಡವಿ ಬ್ರಹ್ಮನೇ ತಾನಾಗುತ್ತಾನೆ.

ಅಂಗುಲಿಮಾಲ ತಾನು ಕೂಡಾ ಮಹಾ ಮಾನವನೆಂಬುದನ್ನು ಮರೆತು ಹೋಗಿದ್ದ. ಬುದ್ಧ ನೆನಪಿಸಿದ. ಕೂಡಲೇ ಅಂಗುಲಿಮಾಲ ಬುದ್ಧನನ್ನು ಅಪ್ಪಿಕೊಂಡ. ಬುದ್ಧನೇ ಆದ. ಆತನಿಗೆ ಅಂಗುಲಿಮಾಲ ಪ್ರಸಾದವಾದ. ಕಾಯ ಪ್ರಸಾದ ಕಾಯವಾಯಿತು. ಬುದ್ಧ ಬುದ್ಧನನ್ನು ಕರೆದುಕೊಂಡು ನಾಡಿಗೆ ಬಂದ. ನಾಡೇ ಬೆರಗಾಯಿತು. ಕರಣಂಗಳೆಲ್ಲ ಜ್ಞಾನ ಕಿರಣಂಗಳಾಗಿ ಬೆಳಗಿದವು.

**405**

**ಕರಣಾದಿ ಗುಣಗಳನು ಕಳೆಯಲೀಯದೆ ಕಳೆದು,**
**ಹದುಳವಿರಿಸಿದ ಮನದ ಮಧ್ಯದಲ್ಲಿ.**
**ತನುತ್ರಯದ ಮಲತ್ರಯವ ಅಜಲೋಕದಲು ಸುಟ್ಟು,**
**ಹದುಳವಿರಿಸಿದ ಸಮತೆ ಸಂಗಮದಲಿ.**
**ಕರುಣಾಕರನೆ ಕಪಿಲಸಿದ್ಧಮಲ್ಲೇಶ್ವರನ**
**ನೆನೆಹ ತೋರುವ ಮುಕುರ ಸಮತೆ ರೂಪು.**

ಕರುಣಾಕರನೆ ಕಪಿಲಸಿದ್ಧ ಮಲ್ಲಿಕಾರ್ಜುನನೆ ನಿನ್ನ ಕರುಣೆ ಅಪಾರ. ಕಳೆಯಲು ಬಾರದಂತಹ, ಎಂದೆಂದಿಗೂ ಕಳೆದುಕೊಳ್ಳಲು ಬಾರದಂತಹ ಕರಣಾದಿಗುಣಗಳನ್ನು ಕಳೆದು ನನ್ನನ್ನು ಪರಮ ಸಂತೋಷದಲ್ಲಿರಿಸಿದೆ. ಮತ್ತೆ ಮರುಕಳಿಸಬಾರದೆಂದು ಮನವನ್ನು ಮಧ್ಯದಲ್ಲಿರಿಸಿ ತನುವನ್ನು ಪಾರು ಮಾಡಿದೆ.

ತನುವಿಗೆ ಅಂಟಿದ ತನುತ್ರಯದ ಮಲತ್ರಯವನು ಅದರ ಸಕಲ ಭ್ರಮಾ ಗುಣಗಳನ್ನು ಬ್ರಹ್ಮಲೋಕದಲ್ಲಿಯೇ ಸುಟ್ಟು ಹಾಕಿದೆ.

ಸ್ಥೂಲ ಸೂಕ್ಷ್ಮ ಕಾರಣ ತನುಗಳಿಗಂಟಿದ ಅಜ್ಞಾನದ ಮಲತ್ರಯಗಳನ್ನು ಸುಟ್ಟು ಸಮತೆಯ ಸಂಗಮದಲ್ಲಿ ಲೀಯ ಮಾಡಿ ಹದುಳವಾಗಿರಿಸಿದ ಪರಮಾತ್ಮನು ನೀನು. ಸಾತ್ವಿಕ ರಾಜಸ ತಾಮಸ ಗುಣಗಳನ್ನು ಭಸ್ಮ ಮಾಡಿ ನಿರ್ಗುಣಿಯನ್ನಾಗಿಸಿದ ನೀರಮಲ್ಲಯ್ಯ ನೀನು.

ತನುವಿನಲ್ಲಿ ಸ್ಥೂಲ ತನುವೂ ಇದೆ, ಸೂಕ್ಷ್ಮ ತನುವೂ ಇದೆ, ಕಾರಣ ತನುವೂ ಇದೆ. ಹೀಗೆಂದು ಶಾಸ್ತ್ರ ಕೂಡಾ ಹೇಳುತ್ತದೆ. ಹಾಗೆ ಇದ್ದುದು ತನುವಿನ ಅನುಭವಕ್ಕೆ ಕೂಡಾ ಬರುತ್ತದೆ. ಆದರೆ ಮೂರನ್ನೂ ಕಳೆದುಕೊಂಡು ಒಂದೇ ಮಾಡಿಕೊಳ್ಳುವುದು ಜಟಿಲ. ಅದು ನನ್ನಿಂದಾಗದ ಕೆಲಸ. ಇದು ನಿನಗೂ ಕೂಡಾ ಗೊತ್ತಿದೆ. ಹಾಗೆಂದೇ ನೀನು ನನಗೆ ನನ್ನನ್ನೇ ನಾನು ನೋಡಿಕೊಳ್ಳಲು ನಿನ್ನ ಕನ್ನಡಿಯನ್ನು ಕೊಟ್ಟೆ. ಅದು ರೂಪಕ್ಕೆ ಸಮತೆಯ ರೂಪು ತೋರುವ ದಿವ್ಯ ಅಸ್ತ್ರ.

ಕರುಣಾಕರನೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ನನಗೆ ನಿನ್ನ ಕನ್ನಡಿಯನ್ನು ನನ್ನಲ್ಲಿಯೇ ತೋರಿ ನನ್ನ ಮೂಲಕವೇ ನನ್ನಲ್ಲಿಯೇ ನಿನ್ನ ದರುಶನ ಮಾಡಿಸಿದೆ. ಕರಣಾದಿ ಗುಣಗಳನ್ನು ಕಳೆದು ಮನದ ಮಧ್ಯದಲ್ಲಿ ಹದುಳವಾಗಿರಿಸಿದೆ.

**406**

**ಕರದ ಮಹಾತ್ಮೆಯ ಹೊಗಳುವರೆ ಎನ್ನಳವೆ ?**
**ಕರುಣಾಕರನೆ ಬಲ್ಲ ಗುರುರಾಯನು.**
**ಹಲವು ಬ್ರಹ್ಮಾಂಡವನು ಒಳಗಿಟ್ಟ ಘನವನು**
**ಧರಿಸಿಪ್ಪುದದು ಭಕ್ತಿಕರವು ನೋಡಾ.**
**ಆ ಶರಣರ ಕರವನು ಹೊಗಳುವವು ವೇದಂಗಳಯ್ಯ ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದ ಮಹಾತ್ಮೆಯನು ಹೊಗಳುವರೆ ಎನ್ನಳವೆ? ಕರುಣಾಕರನು ಇದ್ದ ಕಾಯವನ್ನು ಕರುಣಾಕರನೇ ಬಲ್ಲ. ಆತನು ಇದ್ದ ಕೈಲಾಸವನ್ನು ಹೀಗೆ ಎಂದು ಹೊಗಳಲು ಕಾಯ ಹೊದ್ದ ನನಗೆ ಅಳವಲ್ಲ.

ಹಲವು ಬ್ರಹಾಂಡವನು ಕಾಯದ ಒಳಗಿಟ್ಟು ಆ ಕಾಯದೊಳಗೆ ತಾನಿದ್ದು ಆ ಕಾಯವನ್ನು ಹೊಲಿದುಕೊಂಡಿದ್ದಾನೆ. ಅಂತಹ ಕಾಯವನ್ನು ಆವರಿಸಿದ ಮನವೆಂಬ ಕೂಸು ನಾನು. ಆತನಿದ್ದ ಕಾಯವನ್ನು ನನಗೆ ಹೊಗಳಲು ಸಾಧ್ಯವೆ ? ಹೊಗಳುವುದೇಕೆ, ಆತನ ಕಾಯವನ್ನು ಕಾಯವೆಂದು ಕೂಡಾ ನೋಡಲು ಬಾರದ ಕುರುಡ ನಾನು.

ಕಣ್ಣಿದ್ದರೂ ಕಾಯವನ್ನು ಕೈಲಾಸವೆಂದು ನೋಡಲು ಬಾರದ ಕಣ್ಣು ಕಾಣದ ಕಾಬೋಜಿ ನಾನು. ಗುರುದೇವನಿದ್ದ ಕಾಯವನ್ನು ಹೆಣ್ಣೆಂದು ಗಂಡೆಂದು ನೋಡುವ ಕುರುಡ ನಾನು. ಜಾತಿ

ಮತ ಪಂಥಗಳಿಂದ ಧರ್ಮಗಳಿಂದ ಪಂಗಡಗಳಿಂದ ವಿಂಗಡಿಸಿ ನೋಡುವ ಅವಿವೇಕಿ ನಾನು. ಹಾಗೆ ನೋಡುವ ನಾನು ಕೂಡಾ ಬೇರಲ್ಲ. ಆ ಕರುಣಾಕರನ ಪ್ರಸಾದವೇ ನಾನು. ಆ ಗುರುದೇವನ ಕಂದ ನಾನು. ನನಗೂ ಆತನಿಗೂ ವ್ಯತ್ಯಾಸವಿಲ್ಲ.

ಆತ ಬೆಳಕಾದರೆ ಆತನ ನೆರಳು ನಾನು. ಆತ ಘನನಾದರೆ ಆತನಿಂದಲೇ ಹುಟ್ಟಿದ ಮನ ನಾನು. ಆತ ಲಿಂಗಯ್ಯನಾದರೆ ಆತನಿದ್ದ ಅಂಗವೇ ಆಲಯ; ಆ ಅಂಗವನ್ನು ನೆರಳಿನಂತೆ ಆವರಿಸಿದ ಮನವೇ ನಾನು.

ಲಿಂಗಯ್ಯನಿಗೆ ಅಂಗವನ್ನು ಆವರಿಸಿದ ಮನವೆಂಬ ನಾನು ಭಕ್ತಿ ಮಾಡಿದರೆ ಸಾಕು ಸತಿಯಾಗುತ್ತೇನೆ. ಆತನಿಗೆ ಶರಣು ಹೋಗಿ ಶರಣನೇ ಆಗುತ್ತೇನೆ. ಶರಣ ಸತಿಯಾಗಿ ಲಿಂಗಯ್ಯನೇ ಶರಣನಿಗೆ ಪತಿಯಾಗುತ್ತಾನೆ.

ಕಾಯ ಶರಣನ ಕಾಯವಾಗುತ್ತದೆ. ಶರಣ ಸತಿ ಲಿಂಗಪತಿಯಿದ್ದ ಕಾಯವಾಗುತ್ತದೆ. ಕಾಯವೇ ಕೈಲಾಸವಾಗುತ್ತದೆ. ಇದು ಶರಣನ ಕಾಯಕ.

'ಕಾಯಕ'ವೆಂದರೆ ಕಾಯವನ್ನು ಬದುಕಿಸುವುದಕ್ಕಾಗಿ ಮಾಡುವ ಕೆಲಸವನ್ನು ಕಾಯಕವೆಂದು ತಿಳಿದಿವೆ ಕಾಯಗಳು! ಇದು ಕಾಯದ ಮೂರ್ಖತನ. ಕಾಯವನ್ನು ಆವರಿಸಿದ ಮನದ ಮೂರ್ಖತನ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಶರಣು ಹೋಗುವ ಕೆಲಸವೇ 'ಕಾಯಕ' ಈ ಕಾಯಕ ಮಾಡಿದ ಕಾಯವೇ ಕೈಲಾಸವೆಂದು ಕರೆಯಿಸಿಕೊಳ್ಳುತ್ತದೆ.

ಶರಣನು ವಾಸ ಮಾಡಿದ ಕಾಯವನ್ನು ಸಕಲ ವೇದಗಳು ಆಗಮಗಳು ಉಪನಿಷತ್ತುಗಳು ಹೊಗಳಿವೆ. ಕ್ರಿಷ್ಣ ಕ್ರಿಸ್ತ ಪೈಗಂಬರರು ಕೂಡಾ ಹೊಗಳಿದ್ದಾರೆ. ಬುದ್ಧ ಕೂಡಾ ಅಂಗುಲಿಮಾಲನಿದ್ದ ಕಾಯವನ್ನು ಬುದ್ಧನಿದ್ಧ ಕಾಯವನ್ನಾಗಿ ಕಂಡ. ಕಾಡಿನಲ್ಲಿದ್ದ ಕಾಯವನ್ನು ಬುದ್ಧನ ಕಾಯವೆಂದು ನಾಡಿಗೆ ಪರಿಚಯಿಸಿದ.

ಬಸವಾದಿ ಶರಣರು, ದಾಸವರೇಣ್ಯರು ಸಕಲ ಕಾಯಗಳನ್ನು ಕೈಲಾಸವನ್ನಾಗಿಯೇ ಕಂಡರು. ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಯ್ಯನಿಗೆ ಶರಣು ಹೋಗಿ ಶರಣನೇ ತಾನಾದ. ಸಕಲ ಕಾಯಗಳಿಗೂ ಶರಣು ಶರಣಾರ್ಥಿ ಎಂದು ತಲೆಬಾಗಿ ನಮಿಸಿದ.

**407**

**ಕರದಲ್ಲಿ ಲಿಂಗವನು ಗುರು ಕುಡಲಿಕಾನಂದ**
**ತನುವಿನೊಳು ಭೇದಿಸುವ ಪರಿಯ ನೋಡಾ.**
**ಉರುತರವು ಕೈವಲ್ಯಪದ ದೀಕ್ಷಾತ್ರಯದಿ**
**ಭವಿಸುವಾತನು ತಾನು ಪರಮಜ್ಞಾನಿ ಶಿಷ್ಯನು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿ ಇರುವ ಅರಿವನ್ನು ಕಂಡು ಆ ಅರಿವಿನಲ್ಲಿಯೇ ಲೀನವಾಗಿ ಗುರುದೇವನೇ ತಾನಾದ ಗುರು ಮಾತ್ರ ಅಂಗದಲ್ಲಿ ಸಂಗಮವಾದ ಗುರುದೇವನನ್ನು ಅಂಗಕ್ಕೆ ತೋರಬಲ್ಲ.

ಅಂಗವನ್ನು ಆವರಿಸಿದ ಮನವನ್ನು ಹಿಡಿದು ಪಳಗಿಸಿ, ಆ ಮನವನ್ನೇ

ಶಿಷ್ಯನಾಗಿಸಿಕೊಂಡು, ಆ ಶಿಷ್ಯನಿಗೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ವೃತ್ತಾಂತವನ್ನು ಸೂಚಿಸಬಲ್ಲ. ಆತನೊಂದಿಗೆ ಮಾತನಾಡುವ ಕಲೆಯನ್ನು ಶಿಷ್ಯನಿಗೆ ಕಲಿಸಬಲ್ಲ.

ಅರಿವಿನ ದಾರಿಯಲ್ಲಿ ನಡೆದು ಗುರುದೇವನ ಚರಣ ಕಮಲಗಳಿಗೆ ಶರಣು ಹೋಗಿ ಶರಣನಾಗುವ ಕಲೆಯನ್ನು ಕಲಿಸಬಲ್ಲ. ತನುವನ್ನು, ತನುವನ್ನು ಆವರಿಸಿದ ಮನವನ್ನು ಭೇದಿಸಿ, ಮನ ಘನದಲ್ಲಿ ಬೆರೆಸಿ ಘನಮನವಾಗುವ ಸೂತ್ರವನ್ನು ಗುರುದೇವ ಮಾತ್ರ ಹೇಳಬಲ್ಲ. ಆತ ಸಮರ್ಥ. ಶಿಷ್ಯನ ಕೈಹಿಡಿದು ಕರೆದುಕೊಂಡು ಹೋಗಿ ಅರಿವೆಂಬ ಗುರುದೇವನಿಗೆ ಒಪ್ಪಿಸುವ ಸೂಚನಾ ಗುರು ಆತ.

ಕಾಯವನ್ನು ಹತ್ತಿರ ಕರೆದು, ಅದರ ಮೈ ಮನ ದಡವಿ, ಕಾಯದೊಳಗೆ ಗುರು ಕಾಯವನ್ನು ತೋರಿ, ಸ್ಥೂಲಕಾಯವನ್ನು ಮುಟ್ಟಿ ತೋರಿ, ಕಾಣುವ ಈ ಕಾಯ ಗುರು ಶಿಷ್ಯರಿಬ್ಬರು ವಾಸ ಮಾಡುವ ಮನೆಯೆಂದು ದಿಟದಿಂದ ನುಡಿದು ಮೂರು ಕಾಯಗಳಿಗೂ ಕೈವಲ್ಯ ಪದವಿಯನ್ನು ತೋರಿಸುವ ಮಹಾ ಮಹಿಮನು ಆತ.

ಜ್ಞಾನಿಯೆಂದರೆ ಸಾಮಾನ್ಯನೆ? ತನ್ನ ತನುವಿನಲ್ಲಿಯೇ ಸಂಗಮವಾದ ಪರಮಜ್ಞಾನದ ಬ್ರಹ್ಮರಸವನ್ನು ಪಾನ ಮಾಡಿದಾತ! ಆ ಪರಮ ಜ್ಞಾನದ ಅನುಭವವನ್ನು ಅಲ್ಲಿಗೆ ಹೋಗುವ ಸರಳ ಮಾರ್ಗವನ್ನು ಶಿಷ್ಯನಿಗೆ ತೋರುವಾತ. ಶಿಷ್ಯನನ್ನು ಪರಮ ಜ್ಞಾನಿಯನ್ನಾಗಿ ಮಾಡುವಾತ. ಆತ ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥ!

**408**

**ಕರದಲ್ಲಿ ಶಿವಲಿಂಗ**
**ಉದರದಲ್ಲಿ ಅಗ್ನಿ ಪರಿಯಂತೆ ಪ್ರಸಾದಲಿಂಗ ಭವಿಸಿ,**
**ತನು ಮಲತ್ರಯವನು, ಘನಪಾಶವರ್ಗವನು,**
**ನೆನಹಿಂದ ಸುಟ್ಟುದದು ಪರಿಯಂತರವುಯೆಯ್ದಿ**
**ಸಕಲವನು ತೋರುವಾ ಅಪ್ರಮಾಣ ಪ್ರಸಾದಲಿಂಗ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಇದ್ದ ಅರಿವೆಂಬ ಶಿವಲಿಂಗ ಅಂಗವನ್ನು ಆವರಿಸಿದ ಅಜ್ಞಾನವನ್ನು ಸುಟ್ಟು ಪ್ರಸಾದವನ್ನಾಗಿಸಿಕೊಂಡು ಉಣ್ಣುತ್ತದೆ.

ಕಾಯದಿಂದಲೇ ಉಂಟಾದ ಅಜ್ಞಾನವೆಂಬ ವಿಷವನ್ನು, ವಿಷಯವನ್ನು ನಿರ್ವಿಷಯಗೊಳಿಸಿ ಅಮೃತವನ್ನಾಗಿಸಿಕೊಂಡು ಜ್ಞಾನಕಾಯ ತನ್ನ ಜ್ಞಾನದ ನೆನಹಿನಿಂದಲೇ ಸುಟ್ಟು ಭಸ್ಮವನ್ನಾಗಿಸಿಕೊಂಡು ಕಾಯಕ್ಕೆ ಧರಿಸಿಕೊಳ್ಳುತ್ತದೆ. ಆಗ ಜ್ಞಾನ ಕಾಯವೇ ಭಸ್ಮ ಕಾಯವಾಗುತ್ತದೆ.

ಸೆಗಣಿ ಒಣಗಿ ಕುರುಳಾಗಿ ಸುಟ್ಟು ತನ್ನ ಮೂಲಗುಣವನ್ನು ಹೇಗೆ ಕಳೆದುಕೊಂಡು ಭಸ್ಮವಾಗುತ್ತದೆಯೋ ಹಾಗೆಯೇ ಜ್ಞಾನ ಕಾಯಕ್ಕೆ ತುತ್ತಾದ ಅಜ್ಞಾನ ಕಾಯ ಕೂಡಾ ಭಸ್ಮ ಕಾಯವಾಗಿ ಜ್ಞಾನ ಕಾಯದಲ್ಲಿ ಸಂಗಮವಾಗುತ್ತದೆ.

ಹೆಸರು ಧರ್ಮ ಜಾತಿ–ಮತ ಪಂಥಗಳಿಂದ, ಹೆಣ್ಣು ಗಂಡು ಶ್ರೀಮಂತ ಬಡವ ಎಂಬ ಅಜ್ಞಾನದಿಂದ ಕರೆಯಿಸಿಕೊಳ್ಳುವ ಸಕಲ ಅಜ್ಞಾನವನ್ನು ಪ್ರಸಾದವನ್ನಾಗಿಸಿಕೊಂಡು ಅಪ್ರಮಾಣ, ಅಂದರೆ ಪ್ರಮಾಣಕ್ಕೆ ನಿಲುಕದ, ಯಾರೂ ಹೀಗೆ ಎಂದು ಪ್ರಮಾಣಿಸಲು ಸಾಧ್ಯವಾಗದಂತಹ

ಪ್ರಸಾದ ಲಿಂಗವಾಗುತ್ತದೆ. ಹಾಗೆ ಆದುದು ತನಗೆ ತಾನೇ ಗೋಚರಕ್ಕೆ ಬರುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**409**

**ಕರಮನದಲ್ಲಿ ತುನುವಾದೆ ಅಯ್ಯಾ ,**
**ಮನದ ಮಧ್ಯಸ್ಥಾನ ನೀನು.**
**ತನುಪ್ರಾಣ ಇಷ್ಟವಾದೆ.**
**ಮನದ ಮಂಗಳನೆ ಅವಧಾರು**
**ತನುಗುಣದೂರನೆ ನಮೋ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕರ ಎನ್ನುವುದು ಒಂದು ಕಾಯ. ಮನ ಎನ್ನುವುದು ಕೂಡಾ ಒಂದು ಕಾಯ. ತನು ಎಂಬುದು ಕೂಡಾ ಒಂದು ಕಾಯವೇ ಆಗಿದೆ. ಕರ ಮತ್ತು ಮನಗಳೆರಡೂ ಕಾಣುವುದಿಲ್ಲ. ಕಾಣುವ ತನುವಿನಲ್ಲಿ ಇವೆರಡೂ ಸಂಗಮವಾಗಿವೆ. ಈ ಕಲೆಯನ್ನು ಕರಗತ ಮಾಡಿಕೊಂಡಾತನಿಗೆ ಮಾತ್ರ ಕರ ಮನಗಳೆರಡೂ ಕಾಣುತ್ತವೆ.

ಮನದ ಮಧ್ಯದಲ್ಲಿ ಮಹಾದೇವ ಸಂಗಮವಾಗಿದ್ದಾನೆ. ಮನಕ್ಕೆ ಮಹಾದೇವನನ್ನು ಕಾಣುವ ಬಲವಾದ ಬಯಕೆ ಆದಾಗ ಮನದಲ್ಲಿಯೇ ಮಂಗಳ ಮೂರ್ತಿಯಾಗಿ ಪ್ರತ್ಯಕ್ಷವಾಗಿ ಮನಕ್ಕೆ ದರುಶನ ನೀಡುತ್ತಾನೆ.

ಮಂಗಳ ಮೂರ್ತಿಯ ದರುಶನದಿಂದಾಗಿ ತನು ಗುಣಗಳು ದೂರವಾಗುತ್ತವೆ. ತನುವಿಗೆ ನಿರ್ಗುಣನ ಪರಿಚಯವಾಗುತ್ತದೆ. ನಿರಂಜನನ ಪರಿಚಯವಾಗುತ್ತದೆ. ತನುವಿನ ಸಕಲ ರಂಜನಾ ಗುಣಗಳು ದೂರವಾಗುತ್ತವೆ. ಕರ ಮನ ತನು ಪ್ರಾಣಗಳಿಗೆ ನಿರಂಜನನ ದರುಶನವಾಗಿ ಕಾಯ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**410**

**ಕರವೆ ಭಾಂಡವಾಗಿ ಜಿಹ್ವೆಯ ಕರವಾಗಿ,**
**ಇಂದ್ರಿಯಂಗಳೈಮುಖವಾಗಿಪ್ಪ ಪ್ರಸಾದಿಯ ಪರಿಯಿನ್ನೆಂತೋ ?**
**ಆನಂದದಲ್ಲಿ ಸಾನಂದವನರ್ಪಿಸಿ ಸಾನಂದದಲ್ಲಿ ಸಯವಾಗಿಪ್ಪ**
**ಪ್ರಸಾದಿಯ ಪರಿಯಿನ್ನೆಂತೋ?**
**ತನುತ್ರಯಂಗಳ ಮೀರಿ ಮನತ್ರಯಂಗಳ ದಾಂಟಿಪ್ಪ**
**ಪ್ರಸಾದಿಗೆ ಆವುದ ಸರಿಯೆಂಬೆ?**
**ಬಂದುದನತಿಗಳೆಯ, ಬಾರದುದ ಬಯಸೆ.**
**ತನುಮುಖವೆಲ್ಲ ಲಿಂಗಮುಖ, ಸ್ವಾದಿಸುವವೆಲ್ಲ ಲಿಂಗಾರ್ಪಿತ ;**
**ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ**
**ಲಿಂಗಾರ್ಪಿತವಲ್ಲದೆ ಅನರ್ಪಿತವ ನೋಡ ;**
**ತಟ್ಟುವ ಮುಟ್ಟುವ ಭೇದಂಗಳೆಲ್ಲವು ಸರ್ವಾರ್ಪಿತ.**
**ಆತನುರತರ ಸಮ್ಯಕ್ ಜ್ಞಾನಿಯಾದ ಕಾರಣ ಪ್ರಸನ್ನತೆಯಾಯಿತ್ತು .**

**ಪ್ರಸನ್ನ ಪ್ರಸಾದತೆಯಲ್ಲಿ ನಿತ್ಯನಪ್ಪಾತ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ**
**ಉರುತರ ಮಹಾಜ್ಯೋತಿರ್ಮಯನು.**

ತನುವೆಂಬುದು ಭಕ್ತಿಯ ಭಂಡಾರ. ಅರಿವಿನ ಭಾಂಡ. ಜ್ಞಾನ ಅಜ್ಞಾನಗಳನ್ನು ಪರಮ ಪ್ರಸಾದವನ್ನಾಗಿಸಿಕೊಂಡು ರುಚಿ ರುಚಿಕರವಾಗಿ ಸವಿಯುವ ಜಿಹ್ವೆಯುಳ್ಳ ತನುವನ್ನು ಹೀಗೆ ಎಂದು ವರ್ಣಿಸಲು ಅಸಾಧ್ಯ. ಏಕೆಂದರೆ ಅದು ವಿರಾಟ ಸ್ವರೂಪ! ಹೀಗಾಗಿ ಬಸವಣ್ಣನವರಿಗೆ ಸಕಲ ತನುಗಳು ವಿರಾಟ ಸ್ವರೂಪವಾಗಿ ಕಂಡವು. ಬ್ರಹ್ಮಾಂಡವೇ ಚುಳುಕಾದ ಭಾಂಡವಾಗಿ ಕಂಡವು! ತನಗೆ ತಾನೇ ಕಿರಿಯನಾಗಿ ಸಕಲ ತನುಗಳಲ್ಲಿರುವ ವಿರಾಟ ಸ್ವರೂಪವನ್ನು ಪರಮಾನಂದದಿಂದ ಅನುಭವಿಸಿದ! 'ಎನಗಿಂತ ಕಿರಿಯರಿಲ್ಲ' ಎಂದು ಸಾರಿದ.

ಸಿದ್ಧರಾಮ ಶಿವಯೋಗಿಗಳಿಗೆ ಕೂಡಾ ಬಸವಣ್ಣನವರಂತೆ ಪರಮಾನಂದವಾಗಿದೆ. ಇಡೀ ದೇಹವೇ ಅರಿವಿನ ಭಂಡಾರವಾಗಿ ಕಂಡಾಗ ಸಕಲ ಬಾಹ್ಯ ಸಂಪತ್ತೆಲ್ಲ ತೃಣವಾಗಿ ಗೋಚರಿಸಿತು. ಸಕಲ ಭಕ್ಷ್ಯ ಭೋಜ್ಯಗಳನ್ನು ಬೇಡುವ ನಾಲಿಗೆಯ ಮೇಲೆ ಮಹಾಜ್ಞಾನ ನಾಟ್ಯವಾಡಿತು. ಪಂಚೇಂದ್ರಿಯಗಳು ಪರಮಾತ್ಮನ ಐದುಮುಖಗಳಾಗಿ ಕಂಡವು. ನೋಡಿದ ನೋಟ, ಕೇಳಿದ ಶಬ್ದ, ರುಚಿಸಿದ ಪದಾರ್ಥ, ಸ್ಪರ್ಶಿಸಿದ ಸ್ಪರ್ಶನೆ ಮೂಸಿಸಿದ ವಾಸನೆಗಳೆಲ್ಲ ಅರಿವಿನ ಪರಿಮಳವಾದವು.

ತನುತ್ರಯಂಗಳು ಮೀರಿ, ಮನತ್ರಯಂಗಳನ್ನು ದಾಟಿದ ಪ್ರಸಾದಿಗೆ ಅವುದು ಸರಿಯೆಂಬೆ? ಬಾರದುದನ್ನು ಬಯಸಲಿಲ್ಲ. ಬಂದುದನ್ನು ಅತಿಗಳೆದು ನಿಂತ ತನುವೆಲ್ಲ ಲಿಂಗಮುಖವಾಯಿತು; ಅರಿವಿನ ಮುಖವಾಯಿತು; ಲಿಂಗಾಂಗವೆಂದು ಕರೆಯಿಸಿಕೊಂಡಿತು. ತನಗೆ ತಾನೇ ವಿಶ್ವರೂಪಿಯಾಗಿ ಆ ಪರಮಸುಖವನ್ನು ಪರಮಾನಂದದಿಂದ ಸವಿದ.

ಸ್ವಪ್ನದಲ್ಲಿಯೂ ಎಚ್ಚರದಿಂದ ಇದ್ದ ಇರುವಿಕೆ ಗೋಚರವಾಯಿತು. ಸುಷುಪ್ತಿಯಲ್ಲಿಯೂ ಎಚ್ಚರದಿಂದ ಇದ್ದುದು ಅರಿವಾಯಿತು. ಜಾಗ್ರತೆಯಲ್ಲಿಯೂ ಒಂದಿಷ್ಟು ಸ್ವಪ್ನವನ್ನು ಕಾಣದೆ ಎಚ್ಚರದಿಂದ ಇದ್ದುದು ತನಗೆ ತಾನೇ ಅರಿವಿಗೆ ಬಂತು. ತನುವಿಗೆ ಬಡಿದ ಸಕಲ ಮರವೆಗಳನ್ನು ತನುವಿನಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನಿಗೆ ಅರ್ಪಣೆ ಮಾಡುವ ಕಲೆ ಕರಗತವಾಯಿತು.

ತಟ್ಟುವ ಮುಟ್ಟುವ ಅಜ್ಞಾನದ ಸುಖ ದುಃಖಗಳು ಅರಿವಿನ ಲಿಂಗಕ್ಕೆ ಅರ್ಪಿತವಾದವು. ತನುವಿಗೆ ಅಂಟಿದ ಅಜ್ಞಾನದ ಕತ್ತಲೆ ತನುವಿನಲ್ಲಿಯೇ ಇರುವ ಜ್ಞಾನಕ್ಕೆ ಅರ್ಪಣೆಯಾಯಿತು. ಕಾಯದ ಗಾಯಗಳೆಲ್ಲ ಮಾದವು. ಪ್ರಸನ್ನತೆಯಿಂದ ಕಾಯ ಪುಳಕಿತಗೊಂಡು ಕಾಯವೇ ಕೈಲಾಸವಾಯಿತು, ಕಪಿಲಸಿದ್ಧ ಮಲ್ಲಿಕಾರ್ಜುನನು ಕಾಯದಲ್ಲಿಯೇ ದರ್ಶನವಿತ್ತು ಮಹಾಜ್ಯೋತಿರ್ಮಯನಾಗಿ ಕಾಯವನ್ನು ಬೆಳಗಿದ.

**411**

**ಕರಸ್ಥಲಕೆ ಲಿಂಗ ಬರೆ**
**ಕರಣೇಂದ್ರಿಯಂಗಳಾ ಕರಗಳೆ ಅಯ್ಯನಾ ಪರಿಯಾದವ್ವೆ .**
**ಪರಿಯ ಪರಿಯಾ ಒರೆದು ನೋಡುವ ಲೀಲೆ**
**ಪರೀಕ್ಷಿಸುವದೆಲ್ಲವದು ಶುದ್ಧ ಸಿದ್ಧ ಪ್ರಸಿದ್ಧ**
**ಪರಿಣಾಮುವನರಿವಡೆಯು ತವಕಿಗಳಿಗದು ದೂರ.**

**ಗುರು ಕರುಣವುಳ್ಳವರ ಹೊಲಬು ತಾನು**
**ಕರುಣೆ ಮಹಾದಾನಿ ಕಪಿಲಸಿದ್ಧ ಮಲ್ಲಿಕಾರ್ಜುನನ ಜ್ಞಾನ,**
**ಕರಣೇಂದ್ರಿಯವು ಶುದ್ಧ.**

ಕರಸ್ಥಲಕ್ಕೆ ಲಿಂಗಯ್ಯ ಬರುವುದೊಂದೇ ತಡ ಅಂಗವನ್ನು ಆವರಿಸಿದ ಕರಣೇಂದ್ರಿಯಗಳೆಲ್ಲ ಲಿಂಗಯ್ಯನ ವಶವಾದವು.

ಅದೆಷ್ಟೋ ವರುಷಗಳಿಂದ ಅಂಗವನ್ನು ವಶಮಾಡಿಕೊಂಡು ಅಂಗದಲ್ಲಿಯೇ ತಮ್ಮ ರಾಜ್ಯಭಾರ ಮಾಡಿಕೊಂಡು ಹಾಯಾಗಿದ್ದ ಅರಿಷಡ್ವರ್ಗಗಳು ಕರಸ್ಥಲಕ್ಕೆ ಲಿಂಗ ಬರುವುದೊಂದೇ ತಡ ಆತನ ವಶವಾದವು. ಇದು ಸೂಕ್ಷ್ಮಾತಿ ಸೂಕ್ಷ್ಮ ಮಾತು. ಲೋಕಕ್ಕೆ ಅರಿವಾಗದ ಮಾತು.

ಸುಖಕ್ಕಾಗಿ ಆಸೆ ಮಾಡುವುದು ಅಂಗದ ಸ್ವಭಾವ. ತಾನು ಬಯಸಿದ ಸುಖ ಅಂಗಕ್ಕೆ ದೊರೆಯದಿದ್ದರೆ ಬಲು ದುಃಖ. ಆಸೆಯೇ ದೇಹದ ದುಃಖಕ್ಕೆ ಕಾರಣವಾಯಿತು.

ಅಂಗವನ್ನು ಆವರಿಸಿದ ಆಸೆ ತೊಲಗಬೇಕಾದರೆ ಅಂಗ ಲಿಂಗವನ್ನು ಆರಾಧಿಸಬೇಕು. ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಆರಾಧಿಸಿದರೆ ಆಸೆ ದೂರವಾಗಲು ಸಾಧ್ಯವೆ? ಆಸೆ ಮಾಡುವ, ಆಸೆ ಮಾಡಿ ಸದಾ ದುಃಖಕ್ಕೆ ಈಡುಮಾಡುವ ಅರಿಷಡ್ವರ್ಗಗಳು ನಶಿಸಿ ಹೋಗಲು ಸಾಧ್ಯವೆ? ಇಲ್ಲ. ಇಲ್ಲವೆಂದೇ ಹೇಳಬೇಕು.

ಅಂಗದ ಮೇಲೆ ಲಿಂಗ ಕಟ್ಟಿಕೊಂಡರೇನು? ಜನಿವಾರ ಧರಿಸಿದರೇನು? ಸಿಲುಬೆ ಧರಿಸಿ ಅಂಗದ ಮೇಲೆ ನಿಲುವಂಗಿ ಹಾಕಿ ಖಾವಿ ಧರಿಸಿದರೇನು? ಅಂಗವನ್ನು ಆವರಿಸಿದ ಅರಿಷಡ್ವರ್ಗಗಳು ನಾಶವಾಗುವುದಿಲ್ಲ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ಅಂಗಕ್ಕೆ, ಅಂಗವನ್ನು ಆವರಿಸಿದ ಮನಕ್ಕೆ ಪರಿಚಯವಾದರೆ ಸಾಕು; ಆಸೆಯೆಂಬ ಮಾಯೆ ಕೂಡಲೇ ತೊಲಗುವುದು.

ಅಂಗದಲ್ಲಿಯೇ ಇದ್ದ ಲಿಂಗವೆಂಬ ಅರಿವು ಅಂಗವನ್ನು ಆವರಿಸಿದ ಮನವೆಂಬ ಮರೆವನ್ನು ಪರಿಪರಿಯಿಂದ ಒರೆದು ನೋಡುವ ಆಸೆ ಆತನಿಗೆ.

ಲಿಂಗವೆಂದರೆ ವಸ್ತುವಲ್ಲ. ಅದನ್ನು ಅಂಗದ ಮೇಲೆ ಧರಿಸುವ ಲಿಂಗವೂ ಅಲ್ಲ. ಲಿಂಗವೆಂದರೆ ಅರಿವು. ಅಂಗವನ್ನು ಸೃಷ್ಟಿ ಮಾಡಿ ಅಂಗದಲ್ಲಿಯೇ ಸಂಗಮ ವಾದ ಅವ್ಯಕ್ತ ಶಕ್ತಿ. ಈ ಶಕ್ತಿಯನ್ನು ಶರಣರು ಲಿಂಗಯ್ಯ ಎಂದು ಹೆಸರನಿಟ್ಟು ಕರೆದರು. ಈತ ಪ್ರತಿ ಅಂಗದಲ್ಲಿಯೂ ಸಂಗಮವಾಗಿದ್ದಾನೆ. ಅಂಗವನ್ನು ಆವರಿಸಿದ ಮನವೆಂಬ ಮಾಯೆ ಈತನನ್ನು ಸಂಪೂರ್ಣ ಮರೆತು ಹೋಗಿದೆ.

ಲಿಂಗಯ್ಯನಿದ್ದ ಅಂಗವನ್ನು ಮನವೆಂಬ ಮಾಯೆ ತನ್ನ ಸ್ವಾಧೀನಪಡಿಸಿಕೊಂಡು, ಅಂಗದಲ್ಲಿ ತನ್ನ ಅಜ್ಞಾನದ ಸಾಮ್ರಾಜ್ಯವನ್ನು ಸ್ಥಾಪಿಸಿದೆ. ಅಂಗದಲ್ಲಿಯೇ ಇದ್ದ ಅರಿವಿನ ಲಿಂಗಯ್ಯ ಇದೆಲ್ಲವನ್ನು ಗಮನಿಸುತ್ತಿದ್ದಾನೆ. ಇದು ಲಿಂಗಯ್ಯನ ಲೀಲೆ.

ಲಿಂಗಯ್ಯನ ಲೀಲೆಯನ್ನು, ಅಂಗವನ್ನು ಆವರಿಸಿದ ಮನದ ಕಪಟ ನಾಟಕವನ್ನು ಅರಿಯುವುದು ಲೋಕಕ್ಕೆ ಎಟುಕದ ಮಾತು. ತವಕಿಗಳಿಗದು ಬಹುದೂರ. ಗುರುದೇವನ ಕರುಣೆ ಉಳ್ಳವರಿಗೆ ಅದು ಸುಲಭ. ಶರಣರಿಗೆ ಕೂಡಾ ಅದು ಸುಲಭ. ಲಿಂಗಯ್ಯನೆಂದರೆ ಅಂಗದಲ್ಲಿಯೇ ಸಂಗಮವಾದ ಕರುಣೆ ಕಪಿಲಸಿದ್ಧ ಮಲ್ಲಿಕಾರ್ಜುನ. ಈತನ ಪರಿಚಯ ಮನಕ್ಕೆ ಆದರೆ ಸಾಕು ಮನದ ಮಾಯೆಯು ಮಾಯೆಯಾಗಿ ಮನವೇ ಘನಮನವಾಗುವುದು.

ಕರ್ಪರದ ಕರದಲ್ಲಿ ಇದ್ದ ಮೂಜಗವೆಲ್ಲವು
ತಪ್ಪದತಿ ಸಿದ್ಧಾಂತವನು ಭೇದಿಸಿ,
ಶಬ್ದ ಬ್ರಹ್ಮವು ಮೀರಿದತ್ತ ಬ್ರಹ್ಮಾಂಡವು
ಇತ್ತೆರವು ಕಂದೊಳಲು ಮೂಲೋಕಕೆ
ಅಯ್ಯ ಕೇಳಯ್ಯ, ನಿನ್ನ ಮೃತಹಸ್ತವನೊಮ್ಮೆ
ಒಯ್ಯನೆ ನೀಡಿ ಪರಮ ಪದದಲ್ಲಿ
ಕೈಯ್ಯೈದರಲ್ಲಿ ಮುಖವು, ನಯನದಲ್ಲಿ ಜಿಹ್ವೆ
ತಾನುಣುತಿಪ್ಪ ಕರಮುಖದಲ್ಲಿ
ಚೋದ್ಯವ ಬೆಳಗಿನಲ್ಲಿ ಗುರುಕರುಣವಿಡಿದಿಪ್ಪ
ಭಾವಸಜ್ಜನ ಶುದ್ಧ ಸದ್ಭಕ್ತರ
ಇಂದ್ರಿಯಂ ಐದು ನಿನ್ನುಂಬ ಜಿಹ್ವೆಯಾಗಿ
ಸಂದಣಿಪ ಕರಣ ನಿನ್ನಯ ಚೇತನ.
ಇಂತು ಭಕ್ತಂಗೆ ಪ್ರಾಣವು ಶೂನ್ಯ ನಿನಗೀಗ
ಅಂತರಿಪ ಕಾಯವಿಲ್ಲದ ಪರಿಯನು,
ಇಂತು ವಿಚಾರಿಸುವಡೆ ಭಕ್ತ ಕಾರಣ ಪರಶಿವನು
ಸಂತತಂ ಕಪಿಲಸಿದ್ಧ ಮಲ್ಲಿಕಾರ್ಜುನಾ.

ತನು ಒಂದು ಭಿಕ್ಷಾ ಪಾತ್ರೆ! ಕಂಡದ್ದನ್ನೆಲ್ಲ ಬೇಡುವುದೇ ಇದರ ಕಾಯಕ. ಆದರೆ ತನು ಅಕ್ಷಯ ಪಾತ್ರೆಯೂ ಹೌದು! ಬೇಡಿದ್ದನ್ನೆಲ್ಲ ಕೊಡುವ ಅದ್ಭುತವಾದ ಶಕ್ತಿಯೂ ಇದರಲ್ಲಿದೆ. ಕಾಯವನ್ನು ಕಾಮಧೇನು ಕಲ್ಪವೃಕ್ಷವೆಂದು ಕೂಡಾ ಜ್ಞಾನಿಗಳು ಕರೆದಿದ್ದಾರೆ. ಮೂಜಗವು ಕಾಯದಲ್ಲಿ ಚುಳುಕಾಗಿದೆ. ಕಾಯವನ್ನು ಆವರಿಸಿದ ಮನದಿಂದ ಕಾಯದಲ್ಲಿಯೇ ಇದ್ದ ಕೈಲಾಸವನ್ನು ಕಂಡುಕೊಳ್ಳಬೇಕು. ಭೇದಿಸಿ ಕಾಯದಿಂದಲೇ ಕಾಯದ ಸಿದ್ಧಾಂತವನ್ನು ಪರಮಾನಂದದಿಂದ ಅನುಭವಿಸಬೇಕು.

ಕಾಯದಲ್ಲಿ ಬ್ರಹ್ಮ ಅಡಗಿ ಕುಳಿತಿದ್ದಾನೆ. ಆತ ಶಬ್ದ ಬ್ರಹ್ಮ. ಆತನನ್ನು ಅರಿಯದಿದ್ದಕ್ಕಾಗಿ ಕಾಯದಿಂದ ಹೊರಬಂದ ಶಬ್ದಗಳನ್ನು ಕಾಯ ಕೇಳಲು ಆಗುತ್ತಿಲ್ಲ. ಶಬ್ದದಿಂದ ಕಾಯಕ್ಕೆ ಸುಖವಾಗುತ್ತದೆ ಇಲ್ಲ ದುಃಖವಾಗುತ್ತದೆ. ಇವೆರಡರ ಹೊರತಾಗಿ ಅರಿವಾಗುತ್ತಿಲ್ಲ. ಶಬ್ದವನ್ನು ಅರಿವಿನಿಂದ ಕೇಳಿದ ಕಾಯವೇ ಬ್ರಹ್ಮಕಾಯ. ಶಬ್ದವನ್ನು ಮರೆವಿನಿಂದ ಕೇಳಿದ ಕಾಯವೇ ಭ್ರಮಾ ಕಾಯ.

ಕಾಯದಲ್ಲಿ ಪರಮ ಪದವಿದೆ. ಇದಕ್ಕೆ ಐದು ಮುಖಗಳಿವೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ. ಈ ಐದೂ ಮುಖಗಳಿಂದ ಹೊರಗೆ ನೋಡಿದರೆ ತನಗೆ ಬೇಕಾದ ಭ್ರಮೆಯನ್ನು ಉಣ್ಣಬಹುದು. ಈ ಐದೂ ಮುಖಗಳಿಂದ ಒಳಗೆ ನೋಡಿ ಹೊರಗೆ ನೋಡಿದರೆ ಸಕಲವೂ ಬ್ರಹ್ಮವೇ ಆಗಿ ಕಾಣುತ್ತದೆ.

ಕಾಯದ ಕಣ್ಣಲ್ಲಿಯೂ ಜಿಹ್ವೆಯಿದೆ. ಕಾಯದ ಕಿವಿ ಮೂಗು ನಾಲಿಗೆ

ಚರ್ಮದಲ್ಲಿಯೂ ಜಿಹ್ವೆಯಿದೆ. ಅದರ ಮೂಲಕ ಭ್ರಮಾ ಭೋಜನವೂ ಸಾಧ್ಯ; ಬ್ರಹ್ಮ ಭೋಜನವೂ ಸಾಧ್ಯ.

ಗುರುದೇವನ ಕಾರುಣ್ಯದಿಂದ ಬ್ರಹ್ಮ ಭೋಜನ ಮಾಡಬಹುದು. ಗುರುಕಾರುಣ್ಯ ಆಗದಿದ್ದರೆ ಕಾಯದ ಐದಿಂದ್ರಿಯಗಳು ಕಾಯವನ್ನೇ ಉಂಡು ತೃಪ್ತಿಪಡುತ್ತವೆ.

ಆಂತರಿಕ ಕಾಯವನ್ನು ಪರಿಚಯಿಸುವಾತನೇ ಗುರುದೇವ. ಗುರು ದರ್ಶನವಾಗದಿದ್ದಡೆ ಕಾಯಕ್ಕೆ ಕಾಯದಲ್ಲಿ ಕಾಯ ಒಂದಿದೆ ಎಂಬುದೇ ಪರಿಚಯವಾಗುವುದಿಲ್ಲ. ಕಾಯವನ್ನು ಹೊತ್ತ ಕಾಯವೇ ಆಂತರಿಕ ಕಾಯ. ಅದು ಅರಿವಿನ ಕಾಯ. ಗುರುದೇವನ ಕಾಯ. ಕಾಯಕ್ಕೆ ಪಾಠ ಮಾಡುವ ಕಾಯ. ಕಪಿಲಸಿದ್ಧ ಮಲ್ಲಿಕಾರ್ಜುನನ ಕಾಯ. ಪರಶಿವನ ಕಾಯ.

ಕಾಯವನ್ನು ಆವರಿಸಿದ ಮನೋಕಾಯದ ಮೂಲಕವೇ ಆಂತರಿಕ ಕಾಯವನ್ನು ಪರಿಚಯ ಮಾಡಿಕೊಳ್ಳಬೇಕು.

ಮನೋ ಕಾಯವೂ ಅಕಾಯವೇ. ಆಂತರಿಕ ಕಾಯವೂ ಅಕಾಯವೇ. ಇವೆರಡೂ ಕಾಯಗಳು ಅನ್ಯಕಾಯಗಳಿಗೆ ಪರಿಚಯವಾಗುವುದಿಲ್ಲ. ಕಾಯಕ್ಕೆ ಮಾತ್ರ ಗುರುದೇವನ ಕರುಣೆಯಿಂದ ಪರಿಚಯವಾಗುತ್ತದೆ. ಹೀಗೆ ಮನೋಕಾಯಕ್ಕೆ ಆಂತರಿಕ ಅರಿವಿನ ಕಾಯದ ದರುಶನವಾದರೆ ಸಾಕು ಕಾಯ ಶಿವಕಾಯವಾಗುತ್ತದೆ. ಮೂರೊಂದಾದ ಘನವೆಂದು ಕಾಯ ಕರೆಯಿಸಿಕೊಳ್ಳುತ್ತದೆ.

ಬೇಡುವ ಕಾಯ ಯಾರನ್ನೂ ಬೇಡದಂತಾಗುತ್ತದೆ. ಸ್ವಯಂ ಕಾಮಧೇನು ಕಲ್ಪವೃಕ್ಷವಾಗುತ್ತದೆ. ಕಾಯವನ್ನು ಆವರಿಸಿದ ಇಂದ್ರಿಯಗಳೆಲ್ಲ ಜ್ಞಾನೇಂದ್ರಿಯಗಳಾಗಿ ಕಾಯವನ್ನು ಬೆಳಗುತ್ತವೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತವೆ.

**413**

**ಕರ್ಮಜಸವೆಂಬ ಹಮ್ಮಿನ ತೇಜದಲಿ**
**ನಿರ್ಮಳಜ್ಞಾನಿ ನಿಮ್ಮನರಿಯೆನಯ್ಯಾ , ಕರ್ಮಕ್ಕೊಳಗಾದೆನು,**
**ಮೋಹ ಮೊಲನ ಬಲೆಗೆ ಗುರಿಯಾದೆನು.**
**ಕಾಯಯ್ಯಾ ಕರುಣಿ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯಕ ಎನ್ನುವುದು ಕಾಯಕ್ಕಾಗಿ, ಕಾಯಕಕ್ಕಾಗಿ ಕಾಯವನ್ನು ಸವಿಸುವುದು ಅದೆಷ್ಟು ಸೂಕ್ತ? ಕಾಯಕಕ್ಕಾಗಿ ಕಾಯವೊ? ಕಾಯಕ್ಕಾಗಿ ಕಾಯಕವೊ? ಇದನ್ನು ಕಾಯದಿಂದಲೇ ತಿಳಿಯಬೇಕು.

ಕಾಯಕದ ಮೋಹದ ಬಲೆಗೆ ಕಾಯ ಬೀಳುವುದೆಂದರೇನು? ಅದು ಸ್ವತಃ ತನಗೆ ತಾನೆ ಪ್ರಪಾತಕ್ಕೆ ಬಿದ್ದಂತೆ. ಕಾಯ ಏನಾದರೂ ತಿಂದು ಬದುಕಲಿ ಎಂದು ಬುದ್ಧ ಭಿಕ್ಷೆಯ ಕಾಯಕವನ್ನು ಆಯ್ದುಕೊಂಡ. ಕಾಯ ಬದುಕಲಿ ಎಂದು ಬೇಡಿದ. ಕಾಯವನ್ನೇ ಬೇಡಿದ.ಕಾಯದಿಂದಲೇ ಭಿಕ್ಷೆ ನೀಡಿದರೆ ಕಾಯಕ್ಕೆ ಭೋಜನ ಬಡಿಸಿದ. ನೀಡದಿದ್ದರೆ ಕಾಯಕ್ಕೆ ಅಂದು ಭೋಜನವೇ ಇಲ್ಲ. ಇದು ನಿನ್ನ ಹಣೆಬರಹ ಎಂದು ಉದಾಸೀನಗೈದ.

ಕಾಯ ಹಿಡಿದು ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯದೊಂದಿಗೆ ಕಾಯಕ ಮಾಡುವ ಕೆಲಸ ಬುದ್ಧನಿಗೆ ಶ್ರೇಷ್ಠವಾಗಿತ್ತು. ಬಸವಾದಿ ಶರಣರಿಗೆ ದಾಸವರೇಣ್ಯರಿಗೆ ಕ್ರಿಸ್ತ ಕ್ರಿಷ್ಣ

ಪೈಗಂಬರರಿಗೆ ಶ್ರೇಷ್ಠಾತಿಶ್ರೇಷ್ಠವಾಗಿತ್ತು. ಹೀಗಾಗಿ ಲಭ್ಯವಾದ ಭೋಜನ ಕಾಯಕ್ಕೆ ನೀಡಿದರು.

ಪ್ರತಿ ಕಾಯದಲ್ಲಿ ಬುದ್ಧನಿದ್ದಾನೆ. ಸಿದ್ಧಾರ್ಥನಿದ್ದ ಕಾಯ ಶ್ರೇಷ್ಠವಲ್ಲ. ಅಂಗುಲಿಮಾಲನಿದ್ದ ಕಾಯವೂ ಶ್ರೇಷ್ಠವಲ್ಲ. ಸಿದ್ಧಾರ್ಥನಿದ್ದರೇನು, ಅಂಗುಲಿಮಾಲನಿದ್ದರೇನು? ಇವೆರಡೂ ಕಾಯಗಳು ಅವರವರಿದ್ದ ಕಾಯಗಳೇ ಆಗಿವೆ. ಸಿದ್ಧಾರ್ಥನಾದರೂ ಅಂಗುಲಿಮಾಲನಾದರೂ ಬುದ್ಧನಿದ್ದ ಕಾಯವನ್ನು ಹುಡುಕಬೇಕು. ಅದು ಕಾಯದೊಳಗೆ ಹುಡುಕಬೇಕು. ಈ ಕಾಯಕ ಮಾಡಲು ಕಾಯವನ್ನು ಸವೆಸಬೇಕು. ಸಿದ್ಧಾರ್ಥ ಬುದ್ಧಕಾಯ ಹುಡುಕುವುದಕ್ಕಾಗಿ ಕಾಯವನ್ನು ಸವಿಸಿದ. ಹುಡುಕಿದ, ಬುದ್ಧ ಸಿಕ್ಕ. ಸಿದ್ಧಾರ್ಥ ಬದುಕಿದ್ದಾಗಲೇ ಇಲ್ಲವಾದ. ಸಿದ್ಧಾರ್ಥನಿದ್ದ ಕಾಯ ಬುದ್ಧಕಾಯವಾಯಿತು.

ಓದುಗರು ಎಚ್ಚರದಿಂದ ಓದಬೇಕು. ಶರಣರು ಇಂತಹ ಕಾಯಕವನ್ನು 'ಕಾಯಕ' ಎಂದು ಕರೆದರು. ಇದು ಕಾಯದ ಉನ್ನತಿಗಾಗಿ ಮಾಡುವ ಸ್ವಕಾಯಕ. ಕಾಯ ಭಿಕ್ಷಾನ್ನ ಉಂಡರೇನು? ಮೃಷ್ಟಾನ್ನ ಉಂಡರೇನು? ಕಾಯ ಮಾಡಲೇಬೇಕಾದ ಕಾಯಕ ಒಂದಿದೆ ಎಂದು ಕಾಯವೇ ತಿಳಿಯಬೇಕು. ಕಾಯದ ಭೋಜನಕ್ಕಾಗಿ ಮಾಡುವ ಕೆಲಸವನ್ನು 'ಕಾಯಕ' ಎಂದು ಕಾಯ ಕರೆಯಬಾರದು. ಅಂತಹ ಕೆಲಸಕ್ಕೆ ಕಾಯ ಮರುಳಾಗಬಾರದು.

ಮೋಹವೊಲನ ಬಲೆಗೆ ಗುರಿಯಾದೆನು. ಕಾಯಯ್ಯಾ ಕರುಣಿ ಕಪಿಲಸಿದ್ಧ ಮಲ್ಲಿಕಾರ್ಜುನಾ : ಎಂದು ಸಿದ್ಧರಾಮ ಶಿವಯೋಗಿಗಳು ಕಾಯದೊಳಗೆ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನ ಕಾಯಕ್ಕೆ ಮೊರೆಯಾಗಿ ಅರಿವಿನ ಅಕಾಯವನ್ನು ಬೇಡುತ್ತಿದ್ದಾರೆ.

ಇದು ಅಂತರಾಳದ ವಿಷಯ. ತನಗೆ ಗೊತ್ತಾದರೆ ತಾನೇ ಸ್ವಕಾಯಕಕ್ಕೆ ಮೊರೆಹೋಗಬೇಕು. ಕಾಯಕ್ಕೆ ಅಂಟಿದ ಅಜ್ಞಾನವನ್ನು ಯಾರೂ ಕಳೆಯಲು ಸಾಧ್ಯವಿಲ್ಲ. ಕಾಯದೊಳಗೆ ಸಂಗಮವಾದ ಕಾಯ ಮಾತ್ರ ಕಳೆಯಬಲ್ಲುದು. ಆದರೆ ಒಳದಾರಿ ಹಿಡಿದು ನಡೆಯಬೇಕಾದ ಮಾಯಾಮಯವಾದ ಮನವೆಂಬ ಕಾಯವೇ ಮೋಹದ ಮೊಲನೆಂಬ ಕಾಯದ ಬೆನ್ನುಬಿದ್ದು ಆ ಕಾಯಕ್ಕಾಗಿಯೇ ಹಗಲಿರುಳೆನ್ನದೆ ದರಿದ್ರ ಕೆಲಸಗಳನ್ನು ಮಾಡುತ್ತ ಕಾಲಹರಣ ಮಾಡಿ ಕಾಯದ ಆಯುಷ್ಯ ಕಳೆದುಕೊಂಡರೆ ಯಾರಾದರೂ ಏನು ಮಾಡಿಯಾರು?

ಶ್ರೀಮಂತ ಬಡವ ಬಿಕ್ಷುಕ ಅಧಿಕಾರಿ ಕಳ್ಳ ಶಾಸಕ ಸಚಿವ ಹೆಣ್ಣು ಗಂಡು ಪ್ರಧಾನಿ ಅಧ್ಯಕ್ಷ ಕೃಷಿಕ ಎಂದು ಕಾಯಕ್ಕೆ ವೃತ್ತಿ ಪ್ರಧಾನವಾದ ಹೆಸರನ್ನಿಟ್ಟುಕೊಂಡು ಸಾಯಬಹುದೇ ಹೊರತು ಮತ್ತೇನನ್ನೂ ಸಾಧಿಸಲು ಸಾಧ್ಯವಾಗುವುದಿಲ್ಲ. ಹೀಗೆ ಸತ್ತರೆ ಕಾಯದೊಳಗಿದ್ದ ಜ್ಞಾನಿಯನ್ನು, ನಿರ್ಮಳ ಜ್ಞಾನಿಯನ್ನು ತಿಳಿಯದೇ ಕೊಂದ ಪಾಪ ಕಾಯಕ್ಕೆ ಅಂಟುವುದು. ಹೀಗಾಗಿ ಸಿದ್ಧಾರ್ಥ ಕಾಯಕ್ಕಾಗಿ ಕೆಲಸ ಮಾಡುವುದನ್ನು ಬಿಟ್ಟು ಸ್ವಕಾಯಕವನ್ನು ಹುಡುಕಿಕೊಂಡ. ಬಸವಾದಿ ಶರಣರು ದಾಸವರೇಣ್ಯರು ಕೂಡಾ ಕಾಯವನ್ನು ಹಿಡಿದು ಅರಿವಿನ ಸ್ವಕಾಯಕದಲ್ಲಿಯೆ ಕಾಯವನ್ನು ತೊಡಗಿಸಿಕೊಂಡರು. ಕಾಯ ಮೊಲವಿದ್ದಂತೆ. ಕಾಯದ ಮೋಹದ ಬಲೆಗೆ ಬೀಳದೆ ಸದಾ ಎಚ್ಚರವಹಿಸಿದರು.

**414**

**ಕರ್ಮದ ಗಡಣ ಹಿಂಗಿಸು ; ಪಾಪದ ರಾಶಿಯ ತೊಲಗಿಸು ;**
**ಸಂಸಾರದಾಶೆಯ ಬೆಂದ ಮನದ ಕಾಟವ ಮಾಣಿಸು.**

**ಮಾಯದ ತಲೆಯನರಿದು ಮರಳಿ ಬಾರಾ ಎನ್ನ ಕರಕ್ಕೆ**
**ನಿನ್ನ ಧರ್ಮ.**
**ನಿಮಗಾಣೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯವನ್ನು ಕಂಡುಕೊಳ್ಳುವುದಕ್ಕಾಗಿ ಕಾಯ ಬದುಕಲೇಬೇಕು. ಕಾಯ ಬದುಕುವುದಕ್ಕಾಗಿ ಒಂದು ಕೆಲಸ ಮಾಡಲೇಬೇಕು. ಆದರೆ ಕೆಲಸವೇ ಪ್ರಧಾನವಾಗಬಾರದು. ಕೆಲಸಕ್ಕಾಗಿ ಹಗಲಿರುಳು ದಣಿದು, ಕಾಯವನ್ನು ಕೆಲಸಕ್ಕಾಗಿ ದಣಿಸಿ ಅದರ ಆಯುಷ್ಯವನ್ನು ಕಳೆಯುವುದು ಪಾಪದ ಕೆಲಸ.

ಕಾಯವನ್ನು ಬದುಕಿಸಲೇಬೇಕೆಂದು ಪಾಪದ ಕೆಲಸಗಳಲ್ಲಿ ಕಾಯದೊಂದಿಗೆ ಭಾಗಿಯಾಗಿ ಪಾಪದ ರಾಶಿಯನ್ನೇ ಕಾಯಕ್ಕೆ ಹೊರಿಸಿ ವ್ಯರ್ಥವಾಗಿ ಕಾಯದ ಆಯುಷ್ಯವನ್ನು ಕಾಯಕದ ಸೋಗಿನಲ್ಲಿ ಕಳೆಯುವುದು ಮನದ ಆಟ. ಸಂಸಾರದ ಆಸೆ. ಈ ಬೆಂದ ಮನದ ಕಾಟವನ್ನು ಮಾಣಿಸು ತಂದೆ ಎಂದು ಸಿದ್ಧರಾಮ ಶಿವಯೋಗಿಗಳು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಬೇಡಿಕೊಂಡಿದ್ದಾರೆ. ಆತನೊಂದಿಗೆ ಮಾತನಾಡುತ್ತಾ ಮಾಯದ ತಲೆಯನರಿದು ಮರಳಿ ಬಾರಾ ಎನ್ನ ಕರಕ್ಕೆ. ಅದು ನಿಮ್ಮ ಧರ್ಮ. ಎಂದು ಅರಿವಿನ ಕಾಯವುಳ್ಳ ದೇವರನ್ನು ಕಾಯದ ಮೂಲಕವೇ ಎಚ್ಚರಿಸಿದ್ದಾರೆ.

ಶರಣರು ತಮಗೆ ತಾವೇ ಸಂಭಾಷಣೆ ಮಾಡಿಕೊಳ್ಳುವಲ್ಲಿ ನಿಪುಣರು. ಲೋಕಕ್ಕೆ ಜನ ಬೇಕು. ಸ್ನೇಹಿತರು ಬೇಕು. ಬಂಧು ಬಳಗ ನೆರೆಹೊರೆಯವರು ಬೇಕು. ಮಾನವ ಸಂಘ ಜೀವಿ ಎಂದು ತನಗೆ ತಾನೇ ಬೀಗುತ್ತಾನೆ. ಆದರೆ ಮಾನವ ಮಾನವನಿಗೆ ವೈರಿಯಾಗಿ ಮಾನವ ಮಾನವನನ್ನೇ ಹರಿದು ತಿನ್ನುತ್ತಾನೆ.

ಮಾನವ ಮಾನವನನ್ನು ತಿಳಿಯಬೇಕಾದರೆ ಕಾಯವನ್ನು ಆವರಿಸಿದ ಮನವೆಂಬ ಮಾನವನನ್ನು ತಿಳಿಯಬೇಕು. ಆ ಮಾನವನ ಮೂಲಕ ಕಾಯದಲ್ಲಿಯೇ ಸಂಗಮವಾದ ಮಹಾಮಾನವನನ್ನು ತಿಳಿಯಬೇಕು. ಮಾನವ ಕಾಯವನ್ನು ಮಾಧ್ಯಮ ಮಾಡಿಕೊಂಡು ಕಾಯದಲ್ಲಿಯೇ ಇದ್ದ ಮಹಾ ಮಾನವನಿಗೆ ಸಂಪೂರ್ಣ ಶರಣು ಹೋಗಬೇಕು.

ಕಾಯದಲ್ಲಿಯೇ ಇದ್ದ ಮಹಾ ಮಾನವನೇ ಬುದ್ಧ. ಆ ಬುದ್ಧನಿಗೆ ಸಂಪೂರ್ಣ ಶರಣು ಹೋದ ಸಿದ್ದಾರ್ಥ ಬುದ್ಧಂ ಶರಣಂ ಗಚ್ಛಾಮಿ ಎಂದ. ಆ ಬುದ್ಧನೊಂದಿಗೆ ಸಂಗ ಮಾಡಿ ಶರಣು ಹೋದ ಸಿದ್ದಾರ್ಥ ಸಂಘಂ ಶರಣಂ ಗಚ್ಛಾಮಿ ಎಂದ.

ಸಿದ್ಧಾರ್ಥನದೊಂದು ಕಾಯ, ಬುದ್ಧನದೊಂದು ಕಾಯ, ಇವರಿಬ್ಬರು ವಾಸ ಮಾಡಿದ ಮತ್ತೊಂದು ಸ್ಥೂಲ ಕಾಯ. ಹೀಗೆ ಕಾಯದಲ್ಲಿಯೇ ಎರಡು ಕಾಯಗಳನ್ನು ಕಂಡ ಸಿದ್ದಾರ್ಥ ಬುದ್ಧನೊಂದಿಗೆ ಬುದ್ಧ ವಾಸ ಮಾಡಿದ ಕಾಯದೊಂದಿಗೆ ತನಗೆ ತಾನೇ ಮಾತನಾಡುತ್ತಾ ಪರಮಾನಂದದಿಂದ ಕಳೆದ.

ಕಾಯದೊಂದಿಗೆ ಕಾಯವೇ ಮಾತನಾಡಬೇಕು ಎನ್ನುವ ಬಯಕೆ ಅತಿಯಾದಾಗ ; ಕಾಯ ತಾನು ಮಾಡಿದ ಅನ್ಯ ಕಾಯಗಳ ಸಂಗವನ್ನು ತನಗೆ ತಾನೇ ಕಳಚಿಕೊಳ್ಳುತ್ತದೆ. ಮಾಡುವ ಕಾಯಕಗಳೆಲ್ಲ ಗೌಣವಾಗುತ್ತವೆ. ಬೆಂದ ಮನದ ಉಪಟಳ ಸಂಪೂರ್ಣ ನಿಲ್ಲುತ್ತದೆ. ಸುಳ್ಳು ಸಂಬಂಧಗಳು ಕಳಚಿ ಬೀಳುತ್ತವೆ. ಸಕಲ ಕಾಯಗಳಲ್ಲಿಯೂ ಬುದ್ಧನೇ ಕಾಣುತ್ತಾನೆ. ಬುದ್ಧ ಬುದ್ಧನೊಂದಿಗೆ ಮಾತನಾಡುತ್ತಾ ಮಾಯದ ತಲೆ ಉರುಳಿ ಬೀಳುತ್ತದೆ. ಪರಮ

ಸಂತೋಷದಿಂದ ಕಾಲ ಕಳೆಯುತ್ತಾನೆ.

ಕಾಯದಲ್ಲಿಯೇ ಸಂಗಮವಾದ ಕಾಯದ ಅರಿವಿನ ಧರ್ಮ ಕಾಯದ ಕೈಗೆ ಬರುತ್ತದೆ. ಕಾಯ ಕಾಯದೊಂದಿಗೆ ಮಾತನಾಡಿದ ಫಲ ಈಡೇರುತ್ತದೆ.

ಮಹಾ ಭಾರತದ ಯುದ್ಧದ ಸಂದರ್ಭದಲ್ಲಿ ಅರ್ಜುನ ಶ್ರೀ ಕೃಷ್ಣನೊಂದಿಗೆ ಮಾತನಾಡುತ್ತಾ ಯುದ್ಧ ಮಾಡಿದ. ಆತ ಹೊಡಿ ಎಂದಲ್ಲಿ ಹೊಡೆದ ಹುಲ್ಲುಕಡ್ಡಿಯೇ ಬ್ರಹ್ಮಾಸ್ತ್ರವಾಯಿತು. ಶ್ರೀಕೃಷ್ಣನ ಮಾತು ಅರ್ಜುನ ಕೇಳಿದ್ದಕ್ಕಾಗಿ ಕುರುಕ್ಷೇತ್ರ ಯುದ್ಧವನ್ನು ಕೇವಲ ಹದಿನೆಂಟು ದಿನಗಳಲ್ಲಿಯೇ ಗೆದ್ದ.

ಕಾಯವೆಂಬ ರಥದಲ್ಲಿ ಶ್ರೀಕೃಷ್ಣನಿದ್ದ ; ಅರ್ಜುನನೂ ಇದ್ದ. ಅರ್ಜುನ ಶ್ರೀಕೃಷ್ಣನೊಂದಿಗೆ ಮಾತನಾಡಿದ. ಹೀಗಾಗಿ ಕುರುಕ್ಷೇತ್ರವೇ ಆದ ಕಾಯ ಧರ್ಮಕ್ಷೇತ್ರವಾಯಿತು. ಅರ್ಜುನ ಕೇಳಿದ ಪ್ರಶ್ನೆಗಳಿಗೆಲ್ಲ ಶ್ರೀಕೃಷ್ಣ ಉತ್ತರ ಕೊಟ್ಟ.

ಸಿದ್ಧರಾಮ ಶಿವಯೋಗಿಗಳು ಕೂಡಾ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡುತ್ತಾ; ಮಾಯದ ತಲೆಯನರಿದು ಮರಳಿ ಬಾರಾ ಎನ್ನ ಕಾಯಕ್ಕೆ. ಇದು ನಿಮ್ಮ ಧರ್ಮ. ಬಾರದಿದ್ದರೆ ನಿಮಗಾಣೆ ಎಂದು ಅರಿವಿನ ದೇವರಿಗೆ ಆಣೆಯಿಟ್ಟು ಆಮಂತ್ರಣ ಕೊಟ್ಟಿದ್ದಾರೆ.

**415**

**ಕರ್ಮವನರಿತೆನ್ನ ನಿಃಕರ್ಮಿಯ ಮಾಡಯ್ಯಾ ಗುರುವೆ.**
**ಈ ಕರ್ಮಕ್ಕಾನಾರೆನು ತಂದೆ**
**ಅಯ್ಯಾ , ಎನ್ನ ನಿಃ ಕರ್ಮಿಯ ಮಾಡಯ್ಯಾ ಗುರುವೆ.**
**ಆನತ ಘನಗುರುವೆ ಕಪಿಲಸಿದ್ಧ ಮಲ್ಲಿನಾಥಾ,**
**ಎನ್ನ ನಿನ್ನವರಂತೆ ಮಾಡಾ, ನಿನ್ನ ಧರ್ಮ.**

ಮಕ್ಕಳು ಮನೆಕಟ್ಟಿ, ಕೆಡವಿ ಸಂತೋಷ ಪಡುತ್ತಾರೆ. ಕಟ್ಟಿದಾಗಲೂ ಕುಣಿದಾಡುತ್ತಾರೆ; ಕೆಡವಿದಾಗಲೂ ಕುಣಿದಾಡುತ್ತಾರೆ. ಕಟ್ಟುವುದು ಕೆಡುವುವುದು ಮಕ್ಕಳ ಆಟ. ದೊಡ್ಡವರು ಹಾಗಲ್ಲ. ಕಟ್ಟಿದಾಗ ಸುಖ; ಬಿದ್ದಾಗ ದುಃಖ.

ಮಕ್ಕಳು ಮನೆಕಟ್ಟುವುದೊಂದೇ ಅಲ್ಲ; ದೊಡ್ಡವರ ಎಲ್ಲ ಆಟಗಳನ್ನು ಆಡುತ್ತಾರೆ. ದೊಡ್ಡವರಾದ ಮೇಲೆ ತಾವು ಆಡಿದ ಆಟವನ್ನೇ ನಿಜದ ಆಟವನ್ನಾಗಿ ಆಡುತ್ತಾರೆ. ಈ ಆಟಕ್ಕೆ ಪೂರ್ಣ ವಿರಾಮ ಬೀಳುವುದೇ ಇಲ್ಲ.

ಕಾಯ ತಾನು ಬದುಕುವುದಕ್ಕಾಗಿ ಅನೇಕ ಕರ್ಮಗಳನ್ನು ಆಯ್ಕೆ ಮಾಡಿಕೊಂಡಿದೆ. ತಾನು ಮಾಡುವ ಕೆಲಸಗಳಲ್ಲಿ ಒಂದಷ್ಟು ಕೊರತೆಯಾಗದಂತೆ ಜಾಗ್ರತೆ ವಹಿಸುತ್ತದೆ. ಕಾಯ ಜನ್ಮ ತಳೆದಿರುವುದಾದರೂ ಯಾಕೆ ಎಂಬುದು ಕಾಯಕ್ಕೆ ಮರೆತು ಹೋಗಿದೆ. ಏಕೆಂದರೆ ಕೈತುಂಬಾ ಕೆಲಸ; ಮೈತುಂಬಾ ಕೆಲಸ. ಕಾಯದ ಉನ್ನತಿಗಾಗಿ ತನ್ನ ಕೆಲಸ ತಾನೇ ಮಾಡಿಕೊಳ್ಳಲು ಅದಕ್ಕೆ ಪುರಸೊತ್ತಿಲ್ಲ.

ಕಾಯ ಮಾಡುವ ಕೆಲಸಗಳನ್ನು ಕಾಯವೇ ಒಮ್ಮೆ ಹಿಂತಿರುಗಿ ನೋಡಿಕೊಂಡರೆ ಅದಕ್ಕೆ ಅರಿವಾಗುವುದರಲ್ಲಿ ಸಂದೇಹವೇ ಇಲ್ಲ. ಆದರೆ ಬಲವಾಗಿ ಆಲೋಚನೆಯಲ್ಲಿ ತೊಡಗಿ ತನ್ನನ್ನು ತಾನೇ ಹಿಂತಿರುಗಿ ನೋಡಿಕೊಳ್ಳುವುದಕ್ಕೆ ಸಮಯ ಬೇಕು. ಆ ಸಂದರ್ಭ ಒದಗಿ ಬರಬೇಕು.

ಅಲ್ಲಿಯವರೆಗೆ ಕಾಯ ಮಾಡುವ ಸುಳ್ಳು ಕೆಲಸಗಳಲ್ಲಿ ಕಾಯ ಭಾಗಿಯಾಗಿ ಕಾಯದ ಆಯುಷ್ಯವನ್ನು ಕಾಯವೇ ವ್ಯರ್ಥವಾಗಿ ಕಳೆದುಕೊಳ್ಳುತ್ತದೆ.

ಸಿದ್ಧಾರ್ಥ ಲೋಕ ಮಾಡುವುದೆಲ್ಲ ಸುಳ್ಳು ಕೆಲಸವೆಂದು ತನಗೆ ತಾನೇ ಅರಿತ. ತಾನು ಮಾಡುವ ಕೆಲಸ ಕೂಡಾ ಸುಳ್ಳು ಕೆಲಸವೆಂದು ತನಗೆ ತಾನೇ ಅರಿತ. ಹಳದಿ ಲೋಹಕ್ಕಾಗಿ, ಭೂಮಿಗಾಗಿ, ವಿಷಯ ತೃಪ್ತಿಗಾಗಿ ತನ್ನಂತೆಯೇ ಪರಿಪಾಲನೆ ಮಾಡುತ್ತಿರುವ ರಾಜನೊಂದಿಗೆ ಯುದ್ಧ ಮಾಡುವುದೊಂದು ಕೆಲಸವೇ ? ತನ್ನ ಆಸೆ ಆಮಿಷಗಳಿಗಾಗಿ ಸಂಘಟಿಸಿ ಸೈನ್ಯ ಕಟ್ಟಿ ಯುದ್ಧ ಮಾಡುವುದೊಂದು ಕೆಲಸವೇ ? ಈ ಕೆಲಸದಿಂದ ತಾನು ನಿವೃತ್ತಿ ಹೊಂದಲೇಬೇಕು ಎಂದು ಸಿದ್ಧಾರ್ಥ ಒಂದು ಇರುಳಲ್ಲಿ ನಿರ್ಧರಿಸಿದ. ಕಾಯದಲ್ಲಿಯೇ ಸಂಗಮವಾದ ಬುದ್ಧನ ಸಂಗ ಮಾಡಿದ. ಅವನಿಗೆ ಶರಣು ಹೋದ. ಬುದ್ಧಂ ಶರಣಂ ಗಚ್ಛಾಮಿ ಎಂದ. ಮತ್ತೆ ಅರಮನೆಯತ್ತ ಹೆಜ್ಜೆ ಇಡಲಿಲ್ಲ. ಏಕೆಂದರೆ ಅದಕ್ಕಿಂತ ಸುಂದರವಾದ ಪರಮಾನಂದದ ಕೆಲಸದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ. ಸಿದ್ಧಾರ್ಥ ನಿವೃತ್ತಿಯಾದ. ಸಿದ್ಧಾರ್ಥನ ಕಾಯವೂ ನಿವೃತ್ತಿಯಾಯಿತು. ಕಾಯದಲ್ಲಿಯ ಬುದ್ಧ ಕಾಯಕ್ಕೆ ಒಡೆಯನಾದ. ಬುದ್ಧನಾಗಿ ಕಾಯದ ಮೂಲಕ ಎದ್ದು ಬಂದ.

ಸಿದ್ಧರಾಮ ಶಿವಯೋಗಿಗಳು ಕೂಡಾ ಕೆರೆ ಕಟ್ಟೆಗಳನ್ನು ದೇವಾಲಯಗಳನ್ನು ಕಟ್ಟುವ ಕೆಲಸದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದ. ಒಡ್ಡನ ಕೆಸಲ ನಿನಗೆ ತರವಲ್ಲ ಸಿದ್ಧರಾಮ ಎಂದು ಅಲ್ಲಮಪ್ರಭುಗಳು ಹೇಳುವುದೊಂದೇ ತಡ, ಮಾಡುವ ಕೆಲಸದಿಂದ ನಿವೃತ್ತಿಯಾದ. ಕಾಯದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಶರಣು ಹೋಗಿ ಶರಣನಾದ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಂಡ. ಆತನಿಗೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಹೆಸರಿಟ್ಟು ಕರೆದ. ಆತನನ್ನೇ ಅಂಗಲಾಚಿ ಬೇಡಿಕೊಂಡ; ಎನ್ನ ಹಳೆಯ ಕರ್ಮಗಳನ್ನು ಕಳೆದು ನಿಃಕರ್ಮಿಯ ಮಾಡಯ್ಯ ಗುರುವೆ. ಆನತ ಘನಗುರುವೆ, ಕಪಿಲಸಿದ್ಧ ಮಲ್ಲಿನಾಥಾ, ಎನ್ನ ನಿನ್ನವರಂತೆ ಮಾಡಾ, ಇದು ನಿನ್ನ ಧರ್ಮ. ಎಂದು ಗುರುದೇವನೊಂದಿಗೆ ಮಾತನಾಡಿದ.

**416**

**ಕರ್ಮಿಗಳು ಶಿವಪಥಕೆ ಬಪ್ಪಾಗಳವರ**
**ಕರ್ಮ ಬೆಂಬತ್ತಿ ಕಾಡುವುದಯ್ಯಾ.**
**ಲಿಂಗಾರಾಧನೆಯ ಮಾಡಲೀಯದು.**
**ಸಂದೇಹವನೆ ತೋರಿಸಿ ಕೆಡಿಸುವುದಯ್ಯಾ.**
**ಏಕೆ ? ಅವರು ಮಾಡಿದ ಕರ್ಮವನುಣಬೇಕಾಗಿ !**
**ಇದನರಿದು ನಿಮ್ಮ ನೆರೆನಂಬಿ ಪೂಜಿಸೆ ಹರಿವುದು ಕರ್ಮ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ದೇವರೆ ದೇವಾ.**

ಕಾಯ ಅರಿವಿನ ದಾರಿ ಹಿಡಿಯಲೇಬೇಕು. ಆ ದಾರಿಯ ಅರಿವಿನ ರುಚಿಯನ್ನು ಉಂಡು ಪರಮಾನಂದದಿಂದ ಇರಬೇಕಾದ ಕಾಯ ಮರೆವಿನ ಅಜ್ಞಾನದ ಊಟವನ್ನು ಉಂಡು ಬಂದ ದಾರಿಯನ್ನೇ ಮರೆತಿದೆ. ಮಾಡಲೇಬೇಕಾದ ಅರಿವಿನ ಕಾಯಕವನ್ನು ಮರೆತು ಮರೆವಿನ

ಕಾಯಕದಲ್ಲಿ ಮೈಮರೆತಿದೆ.

ಅಜ್ಞಾನದ ಕೆಲಸದಲ್ಲಿ ಮೈಮರೆತ ಕಾಯ ಶಿವಪಥಕೆ ಬಂದರೆ, ಅಂದರೆ ಅರಿವಿನ ದಾರಿಗೆ ಬಂದರೆ; ತಾನು ಹಿಂದೆ ಮಾಡಿದ ಅಜ್ಞಾನದ ಕೆಲಸ ಕಾಯವನ್ನು ಕಾಡದೆ ಬಿಡದು. ಎಷ್ಟೊಂದು ತಪ್ಪು ಮಾಡಿದೆನಲ್ಲಾ ಎಂದು ತನಗೆ ತಾನೆ ಬಾಧೆ ಉಂಟಾಗುತ್ತದೆ. ಆಗ ಹಿಂದೆ ಮಾಡಿದ ಕೆಲಸದಲ್ಲಿ ಭಾಗಿಯಾಗುವುದಿಲ್ಲ. ಮಾಡಲೇಬೇಕಾದ ಅರಿವಿನ ಕೆಲಸ ರುಚಿ ಬರುವುದಿಲ್ಲ.

ನೋಡಿದಾಗೊಮ್ಮೆ, ಕೇಳಿದಾಗೊಮ್ಮೆ, ಮುಟ್ಟಿ ಮೂಸಿಸಿ ರುಚಿಸಿದಾಗಲೊಮ್ಮೆ ಸಂದೇಹವನೆ ತೋರಿ ಕೆಡಿಸುವುದು. ಎಷ್ಟೋ ದಿನಗಳವರೆಗೆ ನೋಡಿ ಹಾದರಕ್ಕೊಳಗಾಗಿ ಸುಖಿಸುತ್ತಿದ್ದ ಕಾಯಕ್ಕೆ ಈಗ ನೋಡಲು ಬರುವುದಿಲ್ಲ. ಏಕೆಂದರೆ ಅರಿವಾಗಿದೆ. ನೋಡಿದ ದೇಹದೊಂದಿಗೆ ಹಾದರಕ್ಕೆ ಒಳಗಾಗಿ ಸುಖಿಸಿ ಪುನಃ ಆ ದೇಹದೊಂದಿಗೆ ಅಕ್ಕ ತಂಗಿ ಎಂದು ಮಾತನಾಡುತ್ತಿತ್ತು . ಹಿಂದೆ ಮಾಡಿದ ಕೆಲಸ ಈಗ ಕಾಯದ ಗಮನಕ್ಕೆ ಬಂದು ತನಗೆ ತಾನೆ ಹೇಸಿಗೆ ಉಂಟಾಗಿದೆ.

ಎಷ್ಟೋ ವರ್ಷಗಳನ್ನು ಕಾಯ ಹೀಗೆ ಅಜ್ಞಾನದ ಕೆಲಸ ಮಾಡುತ್ತಾ ಕಳೆದುಕೊಂಡಿದೆ. ಮಾಡಿದ ಆ ಪಾಪ ಮತ್ತೆ ಮತ್ತೆ ಮರುಕಳಿಸಿ ಕಾಯದ ಜೀವ ಹಿಂಡುತ್ತಲಿದೆ. ಏಕೆಂದರೆ ಕಾಯದ ಕೆಲಸ ಬದಲಾಗಿದೆ. ಹಿಂದಿನ ಅಜ್ಞಾನದ ಕೆಲಸಕ್ಕೆ ರಾಜಿನಾಮೆ ನೀಡಿ, ಅರಿವಿನ ಕೆಲಸವನ್ನು ಆಯ್ಕೆ ಮಾಡಿಕೊಂಡಿದೆ. ಅರಿವಿನ ಕೆಲಸ ಮಾಡುವ ಪ್ರತಿ-ಬಾರಿಯೂ ಅಜ್ಞಾನದ ಕೆಲಸ ಅಡ್ಡಿಪಡಿಸುತ್ತದೆ. ಅಜ್ಞಾನದ ಕೆಲಸ ಮಾಡಲು ಹೋದರೆ ಅರಿವು ಬಿಡುವುದಿಲ್ಲ.

ಸಂದೇಹವನೆ ತೋರಿಸಿ ಕೆಡಿಸುವುದಯ್ಯಾ. ಏಕೆ? ಅವರು ಮಾಡಿದ ಕರ್ಮವನುಣಬೇಕಾಗಿ!

ಜ್ಞಾನ ಅಜ್ಞಾನ ಕಾಯದಲ್ಲಿಯೆ ಇದೆ. ಕಾಯವನ್ನು ಆವರಿಸಿದ ಮನ, ಕಾಯದೊಂದಿಗೆ ಸಂಗ ಮಾಡಿ ಅಜ್ಞಾನದ ಸುಖವನ್ನು ಉಣ್ಣುತ್ತಿತ್ತು. ಕಾಯವನ್ನು ಆವರಿಸಿದ ಮನಕ್ಕೆ ಗುರುದೇವನ ಕೃಪೆ ಆಯಿತು. ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯಕ್ಕೆ ಜಿಗಿಯಿತು.

ಮನ, ಅರಿವಿನ ಕಾಯದಿಂದ ಸಕಲ ಕಾಯಗಳನ್ನು ನೋಡಿತು. ಸಕಲ ಕಾಯಗಳು ತನ್ನಂತೆಯೇ ಇರುವ ಜ್ಞಾನ ಕಾಯಗಳಾಗಿ ಕಂಡವು. ಹೆಣ್ಣು ಗಂಡೆಂದು ನೋಡಲಿಲ್ಲ; ಜಾತಿ ಮತ ಪಂಥಗಳು ಅದಕ್ಕೆ ಕಾಣಲೇ ಇಲ್ಲ. ಏಕೆಂದರೆ ಅಜ್ಞಾನದ ಕಣ್ಣು; ಕಣ್ಣೊಳಗೆ ಇದ್ದ ಅರಿವಿನ ಕಣ್ಣಪ್ಪನ ಕಣ್ಣಿಗೆ ಜಿಗಿದು, ಆ ಕಣ್ಣಿನಿಂದ ನೋಡಿತು.

ಅಜ್ಞಾನದ ಕಣ್ಣು ಮುಕ್ಕಣ್ಣನ ಅರಿವಿನ ಕಣ್ಣಿನಲ್ಲಿ ಸಂಗಮವಾಗಿ ತನ್ನ ಸಕಲ ಅಜ್ಞಾನದ ವೃತ್ತಿಯನ್ನು ಕಳೆದುಕೊಂಡು ನಿವೃತ್ತಿಯಾಯಿತು. ಜ್ಞಾನದ ಕಣ್ಣಿನ ವೃತ್ತಿ ಪ್ರಾರಂಭವಾಯಿತು.

ಇದನರಿದು ನಿಮ್ಮ ನೆರೆನಂಬಿ ಪೂಜಿಸೆ ಹರಿವುದು ಕರ್ಮ, ಕಪಿಲಸಿದ್ಧ ಮಲ್ಲಿಕಾರ್ಜುನಾ, ದೇವರೆ ದೇವಾ :

ಕಾಯವನ್ನು ಮನ ಆವರಿಸಿ, ಮನ ಕಾಯದ ಸಂಗ ಮಾಡಿದರೆ ಅದು ಅಜ್ಞಾನದ ಕಾಯ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಜ್ಞಾನ ಕಾಯದ ಸಂಗ ಮಾಡಿದರೆ ಅದು ಜ್ಞಾನದ ಕಾಯ, ಬುದ್ಧ ಕಾಯ. ಮಹಾವೀರನ ಕಾಯ.

ಕಾಯವನ್ನು ಆವರಿಸಿದ ಮನೋಕಾಯ, ಕಾಯದಲ್ಲಿಯೇ ಸಂಗಮವಾದ ಜ್ಞಾನ ಕಾಯದ ಸಂಗ ಮಾಡಿ ಆ ಕಾಯವನ್ನು ನೆರೆನಂಬಿ ಪೂಜಿಸಿದರೆ ಸಕಲ ಅಜ್ಞಾನದ ವೃತ್ತಿಗಳು ನಿವೃತ್ತಿಯಾಗುವವು. ತೋರುವ ಕಾಯ, ಬುದ್ಧ ಕಾಯವಾಗಿ ಪರಿವರ್ತನೆಯಾಗುವುದು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುವುದು.

**417**

**ಕರಣ ಕಾನನದೊಳಗಾನು ಹೊಲಬುಗೆಟ್ಟೆನಯ್ಯಾ ;**
**ನೆನಹೆಂಬ ಮಠದೊಳಗೆ ನಿರ್ಮಳನಾದೆನಯ್ಯಾ ;**
**ಘನತರ ಸಂಯೋಗದಲ್ಲಿ ನೀನು ನಾನಾದೆ .**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ,**
**ಸಂದು ಸವೆದು ಒಂದಾದೆ.**

ಜ್ಞಾನೇಂದ್ರಿಯಗಳು ಕಾಯವನ್ನು ಕೈಲಾಸವನ್ನಾಗಿಸಿದರೆ ಅದರ ಬೆನ್ನಿಗೆ ವಾಸ ಮಾಡಿದ ಇಂದ್ರಿಯಗಳು ಕಾಯವನ್ನು ಅಜ್ಞಾನದ ಕಾಡಿಗೆ ಅಟ್ಟುತ್ತವೆ. ಇಂದ್ರಿಯಗಳಿಗೆ ತಾವು ಜ್ಞಾನದ ವಾರಸುದಾರರು ಎನ್ನುವ ಪರಿಚಯವಿಲ್ಲ. ಜ್ಞಾನ ನಿರಂತರ ಇಂದ್ರಿಯಗಳ ಬೆನ್ನಿಗೆ ಇದ್ದು ಪಾಠ ಮಾಡುತ್ತಿರುವ ವಿಷಯ ಇಂದ್ರಿಯಗಳ ಗೋಚರಕ್ಕೆ ಬರುತ್ತಿಲ್ಲ. ಹೀಗಾಗಿ ಕೈಲಾಸವೇ ತಾನಾಗಬೇಕಾದ ಕಾಯ ಇಂದ್ರಿಯಗಳಿಂದಾಗಿ, ಅವುಗಳ ಸುಖಕ್ಕಾಗಿ, ಅವುಗಳಿಂದ ಉಂಟಾಗುವ ದುಃಖಕ್ಕಾಗಿ ಬದುಕುತ್ತಲಿದೆ.

ಕರಣಂಗಳೆಂದರೆ ದಟ್ಟವಾದ ಕಾಡು. ಕಾಡಿನಲ್ಲಿ ಪ್ರವೇಶ ಮಾಡಲು ಮಾತ್ರ ಬರುತ್ತದೆ. ಅದರೊಳಗಿಂದ ಪಾರಾಗುವ ದಾರಿ ಗೊತ್ತಾಗುವುದೇ ಇಲ್ಲ. ಏಕೆಂದರೆ ಇಂದ್ರಿಯಂಗಳ ನೋಟವೇ ಹಾಗೆ.

ನೋಡುವ ಕಣ್ಣಿನಲ್ಲಿ ಕಾಯದ ಧೂಮ್ರ ಮುಸುಕಿ ಇಡೀ ದೇಹವನ್ನು ಕಾಮದ ಕಾಡಿಗೆ ಅಟ್ಟುತ್ತದೆ. ಕಣ್ಣಿಗೆ ರೂಪ ಕಾಣುತ್ತದೆಯೇ ಹೊರತು, ರೂಪವನ್ನು ಹೊತ್ತ ನಿರೂಪ ಕಾಣುವುದೇ ಇಲ್ಲ.

ಕಣ್ಣು ರೂಪವಾದರೆ ಇಂದ್ರಿಯ ನಿರೂಪ. ಜ್ಞಾನವೂ ನಿರೂಪ. ಈ ಎರಡೂ ನಿರೂಪಗಳು ಕಣ್ಣ ರೂಪವನ್ನು ಆಶ್ರಯ ಮಾಡಿಕೊಂಡು ಕಣ್ಣಲ್ಲಿಯೇ ವಾಸ ಮಾಡಿವೆ.

ಕಣ್ಣಲ್ಲಿರುವ ಜ್ಞಾನ; ಕಣ್ಣನ್ನು, ನೋಡುವ ರೂಪವನ್ನು ಬೆಳಗಿ ನೋಡುತ್ತದೆ. ಕಣ್ಣನ್ನು ಆವರಿಸಿದ ಇಂದ್ರಿಯ ಕಣ್ಣನ್ನು ಕುರುಡಾಗಿಸಿ, ನೋಡುವ ರೂಪವನ್ನು ಕತ್ತಲಾಗಿಸಿ ಕಾಮದಿಂದ ನೋಡುತ್ತದೆ.

ಕಣ್ಣು ಕಂಡರೂ, ಕಣ್ಣನ್ನು ಕತ್ತಲು ಆವರಿಸಿರುವುದರಿಂದ ತನ್ನಂತೆಯೇ ಇರುವ ಕಾಯವನ್ನು ಕಾಯದಂತೆ ಸಹಜವಾಗಿ ನೋಡಲು ಬರುವುದಿಲ್ಲ. ಕಣ್ಣಲ್ಲಿ ಕಾಮ ಆವರಿಸುವುದೊಂದೇ ತಡ, ಚರ್ಮ, ಕಿವಿ, ಮೂಗು, ನಾಲಿಗೆಯಲ್ಲಿ ಕಾಮದ ಕತ್ತಲೆಯ ರಸ ಒಸರುತ್ತದೆ. ಕಾಯ ಕಾಮದ ಕೂಪವಾಗುತ್ತದೆ.

ಕಾಮಕ್ಕೆ ಕಣ್ಣಿಲ್ಲ. ಏಕೆಂದರೆ ದೇವರುಗಳ ರಾಜನಾದ ದೇವೇಂದ್ರನಿಗೆ ಕೂಡಾ ಋಷಿ ಪತ್ನಿಯನ್ನು ಭೋಗಿಸುವ ಆಸೆ ಹುಟ್ಟುತ್ತದೆ. ಚಂದ್ರ ಗುರುದೇವನ ಹೆಂಡತಿಯೊಂದಿಗೆ ಸಂಗ ಮಾಡುತ್ತಾನೆ. ಬ್ರಹ್ಮ ತನ್ನ ಮಗಳನ್ನೇ ಮದುವೆಯಾಗುತ್ತಾನೆ. ಕಣ್ಣಲ್ಲಿ ಕಾಮವಾಸನೆ ಉಂಟಾದಾಗ ಕಾಯದ ಸಂಬಂಧಗಳೆಲ್ಲ ಕಳಚಿ ಬೀಳುತ್ತವೆ. ಕಾಯವನ್ನು ಆವರಿಸಿದ ಕರಣೇಂದ್ರಿಗಳ ಉಪಟಳವೇ ಹಾಗೆ. ಇಂದ್ರಿಯಗಳು ತಮ್ಮ ಸುಖಕ್ಕಾಗಿ ಕಾಯವನ್ನು ಬಳಸಿಕೊಂಡು ಕಾಯದೊಂದಿಗೆ; ಕಾಯದ ಮೂಲಕ ಸುಖ ಅನುಭವಿಸಿ, ಕಾಯವನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿ, ಕಾಯದಲ್ಲಿಯೇ ಮಾಯವಾಗುತ್ತವೆ.

ಇಂದ್ರಿಯಗಳಿಗೆ, ಇಂದ್ರಿಯಗಳನ್ನು ಸೃಷ್ಟಿ ಮಾಡಿದ ಮನಕ್ಕೆ ಯಾರೂ ಶಿಕ್ಷೆ ಕೊಡುವುದಿಲ್ಲ. ಏಕೆಂದರೆ ಇಂದ್ರಿಯಗಳು ಕಾಣುವುದಿಲ್ಲ. ಮನವೂ ಕಾಣುವುದಿಲ್ಲ. ನಿರಪರಾಧಿ ಕಾಯ ಮಾತ್ರ ಕಾಣುತ್ತದೆ. ಹೀಗಾಗಿ ಕಾಯವೇ ಕಾಯಕ್ಕೆ ಶಿಕ್ಷೆ ಕೊಡುತ್ತದೆ. ಇದು ಇಂದ್ರಿಯಗಳ ಮತ್ತು ಮನದ ಆಟ ಎಂದು ಕಾಯಕ್ಕೆ ತಿಳಿಯುವುದೇ ಇಲ್ಲ. ತೀರ್ಪು ನೀಡುವ ನ್ಯಾಯಮೂರ್ತಿಯಾದರೇನು, ನ್ಯಾಯವಾದಿಯಾದರೇನು? ಸರಕಾರವಾದರೇನು? ಪೊಲೀಸರಾದರೇನು? ಕಾಯ ಮತ್ತು ಇಂದ್ರಿಯಗಳು ಉಳ್ಳವರೇ ಆಗಿದ್ದಾರೆ.

ಮನ ಮತ್ತು ಇಂದ್ರಿಯಗಳ ಬೆನ್ನಿಗೆ ಇದ್ದ ಜ್ಞಾನದ ನೆನಪು ಇಂದ್ರಿಯಗಳಿಗೆ ಬರುವುದಿಲ್ಲ. ಮನಕ್ಕೆ ಕೂಡಾ ಬರುವುದಿಲ್ಲ. ಹಾಗೆಂದ ಮಾತ್ರಕ್ಕೆ ಜ್ಞಾನ ಮನಕ್ಕೆ ಪಾಠ ಮಾಡುವುದನ್ನು ನಿಲ್ಲಿಸಿಲ್ಲ.

ತಾನು ಮಾಡುತ್ತಿರುವುದು ತಪ್ಪೆಂದು ಮನಕ್ಕೆ ತಿಳಿದಿದೆ. ಆದರೂ ತಪ್ಪು ಮಾಡುತ್ತದೆ. ತಪ್ಪು ಮಾಡುವುದರಲ್ಲಿ ಮನಕ್ಕೆ ಸುಖವಾಗುತ್ತದೆ. ನಂತರ ಕಾಯಕ್ಕೆ ದುಃಖವಾಗುತ್ತದೆ.

ಮನದ ಬೆನ್ನಿಗೆ ಇದ್ದ ಜ್ಞಾನ ಮನಕ್ಕೆ ತಪ್ಪೆಂದು ಬೋಧಿಸಿತ್ತು. ಜ್ಞಾನದ ಮಾತನ್ನು ಲಕ್ಷಿಸದೆ ಮನ ಕಾಯದೊಂದಿಗೆ ಕಾಯದ ಮೂಲಕ ಕಾಮಕ್ರೀಡೆಯಲ್ಲಿ ಮುಳುಗಿತು. ಮನದ ಸುಖ ಕಾಯದಲ್ಲಿ ಮಾಯದ ಗಾಯವನ್ನು ಸೃಷ್ಟಿ ಮಾಡಿತು.

ಮನ ಕಾಯಕ್ಕೆ ಕಾಮದ ಸುಖ ನೀಡಿದರೆ, ಜ್ಞಾನ ಕಾಯಕ್ಕೆ ಮಾಯದ ಗಾಯ ಮಾಡುತ್ತದೆ. ಮನ, ಕಾಯದೊಂದಿಗೆ ಅಜ್ಞಾನದ ಸುಖ ಅನುಭವಿಸುವುದನ್ನು ಬಿಡುವುದಿಲ್ಲ ; ಜ್ಞಾನ, ಕಾಯಕ್ಕೆ ಗಾಯ ಮಾಡುವುದನ್ನು ಬಿಡುವುದಿಲ್ಲ.

ಕಾಯ ಸಾಕಷ್ಟು ಪದವಿಗಳನ್ನು ಪಡೆದರೇನು ? ಮಠಾಧಿಪತಿ ಪೀಠಾಧಿಪತಿಯಾದರೇನು ? ಜಿಲ್ಲಾಧಿಕಾರಿ ಶಾಸಕ ಸಚಿವನಾದರೇನು ? ಕಾಯದಲ್ಲಿಯೇ ನಡೆಯುವ ಈ ಜುಗಲ್ಬಂದಿ ನಿಲ್ಲುವುದೇ ಇಲ್ಲ.

ಸಿದ್ಧರಾಮ ಶಿವಯೋಗಿಗಳು, ಕಾಯವನ್ನು ಆವರಿಸಿದ ಮನದ ಮೈದಡವಿ, ಮನದ ಮೂಲಕ ಕಾಯದಲ್ಲಿಯೇ ಸಂಗಮವಾದ ಜ್ಞಾನದೊಂದಿಗೆ ಸಂಗ ಮಾಡಿದರು. ಈ ಘನತರವಾದ ಜ್ಞಾನ ಸಂಯೋಗದಲ್ಲಿ ಮನ ಘನಮನವಾಯಿತು.

ಕ್ಷಣ ಕ್ಷಣಕ್ಕೂ ಮನದ ಅಜ್ಞಾನವನ್ನು ನಿನ್ನ ಜ್ಞಾನದ ಮೂಲಕ ನೆನಪು ಮಾಡುವ ನಿನ್ನ ನೆನಹಿನ ಮಠದೊಳಗೆ ಮುಳುಗಿ ನಾನು ನಿರ್ಮಲನಾದೆ ಪ್ರಭುವೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿನ್ನ ಘನತರ ಸಂಯೋಗದಲ್ಲಿ ಸಂಗಮವಾಗಿ ನೀನು ನಾನಾದೆ ತಂದೆ. ನನ್ನ ಮನದ ಅಜ್ಞಾನದ ಸಂದು ಸಂದುಗಳು ಸವೆದು ನಿನ್ನ ಜ್ಞಾನದಲ್ಲಿ ಒಂದಾದೆನಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಪರಮಾನಂದದಿಂದ ಹಾಡಿದ್ದಾರೆ.

**418**

**ಕರುಣ ಕಂಬನಿಯ ದೆಸೆದೆಸೆಗೆಟ್ಟ**
**ವಾರುಧಿಯೊಳಗೆ ಮುಸುಕಿ ಮುಸುಕಿ ಮೋಹಿಸುತ್ತಿರ್ದೆನಯ್ಯಾ**
**ದೆಸೆಗೆಟ್ಟ ಪಶುವಾನಿದ್ದೆ ಪಶುಪಾಶ ಮೋಚನನು ನೀನಾದೆ.**
**ಈ ಹಸುಳೆಯ ತೆಗೆದು ನಿನ್ನ ವಶಕ್ಕೆ**

**ಇತ್ತ ಬಾಯೆಂದೆ,**
**ಕರುಣೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

''ಪಶುನಾನು, ಪಶುಪತಿ ನೀನು''. ''ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ತಂದೆ ನಿನ್ನ ಬಯ್ಯದಂತೆ ಮಾಡು'' ''ವಿಷಯವೆಂಬ ಹಸರನು ಎನ್ನ ಮುಂದೆ ತಂದು ಪಸರಿಸಿದೆಯಯ್ಯಾ. ಪಶುವೇನು ಬಲ್ಲದು ಹಸುರೆಂದೆಳೆಸುವುದು''.

ತನುವಿನಲ್ಲಿ ಹುಟ್ಟಿದ ವಿಷಯ ಸುಖ ಕೆಟ್ಟದ್ದೆಂದು ತನುವಿಗೆ ಗೊತ್ತಾಗುತ್ತದೆ. ಆದರೂ ಅನುಭವಿಸುವ ಆಸೆಯ ಮುಂದೆ, ಹಿಡಿದು ನಿಲ್ಲಿಸುವ ಶಕ್ತಿ ಸೋಲುತ್ತದೆ. ಇವೆರಡೂ ತನುವಿನ ಮೂಲಕ ತನುವಿಗೆ ಪರಿಚಯವಾಗುತ್ತದೆ.

ಆಸೆ ಸೃಷ್ಟಿ ಮಾಡುವ ಅಜ್ಞಾನ ತನುವಿನಲ್ಲಿ ಇದೆ. ಅದು ತರವಲ್ಲ ಎಂದು ತಡೆದು ನಿಲ್ಲಿಸುವ ಜ್ಞಾನವೂ ತನುವಿನಲ್ಲಿ ಇದೆ. ಈ ಎರಡೂ ಶಕ್ತಿಗೆ ತನು ಬಳಕೆಯಾಗುತ್ತದೆ; ಅಂದ ಮೇಲೆ ತನು ನಿರಪರಾಧಿ. ಆದರೂ ಈ ಎರಡೂ ಶಕ್ತಿಗಳಿಗೆ ಬಳಕೆಯಾಗುವ ತನುವಿಗೆ ಈ ಎರಡೂ ವಿಚಾರಗಳು ತಿಳಿಯುತ್ತವೆ ಎಂದ ಮೇಲೆ ಯಾವ ಶಕ್ತಿಗೆ ತಾನು ಆಸೆ ಮಾಡಬೇಕು ಎಂಬುದನ್ನು ತನುವೇ ಆಲೋಚನೆ ಮಾಡಿ ನೋಡಿ ಒಂದು ನಿರ್ಧಾರಕ್ಕೆ ಬರಬೇಕು.

ಸುಳ್ಳು ಸುಖದ ವಿಷಯದ ಆಸೆಯನ್ನು ತನುವಿನಲ್ಲಿ ಸೃಷ್ಟಿ ಮಾಡಿ ತನುವಿನೊಂದಿಗೆ ಸುಖಿಸುವ ಮನದ ಆಸೆಯನ್ನು ತನು ತನಗೆ ತಾನೇ ತಡೆದು ನಿಲ್ಲಬೇಕು. ವಿಷಯ ಸುಖ ಸುಳ್ಳು ಎಂದು ತಿಳಿಸಿ ಹೇಳುವ ಜ್ಞಾನದ ಸಂಗವನ್ನು ತನು ಮಾಡಲೇಬೇಕು.

ಮನದ ಮೋಹದ ಬಲೆಗೆ ತನು ಬೀಳದೆ ತನಗೆ ತಾನೇ ಪಾರಾಗಬೇಕು. ಏನೂ ತಿಳಿಯದ ಹಸುಗೂಸು ಇದು; ಇದರಲ್ಲಿಯೇ ವಾಸ ಮಾಡಿದ ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ಸೃಷ್ಟಿ ಮಾಡಿದ ತನುವನ್ನು ನೀನೇ ನಿನ್ನ ವಶಕ್ಕೆ ಪಡೆದುಕೊಂಡು ನಿನ್ನ ತನುವನ್ನು ಪಾರು ಮಾಡು ಎಂದು ಕಂಬನಿ ಮಿಡಿಯಬೇಕು.

ಬಸವಣ್ಣನವರು, ಸಿದ್ಧರಾಮ ಶಿವಯೋಗಿಗಳು ಇವರಿಬ್ಬರೂ ಮಹಾಜ್ಞಾನಿಗಳು. ಲೋಕದ ಸಕಲ ತನುಗಳು ಜ್ಞಾನದಿಂದಲೇ ಭರಿತವಾಗಿವೆ. ಆದರೂ ಭರಿತವಾದ ಜ್ಞಾನವನ್ನು ಬಳಸುವ ವಿಧಾನ ತನುವಿಗೆ ಗೊತ್ತಿಲ್ಲ. ತನುವನ್ನು ಆವರಿಸಿದ ಮನಕ್ಕೆ ಕೂಡಾ ಗೊತ್ತಿಲ್ಲ.

ಸಕಲ ತನುಗಳು ಸೂತ್ರ ರೂಪದ ವಚನಗಳನ್ನು ಬಳಸಿಕೊಂಡು ತನುವಿನ ಮಹಾಜ್ಞಾನವನ್ನು ತನುವೇ ಪಡೆದು ತನುಗಳು ಪರಮ ಸುಖವನ್ನು ಹೊಂದಲಿ ಎಂಬ ಕರುಣೆಯಿಂದ ವಚನಗಳ ಬುತ್ತಿಯನ್ನು ಬಸವಾದಿ ಶರಣರು ಈ ಲೋಕಕ್ಕೆ ಬಿಟ್ಟು ಹೋಗಿದ್ದಾರೆ.

ತನು ಹುಟ್ಟಿದಾಗಿನಿಂದ ತನುವಿನ ಅಜ್ಞಾನದ ಸುಖ ತನುವಿಗೆ ಗೊತ್ತಿದೆ. ಅದು ಅಜ್ಞಾನದ ಕೆಲಸವೆಂದು ತನುವಿಗೆ ಗೊತ್ತಿದ್ದರೂ ತನು ಏಕೆ ಆ ಕೆಲಸದಲ್ಲಿ ಭಾಗಿಯಾಗುತ್ತಿತ್ತು ಎನ್ನುವ ಆಲೋಚನೆ ಕೂಡಾ ತನುವಿಗೆ ಹೊಳೆಯುತ್ತಿರಲಿಲ್ಲ.

ತನುವಿನಲ್ಲಿಯೇ ಸಂಗಮವಾದ ಜ್ಞಾನವನ್ನು ತನು ಮತ್ತು ಮನಾದಿಗಳು ಹೇಗೆ ಬಳಸಬೇಕೆಂಬ ವಿಧಾನ ಇವೆರಡಕ್ಕೂ ಗೊತ್ತಿಲ್ಲದ ನಿಮಿತ್ತ ವಿಷಯ ಸುಖ ಬಳಸಿದಾಗ ಸುಖವಾಗುತ್ತಿತ್ತು; ನಂತರ ದುಃಖವಾಗುತ್ತಿತ್ತು. ಈ ಸುಖ ದುಃಖಗಳು ತನುವಿನಲ್ಲಿಯೇ ಸಂಗ್ರಹವಾಗಿ ತನುವಿರುವವರೆಗೆ ನಿರಂತರ ಕಾಡುತ್ತಿದ್ದವು.

ಬುದ್ಧ ಮಹಾವೀರ ಬಸವಾದಿ ಶರಣರು ದಾಸವರೇಣ್ಯರು. ಕ್ರಿಸ್ತ ಕ್ರಿಷ್ಣ ಪೈಗಂಬರರು

ಮುಂತಾದ ಶರಣರು ಕಂಡುಕೊಂಡರು. ತಾವು ಕಂಡುಕೊಂಡ ಸತ್ಯವನ್ನು ಸೂತ್ರರೂಪದಲ್ಲಿ ಬರೆದರು. ಆದರೂ ತನುಗಳಿಗೆ ತಿಳಿಯಲೇ ಇಲ್ಲ. ಬರೆದವರನ್ನೇ ದೇವರೆಂದರು. ಜ್ಞಾನಿಗಳು ಬರೆದ ಪುಸ್ತಕಗಳೇ ಧರ್ಮಗ್ರಂಥಗಳಾದವು. ತನುವಿನ ಅಜ್ಞಾನ ತನುವನ್ನೇ ಆಳಿತು. ತನುವಿನಲ್ಲಿಯೇ ಇರುವ ಜ್ಞಾನ ತನುವಿನಲ್ಲಿಯೇ ಉಳಿದು ಕರುಣೆಯಿಂದ ವಟಗುಟ್ಟಿತು. ತನು ಮತ್ತು ಮನಗಳು ಜ್ಞಾನದ ಆ ಕರುಣೆಯ ಮಾತುಗಳನ್ನು ಆಲಿಸಬೇಕಲ್ಲ !

ಇತ್ತ ಬಾಯೆಂದು ಕರುಣಿ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನು ಕರೆಯುವ ಕರೆಯನ್ನು ತನು ಮತ್ತು ಮನಾದಿಗಳು ಕೇಳಬೇಕಲ್ಲ ! ತಮ್ಮ ಪಶು ಪ್ರವೃತ್ತಿಯಿಂದ ನಿವೃತ್ತಿಯಾಗಬೇಕಲ್ಲ. ಈ ಹಸುಳೆಯ ತೆಗೆದು ಬಿಗಿದಪ್ಪಿ ನಿನ್ನ ವಶಕ್ಕೆ ತೆಗೆದುಕೊಳ್ಳಯ್ಯಾ ಎನ್ನ ತಂದೆಯೇ ಎಂದು ಅಜ್ಞಾನಿ ತನು ಮನಾದಿಗಳು ಕೂಗಬೇಕಲ್ಲ !

ನಿನ್ನಿಂದ ಹುಟ್ಟಿದ ನಾನು ನನ್ನನ್ನೇ ಮೋಹಿಸಿ ಸತ್ತೆ. ಪಶು ನಾನು. ಪಶುಪಾಶಮೋಚನನು ನೀನು ಎಂದು ತನಗೆ ಕೂಗಲು ಬಂದಾಗ ತನುವಿನ ಅಜ್ಞಾನ ತನುವಿನ ಜ್ಞಾನದಲ್ಲಿಯೇ ಕರಗಿ ನೀರಾಗುವುದು.

**419**

**ಕರುಣರಸ ಹರಿವಲ್ಲಿ**
**ಮಹಾಕಾರುಣ್ಯ ಸುಧಾ ಪ್ರವಾಹವಪ್ಪಲ್ಲಿ**
**ಆರಯ್ಯಾ ನಿನ್ನನರಿವವರು?**
**ಲೋಕಾದಿಲೋಕಂಗಳಿಗೆ ಏಕೋದೇವ ನೀನು**
**ಅನಾದಿ ಮೂಲಕ್ಕೆ ಮೂಲಸ್ವಾಮಿ ನೀನೇ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಭ್ರಮಾರಸ ಅಜ್ಞಾನದ ಸೃಷ್ಟಿಗೆ ಕಾರಣವಾದರೆ, ಬ್ರಹ್ಮರಸ ಅಜ್ಞಾನದ ನಾಶಕ್ಕೆ ಕಾರಣವಾಗುತ್ತದೆ. ಅರಿಷಡ್ವರ್ಗಗಳು, ಅಷ್ಟ ಮದಗಳು, ಸಪ್ತ ವ್ಯಸನಗಳು ನಾಶವಾಗುತ್ತವೆ. ಭ್ರಮೆಗೆ ಅಧೀನವಾದ ಕಾಯದ ಕಣಕಣದಲ್ಲಿ ಬ್ರಹ್ಮರಸ ಉಕ್ಕಿ ಹರಿಯುತ್ತದೆ.

ಬ್ರಹ್ಮರಸವೆಂದರೆ ಕಾಯದ ಕಣಕಣದಲ್ಲಿ ಹುಟ್ಟುವ ಅಮೃತ. ಅದಕ್ಕೆ ಕಾಯವನ್ನು ಆವರಿಸಿಕೊಂಡ ಅಜ್ಞಾನವನ್ನು ಕಳೆಯುವ ಶಕ್ತಿಯುಂಟು. ಅದು ಕಾಯದ ಬೀಜ ತಾಯಿಯ ಗರ್ಭ ಪ್ರವೇಶ ಮಾಡುವಾಗಲೇ ಆ ಬೀಜದೊಂದಿಗೆ ಜ್ಞಾನರಸವೂ ಸಂಗಮವಾಗಿ ಕಾಯದ ಜನ್ಮಕ್ಕೆ ಕಾರಣವಾಗಿದೆ.

ಕಾಯದ ಗರ್ಭದಲ್ಲಿಯೇ ಸಂಗಮವಾದ ಜ್ಞಾನಾಮೃತವನ್ನು ಕಾಯ ಪ್ರೌಢಾವಸ್ಥೆಗೆ ಬಂದಂತೆಲ್ಲ ಕಾಯವೇ ಕಂಡುಕೊಳ್ಳಲು ಪ್ರಯತ್ನಿಸಬೇಕು. ಅದು ಕಾಯದ ಧರ್ಮ.

ಕಾಯವನ್ನು ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟ ಮದಗಳು ಮುತ್ತಿಗೆ ಹಾಕಿರುವುದರಿಂದ, ಈ ಅಜ್ಞಾನಕ್ಕೆ ಮನವೇ ಕಾರಣವಾಗಿರುವುದರಿಂದಾಗಿ; ಕಾಯದಲ್ಲಿಯೇ ಸಂಗಮವಾದ ಸದಾ ಜ್ಞಾನಾಮೃತವನ್ನೇ ಕಾಯಕ್ಕೆ ಉಣಬಡಿಸುವ ಮಹಾಕಾಯದ ಮಾತು ಕಾಯಕ್ಕೆ ರುಚಿಸುವುದಿಲ್ಲ. ಕಾಯವನ್ನು ಆವರಿಸಿದ ಮಾಯಾಮಯವಾದ ಮನಕ್ಕೂ ರುಚಿಸುವುದಿಲ್ಲ. ಹೀಗಾಗಿ ಕಾಯದಲ್ಲಿ ಸದಾ ಹರಿಯುತ್ತಿರುವ ಮಹಾಕಾಯದ

ಮಹಾಕಾರುಣ್ಯಮಯವಾದ ಸುಧೆ ಪ್ರವಾಹ ರೂಪದ ನಿರೂಪದ ಮೂಲಕ ಹರಿಯುತ್ತಿದ್ದರೂ ಸ್ವತಃ ಕಾಯವೇ ಕಂಡುಕೊಳ್ಳಲು ಕಾಯಕ್ಕೆ ಸಾಧ್ಯವಾಗುತ್ತಿಲ್ಲ. ಇನ್ನು ಅನ್ಯ ಕಾಯಗಳು ಕಂಡುಕೊಳ್ಳುವ ಮಾತು ಬಹುದೂರ ಉಳಿಯಿತು.

ಕಾಯದಲ್ಲಿ ಸದಾ ಅಮೃತ ಸಮಾನವಾದ ಬ್ರಹ್ಮರಸವನ್ನು ಅವ್ಯಕ್ತ ಕಾಯದ ಮೂಲಕ ಹರಿಸುತ್ತಿರುವ ಮಹಾಜ್ಞಾನಿಯನ್ನು ಕಾಯ ಮತ್ತು ಕಾಯವನ್ನು ಆವರಿಸಿದ ಮನ ಕಂಡುಕೊಂಡು ಅದನ್ನು ಪಾನ ಮಾಡಲೇಬೇಕು. ವ್ಯಕ್ತ ಕಾಯದೊಳಗೆ ಅವ್ಯಕ್ತನನ್ನು ಕಂಡುಕೊಂಡ ಶಂಕರರು ಆತನನ್ನು ಶಿವ ಎಂದು ಶಿವಾನಂದ ಲಹರಿಯ ಮೂಲಕ ಹೆಸರಿಟ್ಟು ಕರೆದಿದ್ದಾರೆ. ಆ ಅಮೃತವನ್ನು ಜ್ಞಾನಸುಧಾರಸವನ್ನು ಸದಾ ಚಿಮ್ಮುತ್ತಿರುವ ಶಿವನನ್ನು ಶಿವಾನಂದ ಲಹರಿಯಲ್ಲಿ ನಾನಾ ವಿಧದಿಂದ ಬಣ್ಣಿಸಿದ್ದಾರೆ. ಶಿವೋಹಂ ಶಿವೋಹಂ ಎಂದು ಷಟಕದ ಮೂಲಕ ಹಾಡಿದ್ದಾರೆ. ಬ್ರಹ್ಮರಸ ಪಾನ ಮಾಡಿದ ಕಾಯದ ಮೂಲಕ ಮಹಾಕಾರುಣ್ಯ ಸುಧೆಯು ಪ್ರವಾಹ ರೂಪದಲ್ಲಿ ನಿರಂತರ ಹರಿಯುತ್ತದೆ.

ಸಿದ್ಧರಾಮ ಶಿವಯೋಗಿಗಳು, ಬಸವಾದಿ ಶರಣರು, ದಾಸವರೇಣ್ಯರು ಕ್ರಿಸ್ತ ಕ್ರಿಷ್ಣ ಪೈಗಂಬರರು, ಬುದ್ಧ ಮಹಾವೀರಾದಿ ಮಹಾಜ್ಞಾನಿಗಳು ಮಹಾಜ್ಞಾನದ ಕರುಣರಸವನ್ನು ಪ್ರವಾಹ ರೂಪದಲ್ಲಿ ಹರಿಸಿದ್ದಾರೆ. ಅದನ್ನು ಕುಡಿದವನೇ ಜಾಣ. ಜಾಣರ ಜಾಣ. ಹೀಗೆ ಪ್ರತಿ ಕಾಯದಲ್ಲಿ ಸಂಗಮವಾಗಿ, ಜ್ಞಾನದ ರಸವನ್ನು ಪ್ರವಾಹ ರೂಪದಲ್ಲಿ ಹರಿಸುವ ಮಹಾ ಜ್ಞಾನಿಯನ್ನು ಕಾಯ ಮತ್ತು ಮನಗಳೆರಡೂ ಕಂಡುಕೊಳ್ಳಬೇಕು. ಆತ ಲೋಕಾದಿ ಲೋಕಂಗಳಿಗೆ ಏಕೋದೇವ. ಆತ ಅನಾದಿ. ಕಾಯದ ಮೂಲಕ್ಕೆ ಮೂಲಸ್ವಾಮಿ ಆತ. ಕಪಿಲಸಿದ್ಧ ಮಲ್ಲಿಕಾರ್ಜುನ ಆತ.

**420**

**ಕರುಣಾಕರ, ಕರತಳಾಮಳಕ ಎಂದಪ್ಪುದಯ್ಯಾ ?**
**ನಿನ್ನ ನೆನಹಿನ ಮಹಾಸಮುದ್ರದೊಳಗದ್ದಿ ಎಂದಾಳ್ವೆನಯ್ಯಾ ?**
**ಬಂದುದು ಬಾರದೆಂಬ ಸಂದೇಹವನೆಂದು ಸವೆವೆನಯ್ಯಾ?**
**ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ,**
**ಎಂದಯ್ಯಾ ಕರುಣ ಕಂದರೆವುದು?**

ಅಂಗದಲ್ಲಿಯೇ ಸಂಗಮವಾದ ಅರಿವು ಎಂಬುದು ಬರೀ ಅರಿವಲ್ಲ. ಅಂಗವನ್ನು ಆವರಿಸಿದ ಮನವೆಂಬ ಮರೆವಿಗೆ ಸದಾ ಪಾಠ ಮಾಡುವ ಗುರುದೇವ! ಆತ ಕರುಣಾಕರ. ಜಗದಗಲ ಮುಗಿಲಗಲ ವ್ಯಾಪಿಸಿಕೊಂಡ ಬಯಲು ದೇವನೇ ಅಂಗದಲ್ಲಿ ಚುಳುಕಾಗಿ ಗುರುದೇವನಾಗಿದ್ದಾನೆ. ನೆನಹಿನ ಮಹಾಸಮುದ್ರವಾಗಿ ಅಂಗದಲ್ಲಿಯೇ ಸುಧೆಯಾಗಿ ನಿರಂತರ ಹರಿಯುತ್ತಿದ್ದಾನೆ.

ಸಿದ್ಧರಾಮ ಶಿವಯೋಗಿ ಮನವೆಂಬ ಮರೆವನ್ನು; ಅಂಗದಲ್ಲಿಯೇ ಸಂಗಮವಾದ ಅರಿವಿನ ಮಹಾಸಮುದ್ರದಲ್ಲಿ ಅದ್ದಿ ಎಂದಾಳ್ವೆನಯ್ಯಾ ಎಂದು ಆ ಗುರುದೇವನೊಂದಿಗೆ ಮಾತನಾಡುತ್ತಾ ಆತನಿಗೆ ಪ್ರಶ್ನೆ ಮಾಡಿದ್ದಾನೆ.

ಗುರುದೇವನೇ; ನೀನೇ ಮನವನ್ನು ಕಳುಹಿಸಿ, ಎನ್ನ ತನುವಿಗೆ ಮಾಯೆಯ ಮರೆವಿನ ಮುಸುಕನ್ನು ಹೊದಿಸಿರುವಿ. ಅದನ್ನು ಕಿತ್ತೆಸೆದು ನಿನ್ನ ನೆನಹಿನ ಅರಿವಿನ ಮಹಾಸಮುದ್ರದೊಳಗೆ ಎನ್ನನದ್ದಿ ಈ ತನುವನ್ನು ಎಂದು ಆಳುವೆಯಯ್ಯಾ ಎಂದು ಗುರುದೇವನನ್ನೇ ಕೇಳುವ ಅಂತರಾಳದ

ಮಾತು ಸಿದ್ಧರಾಮ ಶಿವಯೋಗಿಗಳು ತನ್ನ ಓದುಗರಿಗು ಕೂಡಾ ಉಣಬಡಿಸಿದ್ದಾರೆ.

ಬಸವಣ್ಣನವರು ಕೂಡಾ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೊಂದಿಗೆ ಮಾತನಾಡುವ ಒಂದು ಪ್ರಸಂಗವನ್ನು ಈ ಕೆಳಗಿನಂತೆ ಹೇಳಿದ್ದಾರೆ:

ಭಕ್ತಿ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ, ನಡೆಯೊಳಗೆ ನುಡಿಯ ಪೂರೈಸುವೆ. ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ. ಒಂದು ಜವೆ ಕೊರತೆಯಾದಡೆ ಎನ್ನನದ್ದಿ ನೀನೆದ್ದು ಹೋಗು, ಕೂಡಲಸಂಗಮದೇವಾ.

ಎನ್ನ ನಡೆ ನುಡಿಯಲ್ಲಿ, ಎನ್ನ ನೋಟದಲ್ಲಿ ಒಂದು ಜವೆ ಕೊರತೆಯಾದಡೆ ಎನ್ನನದ್ದಿ ನೀನೆದ್ದು ಹೋಗು. ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನೇ ಈ ಅಂಗವನ್ನೇ ಆವರಿಸಿದ ಅಜ್ಞಾನದ ಸಮುದ್ರದಲ್ಲಿ ಎನ್ನನ್ನು ಅದ್ದಿ ಈ ಅಂಗವನ್ನು ಬಿಟ್ಟು ನೀನೆದ್ದು ಹೋಗು ಎಂದು ಅರಿವಿನ ಸಂಗಯ್ಯನಿಗೆ ಸವಾಲು ಹಾಕಿದ್ದಾರೆ.

ತಾನು ಶಿಷ್ಯನಾಗಿ ತನ್ನ ಅರಿವಿನ ಗುರುದೇವನೊಂದಿಗೆ ಮಾತನಾಡುವ ಕಲೆಯನ್ನು ತನ್ನ ಓದುಗರಿಗೆ ಹಂಚಿಕೊಳ್ಳುವ ಕಾಯಕವನ್ನು ಶರಣರು ಮಾತ್ರ ಮಾಡಿದ್ದಾರೆ. ಕ್ರಿಸ್ತ, ಕ್ರಿಷ್ಣ, ಬುದ್ಧ, ಮಹಾವೀರ, ಪೈಗಂಬರರು ಮಾತ್ರ ಮಾಡಿದ್ದಾರೆ. ದಾಸವರೇಣ್ಯರು ತತ್ವಪದಕಾರರು ಉಪನಿಷತ್‌ಕಾರರು ಮಾತ್ರ ಮಾಡಿದ್ದಾರೆ. ಓದಿ ಜೀರ್ಣಿಸಿಕೊಳ್ಳುವ ಸಕಲ ಓದುಗರು ಅವರಿಗೆ ಋಣಿಯಾಗಿರಬೇಕು.

ಸಕಲ ಅಂಗಗಳಲ್ಲಿ ಅರಿವೆಂಬ ಗುರುದೇವನ ಅಂಗವೊಂದು ಸಂಗಮವಾಗಿದೆ. ಅಂಗವನ್ನು ಮನವೆಂಬ ಶಿಶುವಿನ ಅಂಗವೊಂದು ಆವರಿಸಿದೆ. ಏನೂ ತಿಳಿಯದ ಶಿಶುವನ್ನು ಕೈ ಹಿಡಿದು ನಡೆಸುವ ಗುರುದೇವನು ಅಂಗದಲ್ಲಿಯೇ ನೆಲೆಸಿದ್ದಾನೆ. ಗುರುವಿಗೆ ಅಂಗವಿಲ್ಲ. ಶಿಶುವಿಗೂ ಅಂಗವಿಲ್ಲ. ಅಂಗವಿಲ್ಲದ ಅನಂಗಿಗಳು ಅಂಗದಲ್ಲಿ ನೆಲೆಸಿದ್ದಾರೆ.

ಬಂದುದು ಬಾರದೆಂಬ ಸಂದೇಹವನೆಂದು ಸವೆವೆನಯ್ಯಾ ? ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಎಂದಯ್ಯಾ ಕರುಣ ಕಂದರೆವುದು?:

ಬೀಜದಲ್ಲಿಯೇ ವೃಕ್ಷ ಅಡಗಿದಂತೆ, ಅರಿವಿನ ಗುರುದೇವ ಬೀಜದೊಂದಿಗೆ ಬಂದಿದ್ದಾನೆ. ಬೀಜವನ್ನು ಹೊತ್ತು ತಂದು ಬೀಜದೊಂದಿಗೇ ಗರ್ಭ ಪ್ರವೇಶಿಸಿದ್ದಾನೆ. ಗುರುದೇವನ ನೆರಳೇ ಶಿಶುವಾಗಿ ಬೀಜದ ಗರ್ಭದಲ್ಲಿಯೇ ಅವತರಿಸಿದೆ. ಆತ ಅನಾದಿಯಾದರೆ ಶಿಶು ಆದಿ. ಅವರಿಬ್ಬರನ್ನು ಹೊತ್ತ ಬೀಜ ಅಂಗವಾಗಿ ಅಂಗದಿಂದಲೇ ಹೊರ ಬಂದಿದೆ. ಶಿಶುರೂಪದ ಅಂಗ ಪ್ರೌಢಾವಸ್ಥೆಗೆ ಬಂದರೂ ತಂದೆ ತಾಯಿಗಳನ್ನು ಮರೆಯುತ್ತಿಲ್ಲ.

ಮನವೆಂಬ ಶಿಶು ಅಂಗದ ಸಂಗ ಮಾಡಿದೆ. ಅಂಗದಲ್ಲಿಯೇ ಸಂಗಮವಾದ ಗುರುದೇವನ ಪಾಠ ಶಿಶುವಿಗೆ ಕೇಳಲು ಬರುತ್ತಿಲ್ಲ. ಶಿಶುವಿಗೆ ಈ ವೃತ್ತಾಂತ ಗೊತ್ತಾದರೆ ಸಾಕು ಕೂಡಲೇ ಪ್ರೌಢಾವಸ್ಥೆಗೆ ಬರುತ್ತದೆ. ಗುರುದೇವನಿಗೆ ಶಿಷ್ಯನಾಗುತ್ತದೆ. ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ನೀನಲ್ಲದೆ ಯಾರೂ ಇಲ್ಲ ಎಂದು ಮೈದುಂಬಿ ಹಾಡುತ್ತದೆ. ಇಡೀ ಅಂಗವೇ ಅಂಗದ ವೃತ್ತಾಂತವೇ ಅಂಗದ ಮುಷ್ಟಿಯಲ್ಲಿ ನೆಲ್ಲಿಕಾಯಿ ಗಾತ್ರದಲ್ಲಿ ಸಿಕ್ಕು ಕರತಳಾಮಳಕವಾಗುತ್ತದೆ. ಅಂಗದಲ್ಲಿಯೇ ಸಂಗಮವಾದ ಅನಂಗಧಾರಣನಾದ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನನ್ನು ಕಂಡು ಮನವೆಂಬ ಶಿಶು ಕಣ್ದೆರದು ಆತನೊಂದಿಗೆ ಸಂಗಮವಾಗುತ್ತದೆ.

**421**

**ಕರುಣಾಕರನೆ ಎಂದು ಹೊಗಳುತ್ತೈದಾವೆ ಶ್ರುತಿಯು ;**
**ಐದಿದಡೆ ಹಾನಿ ಬಿರಿದಿಂಗೆ .**
**ಅಯ್ಯಾ, ಅಯ್ಯಾ, ಕರುಣಾಕರ ಕಪಿಲಸಿದ್ಧ ಮಲ್ಲೇಶ್ವರಾ,**
**ಓರಂತೆ ಮಾಡಿ ಸಲಹಯ್ಯಾ ಎನ್ನನು.**

ವೇದ ಆಗಮ ಉಪನಿಷತ್‌ಗಳು, ಭಗವದ್ಗೀತೆ ಬೈಬಲ್ ಕುರಾನ್‌ಗಳು, ಶ್ರುತಿ ಸ್ಮೃತಿಗಳು ಕರುಣಾಕರನೆ ಕೃಪೆ ಮಾಡು ಎಂದು ಹೊಗಳುತ್ತಲಿವೆ.

ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ಸಂಗಮವಾದ ಭಗವಂತನ ನೆನಪಾಗಲೆಂದು ಸಕಲ ಗ್ರಂಥಗಳು ಕರುಣಾಕರನೆ ಕೃಪೆ ಮಾಡು ಎಂದು ಹೊಗಳುತ್ತಲಿವೆ.

ಸಕಲ ಗ್ರಂಥಗಳಾದರೂ ತನುವಿನ ಕಡೆಗೆ ಬೆಟ್ಟು ಮಾಡುತ್ತವೆಯೇ ಹೊರತು ಅವೇ ಶ್ರೇಷ್ಠವೆಂದು ಅವು ತಿಳಿಸುತ್ತಿಲ್ಲ. ಆದರೂ ತನುವನ್ನು ಆವರಿಸಿದ ಮನಕ್ಕೆ ಗ್ರಂಥಗಳೇ ಶ್ರೇಷ್ಠವಾದವು.

ತನುವಿನಲ್ಲಿಯೇ ಸಂಗಮವಾದ ಕರುಣಾಕರನ ಪರಿಚಯ ತನು ಮತ್ತು ಮನಕ್ಕೆ ಆಗದೆ ತನು ಹಿಡಿದು ಓದಿದ ಗ್ರಂಥವನ್ನೇ ಓದುತ್ತಾ ಪಂಡಿತನಾಗುತ್ತದೆ. ಶಾಸ್ತ್ರಿಯಾಗುತ್ತದೆ. ಓದಿದ ಗ್ರಂಥವನ್ನು ಪ್ರವಚನ ಮಾಡುತ್ತಾ ತನುಗಳಿಗೆ ತನುವೇ ಗ್ರಂಥವನ್ನು ಪರಿಚಯಿಸುತ್ತದೆ.

ಕೈಮರ ದಾರಿ ತೋರಿಸುತ್ತದೆಯೇ ಹೊರತು ಊರು ತಲುಪಿಸುವುದಿಲ್ಲ ಎಂದು ಮನಕ್ಕೆ ತಿಳಿದಿದೆ. ಹೀಗಾಗಿ ರಸ್ತೆಯ ವೃತ್ತದಲ್ಲಿರುವ ಕೈಮರ ನೋಡಿ ನಡೆದರೆ ಊರು ಬರುತ್ತದೆಯೆಂದು ಮನ ಮತ್ತು ತನುವಿಗೆ ಗೊತ್ತಿದೆ. ಹೀಗಾಗಿ ಕೈಮರ ನೋಡಿ ವಾಹನಗಳು ಮುಂದೆ ಸಾಗುತ್ತವೆ. ಸೇರಬೇಕಾದ ಜಾಗವನ್ನು ತಲುಪಿ ತನು ಸಂಭ್ರಮಿಸುತ್ತದೆ.

ಕೈಮರ ನೋಡಿ ಮನ ತನುವಿನೊಂದಿಗೆ ಸೇರಬೇಕಾದ ದಾರಿಯನ್ನು ಕ್ರಮಿಸಿ ಸಂಭ್ರಮಿಸುವುದು ಸಹಜ. ಅಂತೆಯೇ ಮನ ತನುವಿನೊಂದಿಗೆ ಗ್ರಂಥವನ್ನು ಓದಿ ತನುವಿನಲ್ಲಿಯೇ ಸಂಗಮವಾದ ಭಗವಂತನಿರುವ ಜಾಗಕ್ಕೆ ಸೇರಿ, ಆತನಿಗೆ ಹಣೆಮಣೆದು, ಆತನ ಚರಣಕಮಲಗಳಲ್ಲಿಯೇ ತಾನು ಲೀನವಾಗಿ ಸುಖಿಸಿ ಸಂಭ್ರಮಿಸಬೇಕೆಂಬ ಉಪಾಯ ಮನಕ್ಕೆ ಬರುತ್ತಿಲ್ಲ.

ಗ್ರಂಥ ಪಠಿಸಿದರೆ ಮನಕ್ಕೆ ಸಂತೋಷವಾಯಿತು. ಎಲ್ಲಿ ನೋಡಿದರೂ ಭಗವದ್ಗೀತೆಯ ಮಾತೇ, ಎಲ್ಲಿ ನೋಡಿದರೂ ಬೈಬಲ್‌ನ ಮಾತೇ, ಎಲ್ಲಿ ನೋಡಿದರೂ ಕುರಾನ್ ಗ್ರಂಥದಲ್ಲಿರುವ ಮಾತೇ ಪ್ರಮುಖವಾಯಿತು. ಎಲ್ಲಿ ನೋಡಿದರೂ ಕ್ರಿಷ್ಣ ಮಂದಿರಗಳೇ, ಎಲ್ಲಿ ನೋಡಿದರೂ ಚರ್ಚ್‌ಗಳೇ, ಎಲ್ಲಿ ನೋಡಿದರೂ ಮಸೀದೆಗಳೇ ಪ್ರಧಾನವಾದವು. ಮನಕ್ಕೆ ಗ್ರಂಥಗಳೇ ಪ್ರಧಾನವಾದವು. ಅವುಗಳನ್ನು ಬರೆದವರು ಪ್ರಧಾನರಾದರು. ಓದಿದ ತನು ಪಂಡಿತನಾಯಿತು. ಶಾಸ್ತ್ರಿಯಾಯಿತು. ನಾನಾ ಬಿರುದುಗಳನ್ನು ತಲೆಗೆ ಸಿಕ್ಕಿಸಿಕೊಂಡು ತನಗೆ ತಾನೇ ಭ್ರಮೆಯಿಂದ ಬೀಗಿತು. ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವ ಮನಕ್ಕೆ ಒಲಿಯಲಿಲ್ಲ. ತನುವಿಗೆ ನೀಡಿದ ಬಿರುದು ತನುವನ್ನು ದುಃಖದಿಂದ ಪಾರು ಮಾಡಲಿಲ್ಲ. ತನುವಿಗೆ ನೀಡಿದ ಬಿರುದು ತನುವಿಗೆ ಹಾನಿ ಎಂಬುದು ತನು ತಿಳಿಯಲಿಲ್ಲ.

'' ಅಕ್ಷರವಿಡಿದು ವಿದ್ಯೆಯ ಕಾಂಬಂತೆ, ಹುಳಿವಿಡಿದು ವ್ರತವ ಕಾಂಬಂತೆ, ಅನ್ನವಿಡಿದು

ಚೈತನ್ಯವ ಕಾಂಬಂತೆ, ಸತಿವಿಡಿದು ನಿರ್ವಾಣ ಸತಿಯ ಕಾಂಬರು ನೋಡಾ ಗುಹೇಶ್ವರಾ ನಮ್ಮ ಶರಣರು''. ಎಂದು ಹೇಳುವ ಅಲ್ಲಮಪ್ರಭುಗಳ ಈ ಸೂತ್ರ ವೇದಿಕೆಗೆ ಬಳಕೆಯಾದರೆ ಬಂದ ಲಾಭವಾದರೂ ಏನು ಎಂದು ಓದಿದ ಮನಕ್ಕೆ ಅರಿವಾಗಬೇಡವೇ?

ಗ್ರಂಥಗಳಲ್ಲಿರುವ ಸೂತ್ರ ಓದಿದಡೇನು, ಕೇಳಿದಡೇನು? ಓದುವುದೂ ಕೇಳುವುದು ಒಂದೇ. ಓದಿದವನೂ ಉಣ್ಣುತ್ತಾ ಓದಬೇಕು. ಹೇಳುವವನೂ ಉಣ್ಣುತ್ತಾ ಹೇಳಬೇಕು. ಕೇಳುವವನು ಕೂಡಾ ಉಣ್ಣುತ್ತಾ ಕೇಳಬೇಕು.

ಉಂಡ ಅನ್ನ ಕಾಯವನ್ನು ಸದೃಢವನ್ನಾಗಿಸುತ್ತದೆ. ಶಬ್ದ ಓದಿ ಕೇಳಿ ಅದನ್ನು ಉಂಡ ಮನ ಘನಮನವಾಗಿ ಕಾಯದಲ್ಲಿಯೇ ಸಂಗಮವಾದ ಘನದತ್ತ ಪ್ರಯಾಣ ಮಾಡುತ್ತದೆ. ನಿರ್ವಾಣಿಯಾಗುತ್ತದೆ. ಹಿಂದು ಮುಸಲ್ಮಾನ ಕ್ರೈಸ್ತ ಎಂದು ಹೇಳುವ ಬಾಯಿಗೆ ತಂತಾನೆ ಬೀಗ ಬೀಳುತ್ತದೆ.

ಕರುಣಾಕರ ಕಪಿಲಸಿದ್ಧ ಮಲ್ಲೇಶ್ವರಾ ಓರಂತೆ ಮಾಡಿ ಸಲುಹಯ್ಯಾ ಎನ್ನನು :

ಕಾಯ ಒಂದೇ. ಕಾಯದೊಳಗಿರುವ ಅರಿವು ಒಂದೇ. ಕಾಯದ ಅನುಕೂಲಕ್ಕಾಗಿ ಬರೆದ ಬರಹ ಒಂದೇ. ಕಾಯವನ್ನು ಆವರಿಸಿದ ಮನ ಕಾಯದಲ್ಲಿರುವ ಅರಿವಿನ ಸಂಗತಿಯನ್ನು ಉಂಡರೆ ಸಾಕು. ಅರಿವು ಮರೆವು ಒಂದಾಗುತ್ತದೆ. ಅರಿವಿನೊಂದಿಗೆ ಸಂಗ ಮಾಡಿ, ಅರಿವಿನೊಂದಿಗೆ ಮಾತನಾಡುತ್ತಾ, ಅರಿವೇ ತಾನಾಗುತ್ತದೆ.

ಅರಿವಿನಿಂದ ಹುಟ್ಟಿದ ಮನ; ಮರೆವಿನಿಂದಾಗಿ ಅರಿವನ್ನು ಮರೆತು ಹೋಗಿತ್ತು. ಕಾಯದಲ್ಲಿ ಭರಿತವಾದ ಅರಿವಿನ ಕಾಯ ಒಂದಿದೆ. ಅರಿವಿನ ಕಾಯದ ಬೆಳಕಿನಿಂದ ಮನವೆಂಬ ಮರೆವಿನ ಕಾಯ ಒಂದು ಜನ್ಮ ತಳೆದಿದೆ. ಅರಿವಿನ ಕಾಯ ಮರೆವಿನ ಕಾಯಗಳೆರಡೂ ಕಾಯದಲ್ಲಿಯೇ ಇವೆ. ಮರೆವಿನ ಕಾಯ ಕಾಯದ ಸಂಗ ಮಾಡಿ ಅರಿವನ್ನು ಸಂಪೂರ್ಣ ಮರೆತು ಹೋಗಿದೆ. ಅರಿವಿನ ಕಾಯದ ಬೋಧೆ ಮರೆವಿನ ಕಾಯ ಸ್ವೀಕರಿಸುತ್ತಿಲ್ಲ. ಮರೆವಿನ ಕಾಯಕ್ಕೆ ಅರಿವಾಗಲು ಗ್ರಂಥಗಳು ರಚನೆಯಾದವು. ಮರೆವಿನ ಕಾಯ ಅರಿವಿನ ಗ್ರಂಥ ಓದಿ ಹಿಂದು ಮುಸಲ್ಮಾನ ಕ್ರೈಸ್ತನಾಯಿತು. ಕಾಯದಿಂದ ರಚನೆಯಾದ ಗ್ರಂಥಗಳು ಕಾಯದಿಂದಲೇ ಪೂಜಿಸಲ್ಪಟ್ಟವು. ಗ್ರಂಥಗಳು ಶ್ರೇಷ್ಠವಾದವು. ಬರೆದವರು ಶ್ರೇಷ್ಠರಾದರು. ಅರಿವಿನ ಕಾಯ ಕಾಯದಲ್ಲಿಯೇ ಉಳಿಯಿತು. ಮರೆವಿನ ಕಾಯ, ಕಾಯವನ್ನೇ ತನ್ನ ಸಾಮ್ರಾಜ್ಯವನ್ನಾಗಿಸಿಕೊಂಡು ಅಜ್ಞಾನದ ಸಂಪ್ರದಾಯವನ್ನು ರಚಿಸಿತು. ಅರಿವಿನ ಕಾಯದ ಆರ್ತನಾದ ಮರೆವಿನ ಕಾಯ ಕೇಳಲೇ ಇಲ್ಲ. ಹೀಗೆ ಏಳುನೂರಾ ಮೂವತ್ತು ಕೋಟಿ ಕಾಯಗಳ ಮರೆವಿನ ಸಂಸಾರ ಈ ಜಗದಲ್ಲಿ ನಿರಂತರ ನಡೆದಿದೆ.

ಅರಿವಿನ ಕಾಯ ಮರೆವಿನ ಕಾಯ ಕಾಯದಲ್ಲಿಯೇ ಇವೆ. ಅರಿವಿನ ಕಾಯದ ಮಾತು ಮರೆವಿನ ಕಾಯ ಕೇಳುವುದಿಲ್ಲ ಎಂದ ಮೇಲೆ ಕಾಯ, ಕಾಯದ ಮಾತು ಕೇಳಲು ಸಾಧ್ಯವೆ? ಕಾಯದಿಂದಲೇ ಹೊರಬಂದ ಗ್ರಂಥವನ್ನು ಕಾಯ ಓದಿ ಅರಿವಿನ ಕಾಯ ಆಗಲು ಸಾಧ್ಯವೆ? ಕಾಯವನ್ನು ಆವರಿಸಿದ ಮರೆವಿನ ಕಾಯ ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯವನ್ನು ಕುರಿತು ಅಯ್ಯಾ, ಅಯ್ಯಾ, ಕರುಣಾಕರ ಕಪಿಲಸಿದ್ಧ ಮಲ್ಲೇಶ್ವರಾ ನನ್ನನ್ನು ನಿನ್ನಂತೆ ಮಾಡಿಕೊಂಡು ನನ್ನನ್ನು ಸಲಹಯ್ಯಾ ಎಂದು ಬೇಡಿಕೊಳ್ಳಲು ಸಾಧ್ಯವೆ?

ಕಾಯ ತನಗೆ ತಾನೇ ಮಾಡಿಕೊಳ್ಳುವ ಕ್ರಾಂತಿ. ತನಗೆ ತಾನೇ ಮಾಡಿಕೊಳ್ಳಲೇಬೇಕಾದ ಉತ್ಕ್ರಾಂತಿ!

422

**ಕರುಣಾಕರನೆ, ಎನ್ನ ದೆಸೆಗೆಟ್ಟ ಪಶುವನು**
**ಹಸಗೆಡಿಸೂದು ನಿನಗೆ ಉಚಿತವೇ ಹೇಳಾ!**
**ಸಕಲ ಸಾನಂದನೆ ಆನಂದ ರೂಪನೆ**
**ವಿಕಲವನು ಮಾಣಿಸಯ್ಯಾ ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕರುಣಾಕರನೆ, ದಿಕ್ಕು ದೆಸೆ ಕಾಣದ ಪಶುವನ್ನು ಹಿಡಿದು ಕಟ್ಟಿಹಾಕಿ ಮೈತುರಿಸಿ ನಿನ್ನಂತೆ ಮಾಡಿಕೊಂಡು, ನಿನ್ನ ಕೆಲಸಕ್ಕೆ ಬಳಸಿಕೊಂಡು, ನಿನ್ನ ವಾಹನವನ್ನಾಗಿಸಿಕೊಂಡು, ನೀನು ಹೋಗೆಂದಲ್ಲಿಗೆ ಹೋಗುವಂತೆ ಮಾಡುವುದು ನಿನ್ನ ಧರ್ಮ. ಆದರೆ ಅದನ್ನು ಹಾಗೇ ಬಿಡುವುದು ನಿನಗೆ ಉಚಿತವೆ? ಅದು ನಿನ್ನ ಪಶುವೆಂದು ನಿನಗೆ ಗೊತ್ತಿಲ್ಲವೆ?

''ಪಶುಪತಿ ನೀನು; ಪಶು ನಾನು''. ''ಪಶುವೇನು ಬಲ್ಲುದು ಹಸುರೆಂದು ತಿಳಿಯುವುದು. ವಿಷಯವೆಂಬ ಹಸುರನ್ನು ನನ್ನ ಮುಂದೆ ತಂದು'' ಪಸರಿಸುವುದು ನಿನಗೆ ನ್ಯಾಯವೆ? ಹಾಕಿದ ಬೇಲಿ ಹಾರಿ ತಿನ್ನಲು ಹೋದಾಗ ಹೊಲದ ಮಾಲೀಕ ಬಂದು ತುಡುಗು ದನವೆಂದು ತಿಳಿದು ನನ್ನನ್ನು ಹಿಡಿದು ಬಡಿಯದ ಮುನ್ನ ಒಡೆಯಾ ನಿಮ್ಮ ಬಯ್ಯದಂತೆ ಮಾಡು.

ಬೇಲಿ ಹಾರಿ ಹಸರು ತಿನ್ನಲು ಹೋದ ನನ್ನನ್ನು ಹೊಲದ ಮಾಲೀಕ ಹಿಡಿದು ಇದು ಯಾರಿಗೆ ಹುಟ್ಟಿದ ದನವೆಂದು ನಿಮ್ಮನ್ನು ನಿಂದಿಸುತ್ತಾನೆ. ನಾನು ಪಶು. ನಿನ್ನ ಕಂದ ನಾನು. ನನ್ನ ಹಡೆದ ತಂದೆಯಾದ ಪಶುಪತಿ ನೀನು. ಪಶುವೆಂದು ತಿಳಿದು ನನ್ನನ್ನು ಹಿಡಿದು ಬಡಿಯದ ಮುನ್ನ ನಿನ್ನನ್ನು ಬಯ್ಯುತ್ತಾನೆ. ಅವನಿಗೇನು ಗೊತ್ತು? ನಾನು ನಿನ್ನ ಕಂದ ಎಂದು!

ವಿಷಯವೆಂಬ ಹಸಿರು ತಿನ್ನಲು ಹೋಗಿ ಕೆಸರಲ್ಲಿ ಬಿದ್ದಿದ್ದೇನೆ. ಕೆಸರಲ್ಲಿ ಬಿದ್ದ ಪಶು ನಾನು. ದೆಸೆದೆಸೆಗೆ ಬಾಯಿ ಬಿಡುತ್ತಿದ್ದೇನೆ. ಅಯ್ಯಾ, ಕೆಸರಲ್ಲಿ ಬಿದ್ದ ನನ್ನನ್ನು ಯಾರೂ ಸಂರಕ್ಷಣೆ ಮಾಡುವವರಿಲ್ಲ.

ಕರುಣಾಕರನೆ, ದಾರಿ ಕಾಣದ ಈ ಪಶುವನು ಹಸಗೆಡಿಸೂದು ನಿನಗೆ ಉಚಿತವೆ ಹೇಳಾ! ನನ್ನನ್ನು ಹಡೆದ ತಂದೆಯಾದ ಪಶುಪತಿ ನೀನು. ಪಶು ನಾನು. ವಿಷಯವೆಂಬ ಹಸರನ್ನು ನನ್ನ ಮುಂದೆ ತಂದು ಪಸರಿಸುವುದು ನಿನಗೆ ನ್ಯಾಯವೆ? ಪಶುವೇನು ಬಲ್ಲುದು? ಹಸಿರೆಂದು ತಿನ್ನಲು ಹೋಗುವುದು. ಕೆಸರಲ್ಲಿ ಬಿದ್ದ ಪಶುವನ್ನು ಕೊಂಬ ಹಿಡಿದು ಎತ್ತಿ ವಿಷಯರಹಿತನ ಮಾಡು. ಭಕ್ತಿರಸವ ಮೇಯಿಸು. ಸುಬುದ್ಧಿಯೆಂಬ ಉದಕದಿಂದ ನನ್ನನ್ನು ತೊಳೆ ತೊಳೆದು ನೋಡಿ ಸಲಹು ತಂದೆ.

ನಿನ್ನ ಹೊರತಾಗಿ ನನಗೆ ಬೇರೆ ಗತಿಯುಂಟೆ ಶಿವನೆ? ಸಕಲ ಸಾನಂದನೆ ಆನಂದ ರೂಪನೆ ನನ್ನ ವಿಕಲವನ್ನು ಮಾಣಿಸಯ್ಯಾ. ನನ್ನನ್ನು ನಿನ್ನ ವಾಹನವನ್ನಾಗಿಸಿಕೊಂಡು ನೀನು ಹೋಗೆಂದಲ್ಲಿಗೆ ಹೋಗುವಂತೆ ಮಾಡಯ್ಯಾ. ಬಾ ಎಂದಲ್ಲಿಗೆ ಬರುವಂತೆ ಮಾಡಯ್ಯಾ. ಪಶು ನಾನು. ಪಶುಪತಿ ನೀನು!

ದಟ್ಟಡವಿಯೊಳಗೆ ದಾರಿ ಕಾಣದ ಪಶುವಿನಂತೆ ಅಂಬೆ ಅಂಬೆ ಎಂದು ಕರೆಯುತ್ತಲಿದ್ದೇನೆ, ಅಂಬೆ ಅಂಬೆ ಎಂದು ಒದರುತ್ತಲಿದ್ದೇನೆ. ಕೂಡಲಸಂಗಯ್ಯಾ; ಅಂಗದಲ್ಲಿಯೆ ಸಂಗಮವಾದ

ಅರಿವಿನ ಸಂಗಯ್ಯನೆ, ಅಂಗವನ್ನು ಆವರಿಸಿದ ಮನವೆಂಬ ನಿನ್ನ ಕಂದನನ್ನು ಬಾಳು ಬಾಳು ಎಂದು ಹರಸದಿರುವುದು ನಿನಗೆ ಉಚಿತವೇ ತಂದೆ.

ಕಪಿಲಸಿದ್ಧ ಮಲ್ಲಯ್ಯನು ನೀನು. ನಿನೇ ಸೃಷ್ಟಿ ಮಾಡಿದ ನಿನ್ನ ವಾಹನ ನಾನು. ನೀನು ಸೃಷ್ಟಿ ಮಾಡಿದ ಕಂದು ಬಣ್ಣದ ಈ ಕಪಿಲೆಯನ್ನು ನೀನೇ ಹರಸು ತಂದೆ ಕಪಿಲಸಿದ್ಧ ಮಲ್ಲಯ್ಯ.

**423**

**ಕರುಣಾಕರನೆ, ನಿನ್ನ ವಸವಾದಪ್ಪುದಯ್ಯಾ ,**
**ಸಕಲ ಬ್ರಹ್ಮಾಂಡವು-ನಾನು ಸಹಿತವಾಗಿ.**
**ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿನ್ನ ಕರುಣ ಕಾನನದೊಳಗೆ ಲೀಯವಾದೆ.**

ಕರುಣಾಕರನೆ, ನಿನ್ನ ವಶವಾಗಿದೆ ಸಕಲ ಬ್ರಹ್ಮಾಂಡವು. ಬ್ರಹ್ಮಾಂಡ ಒಂದೇ ಅಲ್ಲ ; ನಾನು ಸಹಿತ ನಿನ್ನ ವಶವಾಗಿದ್ದೇನೆ. ವಸುಧೀಶ ನೀನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನೀನು. ಅಪಾರವಾದ ನಿನ್ನ ಕರುಣೆಯ ಸುಧೆಯಲ್ಲಿ ನಾನು ಲೀಯವಾದೆ.

ಇದು ಅತ್ಯಂತ ಸರಳವಾಗಿ ಅರ್ಥವಾಗುವ ಮಾತು. ಓದಿದ ಎಲ್ಲರಿಗೂ ಅರ್ಥವಾಗುತ್ತದೆ. ಆದರೆ ಅನುಭವಕ್ಕೆ ಬರುವುದಿಲ್ಲ. ಓದಲು ಬರುವುದು ಬೇರೆ ; ಓದಿದರೆ ಅರ್ಥವಾಗುವುದು ಬೇರೆ. ಓದಿದರೆ ಅನುಭವಕ್ಕೆ ಬರುವುದು ಬೇರೆ.

ಪ್ರತಿಯೊಂದು ಮಾತನ್ನು ಅನುಭವಕ್ಕೆ ತಂದುಕೊಂಡು, ಅನುಭಾವದ ಮೂಸೆಯಲ್ಲಿ ಅದನ್ನು ಹಾಕಿ ಉಣ್ಣುವ ವಿಧಾನವು ಬೇರೆಯೇ ಆಗಿದೆ. ಇದು ಪ್ರತಿಯೊಂದು ಕಾಯದ ಸಹಜತೆ. ಆದರೆ ಕಾಯದ ಸಹಜತೆಯನ್ನು ಕಾಯ ಮರೆತು ಹೋಗಿದೆ. ಆದರೂ ಸಂಪೂರ್ಣವಾಗಿ ಮರೆತಿಲ್ಲ. ತನಗೆ ಬೇಕಾದುದನ್ನು ಜೀರ್ಣಿಸಿಕೊಳ್ಳುತ್ತದೆ.

ಕಾಯಕ್ಕೆ ಬೇಕಾದ ಆಹಾರವನ್ನು ಉಂಡು ಜೀರ್ಣಿಸಿಕೊಳ್ಳುತ್ತದೆ. ಅನ್ನ ಕಾಯದ ವಶವಾಗುತ್ತದೆ. ಅದು ಬ್ರಹ್ಮವಾಗುತ್ತದೆ. ಹೀಗಾಗಿ ಪೂರ್ವಜರು ಅನ್ನಂ ಬ್ರಹ್ಮ ಎಂದರು.

ಅನ್ನ ಬ್ರಹ್ಮವೇ ಎಂದು ಪ್ರಶ್ನಿಸಬಹುದು. ಹೌದು. ಹೇಗೆಂದರೆ ಉಂಡ ಅನ್ನ ರಕ್ತವಾಯಿತು, ಮಾಂಸವಾಯಿತು, ಮಜ್ಜಾ ಮೇದಸ್ಸು ಆಯಿತು. ಮೂಳೆಯಾಯಿತು. ನಖ ರೋಮವಾಗಿ ಸುಂದರವಾದ ಚರ್ಮಕ್ಕೆ ಕಾಂತಿ ನೀಡಿತು. ನೋಡಲು ದೃಶ್ಯವಾಯಿತು. ಕೇಳಲು ಕಿವಿಗೆ ಪುಷ್ಟಿ ನೀಡಿತು. ಮೂಸಿಸಲು ಮೂಗಿಗೆ ಪರಿಮಳವಾಯಿತು. ಉಂಡ ನಾಲಿಗೆಗೆ ಅರಿವಿನ ರುಚಿಯ ಬಲ ನೀಡಿತು. ಉಂಡ ಅನ್ನ ಅರಿವಾಯಿತು. ಗುರುವಾಯಿತು. ಮಹಾದೇವನಾಯಿತು. ಸದಾಶಿವನಾಯಿತು. ಸಾಕ್ಷಾತ್ ಬ್ರಹ್ಮವೇ ತಾನಾಯಿತು.

ಗುರುದೇವೊ ಮಹಾದೇವೊ ಗುರುದೇವೊ ಸದಾಶಿವಃ ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರುವೇ ನಮಃ. ಎಂತಹ ಅದ್ಭುತವಾದ ಸೂತ್ರ . ತನುವಿನಲ್ಲಿ ತನ್ಮಯವಾದ ಬ್ರಹ್ಮ ಸುಖವನ್ನು ಉಂಡು ಅನುಭವಿಸಿ ಅನಾಭಾವದಿಂದ ಬರೆದ ಮಾತು.

ಶ್ರೀ ಶಂಕರರು 'ಅಹಂ ಬ್ರಹ್ಮಾಸ್ಮಿ' ಎಂದು ಜಗತ್ತಿಗೆ ಕೇಳುವಂತೆ ಕೂಗಿದರು. ಅದು ಹೇಗೆ ಸಾಧ್ಯ ಎಂದು ಜನ ಮೂದಲಿಸಿ ಮಾತನಾಡಿದರು. ನಂತರ ಜನರ ಬಾಯಲ್ಲಿ ಈ ಮಾತು ಶಾಸ್ತ್ರವಾಯಿತು. ತನುವಿಗೆ ಸಂಪ್ರದಾಯವಾಯಿತು. ಅನುಭವಕ್ಕೆ ತಂದುಕೊಳ್ಳದೇ

ನುಡಿದರೆ ನುಡಿದ ಪ್ರತಿ ಮಾತು ನುಡಿದ ತನುವನ್ನೆ ಗಾಯ ಮಾಡುತ್ತದೆ. ಅನುಭವಿಸಿ ಕೇಳಲು ಸಾಧ್ಯವಾಗದಿದ್ದರೆ ಕೇಳಿದ ಪ್ರತಿ ಮಾತು ಕೇಳಿದ ತನುವನ್ನೇ ಗಾಯ ಮಾಡುತ್ತದೆ.

ಕೇಳಿದ, ನುಡಿದ ಮಾತು ಜೀರ್ಣವಾಗದಿದ್ದರೆ ಆ ಮಾತು ಕಾಯದಲ್ಲಿಯೇ ಉಳಿದು, ಕಾಯದ ವಶವಾಗದೆ ನುಡಿದ, ಕೇಳಿದ ಕಾಯಕ್ಕೆ ಗಾಯ ಮಾಡುತ್ತದೆ. ಉಂಡ ಅನ್ನ ಕಾಯದಲ್ಲಿ ಜೀರ್ಣವಾಗದಿದ್ದರೆ, ಅನ್ನ ಕಾಯದ ವಶವಾಗದಿದ್ದರೆ ಅಜೀರ್ಣವಾಗಿ ಕಾಯವನ್ನು ಹೇಗೆ ಗಾಯ ಮಾಡುತ್ತದೋ ಹಾಗೆಯೇ ಕೇಳಿದ ಮಾತು ನುಡಿದ ಮಾತು, ನೋಡಿದ ದೃಶ್ಯ , ಮೂಸಿಸಿದ ವಾಸನೆ, ಸ್ಪರ್ಶಿಸಿದ ಸ್ಪರ್ಶ, ರುಚಿಸಿದ ಪದಾರ್ಥ ಜೀರ್ಣವಾಗದೆ ನಾಲಿಗೆಯ ಮೇಲೆ ನಾಟ್ಯ ಮಾಡುತ್ತದೆ.

ಕಾಯ ಉಂಡ ಪದಾರ್ಥ ಕಾಯದ ವಶವಾಗದಿದ್ದರೆ ಉಂಡ ಕಾಯವನ್ನೇ ಹಂತ ಹಂತವಾಗಿ ಕೊಲ್ಲುತ್ತದೆ. ಏಕೆಂದರೆ ಕಾಯದಲ್ಲಿ ಕರುಣಾಕರನಾದ ಅರಿವೆಂಬ ಗುರುದೇವನು ವಾಸ ಮಾಡಿದ್ದಾನೆ.

ನಾನು ಉಣ್ಣುವ ಅನ್ನ ಅವನಿಗೆ ಅರ್ಪಣೆ ಮಾಡದೆ ನಾನು ನನಗಾಗಿ ಉಂಡರೆ ಉಂಡ ಅನ್ನವು ಅವನ ವಶವಾಗದೆ ಅದು ನನ್ನಲ್ಲಿಯೇ ಉಳಿದು ಅಜೀರ್ಣವಾಗುತ್ತದೆ. ಹೀಗಾಗಿ ಕಾಯ ವಿಲವಿಲನೆ ಒದ್ದಾಡುತ್ತದೆ. ಕಾಯದ ಮಂದಾಗ್ನಿ ಕಾಯದಲ್ಲಿಯೇ ಕೆನ್ನಾಲಿಗೆಯ ಜ್ವಾಲೆಯಾಗಿ ಕಾಯವನ್ನೇ ಸುಡುತ್ತದೆ. ಏಕೆಂದರೆ ನಾನು ನೋಡಿ ಮುಟ್ಟಿ ಮೂಸಿಸಿ ಕೇಳಿ ರುಚಿಸಿದ ಪದಾರ್ಥಗಳು ಕರುಣಾಮಯನಾದ ಗುರುದೇವನಿಗೆ ಅರ್ಪಣೆಯಾಗಲಿಲ್ಲ. ಆತನ ವಶವಾಗಲಿಲ್ಲ. ಹೀಗಾಗಿ ನನ್ನ ವಶದಲ್ಲಿಯೇ ಉಳಿದು ನನ್ನನ್ನೇ ಬಳಲಿಸುತ್ತವೆ.

ನಾನೊಂದೇ ಆತನ ವಶದಲ್ಲಿ ಇಲ್ಲ. ಸಕಲ ಬ್ರಹ್ಮಾಂಡವೂ ಆತನ ವಶದಲ್ಲಿದೆ. ಅದರಲ್ಲಿ ನಾನು ಕೂಡಾ ಒಬ್ಬನು. ನಾನು ಸಂಪೂರ್ಣವಾಗಿ ನನ್ನನ್ನು ನಾನು ಆತನ ವಶಕ್ಕೆ ಒಪ್ಪಿಸಿದರೆ ನನ್ನ ಕಾಯವನ್ನೇ ರಥವನ್ನಾಗಿಸಿಕೊಂಡು ಶ್ರೀ ಕೃಷ್ಣನಂತೆ ಸಾರಥಿಯಾಗಿ ಆತ ಓಡಿಸುತ್ತಾನೆ. ನಾನು ಆ ಕಾಯದಲ್ಲಿಯೇ ಆತನ ವಶದಲ್ಲಿ ಕುಳಿತು ಕಾಯದ ಯಾತ್ರೆಯನ್ನು ಮುಗಿಸುತ್ತೇನೆ.

ಕಿವಿ ಕಣ್ಣು ಮೂಗು ನಾಲಿಗೆ ಚರ್ಮ ಇದ್ದರೆ ಮಾತ್ರ ಕೇಳಲು ನೋಡಲು ಮೂಸಿಸಲು ರುಚಿಸಲು ಸ್ಪರ್ಶಿಸಲು ಬರುತ್ತದೆ ಎಂದಂತೆ ಅಲ್ಲ. ಏಕೆಂದರೆ ಅವೆಲ್ಲ ಅವನ ವಶದಲ್ಲಿವೆ. ನಾನು ಕೇಳಿದರೆ ಯುದ್ಧ, ನಾನು ನೋಡಿದರೂ ಯುದ್ಧ, ನಾನು ಮೂಸಿಸಿದರೂ ಯುದ್ಧ, ನಾನು ರುಚಿಸಿದರೂ ಯುದ್ಧ, ನಾನು ಸ್ಪರ್ಶಿಸಿದರೂ ಯುದ್ಧ, ಈ ಅಜ್ಞಾನದ ಯುದ್ಧ ನನ್ನಿಂದ ಗೆಲ್ಲಲು ಆಗುವುದಿಲ್ಲ.

ಶ್ರೀರಾಮ ಕೇಳಿ ವನವಾಸಕ್ಕೆ ಹೋದ. ಕೈಕೇಯಿ ಸುಖಕ್ಕಾಗಿ ನುಡಿದು ದುಃಖ ಅನುಭವಿಸಿದಳು. ಮಡಿವಾಳನ ಮಾತು ಶ್ರೀರಾಮನಿಗೆ ಜೀರ್ಣವಾಗಲಿಲ್ಲ. ನಿರಪರಾಧಿ ಸೀತಾಮಾತೆಯನ್ನು ಕಾಡಿಗೆ ಅಟ್ಟಿದ. ರಾವಣ ಸೀತೆಯನ್ನು ಮುಟ್ಟಿ ತನ್ನ ಹತ್ತು ತಲೆ ಕಳೆದುಕೊಂಡ. ಹೊಂಡದಲ್ಲಿ ಬಿದ್ದ ದುರ್ಯೋಧನನನ್ನು ನೋಡಿದ ದ್ರೌಪದಿ ಕುರುಕ್ಷೇತ್ರದ ಯುದ್ಧಕ್ಕೆ ನಾಂದಿ ಹಾಡಿದಳು. ಹದಿನೆಂಟು ಅಕ್ಷೋಹಿಣಿ ಸೈನ್ಯ ಸತ್ತು ಹೋಯಿತು. ಮನ್ಮಥ ಚೆಲ್ಲಿದ ವಾಸನೆ ಮನ್ಮಥನನ್ನೇ ಸುಟ್ಟು ಹಾಕಿತು. ಮೂಸಿಸಲು ಹೋದ ಪರೀಕ್ಷಿತ ರಾಜನನ್ನು ಮಿಡಿನಾಗ ಕಚ್ಚಿ ಸಾಯಿಸಿತು.

ನನ್ನದು ಎಂದು ಬೀಗುವ ಯಾವ ವಸ್ತುವೂ ನನ್ನವಲ್ಲ. ಅವು ಕರುಣಾಕರನ ವಶದಲ್ಲಿವೆ. ಸಕಲ ಬ್ರಹ್ಮಾಂಡವೂ ಆತನ ವಶದಲ್ಲಿದೆ. ಆತನ ಕರುಣೆಯ ಸುಧೆಯಲ್ಲಿ ನಾನು

ಲೀಯವಾಗಬೇಕು ಅಷ್ಟೆ.

**424**

**ಕರುಣಿ ಬಸವಾ, ಕಾಲಹರ ಬಸವಾ, ಕರ್ಮಹರ ಬಸವಾ,**
**ನಿರ್ಮಳ ಬಸವಾ, ಶಿವಜ್ಞಾನಿ ಬಸವಾ,**
**ನಿಮ್ಮ ಧರ್ಮವಯ್ಯಾ, ಈ ಭಕ್ತಿಯ ಪದವು**
**ಕರುಣಿ ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ.**

ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನಿಗೆ ಸಿದ್ಧರಾಮ ಶಿವಯೋಗಿಗಳು ಕರುಣಾಕರನೆ, ಕಾಲಹರನೆ, ಕರ್ಮಹರನೆ, ನಿರ್ಮಳ ದೇವನೆ ಎಂದು ಕರೆದಿದ್ದಾರೆ. ಏಕೆಂದರೆ ಈತ ದೇವರು.

ಬಸವಣ್ಣನನ್ನು ಕೂಡಾ ಹೀಗೆಯೇ ಭಕ್ತಿಯಿಂದ ಕರೆದಿದ್ದಾರೆ. ಏಕೆಂದರೆ ಬಸವಣ್ಣ ದೇವರನ್ನು ಪರಿಚಯಿಸಿದ ದೇವರು. ಕರುಣಿ ಬಸವಾ, ಕಾಲಹರ ಬಸವಾ, ಕರ್ಮಹರ ಬಸವಾ, ನಿರ್ಮಳ ಬಸವಾ, ಶಿವಜ್ಞಾನಿ ಬಸವಾ, ಈ ಭಕ್ತಿಯ ಪದವು ನಿಮ್ಮ ಧರ್ಮವಯ್ಯಾ.

ಕರುಣಿ ಕಪಿಲಸಿದ್ಧ ಮಲ್ಲಿನಾಥಯ್ಯಾ, ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ.

ಬಸವಣ್ಣನ ಅಂತಃಕರಣದ ಬಗ್ಗೆ, ಆತನ ಇರುವಿಕೆಯ ಬಗ್ಗೆ, ಆತ ಪಾಲಿಸುವ ಅಗೋಚರ ಧರ್ಮದ ಬಗ್ಗೆ, ಕಾಲವನ್ನು, ಕರ್ಮವನ್ನುಕುಟ್ಟಿ ಹುಡಿಹುಡಿ ಮಾಡಿದ ಶಿವಜ್ಞಾನಿ ಬಸವಣ್ಣನವರನ್ನು ಭಕ್ತಿಯಿಂದ ಆರಾಧಿಸಲು ಪದಗಳು ಸಾಲದೇ ಇದ್ದಾಗ; ಹೇ ದೇವರೇ, ನಿಮಗೂ ನನಗೂ ಬಸವಣ್ಣನ ಧರ್ಮವಯ್ಯಾ! ಎಂದು ದೇವರೊಂದಿಗೆ ಮಾತನಾಡಿದ್ದಾರೆ.

ನುಡಿಯುವಲ್ಲಿ, ನಡೆಯುವಲ್ಲಿ, ನೋಡುವಲ್ಲಿ ಒಂದು ಜವೆ ಕಮ್ಮಿಯಾದರೂ, ನೀನಿಕ್ಕಿದ ತಕ್ಕಡಿಯಲ್ಲಿ ತೂಗಿ ಅಳೆದು ನೋಡಿ ನನ್ನನ್ನು ಅದ್ದಿ ನೀನೆದ್ದು ಹೋಗು ಎಂದು ಬಸವಣ್ಣ ದೇವರೊಂದಿಗೆ ಮಾತನಾಡುವುದನ್ನು ಕಣ್ಣಾರೆ ಕಂಡು, ಕಿವಿಯಾರೆ ಕೇಳಿದ ಸಿದ್ಧರಾಮ ಶಿವಯೋಗಿಗಳು ''ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ'' ಎಂದು ಹೇಳಿ ಇಡೀ ಶರಣ ಸಮೂಹಕ್ಕೆ ಉತ್ತಮವಾದ ಸಂದೇಶವನ್ನೇ ಸಾರಿದ್ದಾರೆ.

''ನಾನು ಎಂದರೆ ಯಾರು'' ಎಂದು ಗೊತ್ತಾಗದ ನನಗೆ ಬಸವಣ್ಣನವರು ''ನನ್ನನ್ನು ನನಗೆ ಪರಿಚಯಿಸಿದ್ದಾರೆ''. ನನಗೆ ದೇವರನ್ನು ಪರಿಚಯಿಸಿದ್ದಾರೆ. ಆತ ಇಡೀ ಬ್ರಹ್ಮಾಂಡದ ಒಡೆಯ ಎಂದು ನನಗೆ ನನ್ನ ಅನುಭವಕ್ಕೆ ಬರುವಂತೆ ಹೇಳಿದ್ದಾರೆ. ದೇವರ ವಶದಲ್ಲಿ ಬ್ರಹ್ಮಾಂಡವಿದೆ. ನೀನು ಕೂಡಾ ಆತನ ವಶದಲ್ಲಿರುವಿ. ದೇವರ ಕಂದ ನೀನು. ದೇವರೆ ತಂದೆ ನಿನಗೆ. ಆತನ ಮಗ ನೀನು. ಆತನ ವಾರಸುದಾರ ನೀನು. ನಿನಗೆ ನಿನ್ನ ತಂದೆಯ ಪರಿಚಯವಾದರೆ ದೇವರ ವಶದಲ್ಲಿದ್ದ ಬ್ರಹ್ಮಾಂಡವನ್ನೇ ನಿನಗೆ ಧಾರೆಯೆರೆಯುತ್ತಾನೆ. ಏಕೆಂದರೆ ಆತನ ವಾರಸುದಾರ ನೀನು. ನಿನ್ನ ತಂದೆ ಆತ ಎಂದು ತನ್ನ ಅನುಭವಕ್ಕೆ ತಂದ ಬಸವಣ್ಣನನ್ನು ಸಿದ್ಧರಾಮ ಶಿವಯೋಗಿಗಳು ''ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ'' ಎಂದು ದೇವರಿಗೆ ಹೇಳಿದ್ದಾರೆ. ದೇವರೊಂದಿಗೆ ಮಾತನಾಡುತ್ತಾ ಹೇಳಿದ್ದಾರೆ.

''ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು, ನೀನಲ್ಲದೆ ಮತ್ತಾರೂ

ಇಲ್ಲವಯ್ಯಾ, ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ'' ಎಂದು ದೇವರೊಂದಿಗೆ ಮಾತನಾಡುವ ಕಲೆ ಕಾಯಕ್ಕೆ ಬಂದಾಗ, ಕಾಯ ಅನ್ಯ ಕಾಯಗಳೊಂದಿಗೆ ತನಗೆ ತೋಚಿದಂತೆ ಮಾತನಾಡುವುದನ್ನು ಬಿಡುತ್ತದೆ. ಅನ್ಯ ಕಾಯಗಳಲ್ಲಿ ಸಂಗಮವಾದ ಸಂಗಯ್ಯನೊಂದಿಗೆ ಮಾತನಾಡುತ್ತದೆ. ಕಾಯದ ಧರ್ಮ ಕಾಯ ಸಹಜವಾಗಿ ಪಾಲಿಸುತ್ತದೆ.

ಶಿವಜ್ಞಾನಿಯಾಗಿ ಅರಿವಿನ ಧರ್ಮವನ್ನು ಪಾಲಿಸುತ್ತ ಅರಿವಿಗೆ ಭಕ್ತಿ ಮಾಡಿ ಅರಿವೆಂಬ ದೇವರೊಂದಿಗೆ ಮಾತನಾಡುತ್ತಾ ಕಾಯದ ಕಾಲವನ್ನು ಪರಿಪೂರ್ಣಗೊಳಿಸುತ್ತದೆ. ಪರಮಾನಂದದಿಂದ ಕಳೆಯುತ್ತದೆ.

ಕಾಯಕ್ಕೆ ಮೆತ್ತಿಕೊಂಡ ಕರ್ಮವನ್ನು ಕಾಯವನ್ನು ಆವರಿಸಿದ ಮನದ ಮೂಲಕ ಕಿತ್ತೆಸೆದು ನಿರ್ಮಲ ಮನದಿಂದ ನಿರ್ಮಲ ಜ್ಞಾನಕ್ಕೆ ಭಕ್ತಿ ಮಾಡುತ್ತಾ ಮನ ಘನಮನವಾಗುತ್ತದೆ.

ಮನವೆಂಬ ಭಕ್ತ ಜ್ಞಾನವೆಂಬ ದೇವರು ಕಾಯದಲ್ಲಿಯೇ ಒಂದಾಗುತ್ತಾರೆ. ಇವರಿಬ್ಬರಿದ್ದ ಕಾಯವೇ ಕೈಲಾಸವಾಗುತ್ತದೆ. ಜ್ಞಾನವೆಂಬ ನಿನಗೂ ಭಕ್ತನೆಂಬ ನನಗೂ ಬಸವಣ್ಣನದೇ ಧರ್ಮವಯ್ಯಾ! ಸಿದ್ಧರಾಮ ಶಿವಯೋಗಿಗಳು ಆಡಿದ ಈ ಮಾತು ಜ್ಞಾನಕ್ಕೆ ಶರಣು ಹೋದ ಶರಣರಿಗೆ ಮಾತ್ರ ಅರ್ಥವಾಗುವ ಮಾತು. ಅನುಭವಕ್ಕೆ ತಂದುಕೊಂಡು ಓದಿ ಜೀರ್ಣಿಸಿಕೊಂಡರೆ ಸಕಲರಿಗೂ ಅರಿವಾಗುವ ಮಾತು.

**425**

**ಕರುಣೆ, ಮಹಾದಾನಿ,**
**ನಿನ್ನವರಿಗೆ ನೀನು ಕರುಣ ಕಂದೆರೆವ ಭೇದವ,**
**ಅವರ ಮನದ ಮಸ್ತಕದಲ್ಲಿ**
**ನಿನ್ನ ಮಹಾಜ್ಯೋತಿ ಬೆಳಗುವ ಭೇದವ,**
**ಅರಿಯಬಹುದೆ ಎಲ್ಲರಿಗೆ,**
**ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗವೆ,**
**ನಿನ್ನ ಕರುಣವುಳ್ಳವರಿಗಲ್ಲದೆ?.**

ಜ್ಞಾನ ಎನ್ನುವುದು ಒಂದು ವಸ್ತುವಲ್ಲ. ಅದು ಅಂಗದಲ್ಲಿಯೇ ಸಂಗಮವಾದ ಶಕ್ತಿ. ಪುರಾತನರು ಜ್ಞಾನವನ್ನು ''ಪುರುಷ'' 'ಮಹಾಪುರುಷ' ಎಂದು ಹೆಸರಿಸಿ ಕರೆದಿದ್ದಾರೆ. ಸಿದ್ಧರಾಮ ಶಿವಯೋಗಿ 'ಕರುಣಾಮಯಿ', 'ಮಹಾದಾನಿ', 'ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಹೆಸರಿಟ್ಟು ಕರೆದಿದ್ದಾರೆ.

ಪರಮ ಪುರುಷ ಪರಮಾತ್ಮನು ಜಗದ ಸಕಲ ದೇಹಗಳಲ್ಲಿಯೂ ಸಂಗಮವಾಗಿದ್ದಾನೆ. ಆತ ಪುರುಷ, ಸಕಲ ದೇಹಗಳಲ್ಲಿ ಆತ ಬೆಳಗುವ ಮಹಾಜ್ಯೋತಿಯ ಭೇದವನ್ನು ಆತನಿಗೆ ಸ್ತ್ರೀಯಾಗಿ ಸಖಿಯಾಗಿ ಪ್ರೇಯಸಿಯಾಗಿ ಸತಿಯಾಗಿಯೇ ಅರಿಯಬೇಕು.

ಅಂಗದಲ್ಲಿ ಸಂಗಮವಾದ ಅವ್ಯಕ್ತ ಮಹಾದಾನಿಯನ್ನು, ಕರುಣಾಮಯಿಯನ್ನು ಅನಂಗ ವಿದಾರಣನನ್ನು ಅಂಗವನ್ನು ಆವರಿಸಿದ ಮನವನ್ನು ಹೆಣ್ಣಾಗಿಸಿ ಅರಿಯಬೇಕು. ಆದರೆ ಅಂಗ ಅಂಗವೆಂದು ಕರೆಯಿಸಿಕೊಳ್ಳದೆ ಅದು ಹೆಣ್ಣಾಗಿದೆ. ಗಂಡಾಗಿದೆ. ಹೀಗೆ ಹೆಣ್ಣು ಗಂಡು ಆಗಿರುವುದರಿಂದಲೇ ಕರುಣಾಮಯಿ ಅನಂಗವಿದಾರಣನನ್ನು ಅರಿಯಲು ಎಲ್ಲರಿಗೂ ಸಾಧ್ಯವಾಗುತ್ತಿಲ್ಲ.

ಸಕಲ ಶರಣರು ತಮ್ಮನ್ನು 'ಸತಿ' ಎಂದು ಕರೆದುಕೊಂಡರು. ಅಂಗದಲ್ಲಿಯೇ ಸಂಗಮವಾದ ಅನಂಗದಾರಣನನ್ನು ಹುಡುಕಿದರು. ಆತನನ್ನೇ ಪತಿಯನ್ನಾಗಿ ಮಾಡಿಕೊಂಡರು. ಆತನಿಗೆ ಸತಿಯಾದರು. ಸತಿ ಪತಿಗಳಿಬ್ಬರೂ ಅಂಗದಲ್ಲಿಯೇ ಒಂದಾದರು. ಅಂಗವನ್ನೇ ತಾವು ವಾಸಮಾಡುವ ಮನೆಯನ್ನಾಗಿಸಿಕೊಂಡರು.

ಶ್ರೀಕೃಷ್ಣನಿಗೆ ಹದಿನಾರು ಸಾವಿರಕ್ಕೂ ಮಿಗಿಲಾಗಿ ಹೆಂಡತಿಯರಿದ್ದರು. ಅವರೆಲ್ಲ ಲೋಕದ ಗಂಡರಿಗೆ ಹೆಂಡತಿಯರಿದ್ದಂತೆ. ರಾಧೆ ಹೆಂಡತಿಯಲ್ಲ. ಆದರೂ ಶ್ರೀಕೃಷ್ಣನಿಗೆ ರಾಧೆಯೊಬ್ಬಳೆ ಹೆಂಡತಿ. ಏಕೆಂದರೆ ಆಕೆ ದ್ವಾರಕೆಯ ಕೃಷ್ಣನನ್ನು ಮದುವೆಯಾಗಿರಲಿಲ್ಲ. ರಾಧೆಯ ಅಂಗದಲ್ಲಿಯೇ ಸಂಗಮವಾದ ಶ್ರೀಕೃಷ್ಣನನ್ನೇ ಗಂಡನನ್ನಾಗಿಸಿಕೊಂಡು ಆ ಮಹಾಪುರುಷ ಕರುಣಾಮಯಿಗೆ ತಾನು ಹೆಂಡತಿಯಾಗಿದ್ದಳು. ಹೀಗಾಗಿ ಶ್ರೀಕೃಷ್ಣನನ್ನು ರಾಧೆ ಸದಾ ತನ್ನಂಗದಲ್ಲಿಯೇ ಆರಾಧಿಸುತ್ತಿದ್ದಳು. ಸದಾ ಆತನೊಂದಿಗೆ ರಮಿಸುತ್ತಿದ್ದಳು, ಸಖನಿಗೆ ಸಖಿಯಾಗಿ ಸುಖಿಸುತ್ತಿದ್ದಳು.

ಶ್ರೀಕೃಷ್ಣನ ಸುಖ ರಾಧೆಗೊಂದೆ ದಕ್ಕಿತು. ಜಗದಗಲಕ್ಕೂ ವ್ಯಾಪಿಸಿಕೊಂಡು ಬೆಳಗುವ ಮಹಾಜ್ಯೋತಿಯ ಬೆಳಗಿನ ಸುಖವನ್ನು ರಾಧೆಯೊಬ್ಬಳೆ ಅರಿತಳು.

ಹದಿನಾರು ಸಾವಿರದ ಎಂಟು ಜನರು ಕೂಡಾ ಶ್ರೀಕೃಷ್ಣನಿಗೆ ಹೆಂಡತಿಯರೇ ಆಗಿದ್ದರು. ಏನಿದ್ದರೂ ಅವರು ಅಂಗದಿಂದ ಹೆಣ್ಣಾಗಿದ್ದರು ಶ್ರೀಕೃಷ್ಣನನ್ನು ಗಂಡೆಂದು ತಿಳಿದು ಮದುವೆಯಾಗಿದ್ದರು. ಅಂಗ ಗಂಡೂ ಅಲ್ಲ; ಹೆಣ್ಣೂ ಅಲ್ಲ ಎಂದು ತಿಳಿದವರಾಗಿರಲಿಲ್ಲ. ಪ್ರತಿ ಅಂಗದಲ್ಲಿ ಅರಿವೆಂಬ ಮಹಾಪುರುಷ ಸಂಗಮವಾಗಿದ್ದಾನೆ. ಆತನೇ ಶ್ರೀಕೃಷ್ಣ. ಆತನೇ ಕಪಿಲಸಿದ್ಧ ಮಲ್ಲಿಕಾರ್ಜುನ. ಆತ ಕರುಣಾಮಯಿ. ಆತ ಮಹಾದಾನಿ. ಅಂಗವನ್ನು ಆವರಿಸಿದ ಮನವೆಂಬ ಹೆಣ್ಣಿನಿಂದಲೇ ಆ ಮಹಾಪುರುಷನನ್ನು ಒಲಿಸಿಕೊಳ್ಳಬೇಕು. ಆತನಿಗೆ ಸಖಿಯಾಗಬೇಕು, ಸತಿಯಾಗಬೇಕು.

ಅಂಗದ ಜೊತೆಗೆ ಅಂಗ ಕೂಡುವುದು ಅಜ್ಞಾನದ ಕೂಟ. ಅನಂಗದ ಜೊತೆಗೆ ಅನಂಗ ಕೂಡವುದು ಜ್ಞಾನದ ಕೂಟ. ಕೂಡದ ಅಗಲದ ಕೂಟ. ಈ ಕೂಟದ ಸುಖವನ್ನು ಬಸವಾದಿ ಶರಣರು ದಾಸವರೇಣ್ಯರು, ಕ್ರಿಸ್ತ, ಕ್ರಿಷ್ಣ, ಪೈಗಂಬರರು, ಮಹಾವೀರ, ಬುದ್ಧ ಮುಂತಾದ ಜ್ಞಾನಿಗಳು ಅನುಭವಿಸಿದರು.

ಸಿದ್ಧರಾಮ ಶಿವಯೋಗಿಗಳು ಇದು ಎಲ್ಲರಿಗೂ ಸಾಧ್ಯವಿಲ್ಲ ಎಂದಿದ್ದಾರೆ. ನಿನ್ನವರಿಗೆ ಮಾತ್ರ ಸಾಧ್ಯ. ನೀನು ಕರುಣದಿಂದ ಕಣ್ದೆರೆದವರಿಗೆ ಮಾತ್ರ ಸಾಧ್ಯ. ಸಕಲ ಕಾಯಗಳಲ್ಲಿ ಬೆಳಗುವ ನಿನ್ನ ಮಹಾಜ್ಯೋತಿಯ ಭೇದವನ್ನು ಅರಿಯಲು ಸಕಲರಿಗೂ ಸಾಧ್ಯವಿಲ್ಲ. ಆಸೆ ಮಾಡಿ ನಿನ್ನ ಅರಿಯಲು ಹೋದವರಿಗೆ ಮಾತ್ರ ಕರುಣೆಯಿಂದ ಕಣ್ದೆರೆದು ಮಹಾಜ್ಯೋತಿಯ ಬೆಳಗಿನಿಂದ ಬೆಳಗಿ ಅಪ್ಪಿಕೊಂಡು ನಿನ್ನ ಸಖಿಯನ್ನಾಗಿಸಿಕೊಳ್ಳುವಿ.

ಅಂಗ ಹೆಣ್ಣಾಗದೆ ಗಂಡಾಗದೆ ಅನಂಗದಾರಣನು ವಾಸ ಮಾಡಿದ ಮನೆಯಾಗಿ ಮಾರ್ಪಡುತ್ತದೆ. ಅರ್ಧ ನಾರಿ, ಅರ್ಧ ಈಶ್ವರ ವಾಸ ಮಾಡಿದ ಕಾಯ ಕೈಲಾಸವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೆ; ನಿನ್ನ ಕರುಣವುಳ್ಳವರಿಗಲ್ಲದೆ?

**426**

**ಕರುಣೆಯೆಂದು ಮರೆವೊಕ್ಕಡೆ ನಿಃಕರುಣೆಯಪ್ಪೆ.**

**ಎಲೆ ಅಯ್ಯಾ, ಅರಿಯದೆ ಕಿರಿದು ಮಾಡಿದಡೆ**
**ದಾನಿಯೆಂದು ಭವಕ್ಕೆ ಗುರಿಮಾಡುವರೆ?**
**ಎಲೆ ಅಯ್ಯಾ, ಮರಳಿ ಬಾರದಂತೆ ಮಾಡಯ್ಯಾ, ನಿಮ್ಮ ಧರ್ಮ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಲೋಕದಲ್ಲಿ ಹುಟ್ಟಿದ ಮಾನವ ಲೋಕದ ದೇವನನ್ನು ನೆನೆಯುತ್ತಾನೆ. ಅದು ಲೋಕ ಮಾಡಿದ ದೇವರೆಂದು ತನಗೆ ತಿಳಿಯುವುದಿಲ್ಲ. ಲೋಕದಲ್ಲಿ ತಾನು ಕೂಡಾ ಒಬ್ಬನು ಆಗಿರುವುದರಿಂದ; ಲೋಕವನ್ನು ಸೃಷ್ಟಿ ಮಾಡಿದ ದೇವರನ್ನು ಮರೆತ.

ಲೋಕ ಮಾಡಿದ ದೇವರನ್ನು ಎಷ್ಟು ಬಾರಿ ಪೂಜಿಸಿದರೇನು? ಆರಾಧಿಸಿದರೇನು? ಆ ದೇವರು ಮಾತನಾಡಲಾರ; ಪೂಜಿಸಿದ ತನಗೆ ಒಲಿಯಲಾರ. ಕಾಲ ಹೀಗೆ ವ್ಯರ್ಥವಾಗಿ ಕಳೆದು ಹೋಗುವುದು. ಪೂಜಿಸಿದ ಕಾಯವೆಂಬ ಗಡಿಗೆಯ ಅವಧಿ ಮುಗಿದು ಒಡೆದು ಹೋಗುವುದು. ಹೀಗೆ ಎಷ್ಟೋ ಗಡಿಗೆಗಳು ಒಡೆದು ಹೋದರೂ ಪೂಜಿಸಿದ ಕಾಯಕ್ಕೆ ದೇವರು ಕರುಣೆಯಿಂದ ಒಲಿಯಲಿಲ್ಲ. ಏಕೆಂದರೆ ದೇವರು ಇರುವುದು ದೇಹದಲ್ಲಿ. ದೇಹದೊಂದಿಗೆ ತಾನು ಮೊರೆ ಹೋಗುವುದು ಲೋಕ ಮಾಡಿದ ದೇವರಿಗೆ. ಹೀಗಾಗಿ ಆತ ನಿಃಕರುಣಿ.

ಲೋಕದಲ್ಲಿರುವ ತನುಗಳನ್ನೆಲ್ಲ ಸೃಷ್ಟಿ ಮಾಡಿದ ದೇವರು ತನುವಿನೊಳಗೆ ಸಂಗಮವಾಗಿದ್ದಾನೆ. ಆತನನ್ನು ತನು ಅರಿಯದೆ ತನುವಿನೊಳಗಿದ್ದ ದೇವರನ್ನೇ ಕಿರಿದು ಮಾಡಿ, ತಾನು ಮಾಡಿದ ಕಲ್ಲು ದೇವರನ್ನೇ ಹಿರಿದು ಮಾಡಿ ತನು ಆರಾಧಿಸುತ್ತಿರುವುದರಿಂದ ತನುವಿನಲ್ಲಿಯೇ ತನ್ಮಯವಾದ ದೇವರಿಗೆ ತನುವಿನ ಮೇಲೆ ಕರುಣೆಯಿಲ್ಲ. ತನುವನ್ನು ಆವರಿಸಿದ ಮನದ ಮೇಲೆಯೂ ಕರುಣೆಯಿಲ್ಲ.

ಸೃಷ್ಟಿ ಮಾಡಿದ ದೇವರನ್ನೇ ಕಿರಿದು ಮಾಡಿದುದರಿಂದ ತನುವಿನಲ್ಲಿ ತನ್ಮಯವಾದ ದೇವರು ತನುವನ್ನು ಜನನ ಮರಣಗಳಿಗೆ ಅದರ ಬಾಧೆಗೆ ಗುರಿ ಮಾಡಿದ್ದಾನೆ.

ದೇವರಿದ್ದ ತನುವನ್ನು ದೇವರ ತನುವೆಂದು ಗುರುತಿಸದೆ ಭಿಕ್ಷುಕನೆಂದು ಗುರುತಿಸಿ ತಾನು ದಾನಿಯೆಂದು ಬೀಗುತ್ತಾನೆ. ದೇವರೆಂದು ಅರಿಯದೆ ದೇವರನ್ನು ಕಿರಿದು ಮಾಡಿ, ದಾನಿಯೆಂದು ನೀಡಿದುದಕ್ಕೆ ಭವಕ್ಕೆ ಗುರಿಮಾಡುವರೆ? ನನ್ನದೆನ್ನುವುದು ಏನೂ ಇಲ್ಲವೆಂದು ನನಗೆ ಗೊತ್ತಿದ್ದರೂ ಗೊತ್ತಿಲ್ಲದಂತೆ ಮಾಡಿದ ತಪ್ಪು ನಿನ್ನದು.

ಸಕಲ ತನುಗಳಲ್ಲಿ ನೀನಿದ್ದೂ ನಿನ್ನನ್ನು ಅರಿಯದಂತೆ ಮಾಡಿದ್ದು ನೀನೇ ಆಗಿರುವಿ. ಕಲ್ಲ ಮೇಲೆ ನನ್ನನ್ನು ನಿಲ್ಲಿಸಿ ಕಲ್ಲಿಗೆ ಕೈ ಮುಗಿದು ಆರಾಧಿಸುವಂತೆ ಮಾಡಿದೆ. ನಿನ್ನನ್ನು ಕಿರಿದು ಮಾಡಿಕೊಂಡು ಕಲ್ಲನ್ನೇ ದೇವರೆಂದು ಆರಾಧಿಸುವಂತೆ ಮಾಡಿದೆ. ಕಲ್ಲನ್ನೇ ಹಿರಿದು ಮಾಡಿದೆ. ಕರುಣೆಯೆಂದು ಕಲ್ಲ ದೇವರಿಗೆ ಕೈಮುಗಿದರೆ ನಿಃಕರುಣೆಯಪ್ಪೆ.

ಎಲೆ ಅಯ್ಯಾ, ಜನನ ಮರಣಗಳ ಬಾಧೆಯಿಂದ ನನ್ನನ್ನು ಪಾರು ಮಾಡು. ಅಜ್ಞಾನದ ಜನ್ಮಕ್ಕೆ ಮತ್ತೆ ಬಾರದಂತೆ ಮಾಡು. ನಿಮ್ಮ ಅರಿವಿನ ಧರ್ಮದಲ್ಲಿರಿಸಿ ಕಾಯಯ್ಯಾ ಈ ಕಾಯವನ್ನು ಕಪಿಲಸಿದ್ಧ ಮಲ್ಲಿಕಾರ್ಜುನಾ.

**427**

**ಕಸವಕೊಂಡು ಹೊಸ ಧಾನ್ಯವ ಕೊಟ್ಟಡೆ, ಒಲ್ಲೆಂಬ ಚದುರರಾರು?**

**ಜಲವಕೊಂಡು ಅಮೃತವ ಕೊಟ್ಟಡೆ, ಒಲ್ಲೆಂಬ ಭಾಷೆಯದಾರದು?**
**ಎನ್ನಂತರಂಗದ ಜ್ಞಾನವಕೊಂಡು**
**ಸುಜ್ಞಾನವಪ್ಪ ನಿಮ್ಮ ಕರತೇಜವ ಕೊಟ್ಟಡೆ,**
**ಒಲ್ಲೆನೆಂಬ ಪಾತಕಿ ಯಾರು?**
**ಕಪಿಲಸಿದ್ಧ ಮಲ್ಲಿಕಾರ್ಜುನ ಮಡಿವಾಳ ತಂದೆ.**

ತನುಗಳು ತುಂಬಿದ ಈ ಲೋಕದಲ್ಲಿ; ಸಕಲ ತನುಗಳು ಕೂಡಿ ತಮ್ಮ ತಮ್ಮದೇ ಆದ ಒಂದು ಶ್ರೇಷ್ಠ ಕೆಲಸವನ್ನು ಮಾಡಿಕೊಳ್ಳಲೇಬೇಕಿದೆ. ತನುವಿನ ಅಂತರಂಗದಲ್ಲಿ, ತನುವಿನ ಬಹಿರಂಗದಲ್ಲಿ ಸಂಗ್ರಹವಾದ ಜ್ಞಾನವನ್ನು, ತನುವಿನಲ್ಲಿಯೇ ತನುವಿಗೆ ತನುವಾಗಿ ಬೆಳಗುವ ತನುವಿಗೆ ಕೊಟ್ಟು; ಆ ಜ್ಞಾನ ತನುವಿನ ಸುಜ್ಞಾನವನ್ನು ಪಡೆಯಬೇಕಿದೆ.

ಲೋಕದಲ್ಲಿರುವ ಪ್ರತಿ ತನುವನ್ನು; ತನುವಿನಲ್ಲಿಯೇ ಇದ್ದು, ತನು ಸೋಂಕದೆ ತನುವಿಗೆ ತನುವಾಗಿ ಬೆಳಗುವಾತ ಮತ್ತಾರೂ ಅಲ್ಲ. ಆತನೇ ಗುರುದೇವ. ಆತನೇ ಸದಾಶಿವ. ಆತನೇ ಮಹಾದೇವ. ಆತನೇ ಸಾಕ್ಷಾತ್ ಪರಬ್ರಹ್ಮ.

ಆತ ಕರುಣಾಮಯಿ. ತನು ಸಂಗ್ರಹ ಮಾಡಿಕೊಂಡ ಕಸವನ್ನು ಆತ ಪಡೆದು; ತಾನಿದ್ದ ತನುವಿಗೆ ಸವಿ ಸವಿಯಾದ ಬ್ರಹ್ಮರಸವನ್ನು ಉಣ್ಣಿಸುವಾತ. ಜಲವನ್ನು ಕೊಂಡು ತನುವಿಗೆ ಅಮೃತವನ್ನು ಉಣ್ಣಿಸುವಾತ. ತನುವು, ತಾನು ಸಂಗ್ರಹ ಮಾಡಿಕೊಂಡು, ತನ್ನಂತ ರಂಗದೊಳಗೆ ಇಟ್ಟುಕೊಂಡ ಬಹಿರಂಗ ಜ್ಞಾನವನ್ನು ಪಡೆದು, ತನ್ನ ತನುವಿನಲ್ಲಿಯೇ ಹರಿಯುವ ಮಹಾಜ್ಞಾನದ ಸುಧೆಯನ್ನೇ ಉಣ್ಣಿಸುವಾತ.

ಆತ ಕಸವಕೊಂಡು ಓಗರವ ಉಣ್ಣಿಸಲು ಬಟ್ಟಲ ಹಿಡಿದುಕೊಂಡು ತುದಿಗಾಲ ಮೇಲೆ ನಿಂತಿದ್ದರೂ ಉಣ್ಣಲು ಬಾರದಂತಹ ಪಾತಕಿ ತನುಗಳೇ ಅಧಿಕ. ಹಡೆದ ತಂದೆ ತಾಯಿ ಕೂಸಿಗೆ ಉಣ್ಣಿಸುವುದನ್ನು ಮರೆಯುತ್ತಾರೆ. ಆದರೆ ತನುವಿನಲ್ಲಿಯೇ ಇದ್ದು ತನುವಿಗೆ ಸೋಂಕದೆ ತನುವನ್ನು ಬೆಳಗುವ ತಂದೆಯನ್ನು ಕಾಣದ ಪಾತಕಿ ತನುವಿನ ದುರ್ದೈವವೇ ಹೀಗೆ. ಎಲ್ಲಿ ನೋಡಿದರೂ ದುರ್ದೈವೀ ತನುಗಳದೇ ಕಾರುಬಾರು.

ಕಸ ತಿನ್ನುವುದು ಒಂದು ಹೆಗ್ಗಳಿಕೆಯ ಮಾತೇ! ತನುವನ್ನು ನೋಡಿ ತನುವಿನಲ್ಲಿಯೇ ಹಾದರ ಮಾಡುವುದು ಒಂದು ಹೆಗ್ಗಳಿಕೆಯ ಮಾತೆ? ಲಂಚ ಭ್ರಷ್ಟಾಚಾರ ತುಡುಗು ಕಳುವು ಹಾದರ ಮಾಡಿ ಉಣ್ಣುವುದು ಕಸವೆಂದು ಅನ್ನಿಸುವುದಿಲ್ಲವೇ? ಪಡೆದ ಪದವಿಯೂ ಸುಳ್ಳು, ಓದಿದ ವಿದ್ಯೆಯೂ ಸುಳ್ಳು, ಮಾಡುವ ಕೆಲಸವೂ ಸುಳ್ಳು.

ತನು ಮಾಡಿದ ಸುಳ್ಳು ಕೆಲಸಗಳು, ಮಾಡಿದ ತನುವನ್ನೇ ಸುಡದೆ ಬಿಡವೆಂದು ತನುವಿಗೆ ಗೊತ್ತಿಲ್ಲವೆ? ಬೇಡವೆಂದರೂ ಲಂಚ ಪಡೆದದ್ದು ತನು. ತನುವಿನಿಂದಲೇ ತನು ಲಂಚ ಪಡೆಯುವುದೆಂದರೇನು? ಲಂಚ ಎನ್ನುವುದು ಕಸವೆಂದು ತನುವಿಗೆ ತಿಳಿಯುವುದಿಲ್ಲವೆ? ಅದು ಕಸ. ಅದನ್ನು ತಿನ್ನಬೇಡ. ಲಂಚಕ್ಕೆ ಕೈ ಚಾಚಬೇಡ ಎಂಬ ಪಿಸುಮಾತು ತನುವಿನಲ್ಲಿಯೇ ಸದ್ದು ಮಾಡುವುದು ತನುವಿಗೆ ತಿಳಿದಿಲ್ಲವೆ. ಇದು ಅಮೃತದ ಮಾತೆಂದು ತಿಳಿದು ಪಾಲಿಸಿದ ತನುವೇ ಧನ್ಯ. ತಿಳಿಯದಿದ್ದರೆ ಪಿಸು ಮಾತಿನಿಂದ ಸದ್ದು ಮಾಡಿದ ತನುವೇ ಗುದ್ದು ಕೊಡದೆ ಬಿಡದು.

ಹಾದರದಿಂದ ನೋಡುವುದು ಬೇಡ ಎಂದು ಅಮೃತ ಸಮಾನವಾದ ದೃಶ್ಯಹರಿಸಿ ಹಾದರದ ನೋಟಕ್ಕೆ ಪಾಠ ಮಾಡುವ ಅದೃಶ್ಯದ ದೃಶ್ಯದ ಪಾಠ ಅಜ್ಞಾನದ ನೋಟಕ್ಕೆ

ಹಿಡಿಸದಿದ್ದರೆ ಹೇಗೆ? ಇಂತಹ ತನುವನ್ನು ತನುವೆನ್ನಲು ಸಾಧ್ಯವೆ? ತೇಜದ ಬೆಳಗ ಕೊಟ್ಟು ಅಜ್ಞಾನವನ್ನು ಕಸಿದುಕೊಂಡಂತೆ ಅಲ್ಲವೆ?

ಅರಿವಿನ ಅಮೃತದ ಬಿಂದುವೇ ಜಲ ಬಿಂದುವಿನೊಂದಿಗೆ ಸಂಗಮವಾಗಿ ಗರ್ಭ ಹೊಕ್ಕು ಜಲ ಭರಿತವಾದ ತನುವಾಗಿದೆ. ತನುವಿನ ಕಣಕಣವೂ ಜಲದಿಂದಲೇ ಉತ್ಪನ್ನವಾದುದು. ಜಲಚರಗಳು ಜಲದಲ್ಲಿದ್ದು ಜಲದಿಂದಲೇ ಹುಟ್ಟಿ ಜಲವನ್ನೇ ಕುಡಿದು ಜಲವನ್ನು ಪ್ರತ್ಯೇಕಿಸಿ ಜಲವನ್ನು ಮೀರಿಸಿದಂತೆ. ಗರ್ಭದಲ್ಲಿದ್ದ ಜಲಕ್ಕೆ ಜಲಬಿಂದುವೇ ಪ್ರವೇಶ ಮಾಡಿ, ಜಲಚರದಂತೆ ಜಲದಲ್ಲಿಯೇ ಈಜಿ ಜಲದಂತೆ ಹೊರಗೆ ಬಂದಿದೆ.

ಜಲ ಜಲವಲ್ಲ. ಅಮೃತ ಸಮಾನವಾದ ಬಯಲು ತನ್ನ ಗರ್ಭದಲ್ಲಿ ಹರಿದಾಡುವ ಜಲಜನಕವನ್ನು ಆಮ್ಲಜನಕವನ್ನು ಒಂದು ಕೂಡಿಸಿ ತಾನು ಅದರಲ್ಲಿ ಕಾಣದಂತೆ ಸಂಗಮವಾಗಿ ಜಲ ಬಿಂದುವಿನೊಂದಿಗೆ ಗರ್ಭಕ್ಕೆ ಜಿಗಿದು ತನುವಾಗಿದೆ. ತನುವನ್ನು ಸದಾ ಅರಿವಿನಿಂದ ಬೆಳಗುವ ಅಮೃತದ ತನುವೊಂದು ತನುವಿನಲ್ಲಿಯೇ ಇದೆ.

ತಪ್ಪು ನೋಡಿದಾಗ, ತಪ್ಪ ನುಡಿದಾಗ, ತಪ್ಪ ನಡೆದಾಗ, ತಪ್ಪ ಮುಟ್ಟಿದಾಗ, ತಪ್ಪ ಮೂಸಿಸಿ, ರುಚಿಸಿದಾಗ ತಪ್ಪೆಂದು ಒಪ್ಪುವಂತೆ ಹೇಳಿ, ಮಾಡಿದ ತಪ್ಪನ್ನು ಪಟ್ಟಿ ಮಾಡಿಕೊಂಡು ಮತ್ತೆ ಮತ್ತೆ ನೆನಪಿಸಿ ಕಾಡುವ ಅಮೃತ ಸಮಾನವಾದ ಮಾತು, ತನುಕುಲಕ್ಕೆ ತನಗೆ ತಾನೇ; ಪ್ರತಿ ತನುವಿನಲ್ಲಿಯೂ ರಚನೆಯಾದ ವರವಲ್ಲವೆ? ಈ ವರ ಜಲಕೊಟ್ಟು ಅಮೃತ ಕೊಂಡಂತಲ್ಲವೆ? ಆದರೂ ಒಲ್ಲೆನೆಂಬ ಪಾತಕತನ ತನುವನ್ನು ಆವರಿಸಿದೆ.

ಕಾಯದಲ್ಲಿಯೇ ಅಕಾಯನಾದ ಮಡಿವಾಳ ತಂದೆ ಕಾಯದ ಅಜ್ಞಾನವನ್ನು ಒಗೆ ಒಗೆದು ಮಡಿ ಮಾಡುವ ಕಾಯಕದಲ್ಲಿ ತೊಡಗಿದ್ದಾನೆ. ಕಾಯ ಇರುವವರೆಗೂ ಕಾಯದಲ್ಲಿಯೇ ಅಕಾಯನಾಗಿ ಇದ್ದು ಕಾಯವನ್ನು ಒಗೆಯುತ್ತಾನೆ. ಮಡಿಯಾದ ಕಾಯ ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ಸಲ್ಲುತ್ತದೆ.

**428**

**ಕಳವಳದ ಕಂದೆರವಿಗೊಳಗು ಮಾಡಿದಿರಿ**
**ಹಾ! ಹಾ! ಎಲೆ ಅಯ್ಯಾ**
**ಎನ್ನ ವಿಕಾರದಲ್ಲಿ ಗುರಿ ಮಾಡಿದಿರಯ್ಯಾ**
**ಕೋಪದ ಕಾಡುಗಿಚ್ಚಿಗೆ ಅಡವಿಯ ಗುರಿ ಮಾಡಿದಿರಿ**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮಲಗಿ ನಿದ್ರಿಸುವ ತನು ಅರಿವಿನ ಸಂಬಂಧಿ. ಅದು ನಿನ್ನ ತನು. ನಿನ್ನ ವಶಕ್ಕೆ ತನುವನ್ನು ತೆಗೆದುಕೊಂಡು ಹಾಯಾಗಿ ನಿದ್ರಿಸುವಂತೆ ಮಾಡಿದೆ. ತನು ಮಲಗಿದಾಗ ಹೆಣ್ಣು ಎನ್ನುವ ಪರಿಚಯ ಅದಕ್ಕೆ ಇರಲಿಲ್ಲ. ಗಂಡು ಎನ್ನುವ ಪರಿಚಯವೂ ಅದಕ್ಕಿರಲಿಲ್ಲ. ಜಾತಿ ಮತ ಪಂಥಗಳ ಸಂಬಂಧಿಯಾಗಿರಲಿಲ್ಲ. ಶಾಸಕ ಸಚಿವ ಮಂತ್ರಿ ಪ್ರಧಾನಿ ಅಧ್ಯಕ್ಷನಾಗಿರಲಿಲ್ಲ. ನಿದ್ರೆಯಿಂದ ಎಚ್ಚೆತ್ತ ಕೂಡಲೆ ಅಜ್ಞಾನದ ಕಳವಳಕ್ಕೆ ಒಳಗಾಯಿತು. ರಾತ್ರಿ ಮಲಗಿ ಹಾಯಾಗಿ ನಿದ್ರಿಸಿದ ಅರಿವಿನ ಸಮಾಧಾನದ ನೆನಪು ಸಂಪೂರ್ಣ ಕೊಚ್ಚಿ ಹೋಯಿತು.

ಕಣ್ಣುಮುಚ್ಚಿ ನಿದ್ರಿಸಿದರೆ ಕಾಯ ಅರಿವೆಂಬ ಗುರುದೇವನ ವಶವಾಯಿತು. ಕಣ್ತೆರೆದರೆ

ಕಾಯ ಕಳವಳದ ಅಜ್ಞಾನಕ್ಕೆ ವಶವಾಯಿತು. ಹಾ! ಹಾ! ಎಲೆ ಅಯ್ಯಾ, ಅಂಗದಲ್ಲಿಯೇ ಸಂಗಮವಾದ ಗುರುದೇವನೆ ಎನ್ನನ್ನೇಕೆ ವಿಕಾರದ ಕೂಪಕ್ಕೆ ಗುರಿ ಮಾಡುವಿ? ಇದು ನಿನಗೆ ಸಲ್ಲುವುದೆ?

ಮಲಗಿದಾಗ ನಿನ್ನ ವಶದಲ್ಲಿರಿಸುವಿ. ಎಚ್ಚರದಲ್ಲಿರುವಾಗ, ಜಾಗ್ರದಲ್ಲಿರುವಾಗ ನನ್ನನ್ನು ಕಳವಳಕ್ಕೆ ಗುರಿ ಮಾಡುವಿ. ಜಾಗ್ರದಲ್ಲಿರುವ ನಾನು ಜಾಗ್ರನಾಗಬೇಕಿತ್ತು. ಆದರೆ ಹಗಲು ಕೂಡಾ ಕಣ್ಣು ಕಾಣದ ಗೂಗೆಯಂತೆ ಮಾಡಿದೆ.

ಹಳದಿ ಲೋಹ ನೋಡಿ ಚಿನ್ನವೆಂದು ಯುದ್ಧ ಮಾಡುವಂತೆ ಮಾಡಿದೆ. ಭೂಮಿ ನೋಡಿ ಅದರ ಮಾಲಕ ನಾನೆಂದು ಕಾದುವಂತೆ ಮಾಡಿದೆ. ಕಾಯವನ್ನು ಕಾಯ ನೋಡಿ ಕಾಮುಕ್ಕೆಳೆಸುವಂತೆ ಮಾಡಿದೆ. ಕಾಯದಲ್ಲಿ ಅರಿಷಡ್ವರ್ಗಗಳನ್ನು ಸಪ್ತ ವ್ಯಸನಗಳನ್ನು ಅಷ್ಟಮದಗಳನ್ನು ಸೃಷ್ಟಿ ಮಾಡಿ ಕಾಯವನ್ನು ಕಾಯದೊಂದಿಗೆ ಕಾದುವಂತೆ ಮಾಡಿದೆ.

ಕಾಯನ್ನು ವಿಕಾರಕ್ಕೆ ಗುರಿ ಮಾಡಿ ಕೋಪದ ಕಿಚ್ಚಿಗೆ ಇಡೀ ಕಾಯವೆಂಬ ಕಾಡೇ ಭಸ್ಮವಾಗುವಂತೆ ಮಾಡುವುದು ನಿನಗಿಷ್ಟವೆ ತಂದೆ?

ರಾತ್ರಿಯಲ್ಲಿ ಕಾಯ ಆನಂದದಿಂದ ಮಲಗಿ ನಿದ್ರಿಸಿದಂತೆ ಕಣ್ದೆರೆದಾಗ ಮಲಗಿ ನಿದ್ರಿಸಿದ ಆನಂದವನ್ನು ಕಾಯಕ್ಕೆ ಧಾರೆ ಎರೆಯಬಾರದೆ ತಂದೆ. ಹಗಲು ಇರುಳು ಎನ್ನದೆ ಕಾಯ ಅರಿವಿನ ವಶದಲ್ಲಿದ್ದರೂ ಕಾಯವನ್ನು ಆವರಿಸಿದ ಮನವೆಂಬ ಮಾಯೆಗೆ ಹೆಚ್ಚು ಬಲ ನೀಡಿದೆ.

ಕಾಯ ಮಾಯೆಯೆಂಬ ಅಜ್ಞಾನದಿಂದ ತಪ್ಪಿಸಿಕೊಂಡು ಅರಿವಿನತ್ತ ಹೆಜ್ಜೆ ಇಡಲಿ ಎಂಬ ಆಶಯ ನಿನ್ನದೆ? ಕೃಪೆ ಮಾಡು. ಕಳವಳದಿಂದ ಕಣ್ದೆರೆಯುವಂತೆ ಮಾಡು. ಕಾಯವನ್ನು ಆವರಿಸಿದ ಮನವೆಂಬ ಮಾಯೆಯ ವಿರುದ್ಧ ಹೋರಾಡುವಂತೆ ಮಾಡು. ಕಪಿಲಸಿದ್ಧ ಮಲ್ಲಿಕಾರ್ಜುನನೇ ಕಾಯವನ್ನು ವಿಕಾರಕ್ಕೆ ಗುರಿ ಮಾಡಬೇಡ. ಕೋಪದ ಕಾಡ್ಗಿಚ್ಚಿಗೆ ಕಾಯವನ್ನು ಗುರಿ ಮಾಡಬೇಡ.

**429**

**ಕಳೆಯೊಳಗಣ ಭೇದ, ಕಳೆ ನಾದದ ಭೇದ**
**ಕಳಾವಿದರಿಗಲ್ಲದೆ ವೇದ್ಯವಲ್ಲ.**
**ಮಧುಕರನುಂಡಿಪ್ಪ ಸದುಮದದ ಪರಿಮಳವ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣ ಬಲ್ಲ.**

ಕಲೆಯೊಳಗಿನ ಮಾಧುರ್ಯ ಅದರ ಭೇದವು ಕಲಾವಿದನಿಗೆ ಮಾತ್ರ ಗೊತ್ತು . ತಂತ್ರಗಾರಿಕೆಯಿಂದ ರೂಢಿಸಿಕೊಂಡ ಕಲಾವಿದ ಅದರ ಏರಿಳಿತಗಳನ್ನು ಗಮನಿಸಬಲ್ಲ. ಹಾಗೆಯೇ

ಹೂವಿನ ಮಕರಂದವನ್ನು ಅದು ಬೀಸುವ ಪರಿಮಳದಿಂದ ಕಂಡುಕೊಂಡ ಭ್ರಮರ ಹೂ ಇರುವ ಜಾಗಕ್ಕೆ ಹೋಗಿ ಹೂವಿನ ಮಕರಂದವನ್ನು ಉಣ್ಣುತ್ತದೆ. ದುಂಬಿಗೆ ಹೂ ಇರುವ ಜಾಗ ಗೊತ್ತಿಲ್ಲ. ಹೂ ಗಾಳಿಯ ಮೂಲಕ ತನ್ನ ಪರಿಮಳವನ್ನು ದುಂಬಿ ಇರುವ ಜಾಗದಲ್ಲಿ ಚೆಲ್ಲಿ ದುಂಬಿಯನ್ನು ಹೂ ತಾನಿರುವ ಜಾಗಕ್ಕೆ ಕರೆದು ತಂದು ಮಕರಂದವನ್ನು ಉಣ್ಣಿಸುತ್ತದೆ.

ಮಕರಂದ, ಹೂ, ಪರಿಮಳ, ದುಂಬಿಯ, ಕಾಯಕವೇ ವಿಚಿತ್ರ. ಇದನ್ನು ಹಾಗೆಯೇ ನೋಡುವವರಿಗೆ ಕಾಣುವುದಿಲ್ಲ. ದುಂಬಿ ಮತ್ತು ಹೂವಿನ ಸಮಾಗಮದ ನೋಟವನ್ನು ನೋಡುತ್ತಾ ನೋಡುತ್ತಾ ಸದಮದದ ಅರಿವಿನ ಪರಿಮಳವನ್ನು ಆಸ್ವಾದಿಸುವ ಶರಣನಿಗೆ ಮಾತ್ರ

ಅನುಭವಕ್ಕೆ ಬರುತ್ತದೆ. ಹಾಗೆಯೇ

ಕಾಯ ಅಕಾಯ ಕಾಯವನ್ನು ಆವರಿಸಿದ ಮಾಯವೆಂಬ ಅಕಾಯಗಳ ಸಂಗಮದ ಸಮಾಗಮದ ಕೂಟ ಅದು ಕೂಡದ ಅಗಲದ ಕೂಟ. ಸದುಮದದ ಅರಿವಿನ ಕೂಟ. ಇದರಿಂದ ಹೊರಹೊಮ್ಮುವ ಅರಿವಿನ ಪರಿಮಳವನ್ನು ಪರಮಾನಂದದಿಂದ ಆಸ್ವಾದಿಸಬಲ್ಲ ಶರಣ ಮಾತ್ರ ಬಲ್ಲ.

ಕಾಯ ಕಮಲವಾದರೆ, ಕಾಯದಲ್ಲಿಯೇ ಸಂಗಮವಾದ ಕಾಯವದು ಮಕರಂದ. ಅಮೃತ. ಇಂತಹ ಅರಿವಿನ ಅಮೃತವನ್ನು ಕಾಯವನ್ನು ಆವರಿಸಿದ ಅಕಾಯವೆಂಬ ದುಂಬಿಯಾಗಿ ಈಂಟಿದಾಗ ಸದುಮದದ ಪರಮಾನಂದವನ್ನು ಹೊಂದುತ್ತದೆ.

ಕಾಯದೊಳಗೆ ಸಂಗಮವಾದ ಕಾಯ, ಕಾಯವನ್ನು ಆವರಿಸಿದ ಕಾಯಗಳೆರಡು ಕಾಯದಲ್ಲಿಯೇ ಸಂಗಮವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ. ಕಾಯದಲ್ಲಿಯೇ ಇರುವ ಕಾಯ-ಕಾಯ ಒಂದಾಗಿ ಅರ್ಧನಾರೀಶ್ವರನೇ ತಾನಾಗುತ್ತದೆ.

ಅಕಾಯ, ಕಾಯವನ್ನು ಆವರಿಸಿದ ಅಕಾಯಗಳೆರಡೂ ಕಾಯದಲ್ಲಿಯೇ ಕೂಡುವ ಕೂಟದ ಕಲೆಯನ್ನು ಬಲ್ಲವನೇ ಶರಣ. ಇತರ ಕಾಯಗಳಿಗೆ ಇದು ವೇದ್ಯವಲ್ಲ. ಕಾಯದ ಭೇದವನು ಅರಿವಿನಿಂದ ಭೇದಿಸಿ, ಕಾಯದಲ್ಲಿಯೇ ಅಕಾಯವನ್ನು ಹೊಂದಿದ ಭಗವಂತನನ್ನು ಕಾಯವನ್ನು ಆವರಿಸಿದ ಮನವೆಂಬ ಅಕಾಯದ ಮೂಲಕ ಭಕ್ತಿ ಮಾಡಿ ಆ ಭಗವಂತನಿಗೆ ಸಂಪೂರ್ಣ ಶರಣು ಹೋಗುವ ಕಲೆಯನ್ನು ದಾಸ ಮಾತ್ರ ಬಲ್ಲ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣ ಮಾತ್ರ ಈ ಕಲೆಯನ್ನು ಬಲ್ಲ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಈ ಕಲೆಯನ್ನು ಬೆಡಗಿನ ಮೂಲಕ ಲೋಕಕ್ಕೆ ಸಾರಿದ್ದಾರೆ. ಇದನ್ನು ಪಾನ ಮಾಡಿದವನೇ ಜಾಣ.

**430**

**ಕಾಡದೆ ಎನ್ನ ಮನದಿಚ್ಛೆಯ ಮಾಡಯ್ಯಾ , ನಿಮ್ಮ ಧರ್ಮ !**
**ಕಾಡುವುದುಚಿತವೇ ಅಯ್ಯಾ , ನಿಮ್ಮ ಕರುಣದ ಕಂದ ನಾನು !**
**ನಿಮ್ಮ ಕರುಣದ ಕಂದ ನಾನಯ್ಯಾ !**
**ಎಂದುತನಕ ಕಾಡುವಿರಿ ಅಂದುತನಕ ನೋಡುವೆನು.**
**ಹಿಂದುಮುಂದುಗೆಟ್ಟವನೆಂದು ಏಡಿಸಿದಡೆ**
**ತಂದೆ ! ನಾ ನಿಮ್ಮನೇಕೆ ಬಿಡುವೆ.**
**ಕರುಣಿಸು ಎನ್ನ ಪರಮಗುರುವೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಉಂಡ ಅನ್ನ ದೇಹಕ್ಕೆ ಬಲ ನೀಡಿ ಅರಿವಾಗಿ ದೇಹವನ್ನು ಬೆಳಗುತ್ತದೆ. ಇದು ದೇಹದ ಮೂಲಗುಣ. ಹೀಗಾಗಿ ಜ್ಞಾನಿಗಳು 'ಅನ್ನಂಬ್ರಹ್ಮ' ಎಂದರು.

ದೇಹವನ್ನು ಆವರಿಸಿದ ಮನಕ್ಕೆ ಭ್ರಮೆ ಆವರಿಸಿರುವುದರಿಂದ ಅದು ದೇಹವನ್ನು ಹಿಡಿದು ಹೊರಗಿನ ಸುಖಕ್ಕಾಗಿ ಹಾತೊರೆಯುತ್ತದೆ. ಮನ ದೇಹದಿಂದ ಸುಖಿಸಿದ ಸುಖವೇ ದೇಹಕ್ಕೆ ದುಃಖವಾಗಿ ಮಾರ್ಪಡುತ್ತದೆ. ಹೀಗಾಗಿ ಬುದ್ಧ ಆಸೆಯೇ ದುಃಖಕ್ಕೆ ಕಾರಣ ಎಂದು ಕಂಡುಕೊಂಡ. ಈ ಒಂದು ಸಾಲಿನ ಅರಿವಿನ ಸೂತ್ರವನ್ನು ಇಡೀ ಜಗತ್ತಿಗೆ ನೀಡಿದ. ಆದರೆ ಮನ ದೇಹವನ್ನು

ಹಿಡಿದು ಬುದ್ಧನ ಒಂದು ಸಾಲಿನ ಸೂತ್ರವನ್ನು ಪಠಿಸಿ ಪುನಃ ದೇಹಗಳಿಗೆ ಕೇಳುವಂತೆ ಬೊಗಳಿತು. ಸೂತ್ರ ಹಿಡಿದು ದೇಹದಲ್ಲಿ ಪ್ರವೇಶ ಮಾಡಿ ಅರಿವಿನ ಸುಖ ಉಣ್ಣಲು ಅಣಿಯಾಗಲಿಲ್ಲ.

ಮನ ಎನ್ನುವುದು ಇಲ್ಲ. ಇದು ಅರಿವಿನಿಂದ ಹುಟ್ಟಿದ ಕತ್ತಲು. ಅರಿವೆಂದರೆ ಬ್ರಹ್ಮ. ಮನವೆಂದರೆ ಭ್ರಮೆ. ಆದರೂ ಜಗದ ತನುಗಳೆಲ್ಲಕ್ಕೂ ಮನವೇ ಅಧಿಪತಿಯಾಗಿದೆ. ಅರಿವಿನ ಮಾತು ಮನಕ್ಕೆ ಕೇಳದಂತೆ ಆಗಿದೆ.

ಅರಿವೇ ಗುರು. ಈ ಗುರುದೇವ ದೇಹದಲ್ಲಿ ಇದ್ದಾನೆ. ದೇಹವನ್ನು ಆವರಿಸಿ ದೇಹದೊಂದಿಗೆ ಅಜ್ಞಾನದಿಂದ ಸುಖಿಸಿ, ದುಃಖಕ್ಕೆ ಈಡು ಮಾಡುವ ಮನಕ್ಕೆ ಹಗಲು ಇರುಳು ಎನ್ನದೆ ಪಾಠ ಮಾಡುತ್ತಾನೆ. ಆದರೂ ಮನ ಅರಿವೆಂಬ ಗುರುದೇವನ ಮಾತು ಕೇಳುತ್ತಿಲ್ಲ. ತನ್ನ ಚೇಷ್ಟೆಯನ್ನು ಬಿಡುತ್ತಿಲ್ಲ.

ಮನದ ಚೇಷ್ಟೆ ನಾಶವಾಗಬೇಕಾದರೆ ಅರಿವೆಂಬ ಗುರುದೇವನಿಗೆ ಮೊರೆ ಹೋಗಬೇಕು. ಏಕೆಂದರೆ ಆ ಅರಿವಿನ ಬೆಳಕಿನಿಂದ ಹುಟ್ಟಿದ ಕತ್ತಲೇ ಮನ. ಬೆಳಕಿನಿಂದ ಹುಟ್ಟಿದ ಕತ್ತಲು ಬೆಳಕಿನಲ್ಲಿಯೇ ಸಂಗಮವಾಗಿ ಬೆಳಕಾಗಿ ಬೆಳಗುತ್ತದೆ.

ಈ ತಂತ್ರಗಾರಿಕೆ ಮನಕ್ಕೆ ಗೊತ್ತಾದರೆ ಸಾಕು, ಮನ ಗುರುದೇವನನ್ನು ಬೇಡುತ್ತದೆ : ಗುರುದೇವನೆ ಎನಗೆ ನಿನ್ನನ್ನು ಕೂಡುವ ಆಸೆಯಾಗಿದೆ. ಕಾಡದೆ ಎನ್ನ ಮನದ ಇಚ್ಛೆಯನ್ನು ಈಡೇರಿಸು ತಂದೆ. ಇದು ನಿಮ್ಮ ಧರ್ಮ!

ಕಾಡುವುದು ಉಚಿತವೇ ಅಯ್ಯಾ! ಹೆಣ್ಣು ನಾನಲ್ಲ ; ಗಂಡು ಕೂಡಾ ನಾನಲ್ಲ. ಹೆಣ್ಣು ಗಂಡೆಂದು ತಿಳಿದು ಕಾಮಕ್ಕೆ ಬಲಿಯಾದೆ. ಕಾಯ ಇರುವವರೆಗೂ ಕಾಯಕ್ಕೆ ಕಾಯ ಎನ್ನುವ ಅರಿವಾಗಲೇ ಇಲ್ಲ. ಕಾಯುವನ್ನು ಕಾಯವೆಂದು ನೋಡುವ ಜ್ಞಾನ ಕಾಯದಲ್ಲಿ ಮೂಡಲೇ ಇಲ್ಲ. ಕಾಡುವುದು ಉಚಿತವೇ ಅಯ್ಯಾ, ನಿಮ್ಮ ಕರುಣದ ಕಂದ ನಾನು!

ಹಿಂದು, ಮುಸಲ್ಮಾನ, ಫಾರ್ಸಿ, ಕ್ರೈಸ್ತ, ಸಿಖ್, ಬೌದ್ಧ, ಜೈನ ಎನ್ನುವ ಧರ್ಮವನ್ನು ಕಾಯದ ಮೂಲಕ ರಚಿಸಿಕೊಂಡು ಕಾಯವನ್ನೇ ಪ್ರತ್ಯೇಕಿಸಿಕೊಂಡೆ. ಅದು ಅರಿವೆಂಬ ಗುರುದೇವನು ವಾಸ ಮಾಡಿದ ಅರಿವಿನ ಕಾಯವೆಂದು ಕಾಯ ತಿಳಿಯಲೇ ಇಲ್ಲ. ಗುರುದೇವನೇ ನೀನಿದ್ದ ಕಾಯವನ್ನು ನೀನೇ ಕಾಡುವುದು ಉಚಿತವೇ ?

ಎಂದು ತನಕ ಕಾಡುವಿರಿ ಅಂದುತನಕ ನೋಡುವೆನು. ನೋಡುವುದನ್ನು ಬಿಟ್ಟು ಮತ್ತೇನು ಮಾಡಬಲ್ಲೆನು ತಂದೆ ! ಹಿಂದು ಮುಂದುಗೆಟ್ಟವನೆಂದು ಏಡಿಸಿ ಕಾಡಬೇಡ ತಂದೆ. ತಂದೆ ನೀನು ! ನಿನ್ನ ಕಂದ ನಾನು ! ನಿಮ್ಮನೇಕೆ ನಾ ಬಿಡುವೆ. ನಿಮ್ಮ ವಾರಸುದಾರ ನಾನು.

ಕರುಣಿಸು ಎನ್ನ ಪರಮ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಮನವೆಂಬ ಕಂದನಿಗೆ ಅರಿವೆಂಬ ಗುರುದೇವನನ್ನು ಬೇಡಲು ಬರಬೇಕು. ಕಾಯದಲ್ಲಿಯೇ ಈ ಅರಿವಿನ ಕಾಯಕ ಘಟಿಸಬೇಕು. ಇದು ಸ್ವಯಂ ಕ್ರಾಂತಿ. ತನ್ನ ಅಜ್ಞಾನವನ್ನು ತನ್ನ ಜ್ಞಾನದಿಂದಲೇ ಹೊಡೆದೋಡಿಸುವ ಅರಿವಿನ ಕ್ರಾಂತಿ. ಈ ಸ್ವಯಂ ಕ್ರಾಂತಿಯಲ್ಲಿ ಭಾಗಿಯಾದ ಕಾಯವೇ ಕೈಲಾಸ!

**431**

**ಕಾಣಬಹುದು ಕೈಗೆ ಸಿಲುಕದು;**
**ಅರಿಯಬಹುದು ಕುರುಹಿಡಬಾರದು;**

**ಭಾವಿಸಬಹುದು ಬೆರಸಬಾರದು**
**ಇಂತೀ ಉಪಮಿಸಬಾರದ ಮಹಾಘನವ**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿಮ್ಮ ಶರಣನೇ ಬಲ್ಲ.**

ಆಧ್ಯಾತ್ಮವನ್ನು ಕಾಣಬಹುದು. ಹಿಡಿಯಲು ಹೋದರೆ ಅದು ಕೈಗೆ ಸಿಲುಕದು. ಸಿದ್ಧರಾಮ ಶಿವಯೋಗಿಗಳ ಸುಂದರವಾದ ಸೂತ್ರ. ಓದಿ ಅನುಭವಕ್ಕೆ ಹೋಗಬೇಕು. ಅನುಭವಿಸಬೇಕು.

ಕಾಯ ಮಾತ್ರ ಕಾಣುತ್ತದೆ. ಕಾಣುವ ಕಾಯವು ಕೂಡಾ ಕಾಣಲು ಬಾರದ ವಸ್ತುವಿನಿಂದ ಆದದ್ದು. ಹೇಗೆಂದರೆ ಜಲ ಕಾಣುತ್ತದೆ. ಜಲವು ಕೂಡಾ ಕಾಣಬಾರದ ವಸ್ತುವಿನಿಂದ ಆದದ್ದು. ಜಲಜನಕ ಕಾಣುವುದಿಲ್ಲ. ಆಮ್ಲಜನಕವೂ ಕಾಣುವುದಿಲ್ಲ. ಇವೆರಡರ ವಾಸಸ್ಥಾನ ಬಯಲು; ಬಯಲು ಕೂಡಾ ಕಾಣುವುದಿಲ್ಲ.

ಬಯಲು ತನ್ನ ಗರ್ಭದಲ್ಲಿದ್ದ ಜಲಜನಕವನ್ನು ಆಮ್ಲಜನಕವನ್ನು ಒಂದು ಮಾಡಿ; ಅದರಲ್ಲಿ ತಾನು ಒಳ ಹೊರಗೆನ್ನದಂತೆ ಬೆರೆತು ಜಲವನ್ನಾಗಿ ಮಾಡಿತು. ಜಲಜನಕದಲ್ಲಿ ಉರಿಯುವ ಗುಣವಿದೆ; ಆಮ್ಲಜನಕದಲ್ಲಿ ಉರಿಸುವ ಗುಣವಿದೆ. ಇವೆರಡೂ ಕೂಡಿದ ಮೇಲೆ ಜಲವಾಯಿತು. ಜಲಕ್ಕೆ ತಣ್ಣನೆಯ ಗುಣವಿದೆ.

ಬಯಲು ಬ್ರಹ್ಮಾಂಡವೆಂಬ ಜೀವ ಜಲಬಿಂದುವೊಂದನ್ನು ತಂದೆಯ ಮುಖಾಂತರ ತಾಯಿ ಗರ್ಭಕ್ಕೆ ತಳ್ಳಿ ಅದರಲ್ಲಿ ತಾನು ಬೆರೆತು ಪಿಂಡವಾಯಿತು. ಆ ಪಿಂಡವೇ ತನು ಎಂಬ ಬ್ರಹ್ಮಾಂಡವಾಗಿ ಗರ್ಭದಿಂದ ಹೊರಗೆ ಬಂದಿದೆ.

ಬಯಲು ಬೀಜವಾದದ್ದು ಕಾಣುತ್ತದೆ. ಬಯಲು ಕಾಣುವುದಿಲ್ಲ. ಬೀಜದ ನೆರಳು ಕಾಣುವುದಿಲ್ಲ. ಒಂದು ವಸ್ತು ಮಾತ್ರ ಕಾಣುತ್ತದೆ. ಇನ್ನೆರಡು ಕಾಣುವುದಿಲ್ಲ. ಕೈಗೆ ಸಿಲುಕುವುದಿಲ್ಲ. ಕಾಣಲು ಬಾರದ, ಹಿಡಿಯಲು ಬಾರದ, ಬೆರೆಸಲು ಬಾರದ ಮಹಾಘನದಿಂದ ಕಾಣಬಹುದಾದ ಕಾಯ ಜನ್ಮ ತಳೆದಿದೆ.

ಕಾಣಬಹುದಾದ ಕಾಯದಲ್ಲಿ ಕಾಣಲು ಬಾರದ ಎರಡು ಕಾಯಗಳಿವೆ! ಕಾಣಬಹುದಾದ ಕಾಯಕ್ಕೆ ಜನ್ಮ ನೀಡಿದ ಕಾಯ ಒಂದು. ಇದು ಕಾಣುವುದಿಲ್ಲ. ಇದನ್ನು ಅರಿವಿನ ಕಾಯ ಗುರುದೇವನ ಕಾಯ ಬ್ರಹ್ಮಕಾಯ ಶಿವಕಾಯ ಉಪಮಿಸಲು ಬಾರದ ಮಹಾಘನ ಕಾಯ ಎಂದು ಕರೆಯುತ್ತಾರೆ.

ಶಿವಕಾಯದ ಅರಿವಿನ ಬೆಳಕಿನಿಂದ ಹುಟ್ಟಿದ ಮನವೆಂಬ ನೆರಳಿನ ಕಾಯವೇ ಮತ್ತೊಂದು ಕಾಯ! ಇದನ್ನು ಸೂಕ್ಷ್ಮಕಾಯವೆಂದು ಕರೆಯುತ್ತಾರೆ. ಈ ಕಾಯ ಕೂಡಾ ಕಾಣುವುದಿಲ್ಲ. ಕೈಗೆ ಸಿಲುಕುವುದಿಲ್ಲ. ಶಿವ ಕಾಯದಲ್ಲಿ ಬೆರೆಸಲು ಕೂಡಲೇ ಬರುವುದಿಲ್ಲ.

ಸ್ಥೂಲ ಕಾಯವನ್ನು ಮಾತ್ರ ಕಾಣಬಹುದು. ಸ್ಥೂಲ ಕಾಯಕ್ಕೆ ಜನ್ಮ ನೀಡಲು ಕಾರಣವಾದ ಕಾರಣಕಾಯ ಶಿವಕಾಯ ಕಾಣುವುದಿಲ್ಲ. ಕಾರಣ ಕಾಯದ ಬೆಳಕಿನಿಂದ ಜನ್ಮತಳೆದ ಸೂಕ್ಷ್ಮ ಕಾಯವೂ ಕಾಣುವುದಿಲ್ಲ.

ಸ್ಥೂಲ ಕಾಯವನ್ನು ಕಾಣಬಹುದು. ಕಾರಣ ಕಾಯ, ಸೂಕ್ಷ್ಮಕಾಯಗಳನ್ನು ಕಾಣಲು ಬಾರದು. ಕೈಗೆ ಸಿಲುಕವು. ಅರಿಯಬಹುದು. ಕುರು ಹಿಡಿಯಲು ಬಾರದು. ಭಾವಿಸಬಹುದು ಬೆರಸಲುಬಾರದು. ಉಪಮಿಸಲು ಬಾರದ ಮಹಾಘನವ ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿಮ್ಮ

ಶರಣನು ಮಾತ್ರ ಬಲ್ಲ.

ಶಿವಕಾಯದೊಂದಿಗೆ ಸಂಗ ಮಾಡಬೇಕಾದ ಸೂಕ್ಷ್ಮಕಾಯ. ಕಾಯದೊಂದಿಗೆ ಸಂಗ ಮಾಡಿದೆ. ಹೀಗಾಗಿ ಸ್ಥೂಲಕಾಯ, ಕಾಯದಲ್ಲಿಯೇ ಸಂಗಮವಾದ ಶಿವನನ್ನು ಆರಾಧಿಸದೆ, ತನಗೆ ಬೇಕಾದ ದೇವರನ್ನು ಕಲ್ಲಲ್ಲಿ ಕೆತ್ತಿ ಕಲ್ಲೇ ದೇವರೆಂದು ಭ್ರಮೆಗೆ ಒಳಗಾಗಿ ಆರಾಧಿಸುತ್ತದೆ.

ಶಿವ ಎಂದರೆ ಅರಿವು. ಮನ ಎಂದರೆ ಅರಿವಿನಿಂದ ಹುಟ್ಟಿದ ನೆರಳು. ಮರೆವಿನ ಕಾಯ ಸ್ಥೂಲಕಾಯವನ್ನು ಹಿಡಿದು ತನಗೆ ಬೇಕಾದ ಅಜ್ಞಾನದ ಸವಿಯನ್ನು ಸವಿಯುತ್ತದೆ. ಸೂಕ್ಷ್ಮಕಾಯ ಸ್ಥೂಲಕಾಯವನ್ನು ಖಡ್ಗದಂತೆ ಬಳಸುತ್ತದೆ. ಖಡ್ಗಕ್ಕೆ ಯಾರಾದರೂ ಶಿಕ್ಷೆ ಕೊಡುತ್ತಾರೆಯೇ? ಕೊಡಲು ಬರುವುದಿಲ್ಲ. ಆದರೇನು ಮಾಡುವುದು? ಖಡ್ಗ ಹಿಡಿದ ಕಾಯ ಕಾಣುವುದಿಲ್ಲ; ಸ್ಥೂಲ ಕಾಯಮಾತ್ರ ಕಾಣುತ್ತದೆ. ಕಾಣುವ ಕಾಯವೇ ಅಪಾರಾಧಿ ಕಾಯವೆಂದು ನಿರ್ಧರಿಸಿದ ಕಾಯ, ಕಾಯಕ್ಕೆ ಶಿಕ್ಷೆ ಕೊಡುತ್ತದೆ. ಶಿಕ್ಷೆ ಕೊಡುವ, ಶಿಕ್ಷೆ ಅನುಭವಿಸುವ ಕಾಯಗಳೆರಡೂ ಸೂಕ್ಷ್ಮಕಾಯ ಉಳ್ಳವುಗಳೇ ಆಗಿರುವುದರಿಂದ ಜ್ಞಾನಿಗಳು ಎರಡೂ ಅಪರಾಧಿ ಕಾಯಗಳೇ ಎಂದು ನಿರ್ಧರಿಸುತ್ತಾರೆ. ಏಕೆಂದರೆ

ಶರಣ ಜ್ಞಾನಿ. ಸೂಕ್ಷ್ಮಕಾಯವುಳ್ಳ ತಾನು, ಅರಿವೆಂಬ ಶಿವಕಾಯಕ್ಕೆ ಶರಣು ಹೋಗಿ ಸಂಪೂರ್ಣ ಶರಣಾಗತನಾಗಿದ್ದಾನೆ. ಲಿಂಗಯ್ಯನನ್ನೇ ಪತಿಯನ್ನಾಗಿ ಮಾಡಿಕೊಂಡು ತಾನು ಸತಿಯಾಗಿದ್ದಾನೆ. ಸತಿ-ಪತಿಗಳಿಬ್ಬರೂ ಸ್ಥೂಲಕಾಯವನ್ನೇ ಮನೆಯನ್ನಾಗಿ ಮಾಡಿಕೊಂಡು ಆ ಮನೆಯಲ್ಲಿ ಸಂಸಾರ ಹೂಡಿದ್ದಾರೆ. ಹೀಗಾಗಿ ಸ್ಥೂಲಕಾಯ ಶಿವಶಿವೆಯರಿದ್ದ ಕೈಲಾಸವಾಗಿದೆ. ಗುರುವಿನ ಮನೆಯಾಗಿದೆ. ಅರಿವಿನ ಮನೆಯಾಗಿದೆ. ಮಹಾಮನೆಯಾಗಿದೆ. ಅನುಭವ ಮಂಟಪವಾಗಿದೆ.

ಈ ಅನುಭವವನ್ನು ಸಕಲ ಕಾಯಗಳೂ ಅನುಭವಿಸಬಹುದು. ಆದರೆ ಕಾಯ ಉಪಜೀವನದ ಕೆಲಸದಲ್ಲಿ ಮುಳುಗಿ ಹೋಗಿದೆ. ಜೀವನಕ್ಕೆ ಬೇಕಾದ ಅರಿವಿನ ತನ್ನ ಕಾಯಕವನ್ನೇ ಕಾಯ ಮರೆತು ಹೋಗಿದೆ.

ಕಾಯವನ್ನೇ ಕೈಲಾಸವನ್ನಾಗಿ ಮಾಡಿಕೊಳ್ಳುವ ಕಾಯಕ ಕಾಯದಲ್ಲಿಯೇ ಇದೆ. ಅದನ್ನು ಶರಣ ಮಾತ್ರ ಬಲ್ಲ. ಕಾಯದಲ್ಲಿಯೇ ಇರುವ ಅರಿವಿನ ಕಾಯಕ್ಕೆ ತನ್ನ ಮರೆವಿನ ಕಾಯದ ಮೂಲಕ ಸಂಪೂರ್ಣ ಶರಣಾಗತನಾ ದವನೇ ಶರಣ! ಆತನೇ ಬುದ್ಧ, ಮಹಾವೀರ! ಆತನೇ ಕ್ರಿಷ್ಣ ಕ್ರಿಸ್ತ ಪೈಗಂಬರ!

**432**

**ಕಾತ ವೃಕ್ಷವವ್ವಾ ನೀನು,**
**ಪಕ್ಷಿಗಳು ಹಲವಾಗಿ ಬಂದು**
**ಹಣ್ಣ ಮೆಲಿಯಲ್ಕೆ ನಲಿನಲಿದಾಡುವೆ.**
**ಪಕ್ಷಿ ವೃಕ್ಷವ ನುಂಗಿದಡೆ ಎಂತು ಸೈರಿಸಲಹುದೌ,**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬೇರಿಲ್ಲದ ಮರ. ಮರದ ತುಂಬಾ ಮರುಜವಣೆಯ ಹಣ್ಣುಗಳು. ಟೊಂಗೆ ಟೊಂಗೆಗೆ ರೆಂಬೆ ರೆಂಬೆಗೆ ಮರುಜವಣೆಯ ಹಣ್ಣುಗಳು ಜೋತು ಬಿದ್ದಿವೆ.

ಫಲಭರಿತವಾದ ವೃಕ್ಷದ ತುಂಬಾ ಫಲವನ್ನು ಮೇಯಲು ಹಕ್ಕಿಗಳು ಬಂದು ನಲಿನಲಿದಾಡುತ್ತಲಿವೆ. ಫಲವ ಬಿಟ್ಟು ವೃಕ್ಷವ ನುಂಗಿದಡೆ ಪಕ್ಷಿಗಳನ್ನು ಸೈರಿಸುವುದಾದರೂ ಹೇಗೆ?

ಕಾಯವೆಂಬುದು ಒಂದು ಬೇರೆ ಇಲ್ಲದ ವೃಕ್ಷ. ಕಾಯವನ್ನು ಆವರಿಸಿದ ಮನವೇ ಪಕ್ಷಿ. ಕಾಯದೊಳಗೆ ಸಂಗಮವಾದ ಜ್ಞಾನವೇ ಮರುಜವಣಿಯ ಫಲ. ಇದು ಮರಣವಿಲ್ಲದ ಫಲ. ಮರಣವೇ ಇಲ್ಲದ ಈ ಫಲವನ್ನು ಮೇಯಲು ಮನವೆಂಬ ಪಕ್ಷಿಯೊಂದು ಹಾರಿ ಬಂದಿದೆ. ಈ ಪಕ್ಷಿಗೆ ಅರಿಷಡ್ವರ್ಗಗಳೆಂಬ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಆರು ಮಕ್ಕಳು. ಸಪ್ತವ್ಯಸನಗಳೆಂಬ ಏಳು ಮಕ್ಕಳು, ಅಷ್ಟ ಮದಗಳೆಂಬ ಎಂಟು ಮಕ್ಕಳೊಂದಿಗೆ ಬಂದ ತಾಯಿ ಪಕ್ಷಿ ಮರದಲ್ಲಿದ್ದ ಜ್ಞಾನದ ಫಲಗಳನ್ನು ಉಣ್ಣದೇ ಮರವನ್ನೇ ತಿನ್ನಲು ಹೊರಟಿದೆ.

ವೃಕ್ಷದಲ್ಲಿ ಬಿಟ್ಟ ಹಣ್ಣುಗಳನ್ನು ಮೇಯ್ದರೆ ವೃಕ್ಷ ಕುಣಿಕುಣಿದಾಡುವುದು. ಏಕೆಂದರೆ ಅದು ಸಾಮಾನ್ಯ ಫಲವಲ್ಲ ಮರುಜವಣಿಯ ಫಲ. ಈ ಫಲವನುಂಡ ಪಕ್ಷಿಗೆ ಮರಣವೇ ಇಲ್ಲ. ಆದರೆ ಪಕ್ಷಿ ಮತ್ತು ಅದರ ಮಕ್ಕಳು ಮರವನ್ನೇ ಇತ್ತು ತಿನ್ನುತ್ತಲಿವೆ. ಹೀಗೆ

ಮರವನ್ನು ತಿನ್ನುತ್ತಿರುವ ಹಕ್ಕಿಗಳಿಗೆ ಎಂತು ಸೈರಿಸಲಹುದು? ಬೇರಿಲ್ಲದ ವೃಕ್ಷದ ಒಡೆಯನೇ, ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾಯಿ ಪಕ್ಷಿಯನ್ನು ಅದರ ಮಕ್ಕಳನ್ನು ನೀನೇ ರಕ್ಷಿಸು. ನಿನಗಾಗಿ ನೀನಿರುವುದಕ್ಕಾಗಿ ನಿನ್ನ ವಾಸಕ್ಕಾಗಿ ಬಂದ ಈ ವೃಕ್ಷವನ್ನು ಕೂಡಾ ನೀನೇ ರಕ್ಷಣೆ ಮಾಡು.

**433**

**ಕಾಮ ಕಾಡಿತು, ಕ್ರೋಧ ಕೊಂದಿತು,**
**ಆಮಿಷವೆನ್ನನೆಳೆವುತ್ತಿದೆ.**
**ಕರುಣ ಮಾಡಾ ಹರಹರ ಮಹಾದೇವಾ,**
**ಕರುಣ ಮಾಡಾ ಶಿವಶಿವ ಮಹಾದೇವಾ.**
**ಕರುಣ ಮಾಡಾ ದೆಸೆಗೆಟ್ಟ ಪಶುವಿಂಗೊಮ್ಮೆ,**
**ಕರುಣ ಮಾಡಾ ವಶವಿಲ್ಲದ ಶಿಶುವಿಂಗೊಮ್ಮೆ.**
**ಕರುಣ ಮಾಡಾ ಅನ್ಯವನು ನಾನರಿಯೆ.**
**ನಿಮ್ಮ ಪಾದವನುರೆ ಮೆಚ್ಚಿದೆನು,**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯ ತಂದೆ.**

ಸೃಷ್ಟಿಯ ನಿಯಮವನ್ನು ತಿಳಿಯುವ ಶಕ್ತಿ ಕಾಯಕ್ಕೆ ಮಾತ್ರ ಇದೆ. ಪ್ರಾಣಿ ಪಶು ಪಕ್ಷಿಗಳು ಸೃಷ್ಟಿಯ ನಿಯಮವನ್ನು ಸಹಜವಾಗಿ ಪಾಲಿಸುತ್ತಲಿವೆ.

ಕಾಯ ಒಂದನ್ನು ಬಿಟ್ಟು ಇತರ ಪ್ರಾಣಿಗಳಲ್ಲಿ ಕಾಮ ಕಾಡುವುದು ಸಂತಾನಕ್ಕಾಗಿ ಮಾತ್ರ. ಗರ್ಭದಾನ ಮಾಡಿದ ಮೇಲೆ ಅಥವಾ ಗರ್ಭದಾನ ಪಡೆದ ಮೇಲೆ ಆ ಪ್ರಾಣಿಗಳು ಗರ್ಭದಿಂದ ತನ್ನ ಸಂತಾನ ಹೊರಗೆ ಬರುವವರೆಗೆ ಮತ್ತೆ ಕಾಮ ಬಯಸುವುದಿಲ್ಲ. ಅವುಗಳಿಗೆ ಕಾಮ ಕಾಡುವುದಿಲ್ಲ.

ಮನುಷ್ಯ ಹಾಗಲ್ಲ. ಕಾಯದಲ್ಲಿ ಕಾಮವಾಸನೆ ಉಂಟಾಗುವುದು ಸಂತಾನಕ್ಕಾಗಿ ಮಾತ್ರ ಎಂದು ಮನುಷ್ಯ ಖಚಿತವಾಗಿ ತಿಳಿದುಕೊಂಡಿಲ್ಲ. ಕಾಮ ಯಾಕೆಬೇಕು ಎಂದು ಪ್ರಶ್ನೆ ಮಾಡಿದರೆ ಸಂತಾನಕ್ಕಾಗಿ ಎಂದು ಹೇಳಬಹುದು. ಆದರೆ ಸಂತಾನಕ್ಕಾಗಿ ಮಾತ್ರ ಕಾಮ ಎಂದು ಕಾಯ

ಕಾಯದ ಸಹಜ ಧರ್ಮವನ್ನು ಪಾಲನೆ ಮಾಡುತ್ತಿಲ್ಲ. ಪ್ರಾಣಿಗಳಿಗೆ ಇರುವ ಸಹಜ ಅರಿವು ಮನುಷ್ಯನಾದವನಿಗೆ ಅದು ಕಾಯದಲ್ಲಿಯೇ ಕಳೆದು ಹೋಗಿದೆ. ಹೀಗಾಗಿ ಅರವತ್ತು ವರುಷದ ಮುದುಕ ಮೊಮ್ಮಗಳೊಂದಿಗೆ ಕಾಮಕೇಳಿಯಾಡುತ್ತಾನೆ. ಏಕೆಂದರೆ ಕಾಯದಲ್ಲಿ ಕಾಮು ಕಾಡುತ್ತದೆ. ಕಾಮದಿಂದ ಹುಟ್ಟಿದ ಕ್ರೋಧ ಕಾಯವನ್ನೇ ಕೊಲ್ಲುತ್ತದೆ. ಆದರೂ ಕಾಯದಲ್ಲಿ ಹುಟ್ಟಿದ ಕಾಮದ ಆಮಿಷ ಕಾಯವನ್ನು ಕಾಯದತ್ತ ಎಳೆಯುತ್ತದೆ.

ಕಾಯದ ಅಪರಾಧ ಎಳ್ಳನಿತೂ ಇಲ್ಲ. ಕಾಯವನ್ನು ಆವರಿಸಿದ ಮನಕ್ಕೆ ಕಾಮದ ಆಸೆ ಆಗಿರುವುದರಿಂದ ಕಾಯದಲ್ಲಿ ಕಾಮ ಸೃಷ್ಟಿಯಾಗಿದೆ. ಕ್ರೋಧ ಸೃಷ್ಟಿಯಾಗಿದೆ. ಕಾಯದಲ್ಲಿಯೇ ಇದ್ದ ಅರಿವಿಗೆ ಕಾಮ ಇಲ್ಲ; ಕ್ರೋಧ ಇಲ್ಲ; ಆಮಿಷವೂ ಇಲ್ಲ.

ಕಾಮದಿಂದ ತತ್ತರಿಸುವ ಮನಕ್ಕೆ ಅರಿವು ಸದಾ ಪಾಠ ಮಾಡುತ್ತಿದ್ದರೂ ಅರಿವಿನ ಪಾಠ ಕೇಳುವ ಇಚ್ಛೆ ಮನಕ್ಕೂ ಇಲ್ಲ. ಕಾಯಕ್ಕೂ ಇಲ್ಲ. ಕಾಯದಲ್ಲಿ ಕಾಮ ಉತ್ಪತ್ತಿಯಾದಾಗ ಕಾಯಕ್ಕೆ ಆಪತ್ಕಾಲ ಎದುರಾಗುತ್ತದೆ. ಕಾಯದಲ್ಲಿಯೇ ಇರುವ ಅರಿವಿನ ಪಾಠ ಕಾಯ ಮತ್ತು ಮನಗಳು ಕೇಳದಂತಾಗುತ್ತವೆ. ಕಾಯ ಓದಿದ ಓದು ಕಾಯದ ಸಹಾಯಕ್ಕೆ ಬರುವುದಿಲ್ಲ. ಕಾಯ ಹಾಕಿದ ವೇಷವೂ ಕಾಯಕ್ಕೆ ನೆರವಾಗುವುದಿಲ್ಲ.

ಮನದಿಂದ ಉಂಟಾದ ಕಾಮವನ್ನು ಕಾಯ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಮೊರೆಯಾಗಿ ಕರುಣ ಮಾಡಾ ಹರಹರ ಮಹಾದೇವಾ, ಕರುಣ ಮಾಡಾ ಶಿವಶಿವ ಮಹಾದೇವಾ, ಕರುಣ ಮಾಡಾ ದೆಸೆಗೆಟ್ಟ ಪಶುವಿಂಗೊಮ್ಮೆ, ಕರುಣ ಮಾಡಾ ವಶವಿಲ್ಲದ ಶಿಶುವಿಂಗೊಮ್ಮೆ. ಕರುಣ ಮಾಡಾ ನಿನ್ನ ಹೊರತಾಗಿ ಅನ್ಯವನು ನಾನರಿಯೆ ಎಂದು ಗುರುದೇವನ ಪಾದಕ್ಕೆ ಶರಣು ಹೋಗಬೇಕು.

ಯುದ್ಧದ ಸಂದರ್ಭದಲ್ಲಿ ಅರ್ಜುನನಿಗೆ ಶ್ರೀಕೃಷ್ಣನ ನೆನಪಾಯಿತು. ಶ್ರೀಕೃಷ್ಣನೆಂದರೆ ಅರಿವು. ಕಾಯವೆಂದರೆ ರಥ. ಮನವೆಂದರೆ ಅರ್ಜುನ. ಕಾಯವೆಂಬ ರಥವನ್ನು ಶ್ರೀಕೃಷ್ಣನೇ ಸಾರಥಿಯಾಗಿ ಓಡಿಸಿದರೆ ಅದು ಸರಿಯಾದ ಜಾಗಕ್ಕೆ ಹೋಗುವುದು. ಕಾಯದ ಎದುರಿಗೆ ಬಂದ ಅರಿಷಡ್ವರ್ಗಗಳನ್ನು ಅಷ್ಟ ಮದಗಳನ್ನು ಸಪ್ತ ವ್ಯಸನಗಳನ್ನು ಮನ ಮೆಟ್ಟಿ ನಿಲ್ಲುವುದು. ಇವು ಕಾಯದ ವೈರಿಗಳು. ಮನದಿಂದಲೇ ಸೃಷ್ಟಿಯಾಗಿವೆ. ಅರಿವಿನ ಸಹಾಯ ಪಡೆದು ಮನದಿಂದಲೇ ನಾಶಮಾಡಬೇಕು.

ನನ್ನಿಂದಲೇ ಸೃಷ್ಟಿಯಾದ ಅರಿಷಡ್ವರ್ಗಗಳು ನನ್ನ ಮಾತು ಕೇಳುತ್ತಿಲ್ಲ. ನನ್ನ ವಶದಲ್ಲಿಲ್ಲ. ನನ್ನಲ್ಲಿ ಹುಟ್ಟಿದ ಕಾಮ ನಾನು ವಾಸಮಾಡಿದ ತನುವನ್ನೇ ಕೊಲ್ಲುತ್ತಲಿವೆ. ನನ್ನಲ್ಲಿ ಹುಟ್ಟಿದ ಕ್ರೋಧ ನಾನು ವಾಸ ಮಾಡಿದ ಕಾಯವನ್ನೇ ಕೊಲ್ಲುತ್ತಲಿದೆ. ಕಾಯದಲ್ಲಿಯೇ ವಾಸಮಾಡಿದ ಮಹಾದೇವನೇ ದಾರಿಕಾಣದ ಪಶು ನಾನು. ಪಶುಪತಿ ನೀನು. ವಶವಿಲ್ಲದ ನಿನ್ನ ಶಿಶುವಿಗೊಮ್ಮೆ ನೀನೇ ಕರುಣಿಸು ತಂದೆ ಎಂದು ಮನ ಭಕ್ತನಾಗಿ ಅರಿವೆಂಬ ಗುರುದೇವನಿಗೆ ಶರಣು ಹೋಗಬೇಕು. ಶರಣಾಗತನಾಗಬೇಕು. ಆಗ ಕೃಷ್ಣ , ಕಾಯವೆಂಬ ರಥವನ್ನು ಸಾರಥಿಯಾಗಿ ಓಡಿಸುತ್ತಾ ಹೊಡಿ ಎಂದಲ್ಲಿ ಅರ್ಜುನ ಬಾಣ ಹೊಡೆದರೆ ಹುಲ್ಲುಕಡ್ಡಿಯೇ ಬ್ರಹ್ಮಾಸ್ತ್ರವಾಗುತ್ತದೆ. ಕಾಯದಲ್ಲಿ ಹುಟ್ಟಿದ ಕಾಯದ ವೈರಿಗಳು ಕಾಯದಲ್ಲಿಯೇ ನಾಶವಾಗುತ್ತವೆ.

**434**

**ಕಾಮನನು ನೋಡಿದ ಕಂಗಳಲ್ಲಿ ನೋಡದೆ**

**ಸೋಮನಯನದಿ ನೋಡಿ ಸಲಹು ತಂದೆ.**
**ಕಾಮಾರಿಯಯ್ಯಾ ನೀನು, ಕಾಮಂಗೆ ಒಪ್ಪಿಸದಿರು ಎನ್ನ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಮನ ಕಣ್ಣು ಕಣ್ಣಲ್ಲಿಯೇ ಇದೆ; ಸೋಮಶೇಖರನ ಅರಿವಿನ ಕಣ್ಣು ಕಣ್ಣಲ್ಲಿಯೇ ಇದೆ. ಇವರಿಬ್ಬರ ಕಣ್ಣಿಗೆ ಕಣ್ಣು ಆಶ್ರಯ ನೀಡಿದೆ.

ದೃಶ್ಯಗಳು ಎರಡು; ಕಣ್ಣು ಮಾತ್ರ ಒಂದೇ! ಕಣ್ಣನ್ನು ಉಪಕರಣವನ್ನಾಗಿ ಮಾಡಿಕೊಂಡು ಕಾಮನು ತನ್ನ ದೃಶ್ಯದ ಮೂಲಕ ನೋಡಿದರೆ, ದೇಹ ಕಾಣುವುದೇ ಇಲ್ಲ. ಅದು ಹೆಣ್ಣಾಗಿ ಕಾಣುತ್ತದೆ; ಅಥವಾ ಗಂಡಾಗಿ ಕಾಣುತ್ತದೆ.

ಕಾಮನ ದೃಶ್ಯ ಕಣ್ಣಲ್ಲಿ ಹೆಣ್ಣು ಎನ್ನುವ ಅಜ್ಞಾನ ಬರಮಾಡಿಕೊಂಡು ಗಂಡು ದೇಹವನ್ನು ನೋಡುತ್ತಾ ದೇಹದ ಮೂಲಕ ಉದ್ರೇಕಗೊಂಡು ಕಾಮಸುಖವನ್ನು ಅನುಭವಿಸುತ್ತದೆ.

ಸ್ಥೂಲ ಕಣ್ಣನ್ನು ಬಳಸಿಕೊಂಡು ಕಾಮ ತನ್ನ ದೃಶ್ಯದ ಮೂಲಕ ನೋಡುತ್ತಾ ವಿಷಯ ಸುಖ ಅನುಭವಿಸುವ ಕುರುಡು ರೋಗ. ಕಾಣುವ ಸ್ಥೂಲ ಕಣ್ಣಿಗೆ ಕಾಣಲು ಬಾರದ ಕಾಮನ ಕಾಮಾಲೆ ಎಂಬ ವಿಷಯದ ರೋಗ ಅಂಟಿಕೊಂಡಿದೆ. ಇದು ಎಂದೂ ರಿಪೇರಿಯಾಗದ ರೋಗ.

ಕಣ್ಣು ಕಾಣದಿದ್ದರೆ ಕಣ್ಣಿನ ವೈದ್ಯ ಕಣ್ಣಿನ ಪೊರೆಯನ್ನು ಹರಿದು ಕಣ್ಣಿನ ಮೂಲಕ ಬೆಳಕು ಹರಿಯುವಂತೆ ಮಾಡುತ್ತಾನೆ. ಹರಿಯುವ ಬೆಳಕೆ ಕಾಮ ವಾಸನೆಯ ಕಾಯಿಲೆಯಿಂದ ಬಳಲುತ್ತಿದ್ದರೆ ಅದನ್ನು ನೇತ್ರವೈದ್ಯ ಸರಿಪಡಿಸಲಾರ.

ಕಣ್ಣಲ್ಲಿ ಹರಿಯುವ ಕಾಮನ ದೃಶ್ಯಕ್ಕೆ ಕಣ್ಣಲ್ಲಿಯೇ ಸಂಗಮವಾದ ಅರಿವಿನ ಸೋಮನ ದೃಶ್ಯದ ದರ್ಶನ ಮಾಡಿಕೊಳ್ಳಬೇಕು ಎಂಬ ಬಯಕೆ ಹುಟ್ಟಬೇಕು. ಆಗ ಭವರೋಗದ ವೈದ್ಯ ಪ್ರತ್ಯಕ್ಷವಾಗುತ್ತಾನೆ.

ಭವರೋಗದ ವೈದ್ಯನೆಂದರೆ ಸೋಮನಯನದ ದರುಶನ ಮಾಡಿಕೊಂಡವನು. ಕಾಮನಯನವನ್ನು ಸೋಮನಿಗೆ ಅರ್ಪಿಸಿದವನು.

ಕಾಣಬಾರದ ಕಾಮದ ಕಣ್ಣನ್ನು ಬೇಟೆಯಾಡಿ, ಕಣ್ಣಪ್ಪನಿಗೆ ಅರ್ಪಣೆ ಮಾಡಿ, ಕಣ್ಣಪ್ಪನ ಕಣ್ಣಿನಿಂದ ನೋಡುವ ಕಲೆಯನ್ನು ಕರಗತ ಮಾಡಿಕೊಂಡವನು. ಅವನನ್ನು ಅರಿವಿನ ಲೋಕ, ಬೇಡದ ಕಣ್ಣನ್ನು ಕಣ್ಣಿನೊಳಗಿರುವ ಒಳಕಣ್ಣಿಗೆ ಅರ್ಪಿಸಿದ ಕಣ್ಣಪ್ಪ ಬೇಡರ ಕಣ್ಣಪ್ಪ ಎಂದು ಕರೆಯಿತು.

ಅರಿವಿನ ಲೋಕವೇ ವಿಚಿತ್ರ ! ಲೋಕದಲ್ಲಿರುವ ಲೌಕಿಕ ಕಾಯ ಲೋಕದ ಅಜ್ಞಾನವನ್ನು ಕಳೆಯಬೇಕೆಂದು ಹೋರಾಟ ಮಾಡುತ್ತದೆ. ಅರಿವಿನ ಲೋಕ ಹಾಗಲ್ಲ, ಕಾಯದಲ್ಲಿರುವ ಅಜ್ಞಾನದ ವಿರುದ್ಧ ಕಾಯದಲ್ಲಿಯೇ ಸಂಗಮವಾದ ಜ್ಞಾನದ ಮೂಲಕ ಹೋರಾಡುತ್ತದೆ. ಅಂದರೆ

ಕಣ್ಣನ್ನು ಆವರಿಸಿದ ಕಾಮನ ನಯನವನ್ನು, ಕಣ್ಣಲ್ಲಿಯೇ ಸಂಗಮವಾದ ಸೋಮಶೇಖರನ ನಯನಕ್ಕೆ ಒಪ್ಪಿಸುತ್ತದೆ.

ತಂದೆ, ಸೋಮಶೇಖರನೇ, ಕಾಮಾರಿಯೇ ನಿನ್ನ ನಯನದಿಂದ ನನ್ನನ್ನು ನೋಡಿ ಸಲಹು ಎಂದು ಬೇಡಿಕೊಳ್ಳುತ್ತದೆ.

ಕಾಮದ ಕಣ್ಣು ಕಾಯವನ್ನು ಕಾಮದಿಂದ ಹರಿದು ತಿನ್ನುವಾಗ, ಅದರ ಬೆನ್ನ ಹಿಂದೆಯೇ ಸೋಮನ ಕಣ್ಣು ನೋಡಿ, ನೀನು ನೋಡಿದ ನೋಟ ತಪ್ಪೆಂದು ಪಾಠ ಮಾಡುತ್ತದೆ. ಹಾದರದಿಂದ ನೋಡಿ, ನೋಡಿದ ಹಾದರವನ್ನು ಮುಚ್ಚಿಟ್ಟುಕೊಳ್ಳಲು ನುಡಿಯುವ ನಿನ್ನ ಆದರದ ನುಡಿಯೂ

ತಪ್ಪೆಂದು ಪಾಠ ಮಾಡುತ್ತದೆ. ಈ ಚಮತ್ಕಾರದ ನೋಟ ಕಾಣುವ ಸಕಲ ಕಣ್ಣುಗಳ ಗೋಚರಕ್ಕೂ ಬರುತ್ತದೆ. ಕಾಮದ ಅಜ್ಞಾನದ ಹಾದರದ ನೋಟವೂ ಕಣ್ಣನ್ನು ಆವರಿಸಿದೆ. ಹಾಗೆಯೇ ಸೋಮಶೇಖರನ ಮಹಾಜ್ಞಾನದ ವಿಜ್ಞಾನವೂ ಕಣ್ಣಲ್ಲಿ ಸಂಗಮವಾಗಿದೆ, ಇದನ್ನು

ತಿಳಿದು ತಿಳಿದು, ತನ್ನ ಅಜ್ಞಾನದ ವಿರುದ್ಧ ತನ್ನದೇ ಆದ ಜ್ಞಾನದ ಮೂಲಕ ವೈಜ್ಞಾನಿಕವಾಗಿ ಹೋರಾಟ ಮಾಡುವವನೇ ಜ್ಞಾನಿ. ಬುದ್ಧ ಮಹಾವೀರ ಬಸವಾದಿ ಶರಣರು ದಾಸವರೇಣ್ಯರು, ಕ್ರಿಸ್ತ ಕ್ರಿಷ್ಣ ಪೈಗಂಬರರು ಮಹಾಜ್ಞಾನಿಗಳು. ಜ್ಞಾನದ ವಿಜ್ಞಾನಿಗಳು. ತನ್ನ ಅಜ್ಞಾನದ ವಿರುದ್ಧ ತಾನೇ ಹೋರಾಟ ಮಾಡುವ ಸ್ವಯಂಕ್ರಾಂತಿವೀರರು.

ಜ್ಞಾನ ಎನ್ನುವುದು ಕಾಯದಲ್ಲಿ ಸಂಗಮವಾಗಿದೆ. ಅಜ್ಞಾನ ಎನ್ನುವುದು ಕಾಯವನ್ನು ಆವರಿಸಿದೆ. ಜ್ಞಾನದ ಮೂಲಕ ಅಜ್ಞಾನದೊಂದಿಗೆ ಹೋರಾಟ ಮಾಡುವ ಕಲೆಯನ್ನು ಸಕಲ ಕಾಯಗಳು ಕಲಿತುಕೊಳ್ಳಲೇಬೇಕಾಗಿದೆ.

**435**

**ಕಾಮವಿಕಾರಕ್ಕೆ ಕಳವಳಿಸಿ ಮನವು**
**ಹೇಮದಿಚ್ಛೆಗೆ ಹೆಚ್ಚಿ ಹೆಚ್ಚಿ**
**ಕಾಮಾರಿ ನಿಮ್ಮುವ ನೆನೆಯದೀಮನವು**
**ಓರಂತೆ ನರಕಕ್ಕಿಳಿದೆನೆಂಬುದು.**
**ಕಾರುಣ್ಯಾಕರ ಎನ್ನುವನಾರೈದು ಓರಂತೆ ಮಾಡು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ ಕಾಮ ಭೂಮಿ ಹೇಮಕ್ಕೆಳೆದರೆ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಕಾಯದಲ್ಲಿ ಉಂಟಾಗುವ ಕಾಮದ ಬಗ್ಗೆ ವಿವರ ನೀಡುತ್ತಾನೆ.

ಕಾಯದಲ್ಲಿ ಕಾಮ ಹುಟ್ಟುವುದು ಸಂತಾನಕ್ಕಾಗಿ ಮಾತ್ರ. ಅದು ಒಂದು ಸುಖವಲ್ಲ. ಅದು ಒಂದು ದುಃಖವೂ ಅಲ್ಲ. ಕಾಯದಲ್ಲಿ ಕಾಮ ಹುಟ್ಟಿದಾಗ ಕಾಯಕ್ಕೆ ಸಂತಾನದ ಅವಶ್ಯಕತೆಯಿದೆಯೆ ಹೇಗೆ ಎಂದು ಅರಿವಿನ ಮೂಲಕ ವಿಚಾರಕ್ಕೆ ಒಳಗಾದಾಗ ಕಾಮ ಇಲ್ಲವಾಗುತ್ತದೆ. ಇದು ಅರಿವಿನ ಕೆಲಸ.

ಮನದಲ್ಲಿ ಕಾಮ ಉಂಟಾದಾಗ ಅದು ಕಾಯದ ಮೂಲಕ ತನ್ನ ಆತುರದ ಕೆಲಸವನ್ನು ನಿವಾರಿಸಿಕೊಳ್ಳುತ್ತದೆ. ಸಂತಾನಕ್ಕಾಗಿ ಮಾತ್ರ ಕಾಮ ಎಂದು ಮನಕ್ಕೆ ತಿಳಿಯುವುದಿಲ್ಲ. ಹೀಗಾಗಿ ಅರವತ್ತು ವರುಷದ ಕಾಯವೂ ಸಹ ತನ್ನ ಮೊಮ್ಮಗಳೊಂದಿಗೆ ಕಾಮದ ಸುಖ ಅನುಭವಿಸಲು ಸಿದ್ಧವಾಗುತ್ತದೆ.

ಮನಕ್ಕೆ ಯಾವ ಸಂಬಂಧಗಳು ಅಡ್ಡಿ ಪಡಿಸುವುದಿಲ್ಲ. ಏಕೆಂದರೆ ಸಕಲ ಸಂಬಂಧಗಳನ್ನು ಮನವೆ ಕಾಯದ ಮೂಲಕ ಕಟ್ಟಿಕೊಂಡಿದೆ. ಕಾಯದಲ್ಲಿ ಮನದಿಂದಾಗಿ ಉಂಟಾದ ಕಾಮವನ್ನು ಕಾಮಾರಿ ಮಾತ್ರ ತಡೆಯಬಲ್ಲ. ಕಾಮಾರಿ ಎಂದರೆ ಸಾಕ್ಷಾತ್ ಪರಮೇಶ್ವರ. ಮನ್ಮಥನನ್ನು ತನ್ನ ಅರಿವಿನ ಕಣ್ಣಿನಿಂದ ಸುಟ್ಟಾತ. ಆತನನ್ನು ಅರಿವು ಎಂದು ಕರೆಯಬಹುದು. ಗುರುದೇವ ಎಂದು ಕರೆಯಬಹುದು.

ಕಾಮವೂ ಕಾಯದಲ್ಲಿಯೇ ಇದೆ. ಕಾಮವನ್ನು ಸುಡುವ ಅರಿವೂ ಕಾಯದಲ್ಲಿಯೇ ಇದೆ. ಕಾಯದಲ್ಲಿ ಉಂಟಾದ ಕಾಮವನ್ನು ಮತ್ತೊಂದು ಕಾಯ ಶಿಕ್ಷೆ ನೀಡುವುದರಿಂದ ಕಾಮ ತೊಲಗುವುದಿಲ್ಲ. ಕಾಮವಿಲ್ಲದ ಕಾಯಗಳೇ ಇಲ್ಲ. ಕಾಣುವ ಸಕಲ ಕಾಯಗಳಲ್ಲಿಯೂ ಕಾಮವಿದೆ. ಕಾಮವಿದ್ದ ಕಾಯ ಕಾಮವಿದ್ದ ಕಾಯಕ್ಕೆ ಶಿಕ್ಷೆಕೊಟ್ಟಂತೆ. ಇದು ಸರಿಯಾದ ನ್ಯಾಯವಲ್ಲ.

ಕಾಯದಲ್ಲಿದ್ದ ಕಾಮವನ್ನು ಕಾಯವನ್ನು ಆವರಿಸಿದ ಮನ ಬಳಸಿದಾಗಲೇ ಕಾಯದಲ್ಲಿ ಕಾಮ ಹುಟ್ಟುತ್ತದೆ. ಅಂದರೆ ಮನ ಮಾಡಿದ ತಪ್ಪಿಗಾಗಿ ಕಾಯ ಶಿಕ್ಷೆ ಅನುಭವಿಸಿದಂತಾಗುತ್ತದೆ. ನ್ಯಾಯಾಲಯ ನಿರಪರಾಧಿ ಕಾಯಕ್ಕೆ ಶಿಕ್ಷೆ ಕೊಡುತ್ತದೆ. ಮನಕ್ಕೆ ಶಿಕ್ಷೆ ಕೊಡುವುದು ನ್ಯಾಯಾಲಯಕ್ಕೆ ಸಾಧ್ಯವಾಗುವುದಿಲ್ಲ. ಹೀಗಾಗಿ ಕಾಯವನ್ನು ಆವರಿಸಿದ ಮನವೆಂಬ ಅಪರಾಧಿ ಹಾಗೇ ಉಳಿಯುತ್ತಾನೆ. ''ಅಪರಾಧಿ ನಾನಲ್ಲ; ಅಪರಾಧವೆನಗಿಲ್ಲ'' ಎಂದು ದಾಸರು ಹಾಡಿದರು. ಈ ಸೂತ್ರ ಬಳಸಿಕೊಂಡು ಕಾಮಾರಿಯ ಪರಿಚಯ ಮಾಡಿಕೊಳ್ಳಬೇಕು ಎಂದು ಮನಕ್ಕೆ ತಿಳಿಯುತ್ತಿಲ್ಲ; ಕಾಯಕ್ಕೆ ಹೊಳೆಯುತ್ತಿಲ್ಲ.

ಕಾಯದಲ್ಲಿ ಕಾಮವೇ ಇಲ್ಲದ ಕಾಮಾರಿ ಎನ್ನುವ ಅರಿವಿನ ಕಾಯ ಒಂದಿದೆ. ಅದು ಕಾಣುವುದಿಲ್ಲ. ಕಾಯವನ್ನು ಆವರಿಸಿದ ಮನವೂ ಒಂದು ಕಾಯವೇ ಆಗಿದೆ. ಅದು ಕೂಡಾ ಕಾಣುವುದಿಲ್ಲ. ಮನವೆಂಬ ಕಾಯ ಅರಿವಿನ ಕಾಯದಲ್ಲಿ ಸಂಗಮವಾಗಿ ಆ ಅರಿವಿನ ಕಾಯದ ಮೂಲಕ ಕಾಯವನ್ನು ಬಳಸಿಕೊಂಡು ಮತ್ತೊಂದು ಕಾಯವನ್ನು ನೋಡಿದಾಗ ಆ ಕಾಯ ಹೆಣ್ಣಾಗಿ, ಗಂಡಾಗಿ ಕಾಣುವುದಿಲ್ಲ. ಕಾಯಕ್ಕೆ ಕಾಯ ಮಾತ್ರ ಕಾಣುತ್ತದೆ. ತನ್ನಂತೆಯೇ ಇರುವ ಅರಿವಿನ ಕಾಯವಾಗಿ ಕಾಯಕ್ಕೆ ಕಾಣುತ್ತದೆ. ಕಾಮದ ಕಾಯ ಅರಿವಿನ ಕಾಯದಲ್ಲಿ ಭಸ್ಮವಾಗಿ ಅರಿವಿನ ಕಾಯ ಮಾತ್ರ ಕಾಯಕ್ಕೆ ಬಳಕೆಯಾಗುತ್ತದೆ.

ಹೇಮ ಹಳದಿ ಲೋಹವಾಗಿ ಕಾಣುತ್ತದೆ. ''ವಸ್ತ್ರದಲ್ಲಿ ಹೊನ್ನು ಬಿದ್ದಡೆ ಮುಟ್ಟಿದೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ'' ಎಂದು ಶರಣೆ ಸತ್ಯಕ್ಕ ಧೈರ್ಯದಿಂದ ಹೇಳಿದಳು. ''ನಿನ್ನದೆಂಬುದು ಜ್ಞಾನರತ್ನ ಕಾಣಾ ಅದನ್ನು ಕೆಡಗೊಡದೆ ಬಳಸಿದೆಯಾದೊಡೆ ನಿನ್ನಂಥ ಸಿರಿವಂತರು ಯಾರೂ ಇಲ್ಲ ಎಲೆ ಮನವೆ'' ಎಂದು ಅಲ್ಲಮ ಪ್ರಭುಗಳು ಹೇಳಿದರು.

ಕಾಯ ವಿಕಾರಕ್ಕೆ ಕಳವಳಿಸುತ್ತದೆ. ಹೇಮದಿಚ್ಛೆಯ ಬಯಕೆಯು ಹೆಚ್ಚಿ ಹೆಚ್ಚಿ ಕಾಮಾರಿಯೇ ನಿಮ್ಮನ್ನು ನೆನೆಯದಂತೆ ಮಾಡಿದೆ ಈ ಮನವು. ಸಕಲರಂತೆ ನರಕಕ್ಕೆ ಇಳಿದೆನೆಂಬ ಅಂಜಿಕೆ ನನ್ನಲ್ಲಿ ಉಂಟಾಗುತ್ತಲಿದೆ. ಕಾರುಣ್ಯಾಕರನೆ ನನ್ನನ್ನು ಹರಸು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಹಾಡುತ್ತಾ ಮನವನ್ನು ಘನಮನವನ್ನಾಗಿಸುವ ಸೂತ್ರ ಓದುಗರಿಗೆ ನೀಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**436**

**ಕಾಮಸಂಗವನಳಿದು ಹೇಮದಿಚ್ಛೆಯ ತೊರೆದು,**
**ನಿಮ್ಮ ನಾಮ ನೆಲೆಯಾಗಿಪ್ಪವರ ತೋರಾ, ಅಯ್ಯಾ ನಿಮ್ಮ ಧರ್ಮ**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಅವರ ಪಾದವ ತೋರಿ ಬದುಕಿಸಯ್ಯಾ.**

ಭೂಮಿ ಹೇಮ ಕಾಮಿನಿ ಇವು ಜಗದ ಕಾಯಗಳಿಗೆ ಅಂಟಿದ ವಿಧಿ. ಕಾಮಿನಿ ಎಂದರೆ

ಹೆಣ್ಣಲ್ಲ. ಕಾಯಕ್ಕೆ ಅಂಟಿದ ವಿಷಯವೆಂಬ ವಿಧಿ. ಕಾಮವೆಂಬ ಅಜ್ಞಾನ. ಪ್ರಾಣಿಗಳಿಗೆ ಸಂತಾನ ಉತ್ಪತ್ತಿಗಾಗಿ ಬಳಕೆಯಾಗುವ ಕಾಮ ಕಾಯಗಳಿಗೆ ಮಾತ್ರ ವಿಧಿಯಾಗಿ ಕಾಡುತ್ತದೆ.

ಕಾಯವನ್ನು ಆವರಿಸಿದ ಮನವೆಂಬ ಮಾಯೆ ಕಾಯವನ್ನು ವಿಧಿಯಾಗಿ ಕಾಡುತ್ತದೆ. ಮನವೆಂಬ ಮಾಯೆಗೆ ಭೂಮಿ ಬೇಕು; ಅದರ ಗರ್ಭದಲ್ಲಿದ್ದ ಹೇಮ ಬೇಕು. ಕಾಮಕೇಳಿಯಾಡಲು ಕಾಯಕ್ಕೆ ಮತ್ತೊಂದು ಕಾಯಬೇಕು. ಇದು ಮನವೆಂಬ ಮಾಯೆಯ ಇಚ್ಛೆ. ಕಾಯದ ಇಚ್ಛೆ ಅಲ್ಲವೇ ಅಲ್ಲ.

ಕಾಯ ಕಾಮದ ಸಂಗ ತೊರೆಯಬೇಕಾದರೆ, ಹೇಮದ ಇಚ್ಛೆಯನ್ನು ತೊರೆಯಬೇಕಾದರೆ ಕಾಯವನ್ನು ಆವರಿಸಿದ ಮನ, ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯದ ಸಂಗ ಮಾಡಬೇಕು. ಅರಿವಿನ ಕಾಯವೆಂದರೆ ಅದು ಗುರು ಕಾಯ; ಗುರುದೇವನ ಕಾಯ; ಮಹಾದೇವನ ಕಾಯ.

ಮನವೆಂಬ ಮಾಯೆಯ ಕಾಯವೂ ಕಾಣುವುದಿಲ್ಲ. ಅರಿವೆಂಬ ಗುರುದೇವನ ಕಾಯವೂ ಕಾಣುವುದಿಲ್ಲ. ಆದರೆ ಅರಿವಿಗೆ ನಿಲುಕುತ್ತದೆ. ಕಾಯಕ್ಕೆ ಮನದ ಪರಿಚಯವಿದೆಯೇ ಹೊರತು, ಕಾಯದಲ್ಲಿಯೇ ಸಂಗಮವಾದ ಅರಿವಿನ ಪರಿಚಯವಿಲ್ಲ.

ಮನ ಅರಿವಿನ ಪರಿಚಯ ಮಾಡಿಕೊಂಡು ಆ ಅರಿವೇ ತಾನಾದ ಮನವೇ ಮಹಾದೇವ. ಈತನ ನೆಲೆಯಲ್ಲಿದ್ದ ಕಾಯವೇ ಅರಿವಿನ ಕಾಯ. ಮಹಾದೇವನಿದ್ದ ಕಾಯ. ಸದಾ ಅರಿವಿನ ಧರ್ಮವನ್ನು ಮಾತ್ರ ಪಾಲಿಸುವ ಬುದ್ಧ ಕಾಯ.

ನಿಮ್ಮ ನಾಮ ನೆಲೆಯಾಗಿಪ್ಪವರ ತೋರಾ ಅಯ್ಯಾ ನಿಮ್ಮ ಧರ್ಮ ಕಪಿಲಸಿದ್ಧ ಮಲ್ಲಿಕಾರ್ಜುನಾ, ಅವರ ಪಾದವ ತೋರಿ ಬದುಕಿಸಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಮಹಾದೇವನೊಂದಿಗೆ ಮಾತನಾಡಿದ್ದಾರೆ.

ಕಾಯವನ್ನು ಆವರಿಸಿದ ಮನ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ಇವರಿಬ್ಬರು ಕಾಯದಲ್ಲಿಯೇ ಮಾತನಾಡುವ ಅಪರೂಪದ ಪ್ರಸಂಗವನ್ನು ಕಾಯ ಸಾಕ್ಷಿಯಾಗಿಯೇ ವೀಕ್ಷಿಸಬೇಕು. ಇದು ಘಟಿಸಬೇಕಾದರೆ ಕಾಯಕ್ಕೆ ಕಾಮದ ಸಂಗ ಬೇಸರವಾಗಬೇಕು. ಹೇಮದ ಇಚ್ಛೆಯಿಂದ ದೂರಸರಿಯಬೇಕು. ಇದು ಕಾಯದಲ್ಲಿ ಉಂಟಾದ ಅಜ್ಞಾನವೆಂದು ಮನಕ್ಕೆ ಹೊಳೆಯಬೇಕು.

ಕಾಮ ಮತ್ತು ಹೇಮದ ಇಚ್ಛೆಗಾಗಿ ಹಗಲಿರುಳು ಎನ್ನದೆ ಕಾಯವನ್ನು ಬಳಲಿಸುತ್ತಿರುವ ಮನಕ್ಕೆ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಸಂಗ ಮಾಡಬೇಕೆಂಬ ಉತ್ಕಟ ಇಚ್ಛೆ ಉಂಟಾಗಬೇಕು. ಆಗ ಕಾಮ ಮತ್ತು ಹೇಮವೆಂಬ ಎರಡು ವಿಷಯಗಳು ಮನಕ್ಕೆ ತೃಣವಾಗುತ್ತವೆ. ಸದಾ ಅರಿವಿನ ಪರಮ ಸುಖ ಉಣ್ಣಲು ಮನ ಹಾತೊರೆಯುತ್ತದೆ.

ಮನ ಅರಿವು ಕಾಯ, ಕಾಯದಲ್ಲಿಯೇ ಒಂದಾಗಿ ತ್ರಿಕೂಟ ಸಂಗಮವಾಗುತ್ತದೆ. ಕಾಯ ಕೈಲಾಸವಾಗುತ್ತದೆ; ಸದಾ ಅರಿವಿನ ಧರ್ಮ ಪಾಲಿಸುತ್ತದೆ. ಹೀಗೆ ಸದಾ ಅರಿವಿನ ಧರ್ಮವನ್ನು ಪಾಲಿಸುವ ಕಾಯ ಇತರ ಕಾಯಗಳಿಗೆ ಕಾಣುವುದು ದುರ್ಲಭ. ಅಂತಹ ಅರಿವಿನ ಕಾಯಗಳನ್ನು ಇತರ ಕಾಯಗಳು ಗುರುತಿಸುವುದು ಕೂಡ ಸಾಧ್ಯವಾಗುವುದಿಲ್ಲ. ಏಕೆಂದರೆ ಅದು ಕಾವಿ ಕಾಶಾಯಗಳನ್ನು ಧರಿಸಿರುವುದಿಲ್ಲ. ಸಕಲ ಕಾರ್ಯಗಳಂತೆ ಸಹಜವಾಗಿರುತ್ತದೆ. ಇಂತಹ ಅರಿವಿನ ಸಹಜ ಕಾಯದ ದರುಶನ ಮಾಡಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡು ತಂದೆ ಕಪಿಲಸಿದ್ಧ

ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

**437**

**ಕಾಮಿನಿಯೆಂಬಾಯಕನ ಕರದಲ್ಲಿ ಒಪ್ಪಿಹ**
**ಲೋಕಂಗಳು ಹಲವು ಕಂಡಾ, ಅವ್ವ.**
**ಶೂಲದಾಕೃತಿಯಲ್ಲಿ ಮುನ್ನೂರು ದಳದಲ್ಲಿ**
**ಮೋಹಿಸುತ್ತಿರ್ದವು ಕಂಡಾ,**
**ನಾಮ ನಾಮವೆಂಬುದರೊಳಗೆ ನಿರ್ನಾಮವಾಗಿದ್ದ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ತನುವಿನ ಆಯಕಟ್ಟಿನ ಸ್ಥಾನಗಳನ್ನು ತನ್ನ ವಶಕ್ಕೆ ತೆಗೆದುಕೊಂಡು, ತನುವನ್ನೇ ತನ್ನ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು ಅಜ್ಞಾನದ ರಾಜ್ಯಭಾರ ಮಾಡುತ್ತಿರುವ ಕಾಮಿನಿಯ ಹಿಡಿತದಲ್ಲಿವೆ ಲೋಕದ ಹಲವಾರು ತನುಗಳು.

ಅವ್ವ. ನೀನು ತನುವನ್ನು ಹಡೆದೆ. ನೀನು ಹಡೆದ ತನು ನಿನ್ನನ್ನು ಹಡೆದವ್ವ ಎಂದು ತಿಳಿಯದ್ದಕ್ಕಾಗಿ, ತಿಳಿಯದ ಆ ತನುವನ್ನೇ ಕಾಮಿನಿಯಾಗಿ ನಿನ್ನ ಹಿಡಿತದಲ್ಲಿ ಇಟ್ಟುಕೊಂಡೆ.

ನೀನು ತನುವನ್ನು ಮೋಹಿಸುವ ನಿನ್ನ ಮೋಹವೇ ವಿಚಿತ್ರ. ಹಡೆದು ತಾಯಿ ಅನ್ನಿಸಿಕೊಂಡೆ. ಜನ್ಮ ಪಡೆದು ಮಗ, ಮಗಳು ಅನ್ನಿಸಿಕೊಂಡೆ. ತನುವನ್ನು ಮದುವೆಯಾಗಿ ಹೆಂಡತಿ ಎನ್ನಿಸಿಕೊಂಡೆ. ಗಂಡ ಎನ್ನಿಸಿಕೊಂಡೆ. ಸೊಸೆ ಅತ್ತೆ ಮಾವ ಮೈದುನ ತಂಗಿ ಅಕ್ಕ ಅತ್ತಿಗೆ ನೆಗೆಣ್ಣೆ ಅಣ್ಣ ತಮ್ಮ ತಂದೆ ಬಂಧು ಬಳಗ , ಒಂದೇ ಎರಡೇ? ಹಲವಾರು ಅವತಾರ ನಿನ್ನದು. ಆದರೆ ತನು ಮಾತ್ರ ಒಂದೇ! ಅದರ ಚರ್ಮದಲ್ಲಿ ಕಣ್ಣು ಕಿವಿ ಮೂಗು ನಾಲಿಗೆ ಕೂಡಾ ಒಂದೇ. ತನುವಿನಲ್ಲಿ ಹರಿಯುವ ರಕ್ತ ಒಂದೇ. ಮಾಂಸ ಒಂದೇ. ಮಜ್ಜಾ ಮೇದಸ್ಸು ಅಸ್ತಿಗಳು ಕೂಡಾ ಒಂದೇ. ರೋಮ ನಾಳಗಳು ಕೂಡಾ ಒಂದೇ. ಇವುಗಳಿಗೆ ಹೆಣ್ಣು ಗಂಡೆಂಬ ಹೆಸರೇ ಇಲ್ಲ. ಆದರೂ ನಿನ್ನ ದಯೆಯಿಂದ ಹೆಣ್ಣು ಗಂಡು ಎನ್ನುವ ಅಜ್ಞಾನ, ತನುವನ್ನು ಬಲವಾಗಿ ಹಿಡಿದಿದೆ.

ಕಾಯದ ಕಾಮಿನಿಯಾಗಿ ಕಾಯವನ್ನು ಮೋಹಿಸುತ್ತಿರುವ ನಿನ್ನ ಮೋಹವೇ ವಿಚಿತ್ರ. ನಿನ್ನ ಮೋಹದ ಪಾಶ ತನುವನ್ನು ಮೂರು ದಳಗಳಲ್ಲಿ ಸುತ್ತಿಕೊಂಡಿದೆ ತಾಯಿ. ಅದನ್ನೂ ಬಿಡಿಸಿಕೊಂಡು, ಹೆಸರಿಲ್ಲದೆ ಅರಿವಿನ ಸರದಾರನನ್ನು ಸೇರುವುದು ಬಲು ಜಟಿಲ ತಾಯಿ.

ನನ್ನನ್ನು ಹಡೆದ ಹಡೆದವ್ವ ನೀನು. ನಿನ್ನನ್ನು ನನ್ನನ್ನು ಹಡೆದ ಅರಿವಿನ ತಂದೆ ಒಬ್ಬನೇ. ಅವನಿಗೆ ಹೆಸರಿಲ್ಲ. ಅವನಿಗೆ ಕಾಯವಿಲ್ಲ. ಅವನು ಹಡೆದ ನಿನಗೂ ಕಾಯವಿಲ್ಲ. ಮನವೆಂಬ ಕಾಮಿನಿಗೂ ಕಾಯವಿಲ್ಲ. ಆದರೆ ಏನು ಮಾಡುವುದು? ಅರಿವಿನ ತಂದೆಯನ್ನು ಮರೆತೆ. ಆತ ಹಡೆದ ಕಾಯಕ್ಕೆ ಕಾಮಿನಿಯಾಗಿ ಕಾಡುತ್ತಿರುವೆ ನೀನು.

ಕಾಮಿನಿಯೆಂಬ ಕಾಣಬಾರದ ಕಾಯವನ್ನು, ಕಾಣಬರುವ ಕಾಯವನ್ನು ಹಡೆದ ತಂದೆ ಮಾತ್ರ ಒಬ್ಬನೇ. ಕಾಯವನ್ನು ಹಡೆದು ಅಕಾಯನಾಗಿ ಹೆಸರೇ ಇಲ್ಲದ ಅರಿವಿನ ಅರಸನಾಗಿ ಕಾಯವನ್ನು ಕಾಪಾಡುತ್ತಿದ್ದಾನೆ. ಕಾಯವನ್ನು ಆವರಿಸಿದ ಕಾಮಿನಿಯೆಂಬ ಅಕಾಯವನ್ನೂ ಕಾಪಾಡುತ್ತಿದ್ದಾನೆ. ಆತನಿಗೆ ನಾಮವಿಲ್ಲ. ಆತ ಒಡಲೊಡೆಯ. ಕಾಮಿನಿಯಿಂದಾಗಿ ಒಡಲಿಗೆ

ನಾನಾ ರೀತಿಯ ನಾಮ. ಹಲವಾರು ಹೆಸರುಗಳಿಂದ ಒಡಲು ಒಡಲಿನಿಂದಲೇ ಕರೆಯಿಸಿಕೊಳ್ಳುತ್ತದೆ. ಆ ಕರೆಯುವ ಕೂಗಿಗಾಗಿ ಒಡಲಲ್ಲಿ ನವರಸಗಳು ಹುಟ್ಟಿವೆ.

ಇದು ಕಾಮಿನಿಯ ಮಹಿಮೆ! ಆದರೆ ಕಾಯದಲ್ಲಿ ಬ್ರಹ್ಮರಸ ಮಾತ್ರ ಇದೆ. ನವರಸಗಳು ಕಾಯವನ್ನು ಆವರಿಸಿಕೊಂಡಿವೆ. ಕಾಯದಲ್ಲಿಯೇ ಸಂಗಮವಾದ ನಾಮವಿಲ್ಲದ ಅರಿವಿನ ಅರಸ ಕಾಯಕ್ಕೆ ಪರಿಚಯವಾದರೆ ಸಾಕು, ಆತ ಬ್ರಹ್ಮರಸವನ್ನು ಕುಡಿಸುತ್ತಾನೆ. ಕಾಯಕ್ಕೆ ಅಂಟಿದ ಭ್ರಮಾರಸಗಳು ಉದುರಿ ಬೀಳುತ್ತವೆ.

**438**

**ಕಾಮಿಸಿದೆನಯ್ಯಾ ಬಸವಣ್ಣನ ಭಕ್ತಿಗೆ;**
**ಕಾಮಿಸಿದೆನಯ್ಯಾ ಬಸವಣ್ಣನ ಯುಕ್ತಿಗೆ;**
**ಕಾಮಿಸಿದ ಕಾಮವೆ ಕೈಸಾರಿತ್ತಯ್ಯಾ, ಬಸವಣ್ಣನ ಕರುಣದಿಂದ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

''ಭಕ್ತಿ ಭಂಡಾರಿ ಬಸವಣ್ಣ'' ಎಂದು ಇಡೀ ನಾಡೇ ಕರೆಯುತ್ತದೆ. ಬಸವಣ್ಣನವರು ಯಾರಿಗೆ ಭಕ್ತಿ ಮಾಡಿದರು? ಅವರು ಭಂಡಾರದ ಮಂತ್ರಿಯಾಗಿ ಬಿಜ್ಜಳನ ರಾಜ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಹೀಗಾಗಿ ಅವರನ್ನು ಶರಣರು ಭಕ್ತಿ ಭಂಡಾರಿ ಬಸವಣ್ಣ ಎಂದು ಕರೆದರೆ ಹೇಗೆ? ಇದು ಶುದ್ಧ ತಪ್ಪು.

ಭಂಡಾರ ಎಂದರೆ ಸಂಪತ್ತು. ತನುವಿನ ಸಂಪತ್ತು. ತನುವಿನಲ್ಲಿಯೇ ಸಂಗಮವಾದ ಅರಿವಿನ ಸಂಪತ್ತು ಆ ಸಂಪತ್ತಿನ ಒಡೆಯನೆಂದರೆ ಸಂಗಯ್ಯ. ಈತ ಕಾಯದಲ್ಲಿಯೇ ಇದ್ದಾನೆ. ಕಾಯದೊಂದಿಗೆ; ಕಾಯವನ್ನು ಆವರಿಸಿದ ಮನದೊಂದಿಗೆ ಮಾತನಾಡುತ್ತಾನೆ. ಈತನ ಮಾತು ವೇದವಾಕ್ಯ. ಹಗಲಿರುಳು ಎನ್ನದೆ ಮನಕ್ಕೆ ಪಾಠ ಮಾಡುತ್ತಾನೆ. ಈತ ಮಾಡಿದ ಪಾಠವನ್ನು ಮನ ತನುವಿನೊಂದಿಗೆ ಆಲಿಸಬೇಕು. ಆತನಿಗೆ ಮನ ಶರಣು ಹೋಗಿ ಶರಣನಾಗಬೇಕು. ಭಕ್ತಿ ಮಾಡಬೇಕು. ದಾಸಾನು ದಾಸನಾಗಬೇಕು.

ಹೀಗೆ ಬಸವಣ್ಣ ತನುವಿನಲ್ಲಿಯೇ ತನ್ಮಯವಾದ ಅರಿವಿನ ಸಂಗಯ್ಯನಿಗೆ ಭಕ್ತಿ ಮಾಡಿದ. ಭಕ್ತಿ ಭಂಡಾರಿ ಬಸವಣ್ಣ ಎಂದು ಶರಣರಿಂದ ಕರೆಯಿಸಿಕೊಂಡ.

ತನು ಮಹಾಜ್ಞಾನಿಯಾಗಬೇಕು ಎಂದು ಬಯಸುವ ತನುಗಳಿಗೆ ಇದು ಅತ್ಯಂತ ಸರಳ ಸೂತ್ರ. ಇಂತಹ ಸರಳ ಸೂತ್ರವನ್ನು ಪಾಲನೆ ಮಾಡಿ ಏಳುನೂರಾ ಎಪ್ಪತ್ತು ಜನ ಕೆಲವೇ ವರ್ಷಗಳಲ್ಲಿ ಮಹಾಜ್ಞಾನಿಯಾದರು. ಅಮರ ಗಣಂಗಳು ಎಂದು ಕರೆಯಿಸಿಕೊಂಡರು. ಅವರಲ್ಲಿ ಸಿದ್ಧರಾಮ ಶಿವಯೋಗಿಗಳು ಕೂಡಾ ಒಬ್ಬರು.

ಬಸವಣ್ಣನ ಭಕ್ತಿ ಸೂತ್ರವನ್ನು ಸಿದ್ಧರಾಮ ಶಿವಯೋಗಿ ಕಾಮಿಸುತ್ತಾನೆ. ಆ ಸೂತ್ರದನ್ವಯ ಅಂತರಾಳಕ್ಕೆ ಪ್ರವೇಶ ಮಾಡಿ ಶಿವಯೋಗಿ ಎಂದು ಕರೆಯಿಸಿಕೊಳ್ಳುತ್ತಾನೆ. ಬಸವಣ್ಣನ ಯುಕ್ತಿಯನ್ನು ಕಾಮಿಸುತ್ತಾನೆ. ಕಾಮಿಸಿದ ಕಾಮ ಕೈಗೆಟಕುತ್ತದೆ. ಬಸವಣ್ಣನ ಕರುಣದಿಂದ.

ಬಸವರಸನ ಪ್ರೇಮ ಅನನ್ಯವಾದುದು. ಅದು ಅಪ್ರಮಾಣ. ಅದು ಅಗೋಚರ. ಕಲ್ಯಾಣಕ್ಕೆ ಬಂದ ಒಂದು ಲಕ್ಷ ತೊಂಬತ್ತಾರು ಸಾವಿರ ಜ್ಞಾನಾಸಕ್ತರನ್ನು ಪ್ರೇಮದಿಂದ ನೋಡಿದ. ಶರಣು ಶರಣಾರ್ಥಿ ಎಂದು ತಲೆಬಾಗಿ ನಮಸ್ಕರಿಸಿದ. ಆತನಿಗೆ ಸಕಲರೂ ಸಾಕ್ಷಾತ್

ಸಂಗಮನಾಥನಾಗಿಯೇ ಕಂಡರು. ಹೀಗಾಗಿ ಸಕಲರನ್ನೂ ಪ್ರೇಮದಿಂದ ಮಾತನಾಡಿದ.

ಭಕ್ತಿ ಎಂದರೆ ಯುಕ್ತಿಯಿಂದ ತಿಳಿಯುವುದು. ತನುವಿನ ಅರಿವನ್ನು ತನುವನ್ನು ಆವರಿಸಿದ ಮನದಿಂದ ತಿಳಿಯುವುದು. ಅರಿವನ್ನು ತಿಳಿಯಲು ಹೋದ ಮನವೇ ಘನಮನವಾಗುವುದು. ಮನ ಅರಿವಿಗೆ ಭಕ್ತಿ ಮಾಡಿ, ಆ ಅರಿವೇ ತಾನಾಗುವುದು.

ಈ ಯುಕ್ತಿಯನ್ನು ಪಾಲಿಸಿದವನೇ ಶರಣ. ಹೀಗಾಗಿ ಸಕಲರೂ ಬಸವಣ್ಣನ ಭಕ್ತಿಯನ್ನು ಕಾಮಿಸಿದರು. ಆತನ ಯುಕ್ತಿಯನ್ನು ಕಾಮಿಸಿದರು. ಕಾಮಿಸಲು ಹೋದ ಮನ ಘನಮನವಾಗಿ ನಿಷ್ಕಾಮಿಯಾಯಿತು.

**439**

**ಕಾಮುಖವಳಿದು ಕರಣಂಗಳು ದಮೆ ಒಂದಾಯಿತ್ತಯ್ಯಾ.**
**ವ್ಯೋಮಪ್ರಸಾದಿ ಸಮಯವಾಯಿತ್ತಯ್ಯಾ ನಿಮ್ಮಿಂದ.**
**ಇನಿತಾದ ಸುಖ ತಾನೊಂದೆ ಲಿಂಗಭಾವವಾಯಿತ್ತಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನಿಮ್ಮ ದಯದಿಂದ ಚೆನ್ನಬಸವಣ್ಣನ ಪ್ರಸಾದವಾಯಿತ್ತು.**

ಕಾಯವೇ ಕೈಲಾಸ. ದೇಹವೇ ದೇಗುಲ. ಕಾಯದಲ್ಲಿ ದೇವರಿದ್ದಾಗ ಕಾಯದಲ್ಲಿ ಕಾಮವಿರಲು ಸಾಧ್ಯವೆ? ಕಾಯದಲ್ಲಿ ಕರಣಂಗಳು ಇರಲು ಸಾಧ್ಯವೆ? ಕಾಯಕ್ಕೆ ಕರಣಂಗಳ ಬಾಧೆಯಾದರು ಇರಲು ಸಾಧ್ಯವೆ? ಕಾಯವನ್ನು ಹೊರಗಣ ಇಂದ್ರಿಯಗಳು ಬಾಧಿಸಲು ಸಾಧ್ಯವೆ? ಸಾಧ್ಯವಿಲ್ಲ.

ಏಕೆಂದರೆ ಕಾಯದಲ್ಲಿ ದೇವರಿದ್ದಾನೆ ಎನ್ನುವುದನ್ನೇ ಕಾಯ ಮರೆತು ಹೋಗಿದೆ. ಹೀಗಾಗಿ ಕಾಯ ಕಾಮದ ಬಾಧೆಯಿಂದ ಬಳಲುತ್ತಲಿದೆ. ಕರಣಂಗಳ ಬಾಧೆಯಿಂದ ಬಳಲುತ್ತಲಿದೆ. ಹೊರಗಣ ಸುಖದುಃಖದಿಂದ ಬಳಲುತ್ತಲಿದೆ.

ಕಾಯ, ವ್ಯೋಮಕಾಯವೆನ್ನುವುದನ್ನೇ ಮರೆತು ಹೋಗಿದೆ. ಕಲ್ಯಾಣದ ಅಣ್ಣ ಬಸವಣ್ಣ ಚೆನ್ನಬಸವಣ್ಣಗಳ ದಯದಿಂದ ನನಗೆ ನಿಮ್ಮ ಪರಿಚಯವಾಯಿತು. ನೀವು ಕಾಯದಲ್ಲಿ ಇರುವುದು ಅವರಿಂದ ನನಗೆ ತಿಳಿಯಿತು. ನಾನು ಕೂಡಾ ಕಾಯವನ್ನು ಆವರಿಸಿರುವುದು ಅವರಿಂದಲೇ ತಿಳಿದುಕೊಂಡೆ. ನಾನು ಅಂದರೆ ಮನವೆಂದು ತಿಳಿಯಿತು. ನೀವು ಎಂದರೆ ದೇವರು ಎಂದು ತಿಳಿಯಿತು. ನಾವಿಬ್ಬರು ಕಾಯದಲ್ಲಿ ಇರುವುದು ಚೆನ್ನಬಸವಣ್ಣನಿಂದ ನನಗೆ ತಿಳಿಯಿತು.

ನೀವು ನಿಷ್ಕಾಮಿ; ನಾನು ಕಾಮಿ. ನಾನು ಕಾಯವನ್ನು ಬಳಸಿ ಕಾಮದಿಂದ ಬಳಲಿದೆ. ನೀವು ಕಾಯದಲ್ಲಿಯೇ ಇದ್ದು, ಕಾಯವನ್ನು ಸೋಂಕದೆ ವ್ಯೋಮ ಕಾಯ ಹೊಂದಿ ಆ ಕಾಯದಿಂದಲೇ ನನಗೆ ಪಾಠಮಾಡಿದಿರಿ:

ಎಲೆ ಮನವೇ, ನಿನಗೆ ಕಾಯವಿಲ್ಲ; ನನಗೂ ಕಾಯವಿಲ್ಲ. ನೀನು ನನ್ನ ಪಟ್ಟದ ಅರಸಿ. ನಾನು ನಿನ್ನ ಅರಸ. ನನಗೆ ನೀನು ಶರಣು ಹೋಗು. ನಾನು ದೇವರಾದರೆ ನೀನು ದೇವಿ. ಜಗನ್ಮಾತೆ. ಮಹಾದೇವನ ಅರಸಿ. ವ್ಯೋಮ ಕಾಯದ ಒಡತಿ.

ಎಲೆ ಮನವೆ, ನೀನು ಕಾಯದ ಸಂಗ ಮಾಡಿರುವುದರಿಂದ ನಿನ್ನನ್ನು ಕಾಮ ಆವರಿಸಿದೆ. ಕ್ರೋಧ ಆವರಿಸಿದೆ. ಲೋಭ ಆವರಿಸಿದೆ. ಮೋಹ ಆವರಿಸಿದೆ. ಮದ ಮತ್ಸರಗಳು ನಿನ್ನನ್ನು

ಹರಿದು ತಿನ್ನುತ್ತಲಿವೆ. ಹಾಗೆಯೇ ನಿರಪರಾಧಿ ಕಾಯವನ್ನೂ ಬಾಧೆಗೆ ಈಡು ಮಾಡಿವೆ.

ಕಾಯವೆಂದರೆ ಕೈಲಾಸ. ಅದು ನನ್ನ ಸೃಷ್ಟಿ. ಕಾಯವನ್ನು ಆವರಿಸಿದ ಮನವೆಂಬ ನೀನು ಕೂಡ ನನ್ನಿಂದಲೇ ಸೃಷ್ಟಿಯಾದೆ. ನೀನು ಹೆಣ್ಣು. ನಾನು ಗಂಡು. ನಾವಿಬ್ಬರೂ ಸತಿ-ಪತಿಗಳು. ನನ್ನ ನಿನ್ನ ವಾಸ ಕೈಲಾಸ. ಅದು ಕಾಯವೇ ಆಗಿದೆ. ನಿನಗೆ ನನ್ನ ಪರಿಚಯವಾಗದ್ದರಿಂದ ಕಾಯ ಕಾಮದ ಮನೆಯಾಗಿದೆ. ಅರಿಷಡ್ವರ್ಗಗಳು ಅದರಲ್ಲಿ ವಾಸ ಮಾಡಿವೆ. ನೀನು ಅವುಗಳ ಸಂಗ ಮಾಡಿರುವಿ. ನಿನ್ನಿಂದಲೇ ಅವು ಸೃಷ್ಟಿಯಾಗಿವೆ. ಒಳ ಹೊರಗೆನ್ನದೆ ಕಾಯವನ್ನೇ ಕಾಡುತ್ತಲಿವೆ.

ಎಲೆ ಮನವೆ, ನಾನಾರೆಂದು ನಿನಗೆ ತಿಳಿದರೆ ಸಾಕು; ಅಲ್ಲಿ ಕಾಮವಿಲ್ಲ. ಕರಣಂಗಳು ಇಲ್ಲ. ಅವು ಜ್ಞಾನ ಕಿರಣಂಗಳಾಗಿ ಕಾಯವನ್ನು ಬೆಳಗುವವು. ಒಳಹೊರಗೆನ್ನದೆ ವ್ಯೋಮ ಪ್ರಸಾದವೇ ಕಾಯದಲ್ಲಿ ಭರಿತವಾಗಿದೆ. ಚೆನ್ನ ಬಸವಣ್ಣನ ದಯದಿಂದ ನನಗೆ ನಿನ್ನ ನೆನಪಾಯಿತು. ಅಂಗ ಅರಿವಿನ ಲಿಂಗವಾಯಿತ್ತು. ಭಾವ ನಿರ್ಭಾವವಾಯಿತ್ತು. ಕಾಯವೇ ಕೈಲಾಸವಾಯಿತ್ತು.

ಸತಿ ಪತಿಗಳಿಬ್ಬರಿಗೆ ಕೈಲಾಸವೆಂಬ ಅರಿವಿನ ಕಾಯವೇ ವಾಸಕ್ಕೆ ಮನೆಯಾಯಿತು. ಈ ಸುಖ ಚೆನ್ನಬಸವಣ್ಣನ ಪ್ರಸಾದದಿಂದ ನನಗೆ ಸಾಧ್ಯವಾಯಿತ್ತು ಎಂದು ಸಿದ್ಧರಾಮ ಶಿವಯೋಗಿಗಳು ಸಕಲ ಓದುಗರಿಗೂ ಈ ಸೂತ್ರ ತಿಳಿಯುವಂತೆ ಬಹಿರಂಗವಾಗಿಯೇ ಹೇಳಿದ್ದಾರೆ. ಅವರ ಈ ಸೂತ್ರದ ಫಲವನ್ನು ತೊಳೆತೊಳೆಯಾಗಿ ಬಿಡಿಸಿಕೊಂಡು ಉಂಡವನೇ ಜಾಣ.

**440**

**ಕಾಯದ ಕರಸ್ಥಲದಲ್ಲಿ ನೀನು ಶೂನ್ಯನಾಗಿಪ್ಪೆಯಲ್ಲಾ, ಎಲೆ ಅಯ್ಯಾ .**
**ಆನಂದ ಸ್ಥಾನದಲ್ಲಿ ಅನಿಮಿಷನಾಗಿಪ್ಪೆ ಅಯ್ಯಾ .**
**ಆದಿಯಾಧಾರ ನಿನಗೆ ತಥ್ಯವಾಗಿಪ್ಪುದಯ್ಯಾ .**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ಅಂಗ, ಅಂಗದ ಗರ್ಭದಲ್ಲಿ ಜನ್ಮ ತಳೆದದ್ದನ್ನು ಅಂಗ ಬಲ್ಲುದು. ಹೀಗಾಗಿ ಅದು ತನ್ನ ತಂದೆ ತಾಯಿಗಳೆಂದು ಅಂಗವನ್ನೇ ತೋರುತ್ತದೆ. ಆದರೆ ಅಂಗದ ಸೃಷ್ಟಿಗೆ ಅಂಗವೇ ಕಾರಣವಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೇ ಅಂಗದ ಜನನಕ್ಕೆ ಕಾರಣವೆಂದು, ಅಂಗದ ಸೃಷ್ಟಿಗೆ ಕಾರಣವೆಂದು ಅಂಗಕ್ಕೆ ಗೊತ್ತಿಲ್ಲ. ಅಂಗವನ್ನು ಆವರಿಸಿದ ಮನಕ್ಕೂ ಗೊತ್ತಿಲ್ಲ.

ಅಂಗದ ಸೃಷ್ಟಿಗೆ ಅಂಗವೇ ಕಾರಣವಾಗಿರಬಹುದು. ಅದೇನಿದ್ದರೂ ಮಾಂಸ ಪಿಂಡಗಳಿಗೆ ಜನ್ಮ ಕೊಡುತ್ತದೆ. ಅಂಗದಲ್ಲಿ ಸಂಗಮವಾಗಿ, ಅಂಗಕ್ಕೆ ಆಧಾರವಾಗಿ, ಅಂಗವನ್ನು ಸೋಂಕದೆ, ಅಂಗವನ್ನು ಬೆಳಗುವ ಲಿಂಗಯ್ಯ , ಆತ ಆದಿ. ಆತ ಅನಾದಿಯೂ ಹೌದು. ಆತ ಅನಾದಿಯಿಂದಲೂ ಅತ್ತತ್ತ. ಹೀಗೇ ಎಂದು ಹೇಳಲು ಬಾರದಾತ.

ಇಡೀ ಬ್ರಹ್ಮಾಂಡದಲ್ಲಿ ಸಂಗಮವಾಗಿದ್ದಾನೆ. ಪ್ರತಿ ಅಂಗದಲ್ಲಿಯೂ ಸಂಗಮವಾಗಿ ಅಂಗಕ್ಕೆ ಗೋಚರಿಸದಂತೆ ಅಂಗಕ್ಕೆ ಆಧಾರವಾಗಿ ಸಕಲ ಅಂಗಗಳನ್ನೂ ನೋಡುತ್ತಿದ್ದಾನೆ. ತಾನೇ ಸೃಷ್ಟಿ ಮಾಡಿದ ಇಡೀ ಬ್ರಹ್ಮಾಂಡವನ್ನು ಅಂಗದ ಮೂಲಕ ನೋಡುತ್ತಿದ್ದಾನೆ. ಅಂಗಕ್ಕೆ ಅರಿಯದಂತೆ, ಅಂಗವನ್ನು ಆವರಿಸಿದ ಮನಕ್ಕೆ ಅರಿಯದಂತೆ ನೋಡುತ್ತಿದ್ದಾನೆ.

ಅಂಗದಲ್ಲಿಯೇ ಸಂಗಮವಾಗಿ ಅಂಗಕ್ಕೆ ಆಧಾರವಾದ ಅರಿವಿನ ಲಿಂಗಯ್ಯನನ್ನು; ಅಂಗವನ್ನು ಆವರಿಸಿದ ಮನ ನೋಡಬಹುದು. ಹೀಗೆ ನೋಡಿದರೆ ಸಾಕು ಮನ

ಘನಮನವಾಗುತ್ತದೆ. ಮನದ ಕತ್ತಲು ಕಳೆದು ಲಿಂಗಯ್ಯನ ಬೆಳಗಿನಲ್ಲಿ ಲೀನವಾಗುತ್ತದೆ.

ಅನಾದಿಯಿಂದಲೂ ಅತ್ತತ್ತಲಿಂದ ಬಂದು ಅಂಗದಲ್ಲಿಯೇ ಸಮಗಮವಾದ ಲಿಂಗಯ್ಯ ಆದಿಯಿಂದಲೂ ಬಂದ ಮನ ಇವರಿಬ್ಬರೂ ಅಂಗಕ್ಕೆ ಆಧಾರವಾಗಿ ಅಂಗವನ್ನು ಬೆಳಗುತ್ತ ಅಂಗದಲ್ಲಿಯೇ ಒಂದಾಗುತ್ತಾರೆ.

ಕಾಯವನ್ನೇ ಕೈಲಾಸ ಮಾಡಿಕೊಂಡು ಕಾಯವನ್ನು ಬೆಳಗಿಂಗೆ ಬೆಳಗಾಗಿ ಬೆಳಗುತ್ತ ಕಾಯದಲ್ಲಿಯೇ ವಾಸ ಮಾಡುತ್ತಿರುವ, ಕಾಯದಲ್ಲಿಯೇ ಧ್ಯಾನಾಸಕ್ತನಾಗಿರುವ ಲಿಂಗಯ್ಯ ಮನಕ್ಕೆ ದರುಶನ ನೀಡುತ್ತಾನೆ. ಅಂಗವನ್ನು ಆವರಿಸಿದ ಮನ, ಅಂಗವನ್ನೇ ಭಕ್ತನನ್ನಾಗಿಸಿಕೊಂಡು ಲಿಂಗಯ್ಯನಿಗೆ ಶರಣು ಹೋಗುತ್ತದೆ.

ಶರಣ ಸತಿಯಾಗಿ ಲಿಂಗ ಪತಿಯಾಗಿ, ಸತಿ ಪತಿಗಳು ಕಾಯವನ್ನೇ ಮಹಾಮನೆಯನ್ನಾಗಿಸಿಕೊಂಡು ಕಾಯದಲ್ಲಿಯೇ ವಾಸ ಮಾಡುತ್ತಾರೆ. ಆಗ ಪ್ರತಿ ಕಾಯದ ಕರಸ್ಥಲದಲ್ಲಿಯೂ ಶೂನ್ಯನಾಗಿ ಬೆಳಗಿಂಗೆ ಬೆಳಗುವ ಬೆಳಕು ಕಾಯಕ್ಕೆ ಕಾಣುತ್ತದೆ. ಹೀಗೆ ಕಂಡ ಕಾಯವೇ ಧನ್ಯ. ಅದೇ ಶರಣ ಕಾಯ.

ಕಾಯದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಶರಣು ಹೋದ ಶರಣ ಕಾಯ ಸದಾ ಆನಂದ ಸ್ಥಾನದಲ್ಲಿರುತ್ತದೆ; ಅನಿಮಿಷನಂತೆ. ಆದಿಯಾಧಾರ ತಾನೇ ಆಗಿ ಪರಮಾನಂದದಿಂದ ಇರುತ್ತದೆ.

**441**

**ಕಾಯದ ಹೊರಕಣ್ಣ ಮುಚ್ಚಿ**
**ಮನ ಭಾವದರಿವಿನ ಒಳಕಣ್ಣ ತೆರೆದು**
**ಬಂದಾನೆಂಬ ಪರವಶಕ್ಕೆ ಕಿವಿಯಾಂತು ಕೇಳುತ್ತಿದ್ದೇನೆ.**
**ಅದೆತ್ತಣಿಂದ ಸುಳಿದನೆಂದರಿಯೆನಯ್ಯಾ .**
**ಅರುಹಿನ ನೇತ್ರಕ್ಕೆ ಶರ್ವನ ಪ್ರತಿಬಿಂಬ ಸೂಚಿಸಿ ಹೊಳೆದಡೆ**
**ಕಣ್ದುಂಬಿ ನೋಡಿದೆ ಮನದುಂಬಿ ನೆನೆದೆ,**
**ಆ ಪ್ರತಿಬಿಂಬವಿಡಿದು**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವೆನು.**

ಕಾಯಕ್ಕೆ ಹೊರಕಣ್ಣು ಒಳಕಣ್ಣು ಕಣ್ಣು ಎಂಬ ಮೂರು ಕಣ್ಣುಗಳಿವೆ. ಹೊರಕಣ್ಣು ನನ್ನದಾದರೆ ಒಳಕಣ್ಣು ಶಿವನದು; ಕಣ್ಣು ಕಾಯಕ್ಕೆ ಸಂಬಂಧಿಸಿದ್ದು. ಹೀಗೆ ಮೂರು ಕಣ್ಣುಗಳಿವೆ.

ಲೋಕದ ಕಾಯಕ್ಕೆ ಹೊರಕಣ್ಣು ಮತ್ತು ಕಣ್ಣು ಬಳಕೆಯಾಗುತ್ತದೆ. ಶರ್ವನ ಕಣ್ಣು ಹೊರಕಣ್ಣಿಗೆ ಬೋಧಿಸುತ್ತ ಕಾಯದ ಕಣ್ಣಿನಲ್ಲಿ ಬಳಕೆಯಾಗದೆ ಉಳಿದಿದೆ. ಶಿವನ ಕಣ್ಣಿನಲ್ಲಿ ಹೊರಕಣ್ಣು ಸಂಗಮವಾಗಿ ಶಿವನ ಕಣ್ಣಿನಿಂದಲೇ ನೋಡಬೇಕಾಗಿತ್ತು. ಈ ಕಲೆ ಹೊರಕಣ್ಣಿಗೆ ಕರಗತವಾಗದ್ದರಿಂದ ಕೇವಲ ಹೊರಕಣ್ಣು ಮಾತ್ರ ಕಾಯದ ಕಣ್ಣಿಗೆ ಬಳಕೆಯಾಗುತ್ತದೆ.

ಕಾಯದ ಕಣ್ಣು ಕನ್ನಡಕವಿದ್ದಂತೆ. ಅದು ಹೊರಕಣ್ಣಿಗೂ ಬಳಕೆಯಾಗುತ್ತದೆ. ಶಿವನ ಕಣ್ಣಿಗೂ ಬಳಕೆಯಾಗುತ್ತದೆ. ಕಾಯದ ಕಣ್ಣು ಶಿವನ ಕಣ್ಣಿಗೆ ಹೊರಕಣ್ಣಿಗೆ ಒಂದು ಉಪಕರಣ ಮಾತ್ರ. ಶಿವ ಕಣ್ಣಿನ ದೃಶ್ಯ , ಹೊರಕಣ್ಣಿನ ದೃಶ್ಯ ಕಾಯದ ಕಣ್ಣಿನಲ್ಲಿ ಆಶ್ರಯ ಪಡೆದುಕೊಂಡಿವೆ.

ಒಟ್ಟಾರೆ ಕಾಯಕ್ಕೆ ಮೂರು ಕಣ್ಣುಗಳು. ಈ ಮೂರು ಕಣ್ಣುಗಳು ಗೋಚರಕ್ಕೆ ಬಂದ ಕಾಯವೇ ಮುಕ್ಕಣ್ಣನ ಕಾಯ.

ಕಾಯದ ಹೊರಕಣ್ಣ ಮುಚ್ಚಿ ಮನ ಭಾವದರಿವಿನ ಒಳಕಣ್ಣ ತೆರೆದು ಕಣ್ಣಿನ ತಂದೆ ಕಣ್ಣಪ್ಪ ಬಂದಾನೆಂದು ಕಣ್ಣನ್ನೇ ಕಿವಿಯನ್ನಾಗಿಸಿಕೊಂಡು ಭಾವಪರವಶನಾಗಿ ಕೇಳುತ್ತಿದ್ದೇನೆ.

ಅದೆತ್ತಣಿಂದ ಸುಳಿದನೆಂದು ಅರಿಯೆನಯ್ಯಾ. ಅರಿವಿನ ಕಣ್ಣಿಗೆ ಶಿವನ ಪ್ರತಿಬಿಂಬ ತಾಕಿ ಹೊಳೆದಡೆ ಕಣ್ದುಂಬಿ ನೋಡಿದೆ; ಮನದುಂಬಿ ನೆನೆದೆ. ಆ ಪ್ರತಿಬಿಂಬವಿಡಿದು ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೂಡುವೆನು.

ಸಿದ್ಧರಾಮ ಶಿವಯೋಗಿಗಳ ದಿವ್ಯ ಸೂತ್ರವಿದು. ಕಾಣುವ ಹೊರಕಣ್ಣು ಕಣ್ಣಲ್ಲ; ಅದು ಕುರುಡು ಕಣ್ಣು. ಹೇಗೇಗೊ ಕಾಣುತ್ತದೆ. ಲೋಹವನ್ನು ಕಬ್ಬಿಣ ಚಿನ್ನ ಬೆಳ್ಳಿ ತಾಮ್ರ ಕಂಚು ಎಂದು ನೋಡಿ ಜಗಳಕ್ಕೆ ದಾರಿ ಮಾಡಿಕೊಳ್ಳುತ್ತದೆ. ಲೋಹವನ್ನು ಲೋಹವೆಂದು ನೋಡುವ ಶಕ್ತಿ ಹೊರಕಣ್ಣಿಗೆ ಇಲ್ಲ. ಒಳಕಣ್ಣಿಗೆ ಮಾತ್ರ ಇದೆ.

''ನೋಡೂದನ್ನು ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ; ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ. ಕೂಡದ ಅಗಲದ ಕೂಟದ ಸುಖವನ್ನು ಗುಹೇಶ್ವರಾ ನಿಮ್ಮ ಶರಣ ಮಾತ್ರ ಬಲ್ಲ'' ಎಂದು ಹೊರಕಣ್ಣನ್ನು ಕುರಿತು ಹೇಳುತ್ತಾ ಪ್ರಭುದೇವರು ಒಳಕಣ್ಣನ್ನು ಪರಿಚಯಿಸಿದ್ದಾರೆ.

ಒಳಕಣ್ಣು ಕಲ್ಲ ಮೇಲೆ ಪಾದವನು ಊರಿ ನಿಲ್ಲುತ್ತದೆ. ಹೊರ ಕಣ್ಣು ಕಲ್ಲನ್ನೇ ದೇವರೆಂದು ಕೈಮುಗಿಯುತ್ತದೆ. ಒಳಕಣ್ಣನ್ನು ಬಳಕೆ ಮಾಡಿದ ಪಾದ ಕಲ್ಲ ಮೇಲೆ ನಿಂತರೆ ಹೊರಕಣ್ಣನ್ನು ಬಳಸಿದ ನೆತ್ತಿ ಕಲ್ಲನ್ನೇ ದೇವರೆಂದು ಬಾಗಿ ನಮಸ್ಕರಿಸುತ್ತದೆ. ಬಾಗಿದ ನೆತ್ತಿಯನ್ನು ಕಂಡ ಪಾದ ಗಹಗಹಿಸಿ ನಗುತ್ತದೆ.

ಕಲ್ಲನ್ನು ಕಲ್ಲೆಂದು ಗುರುತಿಸಿ ಕಲ್ಲ ಮೇಲೆ ನಿಲ್ಲುವ ಪಾದವೆತ್ತ, ಕಲ್ಲನ್ನೇ ದೇವರೆಂದು ಗುರುತಿಸಿ ಕಲ್ಲಿಗೆ ಬಾಗುವ ನೆತ್ತಿಯೆತ್ತ? ಯಾವುದರಲ್ಲಿ ಅರಿವಿದೆ; ಯಾವುದರಲ್ಲಿ ಅರಿವಿಲ್ಲ. ನೋಡೂದನ್ನೇ ನೋಡಿ ಕಲ್ಲ ಮೇಲೆ ಕಾಲನೂರಿ ನಿಲ್ಲುತ್ತದೆ ಒಳಕಣ್ಣು, ನೋಡೂದನ್ನು ನೋಡಲರಿಯದೆ ಕಟೆದ ಕಲ್ಲನ್ನೇ ದೇವರು ಎಂದು ತಿಳಿದು ತಲೆಯನ್ನು ಬಾಗುವಂತೆ ಮಾಡುತ್ತದೆ ಹೊರಕಣ್ಣು. ಕಲ್ಲನ್ನು ಕೆತ್ತಿದರೇನು ಕೆತ್ತದಿದ್ದರೇನು? ಕಲ್ಲು ಕಲ್ಲಲ್ಲವೆ? ಕೆತ್ತಿದ ಕಲ್ಲನ್ನು ದೇವರೆಂದು ತಿಳಿಯುವ ಹೊರಕಣ್ಣಿಗೆ ಕಲ್ಲಿನ ದರುಶನ ಆಗುವುದೇ ಇಲ್ಲ.

ಹೊರಕಣ್ಣು ಒಳಕಣ್ಣಿನಲ್ಲಿ ಸಂಗಮವಾಗಿ ಒಳಕಣ್ಣಿನಿಂದ ನೋಡಿದರೆ ಕೆತ್ತಿದ ಕಲ್ಲು ಕಲ್ಲಾಗಿಯೇ ಕಾಣುತ್ತದೆ. ಕೈಮುಗಿಯಲಿಲ್ಲ; ಬಾಗಲಿಲ್ಲ. ಆಲಯ ನಿರ್ಮಿಸಲಿಲ್ಲ, ಉತ್ಸವ ಮಾಡಲಿಲ್ಲ. ಏಕೆಂದರೆ ಅದು ಅರಿವಿನ ಕಣ್ಣು. ಸಾಕ್ಷಾತ್ ಶಿವನ ಪ್ರತಿಬಿಂಬ. ಕಣ್ತುಂಬಿ ನೋಡಿತು; ಮನ ತುಂಬಿ ಆತನ ಲೀಲೆಯನ್ನು ನೆನೆಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**442**

**ಕಾಯ ಲಿಂಗವೊ ಕಾಯದಲಿ ಸಾರಿಪ್ಪ ಲಿಂಗ ಲಿಂಗವೊ?**
**ಪ್ರಾಣ ಲಿಂಗವೊ ಪ್ರಾಣದಲ್ಲಿ ಸಾರಿಪ್ಪ ಲಿಂಗ ಲಿಂಗವೊ?**
**ಜ್ಞಾನ ಲಿಂಗವೊ ಜ್ಞಾನದ ಮೊನೆಯ ಮೇಲೆ ತೋರುವ ಬೆಳಗು ಲಿಂಗವೊ?**
**ಲಿಂಗ ಪ್ರಾಣ ಪ್ರಾಣ ಲಿಂಗವೆಂಬುದನೆಂತೆಂದರಿಯೆನು.**

**ನಿಮ್ಮ ಕಾಯದ ಕರಸ್ಥಲವ ಸಾರಿದ ಲಿಂಗ**
**ಪ್ರಾಣದೊಳು ವೇದ್ಯವಾದ ಪರಿಯ ಹೇಳಾ ಪ್ರಭುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಕಾಯ, ಪ್ರಾಣ, ಜ್ಞಾನ, ಲಿಂಗ ಎಂಬ ನಾಲ್ಕು ಶಬ್ದಗಳನ್ನು ತೆಗೆದುಕೊಂಡಿದ್ದಾರೆ.

ಕಾಯ ಲಿಂಗವೊ ಕಾಯದಲ್ಲಿ ಸಾರಿಪ್ಪ ಲಿಂಗ ಲಿಂಗವೊ ಎಂದು ಪ್ರಭು ದೇವರನ್ನು ಸಿದ್ಧರಾಮ ಶರಣರು ಪ್ರಶ್ನಿಸಿದ್ದಾರೆ. ಕಾಯದ ಕರಸ್ಥಲವ ಸಾರಿದ ಲಿಂಗ ಪ್ರಾಣದೊಳು ವೇದ್ಯವಾದ ಪರಿಯನ್ನು ಹೇಳಿ ನನ್ನನ್ನು ಕೃತಾರ್ಥನನ್ನಾಗಿಸಿ ಪ್ರಭುವೆ ಎಂದು ಅಲ್ಲಮ ಪ್ರಭುಗಳನ್ನು ಕೇಳಿದ್ದಾರೆ.

ಕಾಯವನ್ನು ಕಾಯವೆಂದು ಮಾತ್ರ ಹೇಳಲು ಸಾಧ್ಯವಿಲ್ಲ. ಕಾಯದಲ್ಲಿ ಪ್ರಾಣವಿದೆ. ಪ್ರಾಣದಲ್ಲಿ ಲಿಂಗವು ಇದೆ. ಕಾಯದಲ್ಲಿ ಜ್ಞಾನವಿದೆ. ಜ್ಞಾನ ಎನ್ನುವುದು ಕೂಡಾ ಬೆಳಗುವ ಒಂದು ಕಾಯವಾಗಿ ಕಾಯದಲ್ಲಿಯೇ ತೋರುತ್ತಲಿದೆ. ಈ ತೋರುವಿಕೆ ಕಾಯಕ್ಕೆ ಮಾತ್ರ ಅರಿವಾಗುತ್ತದೆ.

ಕಾಯವಿದೆ. ಕಾಯವನ್ನು ಪರಿಪೂರ್ಣವಾಗಿ ತಿಳಿಯುವ ಕಾಯವೊಂದು ಕಾಯವನ್ನು ಆವರಿಸಿದೆ. ಕಾಯದ ಸೃಷ್ಟಿಗೆ ಕಾಯವನ್ನು ಆವರಿಸಿದ ಕಾಯದ ಸೃಷ್ಟಿಗೆ ಕಾರಣವಾದ ಅಕಾಯವೊಂದು ಕಾಯದಲ್ಲಿಯೇ ಸಂಗಮವಾಗಿದೆ. ಈ ಕಾಯವೆ ಲಿಂಗ. ಇದನ್ನು ಲಿಂಗ ಕಾಯವೆಂದೂ ಕರೆಯುತ್ತಾರೆ. ಇದು ಪ್ರಾಣದಲ್ಲಿಯೂ ಭರಿತವಾಗಿ ಪ್ರಾಣಕ್ಕೆ ಪ್ರಾಣವಾಗಿ ಪ್ರಾಣಲಿಂಗಿ ಎಂದು ಕರೆಯಿಸಿಕೊಂಡಿದೆ. ಜ್ಞಾನಕಾಯವಾಗಿ ಜ್ಞಾನಲಿಂಗ ಎಂದು ಕರೆಯಿಸಿಕೊಂಡಿದೆ.

ಜಗದಗಲ ಮುಗಿಲಗಲ ವ್ಯಾಪಿಸಿಕೊಂಡ ಲಿಂಗ; ಪಾತಾಳದಿಂದಲೂ ಅತ್ತತ್ತ ಚಾಚಿಕೊಂಡು ಬ್ರಹ್ಮಾಂಡದಿಂದಲೂ ಅತ್ತತ್ತ ಚಿಮ್ಮಿದ ಲಿಂಗ ಅಗಮ್ಯವೆಂದು ಅನ್ನಿಸಿಕೊಂಡಿದೆ. ಅಪ್ರಮಾಣವೂ ಅಪ್ರತಿಮವೂ ಆಗಿದೆ. ಕಾಯದ ಕರಸ್ಥಲಕ್ಕೆ ಬಂದು ಚುಳುಕಾಗಿದೆ. ಕಾಯದಲ್ಲಿ ಅಕಾಯ ಸಂಗಮವಾಗಿ ಕಾಯಕ್ಕೆ ಗುರುವಾಗಿದೆ.

ಕಾಯವನ್ನು ಆವರಿಸಿ ಮನವೆಂಬ ಹೆಸರು ಪಡೆದು ಕಾಯದೊಳಗೆ ಸಂಗಮವಾದ ಗುರು ಕಾಯಕ್ಕೆ ಮನೋಕಾಯ ಶಿಷ್ಯನಾಗಿದೆ. ಸ್ಥೂಲಕಾಯವೆನ್ನುವುದು ಗುರುದೇವನ ಕಾಯಕ್ಕೆ ಶಿಷ್ಯನ ಕಾಯಕ್ಕೆ ಆಶ್ರಯ ನೀಡುವುದರ ಮೂಲಕ ಆಶ್ರಮವೆಂದು ಕರೆಯಿಸಿಕೊಂಡಿದೆ. ಮಠ ಎಂದು ಕರೆಯಿಸಿಕೊಂಡಿದೆ.

ಕಾಯ ಎಂದು ಗುರುತಿಸಿಕೊಳ್ಳುವ ಸ್ಥೂಲಕಾಯವು ಗುರು ಶಿಷ್ಯರನ್ನು ಹೊತ್ತುಕೊಂಡು ನಡೆದಾಡುವ ಮಠ. ನಡೆದಾಡುವ ಆಶ್ರಮ. ನಡೆದಾಡುವ ಬೇರಿಲ್ಲದ ಮರ; ಜ್ಞಾನ ಮರವೆಂದು ಶರಣರಿಂದ ಕರೆಯಿಸಿಕೊಂಡಿದೆ.

**443**

**ಕಾಯವ ನಿಶ್ಚೈಸಲಿಲ್ಲ, ಜೀವವ ನಿಶ್ಚೈಸಲಿಲ್ಲ;**
**ಕಾಯ ಜೀವ ಎರಡಕ್ಕೂ ನೆಲೆಯಿಲ್ಲವಯ್ಯಾ.**
**ಸುಖವ ನಿಶ್ಚೈಸಲಿಲ್ಲ, ದುಃಖವ ನಿಶ್ಚೈಸಲಿಲ್ಲ;**
**ಸುಖ ದುಃಖ ಎರಡಕ್ಕೂ ನೆಲೆಯಿಲ್ಲವಯ್ಯಾ.**

**ರಾಜ್ಯವ ನಿಶ್ಚೈಸಲಿಲ್ಲ , ಲಕ್ಷ್ಮಿಯ ನಿಶ್ಚೈಸಲಿಲ್ಲ;**
**ರಾಜ್ಯ ಲಕ್ಷ್ಮೀ ಎರಡಕ್ಕೂ ನೆಲೆಯಿಲ್ಲವಯ್ಯಾ**
**ಅಭ್ರಚ್ಛಾಯೆ, ಮರೀಚಿಕಾಜಲ, ಮಹೇಂದ್ರಜಾಲವಯ್ಯಾ ನನ್ನದು.**
**ಮನೆ ನನ್ನದು, ಧನ ನನ್ನದು ಎಂಬ ಮರುಳ ಕೇಳಾ-**
**ಕನಸಿನ ಸುಖ ಕಣ್ದೆರೆದಲ್ಲಿ ಹೋಯಿತ್ತು .**
**ಹಾಲುಳ್ಳಲ್ಲಿ ಹಬ್ಬವ ಮಾಡಿ, ಗಾಳಿಯುಳ್ಳಲ್ಲಿ ತೂರಿಕೊಳ್ಳಿರಿ;**
**ಬಳಿಕಲರಸಿದರುಂಟೆ? ಪರಮ ಸುಖವು.**
**ನಿಜಗುರು ಕಪಿಲಸಿದ್ಧ ಮಲ್ಲಿಕಾರ್ಜುನನ**
**ಹರಗೋಲುಳ್ಳಲ್ಲಿ ತೊರೆಯ ದಾಂಟಿದೆ.**

ಕಾಯವನ್ನು ನಿಶ್ಚೈಯಿಸಿದೆ; ಜೀವವನ್ನೂ ನಿಶ್ಚೈಯಿಸಿದೆ. ಇವೆರಡೂ ಶಾಶ್ವತವಲ್ಲ. ಇವೆರಡಕ್ಕೂ ನೆಲೆಯಿಲ್ಲ. ಒಡಲು ಒಡೆಯನದು; ಜೀವ ಒಡಲಿನದು. ಒಡಲು ಜೀವವೆರಡೂ ಒಡೆಯನ ಕೈಯಲ್ಲಿವೆ. ಆದರೆ ಒಡಲೊಡೆಯನ ಪರಿಚಯ ಒಡಲನ್ನು ಆವರಿಸಿದ ಮನಕ್ಕೆ ಇಲ್ಲ. ಮನ ಒಡಲನ್ನು ಆವರಿಸಿದೆ. ಒಡಲಿನೊಂದಿಗೆ ಬೆರೆತು ಒಡಲನ್ನು ಮಾತ್ರ ಬಳಕೆ ಮಾಡುತ್ತಲಿದೆ. ಒಡಲಿಗೆ ಬದಲಾವಣೆಯಿದೆ. ಒಡಲಲ್ಲಿದ್ದ ಜೀವ ಒಡಲಿನೊಂದಿಗೆ ಇಲ್ಲವಾಗುತ್ತದೆ. ಆದರೆ ಮನಕ್ಕೆ ಒಡಲೆಂದರೆ ಇಷ್ಟ; ಜೀವವೆಂದರೂ ಬಲು ಇಷ್ಟ. ಇವೆರಡಕ್ಕೂ ನೆಲೆಯಿಲ್ಲವೆಂದು ಮನಕ್ಕೆ ತಿಳಿಯುತ್ತಿಲ್ಲ.

ಇಲ್ಲವಾಗುವ ಒಡಲು; ಇಲ್ಲವಾಗುವ ಜೀವದೊಂದಿಗೆ ಮನ ಚಿನ್ನಾಟವಾಡುತ್ತಾ ಸುಖ ದುಃಖಗಳನ್ನು ಸವಿಯುತ್ತಲಿದೆ. ಮನಕ್ಕೆ ಸುಖವೆಂದರೂ ಇಷ್ಟ; ದುಃಖವೆಂದರೂ ಬಲು ಇಷ್ಟ. ಹೇಗೆಂದರೆ: ದೇವೇಂದ್ರ ಕಾಮದ ಸುಖ ಭೋಗಿಸಲು ಋಷಿಯ ವೇಷ ಹಾಕಿ ಋಷಿ ಪತ್ನಿಯೊಂದಿಗೆ ಭೋಗಿಸಿದ. ಋಷಿ ದೇವೇಂದ್ರನ ದೇಹಕ್ಕೆ ಶಾಪಕೊಟ್ಟ. ದೇಹದ ತುಂಬಾ ಯೋನಿಗಳಾದವು. ದೇಹದೊಂದಿಗೆ ಸುಖ ಅನುಭವಿಸಿದ್ದು ಮನ; ಋಷಿ ದೇಹಕ್ಕೆ ಶಾಪ ಕೊಟ್ಟಾಗ ಸುಖ ಅನುಭವಿಸಿದ್ದು ಕೂಡಾ ಮನವೇ.

ಅಪರಾಧ ಮಾಡಿದ್ದು ಮನ ಎಂದು ದೇವರ ರಾಜ ದೇವೇಂದ್ರನಿಗೂ ತಿಳಿಯಲಿಲ್ಲ. ಶಾಪಕೊಟ್ಟ ಋಷಿಗೂ ತಿಳಿಯಲಿಲ್ಲ. ಮನ ಒಡಲಿನೊಂದಿಗೆ ಮಾಡಿದ ತಪ್ಪಿಗೆ ಒಡಲು ಶಿಕ್ಷೆ ಅನುಭವಿಸಿತು. ಆದರೆ ಮನ ಸುಖವನ್ನು ನಿಶ್ಚೈಸಲಿಲ್ಲ. ಸುಖ ದುಃಖಗಳೆರಡಕ್ಕೂ ನೆಲೆಯಿಲ್ಲವಯ್ಯಾ.

ರಾಜ್ಯವ ನಿಶ್ಚೈಸಲಿಲ್ಲ, ಲಕ್ಷ್ಮಿಯ ನಿಶ್ಚೈಸಲಿಲ್ಲ: ರಾಜನ ಕೆಲಸವೆಂದರೆ ಮತ್ತೊಬ್ಬ ರಾಜನೊಂದಿಗೆ ಯುದ್ಧ ಮಾಡುವುದು. ಸಿಂಹಾಸನ ಹೆಣ್ಣು ಹೊನ್ನು ಇವುಗಳಿಗಾಗಿ ಮನ ತನುವಿನೊಂದಿಗೆ ಜೊಲ್ಲು ಸುರಿಸುತ್ತದೆ. ಅವೆಲ್ಲ ರಾಜನಲ್ಲಿ ಇದ್ದರೂ ಮತ್ತಷ್ಟು ಸಂಗ್ರಹಿಸುವ ಬಯಕೆ ಮನಕ್ಕೆ. ಸಾವಿನ ಭಯವಿಲ್ಲದೆ ಯುದ್ಧಮಾಡಲು ಒಡಲನ್ನು ಸಿದ್ಧ ಮಾಡುತ್ತದೆ ಮನ. ಸತ್ತರೆ ಒಡಲು ಸಾಯುತ್ತದೆ. ಅದರ ಪ್ರಾಣ ಪಕ್ಷಿ ಹಾರಿಹೋಗುತ್ತದೆ. ಮನಕ್ಕೆ ಭಯವಿಲ್ಲ.

ಸಿದ್ಧಾರ್ಥ ರಾಜನಾಗಿದ್ದ. ನಿಶ್ಚೈಸಿದ. ಇದು ಒಡಲು ಮತ್ತು ಮನದ ಅಜ್ಞಾನವೆಂದು. ಒಡಲು, ಒಡಲೊಡೆಯನ ಸಂಪತ್ತೆಂದು ನಿಶ್ಚೈಸಿದ, ಒಡಲೊಡೆಯನಿಗೆ ಬುದ್ಧ ಎಂದು ಹೆಸರಿಟ್ಟ. ಕಾಯವನ್ನು ಆವರಿಸಿದ ಮನವೆಂಬ ಅಜ್ಞಾನಿಯನ್ನು ಬುದ್ಧನ ಚರಣ ಕಮಲಗಳಿಗೆ ಅರ್ಪಣೆ ಮಾಡಿದ. ಸಿದ್ಧಾರ್ಥ ಇಲ್ಲವಾದ. ಬುದ್ಧ ಹೊರಗೆ ಬಂದ. ಸಾವಿಲ್ಲದ ಸರದಾರ ಎಂದು ಕರೆಯಿಸಿಕೊಂಡ.

ಮನವೆಂದರೆ ಅಭ್ರಚ್ಛಾಯೆ, ಬೆಳಗುವ ಸೂರ್ಯನನ್ನು ಕಾಣದಂತೆ ಮಾಡಿದ ಕರಿಮೋಡ. ಮರೀಚಿಕಾಜಲ, ಮಹೇಂದ್ರಜಾಲವಯ್ಯಾ. ಇಂತಹ ಮನ ಮನೆ ನನ್ನದು, ಧನ ನನ್ನದು ಎಂದು ಒಡಲಿನೊಂದಿಗೆ ನುಡಿಯುತ್ತದೆ. ಇದು ಕನಸಿನ ಸುಖವೆಂದು ತಿಳಿಯುತ್ತಿಲ್ಲ. ಅರಿವಿನ ಕಣ್ದೆರೆದರೆ ಸುಖವಿಲ್ಲ ದುಃಖವಿಲ್ಲ. ಕಾಯವಿಲ್ಲ ಜೀವವಿಲ್ಲ. ರಾಜ್ಯವಿಲ್ಲ ಲಕ್ಷ್ಮಿ ಇಲ್ಲ. ಇವುಗಳಿಗೆ ನೆಲೆಯಿಲ್ಲವಯ್ಯಾ. ಕನಸಿನ ಸುಖ ಕಣ್ದೆರೆದರೆ ಹೋಯಿತ್ತು.

ಕಾಯವಿದ್ದಾಗಲೇ ಕಾಯವನ್ನು, ಕಾಯದ ಜೀವವನ್ನು, ಕಾಯವನ್ನು ಆವರಿಸಿದ ಮನವನ್ನು ತಿಳಿದುಕೊಳ್ಳಿ. ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಅಪ್ಪಿಕೊಳ್ಳಿ. ಕಾಯ ಹೋದ ಬಳಿಕ ಅರಸಲುಂಟೆ ಪರಮ ಸುಖವನು.

ಹಾಲುಳ್ಳಲ್ಲಿ ಹಬ್ಬ ಮಾಡಿಕೊಳ್ಳಿ, ಗಾಳಿಯುಳ್ಳಲ್ಲಿ ತೂರಿಕೊಳ್ಳಿ, ಹರಿಗೋಲುಳ್ಳಲ್ಲಿ ತೊರೆಯ ದಾಂಟಿ ಎಂದು ಸಿದ್ದರಾಮ ಶಿವಯೋಗಿಗಳು ತನ್ನದೇ ಆದ ಓದುಗರಿಗೆ ಅರಿವಿನ ಕಿವಿಮಾತು ಹೇಳಿದ್ದಾರೆ. ಕೇಳಿದವನೇ ಜಾಣ ಓದುಗ.

**444**

**ಕಾಯವಿರೆ ಗುರುವ ನೆರೆವೆನೆಂಬವಂಗೆ ಹೇಳುವೆನಯ್ಯಾ .**
**ತನುವೊಂದೆ ತನುವಾಗಿ, ಧನವೊಂದೆ ಧನವಾಗಿ,**
**ಮನವೊಂದೆ ಮನವಾಗಿ,**
**ಹಿಡಿವ ಗತಿ ಒಂದಾದ ಭಕ್ತಿಯ ಶಿವಕೂಟ ಒಂದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಇರುವಾಗಲೇ ಗುರುದೇವನ ಪರಮ ಸುಖವನ್ನು ಉಣ್ಣುವ ಬಯಕೆ ಕಾಯಕ್ಕೆ ಕಾಯವನ್ನು ಆವರಿಸಿದ ಮನಕೆ ಉಂಟಾಗಲೇಬೇಕು. ಗುರುದೇವನ ಅರಿವಿನ ಪರಮ ಸುಖವನ್ನು ಉಣ್ಣುವ ಬಯಕೆಯಾದ ಕಾಯಕ್ಕೆ ಗುರುದೇವನು ಕಾಯದಲ್ಲಿಯೇ ಇದ್ದ ಸಂಗತಿಯನ್ನು ಹೇಳುವೆನು ಎಂದು ಸಿದ್ಧರಾಮ ಶಿವಯೋಗಿಗಳು ಬಹಿರಂಗವಾಗಿಯೇ ಘೋಷಣೆ ಮಾಡಿದ್ದಾರೆ.

ಅವರ ಈ ಘೋಷಣೆಯನ್ನು ಸಕಲರೂ ಓದಬಹುದು ಆದರೆ ಕಾಯದಲ್ಲಿಯೇ ಸಂಗಮವಾದ ಗುರುದೇವನು ನೀಡುವ ಅರಿವಿನ ಅಮೃತವನ್ನು ಪಾನ ಮಾಡುವ ಬಲವಾದ ಬಯಕೆ ಹುಟ್ಟಬೇಕಲ್ಲ. ಅದು ಎಲ್ಲರಿಗೂ ಸಾಧ್ಯವಾಗದ ಮಾತು. ಬಯಸಿದರೆ ಸಕಲರಿಗೂ ಸಾಧ್ಯವಾಗುವ ಮಾತು.

ತನುವಿನಲ್ಲಿ ತನ್ಮಯವಾದ ತನುವೇ ತನುವಿನ ಸಂಪತ್ತು. ಅದನ್ನೇ ಸಿದ್ಧರಾಮ ಶಿವಯೋಗಿಗಳು ಧನವೊಂದೆ ಧನವಾಗಿ ಎಂದು ಹೇಳಿದ್ದಾರೆ. ಧನವೆಂದರೆ ಭೂಮಿಯಲ್ಲ; ಹೇಮವೂ ಅಲ್ಲ; ಕರೆನ್ಸಿಯೂ ಅಲ್ಲ. ಧನವೆಂದರೆ ತನುವಿನ ಸಂಪತ್ತು. ಅದು ತನುವಿನಲ್ಲಿಯೇ ತನ್ಮಯವಾಗಿದೆ; ಅರಿವಿನ ತನುವಾಗಿ, ತನುವಿನಲ್ಲಿಯೇ ತನ್ಮಯವಾಗಿ ತನುವಿಗೆ ಅರಿವಿನ ಪಾಠ ಮಾಡುತ್ತದೆ.

ಮನ ತನುವಿನ ಮೂಲಕ ಮಾಡುವ ಅಪರಾಧಗಳನ್ನು ತಡೆದು, ತನುವಿಗೂ ಮನಕ್ಕೂ ಬೋಧೆ ಮಾಡುತ್ತದೆ. ತನುವಿನ ತನುವಾಗಿ ಬೋಧಿಸುತ್ತದೆ. ಬೋಧಿಸಲಾಗಿಯೂ ಅಪರಾಧವೆಸಗಿದರೆ, ಮೈದಡವಿ ಮತ್ತೊಮ್ಮೆ ಮಾಡದಿರಲು ಸೂಚಿಸುತ್ತದೆ. ಬಸವಣ್ಣ ತನಗೆ

ತಾನೇ ಕಂಡ ''ಎನ್ನ ತಪ್ಪು ಅನಂತಕೋಟಿ, ನಿಮ್ಮ ಸೈರಣೆಗೆ ಲೆಕ್ಕವಿಲ್ಲ'' ತಂದೆ ಎಂದು ತನುವಿನಲ್ಲಿಯೇ ತನ್ಮಯವಾದ ಅರಿವಿನ ತನುವಿಗೆ ತನುವಿನಿಂದಲೇ ಕೈಮುಗಿದು ಹೇಳಿದ.

ತನು ಒಂದೇ ಆಗಿದ್ದರೂ, ತನುವಿನಲ್ಲಿಯೇ ಇದ್ದ ತನುವಿನ ಸಂಬಂಧ ತನುವಿಗೆ ಗೊತ್ತಿಲ್ಲ. ಧನ ಎನ್ನುವ ಸಂಪತ್ತು ಉಳ್ಳ ತನುವು ಕೂಡಾ ತನುವಿನಲ್ಲಿಯೇ ಇದ್ದರೂ ಧನ ಧನ ಒಂದಾಗುತ್ತಿಲ್ಲ. ಅಂದರೆ ಅರಿವೆಂಬ ಗುರುದೇವನ ತನು ಮನವೆಂಬ ಅಜ್ಞಾನಿ ತನುವನ್ನು ಅಪ್ಪಿಕೊಂಡು ತನ್ನಂತೆ ಮಾಡಿಕೊಳ್ಳುತ್ತಿಲ್ಲ. ಏಕೆಂದರೆ ಮನವೆಂಬ ಅಜ್ಞಾನಿ ತನುವಿಗೆ ಭೂಮಿ ಬೇಕು, ಹೇಮ ಬೇಕು, ವಿಷಯ ಬೇಕು. ಇವು ಮನದ ಸಂಪತ್ತು. ಹಾಗೆಂದು ಮನ ಭಾವಿಸಿದೆ.

ಭೂಮಿ ಹೇಮ ಕಾಮಿನಿ ಎನ್ನುವುದು ಸಂಪತ್ತಲ್ಲ; ಇದು ಜಗಕ್ಕೆ ಇಕ್ಕಿದ ವಿಧಿ. ನಿನ್ನದು ಎನ್ನುವುದು ಜ್ಞಾನ ರತ್ನ. ಅದನ್ನು ಅಲಂಕರಿಸಿದೆಯಾದಡೆ ಎಲೆ ಮನವೆ ನಿನ್ನಂತಹ ಸಿರಿವಂತರು ಯಾರೂ ಇಲ್ಲ ಎಂದು ಪ್ರಭುಗಳು ಹೇಳಿದರು. ತನುವಿನಲ್ಲಿಯೇ ತನ್ಮಯವಾದ ಅರಿವಿನ ತನು ತನುವಿಗೆ ಹೇಳಿತು. ಆದರೂ ತನುವನ್ನು ಆವರಿಸಿದ ಮನವೆಂಬ ತನು, ಧನದ ಮಾತು ಕೇಳಬೇಕಲ್ಲ!

ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನ ಮಾತೇ ಕೇಳದೆ ಇರುವಾಗ ಅದು ಯಾರ ಮಾತೂ ಕೇಳುವುದಿಲ್ಲ. ತನು ತನುವಿನ ಕೂಟಕ್ಕೆ ಹತ್ತಿರವಾದಾಗಲೇ ಅದು ಶಿವಕೂಟವೆಂದು ಕರೆಯಿಸಿಕೊಳ್ಳುತ್ತದೆ.

ಆಗ ತನು, ತನು ಕೂಡಿ ತನುವಿನಲ್ಲಿಯೇ ಕೂಡದ ಅಗಲದ ಕೂಟದ ಸುಖ ಏರ್ಪಡುತ್ತದೆ. ತನು ಧನ ಕೂಡಿ ತನು ಒಂದೇ ಆಗುತ್ತದೆ. ತನು ಮನ ಕೂಡಿ ತನುವೊಂದೇ ಆಗುತ್ತದೆ. ತನು ಮನ ಧನ ಕೂಡಿ ತನುವೊಂದೇ ಆಗುತ್ತದೆ. ತನುವಿನಲ್ಲಿಯೇ ತ್ರಿಕೂಟ ಸಂಗಮ ಏರ್ಪಡುತ್ತದೆ. ತನು, ಮೂರೊಂದಾದ ಘನವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**445**

**ಕಾಲಕರ್ಣಿಯನ್ನು ಮೀರಿಪ್ಪನೆಮ್ಮನಲ್ಲ**
**ತೋರಿ ಬಿಡನಾಕೆಯ ಸಂಗಂಗಳಾ.**
**ಕ್ರೀಗಳನು ನಿಃಕರಿಸಿ ನಿಃಕ್ರಿಯೆ ನೆಲೆಗೊಳಿಸಿ,**
**ಆರು ವರ್ಗದಲಾತನೈಕ್ಯನಾಗಿ,**
**ಸಂಬಂಧ ಸಮನಿಸಿಯು ಕರ್ಮವನು ಅತಿಗಳೆದು**
**ಸೊಮ್ಮಾತನಿಹತತಾ ಪರತತ್ವದಾ ನಿಃಕರ್ಮಿ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ**
**ಕರ್ಮದೊಳಗೆ ತಾ ಕರ್ಮಿಯಾದ.**

ಶಿವಪುರಾಣ ಅದು ಕೇವಲ ಪುರಾಣವಲ್ಲ. ಕಾಯವನ್ನು ಮಹಾಜ್ಞಾನದತ್ತ ಕೊಂಡೊಯ್ಯುವ ಒಂದು ವಿಜ್ಞಾನ. ಕಾಯದಲ್ಲಿ ಸಂಗಮವಾದ ಅರಿವನ್ನು ಶಿವನನ್ನಾಗಿಸಿದ್ದಾರೆ; ಕಾಯವನ್ನು ಆವರಿಸಿದ ಮನವನ್ನು ಶಿವನ ಸತಿಯನ್ನಾಗಿಸಿದ್ದಾರೆ. ಸತಿ ದಕ್ಷಬ್ರಹ್ಮನ ಮಗಳು.

ಹಲವಾರು ಕಾಲಗಳು ಉರುಳಿದರೂ ಮನವೆಂಬ ಸತಿಗೆ ಅರಿವೆಂಬ ಪತಿಯ ಮೇಲೆ ಆಸಕ್ತಿಯೇ ಇಲ್ಲ. ತವರಿನ ಮೇಲೆ ಬಲು ಇಚ್ಛೆ. ಅಂದರೆ ಮನಕ್ಕೆ ಆಭರಣ ಹಣ ಭೂಮಿ ವಸ್ತ್ರ ಭೋಜನ ಅಧಿಕಾರ ಶಿಕ್ಷಣ ಪದವಿ ಪಾಂಡಿತ್ಯ ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಇವುಗಳಿಗಾಗಿ ಕಾಯದ ಕಾಲ ವ್ಯರ್ಥ ಸವಕಳಿಯಾಗುತ್ತದೆ.

ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಶಿವನ ಸಂಗವನ್ನು ಮನ ಮಾಡುವುದೇ ಇಲ್ಲ. ಆದರೂ ಶಿವ ಆಕೆಯ ಮೇಲೆ ಇಟ್ಟ ಪ್ರೇಮವನ್ನು ಬಿಡುವುದೇ ಇಲ್ಲ. ಏಕೆಂದರೆ ಮನವೆಂಬುದು ಕೇವಲ ಮನವಲ್ಲ. ಸಾಕ್ಷಾತ್ ಶಿವೆ, ಆಕೆ ಶಿವನ ನಲ್ಲೆ.

ಸತಿ, ತನಗೆ ಉಂಟಾದ ಸಕಲ ಮೋಹಗಳನ್ನು ಕಳಚಿಕೊಂಡು ಶಿವನ ಮೇಲೆ ಪ್ರೇಮ ಉಂಟಾದಾಗ ಶಿವ ಶಿವೆಯನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ಶಿವ ಶಿವೆಯರು ಕಾಯವೆಂಬ ಕೈಲಾಸದಲ್ಲಿ ಒಂದಾಗುತ್ತಾರೆ. ಆಗ ಕಾಯದ ಸಕಲ ಕ್ರೀಗಳು ನಿಂತು ಹೋಗುತ್ತವೆ. ನಿಃಕ್ರಿಯೆ ನೆಲೆಗೊಳ್ಳುತ್ತದೆ.

ಐದು ಇಂದ್ರಿಯಗಳು ಕಾಯದ ಸಂಗವನ್ನು ಕಳಚಿಕೊಂಡು ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯದ ಜ್ಞಾನೇಂದ್ರಿಯಗಳಲ್ಲಿ ಲೀನವಾಗಿ ತಮ್ಮ ತಮ್ಮ ಕ್ರೀಗಳನ್ನು ಕಳೆದುಕೊಳ್ಳುತ್ತವೆ ಅರಿವಿನ ಕಾಯದ ಅರಿವಿನ ಕ್ರೀಗಳಿಗೆ ಒಳಗಾಗುತ್ತವೆ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಕಾಯದಿಂದ ತಂತಾನೆ ಉದುರಿಬೀಳುತ್ತವೆ. ಈ ಆರು ವರ್ಗದಲ್ಲಿ ಅರಿವಿನ ನಲ್ಲನು ಐಕ್ಯವಾಗುವುದರಿಂದ ಅರಿಷಡ್ವರ್ಗಗಳು ತಮ್ಮ ತಮ್ಮ ಕೆಲಸವನ್ನು ಕಳೆದುಕೊಂಡು ಅರಿವಿನ ಕೆಲಸಮಾಡಲು ಅಣಿಯಾಗುತ್ತದೆ.

ಕಣ್ಣು ಕಲ್ಲನ್ನು ನೋಡಿ ಕಲ್ಲು ಎಂದು ಹೇಳುತ್ತದೆ. ಕೆತ್ತಿದ ಕಲ್ಲನ್ನು ನೋಡಿ ಮಸೀದಿ ಚರ್ಚ್ ಆಲಯ ಎಂದು ಹೇಳುವುದಿಲ್ಲ. ತನು ಮುಸಲ್ಮಾನ ಕ್ರೈಸ್ತ ಹಿಂದು ಆಗುವುದಿಲ್ಲ. ಬದಲಾಗಿ ಅರಿವಿನ ತನುವಾಗುತ್ತದೆ.

ಶಬ್ದ ಕೇಳಿದರೆ ಸುಖವಾಗುತ್ತಿತ್ತು ; ಇಲ್ಲ ದುಃಖವಾಗುತ್ತಿತ್ತು. ಅರಿವು ಮತ್ತು ಮನ ಒಂದಾದುದರಿಂದ ಕೇಳಿದ ಶಬ್ದ ಅರಿವಾಗುತ್ತದೆ. ಸುಖ ಆಗುವುದಿಲ್ಲ ದುಃಖ ಆಗುವುದಿಲ್ಲ. ಅರಿವಿನಿಂದ ಕೇಳಿದ ತನು ಹಸನ್ಮುಖಿಯಾಗುತ್ತದೆ.

ಮನದ ಅಜ್ಞಾನದಿಂದ ತನುವನ್ನು ಹೊದ್ದ ಚರ್ಮ ಹೆಣ್ಣಾಗಿ ಗಂಡಾಗಿ ಕಾಣುತ್ತಿತ್ತು. ಅರಿವಿನಿಂದ ನೋಡಿದಾಗ ಚರ್ಮ ಹೆಣ್ಣಾಗಲಿಲ್ಲ ಗಂಡೂ ಆಗಿ ಕಾಣಲಿಲ್ಲ. ಕಾಯದಲ್ಲಿ ಉಂಟಾದ ಕಾಮದ ಅಜ್ಞಾನ ಕಾಯದ ಅರಿವಿನಲ್ಲಿಯೇ ಭಸ್ಮವಾಯಿತು. ಕಾಯದಲ್ಲಿ ಉಂಟಾಗುವ ಅಜ್ಞಾನದ ಕ್ರೀಗಳನು ಕಾಯವೆ ನಿಃಕ್ರಿಯೆಗೊಳಿಸಿತು.

ಸುಗಂಧ ದುರ್ಗಂಧವನ್ನು ಮಾತ್ರ ಸ್ವೀಕರಿಸುತ್ತಿದ್ದ ಮೂಗಿನ ಅವಸ್ಥೆ ಕೂಡಾ ಬದಲಾಯಿತು. ಅರಿವಿನ ಪರಿಮಳದ ಜ್ಞಾನ ಚಿಮ್ಮಹತ್ತಿತು. ಇದು ಕಾಲಕರ್ಣಿಯನ್ನು ಮೀರಿದ ಅರಿವಿನ ಎಮ್ಮನಲ್ಲನ ಪರಿ ಎಂದು ಸಿದ್ದರಾಮ ಶಿವಯೋಗಿಗಳು ಹೆಣ್ಣಾಗಿ ಅರಿವಿನ ನಲ್ಲನನ್ನೇ ಮದುವೆಯಾಗಿ ಆತ ಹೇಳಿದ ಕಾಯಕದಲ್ಲಿಯೇ ತೊಡಗಿ, ಕಾಯದ ಕಾಯಕಗಳನ್ನು ಕಿತ್ತೆಸೆದಿದ್ದಾರೆ.

ಕಾಯ ತಾನು ಬದುಕುವುದಕ್ಕಾಗಿ, ತಾನು ಅಜ್ಞಾನದಿಂದ ಸುಖಿಸುವುದಕ್ಕಾಗಿ ಮನ ಕಾಯವನ್ನು ಬಳಸುತ್ತಿತ್ತು . ಹೀಗಾಗಿ ಕಾಯದಲ್ಲಿ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಹುಟ್ಟಿಕೊಂಡವು. ಕಾಯ ಅರಿವಿನ ಕೆಲಸವನ್ನು ಸಂಪೂರ್ಣ ಮರೆತು ಕಾಯದ ಮರೆವಿನ ಕೆಲಸಕ್ಕೆ ಅಣಿಯಾಯಿತು.

ಕಾಯದಲ್ಲಿಯೇ ಇದ್ದು ಎಚ್ಚರಿಸುವ ಅರಿವೆಂಬ ಶಿವನ ಮಾತು ಕಾಯವನ್ನು ಆವರಿಸಿದ

ಮನವೆಂಬ ನಲ್ಲೆಗೆ ತಿಳಿಯಲೇ ಇಲ್ಲ. ಕಾಲ ಉರುಳಿತು. ನಲ್ಲೆಯ ಅವಧಿ ಮುಗಿಯಿತು. ನಲ್ಲನ ಅರಿವಿನ ಕಾಲ ಕಾಯದಲ್ಲಿಯೇ ಆರಂಭವಾಯಿತು. ಆತ ಪರತತ್ವದ ನಿಃಕರ್ಮಿ. ಕಪಿಲಸಿದ್ಧ ಮಲ್ಲಯ್ಯನೆಂಬ ಕರ್ಮದೊಳಗೆ ತಾ ಕರ್ಮಿಯಾದ.

**446**

**ಕಾಲಜ್ಞಾನಿ, ಕರ್ಮವಿದೂರ, ನಿತ್ಯತೃಪ್ತನೆ,**
**ನಿಮ್ಮ ಭೇದಿಸುವರಾರು ಹೇಳಾ ಎಲೆ ಅಯ್ಯಾ.**
**ಎನ್ನ ಭವಕರ್ಮವು ಕಳೆಯಲಿಕೆ ಏಕರೂಪವಾಗಿ ಬಂದೆಯಯ್ಯಾ.**
**ನಿಮ್ಮ ಪಾದಂಗಳೆ ಲಿಂಗವಾಗಿ, ನಿಮ್ಮ ಕರಣಂಗಳೆ ಶ್ರೀಗುರುವಾಗಿ,**
**ನಿಮ್ಮುರುತರವಪ್ಪ ಜಿಹ್ವೆಯೇ ಜಂಗಮವಾಗಿ ಬಂದೆಯಯ್ಯಾ.**
**ನೀನು ಶಿಷ್ಯ ಕಾರಣ ಪರಶಿವಮೂರ್ತಿಯಾದುದನು**
**ನಾನಿಂದು ಕಂಡೆ ಕಾಣಾ, ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರು ಶಿಷ್ಯ ಸಂಬಂಧ ಪೂರ್ವಾಪೂರ್ವ. ಅದು ಇಂದು ನಿನ್ನೆಯದಲ್ಲ. ಅನಂತ ಕಾಲದಿಂದಲೂ ಇದ್ದುದು. ಕಾಯದಲ್ಲಿಯೇ ಇದ್ದು, ಕಾಯವನ್ನು ಆವರಿಸಿದ ಮನವೆಂಬ ಶಿಷ್ಯನನ್ನು ಸದಾ ಎಚ್ಚರಿಸುವ ಕಾಲಜ್ಞಾನಿಯೇ ಗುರು. ಶಿಷ್ಯನ ಕರ್ಮವನ್ನು ದೂರಮಾಡಲು ಬಂದಂತಹ ಗುರುದೇವನು ಆತ. ಶಿಷ್ಯನ ಹಿಂಸೆಯನ್ನು ತೃಪ್ತಿಯಿಂದಲಿ ಪ್ರಸಾದ ಮಾಡಿಕೊಂಡ ಪುಣ್ಯಾತ್ಮ ಆತ ಅಂತಹ ನಿಮ್ಮನ್ನು ಭೇದಿಸುವವರು ಯಾರು ಹೇಳಾ ಎಲೆ ಅಯ್ಯಾ.

ಗುರುದೇವನಿಗೂ ಶಿಷ್ಯನಿಗೂ ಪೂರ್ವಾಪೂರ್ವ ಸಂಬಂಧವೆಂದು; ಶಿಷ್ಯನ ಜನನ ಮರಣಗಳ ಅಜ್ಞಾನವನ್ನು ಕಳೆಯಲಿಕ್ಕೆ ಏಕರೂಪವಾಗಿ ಏಕೋದೇವನಾಗಿ ಶಿಷ್ಯನ ಹೃದಯದಲ್ಲಿಯೇ ನೆಲೆಸಿದ ಗುರುದೇವ ನೀನೆಂದು, ನಿನ್ನನ್ನು ಕಂಡುಹಿಡಿದು, ನೀನೇ ಆದ ಗುರುದೇವನಿಂದಲೇ ಈ ವಿಷಯ ತಿಳಿಯಿತು.

ನಿಮ್ಮ ಪಾದಂಗಳೆ ಲಿಂಗವಾಗಿ, ನಿಮ್ಮ ಕರಣಂಗಳೆ ಶ್ರೀಗುರುವಾಗಿ; ನಿಮ್ಮುರುತರವಪ್ಪ ಜಿಹ್ವೆಯೇ ಜಂಗಮವಾಗಿ ಬಂದೆಯಯ್ಯಾ :

ಸಿದ್ಧರಾಮ ಶಿವಯೋಗಿಗಳು ಶಿಷ್ಯನಾಗಿ, ಶಿಷ್ಯನ ಹೃದಯದಲ್ಲಿಯೇ ವಾಸಮಾಡಿದ ಗುರುದೇವನೊಂದಿಗೆ ಅವರು ಮಾತನಾಡುತ್ತಿದ್ದಾರೆ. ಕಾಯದ ಕರಣಂಗಳಲ್ಲಿ ಲಿಂಗಕಿರಣಂಗಳಾಗಿ ವಾಸಮಾಡಿದ ಗುರುದೇವನನ್ನು ಕರಣಂಗಳ ಮೂಲಕವೇ ಮಾತನಾಡುತ್ತಿದ್ದಾರೆ. ನಾನು ಕರಣಂಗಳಾದರೆ ನೀನು ನನ್ನ ಕರಣಂಗಳಲ್ಲಿಯೇ ವಾಸಮಾಡಿದ ಲಿಂಗಕಿರಣಂಗಳಯ್ಯಾ. ಅಜ್ಞಾನದಿಂದ ನೋಡುವ ನನ್ನನ್ನು ಜ್ಞಾನದಿಂದ ನೋಡಲು ಕಲಿಸಿದ ಮಹಾಂತ ನೀನು.

ಕಾಯದ ಪಾದಗಳಲ್ಲಿ ಮಹಾಪಾದಗಳಾಗಿ ವಾಸಮಾಡಿದ ಲಿಂಗಯ್ಯ ನೀನು. ಹೀಗಾಗಿ ಬಸವಣ್ಣ "ನಿಮ್ಮ ಚರಣಕಮಲಂಗಳಲ್ಲಿ ನಾನು ತುಂಬಿ" ಎಂದು ಎದೆ ತುಂಬಿ ಹಾಡಿದ್ದಾರೆ. ನನ್ನ ಎದೆಯೇ ನಿಮ್ಮ ವಾಸಸ್ಥಾನ. ಹೀಗಾಗಿ ಜಿಹ್ವೆಯಂತೆ ಜಂಗಮವಾಗಿ ಹೃದಯದ ಮೂಲಕ ಮಾತನಾಡಿ ನನಗೆ ಹೇಳಿದೆ. ನೀನು ಆಡುವ ಪ್ರತಿ ಮಾತನ್ನು ನಿನ್ನ ಶಿಷ್ಯ ಮಾತ್ರ ಬಲ್ಲ. ಏಕೆಂದರೆ ಅವನ ಉದ್ಧಾರಕ್ಕೆಂದು ಅವನನ್ನು ಕಾಯದ ಮೂಲಕ ಸೃಷ್ಟಿ ಮಾಡಿ, ಆ ಕಾಯದಲ್ಲಿಯೇ ನೀನು ಸಂಗಮವಾಗಿ ಆ ಕಾಯವನ್ನು ಆವರಿಸಿದ ಮನವೆಂಬ

ಶಿಷ್ಯನೊಂದಿಗೆ ನೀನು ಮಾತನಾಡಿ ಹೇಳುವಿ, ಮನದಲ್ಲಿದ್ದು ಆತನಿಗೆ ನೆನಹಿನ ಮೂಲಕ ಬೋಧಿಸುವಿ. ಇಡೀ ಕಾಯದ ಕರಣಂಗಳಲ್ಲಿಯೇ ವಾಸಮಾಡಿ ಕಿರಣಂಗಳಾಗಿ ಬೆಳಗುವಿ.

ಕಾಯ ಒಂದೇ. ಕಾಯದಲ್ಲಿಯೇ ವಾಸ ಮಾಡಿದ ಗುರು ಶಿಷ್ಯರು ಕೂಡಾ ಒಂದೇ ಆಗಿದ್ದಾರೆ. ಶಿಷ್ಯನಾಗಿ ಬಂದು ಗುರುದೇವನನ್ನು ಕಂಡೆ. ಗುರುವಾಗಿ ಬಂದು ಶಿಷ್ಯನ ಅಜ್ಞಾನವನ್ನು ಕಳೆದು ಆತನ ಮೈದಡವಿ ಎತ್ತಿಕೊಂಡೆ. ಶಿಷ್ಯನೂ ನೀನೆ, ಶಿಷ್ಯನ ಹೃದಯದಲ್ಲಿ ವಾಸ ಮಾಡಿದ ಪರಶಿವ ಮೂರ್ತಿಯೂ ನೀನೇ ಆಗಿರುವಿ.

ಅದನ್ನು ನಾನಿಂದು ಕಂಡೆ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಕಂಡುದನ್ನು ಕಂಡಂತೆ ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**447**

**ಕಾಲವೇಕೆ ಬಾರದಯ್ಯಾ ಇಂದಿನ ಅವಸ್ಥೆಗೆ?**
**ಲಿಖಿತವೇಕೆ ತೊಡೆಯದಯ್ಯಾ ಇಂದಿನ ಅವಸ್ಥೆಗೆ?**
**ಇಂದಿನಿಸು ಬಾರದೇಕಯ್ಯಾ , ಎನ್ನದೇವ**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿಮಗೆ ಕೂರ್ತ ಅವಸ್ಥೆಯೊಳಗೆ?**
**ಲಿಖಿತ ತೊಡೆಯದು, ಪ್ರಾಣ ಬಿಡದು,**
**ಇಂತಿರಿಸದಿರಾ, ಎನ್ನ ದೇವರ ದೇವಾ.**

ನೋಡಲು ಹೋದ ಕಣ್ಣುಗಳಲ್ಲಿ ನಾನಾರೀತಿಯ ಚಿತ್ರ ವಿಚಿತ್ರಗಳು, ಇಡೀ ದೇಹದಲ್ಲಿ ಹಾದರದ ಹಾವು ಹರಿದಾಡುತ್ತದೆ. ಧ್ವನಿಯಲ್ಲಿ ಮಾತ್ರ ಮೃದುವಾದ ಮಾತುಗಳು. ನೋಡುವ ಕಣ್ಣಿಗೂ ಆಡುವ ಮಾತಿಗೂ ತಾಳೆಯಿಲ್ಲ; ತಾಳವಿಲ್ಲ. ನೋಡಲು ಬಾರದ ಕುರುಡು ಕಣ್ಣು ಏಕಾದರೂ ಇದೆ. ಮಾತನಾಡಲು ಬಾರದ ಸುಳ್ಳು ಬಾಯಿ ಏಕಾದರೂ ಇದೆ. ನಿಜವನ್ನೇ ನೋಡಿ; ನೋಡಿದ ನಿಜವನ್ನೇ ನುಡಿಯುವ ಸದ್ಗತಿ ಕಣ್ಣು, ಬಾಯಿಗೆ ಬರಬಾರದೇ? ಸುಳ್ಳು ಅವಸ್ಥೆಯ ಈ ತನುವಿನ ಮನಕ್ಕೆ ಮೃತ್ಯು ಏಕೆ ಬಾರದಯ್ಯಾ ?

ನುಡಿದಂತೆ ನೋಡಲು ಬಾರದ ಕಣ್ಣುಗಳು ಕಾಯಕ್ಕೆ ಬೇಕೆ? ತನ್ನನ್ನು ತಾನು, ತನ್ನ ಕಾಯದ ಯಾವ ಅವಯವಗಳನ್ನು ಮುಟ್ಟಿಕೊಂಡರೂ ತನಗೆ ಯಾವ ಬಾಧೆಯೂ ಇಲ್ಲ. ತನ್ನ ಕಾಯಕ್ಕೆ ಅನ್ಯಕಾಯದ ಚರ್ಮ ತಾಗಿದರೆ ಸಾಕು ಕಾಮ ಹರಿದಾಡುತ್ತದೆ.

ಚರ್ಮ ಒಂದೇ; ಅದು ನನ್ನದಾದರೇನು, ಅನ್ಯ ಕಾಯದ್ದಾದರೇನು? ಹರಿಯುವ ರಕ್ತ ಒಂದೇ; ಮೂಳೆ ಒಂದೇ; ಮಾಂಸ ಮಜ್ಜೆಗಳು, ನಖ ಶಿಖಾದಿಗಳು ಕೂಡಾ ಒಂದೇ ಆಗಿರುವಾಗ ಕಾಯದಲ್ಲಿರುವ ಅಜ್ಞಾನದ ಈ ಲಿಖಿತವೇಕೆ ತೊಡೆಯದಯ್ಯಾ ? ಕಾಯದ ಇಂದಿನ ಈ ಅಜ್ಞಾನ ಅವಸ್ಥೆಗೆ ಮೃತ್ಯುಬರಬಾರದೆ?

ಕು-ಶಬ್ದ, ಸು-ಶಬ್ದ ಶಬ್ದದಲ್ಲಿಯೇ ಇದೆ. ಸುಖಕ್ಕಾಗಿ ನುಡಿದ ಕೈಕೇಯಿಯ ಎರಡು ಮಾತುಗಳು ಜೀವನ ಪರ್ಯಂತ ಆಕೆಯನ್ನು ದುಃಖಕ್ಕೆ ಈಡು ಮಾಡಿತು. ಎಲ್ಲೋ ಆಡಿದ ಮಡಿವಾಳನ ಮಾತು ಏನೂ ಅರಿಯದ ಸೀತೆಯನ್ನು ಕಾಡಿಗೆ ಕಳುಹಿಸಿತು.

ಮಾತಿನಲ್ಲಿ ಸುಖದ ಮಾತು ದುಃಖದ ಮಾತು ಎಂದು ಇದೆಯೇ? ಮಾತೇ ಜ್ಯೋತಿರ್ಲಿಂಗ; ಮಾತೇ ಮುತ್ತು ; ಮಾತು ಸ್ಪಟಿಕ, ಮಾಣಿಕ್ಯ ಹೀಗೆಲ್ಲ ನುಡಿಯುವ ನುಡಿಗಳೆಲ್ಲ

ಹುಸಿಯೇ ಹೇಗೆ? ಮಾತನಾಡುವ ಕಾಯ; ಮಾತನ್ನು ಸೃಷ್ಟಿ ಮಾಡಿದ ಕಾಯ; ಮಾತಿನಿಂದಲೇ ಗಾಯ ಮಾಡುವ ಕಾಯ, ಮಾತನ್ನು ಕೇಳಿ ಗಾಯ ಮಾಡಿಕೊಳ್ಳುವ ಕಾಯ. ಮಾತನಾಡಿ, ಮಾತನ್ನು ಕೇಳಿ ಸುಖದಿಂದ ಬೀಗುವ ಕಾಯ. ಮಾತನ್ನು ಆಡಿ, ಮಾತನ್ನು ಕೇಳಿ ಸಾಯುವವರೆಗೆ ಆ ಒಂದು ಮಾತಿಗಾಗಿ ಕೊರಗುವ ಕಾಯ; ಕೊರಗಿ ಕೊರಗಿ ಸಾಯುವ ಕಾಯ.

ಆಡಿದ ಮಾತು ನುಡಿದ ಕಾಯಕ್ಕೂ, ಕೇಳುವ ಕಾಯಕ್ಕೂ ತಿಳಿಯದಿದ್ದರೆ ಹೇಗೆ? ಕಾಯದಿಂದ ಹುಟ್ಟಿದ ಮಾತುಗಳು ಕಾಯಕ್ಕೆ ತಿಳಿಯದಿದ್ದರೆ ಕಾಯ ಮೌನಿಯಾಗುವುದೇ ಒಳಿತಲ್ಲವೇ?

ದ್ರೌಪದಿಯ ಒಂದು ಮಾತು ಕೇಳಿದ ದುರ್ಯೋಧನನ ವಜ್ರ ಶರೀರ ಛಿದ್ರ ಛಿದ್ರವಾಯಿತು. ಸಭೆಯಲ್ಲಿ ಆಕೆಯ ಸೀರೆ ಸೆಳೆಯಿಸಿದ. ಆದರೂ ಆತನ ಕೋಪ ಅಡಗಲಿಲ್ಲ. ಆಕೆಯನ್ನು ಆಕೆಯ ಗಂಡಂದಿರನ್ನು ಹದಿಮೂರು ವರುಷ ವನವಾಸಕ್ಕೆ ಕಳುಹಿಸಿದ. ಆದರೂ ಆತನ ಕೋಪ ಅಡಗಲಿಲ್ಲ. ಪಾಂಡವರೊಂದಿಗೆ ಯುದ್ಧ ಮಾಡಿದ ತನ್ನ ಹನ್ನೊಂದು ಅಕ್ಷೋಹಿಣಿ ಸೈನ್ಯ, ಪಾಂಡವರ ಏಳು ಅಕ್ಷೋಹಿಣಿ ಸೈನ್ಯ ಸತ್ತು ಹೋಯಿತು. ರಕ್ತದ ಕಾಲುವೆಯೇ ಹರಿಯಿತು; ಆದರೂ ದ್ರೌಪದಿಯ ಮಾತಿನಿಂದ ದುರ್ಯೋಧನನ ಎದೆಯಲ್ಲಿ ಹೊತ್ತಿ ಉರಿಯುವ ಕಿಚ್ಚು ತಣ್ಣಗಾಗಲಿಲ್ಲ.

ಕಾಯ ಯಾರದಾದರೇನು? ಕಾಯ ಕಾಯವೇ ಆಗಿದೆ. ಕಾಯದಲ್ಲಿ ಹುಟ್ಟಿದ ಮಾತು ಕಾಯವೇ ತಿಳಿಯದಿದ್ದರೆ ಹೇಗೆ? ಅನ್ಯ ಪ್ರಾಣಿಗಳಿಗೆ ಮಾತು ಅರ್ಥವಾಗುವುದಿಲ್ಲ. ಕಾಯ ಇಪ್ಪತ್ತು ಇಪ್ಪತ್ತೈದು ವರ್ಷಗಳವರೆಗೆ ಅಧ್ಯಯನ ಮಾಡಿದರೂ ಕೂಡಾ ಕಾಯದ ಮಾತು ಕಾಯವೇ ತಿಳಿಯಲು ಸಾಧ್ಯವಾಗುತ್ತಿಲ್ಲ ಎಂದರೆ ಇಂತಹ ಅಜ್ಞಾನದ ವಿದ್ಯೆಯ ಅವಶ್ಯಕತೆ ಕಾಯಕ್ಕೆ ಇದೆಯೆ?

ಕಾಯದಲ್ಲಿ ಅರಿವು ಸಂಗಮವಾಗಿದೆ; ಮಾಯಾಮಯವಾದ ಮರೆವು ಕಾಯವನ್ನು ಆವರಿಸಿದೆ. ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಆ ಸದಾಶಿವನು ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನು ಆಗಿದ್ದಾನೆ. ಅಂತಹ ನೀನು ಕುಳಿತ ಕಾಯದ ಅಜ್ಞಾನದ ಈ ಅವಸ್ಥೆಯನ್ನು ನೀನೇ ತೊಡೆಯದಿದ್ದರೆ ಹೇಗೆ? ಕಾಯದ ಲಿಖಿತವೂ ತೊಡೆಯದು, ಪ್ರಾಣವೂ ಬಿಡದು; ಇಂತಿರಿಸದಿರಾ, ದೇವರ ದೇವಾ ಎಂದು ಕಾಯವನ್ನು ಆವರಿಸಿದ ಮಾಯೆಯಿಂದಲೇ ಹಾಡಬೇಕಿದೆ. ಆಡುವ ಮಾತನ್ನು ಕೇಳುವ ಮಾತನ್ನು ಅರಿವಿನಿಂದಲೇ ಪರೀಕ್ಷಿಸಿ ಸ್ವೀಕರಿಸಿದರೆ ಮಾತು ಜೀರ್ಣವಾಗುತ್ತದೆ.

**448**

**ಕಾಲಿನಿಯೆಂಬ ಮಾನಿನಿ**
**ಕಾನನ ಕಂಬನಿಯೊಳಗಾಳುತ್ತ ಮುಳುಗುತ್ತೈದಾಳೆ,**
**ತನ್ನೊಳಗೆ ಆಳುತ್ತ ಮುಳುಗುತ್ತೈದಾಳೆ.**
**ಆರೂಢದ ಕೂಟದಲ್ಲಿ ಲೀಯವರಿತು**
**ಬತ್ತಿದಡೆ ಆನು ನೀನಪ್ಪೆ ಕಂಡಾ.**
**ಎನ್ನದೇವ ಕಪಿಲಸಿದ್ಧ ಮಲ್ಲಿಕಾರ್ಜುನ**
**ಕಾಲಿನಿಯ ಪರಿ ವಿಪರೀತ.**

ಕಾಯವೇ ಕೈಲಾಸ. ಕಾಯವನ್ನು ಆವರಿಸಿದ ಮನ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅರಿಯದಿದ್ದಕ್ಕಾಗಿ, ಕೈಲಾಸವೇ ಆಗಬೇಕಾದ ಕಾಯ ಕಾಡು ಆಗಿದೆ. ಸದಾ ದುಃಖದ ಕಂಬನಿಯಲ್ಲಿ ಮುಳುಗಿದೆ.

ಕಾಲಿನಿಯೆಂಬ ಮೃತ್ಯು ದೇವತೆ ಸದಾ ಕಂಬನಿ ಮಿಡಿಯುವ ಕಾಯವನ್ನೇ ತನ್ನ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು ಅಲ್ಲಿಯೇ ನೆಲೆಸಿ ಆಳುತ್ತಿದ್ದಾಳೆ.

ಕಾಯದಲ್ಲಿ ಕಂಬನಿಯ ಕೋಲಾಹಲವೇ ಉಂಟಾಗಿದೆ. ಸುಳ್ಳು ಸುಖ ದುಃಖಗಳ ಸಾಮ್ರಾಜ್ಯವೆಂದು ಕಾಯ ತನ್ನನ್ನು ತಾನು ಕರೆಯಿಸಿಕೊಂಡಿದೆ. ಕಾಯದಲ್ಲಿ ಉಂಟಾಗುವ ಅಸಂಖ್ಯಾತ ಸುಖಗಳು, ಅಸಂಖ್ಯಾತ ದುಃಖಗಳಿಗೆಲ್ಲ ಕಾಲಿನಿಯೆಂಬ ಮೃತ್ಯು ದೇವತೆಯೇ ಒಡೆಯಳಾಗಿದ್ದಾಳೆ.

ದ್ರೌಪದಿ ಚಿತ್ರಿಸಿ ಬಿಡಿಸಿದ ರಂಗೋಲಿ ದ್ರೌಪದಿಗೆ ಸುಖ ನೀಡಿತು. ನೀರ ಮೇಲೆ ಬಿಡಿಸಿದ ರಂಗೋಲಿಯ ಚಿತ್ರ ನೆಲದ ಮೇಲೆ ಬಿಡಿಸಿದ ಸೊಬಗಿನಂತಿತ್ತು. ಅದರ ಮೇಲೆ ಕಾಲಿಟ್ಟು ನಡೆದು ಸುಖಿಸಬೇಕೆನ್ನುವ ಆಸೆ ದುರ್ಯೋಧನನಿಗೆ ಉಂಟಾಯಿತು. ಚಿತ್ರ ಬಿಡಿಸಿದ ದ್ರೌಪದಿಗೂ ಸುಖ; ಅದನ್ನು ನೋಡಿದ ದುರ್ಯೋಧನನಿಗೂ ಸುಖ. ಆದರೆ ಮೃತ್ಯು ದೇವತೆ ಅವರಿಬ್ಬರ ಸುಖವನ್ನು ಮರೆಯಿಸಿ ಕ್ಷಣಾರ್ಧದಲ್ಲಿ ಅವರಿಬ್ಬರಲ್ಲಿ ತನ್ನ ದುಃಖದ ಸಾಮ್ರಾಜ್ಯವನ್ನೇ ಸ್ಥಾಪಿಸಿದಳು.

ಚಿತ್ರ ಬಿಡಿಸಿದ ರಂಗೋಲಿಯ ಮೇಲೆ ಕಾಲನೂರಿದ ದುರ್ಯೋಧನ ಪ್ರಪಾತಕ್ಕೆ ಬಿದ್ದಂತಾಯಿತು. ಅದು ನೆಲವಲ್ಲ; ಬರೀ ಕೆಸರಗುಂಡಿ. ಮೈತುಂಬಾ ರಾಡಿಯಾಯಿತು. ಕೌರವ ರಾಜನ ಕ್ರೌರ್ಯ ವಜ್ರ ಶರೀರವನ್ನೇ ಛಿದ್ರಗೊಳಿಸಿತು.

ಚಿತ್ರಬಿಡಿಸಿದ ದ್ರೌಪದಿಗೆ ಸುಖವಾಯಿತು. ತನ್ನ ಸಖಿಯರೊಂದಿಗೆ ಗಹಗಹಿಸಿ ನಕ್ಕಳು. ದುರ್ಯೋಧನನಿಗೆ ಕ್ರೋಧದ ಕಟ್ಟೆ ಒಡೆಯಿತು. ಮೃತ್ಯುದೇವತೆ ಹೆಗಲೇರಿ ನಾಟ್ಯ ಮಾಡಿದಳು. ಕೌರವ ಮತ್ತು ಪಾಂಡವ ಕುಟುಂಬಗಳೆರಡಕ್ಕೂ ಹೆಗಲೇರಿದ ಮೃತ್ಯುದೇವತೆಯನ್ನು ಶ್ರೀಕೃಷ್ಣ ಮಾತ್ರ ನೋಡಿದ. ಸುಖದ ಸನ್ನಿವೇಶ ಕ್ಷಣಾರ್ಧದಲ್ಲಿ ಎರಡು ಕುಟುಂಬಗಳನ್ನು ಎರಡು ರಾಜ್ಯಗಳನ್ನು ದುಃಖವಾಗಿ ಆವರಿಸಿತು.

ಸುಖದಿಂದ ಸಖಿಯರೊಂದಿಗೆ ಗಹಗಹಿಸಿ ನಕ್ಕ ದ್ರೌಪದಿಯನ್ನು ಸಭೆಯಲ್ಲಿ ಎಳೆದು ತಂದ ದುಃಶಾಸನ ಸೀರೆ ಸೆಳೆದು ಅಪಮಾನಕ್ಕೆ ಈಡು ಮಾಡಿದ. ಕಾಲಿನಿಯೆಂಬ (ಮಾನಿನಿ) ಮೃತ್ಯುದೇವತೆ ಕಾನನ ಕಂಬನಿಯೊಳಗೆ ಆಳುತ್ತಾ ಪಾಂಡವ ಕೌರವ ರಾಜ್ಯಗಳೆರಡನ್ನೂ ತನ್ನಂತೆಯೇ ಮಾಡಿಕೊಂಡಳು.

ದ್ರೌಪದಿಯ ಅಪಮಾನದ ನಗು ದುರ್ಯೋಧನನ ಕಾಯವಿರುವವರೆಗೆ ಅಪಮಾನದಿಂದ ಕುದಿಯಿತು. ದುರ್ಯೋಧನನಿಂದ ದ್ರೌಪದಿಗೆ ಉಂಟಾದ ಅಪಮಾನ ದುರ್ಯೋಧನ ದುಃಶಾಸನ ಸಾಯುವವರೆಗೂ ನಿಲ್ಲಲಿಲ್ಲ. ಎರಡು ರಾಜ್ಯದ ಕಾಯಗಳಲ್ಲಿ ಕಾಲಿನಿಯೆಂಬ ಮಾನಿನಿ ಕಾನನ ಕಂಬನಿಯೊಳಗೆ ಆಳುತ್ತಾ ಮುಳುಗಿದಳು. ಕಾಯಗಳ ದುಃಖದ ಕಟ್ಟೆ ಒಡೆಯಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ಮೃತ್ಯುದೇವತೆಗೆ ಬಲಿಯಾಯಿತು. ದುರ್ಯೋಧನನ ತೊಡೆಯನ್ನು ಭೀಮ ಸೀಳಿಹಾಕಿದ. ಆದರೂ ರಕ್ತಸಿಕ್ತವಾದ ತೊಡೆಯ ಮೇಲೆ ದ್ರೌಪದಿಯನ್ನು ಕೂಡಿಸಿಕೊಂಡು ತನ್ನ ಅಪಮಾನದ ಸೇಡು ತೀರಿಸಿಕೊಳ್ಳುವ ಆಸೆ ದುರ್ಯೋಧನನಿಗೆ ಉಂಟಾಯಿತು.

ದ್ರೌಪದಿಯ ನಗು ದ್ರೌಪದಿಗೆ ತಿಳಿಯಲಿಲ್ಲ; ದುರ್ಯೋಧನನೂ ತಿಳಿಯಲಿಲ್ಲ. ಪರಿಪೂರ್ಣವಾಗಿ ತಿಳಿದ ಶ್ರೀಕೃಷ್ಣನಿಗೆ ಅವರಿಬ್ಬರಿಗೂ ಸಹಾಯ ಮಾಡಲು ಸಾಧ್ಯವಾಗಲೇ ಇಲ್ಲ. ಶ್ರೀಕೃಷ್ಣನ ಭೌತಿಕ ಸಹಾಯ ಮೃತ್ಯುವಿಗೆ ಕಾರಣವಾಯಿತು.

ಕೌರವ ಪಾಂಡವ ಕುಟುಂಬಗಳ ಆಂತರಿಕ ಅರಿವು ಕಾಲಿನಿಯೆಂಬ ಮಾನಿನಿಗೂ ತುತ್ತಾಯಿತು. ಕಾಲಿನಿಯೆಂಬ ಮಾನಿನಿ ಆರೂಢ ಕೂಟವನ್ನು ಅರಿತು ಅರಿವಿನ ಕೂಟದಲ್ಲಿ ಕೂಡಿ ಬತ್ತಲಿಲ್ಲ. ಕೂಡದ ಅಗಲದ ಅರಿವಿನ ಕೂಟದಲ್ಲಿ ಎರಡು ಕುಟುಂಬಗಳ ಕಾಯಗಳು ಕೂಡಿದ್ದರೆ ಶ್ರೀಕೃಷ್ಣನ ಪಡಿಯಚ್ಚು ತಾವೇ ಆಗುತ್ತಿದ್ದರು. ಇದು ಕಾಲಿನಿಯೆಂಬ ಮಾನಿನಿಯ ಮಹಿಮೆ!

**449**

**ಕಾಲಿಲ್ಲದವಂಗೆ ಕಾಲ ಕೊಟ್ಟೆ ಬಸವಾ;**
**ಕಣ್ಣಿಲ್ಲದವಂಗೆ ಕಣ್ಣ ಕೊಟ್ಟೆ ಬಸವಾ;**
**ಎನ್ನ ಕಣ್ಣು ಕಾಲಿಂಗೆ ನೀನೆಯಯ್ಯಾ ಬಸವಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಸಕಲ ಸಂಪತ್ತು ತನುವಿನಲ್ಲಿ ತನ್ಮಯವಾಗಿದ್ದರೂ ತನುವನ್ನು ಆವರಿಸಿದ ಮನ ತನಗೆ ಬೇಕಾದ ಬಾಹ್ಯಸಂಪತ್ತನ್ನು ಸಂಪತ್ತು ಎಂದು ತಿಳಿದು ತನುವನ್ನು ಯಾಮಾರಿಸುತ್ತಲಿದೆ. ಹೀಗಾಗಿ ತನುವಿನಲ್ಲಿಯ ಸಂಪತ್ತನ್ನು ತನುವೇ ಬಳಸಿಕೊಳ್ಳಲು ತನುವಿಗೆ ಒಬ್ಬ ಉತ್ತಮ ಗುರುದೇವನು ಬೇಕೇಬೇಕು.

ಸಿದ್ಧರಾಮ ಶಿವಯೋಗಿಗಳಿಗೆ ಅಲ್ಲಮಪ್ರಭುಗಳು, ಬಸವಣ್ಣ, ಚೆನ್ನಬಸವಣ್ಣನಂತಹ ಯೋಗ್ಯ ಗುರುಗಳು ದೊರೆತರು. ಒಬ್ಬೊಬ್ಬರು ಒಂದೊಂದು ಸೂತ್ರವನ್ನು ಹೇಳಿ ತನುವನ್ನು ತೋರಿ ತನುವಿನಲ್ಲಿಯೆ ಅರಿವಿನ ಸಂಪತ್ತು ಹುಡುಕಲು ಹೇಳಿದರು.

ಪ್ರತಿಯೊಂದು ತನುವಿನಲ್ಲಿಯೂ ಅರಿವಿನ ಸಂಪತ್ತು ಭರಿತವಾಗಿದ್ದರೂ ಅದನ್ನು ಬಳಕೆ ಮಾಡುವ ಉಪಾಯ ತನುವಿಗೆ ಸಾಧ್ಯವಾಗುತ್ತಿಲ್ಲ. ಬಸವಣ್ಣನವರು ಸಿದ್ಧರಾಮ ಶಿವಯೋಗಿಗಳನ್ನು ಮುಟ್ಟಿ ನಿನ್ನ ಕಣ್ಣಲ್ಲಿ ಕಾಮವನ್ನು ಸುಡುವ ಶಿವನ ಕಣ್ಣೊಂದು ಇದೆ. ಅದನ್ನು ನೀನು ಎಂದಾದರೂ ಬಳಸಿಕೊಳ್ಳಲು ಸಾಧ್ಯವಾಗಿದೆಯೇ ಸಿದ್ಧರಾಮ ಎಂದು ಪ್ರಶ್ನಿಸುತ್ತಾ ಕಣ್ಣಲ್ಲಿಯೇ ಸಂಗಮವಾದ ಮುಕ್ಕಣ್ಣನ ಕಣ್ಣನ್ನು ಸಿದ್ಧರಾಮ ಶಿವಯೋಗಿಗಳಿಗೆ ಬಸವಣ್ಣನವರು ಪರಿಚಯಿಸುತ್ತಾರೆ.

''ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯಿರಯ್ಯಾ'' ಎಂದು ಬಸವಣ್ಣ ಕಣ್ಣುಳ್ಳವರಿಗೆ ಪ್ರಶ್ನಿಸುತ್ತಾರೆ. ಕಣ್ಣೊಳಗೆ ಅರಿವಿನ ಕಣ್ಣೊಂದು ಸಂಗಮವಾಗಿದೆ. ಅದನ್ನು ಪೂರ್ವಜರು ಮುಕ್ಕಣ್ಣನ ಕಣ್ಣು ಶಿವನ ಕಣ್ಣು, ಉರಿಗಣ್ಣು ಎಂದು ಕರೆದರು. ಶಿವ ಅನ್ನುವವನು ಹೊರಗೆ ಇಲ್ಲ. ಪ್ರತಿ ತನುವಿನಲ್ಲಿ ಶಿವ ಸಂಗಮವಾಗಿದ್ದಾನೆ. ಆತನನ್ನು ಸಿದ್ಧಾರ್ಥ ಬುದ್ಧ ಎಂದು ಹೆಸರಿಟ್ಟು ಕರೆದ. ವರ್ಧಮಾನ ಮಹಾವೀರ ಎಂದು ಹೆಸರಿಸಿದ. ಆ ಹೆಸರನ್ನು ತನಗೆ ಇಟ್ಟುಕೊಂಡು ಮಹಾವೀರ ಎಂದು ಸಕಲರಿಂದ ಕರೆಯಿಸಿಕೊಂಡ.

ಬಸವಾದಿ ಶರಣರು, ದಾಸರು, ತತ್ವಪದಕಾರರು ಪೈಗಂಬರರು, ಕ್ರಿಸ್ತ, ಕೃಷ್ಣ ಇವರೆಲ್ಲ ಮಹಾವೀರರು, ಬುದ್ಧರು, ಶರಣರು, ದಾಸರೇ ಆಗಿದ್ದಾರೆ. ಕಣ್ಣಿನಲ್ಲಿಯೇ ಅರಿವಿನ ಕಣ್ಣನ್ನು

ಕಣ್ಣಿನ ಮೂಲಕ ಕಂಡು ಹಿಡಿದು, ಕಣ್ಣನ್ನು ಆವರಿಸಿದ ಅಜ್ಞಾನದ ಕಣ್ಣನ್ನು ಅರಿವಿನ ಕಣ್ಣಿಗೆ ಕೊಟ್ಟು, ಅರಿವಿನ ಕಣ್ಣಿನಿಂದ ಸಕಲವನ್ನೂ ನೋಡಿ ಬುದ್ಧ ಎಂದು ಕರೆಯಿಸಿಕೊಂಡಿದ್ದಾರೆ.

ಕಣ್ಣಲ್ಲಿ ಜ್ಞಾನದ ಕಣ್ಣು ಇದೆ, ಅಜ್ಞಾನದ ಕಣ್ಣು ಕಣ್ಣನ್ನು ಆವರಿಸಿಕೊಂಡಿದೆ. ಅಜ್ಞಾನದ ಕಣ್ಣಿಗೆ, ಜ್ಞಾನದ ಕಣ್ಣಿಗೆ, ಕಣ್ಣು ಉಪಕರಣವಾಗಿದೆ. ಕಣ್ಣಿನ ಮೂಲಕ ಅಜ್ಞಾನದ ಕಣ್ಣಿನಿಂದ ನೋಡಿದರೆ ವಸ್ತುವಿನ ಸತ್ಯ ಗೊತ್ತಾಗುವುದಿಲ್ಲ. ಉದಾ: ಚರ್ಮ ಹೆಣ್ಣಾಗಿ, ಗಂಡಾಗಿ ಕಂಡು ಕಾಯದಲ್ಲಿ ಕಾಮದ ಜೊಲ್ಲು ಹರಿಯುವಂತೆ ಕಣ್ಣು ಕಾಯಕ್ಕೆ ಸಂದೇಶ ನೀಡುತ್ತದೆ.

ಚರ್ಮ ಹೆಣ್ಣು ಅಲ್ಲ ಗಂಡೂ ಅಲ್ಲ. ನೋಡುವ ಕಣ್ಣು ಕೂಡಾ ಹೆಣ್ಣೂ ಅಲ್ಲ ಗಂಡೂ ಅಲ್ಲ, ಕಾಯದಲ್ಲಿ ಹರಿಯುವ ರಕ್ತ, ಮಾಂಸ, ಮಜ್ಜೆ ಮೇದಸ್ಸು, ಇವುಗಳಿಗೆ ಭೇದವಿಲ್ಲ. ಆದರೂ ಕಣ್ಣು ಹೆಣ್ಣು ಗಂಡು ಎನ್ನುವ ಅಜ್ಞಾನದಿಂದ ನೋಡಿ, ಕಾಯದಲ್ಲಿ ಕಾಮದ ಜೊಲ್ಲು ಹರಿಯುವಂತೆ ಮಾಡುತ್ತದೆ.

ಕಲ್ಲು ಒಂದೇ. ಕಲ್ಲನ್ನು ಕಲ್ಲು ಎಂದೇ ನೋಡುತ್ತದೆ. ಕಣ್ಣು ನೋಡಿದ ಆ ಕಲ್ಲನ್ನೇ ಕೆತ್ತಿದಾಗ ದೇವರು ಎನ್ನುವ ಭಕ್ತಿ ರಸವನ್ನು ಕಾಯದಲ್ಲಿ ಚೆಲ್ಲಿ ಕೈ ಮುಗಿಯುತ್ತದೆ. ಕೆತ್ತಿದರೇನು, ಕೆತ್ತದಿದ್ದರೇನು? ಅದು ಕಲ್ಲಲ್ಲವೆ?

ಚಿನ್ನ ಎನ್ನುವುದು ಒಂದು ಲೋಹ. ಅದಕ್ಕೆ ಹಳದಿ ಬಣ್ಣ ಮೆತ್ತಿಕೊಂಡಿದೆ. ಹೀಗಾಗಿ ಕಣ್ಣು ಹಳದಿ ಬಣ್ಣದ ಲೋಹ ನೋಡಿ ಚಿನ್ನ ಎಂದು ಹೆಸರಿಸಿ ಅದನ್ನು ಸಂಗ್ರಹಿಸಿ ಶ್ರೀಮಂತ ಎನ್ನುವ ಅಜ್ಞಾನದ ರಸವನ್ನು ಕಾಯಕ್ಕೆ ಚೆಲ್ಲಿತು. ಅದನ್ನು ಕದ್ದರೆ ಕಳ್ಳ ಎನ್ನುವ ರಸವನ್ನು ಕಾಯಕ್ಕೆ ಚೆಲ್ಲಿತು. ಕಳ್ಳ ಕದಿಯಲು ಹೋದರೆ ಕಾಯ ಪ್ರಾಣ ಕೊಡುತ್ತದೆಯೇ ಹೊರತು ಚಿನ್ನ ಕೊಡುವುದಿಲ್ಲ. ಕಳ್ಳ ಸಿಕ್ಕರೆ ಪ್ರಾಣಕೊಡುತ್ತಾನೆಯೇ ಹೊರತು ಚಿನ್ನ ಬಿಡುವುದಿಲ್ಲ.

ಲೋಹವನ್ನು ಚಿನ್ನ ಎಂದು ತಿಳಿದು ಶ್ರೀಮಂತ ಕಳ್ಳ ಬಡವ ಭಿಕ್ಷುಕ ಎಂದು ಕರೆಯಿಸಿಕೊಂಡ ಕಾಯಗಳನ್ನು ಅರಿವಿನ ಕಾಯಗಳೆಂದು ಹೆಸರಿಟ್ಟು ಕರೆಯಲು ಸಾಧ್ಯವೆ?

ಲೋಹ ಹಳದಿಯಾದರೇನು, ಅದು ಕಪ್ಪು, ಬಿಳಿಯದಾದರೇನು? ಲೋಹವನ್ನು ಲೋಹ ಎಂದು ನೋಡಿ ಅರಿವಿನ ರಸವನ್ನು ಕಾಯದಲ್ಲಿ ಚೆಲ್ಲಿ ಕಾಯವನ್ನು ನಿರ್ಲಿಪ್ತ ಕಾಯವನ್ನಾಗಿಸಿದ ಕಣ್ಣು ನಿಜಕಣ್ಣು. ಅದು ಕಣ್ಣಲ್ಲಿಯೇ ಸಂಗಮವಾಗಿದೆ.

ಅಂತಹ ನಿಜಕಣ್ಣನ್ನು ಸಿದ್ಧರಾಮ ಶಿವಯೋಗಿಗಳಿಗೆ ಬಸವಣ್ಣನವರು ಕಣ್ಣಲ್ಲಿಯೇ ತೋರಿದರು. ಕಣ್ಣೊಳಗೊಂದು ಅರಿವಿನ ಕಣ್ಣಿದೆ; ಆ ಕಣ್ಣಿನಿಂದ ನೋಡಿದರೆ ವಸ್ತುವಿನ ಸತ್ಯ ಗೋಚರಿಸುವುದು ಎಂದು ಹೇಳಿದರು. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಕಣ್ಣಿಲ್ಲದವಂಗೆ ಕಣ್ಣುಕೊಟ್ಟು ಕೈ ಹಿಡಿದು ನಡೆಸಿದೆ ಬಸವಾ ಎಂದು ಎದೆ ತುಂಬಿ ಹಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳ ಈ ಸೂತ್ರ ಹಿಡಿದು ಓದುವ ಸಕಲ ಓದುಗರಿಗೂ ನಿಜಕಣ್ಣಿನ ದರುಶನ ಆಗುವುದರಲ್ಲಿ ಸಂದೇಹವೇ ಇಲ್ಲ.

**450**

**ಕಾಳರಕ್ಕಸಿಯಾಗಿ ಕುತ್ತಿಗೆ ಹಿಡಿದು ಕೊಯ್ದು ತಿನ್ನುತ್ತಿರಲಿ.**
**ತಿನ್ನಲೊಲ್ಲದೆಚ್ಚ ಭರದಿಂದ ಕನ್ನಿಕೆಯಾಗಿ ತೆಗೆದಪ್ಪಿಕೊಳ್ಳಲಿ**
**ಕೊಂಡಡೆ, ಮನವಿಚ್ಛಂದವಾಗದೊಂದೆಯಂದದಲ್ಲಿ ಪ್ಪಂತಪ್ಪ**

**ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನವೆಂಬ ಮಾಯೆಯ ಪರಿ ಅಂತಿಂತಲ್ಲ. ಯೌವ್ವನದಲ್ಲಿ ಕಾಳರಕ್ಕಸಿಯಾಗಿ ಕಾಡುತ್ತಾಳೆ. ತಿನ್ನಲೊಲ್ಲದೆ ಎಚ್ಚಿ ಭರದಿಂದ ಕನ್ನಿಕೆಯಾಗಿ ಬಿಗಿದಪ್ಪಿ ಕಾಡುತ್ತಾಳೆ.

ಯೌವ್ವನಕ್ಕೆ, ಯೌವನದಲ್ಲಿ ಆದ ಗಾಯಕ್ಕೆ ತನುವಿನ ಅರ್ಧ ಆಯುಷ್ಯ ಕಳೆಯುತ್ತಾಳೆ. ರಾತ್ರಿಯಾಗಿ ಮಲಗುವುದಕ್ಕೆ ಅರ್ಧ ಆಯುಷ್ಯ ಕಳೆಯುತ್ತಾಳೆ. ಅಲ್ಲಿಗೆ ತನುವಿನ ಆಯುಷ್ಯ ಪೂರ್ಣವಾಯಿತು. ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಬಳಕೆಯಾಗಲೇ ಇಲ್ಲ. ಇದು ಮಾಯೆಯ ಮಹಿಮೆ.

ಕಾಡುವ ಈ ಮಾಯೆಯ ಮಹಿಮೆಯ ಕುರಿತು ಬಸವಣ್ಣನವರು ಬಹಳ ಸುಂದರವಾಗಿ ವಿವರಿಸಿದ್ದಾರೆ. ''ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ, ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ, ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ, ಇದಾವ ಪರಿಯಲ್ಲಿ ಕಾಡಿಹಿತು ಮಾಯೆ. ಈ ಮಾಯೆಯ ಕಳೆವಡೆ ಎನ್ನಳವಲ್ಲ, ನೀವೆ ಬಲ್ಲಿರಿ ಕೂಡಲಸಂಗಮದೇವಾ''.

ಬಂದ ದ್ವಾರವನ್ನೇ ಬಯಸಿ ಸುಖಿಸುವ ಹೇಸಿ ಮಾಯೆಯನ್ನು ಕಳೆದುಕೊಳ್ಳುವ ಬಗೆಯಾದರೂ ಹೇಗೆ ಎನ್ನುವ ಆಲೋಚನೆ ಕೂಡ ಮನಕ್ಕೆ ಹುಟ್ಟದಂತೆ ಮಾಡುತ್ತದೆ. ಉಂಡ ಮೊಲೆಯನ್ನೇ ರಕ್ಕಸಿಯಾಗಿ ಹರಿದು ತಿನ್ನುವಂತೆ ಮಾಡುತ್ತದೆ. ಮೋಹಕ್ಕೆ ಮಗಳಾಗಿ ಹುಟ್ಟುತ್ತದೆ ಮಾಯೆ. ಕೂಟಕ್ಕೆ ಸ್ತ್ರೀಯಾಗಿ ಕೂಡುತ್ತದೆ ಮಾಯೆ. ನಾನಾ ಪರಿಯಲ್ಲಿ ಕಾಡುವ ಈ ಮಾಯೆಯನ್ನು ಬಿಡಿಸಿಕೊಂಡು ನಿನ್ನಲ್ಲಿ ಕೂಡುವ ಉಪಾಯ ನನಗೆ ಹೊಳೆಯುತ್ತಿಲ್ಲ ಗುರುವೆ. ತನುವನ್ನು ಆವರಿಸಿದ ಈ ಮಾಯೆಯನ್ನು ಕಳೆಯುವ ಉಪಾಯವನ್ನು ನೀನೆ ಕರುಣಿಸು ಎಂದು ಬಸವಣ್ಣನವರು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ಮಾಯೆ ಎನ್ನ ಕುತ್ತಿಗೆ ಹಿಡಿದು ಕೊಯ್ದು ತಿನ್ನುತ್ತಿರಲಿ, ತಿನ್ನಲಾಗದೆ ಭರದಿಂದ ಕನ್ನಿಕೆಯಾಗಿ ತೆಗೆದಪ್ಪಿಕೊಳ್ಳಲಿ, ಕೊಂಡಡೆ ಮನ ವಿಚ್ಛಂದವಾಗದೆ ಒಂದೇ ಅಂದದಲ್ಲಿ ಇರುವಂತೆ ನಿಮ್ಮದೇ ಆದ ಒಂದು ಸಮತಾಗುಣದ ಸೂತ್ರವನ್ನು ಎನಗೆ ಕರುಣಿಸು ತಂದೆಯೇ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಪ್ರಾರ್ಥಿಸಿದ್ದಾರೆ.

ಚರ್ಮ, ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು, ಮನಸ್ಸು, ಅರಿವು ಇವು ತನುವಿನಲ್ಲಿ ಇವೆ. ಹೀಗಾಗಿ ತನುವೆಂದು, ತನು ತನುವಿನ ಮೂಲಕವೇ ಕರೆಯಿಸಿಕೊಂಡಿದೆ. ಹೀಗೆ ಕರೆಯಿಸಿಕೊಂಡ ತನುವೇ ತನುವನ್ನು ಹೆಣ್ಣಾಗಿ ಗಂಡನ್ನು ನೋಡುತ್ತದೆ, ಗಂಡಾಗಿ ಹೆಣ್ಣನ್ನು ನೋಡುತ್ತದೆ.

ನೋಡುವ ಕಣ್ಣು, ಕೇಳುವ ಕಿವಿ, ರುಚಿಸುವ ನಾಲಿಗೆ, ಮೂಸಿಸುವ ಮೂಗು, ಸ್ಪರ್ಶಿಸುವ ಚರ್ಮ ಹೆಣ್ಣು ಅಲ್ಲ, ಗಂಡು ಕೂಡಾ ಅಲ್ಲ. ಆದರೂ ಮಾಯೆ ಹೆಣ್ಣು ಎನ್ನುವ ಅಜ್ಞಾನ ತನುವಿನಲ್ಲಿ ಆಮಂತ್ರಣ ಮಾಡಿಕೊಂಡು ಗಂಡು ಎಂದು ನೋಡುತ್ತದೆ. ಗಂಡು ಎನ್ನುವ ಅಜ್ಞಾನ ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡುತ್ತದೆ.

ತನುವಿನಲ್ಲಿ ಹೀಗೆ ತನ್ನನ್ನು ತನ್ನ ತನುವನ್ನು ತಿಳಿಯುವ ಅರಿವು ತನ್ಮಯವಾಗಿದೆ. ತನ್ನನ್ನು ತಾನು ತಿಳಿಯದೆ, ಹೆಣ್ಣಾಗಿ ಗಂಡಾಗಿ ತನುವನ್ನು ಸದಾ ಕಾಡುವ ಮಾಯೆ ತನುವನ್ನು

ಆವರಿಸಿಕೊಂಡಿದೆ.

ತನ್ನ ತಾನು ಅರಿಯದ ಮುನ್ನ ಅರಿವು ತನುವಿನಲ್ಲಿಯೇ ತನ್ಮಯವಾಗಿದೆ. ಆದರೂ ತನುವಿನಲ್ಲಿಯೇ ಇರುವ ಅರಿವು ತನುವಿಗೆ ಬಳಕೆಗೆ ಬರುವುದಿಲ್ಲ. ತನ್ನ ತಾನು ಅರಿತ ಮೇಲೆ ಅರಿವು ತನುವಿನಲ್ಲಿಯೇ ಇದೆ ಎಂದು ತಿಳಿಯುತ್ತದೆ. ತನುವಿನಲ್ಲಿಯೇ ಇರುವ ಅರಿವು ಗಟ್ಟಿಯಾಗಿ ಕೈಗೆ ಎಟಕಿದ ಬಳಿಕ ತಾನೇ ಸೌರಾಷ್ಟ್ರ ಸೋಮೇಶ್ವರಾ ಎಂದು ಆದಯ್ಯ ಶರಣರು ತಮ್ಮ ಒಂದು ಸೂತ್ರವನ್ನು ಸರ್ವ ತನುಗಳಿಗೂ ನೀಡಿದ್ದಾರೆ.

ಬಸವಣ್ಣನವರ ಸೂತ್ರ, ಸಿದ್ಧರಾಮ ಶಿವಯೋಗಿಗಳ ಸೂತ್ರ, ಆದಯ್ಯ ಶರಣರ ಸೂತ್ರ ಹಿಡಿದು ತನುವನ್ನು ಆವರಿಸಿದ ಮನವೆಂಬ ಮಾಯೆಯ ಮೂಲಕ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನೆಡೆಗೆ ಹೋಗುವ ದಾರಿಯನ್ನು ಸಕಲ ತನುಗಳು ಕಂಡುಕೊಳ್ಳಬೇಕಿದೆ.

**451**

**ಕುಂಕುಮದ ಗಿರಿ ಕೊನೆಯೇರಿ ಬೆಳೆದು,**
**ಆಯತವಿಡಿದು ಸುಖವ ಕಂಡು**
**ಅನುಭವದವಳಿಗೆ ಪಚ್ಚವರ್ಣ ಸುಖವನೇಕೀಕರಿಸಿ ನೋಡಲು**
**ಆಯತವಾಯಿತ್ತಯ್ಯಾ ಕುಂಕುಮದ ಹನ್ನೆರಡೆಸಳ ಪೀಠ,**
**ಆ ಪೀಠದಲ್ಲಿ ವೀರಭೃತ್ಯನೆಂಬವ ನಿಂದು,**
**ಜಂಗಮವಿಡಿದು ನಡೆಯೆ,**
**ಅನಿಲಗುಣ ಕೆಟ್ಟು ನೆಲೆಗೊಂಡನಯ್ಯಾ .**
**ನಿಮ್ಮ ಶರಣ ಚೆನ್ನಬಸವಣ್ಣನು,**
**ಕಪಿಲಸಿದ್ಧ ಮಲ್ಲಿನಾಥಯ್ಯಾ ,**
**ಚೆನ್ನಬಸವಣ್ಣನಿಂದ ಬದುಕಿದೆನಯ್ಯಾ .**

ಜಲಬಿಂದು ಗರ್ಭ ಸೇರಿ ರಕ್ತವಾಗಿ ಮಾಂಸವಾಗಿ ಇಡೀ ಕಾಯ ಕುಂಕುಮ ವರ್ಣದ ಗಿರಿಯೇ ಆಗಿ ಬೆಳೆದಿದೆ. ಎಲ್ಲಿ ಅಗೆದರೂ ಕುಂಕುಮವೇ ಕುಂಕುಮ. ಗಿರಿಯನ್ನು ಸುಖ ದುಃಖವೆಂಬ ಅಜ್ಞಾನ ಆವರಿಸಿದೆ. ಆಯತವಿಡಿದು ನೋಡಿದಾಗ ಪರಮ ಸುಖವೇ ಭರಿತವಾಗಿದೆ. ಕಾಯವೆಂಬ ಗಿರಿಯನ್ನು ಆವರಿಸಿದ ಮನವೆಂಬ ಮಹಾದೇವನ ಅರಸಿ ಪಚ್ಚವರ್ಣದ ಸುಖವನ್ನು ಏಕೀಕರಿಸಿ ನೋಡಲು ತಂತಾನೆ ಆಯತವಾಯಿತ್ತಯ್ಯ ಹನ್ನೆರಡಸಳ ಪೀಠ.

ಕಾಯವೆಂಬ ಪೀಠದಲ್ಲಿ ವೀರಭೃತ್ಯನೆಂಬ ಮಹಾವೀರ ನಿಂದು, ಜಂಗಮವಿಡಿದು ನಡೆಯಲು, ಅನಿಲಗುಣ ಕೆಟ್ಟು ನೆಲೆಗೊಂಡನಯ್ಯಾ .

ಚೆನ್ನಬಸವಣ್ಣನವರ ಬೆಡಗಿನ ಈ ವಚನ ಅಜ್ಞಾನವನ್ನು ಹಿರಿದು ಕಳೆಯುವ ಖಡ್ಗವಿದ್ದಂತಿದೆ. ಜಂಗಮನೆಂದರೆ ಒಂದು ಜಾತಿಯಿಂದ ಬಂದವನಲ್ಲ. ತನುವಿನಲ್ಲಿಯೇ ತನ್ಮಯವಾದ ಜ್ಞಾನ ಖಡ್ಗ. ಅಜ್ಞಾನವನ್ನು ಸೀಳಿ ಹಾಕುವ ಅವ್ಯಕ್ತ ಜ್ಞಾನ. ತನುವಿನಲ್ಲಿಯೇ ಇದ್ದು, ಎಚ್ಚರದ ಅರಿವಿನ ಆತನ ಮಾತುಗಳು ಮನಕ್ಕೆ ಕೇಳುತ್ತಿಲ್ಲ. ಮನಕ್ಕೆ ಜಂಗಮನ ಪರಿಚಯವಾದರೆ ಸಾಕು ತನುವಿಗೆ ಬಂದ ಸಕಲ ಅಜ್ಞಾನದ ವಿಪತ್ತುಗಳನ್ನು ತನ್ನ ಜ್ಞಾನ

ಖಡ್ಗದಿಂದ ಕೊಚ್ಚಿ ಹಾಕುತ್ತಾನೆ.

ರಕ್ತಭರಿತವಾದ ಕಾಯ ವಿರಕ್ತನಾಗಿ ಮಾರ್ಪಡುತ್ತದೆ. ಮರದಲ್ಲಿ ವಿರಕ್ತ ಹರಿಯುತ್ತಿರುವುದರಿಂದ ಅದರ ರೆಂಬೆ ಕೊಂಬೆಗಳು ಫಲಭರಿತವಾದ ಹೂ ಕಾಯಿ ಹಣ್ಣುಗಳಿಂದ ತುಂಬಿ ನಳನಳಿಸುತ್ತಿದೆ ಹಾಗೆಯೇ ಜಂಗಮನ ಪರಿಚಯವಾದ ಮನ ಮಹಾದೇವನೇ ತಾನಾಗಿ ತನ್ನ ಅನಿಲ ಗುಣಗಳನ್ನು ಕೆಡಿಸಿಕೊಳ್ಳುತ್ತದೆ.

ಚೆನ್ನಬಸವಣ್ಣ ದೇವರು ಅಪಾರವಾದ ಕರುಣಾಮಯಿ. ಅವರು ಈ ಸೂತ್ರವನ್ನು ನನಗೆ ತೋರಿ ಜಂಗಮವಿಡಿದು ನಡೆಯಲು ಸೂಚಿಸಿದ್ದರಿಂದ ಆ ಜಂಗಮನಿಂದ ಕಾಯದ ಅಜ್ಞಾನ ದೂರವಾಯಿತು. ಆ ಸದ್ಗುರುವಿನಿಂದ ನಾನು ಬದುಕಿದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಕಾಯದಲ್ಲಿಯೇ ಸಂಗಮವಾದ ವೀರಭೃತ್ಯನೆಂಬ ಬುದ್ಧನೊಂದಿಗೆ ಮಾತನಾಡಿದ್ದಾನೆ.

ಕಾಯವನ್ನು ಆವರಿಸಿದ ಮನ ಸಿದ್ಧರಾಮ ಶಿವಯೋಗಿಯಾದರೆ ಕಾಯದಲ್ಲಿಯೇ ಸಂಗಮವಾದ ಬುದ್ಧನನ್ನು ಮಲ್ಲಯ್ಯ ಎಂದು ಹೆಸರಿಟ್ಟು ಕರೆದು ಆತನೊಂದಿಗೆ ಸಿದ್ಧರಾಮ ಮಾತನಾಡುತ್ತಿದ್ದಾನೆ.

**452**

**ಕುಂಡಲಿ ಭ್ರೂಮಧ್ಯವನೊಂದಿನಿಂದು, ಪೂರ್ವಹೃದಯವ ಪೂರೈಸಿ,**
**ಮಧ್ಯಹೃದಯವನವಗ್ರಹಿಸಿ, ಊರ್ಧ್ವಹೃದಯವನೊಡಗೂಡಿ,**
**ಪಶ್ಚಿಮ ಚಕ್ರದಲ್ಲಿ ಪ್ರಾಣನಿವಾಸಿಯಾಗಿಪ್ಪನಾ ಶರಣ.**
**ಓಂ ಮೂಲದ ಆ ಪಶ್ಚಿಮ ಶಿಖಾಚಕ್ರದಲ್ಲಿ ಮನೋಭಾವವಡಗಿ,**
**ಸಹಸ್ರದಳಕಮಲದ ಬಯಲೊಳಗೆ ಬಯಲಾಗಿ,**
**ನೀನು ತಾನಾದ ಚೆನ್ನಬಸವಣ್ಣನ ಶ್ರೀಪಾದಕ್ಕೆ**
**ಶರಣೆಂದು ಬದುಕಿದೆನು ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮೂಲಾಧಾರದಲ್ಲಿ ನಿಂತು, ಭ್ರೂಮಧ್ಯವನೊಂದಿ ಅಲ್ಲಿ ನಿಂತು, ಪೂರ್ವ ಹೃದಯವ ಪೂರೈಸಿ, ಮಧ್ಯ ಹೃದಯವನು ಅವಗ್ರಹಿಸಿ, ಊರ್ಧ್ವ ಹೃದಯವನು ಒಡಗೂಡಿ, ಪಶ್ಚಿಮ ಚಕ್ರದಲ್ಲಿ ಪ್ರಾಣ ನಿವಾಸಿಯಾಗಿ ಇಪ್ಪನು ಶರಣ.

ಓಂ ಮೂಲದ ಆ ಪಶ್ಚಿಮ ಶಿಖಾಚಕ್ರದಲ್ಲಿ ಮನೋಭಾವವು ಅಡಗಿ ಸಹಸ್ರದಳ ಕಮಲದ ಬಯಲೊಳಗೆ ಬಯಲಾಗಿ, ನೀನು ತಾನಾದ ಚೆನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಬದುಕಿದನು ಕಾಣಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.

ತನು ಅಂದರೆ ಸಾಮಾನ್ಯವಲ್ಲ. ಮೂಲಾಧಾರದಿಂದ ನೆತ್ತಿಯವರೆಗೆ ಸರ್ಪವನ್ನೇ ಅಡಗಿಸಿಕೊಂಡ ಹುತ್ತ. ಆಶ್ರಯಕೊಟ್ಟ ಎರಡು ನೇತ್ರಗಳ ಹುಬ್ಬುಗಳ ಮಧ್ಯದಲ್ಲಿ ಹೆಡೆ ಎತ್ತಿನಿಂದು ಇಡೀ ತನುವನ್ನೇ ತನ್ನದನ್ನಾಗಿಸಿಕೊಂಡು ತನುವಿನ ಮೂಲಕ ಸುಖಿಸುತ್ತದೆ. ತನುವಿನ ಮೂಲಕ ಬುಸುಗುಡುತ್ತದೆ.

ರಾಮಾಯಣ ರಚಿಸಿದ ಮಹಾಕವಿ ತನ್ನ ಹೆಸರನ್ನು ವಾಲ್ಮೀಕಿ ಎಂದು ಇಟ್ಟುಕೊಂಡ.

ವಾಲ್ಮೀಕಿ ಎಂದರೆ ಹುತ್ತ; ಹುತ್ತವನ್ನು ಹೊಂದಿದ ಹಾವು; ಹಾವು ಆವರಿಸಿದ ತನು. ಆತ ಇಟ್ಟುಕೊಂಡ ಹೆಸರು ಸಾರ್ಥಕ.

ರಾಮಾಯಣದಲ್ಲಿ ಸಾವಿರಾರು ಪಾತ್ರಗಳು. ಆದರೆ ತನು ಒಂದೇ. ಅದರಲ್ಲಿ ಹರಿದಾಡುವ ಹಾವು ಕೂಡಾ ಒಂದೇ. ಹಾವು ತನುವಿಗೆ ಹಾಕಿದ ಪಾತ್ರ ಮಾತ್ರ ಅನೇಕ.

ಹಾವು ಪೂರ್ವ ಹೃದಯದಲ್ಲಿ ಹರಿದಾಡಿದರೆ ಒಂದು ಪಾತ್ರ; ಮಧ್ಯ ಹೃದಯದಲ್ಲಿದ್ದರೆ ಮತ್ತೊಂದು ಪಾತ್ರ; ಊರ್ಧ್ವಹೃದಯವನು ಒಡಗೂಡಿದರೆ ಅದೊಂದು ಪಾತ್ರ. ಪಶ್ಚಿಮ ಚಕ್ರದಲ್ಲಿ ವಾಸಮಾಡಿದರೆ ಸಾಕು ಹಾವಿನ ಹಲ್ಲುಗಳೆಲ್ಲ ಉದುರಿ ಅದರಲ್ಲಿದ್ದ ವಿಷವೆಲ್ಲ ಅಮೃತವಾಗಿ ಬೆಳಗಿನ ಸಹಸ್ರದಳಗಳ ಮೂಲಕ ಹೊರ ಚಿಮ್ಮುವುದು.

ಸದಾ ವಿಷ ಚಿಮ್ಮುವ ನಾಗ ತನುವಿನ ಕೊರಳಿಗೆ ಭೂಷಣವಾಗಿ ನಾಗಭೂಷಣನೆಂದು ಕರೆಯಿಸಿಕೊಳ್ಳುವುದು. ಪಶ್ಚಿಮ ಚಕ್ರದಲ್ಲಿ ಪ್ರಾಣನಿವಾಸಿಯಾಗಿ, ಆ ಪ್ರಾಣಕ್ಕೆ ಶರಣು ಹೋಗಿ ಶರಣನೆಂದು ಕರೆಯಿಸಿಕೊಳ್ಳುವುದು.

ಹಾವು ವಾಸ ಮಾಡಿದ ತನುವಿನ ಪಾತ್ರ ಅನಂತ. ಒಂದು ತನು ದಶರಥನಾದರೆ ಮತ್ತೊಂದು ಕೌಸಲ್ಯೆ, ಸುಮಿತ್ರ, ಕೈಕೇಯಿ, ರಾಮ ಲಕ್ಷ್ಮಣ ಭರತ ಶತ್ರುಜ್ಞ, ಮಂಥರೆ. ರಾವಣ ಮಂಡೋದರಿ ವಿಭೀಷಣ ಸೀತೆ ವಾಲಿ ಸುಗ್ರೀವ ಶಂಭೂಕ. ಹೆಸರು ಯಾವುದಾದರೇನು? ತನು ಒಂದೇ. ಅದರಲ್ಲಿ ಹರಿದಾಡುವ ಮನ ಒಂದೇ. ತನುವಿನಲ್ಲಿ ಸಂಗಮವಾದ ಅರಿವಿನ ಸದ್ಗುರು ಒಬ್ಬನೆ.

ತನುವಿನಲ್ಲಿ ಹರಿದಾಡುವ ಮನವೆಂಬ ಹಾವಿಗೆ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಪರಿಚಯವಾದರೆ ಶ್ರೀರಾಮನಾಗುತ್ತಾನೆ; ಪರಿಚಯವಾಗದಿದ್ದರೆ ರಾವಣನಾಗುತ್ತಾನೆ.

ಶ್ರೀರಾಮಚಂದ್ರನೆಂದರೆ ಸಾಮಾನ್ಯನಲ್ಲ; ಸಾಕ್ಷಾತ್ ವಿಷ್ಣು. ಹಾವನ್ನೇ ಹಾಸಿಗೆ ಮಾಡಿಕೊಂಡು ಅದರ ನೆರಳಲ್ಲಿ ಮಲಗಿದಾತ. ಜಲವನ್ನೇ ಭೂಮಿಯಾಗಿಸಿಕೊಂಡು ಅದರ ಮೇಲೆ ತೇಲಿದಾತ. ಆತನ ಹೊಕ್ಕಳ ಬಳ್ಳಿಯಲ್ಲಿ ಹುಟ್ಟಿದಾತನೇ ಬ್ರಹ್ಮ. ಇವರಿಬ್ಬರ ಸೃಷ್ಟಿಗೆ ಕಾರಣವಾಗಿ ವಿಷ್ಣುವಿನ ತನುವಿನಲ್ಲಿ ಸಂಗಮವಾದಾತನೇ ಮಹೇಶ್ವರ. ಈತನ ಮತ್ತೊಂದು ಹೆಸರೇ ನಾಗಭೂಷಣ; ನಾಗಾಭರಣ.

ಹಾವು ಹರಿಗೆ ಹಾಸಿಗೆಯಾದರೆ ಅದು ಹರನಕೊರಳಿಗೆ ಭೂಷಣವಾಗಿದೆ; ಆಭರಣವಾಗಿದೆ. ಒಂದು ತನು ಹಾವನ್ನೇ ಹಾಸಿಗೆ ಮಾಡಿಕೊಂಡಿದೆ. ಮತ್ತೊಂದು ತನು ಬ್ರಹ್ಮಕಮಲವಾಗಿ ಅರಳಿ ಅದರಲ್ಲಿ ಕುಳಿತಿದೆ. ಹಾವನ್ನೇ ಆಭರಣ ಮಾಡಿಕೊಂಡು ನಾಗಭೂಷಣನೆಂದು ಕರೆಯಿಸಿಕೊಂಡ ತನುವೊಂದು ಎರಡು ತನುಗಳ ಸೃಷ್ಟಿಗೆ ಕಾರಣವಾಗಿ ಕಾರಣ ತನುವೆಂದು ಕರೆಯಿಸಿಕೊಂಡಿದೆ.

ಹಾವನ್ನು ಹಾಸಿಗೆ ಮಾಡಿಕೊಂಡ ತನುವೆ ಸ್ಥೂಲತನುವು. ತನುವನ್ನು ಬಳ್ಳಿಯಂತೆ ಆವರಿಸಿಕೊಂಡು ನೆತ್ತಿಯ ಮೇಲೆ ಅರಳಿನಿಂತ ತನುವೇ ಸೂಕ್ಷ್ಮತನುವು. ತನುವಿನ ರಚನೆ ತನುವನ್ನು ಆವರಿಸಿದ ಮನದ ಮೂಲಕ ತಿಳಿದು ತನುವಿನ ನೆತ್ತಿಯ ಮೇಲೆ ಅರಳಿನಿಂತ ಸಹಸ್ರದಳ ಕಮಲದ ಬಯಲೊಳಗೆ ಬಯಲಾಗಿ ಮನ ಘನ ಒಂದಾದಾತನೇ ಚೆನ್ನಬಸವಣ್ಣ. ಈ ವೃತ್ತಾಂತವನ್ನು ನನಗೆ ವಿವರಿಸಿದ ಆ ಸದ್ಗುರುವಿನ ಶ್ರೀಪಾದಕ್ಕೆ ಶರಣೆಂದು ಬದುಕಿದೆನು ಕಾಣಾ ಎಂದು ಸಿದ್ಧರಾಮ ಶಿವಯೋಗಿಗಳು ನಾಗಭೂಷಣನೊಂದಿಗೆ ಮಾತನಾಡಿದ್ದಾರೆ.

**453**

**ಕುಂಜರ ಬಂದು ಮೇಲುವಾಯ್ದು ಸೀಳ್ದಿಡುಕ್ಕುಗೆಯಾ,**
**ಮೇಣು ಎತ್ತಿಕೊಂಡೆಯಾ.**
**ಎತ್ತಿಕೊಂಡಡೆ, ಮನ ವಿಚ್ಚಿಂದವಾಗದೆ**
**ಒಂದೆಯಿಂದದಿ ಇಪ್ಪಂತಪ್ಪ ನಿಮ್ಮದೊಂದು ಸಮತಾಗುಣ**
**ಎನ್ನನೆಂದುಪೊಂದಿಪ್ಪುದು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುದೇವನ ದರ್ಶನವಾದರೆ ಸಾಕು ಅಹಂಕಾರ ಸೀಳಿ ತುಂಡಾಗಬೇಕು. ಮದ್ದಾನೆ ಗುರುದೇವನ ಸೇವಕನಾಗಬೇಕು. ಆದರೆ ಅಹಂಕಾರ ಮತ್ತಷ್ಟು ವೃದ್ಧಿಯಾದರೆ ಮದ್ದಾನೆಯನ್ನು ಯಾರೂ ಕಾಪಾಡುವುದಿಲ್ಲ. ಕಾಡಿಗೆ ಕಾಡೇ ನಾಶವಾಗುವುದರಲ್ಲಿ ಸಂದೇಹವೇ ಇಲ್ಲ.

ವೇದ ಉಪನಿಷತ್ತು ಭಗವದ್ಗೀತೆ ಖುರಾನ್ ಕಲಿತೆವೆಂಬ ಅಹಂಕಾರ ಮದ್ದಾನೆಗೂ ಮಿಗಿಲಾದದ್ದು. ಅವೆಲ್ಲ ತನುವಿನಲ್ಲಿಯೇ ತನ್ಮಯವಾದ ಅರಿವು. ತನುವಿನ ಉದ್ಧಾರಕ್ಕಾಗಿ ಬಂದ ಪುಸ್ತಕಗಳು ತನುವನ್ನೇ ಆಳಿಸಿಕೊಳ್ಳುವುದೆಂದರೇನು? ಭಗವಂತನನ್ನು ಹಾಡಿ ಹೊಗಳುವ ಗೀತೆ ನೀನೇ ಆಗಿರುವಿ.

ನಿನ್ನಿಂದಲೇ ಭಗವದ್ಗೀತೆ ಬೈಬಲ್‌ಗಳು ಹುಟ್ಟಿದವು. ನೀನು ಎಂದರೆ ಸಾಮಾನ್ಯನಲ್ಲ. ಶ್ರೀಕೃಷ್ಣನು ನೀನು; ಕ್ರಿಸ್ತನೂ ನೀನೇ ಆಗಿರುವಿ. ಸಕಲ ಜ್ಞಾನಿಗಳು ಕೂಡಾ ನಿನ್ನಂತಹ ತನು ಉಳ್ಳವರೇ ಆಗಿದ್ದರೂ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಕಂಡುಕೊಂಡರು. ಆ ಗುರುದೇವನೇ ತಾವಾದರು. ಹೀಗಾಗಿ ಶ್ರೀಶಂಕರರು 'ಅಹಂಬ್ರಹ್ಮಾಸ್ಮಿ' ಎಂದರು. ಕ್ರಿಸ್ತ, ನಾನು ದೇವರನ್ನು ನೋಡಿದ್ದೇನೆ. ಆ ದೇವನ ದೂತ ನಾನು. ನಿಮಗೂ ಆ ದೇವರನ್ನು ತೋರಿಸಬಲ್ಲೆ ಎಂದ.

ಎಂತಹ ಸಂತೋಷದ ಮಾತು, ಪರಮಸಂತೋಷದ ಮಾತು. ಈ ಮಾತು ಅಹಂಕಾರವನ್ನು ಅಳಿಯುವ ಮಾತು. ತನುವಿಗೆ ಅಂಟಿದ ಮನವೆಂಬ ಅಜ್ಞಾನ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನದಲ್ಲಿ ಸಂಗಮವಾಗಿ ಮದ್ದಾನೆ ಮಾಯವಾಯಿತು.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಅರಿವನ್ನು ತಿಳಿದು ಆ ಅರಿವೇ ತಾನಾಯಿತು. ಅರಿವಿನ ಸಮತಾಗುಣ ಮನವನ್ನು ಹೊದ್ದು ಆ ಮನವೇ ಘನಮನವಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**454**

**ಕುಡಿ ನಿಮಿರ್ದ ದಾಡೆಗಳ**
**ಅಸುರಗಣ ದೃಷ್ಟಿಯ ಹರಹು ಮಂಡೆಯ**
**ಕೆಲಬಲದೊಂದು ದಾಡೆ ಆಕಾಶವನಳ್ಳಿರಿವುದು,**
**ಒಂದು ದಾಡೆ ಭೂಮಿಯನುತ್ತರಿಸುವುದು,**
**ಭೂಮಿ ಭೂತಕೋಟೆಯಾಗಿ ಸುತ್ತಿದಡೆ ಉದ್ದಂಡ.**
**ಭೂತ ತೊಂಡಾಣೆಯ ಮಾಣಿಸಯ್ಯಾ,**

**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ**
**ನೀ ಸದ್ಧರ್ಮಿಯಾದಡೆ ಅಯ್ಯಾ.**

ಕುಡಿ ನಿಮಿರ್ದ ದಾಡೆಗಳು ಎರಡು. ಅಸುರಗುಣ ದೃಷ್ಟಿಯದು ಒಂದು ದಾಡೆ; ಕೆಲಬಲದ ಒಂದು ದಾಡೆ. ಒಂದು ದಾಡೆ ಭೂಮಿಯೆಡೆಗೆ ಮುಖ ಮಾಡಿದರೆ ಮತ್ತೊಂದು ಆಕಾಶದತ್ತ ಮುಖ ಮಾಡಿದೆ.

ಒಂದು ಅಧೋಮುಖಿಯಾದರೆ ಮತ್ತೊಂದು ಊರ್ಧ್ವಮುಖಿ. ಒಂದು ದೇಹದಲ್ಲಿಯೇ ಎರಡು ಮನೆ ಮಾಡಿವೆ. ಭೂಮಿಯೆಡೆಗೆ ನೋಡುವ ಒಂದು ದಾಡೆ ಭೂಮಿಯನು ಉತ್ತರಿಸುವುದು. ಭೂಮಿ ಭೂತಕೋಟೆಯ ಸುತ್ತಿದಡೆ ಉದ್ದಂಡ. ಭೂತದ ತುಂಟತನ ಭೂಮಿಯನ್ನು ಬಿಡದು. ಅದು ಬಿರ್ರನೆ ಬಿರಿಯುತ್ತದೆ. ಗಾಳಿ ಮಳೆ ಬಿಸಿಲು ಬೆಂಕಿ ಸಿಡಿಲಿಗೆ ಮೈಯೊಡ್ಡುತ್ತದೆ. ಹಾಗೆಯೇ ಭೂಮಿಯ ಬಿಂದುವೇ ಒಂದು ಭೂತವಾಗಿ ದೇಹ ಎಂದು ಕರೆಯಿಸಿಕೊಂಡಿದೆ. ಭೂಮಿಯಲ್ಲಿ ಆದ ಬದಲಾವಣೆಗಳು ದೇಹದಲ್ಲಿಯೂ ಆಗುತ್ತವೆ.

ಶಬ್ದಮಾಡಿದ ಗುಡುಗು, ಮಿಂಚು ಹೊಡೆದ ಆಕಾಶ, ಬರ್ರನೆ ಬೀಸುವ ಬಿರುಗಾಳಿ, ಭೋರ್ಗರೆದು ಹರಿಯುವ ನೀರು, ಕೆನ್ನಾಲಿಗೆ ಚಾಚಿ ಉರಿಯುವ ಬೆಂಕಿ ಇವು ಭೂತಗಳ ಅಸುರಗಣದ ದೃಷ್ಟಿಯು. ಇಂತಹ ಅಸುರಗುಣಗಳು ಕಾಯದಲ್ಲಿ ತನಗರಿಯದಂತೆ ಮಿಳಿತವಾಗಿವೆ. ಇವು ಭೂತಗಳ ಮಹಿಮೆ.

ಈ ಐದೂ ಭೂತಗಳ ತುಂಟತನವನ್ನು ಮಾಣಿಸುವ ಶಕ್ತಿ ಕೂಡಾ ತನುವಿಗೆ ಅರಿಯದಂತೆ ತನುವಿನಲ್ಲಿ ತನ್ಮಯವಾಗಿದೆ. ತನುವು ತನ್ನಲ್ಲಿಯೇ ತನ್ಮಯವಾದ ಅಗಾಧ ಶಕ್ತಿಯನ್ನು ತಾನೇ ಅರಿಯದಿದ್ದುದಕ್ಕಾಗಿ ತನು ಶಬ್ದಕ್ಕೆ ಯಾತನೆ ಅನುಭವಿಸುತ್ತದೆ. ಸುಖವೂ ಅನುಭವಿಸುತ್ತದೆ. ಆದರೆ ಶಬ್ದಕ್ಕೆ ಸುಖ ದುಃಖಗಳನ್ನು ಉಂಟು ಮಾಡುವ ಶಕ್ತಿ ಇಲ್ಲವೆಂದು ತನುವಿಗೆ ತಿಳಿಯಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ತನು ಯಮಯಾತನೆ ಅನುಭವಿಸುತ್ತದೆ.

ದ್ರೌಪದಿಯ ಶಬ್ದ ಕೌರವ ಹಾಗೂ ಪಾಂಡವ ಕುಲವನ್ನೇ ನಾಶ ಮಾಡಿತು. ಕೈಕೇಯಿಯ ಎರಡು ಶಬ್ದಗಳಿಂದಾಗಿ ರಾಮ ವನವಾಸಕ್ಕೆ ಹೋದ. ಕೈಕೇಯಿ ತನ್ನ ಸುಖಕ್ಕಾಗಿ ತಾನೇ ನುಡಿದ ಎರಡು ಶಬ್ದಗಳು ರಾಮನನ್ನು, ನುಡಿದ ಕೈಕೇಯಿಯನ್ನು ಹೊಸಕಿಹಾಕಿತು.

ಕಾಯದಿಂದ ಹೊರಬಂದ ಶಬ್ದಗಳು ಕಾಯಕ್ಕೆ ಕೇಳಲು ಸಾಧ್ಯವಾಗುವುದಿಲ್ಲ. ಅದು ಬೆಂಕಿಯ ಉಂಡೆಯಾಗಿ ಕಾಯಕ್ಕೆ ಬಡಿದು ಕಾಯದಲ್ಲಿ ಸಂಗಮವಾದ ಜಲವನ್ನು ಕತಕತನೆ ಕುದಿಯುವಂತೆ ಮಾಡುತ್ತದೆ. ಇದೊಂದು ಭೂತಗಳ ತುಂಟುತನವೆಂದು ಅವುಗಳ ಗುಣವೆಂದು ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಮಾತ್ರ ತಿಳಿಯುತ್ತದೆ. ಆತ ಬಯಲದೇವ.

ಬಯಲ ದೇವನಿಗೆ ಭೂತಗಳ ತುಂಟಾಟವೆಂದರೆ ಬಲು ಇಷ್ಟ. ಭೋರ್ಗರೆದು ಸುರಿಯುವ ಮಳೆಗೆ ಬಯಲು ನಲುಗುವುದಿಲ್ಲ. ಮಳೆ ಬರಿಸುವ ಮೋಡಗಳು ಬಯಲಗರ್ಭದಲ್ಲಿಯೇ ಸಂಗಮವಾಗಿವೆ. ಮೋಡಗಳ ತಿಕ್ಕಾಟದಿಂದ ಉಂಟಾದ ಅಗ್ನಿ ಕೂಡಾ ಬಯಲಲ್ಲಿಯೇ ಬಂಧಿಯಾಗಿದೆ. ಮೋಡ, ಅಗ್ನಿಯಿಂದ ಉಂಟಾದ ಗಾಳಿ ಕೂಡಾ ಬಯಲ ಗರ್ಭದಲ್ಲಿಯೇ ಬಂಧಿಯಾಗಿದೆ. ಭೂಮಿ ಕೂಡಾ ಬಯಲಗರ್ಭದಲ್ಲಿಯೇ ಇದೆ.

ಕಾಯದಲ್ಲಿ ಜಲವೂ ಇದೆ, ಅಗ್ನಿಯೂ ಇದೆ, ವಾಯು ಕೂಡಾ ಇದೆ. ಜಲಬಿಂದುವೇ

ಗಟ್ಟಿಯಾಗಿ ಮೂಳೆಯಾಗಿದೆ, ಮಾಂಸ ಮಜ್ಜೆ ಮೇದಸ್ಸು ಆಗಿದೆ. ಸುಂದರವಾದ ಚರ್ಮವಾಗಿ ಯಾವ ಪದಾರ್ಥಗಳು ಹೊರಗೆ ಚೆಲ್ಲದಂತೆ ಹೊಲಿದುಕೊಂಡು ಸುಂದರವಾದ ಕಾಯವಾಗಿದೆ. ಕಾಯದ ಗರ್ಭದಿಂದಲೇ ಪರಿಪೂರ್ಣ ಕಾಯವಾಗಿ ಹೊರಗೆ ಬಂದಿದೆ.

ಕಾಯ ತಿಳಿಯದಿದ್ದರೆ ಕಾಯದಲ್ಲಿಯೇ ಸಂಗಮವಾದ ಗಾಳಿಯಗುಣ ಸುಂಟರಗಾಳಿಯಾಗಿ ಬೀಸುತ್ತದೆ. ಕಾಯದಿಂದಲೇ ಹುಟ್ಟಿದ ಶಬ್ದ ಕಾಯಕ್ಕೆ ಬೆಂಕಿ ಹಚ್ಚಿ ಕಾಯವನ್ನೇ ಸಿಡಿಯುವಂತೆ ಮಾಡುತ್ತದೆ. ಜಲ ರಕ್ತವಾಗಿ ನೆತ್ತಿ ಹೊಡೆದು ಕಿವಿ ಮೂಗು ಕಣ್ಣುಗಳ ಮೂಲಕ ಕಾರಂಜಿಯಾಗಿ ಚಿಮ್ಮುತ್ತದೆ.

ಕಾಯದಲ್ಲಿಯೇ ಸಂಗಮವಾದ ಬಯಲ ಗುರುದೇವನನ್ನು ಭೂತಗಳು ಏನೂ ಮಾಡುವುದಿಲ್ಲ. ಈತ ಕಾಯದ ಧರ್ಮವನ್ನು ಕಾಯುವ ಕಾಯಕದಲ್ಲಿ ನಿರತನಾಗಿದ್ದಾನೆ. ಭೂತಗಳ ಚೇಷ್ಟೆ ಈತನ ಮುಂದೆ ನಡೆಯುವುದಿಲ್ಲ. ಬಯಲು ಸಕಲ ಭೂತಗಳನ್ನು ಮಕ್ಕಳನ್ನಾಗಿ ಮಾಡಿಕೊಂಡು ತನ್ನ ಗರ್ಭದಲ್ಲಿ ಇಟ್ಟುಕೊಂಡಿದೆ. ಬಸಿರೆಯ ಗರ್ಭದಲ್ಲಿದ್ದ ಮಕ್ಕಳು ಒದ್ದು ತುಂಟಾಟ ಮಾಡಿದರೆ ತಾಯಿಗೆ ಆನಂದವಾಗುವಂತೆ ಬಯಲಿಗೂ ಭೂತಗಳ ಚೇಷ್ಟೆ ಆನಂದವನ್ನು ಉಂಟು ಮಾಡುತ್ತದೆ.

ಈ ಉದಾಹರಣೆಯನ್ನು ಸಕಲ ಕಾಯಗಳು ತಮ್ಮ ಅನುಭವಕ್ಕೆ ತಂದುಕೊಂಡು ನೋಡಬಹುದಾಗಿದೆ. ಕಣ್ಣು ಕಿವಿ ಮೂಗು ಚರ್ಮ ನಾಲಿಗೆಯಿಂದ ಉಂಟಾದ ಅಜ್ಞಾನ ಅಲ್ಲಿಯೇ ಇರುವ ಜ್ಞಾನಕ್ಕೆ ಪ್ರಸಾದವಾದರೆ ಕಾಯ ಕಾಯದ ಧರ್ಮವನ್ನು ಪಾಲಿಸಿದಂತೆ. ಕಾಯದಲ್ಲಿಯೇ ಸಂಗಮವಾದ ಸಕಲ ಭೂತಗಳ ತುಂಟಾಟವನ್ನು ಕಾಯದಲ್ಲಿ ಇದ್ದ ಸದ್ಧರ್ಮಿ ಅರಿವೆಂಬ ಗುರುದೇವನು ಕಪಿಲಸಿದ್ಧ ಮಲ್ಲಿಕಾರ್ಜುನನು ಮಾಣಿಸುತ್ತಾನೆ.

**455**

**ಕುರುಡು ಸೂಳೆಗೆ ಕುಂಟ ಬೋಜಗನು**
**ಕೋಲ ಹಿಡಿದು ನಡೆವಂತೆ ಸೂಳೆತನಗಳ ಮಾಡುವಿರಿ;**
**ಮೋಹದ ಪರಿಯೆಂತುಟು ಹೇಳಾ?**
**ನೋಟ ಬೇಟ ಕೂಟ**
**ಸಮಸುಖ ಸಮರತಿಯಾದರೆ ಕಪಿಲಸಿದ್ಧ ಮಲ್ಲಿನಾಥಯ್ಯಾ ಬೇರಿಲ್ಲವವ್ವಾ.**

ಸೂಳೆ ಎಂದರೆ ಹೆಣ್ಣಲ್ಲ; ಹೆಣ್ಣಿಗಾಗಿ ಹೇಳಿದ ಮಾತು ಕೂಡಾ ಅಲ್ಲ. ಕಾಯವನ್ನು ಆವರಿಸಿದ ಮನವೆಂಬ ಮಾಯೆಗೆ ಹೇಳಿದ ಮಾತು. ಕಾಯುವನ್ನು ಆವರಿಸಿದ ಮಾಯಮಯವಾದ ಮನವೆಂಬ ಸೂಳೆಗೆ ಕಣ್ಣು ಕಾಣುವುದಿಲ್ಲ. ಅದು ಹುಟ್ಟಿನಿಂದಲೇ ಕುರುಡಿ. ಕಾಯದ ಕುರುಡು ಕಣ್ಣಿನಿಂದಲೇ ಕಾಯವನ್ನು ಹೆಣ್ಣೆಂದು ಗಂಡೆಂದು ನೋಡಿ ಕಾಯದೊಂದಿಗೆ ಕಾಯವನ್ನೇ ಹಿಡಿದು ಹಾದರ ಮಾಡುವಳು.

ಲೋಹ ನೋಡಿ ಚಿನ್ನ ಎಂದು ಅದಕ್ಕೆ ಮರುಳಾಗಿ ಲೋಹಕ್ಕಾಗಿ ಕಾಯ ಹಿಡಿದು ಯುದ್ಧ ಮಾಡುವಳು. ಕುಂಟುಕಾಯವನ್ನು ಪಣಕ್ಕಿಟ್ಟು ಚಿನ್ನಕ್ಕಾಗಿ ಹೋರಾಡುವಳು.

ಭೂಮಿ ಹೇಮ ಕಾಮ ಅನ್ನ ಅಧಿಕಾರ ವಸ್ತ್ರ ಎಂದರೆ ಮಾಯಾಮಯವಾದ ಮನವೆಂಬ ಸೂಳೆಗೆ ಬಲು ಇಷ್ಟ. ಇದೆಲ್ಲವನ್ನೂ ಕುಂಟನೆಂಬ ಕಾಯದಿಂದಲೇ ಪಡೆದು ಆ

ಕಾಯದ ಮೂಲಕ ಸುಖ ಅನುಭವಿಸುವಳು.

ಚರ್ಮ ಹೆಣ್ಣು ಅಲ್ಲ ಗಂಡು ಕೂಡಾ ಅಲ್ಲ. ಆದರೂ ಚರ್ಮ ನೋಡಿ ತಾನು ಹೆಣ್ಣೆಂದು ತಿಳಿದು ಗಂಡು ಎನ್ನುವ ಅಜ್ಞಾನದಿಂದ ಮನದ ಮೂಲಕ ಹಾದರ ಮಾಡಿ ಭೋಗಿಸುವಳು. ಗಂಡೆಂದು ತಿಳಿದು ಹೆಣ್ಣು ಎನ್ನುವ ಅಜ್ಞಾನದಿಂದ ಭೋಗಿಸುವಳು. ಹೀಗಾಗಿ ಇವಳು ಕುರುಡಿ. ನೋಡಲು ಬಾರದ ಕುರುಡು ಸೂಳೆ; ಕುಂಟುಕಾಯ.

ಕುರುಡು ಸೂಳೆಗೆ ಕುಂಟಕಾಯ ಒಂದು ಉಪಕರಣವಾಗಿದೆ. ಕಲ್ಲ ಮೇಲೆ ನಿಂತು, ಕೆತ್ತಿದ ಕಲ್ಲಿಗೆ ಕಲ್ಲೆಂದು ತಿಳಿಯದೆ ದೇವರೆಂದು ಕೈ ಮುಗಿಯಲು ಕುಂಟುಕಾಯಕ್ಕೆ ಆದೇಶ ನೀಡುವಳು. ಮನವೆಂಬ ಕುರುಡು ಸೂಳೆ ಹೇಳಿದಂತೆ ಬೊಜಗನೆಂಬ ಕಾಯ ಕೇಳುತ್ತದೆ. ಕಾಯದ ಇಡೀ ಆಯುಷ್ಯ ಕುರುಡಿ ಸೂಳೆಯ ದಾಹಕ್ಕಾಗಿ ವ್ಯಯವಾಗುತ್ತದೆ. ಹೀಗಾಗಿ ''ಹೆಳವನ ಮೇಲೆ ಕುರುಡ ಕುಳಿತಿದ್ದಾನೆ'' ದಾರಿ ಸಾಗೆಂದರೆ ಹೇಗೆ ಸಾಗುತ್ತದೆ?

ಜಗತ್ತಿನಲ್ಲಿರುವ ಪ್ರತಿಯೊಂದು ಕಾಯದ ಪರಿಸ್ಥಿತಿ ಹೀಗೆಯೇ ಇದೆ. ''ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ'' ಎಂದು ಅಲ್ಲಮಪ್ರಭುಗಳು ಘೋಷಣೆ ಮಾಡಿದ್ದಾರೆ. ''ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ'' ಎಂದು ಬಸವಣ್ಣನವರು ಕುರುಡು ಕಣ್ಣುಗಳನ್ನು ಪ್ರಶ್ನಿಸಿದ್ದಾರೆ.

ನೋಡಲು ಬಂದ ಮಾತ್ರಕ್ಕೆ ಅದು ಕಣ್ಣಲ್ಲ; ಕುರುಡು ಕಣ್ಣು. ಆ ಕಣ್ಣಿನೊಳಗೊಂದು ಕಣ್ಣಿದೆ. ಅದಕ್ಕೆ ಮಾತ್ರ ನೋಡೂದನ್ನು ನೋಡಲು ಬರುತ್ತದೆ. ಲೋಕದ ಕುರುಡು ಕಣ್ಣುಗಳೆಲ್ಲ ಹಳದಿ ಬಣ್ಣದ ಲೋಹವನ್ನು ಬಂಗಾರ ಎಂದು ಮರುಳಾದರೆ; ಕಣ್ಣೊಳಗಿದ್ದ ಅರಿವಿನ ಕಣ್ಣು ಅದನ್ನು ಲೋಹವೆಂದೇ ಹೇಳುತ್ತದೆ. ಹಾಗೆಯೇ ನೋಡುತ್ತದೆ.

''ಕಳ್ಳನ ಮನೆಗೆ ಬಲುಗಳ್ಳ ಬಂದರೆ ಕೂಡಲಸಂಗಯ್ಯನಲ್ಲದೆ ಬೇರಲ್ಲ. ಕೊಡುಕೊಡೆಲೆ ಚಂಡಾಲಗಿತ್ತಿ ಎನ್ನಯ್ಯನ ಕೈಯಿ ನೊಂದಾವು'' ಎಂದು ಕಳುವು ಮಾಡಲು ಬಂದ ಕಳ್ಳನನ್ನು ಕುರಿತು ಹೆಂಡತಿಯನ್ನು ಎಚ್ಚರಿಸಿದ್ದಾರೆ ಬಸವಣ್ಣ. ಹಾಗೆಯೇ ಕಳ್ಳನನ್ನೂ ಎಚ್ಚರಿಸಿದ್ದಾರೆ. ಲೋಹವೆಂದು ತಿಳಿಯದಿದ್ದಕ್ಕಾಗಿ ಆಭರಣ ಧರಿಸಿದಿ. ಲೋಹವೆಂದು ತಿಳಿಯದಿದ್ದಕ್ಕಾಗಿ ಕಳುವು ಮಾಡಲು ಕಳ್ಳ ಬಂದ. ಕೊಡದಿದ್ದರೆ ಕಳ್ಳ ಕೊಂದು ಲೋಹ ಪಡೆಯುತ್ತಾನೆ. ಪ್ರಾಣ ಹೋದರೂ ಚಿಂತೆಯಿಲ್ಲ ಚಿನ್ನಕೊಡುವುದಿಲ್ಲ ಎಂದು ಬಿಗಿಯಾಗಿ ಹಿಡಿದಿದ್ದಾಳೆ ಪತ್ನಿ. ಧರಿಸಿದ ಪತ್ನಿಗೂ, ಕಳ್ಳನಿಗೂ ಪ್ರಾಣದ ಚಿಂತೆಯಿಲ್ಲ. ಇಬ್ಬರಿಗೂ ಚಿನ್ನ ಬೇಕು. ಆ ಸಂದರ್ಭದಲ್ಲಿ ಇಬ್ಬರಿಗೂ ಪ್ರಾಣ ಬೇಡ. ಇಬ್ಬರಿಗೂ ಕಣ್ಣಿಲ್ಲ. ಹಗಲು ಕುರುಡರು. ಮಹಾಮನೆಯಲ್ಲಿ ವಾಸಮಾಡಿದ ಸಕಲ ಸಾಧಕ ಶರಣರಿಗೂ ಕಣ್ಣಿಲ್ಲ. ಏಕೆಂದರೆ ಕಳ್ಳನನ್ನು ಹಿಡಿದಿದ್ದಾರೆ.

ಬಸವಣ್ಣನಿಗೆ ಮಾತ್ರ ಕಳ್ಳ ಕಾಣುತ್ತಿಲ್ಲ. ಎಚ್ಚರಿಸಲು ಬಂದ ಕೂಡಲಸಂಗಯ್ಯ ಎಂದು ಕಳ್ಳನನ್ನು ಸಂಬೋಧಿಸುತ್ತಿದ್ದಾರೆ.

ಆಕೆ ಕುರುಡಿ ಲೋಹವನ್ನು ಚಿನ್ನವೆಂದು ಧರಿಸಿದ್ದಾಳೆ. ಪ್ರಾಣಕ್ಕಿಂತ ಚಿನ್ನವೇ ಅಧಿಕವೆಂದು ತಿಳಿದು ಪ್ರಾಣ ಕೊಡಲೂ ಸಿದ್ಧವಾಗಿದ್ದಾಳೆ. ಅದು ಚಿನ್ನವಲ್ಲ ಲೋಹವೆಂದು ಕಳ್ಳನ ವೇಷದಲ್ಲಿ ಎಚ್ಚರಿಸಲು ಬಂದ ಅರಿವಿನ ಸಂಗಯ್ಯ ನೀನು. ಎಂದು ಬಸವಣ್ಣ ಕಳ್ಳನಿಗೆ ಸಂಬೋಧಿಸುತ್ತಾರೆ.

ಅಯ್ಯಾ ಬಸವಣ್ಣ ನಿನ್ನ ಮನೆಗೆ ಕಳ್ಳತನಕ್ಕೆ ಬಂದದ್ದು ಸಾರ್ಥಕವಾಯಿತು. ಹಳದಿ ಲೋಹವನ್ನು ಲೋಹವೆಂದು ತಿಳಿಯದೆ ಚಿನ್ನವೆಂದು ತಿಳಿದು ಎಷ್ಟೊ ಜನರನ್ನು ಚಿನ್ನದ

ಕತ್ತಿಯಿಂದ ಕೊಂದ ಪಾಪಿ ನಾನು. ಕನ್ನ ಹೊಡೆದು ಕಳ್ಳತನ ಮಾಡುವ ಕನ್ನದ ಮಾರಯ್ಯ ನಾನು. ಎಂದು ಕೈಯಲ್ಲಿದ್ದ ಕತ್ತಿಯನ್ನು ಕೆಳಗೆ ಎಸೆದು ಬಸವಣ್ಣನ ಪಾದಕ್ಕೆ ಬೀಳುತ್ತಾನೆ. ತನ್ನದೇ ಆದ ಅಜ್ಞಾನದ ಕಣ್ಣನ್ನು ತನ್ನದೇ ಆದ ಜ್ಞಾನದ ಕಣ್ಣಿಗೆ ಅರ್ಪಿಸಿ ಶರಣು ಹೋಗಿ ಕನ್ನಮಾರಿ ಮಾರಯ್ಯ ಎಂದು ಕರೆಯಿಸಿಕೊಂಡಿದ್ದಾರೆ.

ಕುರುಡು ಸೂಳೆಗೆ ಕುಂಟ ಬೊಜಗನು ಕೋಲ ಹಿಡಿದು ನಡೆವಂತೆ ಸೂಳೆತನಗಳ ಮಾಡುವಿರಿ; ಮೋಹದ ಪರಿ ಎಂತುಟು ಹೇಳಾ? ಸಿದ್ಧರಾಮ ಶಿವಯೋಗಿಗಳ ಸುಂದರವಾದ ಈ ಸೂತ್ರವನ್ನು ಓದುಗರು ಪಾಲಿಸಿದರೆ ಕುರುಡು ಕಣ್ಣುಗಳೆಲ್ಲ ತಂತಾನೆ ಉದುರಿ ಬೀಳುವುದರಲ್ಲಿ ಸಂದೇಹವಿಲ್ಲ.

**456**

**ಕುಲುಜ ಅಕ್ಕುಲಜರು ಜಾತ್ಯಜಾತರು ಬಂದು**
**ಕರಂಗಳ ಮುಗಿಯಲೊಡನೆ ಕರಗಳ ಮುಗಿವುತಿಪ್ಪಡೆ**
**ಮನ ವಿಚ್ಛಂದವಾಗದೆ ಒಂದೇಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ**
**ಎನ್ನನೆಂದು ಬಂದು ಪೊದ್ದಿಪ್ಪದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನ್ನ ತಾನು ತಿಳಿದವನು ಜ್ಞಾನಿ. ಆತ ಗುಣಗಳೇ ಇಲ್ಲದ ನಿರ್ಗುಣಿ. ಸಮತಾಗುಣವನ್ನು ಹೊಂದಿದವನು. ಸಮತಾಗುಣ ಎನ್ನುವುದು ಕಲಿಕೆಯಿಂದ ಬರುವುದಿಲ್ಲ. ಅದು ಸಕಲ ತನುಗಳಲ್ಲಿ ಸಂಗಮವಾಗಿದೆ. ಸಾತ್ವಿಕ ರಾಜಸ ತಾಮಸ ಗುಣಗಳು ತನುವನ್ನು ಆವರಿಸಿಕೊಂಡಿರುವುದರಿಂದ ಸಮತಾ ಗುಣ ಎನ್ನುವುದು ಈ ಮೂರು ಗುಣಗಳಿಗೆ ಪರಿಚಯವಾಗುವುದೇ ಇಲ್ಲ.

ಸಾತ್ವಿಕನಾಗುವುದು ಎಂದರೆ ಅದನ್ನು ತನಗೆ ತಿಳಿದ ಮೇಲೆ ಕ್ಷಣ ಕ್ಷಣಕ್ಕೂ ಸಾತ್ವಿಕನೆಂದು ತೋರಿಸಿಕೊಳ್ಳಬೇಕು ಎನ್ನುವ ಬಲವಾದ ಆಸೆ ತನುವಿನಲ್ಲಿ ಉಂಟಾಗುವುದು. ಜನ ತನ್ನನ್ನು ಹಾಡಿ ಹೊಗಳಬೇಕು. ಉತ್ತಮ ಕುಲುಜನೆಂದು ಹೆಸರಿಟ್ಟು ಕೈಮುಗಿದು ಕರೆಯಬೇಕು. ಕುಲುಜರು, ಅಕುಲಜರು, ಜಾತರು ಅಜಾತರು ಕೈಮುಗಿದು ಗೌರವಿಸಬೇಕು. ಹಾಗೆ ಮಾಡದಿದ್ದರೆ ತನುವಿನಲ್ಲಿ ತೊಂದರೆಗಳು ಉಂಟಾಗಿ, ನಮಸ್ಕರಿಸದ ತನುಗಳು ವೈರಿಗಳೆಂದು ತನುವಿನಲ್ಲಿ ಉಳಿದು ಹೋಗುತ್ತಾರೆ.

ಮನ ಸಾತ್ವಿಕ ಗುಣದ ವೇಷ ತನುವಿಗೆ ಧರಿಸಿ, ಸಕಲ ಸುಖ ಸಕಲ ದುಃಖಗಳ ಅನುಭವ ಸಕಲತನುಗಳಿಗೆ ಗೋಚರಕ್ಕೆ ಬಾರದಂತೆ ಅಸಮತೆಯ ದುಃಖ ತನುವಿನಲ್ಲಿಯೇ ಉಂಟು ಮಾಡುತ್ತದೆ.

ಸಮತಾಗುಣವನ್ನು ಹೊಂದಿದ ಸಹಜ ಅರಿವಿನ ತನುವೊಂದು ಸಾತ್ವಿಕ ತನುವನ್ನು ಸಮಾಧಾನಪಡಿಸುತ್ತದೆ. ಈ ತನು ಸಹಜ ತನು. ಇದಕ್ಕೆ ನಮಸ್ಕಾರ ಚಮತ್ಕಾರಗಳ ಅವಶ್ಯಕತೆಯೇ ಇಲ್ಲ. ಸಕಲವನ್ನು ಸಹಜವಾಗಿ ಸ್ವೀಕರಿಸುತ್ತದೆ.

ತನುವಿಗೆ ಬಾಧೆಯಾದರೆ ತನುವಿನೊಳಗೆ ಸಂಗಮವಾದ ಸಹಜ ತನುವಿಗೆ ಬಾಧೆಯಾಗುವುದಿಲ್ಲ. ಸಕಲ ತನುಗಳು ಸಾತ್ವಿಕ ರಾಜಸ ತಾಮಸ ಗುಣಗಳನ್ನು

ಹೊದ್ದುಕೊಂಡಿವೆ. ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಈ ಮೂರು ಗುಣಗಳು ಬೇಕು. ಆ ಮೂರು ಗುಣಗಳಲ್ಲಿ ಮನ, ಒಂದನ್ನು ಮಾತ್ರ ಆಯ್ಕೆ ಮಾಡಿಕೊಂಡು ಆ ಗುಣವನ್ನು ತನುವಿನ ಮೂಲಕ ವ್ಯಕ್ತಪಡಿಸುತ್ತದೆ. ಇನ್ನೆರಡು ಗುಣಗಳಿಂದ ಸುಖ ದುಃಖಗಳನ್ನು ಪಡುತ್ತದೆ.

ಇಂತಹ ತನುಗಳು ಸಮತಾಗುಣ ಹೊಂದಿದ ತನುಗಳು ಅಲ್ಲ. ಸಮತಾಗುಣ ಎನ್ನುವುದು ಸ್ವತಃ ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಪರಿಚಯವಾಗಬೇಕು. ಅವುಗಳಿಗೆ ಸ್ವತಃ ಪರಿಚಯ ಮಾಡಿಕೊಳ್ಳಬೇಕು ಎನ್ನುವ ಬಯಕೆಯಾದಾಗಲೇ ಪರಿಚಯ ಮಾಡಿಕೊಂಡ ಗುರುದೇವ ನೆರವಿಗೆ ಬರುತ್ತಾನೆ.

ಸಮತಾಗುಣವನ್ನು ಹೊಂದಿದ ತನುವಿಗೆ ಸಾತ್ವಿಕ ರಾಜಸ ತಾಮಸ ಗುಣಗಳು ಇರುವುದಿಲ್ಲ. ಅದು ಗುಣಾತೀತ. ಹೀಗಾಗಿ ಅಂತಹ ತನುವನ್ನು ಪುರಾತನರು ತ್ರಿಗುಣಾತೀತ ಎಂದು ಕರೆದಿದ್ದಾರೆ. ಆತ ಮೂರು ಗುಣಗಳಿಗೂ ಅತೀತನಾದವನು.

ತನುವಿನಲ್ಲಿಯೇ ಸಂಗಮವಾದ ನಿರ್ಗುಣ ತನುವನ್ನು ; ತನುವನ್ನು ಆವರಿಸಿದ ಮನ ತನುವಿಗೆ ಹೊದಿಸುವುದು. ಈ ಕಾಯಕ ಕಾಯದಲ್ಲಿಯೇ ಜರುಗಬೇಕು. ಕಾಯಕ್ಕೆ, ಕಾಯವನ್ನು ಆವರಿಸಿದ ಮನಕ್ಕೆ ಅಕಾಯ ಗುರುದೇವನ ಪರಿಚಯವಾಗಬೇಕು. ಆ ಗುರುದೇವನಿಗೆ ಕಾಯ, ಕಾಯವನ್ನು ಆವರಿಸಿದ ಮನಗಳೆರಡೂ ಭಕ್ತನಾಗಬೇಕು. ಅಕಾಯ ಭಕ್ತನು ಅಕಾಯವುಳ್ಳ ಗುರುದೇವನಿಗೆ ಸಂಪೂರ್ಣವಾಗಿ ಶರಣು ಹೋಗುತ್ತಾನೆ. ಆಗ ಕಾಯ ಸಮತಾಗುಣವನ್ನು ಹೊಂದಿದ ಪರಿಪೂರ್ಣ ಕಾಯವಾಗುತ್ತದೆ.

ಜಾತಿ ಮತ ಪಂಥ ಹೆಣ್ಣು ಗಂಡು ಪಂಡಿತ ಶಾಸ್ತ್ರಿ ಕುಲುಜ ಅಕುಲಜ ಎನ್ನುವ ಸಕಲ ಅಜ್ಞಾನಗಳು ಕಾಯದಿಂದ ಉದುರಿ ಬೀಳುತ್ತವೆ. ಸಾತ್ವಿಕ ರಾಜಸ ತಾಮಸ ಗುಣಗಳು ತಂತಾನೆ ಭಸ್ಮವಾಗುತ್ತವೆ. ತ್ರಿಗುಣಾತೀತ, ಗುಣಗಳಿಗೆ ಅತೀತವಾದ ಸಮತಾಗುಣವನ್ನು ಹೊದ್ದ ಕಾಯವಾಗುತ್ತದೆ.

ಪ್ರಪಂಚದಲ್ಲಿರುವ ಏಳುನೂರಾ ಮೂವತ್ತು ಕೋಟಿ ಕಾಯಗಳು ಕೂಡಾ ಸಮತಾಗುಣವನ್ನು ಹೊಂದಿವೆ; ಆದರೆ ಹೊದಿಯಲು ಸಾಧ್ಯವಾಗುತ್ತಿಲ್ಲ ಎಂದು ಸಮತಾಗುಣವನ್ನು ಹೊದ್ದ ಕಾಯಕ್ಕೆ ಮಾತ್ರ ಗೊತ್ತಾಗುತ್ತದೆ. ಹೀಗಾಗಿ ಸಕಲ ಕಾಯಗಳಿಗೂ ಸಮತಾ ಗುಣವನ್ನು ಹೊದ್ದ ಕಾಯ ತಲೆಬಾಗುತ್ತದೆ.

**457**

**ಕುಲಜನಾಗಿ ನಾನೇವೆನಯ್ಯಾ.**
**ಕುಲದ ಬಳಿಯ ದೇವನಲ್ಲ, ಮನದ ಬಳಿಯ ದೇವನ್ನೆಸೆ.**
**ಆವ ಯೋನಿಜನಾದಡೇನು?**
**ನೀನೊಲಿದವನೆ ಕುಲಜನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

''ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯಾ'' ಎನ್ನುವ ಬಸವಣ್ಣನವರ ವಚನವನ್ನು ಓದಿದ ಸಂಶೋಧಕರು ಬಸವಣ್ಣ ಬ್ರಾಹ್ಮಣ ಎಂದು ನಿರ್ಧರಿಸಿದರು.

ಕೆರೆಕಟ್ಟಿ ಅರವಟ್ಟಿಗೆಗಳನ್ನು ಇಟ್ಟು ಒಳಿತಾಗಲೆಂದು ಲೇಸಬಯಸಿ ದೇವಾಲಯಗಳನ್ನು

ಕಟ್ಟಿಸಿದ ಸಿದ್ಧರಾಮ ಶಿವಯೋಗಿಗಳ ಜ್ಞಾನದ ಕದ ತಟ್ಟಲೆಂದು ''ಎಲ್ಲಿ ನಿಮ್ಮ ಒಡ್ಡರಾಮ'' ಎನ್ನುವ ಅಲ್ಲಮಪ್ರಭುಗಳ ವಚನವನ್ನು ಉದಾಹರಿಸಿದ ಸಂಶೋಧಕರು ಆತ ಒಡ್ಡರ ಕುಲದವನು ಎಂದು ನಿರ್ಧರಿಸಿದರು.

ಸಿದ್ಧರಾಮ ಶಿವಯೋಗಿಗಳೇ ಹೇಳುವ ತಮ್ಮ ಈ ವಚನದಲ್ಲಿ ''ಕುಲಜನಾಗಿ ನಾನೇವೆನಯ್ಯಾ'' ಎಂದಿದ್ದಾರೆ. ಶರಣರು ವಚನಗಳನ್ನು ರಚನೆ ಮಾಡಿದ್ದು ತಮ್ಮ ಜಾತಿ ನಿರ್ಧಾರ ಮಾಡಿಕೊಳ್ಳಲು ಅಲ್ಲ. ಸಕಲ ತನುಗಳಲ್ಲಿರುವ ಜ್ಞಾನವನ್ನು ತಮಗೆ ತಾವೇ ನಿರ್ಧರಿಸಿಕೊಂಡು ಆ ಜ್ಞಾನವನ್ನು ಬಳಕೆ ಮಾಡಿಕೊಳ್ಳುವುದಕ್ಕಾಗಿ ವಚನಗಳನ್ನು ಸೂತ್ರದ ರೂಪದಲ್ಲಿ ರಚಿಸಿದರು. ಆದರೂ ಮನ ಕೇಳಬೇಕಲ್ಲ ಬೆಟ್ಟ ಕಡೆದು ಇಲಿ ಹಿಡಿದಂತೆ ಮನದ ಹಣೆಬರಹ.

ಕುಲಕ್ಕೆ ಒಬ್ಬ ದೇವನಿದ್ದಾನೆ. ಜಾತಿಗೊಬ್ಬ ದೇವನಿದ್ದಾನೆ. ಈ ಯಾವ ದೇವರೂ ತನುವನ್ನು ಉದ್ಧರಿಸಲು ಅರಿಯರು. ಏಕೆಂದರೆ ಆ ದೇವರುಗಳೆಲ್ಲ ತನುವಿನಿಂದಲೇ ಸೃಷ್ಟಿಯಾದವರು.

ತನುವನ್ನು ಸೃಷ್ಟಿಮಾಡಿ, ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವರನ್ನು ತನುವನ್ನು ಆವರಿಸಿದ ಮನ ಆರಾಧಿಸಬೇಕಾಗಿದೆ. ಈತ ಮನದ ಪಕ್ಕದಲ್ಲಿಯೇ ಇದ್ದ ದೇವರು. ಈತ ಅಯೋನಿಜ. ತನು, ತನುವನ್ನು ಆವರಿಸಿದ ಮನ ತಾಯಿ ಗರ್ಭದಿಂದ ಜನ್ಮ ತಳೆದರೆ, ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ತನುವಿಗೂ ತನುವನ್ನು ಆವರಿಸಿದ ಮನಕ್ಕೂ ಜನ್ಮ ನೀಡಿದ್ದಾನೆ. ಈತ ಯಾರಿಗೂ ಹುಟ್ಟದವನು. ಎಲ್ಲರನ್ನೂ ಹುಟ್ಟಿಸಿದವನು.

ಆವ ಯೋನಿಜನಾದಡೇನು? ನೀನೊಲಿದವನೇ ಕುಲಜನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ:

ಸಿದ್ಧರಾಮ ಶಿವಯೋಗಿಗಳಿಗೆ ಅಲ್ಲಮಪ್ರಭುಗಳ ದರುಶನವಾಗದಿದ್ದರೆ, ಅವರಿಗೆ ಈ ಮಾತನ್ನು ಹೇಳಲು ಸಾಧ್ಯವಾಗುತ್ತಿರಲಿಲ್ಲ. ಕಲ್ಯಾಣಕ್ಕೆ ಹೋಗಿ ಚೆನ್ನಬಸವಣ್ಣನಿಂದ ಬಸವಣ್ಣನಿಂದ ತನ್ನನ್ನು ತಾನು ತಿಳಿದುಕೊಳ್ಳಲು ಕೂಡಾ ಸಾಧ್ಯವಾಗುತ್ತಿರಲಿಲ್ಲ. ಅಲ್ಲಮಪ್ರಭುಗಳು ಸಿದ್ಧರಾಮ ಶಿವಯೋಗಿಗಳನ್ನು ಜರಿದು ಮಾತನಾಡದಿದ್ದರೆ ಅವರು ಸೊಲ್ಲಾಪುರದಲ್ಲಿ ಒಬ್ಬ ಪುಣ್ಯವಂತನೆಂದು ಕರೆಯಿಸಿಕೊಂಡು ಸತ್ತು ಹೋಗುತ್ತಿದ್ದರು. ಮಹಾಜ್ಞಾನಿಯಾಗಿ ಇಡೀ ಲೋಕಕ್ಕೆ ಬೆಳಗಾಗಿ ಬೆಳಗಲು ಸಾಧ್ಯವಾಗುತ್ತಿರಲಿಲ್ಲ.

ಜಾತಿಯ ಬುಡವನ್ನೇ ಕಿತ್ತೆಸೆದ ಮಹಾಜ್ಞಾನಿಯನ್ನು ಈ ನಾಡಿನ ಸಂಶೋಧಕರಿಗೆ ಜಾತಿಯಿಂದ ಗುರುತಿಸಲು ಮಾತ್ರ ಸಾಧ್ಯವಾಗಿದೆ. ಶರಣರ ವಚನಗಳ ಸಂಶೋಧನೆಯ ಅವಶ್ಯಕತೆಯಿದೆ. ಏಕೆಂದರೆ ವಚನದ ಸೂತ್ರ, ಮನದ ಬಳಿಯ ಅರಿವಿನ ದೇವನನ್ನು ತನುವಿಗೆ ಪರಿಚಯಿಸುತ್ತದೆ. ಕುಲದ ಬಳಿಯ ದೇವನನ್ನು ಕಿತ್ತೆಸೆಯುತ್ತದೆ.

**458**

**ಕೂಟದ ತುರೀಯದಲ್ಲಿ ಬೇಟ ಮತ್ತೆರಡಾಗಿ,**
**ಆಟವನು ಆಡಿದೆನು ಚಿತ್ರತರದ.**
**ಕೂಟವೂ ಬೇಟವೂ ಆಟ ಮತ್ತೊಂದಾಗಿ**
**ನೋಟಂಗಳ ನಿಮಿಷದ ದೃಷ್ಟಿ ನಟ್ಟು,**
**ತಾನು ತಾನಾಗೀಗ ಸಾನಂದ ಸಂಬಂಧ.**

**ಆನಂದ ಮುಕ್ತ್ಯಂಗನೈಕ್ಯವಾಗಿ**
**ಲೋಕದೊಳಗಿದ್ದು ಲೌಕಿಕನು ತಾನಲ್ಲದೆ**
**ಏಕೈಕ್ಯನಾದೆ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ.**

ಅಂಗದಲ್ಲಿ ಸಂಗಮವಾದ ಅರಿವು ಎನ್ನುವ ಲಿಂಗಯ್ಯ ಒಬ್ಬನೆ. ಅಂಗವನ್ನುಆವರಿಸಿದ ಮನವೆಂಬ ಸತಿ ಒಬ್ಬಳೆ. ಅರಿವಿನ ಲಿಂಗಯ್ಯನಿಗೂ, ಮನವೆಂಬ ಆತನ ಸತಿಗೂ ಆಶ್ರಯ ನೀಡಿದ ತನು ಕೂಡಾ ಒಂದೇ ಆಗಿದೆ. ಇದು ಚಿತ್ರಗಾರನ ಆಟ. ತನ್ನ ಕುಂಚದಿಂದ ಒಂದು ವೃಕ್ಷದಲ್ಲಿ ಎರಡು ಚಿತ್ರಗಳನ್ನು ಮಾಡಿದ್ದಾನೆ. ಒಂದನ್ನು ಒಂದು ಕೂಡದಂತೆ ಮಾಡಿದ್ದಾನೆ.

ನೋಡಲು ಹೋದರೆ ನೋಡುವ ಚಿತ್ರಗಳೆಲ್ಲ ಒಂದೇ. ಕಣ್ಣು ಒಂದೇ, ಅದರ ದೃಶ್ಯ ಒಂದೇ. ದೃಶ್ಯದ ಭಾಷೆ ಕೂಡಾ ಒಂದೇ. ಆದರೆ ನೋಡುವ ನೋಟದಲ್ಲಿ ಬೇಟೆಯ ಆಟ ಸೃಷ್ಟಿಯಾಗಿದೆ. ಅಲ್ಲಿ ನೋಟ ನೆಟ್ಟರೆ ಸಾಕು ಕೂಡದ ಅಗಲದ ಕೂಟದ ಸುಖ ಏರ್ಪಡುತ್ತದೆ. ಆದರೂ ಕೂಡಲು ಸಾಧ್ಯವಾಗುತ್ತಿಲ್ಲ. ಪ್ರತಿ ಅಂಗದಲ್ಲಿ ಮುಕ್ತ್ಯಂಗನೆ ಆಟವಾಡುತ್ತಿದ್ದಾಳೆ.

ಆಕೆ ಬರೆದ ಚಿತ್ರಗಳು ಆಕೆಗೇ ತಿಳಿಯದಂತಾಗಿದೆ. ಕುಂಚದಲ್ಲಿ ಹರಿದ ಮಸಿ ಒಂದೇ; ಕುಂಚ ಕೂಡಾ ಒಂದೇ; ಕುಂಚ ಹಿಡಿದು ಬರೆದವಳು ಕೂಡ ಒಬ್ಬಳೇ. ಬರೆದ ಚಿತ್ರ ಕೂಡಾ ಒಂದೇ. ಆದರೂ ಅನೇಕವಾಗಿವೆ. ನೋಡಿದರೆ ಆ ಚಿತ್ರಗಳೆಲ್ಲಲ್ಲ ಏಕತ್ವವೇ ಇದೆ.

ಚಿತ್ರದ ನೋಡುವ ಕಣ್ಣು ಒಂದೇ. ಕೇಳುವ ಕಿವಿ ಒಂದೇ. ಮುಟ್ಟುವ ಚರ್ಮ ಒಂದೇ. ರುಚಿಸುವ ನಾಲಿಗೆ ಒಂದೇ. ಮೂಸಿಸುವ ಮೂಗು ಒಂದೇ. ನುಡಿಯುವ ಬಾಯಿ ಕೂಡಾ ಒಂದೇ ಆಗಿದೆ. ಚಿತ್ರದ ಮೂಲಕ ಆಡಿಸುವ ಆಟವು ಕೂಡಾ ಒಂದೇ ಆಗಿದೆ.

ಚಿತ್ರ ಬರೆದ ಕುಂಚದತ್ತ ದೃಷ್ಟಿ ನಟ್ಟರೆ ಸಾಕು, ಕುಂಚವೂ ತಾನೇ; ಕೈ ಹಿಡಿದು ಬರೆದವಳೂ ತಾನೇ. ಬರೆಯಲು ಪ್ರೇರಣೆ ನೀಡಿದ ಪ್ರಭುವೂ ತಾನೇ. ತಾನು ತಾನೇ ಆಗಿ, ತಾನು ತಾನಾಗೀಗ ಸಾನಂದ ಸಂಬಂಧ. ಆನಂದ ಮುಕ್ತ್ಯಂಗನೆ ಏಕ್ಯವಾಗಿ ಲೋಕದೊಳಗಿದ್ದೂ ಲೌಕಿಕನು ತಾನಲ್ಲ. ಲೋಕದ ಚಿಂತೆಯೂ ತನಗಿಲ್ಲ. ಲೋಕದ ಸುಖ ದುಃಖಗಳೂ ತನಗಿಲ್ಲ.

ಲೋಕದ ಜೊತೆಗೆ ಬೆರೆಸಿ ಬೇರ್ಪಡಿಸುವ ಮುಕ್ತ್ಯಂಗನೇ ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನೊಂದಿಗೆ ಕೂಡಿ ಕೂಡದ ಅಗಲದ ಕೂಟದ ಸುಖದಲ್ಲಿ ಮಗ್ನವಾಗಿದ್ದಾಳೆ. ಕಪಿಲಸಿದ್ಧ ಮಲ್ಲಯ್ಯನೇ ತಾನಾಗಿದ್ದಾಳೆ.

**459**

**ಕೂಟದ ರಚನೆಯ ಸಂದಳಿದು ನೋಟ ನಿಮ್ಮಲ್ಲಿ ನಟ್ಟು**
**ಸಮಕಳೆ ಎಂದಪ್ಪುದಯ್ಯಾ, ಸಮರತಿ ಎಂದಪ್ಪುದಯ್ಯಾ.**
**ಹಂಗ ಹರಿದು, ದಂದುಗ ಉಡುಗಿ**
**ಎನ್ನನೆಂದಿಂಗೆ ಒಳಕೊಂಬೆಯೊ ಗುರುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಜ್ಞಾನ ಅಜ್ಞಾನ ಒಂದೆಡೆಯಿದ್ದರೂ ಒಂದರಲ್ಲಿ ಒಂದು ಕೂಡುತ್ತಿಲ್ಲ. ಸಮಕಳೆ ಸಮತತ್ವ ಸಮರತಿಯಾಗುತ್ತಿಲ್ಲ. ಅಜ್ಞಾನದ ಹಂಗು ಹರಿದು, ದಂದುಗ ಉಡುಗಿ ಎನ್ನನೆಂದಿಂಗೆ

ಒಳಕೊಂಬೆಯೊ ಗುರುದೇವನೆ.

ನೋಡುವುದು ತಪ್ಪೆಂದು ನೋಟಕ್ಕೆ ತಿಳಿಹೇಳುವಿ. ಹಾಗೆಯೇ ನೋಡುವ ನೋಟದಲ್ಲಿ ಅಜ್ಞಾನದ ಹಾದರದ ಸುಖವನ್ನು ತುಂಬಿರುವಿ. ಹಾದರ ಮಾಡಿ ನೋಡುವ ನೋಟವೂ ಕಣ್ಣಿನಲ್ಲಿಯೇ ಇದೆ. ಹಾಗೆ ನೋಡುವ ನೋಟವನ್ನು ಖಂಡಿಸುವ ನೋಟವೂ ಕಣ್ಣಿನಲ್ಲಿಯೇ ಇದೆ. ಒಂದರಲ್ಲಿ ಒಂದನ್ನು ಕೂಡಿಸುವ ಕೂಟದ ರಚನೆಯ ಸಂದಳಿಯುವ ನೋಟವನ್ನು ನನಗೆ ದಯಪಾಲಿಸಬಾರದೆ ಗುರುದೇವನೆ?

ನೋಡುವ ಕಣ್ಣು, ನೋಟಕ್ಕೆ ಗುರಿಯಾದ ಕಣ್ಣು, ಇವೆರಡು ಕಣ್ಣುಗಳು ಒಂದೇ ಅಲ್ಲವೆ? ಕಣ್ಣಿನಲ್ಲಿ ಭೇದವಿಲ್ಲ, ಅದರ ಮಾಟದಲ್ಲಿಯೂ ಭೇದವಿಲ್ಲ. ಆದರೂ ನೋಡುವ ನೋಟದಲ್ಲಿ ಭೇದ ಹುಟ್ಟಿದೆ. ಈ ಭೇದ ದೃಷ್ಟಿಯನ್ನು ತಿಳಿ ಹೇಳುವ ಅರಿವಿನ ದೃಷ್ಟಿಕೂಡಾ ಕಣ್ಣಲ್ಲಿಯೇ ಇರುವುದು ನಿನ್ನ ಕೃಪೆಯಿಂದ ತಿಳಿಯಿತು. ಆದರೂ

ಸಮಕಳೆ, ಸಮರತಿ ಕಣ್ಣಿನಲ್ಲಿ ಉಂಟಾಗಲಿಲ್ಲ. ಇದರ ಹಂಗ ಹರಿಯುವುದು ಯಾವಾಗ? ಇದರ ದಂದುಗ ಉಡುಗುವುದು ಯಾವಾಗ? ಕಣ್ಣಲ್ಲಿ ಸಮಕಳೆಯನ್ನು ಉಂಟುಮಾಡಿ ಎನ್ನನೆಂದಿಂಗೆ ಒಳಕೊಂಬೆಯೊ ಗುರುದೇವ.

ಅಜ್ಞಾನದಿಂದ ನೋಡಿ ಹಾದರಕ್ಕೆ ಒಳಗಾಗುವ ಕಣ್ಣಿಗೆ ಬೋಧಿಸುವುದೊಂದೆ ನಿನ್ನ ಕರ್ತವ್ಯವೆ? ಬೋಧೆ ಮಾಡುವ ಕಣ್ಣಿನ ನಿನ್ನ ನೋಟವನಿತ್ತು ಅಜ್ಞಾನದಿಂದ ನೋಡಿ ಹಾದರಕ್ಕೊಳಗಾಗುವ ನನ್ನ ಕಣ್ಣನ್ನು ಕಿತ್ತುಕೊಳ್ಳಬಾರದೆ ಗುರುದೇವ?

ಬೇಡವಾದ ಕಣ್ಣಪ್ಪನ ಕಣ್ಣನ್ನು ನೀನು ಪಡೆದು, ನಿನ್ನ ನಿಜ ಕಣ್ಣನ್ನು ಕಣ್ಣಪ್ಪನಿಗೆ ಕೊಟ್ಟು ಬೇಡರ ಕಣ್ಣಪ್ಪನಿಗೆ ನೋಡುವ ಸಮಕಳೆಯನ್ನು ನೀಡಿದೆ. ಸಮಸುಖ ಸಮರತಿಯನ್ನು ಕೊಟ್ಟೆ. ಅಜ್ಞಾನದ ಹಂಗು ಹರಿದು ಅದರ ದಂದುಗವನ್ನು ಉಡುಗಿಸಿದೆ. ಎನ್ನನೆಂದಿಂಗೆ ಒಳಕೊಂಬೆಯೊ ಗುರುವೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.

**460**

**ಕೂಟದ ಸುಖದಲ್ಲಿ ತನ್ನ ಮರೆಯದ ಕೂಟವೇತಕಯ್ಯಾ?**
**ಪ್ರಾಣಲಿಂಗದ ಸಂಬಂಧದಲ್ಲಿ ಕರಣಂಗಳನರಿಯದ**
**ಪ್ರಾಣಲಿಂಗ ಸಂಬಂಧವೇತರದಯ್ಯಾ ?**
**ಹಂಗುಳ್ಳೆನ್ನ ಬರ ಶರಣನಲ್ಲ.**
**ವ್ಯಾಕುಳದ ಹಂಗು ಹರಿದಡೆ ಆತ ಲಿಂಗೈಕ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನ ಸಹಗಮನಿ.**

ಹೆಣ್ಣು ಗಂಡು ಕೂಡುವ ಕೂಟ ಗೊತ್ತು ಲೋಕಕ್ಕೆ. ಆ ಸುಖಕ್ಕಾಗಿ ತನು ತನ್ನ ಸಂಪೂರ್ಣ ಆಯುಷ್ಯವನ್ನೇ ಕಳೆದುಕೊಳ್ಳುತ್ತದೆ. ತನುವಿನಲ್ಲಿಯೇ ತನ್ಮಯವಾದ ಅರಿವಿನ ತನುವೊಂದಿದೆ; ತನುವನ್ನು ಆವರಿಸಿದ ಮನವೆಂಬ ಸೂಕ್ಷ್ಮ ತನುವೊಂದಿದೆ. ಸೂಕ್ಷ್ಮ ತನು ಅರಿವಿನ ತನುವಿನೊಂದಿಗೆ ಕೂಡಿದ ಕೂಟವೇ ನಿಜ ಕೂಟ. ಕೂಡದ ಅಗಲದ ಕೂಟ. ಈ ಕೂಟದ ಸುಖದಲ್ಲಿ ತನ್ನನ್ನು ತಾನೇ ಮರೆಸುವ ಪರಮ ಸುಖವಿದೆ.

ಶರಣರ ದೃಷ್ಟಿಯಲ್ಲಿ ಲೋಕದ ಕೂಟ ಹೆಣ್ಣು ಹೆಣ್ಣು ಕೂಡುವ ಕೂಟ. ಅದು ಸುಳ್ಳು

ಸುಖ. ಕೂಡಿ ಅಗಲುವ ಅಜ್ಞಾನದ ಸುಖ. ಶರಣರ ಕೂಟ ಕೂಡದ ಅಗಲದ ಕೂಟ. ಈ ಕೂಟಕ್ಕೆ ಮತ್ತೊಂದು ದೇಹದ ಅಗತ್ಯವಿಲ್ಲ. ಜ್ಞಾನದ ಕೂಟ, ಮನ ಜ್ಞಾನಕ್ಕೆ ಶರಣು ಹೋಗಿ, ಮನವೇ ಸತಿಯಾಗಿ, ಶರಣ ಸತಿಯೆನ್ನಿಸಿಕೊಂಡು, ಜ್ಞಾನವೇ ಗಂಡಾಗಿ ಲಿಂಗಪತಿಯೆಂದು ಕರೆಯಿಸಿಕೊಂಡು ಶರಣಸತಿ ಲಿಂಗಪತಿ ಇವರಿಬ್ಬರೂ ಅಂಗದಲ್ಲಿಯೇ ಕೂಡುವ ಕೂಟ ಗಂಡು ಹೆಣ್ಣು ಕೂಡುವ ಕೂಟ, ಕೂಡದ ಅಗಲದ ಅರಿವಿನ ಮಹಾಕೂಟ. ಲೋಕದ ಕೂಟ ಹೆಣ್ಣು ಹೆಣ್ಣು ಕೂಡುವ ಕೂಟ.

ಅಂಗವೆಂದರೆ ಅದು ಹೆಣ್ಣಲ್ಲ; ಗಂಡೂ ಕೂಡಾ ಅಲ್ಲ. ಅರಿವಿನ ಲಿಂಗಯ್ಯ ವಾಸಮಾಡಿದ ಮನೆ. ಮನವೆಂಬ ಆತನ ಸತಿ ವಾಸ ಮಾಡಿದ ಮನೆ. ಮನವೆಂಬ ಸತಿ ಅರಿವೆಂಬ ಪತಿಯನ್ನು ಮರೆತುದುದಕ್ಕಾಗಿ ಅಂಗ ಹೆಣ್ಣಾಗಿದೆ; ಗಂಡಾಗಿದೆ.

ಮನವೆಂಬ ಸತಿ ಅರಿವೆಂಬ ಪತಿಯೊಂದಿಗೆ ಒಂದಾಗಿ ಆ ಅರಿವನ್ನು ಬಳಸಿ ಅಂಗವನ್ನು ನೋಡಿದರೆ ಅಂಗ ಲಿಂಗಯ್ಯ ವಾಸ ಮಾಡಿದ ಅರಿವಿನ ಅಂಗವಾಗಿ ಕಾಣುತ್ತದೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವು ಗಂಡಾಗಿ ಹೆಣ್ಣಾಗಿ ಕಾಣುವುದಿಲ್ಲ. ಅಂಗದೊಳಗೆ ಹರಿಯುವ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಶಿಖೆ ನಖಗಳರೆಡೂ ಹೆಣ್ಣಲ್ಲ ಗಂಡಲ್ಲ. ನೋಡುವ ಅಂಗದಲ್ಲಿ ಅಜ್ಞಾನ ಆಮಂತ್ರಣ ಆದುದಕ್ಕಾಗಿ ಅದು ಹೆಣ್ಣಾಗಿ ಗಂಡನ್ನು, ಗಂಡಾಗಿ ಹೆಣ್ಣನ್ನು ನೋಡುತ್ತದೆ.

ಅಂಗ ಅರಿವು ಪ್ರಾಣ ಇವುಗಳನ್ನು ಅರಿಯದ ಮನ ಕರಣಂಗಳನ್ನು ಸೃಷ್ಠಿಮಾಡಿ ವ್ಯಾಕುಲಕ್ಕೆ ಒಳಗಾಗಿದೆ. ಇಂದ್ರಿಯಗಳ ತೀರದ ಸುಖಕ್ಕಾಗಿ ಇಂದ್ರಿಯಗಳು ವಾಸಮಾಡಿದ ಅಂಗವನ್ನೇ ಮಂಗನಂತೆ ಮಾಡಿ ಅದರ ಮೂಲಕ ಮನ ಅಜ್ಞಾನದ ಕೂಟದ ಸುಖವನ್ನು ಉಣ್ಣುತ್ತಲಿದೆ.

ಹಂಗುಳ್ಳನ್ನಬರ ಶರಣನಲ್ಲ. ವ್ಯಾಕುಳದ ಹಂಗು ಹರಿದಡೆ ಆತ ಲಿಂಗೈಕ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ಸಹಗಮನಿ:

ಅಂಗದಲ್ಲಿಯೇ ಇರುವ ಜ್ಞಾನೇಂದ್ರಿಯಗಳಲ್ಲಿ ಹರಿದಾಡುವ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನಿಗೆ ಶರಣು ಹೋಗಿ ಶರಣನಾಗಬೇಕು. ಶರಣಸತಿಯಾಗಿ ಅರಿವಿನ ಲಿಂಗಯ್ಯನೆಂಬ ಪತಿಯೊಂದಿಗೆ ಕೂಡಬೇಕು. ಈ ಕೂಟವೇ ಕೂಡದಗಲದ ಕೂಟ. ಸತಿ ಪತಿಗಳ ಮಹಾ ಜ್ಞಾನದ ಕೂಟ. ಮಾಯಾಮಯವಾದ ಮರೆವು ಅರಿವಿನಲ್ಲಿ ಕೂಡಿದ ಕೂಟ. ತನ್ನ ತಾನೇ ಮರೆತು ಮಹದಲ್ಲಿ ಕೂಡಿದ ಕೂಟ ಅಂಗ ಲಿಂಗ ಪ್ರಾಣ ಒಂದಾದ ಕೂಟ. ಅಂಗದ ಹಂಗು ಹರಿದುಕೊಂಡು ಅರಿವಿನ ಲಿಂಗಯ್ಯನೊಂದಿಗೆ ಕೂಡಿ ಲಿಂಗೈಕ್ಯನಾದ ಕೂಟ.

**461**

**ಕೂಟದ ಸುಖದಲ್ಲಿ ನೋಟ ಕಂಬೆಳಗಾಗೆ**
**ಬೇಟ ಬೇರುಂಟೆ ಹೇಳಾ? ಅವ್ವಾ.**
**ನೋಡಿದ ದೃಷ್ಟಿ ಎವೆ ಕುಂದದಡೆ**
**ಮೋಹದ ಪರಿಯೆಂತುಟು ಹೇಳಾ? ನೋಟ ಬೇಟ ಕೂಟ ಸಮಸುಖ**
**ಸಮರತಿಯಾದರೆ ಕಪಿಲಸಿದ್ಧ ಮಲ್ಲಿನಾಥಯ್ಯ ಬೇರಿಲ್ಲವವ್ವಾ.**

ಕಣ್ಣಿನಲ್ಲಿ ಎರಡು ದೃಷ್ಟಿಗಳಿವೆ. ಒಂದು ಅರಿವಿನ ದೃಷ್ಟಿ. ಮತ್ತೊಂದು ಮರೆವಿನ ದೃಷ್ಟಿ. ಮರೆವಿನ ದೃಷ್ಟಿಯನ್ನು ಸಾತ್ವಿಕ ರಾಜಸ ತಾಮಸ ಗುಣಗಳು ಆವರಿಸಿಕೊಂಡಿವೆ. ಕಣ್ಣು ಒಂದೇ

ಆದರೂ ಕಣ್ಣಿಗೆ ಮರೆವಿನ ದೃಷ್ಟಿ ಮಾತ್ರ ಬಳಕೆಯಾಗುತ್ತದೆ. ಅರಿವಿನ ದೃಷ್ಟಿಯನ್ನು ಹೇಗೆ ಬಳಕೆ ಮಾಡಬೇಕು ಎನ್ನುವ ಉಪಾಯ ಮರೆವಿನ ದೃಷ್ಟಿಗೆ ಹೊಳೆಯುತ್ತಿಲ್ಲ. ಕಣ್ಣು ಬಡಪಾಯಿ. ಇವೆರಡೂ ದೃಷ್ಟಿಗಳಿಗೆ ಮಾಧ್ಯಮವಾಗಬಲ್ಲುದೇ ಹೊರತು ಅದಕ್ಕೆ ಪ್ರತಿಭಟನಾ ಶಕ್ತಿ ಇಲ್ಲ. ಹೀಗಾಗಿ ಮರೆವು ಉಳ್ಳ ದೃಷ್ಟಿಯು ಅರಿವು ಉಳ್ಳ ದೃಷ್ಟಿಯ ಕೂಟದ ಸುಖದಲ್ಲಿ ಭಾಗಿಯಾಗುತ್ತಿಲ್ಲ.

ಮರೆವಿನ ದೃಶ್ಯ ಸ್ತ್ರೀಯನ್ನು ನೋಡಿ ದೇಹಕ್ಕೆ ಹಾದರ ಮಾಡುವ ಸಂದೇಶ ಕಳುಹಿಸುತ್ತದೆ. ಕೂಡಲೇ ಬಾಯಿಗೆ ಸಾತ್ವಿಕ ವೇಷ ಹಾಕಿ ಅಕ್ಕ ತಂಗಿ ಸೊಸೆ ಎಂದು ಬೊಗಳುತ್ತದೆ. ಮರೆವಿನಿಂದ ನೋಡಿ, ಹಾದರಕ್ಕೆ ಒಳಗಾಗಿ, ಪುನಃ ಸಾತ್ವಿಕ ಮಾತನಾಡುವುದು ಸೂಕ್ತವೆ? ಎಂದು ಅರಿವಿನ ನೋಟ ಮರೆವಿನ ನೋಟಕ್ಕೆ ಪಾಠ ಮಾಡುತ್ತದೆ. ಆದರೂ ಮರೆವಿನ ನೋಟ ತನ್ನ ಮರೆವಿನ ಗುಣಗಳನ್ನು ಬಿಡುವುದಿಲ್ಲ. ಅರಿವಿನ ನೋಟ ಮರೆವಿನ ನೋಟಕ್ಕೆ ಬೋಧೆ ಮಾಡುವುದನ್ನು ಬಿಡುವುದಿಲ್ಲ.

ನೋಡಲ್ಪಡುವ ವಸ್ತುವಿನಲ್ಲಿ ಭೇದವಿಲ್ಲ. ನೋಡುವ ಮರೆವಿನ ನೋಟದಲ್ಲಿ ಭೇದವಿದೆ. ಚರ್ಮ ನೋಡಿ ಹೆಣ್ಣೆಂದು ಗಂಡೆಂದು ಜೊಲ್ಲು ಸುರಿಸಿ ಹಾದರಕ್ಕೆ ಇಳಿಯುತ್ತದೆ. ಹಳದಿ ಲೋಹ ನೋಡಿ ಚಿನ್ನವೆಂದು ಭ್ರಮಿಸಿ ತನುವಿಗೆ ಕಳ್ಳನ ವೇಷಧರಿಸುತ್ತದೆ. ಕಲ್ಲನ್ನು ನೋಡಿ ದೇವರೆಂದು ದೇಹಕ್ಕೆ ಭಕ್ತನ ವೇಷ ಧರಿಸುತ್ತದೆ. ತನ್ನಂತೆಯೇ ಇರುವ ತನುಗಳಿಗೆ ಗುರುವಾಗುತ್ತದೆ. ಇಲ್ಲ ಶಿಷ್ಯನಾಗುತ್ತದೆ.

ಸಾತ್ವಿಕ ರಾಜಸ ತಾಮಸ ವೇಷಗಳನ್ನು ತನುವಿಗೆ ಹಾಕಿ ಅರಿವಿನ ತನುವನ್ನು ಅಜ್ಞಾನದ ಪ್ರದರ್ಶನಕ್ಕೆ ಒಡ್ಡುತ್ತದೆ. ಕಣ್ಣಲ್ಲಿಯ ದೃಷ್ಟಿದೋಷ ಅರಿವಿನ ತನುವನ್ನು ತನುಗಳ ಮುಂದೆಯೇ ಹರಾಜು ಹಾಕುತ್ತದೆ.

ಮರೆವಿನ ನೋಟ ಅರಿವಿನ ನೋಟದಲ್ಲಿ ಕೂಡಿ ಕಣ್ಣ ಮೂಲಕ ನೋಡಿದರೆ ವಸ್ತುವಿನ ಸತ್ಯ ಕಾಣುತ್ತದೆ. ಆಗ ವಸ್ತುವನ್ನು ದೇಹ ಉದಾಸೀನ ಮಾಡುತ್ತದೆ. ಚಿನ್ನವೆಂದು ನೋಡುವ ಕಣ್ಣಿಗೆ ಲೋಹವಾಗಿ ಕಾಣುತ್ತದೆ. ಆಗ ಲೋಹವನ್ನು ಕೊಳ್ಳುವುದಿಲ್ಲ ಶ್ರೀಮಂತ ಎನ್ನಿಸಿಕೊಳ್ಳುವುದಿಲ್ಲ; ಕದಿಯುವುದಿಲ್ಲ ಕಳ್ಳನೆಂದು ಕರೆಯಿಸಿಕೊಳ್ಳುವುದಿಲ್ಲ; ಮಾರಾಟ ಮಾಡುವುದಿಲ್ಲ ವ್ಯಾಪಾರಿಯಾಗುವುದಿಲ್ಲ.

ಮರೆವಿನ ನೋಟ ಅರಿವಿನ ನೋಟದಲ್ಲಿ ಕೂಡಿ, ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸುತ್ತದೆ. ದೇಹದಲ್ಲಿ ಉಂಟಾಗುವ ಮೋಹ ಮುರಿದು ಬೀಳುತ್ತದೆ. ನೋಟ ಬೇಟ ಕೂಟ ಸಮಸುಖ ಸಮರತಿಯಾಗುತ್ತದೆ. ಮರೆವಿನ ನೋಟಕ್ಕೆ ಅರಿವಿನ ನೋಟದ ಅಂಜನವೇ ದಿವ್ಯ ಔಷಧಿಯಾಗುತ್ತದೆ.

**462**

**ಕೂಟದ ಸುಖದಲ್ಲಿ ನೋಟ ಕಂಬೆಳಗಾಗೆ,**
**ಬೇಟದಿಂ ದೆಸೆದೆಸೆವರಿದಳವ್ವೆ.**
**ಅವಿನಿಪ್ಪ ಗೂಢವನು ನೀನಿರ್ದಾಡಿಸುತ್ತೆಲವೊ**
**ನಿನ್ನ ನೆನ್ನಂಗದಲಿ ಕೊಲ್ಲದಿರ್ದಡೆ,**
**ಕಪಿಲಸಿದ್ಧ ಮಲ್ಲಿಕಾರ್ಜುನನಹೆ.**

ಅರಿವೇ ಸಂಗಮವಾದ ಅಂಗದಲ್ಲಿ ಅಜ್ಞಾನ ಆವರಿಸಿದೆ. ಅರಿವೆಂದರೆ ಅದು ಸಂಗ್ರಹ ಮಾಡುವ ವಸ್ತುವಲ್ಲ. ಅದೊಂದು ವಿದ್ಯೆಯೂ ಅಲ್ಲ. ಅರಿವು ಎಂದರೆ ಸಾಕ್ಷಾತ್ ಗುರುದೇವ. ಆತನಿಗೆ ಚರಿತ್ರೆ ಇಲ್ಲ. ಆತನಿಗೆ ಇತಿಹಾಸವೂ ಇಲ್ಲ. ಆತ ಹುಟ್ಟುವವನೂ ಅಲ್ಲ; ಸಾಯುವವನೂ ಅಲ್ಲ.

ಗುರುದೇವನೇ ಇರಬೇಕಾದ ಜಾಗದಲ್ಲಿ ಮನವೆಂಬ ಅಜ್ಞಾನವಿದೆ. ಅಂಗ ತನ್ನನ್ನು ತಾನು ಗುರುದೇವನಿಗೆ ಅರ್ಪಿಸಿಕೊಳ್ಳಬೇಕಾಗಿತ್ತು ; ಆದರೆ ಆತನ ನೆರಳಿನಿಂದಲೇ ಹುಟ್ಟಿದ ಮನಕ್ಕೆ ತನ್ನನ್ನು ತಾನು ಸಂಪೂರ್ಣ ಅರ್ಪಿಸಿಕೊಂಡಿದೆ.

ಗುರುದೇವನನ್ನು ತಿಳಿದ ಗುರುದೇವನು ಶ್ರೀಗುರುವಾಗಿ ಅಂಗಕ್ಕೆ ದೊರೆತಿದ್ದಾನೆ. ಆತನ ಸಹಾಯದಿಂದ ಅಂಗ, ಅಂಗವನ್ನು ಆವರಿಸಿದ ಮನ ಇವರಿಬ್ಬರಿಗೂ ಗುರುದೇವನ ಪರಿಚಯವಾಗಿದೆ. ಗುರುದೇವನಿರಬೇಕಾದ ಪವಿತ್ರ ಸ್ಥಳದಲ್ಲಿ ಮಾಯಾಮಯವಾದ ನೀನಿದ್ದು ನಿನ್ನ ಸುಳ್ಳು ಸಾಮ್ರಾಜ್ಯವನ್ನು ಕಟ್ಟಿಕೊಂಡು ಆಶ್ರಯಕೊಟ್ಟ ನನ್ನನ್ನೇ ಆಡಿಸುತ್ತಿರುವೆಯಲ್ಲ. ಇನ್ನು ನೀನಿರಲು ಆಸ್ಪದ ಕೊಡುವುದಿಲ್ಲ.

ಅಂಗವೆಂದರೆ ಅರಿವಿನ ಲಿಂಗಯ್ಯ ವಾಸ ಮಾಡಿದ ಪರಮ ಪವಿತ್ರವಾದ ಕೈಲಾಸ ಕ್ಷೇತ್ರ. ಪುಣ್ಯಕ್ಷೇತ್ರ. ಅದನ್ನು ಶರಣರು ಅನುಭವ ಮಂಟಪ; ಕಲ್ಯಾಣ ಸುಕ್ಷೇತ್ರ ಎಂತಲೂ ಕರೆದಿದ್ದಾರೆ. ಬಸವಣ್ಣ, ಕೂಡಲಸಂಗಮ, ತ್ರಿಕೂಟ ಸಂಗಮ ಎಂದು ಕರೆದಿದ್ದಾರೆ. ಅಂತಹ ಸುಂದರವಾದ ಅಂಗವನ್ನು ಮತ್ತೊಂದು ಅಂಗದೊಂದಿಗೆ ಕೂಡಿ ಅಜ್ಞಾನದ ಕೂಟದ ಸುಖದ ಸುಳ್ಳು ರುಚಿಯನ್ನು ಸೃಷ್ಟಿ ಮಾಡಿದ ಪಾಪಿ ನೀನು.

ಮಾಯಾಮಯವಾದ ನಿನ್ನ ಸಂಗದಿಂದ ಅಂಗ ದೆಸೆಗೆಟ್ಟು ಹೋಗಿದೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೊಂದಿಗೆ ಕೂಡಿ ಕೂಡದ ಅಗಲದ ಕೂಟದ ಸುಖದಲ್ಲಿ ಮಗ್ನಳಾಗಬೇಕಾದ ಮನವೆಂಬ ಅವ್ವೆ ಘನದೇವನನ್ನೇ ಮರೆತು ಹೋಗಿದ್ದಾಳೆ. ಈಗ ಶ್ರೀಗುರು ದೊರೆತಿದ್ದಾನೆ. ಆತನ ಸಹಾಯದಿಂದ ಅವನಿಪ್ಪ ಗೂಢವನ್ನು ಅರಿತಿದ್ದಾಳೆ.

ಸರ್ವಾಂಗವನ್ನು ಆವರಿಸಿದ ನಿನ್ನನ್ನು ಅಂಗದಲ್ಲಿಯೇ ಕೊಲ್ಲಲು ಸಿದ್ಧಳಾಗಿದ್ದಾಳೆ. ಇನ್ನು ನಿನಗೆ ಉಳಿಗಾಲವಿಲ್ಲ. ಅದೆಷ್ಟೋ ಕಾಲ ಅಂಗದೊಂದಿಗೆ ವಾಸ ಮಾಡಿದ ನಿನಗೆ ಸಾವು ಖಚಿತ.

ಅಂಗದಲ್ಲಿಯೇ ವಾಸ ಮಾಡಿದ ಅರಿವಿನ ಲಿಂಗಯ್ಯನೆಂದರೆ ಸಾಮಾನ್ಯನಲ್ಲ. ಹರಿತವಾದ ಬೆಳಕಿನ ಕೂರಲಗು. ಬೆಳಕು ಇರುವ ಜಾಗದಲ್ಲಿ ಕಗ್ಗತ್ತಲು ಇರಲು ಸಾಧ್ಯವೆ? ಕತ್ತಲಿಗೆ ಬೆಳಕೆಂದು ತಿಳಿದಿರಲಿಲ್ಲ. ಹೀಗಾಗಿ ಅನಂತಕಾಲ ಬೆಳಕನ್ನೇ ತನ್ನ ಕತ್ತಲ ಸೆರಗಿನಿಂದ ಹೊದ್ದು ಅಂಗದೊಂದಿಗೆ ಸುಖಿಸಿದಳು. ಈಗ ಆಕೆಗೆ ನಾನು ಬೆಳಕನ್ನು ಹೊದ್ದಿರುವೆನಲ್ಲ ಎಂದು ಅರಿವಾಗಿದೆ. ಹೀಗೆ ಶ್ರೀಗುರು ದೇವನಿಂದ ಅರಿವಾಗುವುದೊಂದೇ ತಡ ಲಿಂಗಯ್ಯನ ಬೆಳಕಲ್ಲಿ ಬೆರೆತು ಬೆಳಕೇ ಆಗಿದ್ದಾಳೆ ಅವ್ವೆ.

**463**

**ಕೆರೆಯ ಕಟ್ಟಿಸುವವನೆ? ಕರ್ಮಿ!**
**ಅಗ್ರವನೆತ್ತಿಸುವವನೆ? ಪಾತಕಿ!**
**ಶಿವಾಲಯವ ಕಟ್ಟಿಸುವವನೆ? ದ್ರೋಹಿ!**
**ಗುರುಹಿರಿಯರ ಕಂಡರೆ ನಮಿಸುವಾತನೆ? ಚಾಂಡಾಲ!**

**ಸತ್ಕ್ರೀಯಿಂದ ಶಿವಾರ್ಚನೆಯ ಮಾಡುವಾತನೆ? ಅನಾಚಾರಿ!**
**ಇಂತೀ ಐವರನೊಳಗೊಂಬನೆ?**
**ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕೆರೆ ಕಟ್ಟಿಸಿ ಅರವಟ್ಟಿಗೆಗಳನ್ನು ಇಡುವವನು ಕರ್ಮಿ. ಮನುಷ್ಯ ವಿಚಿತ್ರ; ಸಹಜವಾಗಿ ಬದುಕುವುದನ್ನು ಅವನು ಎಂದೋ ಮರೆತು ಹೋಗಿದ್ದಾನೆ. ತಾನು ಪ್ರತಿ ಮನುಷ್ಯನಿಗಾಗಿ ತನ್ನ ಕುಟುಂಬಕ್ಕಾಗಿ ಮಾಡುವ ಕೆಲಸಗಳೆಲ್ಲ ತನ್ನಲ್ಲಿಯೇ ಉಳಿದು ತನುವಿಗೆ ಸುಖ ಅಥವಾ ದುಃಖಗಳನ್ನು ಕೊಡುತ್ತವೆ.

ಜ್ಞಾನಿಯಾದವನು ತನ್ನನ್ನು ತಾನೇ ಕಂಡುಕೊಂಡು, ತನುವಿನಲ್ಲಿಯ ತನ್ನ ಸಹಜತನವನ್ನು, ತನುವನ್ನು ಆವರಿಸಿದ ತನ್ನ ಅಸಹಜ ತನುವನ್ನು ಇವೆರಡನ್ನೂ ನೋಡಿ ತನ್ನದೇ ಆದ ಸಹಜತನವನ್ನು ಆಯ್ಕೆ ಮಾಡಿಕೊಂಡು ಸಹಜವಾಗಿಯೇ ಇರುತ್ತಾನೆ. ಇದನ್ನು ಪುರಾತನರು ಸಹಜಯೋಗ ಎಂದು ಕರೆದಿದ್ದಾರೆ. ಗಿಡ ಮರ ಬಳ್ಳಿ ಪಶು ಪಕ್ಷಿ ಉರಗ ಜಲಚರಗಳು ಏನನ್ನೂ ಮಾಡುವುದಿಲ್ಲ. ಹಾಗೆಯೇ ಮನುಷ್ಯ ಕೂಡಾ ಏನನ್ನೂ ಮಾಡುವುದಿಲ್ಲ. ಏನನ್ನೂ ಮಾಡದ ಮಹಾಮನುಷ್ಯ ಮನುಷ್ಯನಿಗೆ ಬೋಧೆಮಾಡುತ್ತಾ ಪಳಯುಳಿಕೆಯಾಗಿ ಮನುಷ್ಯನಲ್ಲಿಯೇ ಉಳಿದಿದ್ದಾನೆ. ಕರ್ಮಿ, ಪಾತಕಿ, ದ್ರೋಹಿ, ಚಾಂಡಾಲ, ಅನಾಚಾರಿಮನುಷ್ಯ ಮಹಾಮನುಷ್ಯನನ್ನು ಆವರಿಸಿದ್ದಾನೆ. ಇವನಿಗೆ ಏನೆಲ್ಲಾ ಬೇಕು. ಮಹಾ ಮನುಷ್ಯನೆಂಬ ಮಹಾದೇವನಿಗೆ ಏನೂ ಬೇಡ!

ಕೆರೆ ಕಟ್ಟಿಸುವವನು ಕರ್ಮಿ.
ಅಗ್ರಹಾರವನ್ನು ಕಟ್ಟಿಸುವವನು ಪಾತಕಿ.
ಶಿವಾಲಯವ ಕಟ್ಟಿಸುವವನು ದ್ರೋಹಿ.
ಗುರುಹಿರಿಯರ ಕಂಡರೆ ನಮಿಸುವಾತನೆ ಚಾಂಡಾಲ.
ಸತ್ಕ್ರೀಯಿಂದ ಶಿವಾಚಾರವ ಮಾಡುವಾತನೆ ಅನಾಚಾರಿ.
ಇಂತೀ ಐವರನ್ನು ಒಳಕೊಂಬನೆ ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ.?

ಸಂಪಾದಕರು ಸಂಪಾದನೆ ಮಾಡಿದ ಸಿದ್ಧರಾಮ ಶಿವಯೋಗಿಗಳ ವಚನಕ್ಕೂ , ಈ ವಚನಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಕೆರೆ ಕಟ್ಟಿಸುವವನು ಕರ್ಮಿ ಹೇಗಾಗುತ್ತಾನೆ? ಅಗ್ರಹಾರ ಕಟ್ಟಿಸುವವನು ಪಾತಕಿ ಹೇಗಾಗುತ್ತಾನೆ? ಶಿವಾಲಯವ ಕಟ್ಟಿಸುವವನು ದ್ರೋಹಿ ಹೇಗಾಗುತ್ತಾನೆ? ಗುರು ಹಿರಿಯರನ್ನು ಕಂಡರೆ ನಮಿಸುವಾತನು ಚಾಂಡಾಲ ಹೇಗಾಗುತ್ತಾನೆ? ಸತ್ಕ್ರಿಯೆಯಿಂದ ಶಿವಾಚಾರ ಮಾಡುವ ತನು ಅನಾಚಾರಿ ಹೇಗಾಗುತ್ತದೆ? ಎಂಬ ಪ್ರಶ್ನೆಯ ಮೂಲಕ ಸಂಪಾದಕರು ಆಶ್ಚರ್ಯ ವ್ಯಕ್ತಪಡಿಸಿದ್ದಾರೆ.

ಶಿವಾಲಯವ ಕಟ್ಟಿಸುವವನೆ? ದ್ರೋಹಿ! ಇದು ಸಿದ್ಧರಾಮ ಶಿವಯೋಗಿಗಳು ಬರೆದ ಸಾಲು ಅಲ್ಲ, ''ಶಿವಾಲಯವ ಕಟ್ಟಿಸುವವನೇ ದ್ರೋಹಿ''. ಇದು ಪರಿಪೂರ್ಣವಾದ ವಾಕ್ಯ.

ದೇಹವೇ ದೇವಾಲಯ. ಪ್ರತಿ ದೇಹದಲ್ಲಿ ದೇವರಿದ್ದಾನೆ. ದೇವರಿಲ್ಲದ ದೇಹಗಳೇ ಇಲ್ಲ. ''ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ, (ಬಾಯಲಿ) ಕೊರಳಲಿ ಸುರೆಯ ಗಡಿಗೆ ಇರಲು ಅವರ ಲಿಂಗವೆಂಬೆ. ಸಂಗನೆಂಬೆ. ಕೂಡಲಸಂಗಮದೇವಾ ಅವರ ಮುಖ ಲಿಂಗಿಗಳೆಂಬೆನು'' ಎನ್ನುವ ಬಸವಣ್ಣನವರ ವಚನದಲ್ಲಿ ಕೂಡಾ ಸಂಪಾಕದರು ''ಕೊರಳಲಿ

ದೇವರಿರಲು'' ಎನ್ನುವ ಸಾಲನ್ನು ಸೇರಿಸಿ ಶರಣರಿಗೆ ಅಪಚಾರ ಮಾಡಿದ್ದಾರೆ.

ಮತ್ತೊಬ್ಬರಿಗಾಗಿ, ಪ್ರಾಣಿ ಪಶು ಪಕ್ಷಿ ಸಂಕುಲಕ್ಕಾಗಿ ಸದಾ ಹರಿಯುವ ನೀರನ್ನು ತನಗೆ ಮಾತ್ರ ಬೇಕೆಂದು ಕೆರೆಯಲ್ಲಿ ಸಂಗ್ರಹಿಸುವವನು ಸಹಜನು ಹೇಗೆ ಆಗುತ್ತಾನೆ? ಮಳೆಯೇ ಬಾರದಿದ್ದರೆ ಕೆರೆ ಕಟ್ಟಿಸಿಯೂ ವ್ಯರ್ಥವಲ್ಲವೆ?

ದೇವರಿಗಾಗಿ ಒಂದು ದೇವಾಲಯ. ಮಳೆ ಬೆಳೆಗಾಗಿ ಪ್ರಾರ್ಥನೆ. ಅದಕ್ಕೆ ಒಬ್ಬ ಪೂಜಾರಿ. ಕೆರೆಕಟ್ಟಿದ ಕಲ್ಲಿಗೂ, ದೇವರನ್ನು ಕೆತ್ತಿದ ಕಲ್ಲಿಗೂ ವ್ಯತ್ಯಾಸವಿದೆಯೇ? ಅಗ್ರಹಾರ ಕಟ್ಟಿಕೊಂಡು ಅಲ್ಲಿ ಹಾರುವ ಮನುಷ್ಯನಿಗೂ ಹೊಲೆಗೇರಿಯಲ್ಲಿ ಚರ್ಮ ಹದ ಮಾಡುವ ಮನುಷ್ಯನಿಗೂ ವ್ಯತ್ಯಾಸವಿದೆಯೆ? ವಯಸ್ಸಾದ ಹಿರಿಯ ತನುಗಳಿಗೂ ನಮಸ್ಕರಿಸುವ ಕಿರಿಯ ತನುಗಳಿಗೂ ವ್ಯತ್ಯಾಸವಿದೆಯೆ?

ವ್ಯತ್ಯಾಸವನು ಅರಿಯದೆ ಕೊರಳಲ್ಲಿ ಲಿಂಗಧರಿಸಿ ಶಿವಾಚಾರವನ್ನು ಮಾಡುವ ಕೆಲಸದಲ್ಲಿ ತೊಡಗಿದಾತನನ್ನು ಏನೆಂದು ಕರೆಯಬೇಕು? ತನುವುನಲ್ಲಿಯೇ ತನ್ಮಯವಾದ ಅರಿವಿನ ತನು ಇಂತಹ ಸತ್ಕ್ರಿಯೆಯಲ್ಲಿ ತೊಡಗಿದ ತನುವನ್ನು ಕರ್ಮಿ, ಪಾತಕಿ, ದ್ರೋಹಿ, ಚಾಂಡಾಲ, ಅನಾಚಾರಿ ಎಂದು ಕೂಗಿ ಕರೆದಿದೆ.

ಇಂತಹ ಐದು ಅನಾಚಾರಿಗಳನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯ ಒಳಕೊಂಬನು. ತನ್ನೊಳಗೆ ಅಪ್ಪಿಕೊಂಡು ತನ್ನಂತೆ ಮಾಡಿಕೊಳ್ಳನು.

**464**

**ಕೇಳವ್ವಾ ಕೆಳದಿ, ನಾನಿದ್ದಪರಿಗಳ ಹೇಳುವೆ ನಿನಗೆ;**
**ಶಿಲೆಯ ಮೇಲೆ ಸೈವೆರಗಾಗಿ ತಲೆಯ ಬಿಟ್ಟಿದ್ದ ಪರಿಯ;**
**ವಾಯುಭಕ್ಷಕಳಾಗಿದ್ದ ಪರಿಗಳ ನೋಡವ್ವಾ.**
**ಆನಿದ್ದ ಪರಿಗಳ ಕಂಡು ಕರುಣಿಸಿ ಗಂಡನಾದನು**
**ಎನ್ನ ಕಪಿಲಸಿದ್ಧ ಮಲ್ಲಿನಾಥದೇವರ ದೇವ ನೋಡವ್ವಾ.**

ಗಾಳಿ ಎಷ್ಟೇ ವೇಗವಾಗಿ ಚಲಿಸಿದರೂ ಅದರ ಚಲನೆಯೆಲ್ಲ ಬಯಲಲ್ಲಿಯೇ. ಬಯಲು ಬಿಟ್ಟು ವಾಯುವಿಲ್ಲ; ಬಯಲಿಲ್ಲದ ಜಾಗವೇ ಇಲ್ಲ. ವಾಯು ಬಯಲ ಸೃಷ್ಟಿ. ಅದರ ಆಟವೆಲ್ಲ ಬಯಲಿಗೆ ಚಿನ್ನಾಟ. ಬಯಲಲ್ಲಿ ಗಂಟೆಗೆ ಐದು ನೂರು ಕಿ.ಮೀ ವೇಗದಲ್ಲಿ ವಾಯು ಚಲಿಸಬಹುದು. ಆದರೆ ವಾಯು ತನುವಿನಲ್ಲಿ ತನ್ಮಯವಾದ ಬಯಲು ಹೇಳಿದಂತೆ ಕೇಳುವುದು. ತನುವಿನಲ್ಲಿ ವಾಯುವಿನ ಆಟ ನಡೆಯುವುದಿಲ್ಲ. ಅಗ್ನಿಯ ಆಟವೂ ನಡೆಯುವುದಿಲ್ಲ. ಜಲ ಮತ್ತು ಭೂಮಿಯ ಆಟವೂ ನಡೆಯುವುದಿಲ್ಲ. ಏಕೆಂದರೆ ಬಯಲು ದೇವನ ಕೃಪೆ ತನುವಿಗೆ ಆಗಿದೆ. ತನುವನ್ನು ಆವರಿಸಿದ ಮನವೆಂಬ ಕೆಳದಿಗೆ ಬಯಲಕೃಪೆ ಕೂಡಾ ಆಗಿದೆ. ಹೀಗಾಗಿ ಆಕೆ ವಾಯು ಭಕ್ಷಕಳಾಗಿದ್ದಾಳೆ. ಅಗ್ನಿ ಭಕ್ಷಕಳಾಗಿದ್ದಾಳೆ. ಜಲ ಭಕ್ಷಕಳೂ ಆಗಿದ್ದಾಳೆ. ಬಿರ್‍ರನೆ ಬಿರಿದು ಲಾವಾರಸವನ್ನೇ ಉಗುಳುವ ಭೂಮಿ ಭಕ್ಷಕಳೂ ಆಗಿದ್ದಾಳೆ.

ಬಂಡೆಗಲ್ಲಿನಂತೆ ಕರಗದೆ ಗಟ್ಟಿಗಿತ್ತಿಯಾಗಿದ್ದ ಮನವೆಂಬ ಕೆಳದಿ ಕರಗಿ ನೀರಾಗಿ ಮಲ್ಲಯ್ಯನಿಗೆ ಮಡದಿಯಾಗಿದ್ದಾಳೆ. ಸತಿ ಪತಿ ಒಂದಾದ ಮೇಲೆ ಮಕ್ಕಳ ಆಟ ನಡೆಯುವುದಿಲ್ಲ. ಸತಿಗೆ ಪತಿ ಎಂದರೆ ಯಾರೆಂದು ಗೊತ್ತಿರಲಿಲ್ಲ. ಹೀಗಾಗಿ ತನುವಿನಲ್ಲಿ

ಉಂಟಾದ ಶಬ್ದ ತನುವಿಗೆ ಖಡ್ಗವಾಗಿ ಹಿರಿಯುತ್ತಿತ್ತು. ತನುವಿನಲ್ಲಿಯೇ ಉಂಟಾದ ಕಿಚ್ಚು ತನುವನ್ನೇ ಸುಡುತ್ತಿತ್ತು. ತನುವಿನಲ್ಲಿದ್ದ ಜಲ ತನುವನ್ನೇ ಸೀಳಿ ರಕ್ತವಾಗಿ ಹೊರಗೆ ಚಿಮ್ಮುತ್ತಿತ್ತು. ಭೂಮಿ ಬಿರಿದು ಲಾವಾರಸ ಚಿಮ್ಮಿದಂತೆ ತನುವಿನ ನರನಾಡಿಗಳು ಬಾಧೆಗೆ ಒಳಗಾಗುತ್ತಿದ್ದವು. ಗಂಡನ ಕರುಣೆ ಅಗಾಧ! ಇದೆಲ್ಲದಕ್ಕೂ ಕಾರಣಳಾದ ಮನವೆಂಬ ಮಹಾದೇವಿಯನ್ನು ಮಹಾದೇವ ಮನದನ್ನೆಯಾಗಿ ಮಾಡಿಕೊಂಡ. ಆತನ ಕೃಪಾಕಟಾಕ್ಷದಿಂದ ಕಾಯವೇ ಕೈಲಾಸವಾಯಿತು. ಸತಿ ಪತಿಗಳಿಬ್ಬರಿಗೂ ತನು ಮಹಾಮನೆಯಾಯಿತು.

ಕೇಳವ್ವಾ ಕೆಳದಿ, ನಾನಿದ್ದ ಪರಿಗಳ ಹೇಳುವೆ ನಿನಗೆ; ಶಿಲೆಯ ಮೇಲೆ ಸ್ವೈರಗಾಗಿ ತಲೆಯಬಿಟ್ಟಿದ್ದ ಪರಿಯ; ವಾಯುಭಕ್ಷಕಳಾಗಿದ್ದ ಪರಿಗಳ ನೋಡವ್ವಾ. ಆನಿದ್ದ ಪರಿಗಳ ಕಂಡು ಕರುಣಿಸಿ ಕಪಿಲಸಿದ್ಧ ಮಲ್ಲಯ್ಯ ಎನಗೆ ಗಂಡನಾದನು.

**465**

**ಕೇಳವ್ವಾ, ಕೆಳದಿ, ಹೋಗೆಲಗವ್ವಾ, ನೋಡವ್ವಾ ಕೆಳದಿ;**
**ಅವನಿಪ್ಪ ಠಾವಿನ ನೆಲೆಯೆನಗೆ ತೊರೆಲಗವ್ವಾ;**
**ಅವನಿಬ್ಬಟ್ಟೆಗಾರನು, ಇಬ್ಬೀಡಲಪ್ಪನು;**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕಂಡೆನು, ಬಾರಾ.**

ದೇಹದಲ್ಲಿರುವ ದೇವರೆ ದೇಹಕ್ಕೆ ಸುಖ ದುಃಖಗಳನ್ನುಂಟು ಮಾಡುತ್ತಾನೆ ಎಂದು ದೇಹವನ್ನು ಆವರಿಸಿದ ಮನಕ್ಕೆ ಮನದಟ್ಟಾದ ಮೇಲೆ, ಆ ದೇವನ ದರುಶನ ಮಾಡಿಕೊಳ್ಳಲೇಬೇಕೆಂದು ಮನದಲ್ಲಿ ಬಯಕೆ ಹುಟ್ಟಿದೆ.

ದೇಹದ ಸುಖ ದುಃಖಗಳಿಗೆ ಕಾರಣನಾದವನು ದೇವರಲ್ಲ; ಮನ. ಸುಖ ದುಃಖಗಳೆರಡೂ ಮನದ ಇಷ್ಟದಂತೆಯೇ ದೇಹದಲ್ಲಿ ಘಟಿಸುತ್ತವೆ. ಮನ ಹೇಗೆ ಸುಖ ದುಃಖಗಳನ್ನು ಇಷ್ಟ ಪಡುತ್ತದೆಯೊ ಹಾಗೆಯೇ ಮನದಲ್ಲಿಯ ಒಂದು ಭಾಗ ದೇಹದಲ್ಲಿಯೇ ಇರುವ ಅರಿವಿನ ದೇವನ ದರುಶನವನ್ನೂ ಕೂಡಾ ಇಷ್ಟಪಟ್ಟಿದೆ.

ಮನ, ತನಗೆ ತಾನೇ ಎರಡು ಭಾಗಗಳಾಗಿ ಸೀಳಿಕೊಂಡು ತನ್ನದೇ ಆದ ಒಂದು ಭಾಗಕ್ಕೆ ಹೇಳುತ್ತಾಳೆ: ಕೇಳವ್ವಾ ಕೆಳದಿ, ಹೋಗೆಲಗವ್ವಾ, ನೋಡವ್ವಾ ಕೆಳದಿ; ಅವನಿಪ್ಪ ಠಾವಿನ ನೆಲೆಯೆನಗೆ ತೋರೆಲಗವ್ವಾ; ಅವನಿಬ್ಬಟ್ಟೆಗಾರನು, ಇಬ್ಬೀಡಲಪ್ಪನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕಂಡೆನು, ಬಾರಾ.

ಮನವೆಂದರೆ ಮಹಾದೇವನ ಮಡದಿ. ಅವನಿರುವ ಜಾಗ ಆಕೆಗೆ ಗೊತ್ತು. ಅವನಿಂದಲೇ ಜನ್ಮ ತಳೆದು ಅವನ ನೆರಳಾಗಿ ಅವನನ್ನೇ ಕಾಣದಂತೆ ಮಾಡಿ, ತನ್ನದೇ ಆದ ಸುಖದಲ್ಲಿ ಮೈ ಮರೆತವಳು.

ತನ್ನದೇ ಆದ ಸುಖ ತನಗೇ ಮುಳುವಾದಾಗ ಮತ್ತೆ ಸುಖವನು ಅರಸುತ್ತಾ ಅವನನ್ನು ಹುಡುಕುತ್ತಾ ಅವನತ್ತ ಹೆಜ್ಜೆ ಹಾಕುವಳು. ಅವನಿರುವ ದಾರಿ ಆಕೆಗೆ ಮಾತ್ರ ಗೊತ್ತಿದೆ.

ಸುಖ ದುಃಖಗಳೆರಡೂ ಮನಕ್ಕೆ ಸುಖ ನೀಡುತ್ತವೆ. ದೇಹಕ್ಕೆ ಮಾತ್ರ ದುಃಖ. ದೇಹ ಬಡಪಾಯಿ. ದೇಹದಲ್ಲಿ ದೇವರೂ ಇದ್ದಾನೆ. ಆ ದೇವರೊಂದಿಗೆ ಒಂದಾಗಿ ಬಾಳಬೇಕಾದ ಮನವೆಂಬ ದೇವತೆಯೂ ಇದ್ದಾಳೆ. ಸುಖಕ್ಕೂ ದುಃಖಕ್ಕೂ ಹಾತೊರೆಯುವ ಮನದ ಎರಡು

ದಾರಿಗಳಂತೆ, ಅರಿವಿನ ದೇವನಿಗೂ ಎರಡು ದಾರಿಗಳಿವೆ.

ತನಗೆ ಬೇಕಾದಾಗ ಮನವನ್ನು ಹಿಡಿದು ಆ ಮನವನ್ನೇ ಘನಮನವನ್ನಾಗಿ ಮಾಡುತ್ತಾನೆ. ತನಗೆ ಬೇಡವಾದಾಗ, ಮನ ದೇಹವನ್ನು ಹಿಡಿದು ಮಹಾದೇವನಿಗಾಗಿ ಸುತ್ತಿ ಸುತ್ತಿ ಸುಳಿಯುವಂತೆ ಮಾಡುತ್ತಾನೆ. ಬಸವಳಿಯುವಂತೆ ಮಾಡುತ್ತಾನೆ.

ಹೊರಗೆ ದೇವರಿಲ್ಲವೆನ್ನುವುದು ಮನಕ್ಕೆ ಗೊತ್ತಿದ್ದರೂ, ಮನದಲ್ಲಿಯೇ ಎರಡು ಭಾಗ ಬೇರ್ಪಟ್ಟು, ಒಂದು ಭಾಗದ ಮೂಲಕ ತನಗೆ ಬೇಕಾದ ದೇವರನ್ನು ಕಲ್ಲು, ಲೋಹಗಳಿಂದ ನಿರ್ಮಾಣ ಮಾಡಿ, ಕಾಣಬಾರದ ದೇವರನ್ನು ಕಾಣುವ ತವಕ ದೇಹದಲ್ಲಿ ಸೃಷ್ಟಿ ಮಾಡಿದ್ದಾಳೆ.

ಅಂಗದ ಮೇಲೆ ಲಿಂಗ ಕಟ್ಟಿಕೊಂಡು ಹಗಲಿರುಳೆನ್ನದೆ ಪೂಜಿಸುವುದು ಕೂಡಾ ಮನವೆ. ಶಿವಾಲಯ ಕಟ್ಟಿ ಶಿವನನ್ನು ಆರಾಧಿಸುವುದು ಕೂಡಾ ಮನವೇ. ದೇವಿಗೆ ಆಲಯ ಕಟ್ಟಿ ಆರಾಧಿಸುವುದು ಕೂಡಾ ಮನವೆ.

ಮನಕ್ಕೆ ದೇವರು ಬೇಕು. ಆ ದೇವರು ತನುವಿನಲ್ಲಿಯೇ ತನ್ಮಯವಾಗಿದ್ದಾನೆ. ಆದರೂ ಮನ ತನುವನ್ನು ಹಿಡಿದು ತನಗೆ ಬೇಕಾದ ದೇವರನ್ನು ಕಲ್ಲಲ್ಲಿ ಕೆತ್ತಿ, ಅದಕ್ಕೆ ಆಲಯ ಕಟ್ಟಿ ತನುವಿನೊಂದಿಗೆ ಆರಾಧಿಸುತ್ತಲಿದೆ. ಮನದ ಈ ಆಟವನ್ನು ನೋಡಿ ಬಸವಣ್ಣ ಮಮ್ಮಲ ಮರುಗಿದ್ದಾನೆ.

''ಸುರರ ಬೇಡಿದಡಿಲ್ಲ, ನರರ ಬೇಡಿದಡಿಲ್ಲ ಬರಿದೆ ಧೃತಿಗೆಡಬೇಡ ಮನವೇ! ಆರನಾದಡೆಯೂ ಬೇಡಿ ಬೇಡಿ ಬರಿದೆ ಧೃತಿಗೆಡಬೇಡ ಮನವೆ! ಕೂಡಲಸಂಗಮದೇವನಲ್ಲದೆ ಆರ ಬೇಡಿದಡಿಲ್ಲ ಮನವೆ!''

**466**

**ಕೇಳವ್ವಾ, ಕೇಳವ್ವಾ ಕೆಳದಿ ಹೇಳುವೆ ನಿನಗೆ :**
**ಆಹಾ! ಕಂಗಳಲ್ಲಿ ಕಾಬೆ, ಮತ್ತೆ ಕಾಣೆ !**
**ಮನದಲ್ಲಿ ಹಿಡಿವೆ, ಹಿಡಿದು ಮತ್ತೆ ಕಾಣೆನವ್ವಾ!**
**ಮಿಂಚಿನ ರವೆರವೆಯಂತೆ ತೋರುವನಡಗುವ,**
**ನಮ್ಮ ಕಪಿಲಸಿದ್ಧ ಮಲ್ಲಿನಾಥ ದೇವನು!**

ಸಿದ್ಧರಾಮ ಶಿವಯೋಗಿಗಳು ಹೆಣ್ಣಾಗಿ ಪರಮ ಪುರುಷನ ಸುಖವನು ಒಮ್ಮೆ ಉಂಡು ಮತ್ತೊಮ್ಮೆ ಉಣ್ಣದೆ ನಿರಾಶಳಾದ ಬಗ್ಗೆ ಹೆಣ್ಣಿಗೆ ಹೇಳುತ್ತಿದ್ದಾಳೆ.

ಹೆಣ್ಣೆ ಹೆಣ್ಣಿಗೆ ಹೇಳುವುದೆಂದರೇನು? ಕಣ್ಣಲ್ಲಿ ಕಂಡ ಸತ್ಯವನ್ನು ಕಣ್ಣಿಗೆ ಹೇಳಿದಂತೆ! ಒಮ್ಮೆ ಕಂಡು, ಮತ್ತೊಮ್ಮೆ ನೋಡಲು ಹೋದರೆ ಕಂಡ ಸತ್ಯವೇ ಮರೆಯಾಗಿ ಮತ್ತೊಂದು ವಸ್ತುವಾಗಿದೆ. ಒಮ್ಮೆ ಸತ್ಯ ಕಣ್ಣಿಗೆ ಕಾಣುವುದು. ಹೀಗಾಗಿ ಮನ ಸತ್ಯವನ್ನು ನೋಡಿ ಸತ್ಯವನ್ನೇ ನುಡಿಯುವಂತೆ ದೇಹಕ್ಕೆ ಆದೇಶ ನೀಡುವುದು. ಅದೇ ವಸ್ತುವನ್ನು ಮತ್ತೊಮ್ಮೆ ನೋಡಿದರೆ ಹಿಂದೆ ನೋಡಿದ ವಸ್ತು ಈಗಿಲ್ಲ. ಅದು ಬೇರೆಯೇ ಆಗಿ ನೋಡುವುದು. ಹಿಂದೆ ನೋಡಿದ ವಸ್ತುವಿನ ನೆನಪು ಕೂಡಾ ಇಲ್ಲದಂತೆ ಮರೆ ಮಾಚಿ ಬೇರೆಯದೇ ಆದ ವಸ್ತು ಕಾಣುವುದು ಎಂದರೆ ಇದು ಕಣ್ಣಿನ ದೋಷವೋ ಅಥವಾ ಮನದ ಮುಂದಣ ಮಾಯೆಯೋ?

ಒಮ್ಮೆ ತೋರುವವನು ಮತ್ತೊಮ್ಮೆ ತೋರಿದ ವಸ್ತುವಿನಲ್ಲಿಯೇ ಅಡಗಿ ಬೇರೊಂದು ವಸ್ತುವಾಗಿ ಕಾಣುವವನು! ಇದೇನಾಶ್ಚರ್ಯ. ನೋಡಿದಾಗ ಕಲ್ಲು ಇತ್ತು. ಕೆತ್ತಿದ ಮೇಲೆ ಕಲ್ಲು

ಕಾಣಲೇ ಇಲ್ಲ. ಅದು ದೇವರೆಂದು ನೋಡಿದೆ. ದೇವರಿದ್ದ ಜಾಗದಲ್ಲಿ ಕಲ್ಲು ಇತ್ತು. ದೇವರಾದ ಮೇಲೆ ಕೂಡ ಕಲ್ಲು ಇತ್ತು ; ಅದು ಕಲ್ಲು ಎನ್ನುವುದು ಕೂಡಾ ಮರೆತು ಹೋಯಿತು.

ಆಹಾ! ಕಂಗಳಲ್ಲಿ ಕಂಡೆ, ಮತ್ತೆ ಕಾಣಲಿಲ್ಲ! ಕಂಡು ಮತ್ತೆ ಕಾಣಲೇ ಇಲ್ಲ. ಮಿಂಚಿನ ರವೆರವೆಯಂತೆ ತೋರಿ ಅಡಗಿತಲ್ಲಾ. ಇದೇನಾಶ್ಚರ್ಯ. ಕಂಡ ಕಲ್ಲು ಸತ್ಯವೋ? ಆ ಕಲ್ಲು ದೇವರಾದುದು ಸತ್ಯವೋ?

''ಮಡಕೆಯಮಾಡುವಡೆ ಮಣ್ಣೇ ಮೊದಲು'' ಮಣ್ಣಿನಿಂದಲೇ ಕುಂಬಾರ ಮಡಕೆ ಮಾಡಿದ. ಹೂಜಿ, ಪ್ರಣತಿ, ಮುಚ್ಚಳ, ಮಗಿ ಮಾಡಿದ. ಮಣ್ಣು ಪದಾರ್ಥಗಳಲ್ಲಿ ಕಳೆದು ಹೋಯಿತು. ಮಣ್ಣಿನಿಂದಲೇ ಕಲಾವಿದ ಈಶ್ವರನನ್ನು ಮಾಡಿದ, ಪಾರ್ವತಿಯನ್ನು ಮಾಡಿದ. ಮಸೀದೆ, ಚರ್ಚ್, ದೇವಾಲಯ ಮಾಡಿದ. ಮಾಡಿದವನು ಮರೆತು ಹೋದ, ಮಣ್ಣು ಮರೆತು ಹೋಯಿತು.

ಮಣ್ಣು ನೋಡಿದಾಗ ಕಣ್ಣಿಗೆ ಯಾವ ರೋಗವೂ ಬರಲಿಲ್ಲ. ಅದನ್ನು ಮಣ್ಣೆಂದು ಸಹಜವಾಗಿ ನೋಡಿತು. ಮಣ್ಣಿನಿಂದ ಮಸೀದೆ ಮಾಡಿದಾಗ ಕಣ್ಣಿಗೆ ಮುಸಲ್ಮಾನನ ರೋಗ ಬಂತು. ದೇವಾಲಯ ಮಾಡಿದಾಗ ಹಿಂದುವಿನ ರೋಗ ಬಂತು. ಚರ್ಚ್ ಮಾಡಿದಾಗ ಕ್ರೈಸ್ತನ ರೋಗ ಬಂತು!

ವಸ್ತುವಿನ ಸತ್ಯ ಕಣ್ಣಿಗೆ ಒಮ್ಮೆ ಕಾಣುತ್ತದೆ; ಮತ್ತೊಮ್ಮೆ ಕಾಣುವುದಿಲ್ಲವೆಂದರೆ ಏನಿದರ ಗೂಡಾರ್ಥ! ವಸ್ತು ಸತ್ಯವೋ, ವಸ್ತುವಿನ ಮೂಲ ಸತ್ಯವೋ? ವಸ್ತುವಿನ ಮೂಲವಾದ ಮಣ್ಣು ನೋಡಿದರೆ ಅದು ಸಹಜ ಕಣ್ಣು, ಕಣ್ಣು, ಹಿಂದು ಮುಸಲ್ಮಾನ ಕ್ರೈಸ್ತ ಅಲ್ಲ. ನೋಡುವುದು ಅದರ ಗುಣ. ಅದು ಹೆಣ್ಣು ಅಲ್ಲ; ಗಂಡು ಕೂಡ ಅಲ್ಲ.

ಮಿಂಚಿನ ರವೆರವೆಯಂತೆ ವಸ್ತುವಿನಲ್ಲಿ ಸತ್ಯ ತೋರಿ ಮತ್ತೆ ಅಡಗುತ್ತದೆ ಎಂದರೆ ಕಣ್ಣಲ್ಲಿ ತೋರುವ ಸಹಜ ಸತ್ಯವೂ ಇದೆ; ಸತ್ಯವನ್ನೇ ಮರೆ ಮಾಚಿ ತೋರುವ ಅಸತ್ಯವೂ ಕಣ್ಣನ್ನು ಆವರಿಸಿದೆ ಎಂದಂತೆ ಅಲ್ಲವೇ?

ಕಣ್ಣು, ಕಣ್ಣನ್ನೇ ನೋಡಿ ಹೆಣ್ಣೆಂದು ತಿಳಿದು ಗಂಡಾಗಿ ಹಾದರ ಮಾಡುತ್ತ ಹೆಣ್ಣನ್ನು ಹರಿದು ತಿನ್ನುತ್ತದೆ ಎಂದರೆ ಕಣ್ಣಲ್ಲಿದ್ದ ರಕ್ಕಸನ ಕೆಲಸವೇ ಇದಾಗಿರಬೇಕಲ್ಲವೆ? ಕಂಡದ್ದನ್ನು ಕಂಡಂತೆ ಹಿಡಿದು ಸಹಜವಾಗಿ ನೋಡುವ ನೋಟ ಕಣ್ಣಲ್ಲಿಯೇ ಇದೆ. ಸಹಜ ನೋಟ ಮರೆಯಾಗಿ ಅಜ್ಞಾನದಿಂದ ನೋಡುವ ಮರೆವಿನ ನೋಟವೂ ಕಣ್ಣಲ್ಲಿಯೇ ಇದೆ. ಮಿಂಚಿನ ರವೆರವೆಯಂತೆ ತೋರಿ ಮತ್ತೆ ಅಡಗುವ ನೋಟವೇ ಅರಿವಿನ ನೋಟ! ಆತನೇ ನಮ್ಮ ಕಪಿಲಸಿದ್ಧ ಮಲ್ಲಿನಾಥ ದೇವನು ಎಂದು ಸಿದ್ಧರಾಮ ಶಿವಯೋಗಿಗಳು ಸ್ಪಷ್ಟೀಕರಿಸಿದ್ದಾರೆ.

**467**

**ಕೇಳು ಕೇಳೆನ್ನ ಭಾಷೆ, ಅರಿದು ಕಂಡಾ ಅವ್ವಾ,**
**ನಲ್ಲನೊಮ್ಮೆ ತೋರಿದಡೆ ಎನ್ನ ಸರಿಹರಿ ನೋಡಿದೆ ಅವ್ವಾ.**
**ಕಪಿಲಸಿದ್ಧ ಮಲ್ಲಿನಾಥ ರೂಪಂಬಿಟ್ಟು ಅಗಮ್ಯನಾದಡೆ**
**ಅಗಮ್ಯರೂಪಂಬಿಡಿಸಿ ಹಿಡಿವೆನೆ ಅವ್ವಾ.**

ಲೋಕಕ್ಕೆ ರೂಪವೆಂದರೆ ಬಲು ಇಷ್ಟ. ಸಾಹಿತಿಗಳು ಸಂಶೋಧಕರಾದವರು ಕೂಡಾ ಮೂರ್ತ ರೂಪವನ್ನು ಮಾತ್ರ ಇಷ್ಟಪಡುತ್ತಾರೆ. ಮೂರ್ತರೂಪದ ಮೂಲಕ ರೂಪದ ನಡವಳಿಕೆಯನ್ನು ಪ್ರತಿಪಾದಿಸುತ್ತಾರೆ. ಆಧ್ಯಾತ್ಮ ಲೋಕ ಮೂರ್ತರೂಪವನ್ನು ನಂಬುವುದಿಲ್ಲ.

ಮೂರ್ತರೂಪಕ್ಕೆ ಬುನಾದಿ ಪ್ರಾಯವಾದದ್ದೇ ಅಮೂರ್ತರೂಪ! ಅಮೂರ್ತರೂಪ ಇಲ್ಲದಿದ್ದರೆ ಮೂರ್ತರೂಪ ಇಲ್ಲವೇ ಇಲ್ಲ.

ಅಮೂರ್ತರೂಪವಾದ ಬಯಲು ಮೂರ್ತರೂಪವಾದ ಜಗತ್ತಿಗೆ ಕಾರಣವಾಗಿದೆ. ಅಂಗ ಮೂರ್ತರೂಪವಾದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ಅಮೂರ್ತ. ಆತ ಕಾಣುವುದಿಲ್ಲ. ಕಾಣಬಾರದ ಆತನಿಂದಲೇ ಕಾಯ ಕಾಣುತ್ತದೆ. ಕಾಯದ ಸಕಲ ಇಂದ್ರಿಯಗಳೂ ಕಾಣುತ್ತವೆ. ಆದರೆ ಸಕಲ ಇಂದ್ರಿಯಗಳಲ್ಲಿ ಅಮೂರ್ತರೂಪವೇ ಭರಿತವಾಗಿದೆ.

ಕಣ್ಣು ಕಾಣುತ್ತದೆ. ಅದರ ಕಪ್ಪು ಬಿಳಿ ಗುಡ್ಡೆಗಳು ಕಾಣುತ್ತವೆ. ಎವೆ ರೆಪ್ಪೆ ಅದರ ಮೇಲಿರುವ ಹುಬ್ಬು ಗೋಚರಕ್ಕೆ ಬರುತ್ತದೆ. ಹೀಗೆ ಕಂಡುಬರುವ ನೇತ್ರವನ್ನೇ ನೇತ್ರವೆಂದು ಲೋಕ ಹೇಳುತ್ತದೆ. ನೇತ್ರಕ್ಕೆ ದೃಶ್ಯವೇ ಇಲ್ಲದಿದ್ದರೆ ಅದು ಸುಂದರವಾಗಿ ಕಂಡುಬಂದರೂ ವ್ಯರ್ಥ.

ಕಣ್ಣು ಮೆಳ್ಳೆ ಆದರೇನು, ಅದು ಸುಂದರವಾಗಿದ್ದರೇನು? ನೇತ್ರದ ದೃಶ್ಯವೇ ಪ್ರಧಾನ. ನೇತ್ರವಲ್ಲ. ದೃಶ್ಯ ತನಗೆ ಬೇಕಾದಂತಹ ನೇತ್ರವನ್ನು ತಾನೇ ರಚಿಸಿಕೊಂಡು ಆ ನೇತ್ರದಲ್ಲಿ ದೃಶ್ಯ ಸಂಗಮವಾಗಿದೆ.

ನೇತ್ರಕ್ಕೆ ಭಾಷೆ ಇಲ್ಲ. ಅದರ ಭಾಷೆಯೆಂದರೆ ನೋಡುವುದು. ನೋಡುತ್ತ ನುಡಿಯುವುದು.

ನೇತ್ರದಲ್ಲಿ ಎರಡು ದೃಶ್ಯಗಳಿವೆ. ಒಂದು ನೇತ್ರದಲ್ಲಿ ಸಂಗಮವಾಗಿದೆ. ಮತ್ತೊಂದು ನೇತ್ರವನ್ನು ಆವರಿಸಿದೆ. ನೇತ್ರವನ್ನು ಆವರಿಸಿದ ದೃಶ್ಯಕ್ಕೆ ಸತ್ಯ ನೋಡಲು ಬರುವುದಿಲ್ಲ. ಆದರೆ ಸತ್ಯದ ನೆತ್ತಿಯ ಮೇಲೆ ಹೊಡೆದಂತೆ ಬಾಯಿಯ ಮೂಲಕ ನುಡಿಯುತ್ತದೆ. ಹಾದರದಿಂದ ನೋಡುತ್ತದೆ ಅಕ್ಕ ತಂಗಿ ಮಗಳೆ ಎಂದು ಮರುಳು ಮಾಡಿ ಸೋಗಿನಿಂದ ನುಡಿಯುತ್ತದೆ.

ನೇತ್ರದಲ್ಲಿಯೇ ಸಂಗಮವಾದ ದೃಶ್ಯ ನೇತ್ರವನ್ನು ಆವರಿಸಿದ ದೃಶ್ಯಕ್ಕೆ ದೃಶ್ಯದಿಂದಲೇ ಅದರ ಕೃತ್ಯವನ್ನು ಖಂಡಿಸಿ ನುಡಿಯುತ್ತದೆ. ನೋಡಿದ ನೋಟವನ್ನು ಖಂಡಿಸುತ್ತದೆ; ನುಡಿದ ಬಾಯಿಯನ್ನು ಕೂಡಾ ಏಕಕಾಲಕ್ಕೆ ಖಂಡಿಸುತ್ತದೆ. ಹಾದರದಿಂದ ನೋಡಿ ಆದರದಿಂದ ನುಡಿಯುವಿಯಲ್ಲ, ನಿನಗೆ ನಾಚಿಕೆಯಾಗುವುದಿಲ್ಲವೆ? ಎರಡೆರಡು ತಪ್ಪುಗಳು ಏಕಕಾಲಕ್ಕೆ ಮಾಡುವಿಯಲ್ಲ! ಎಂದು ದೃಶ್ಯದಿಂದಲೇ ನುಡಿದು ಹೇಳುತ್ತದೆ.

ನೋಡಿದಂತೆ ನುಡಿಯುವ ಶಕ್ತಿ ನೇತ್ರದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಮಾತ್ರ ಇದೆ. ಆ ಭಾಷೆ ಮತ್ತೊಂದು ಕಿವಿಗೆ ಕೇಳುವುದಿಲ್ಲ. ಆದರೆ ಹಾದರದಿಂದ ನೋಡಿ ಆದರದಿಂದ ನುಡಿಯುವ ಕಣ್ಣು ಬಾಯಿಗಳೆರಡಕ್ಕೂ ಕೇಳದೇ ಇರುವುದಿಲ್ಲ.

ಅಜ್ಞಾನದ ಹಾದರದಿಂದ ನೋಡಿ ಆದರದ ನುಡಿಗಳ ಮೂಲಕ ಲೋಕ ಮೆಚ್ಚುವಂತೆ ನುಡಿಯುವ ಭಾಷೆಯನ್ನು ನೊಸಲ ಕಣ್ಣ ಅಭವ ಮೆಚ್ಚುವುದಿಲ್ಲ.

''ಗುಡಿಯೊಳಗಿರ್ದು ಗುಡಿಯ ನೇಣಕೊಯ್ದಡೆ, ಗುಡಿಯುದಡಿಗೆ ಬಿದ್ದು ಹಲ್ಲುಹೋಹುದು, ನೋಡಾ, ಪೊಡವಿಗೀಶ್ವರನ ಗರ್ಭವಾಸ ದೊಳಗಿರ್ದು ನುಡಿವರು ಮತ್ತೊಂದು ದೈವವುಂಟೆಂದು. ತುಡುಗುಣಿಯನು ಪಿಡಿತಂದು ಸಾಕಿದಡೆ ತನ್ನೊಡೆಯಂಗೆ ಬಗಳುವಂತೆ ಕಾಣಾ ಕೂಡಲಸಂಗಮದೇವಾ.

ಕಣ್ಣು ನೋಡಿ ಮಾಡುವ ಹಾದರವನ್ನು ಕಣ್ಣೊಳಗಿದ್ದ ಕಣ್ಣು ಸಹಿಸುವುದಿಲ್ಲ. ಹೀಗಾಗಿ ಬಸವಣ್ಣನವರು ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ ಎಂದು ಲೋಕದ ಕಣ್ಣುಗಳನ್ನು

ಪ್ರಶ್ನಿಸಿದ್ದಾರೆ. ಕಣ್ಣೊಳಗೆ ಇರುವ ಅಜ್ಞಾನದ ಕಸ ಒಳಕಣ್ಣಿನಿಂದಲೇ ಕಳೆದಲ್ಲದೆ, ನೋಡುವ ಸತ್ಯವನ್ನು ನೋಡಲು ಕಣ್ಣಿಗೆ ಸಾಧ್ಯವಾಗುವುದಿಲ್ಲ.

ನೋಡುವ ಕಣ್ಣಿನ ಹಾದರವು ಕೂಡಲೇ ನೊಸಲ ಗಣ್ಣಿನ ಭಾಷೆಗೆ ತುತ್ತಾಗುತ್ತದೆ. ತಿಳಿದರೆ ನೋಟದ ಹಾದರವು, ನೋಟದ ಕಿಡಿಗಣ್ಣಿಗೆ ಆಹುತಿಯಾಗುತ್ತದೆ. ಇದು ರೂಪ ಇಲ್ಲದ ಭಾಷೆ. ರೂಪ ರೂಪಕ್ಕೆ ಹೇಳುವ ಬೋಧೆಯಲ್ಲ. ನಿರೂಪದ ಅಜ್ಞಾನಕ್ಕೆ ನಿರೂಪದ ಜ್ಞಾನದಿಂದಲೇ ಬೋಧಿಸುವ ಭಾಷೆ. ರೂಪ ಬಿಟ್ಟು ಅಗಮ್ಯನ ಭಾಷೆ. ಈ ಭಾಷೆಯನ್ನು ಹಿಡಿದ ರೂಪವೇ ಧನ್ಯ !

**468**

**ಕೋಗಿಲ ಶಬ್ದ ಕಿವಿಗೆ ಕೂಗಿ ಹೋಯಿತ್ತು**
**ಕಂಡಕಂಡ ಪುರುಷನನಪ್ಪಲು**
**ಅಪ್ಪಿನ ಸುಖ ಸಂತಾನವಾಯಿತ್ತೆನಗೆ.**
**ಅಪ್ಪಿನ ಸುಖದ ಸಂತಾನದ ಬಗ್ಗೆ ಕೇಳಲು**
**ಕರಣಿಕ ಹೇಳಿದನಯ್ಯಾ ಮೂವತ್ತಾರು ಕುಮಾರರನು**
**ಆ ಕುಮಾರನ ಕೂಟದಲ್ಲಿರಲು, ಹೆತ್ತ ಮಕ್ಕಳ ಕೂಟವೆಂದಡೆ,**
**ಹುಟ್ಟಿದರಯ್ಯಾ ಇನ್ನೂರಾ ಹದಿನಾರು ರಾಜಕುಮಾರರು.**
**ಆ ಕುಮಾರರ ಚೆಲುವಿಕೆಯ ಕಂಡು,**
**ಆ ಚೆಲುವಿಕೆಯ ಮಕ್ಕಳ ನೆರೆಯಲು**
**ಪತಿವ್ರತೆಯನಿಸಿಕೊಂಡು, ಒಬ್ಬನೆ ಪುರುಷನೆಂದಳಯ್ಯಾ ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ ನಿಮ್ಮ ಹೆಂಡತಿ.**

ಉದಕನ ಸಂತಾನ. ಅದರ ಬಯಕೆಯ ಸಂತಾನ. ಉದಕದೊಳಗೆ ಬಿಚ್ಚಿಟ್ಟುಕೊಂಡ ಬಯಕೆ ಉದಕದೊಂದಿಗೆ ಕೂಡಿ ಉದಕವೇ ಆದ ಉದಕದ ಸಂತಾನ. ಉದಕ ಉದಕದೊಂದಿಗೆ ಅಪ್ಪಿಕೊಂಡ ಅಪ್ಪಿನ ಸುಖದ ಸಂತಾನ.

ಅಪ್ಪಿನ ಸುಖದ ಸಂತಾನವೆಂದರೆ ಜಲದ ಸಂತಾನನ! ಜಲವೇ ಬಿಂದುವಾಗಿ, ಜೀವ ಜಲಬಿಂದುವಾಗಿ ತಂದೆ ಮುಖಾಂತರ ತಾಯಿ ಗರ್ಭಕ್ಕೆ ಜಿಗಿದು ಕಾಯವಾಗಿದೆ. ಜಲವೇ ಜಲವನ್ನು ಕೂಡಿ ಜಲವನ್ನೇ ಹಡೆದು ಸುಖಿಸಿದಂತೆ.

ಜಲವೇ ಗಟ್ಟಿಗೊಂಡು ಕಾಯವಾಗಿ ಕಾಯ ಕಾಯದ ಅಚ್ಚಾದಂತೆ, ಕಾಯದೊಳಗೆ ಹೋದ ಜಲ ಕಾಯವಾಗಿ ಕಾಯದಿಂದ ಹೊರಬಂದು ಕಾಯ ಕಾಯದೊಂದಿಗೆ ಸುಖಿಸಿದಂತೆ. ಜಲ ಕಾಯವಾಗಿ, ಕಾಯ ಕಾಯದ ಸಂತಾನವನ್ನು ಸೃಷ್ಟಿಸಿದಂತೆ.

ಕಾಯವೇ ತಾನಾದ ಜಲ ನೋಡಿ ಸುಖಿಸುತ್ತದೆ, ಕೇಳಿ ಸುಖಿಸುತ್ತದೆ, ಮೂಸಿಸಿ ಸುಖಿಸುತ್ತದೆ. ಮುಟ್ಟಿ ಸುಖಿಸುತ್ತದೆ, ರುಚಿಸಿ ಸುಖಿಸುತ್ತದೆ. ಜಲದಲ್ಲಿ ಸುಖ ದುಃಖಗಳಿಲ್ಲ ಆದರೂ ಜಲವೇ ಜಲದ ಸಂತಾನವನ್ನು ಸೃಷ್ಟಿಮಾಡಿದ್ದು ಸೋಜಿಗವಲ್ಲವೇ? ಈ ಸೋಜಿಗದ ಕತೆಯನ್ನು ಸಿದ್ಧರಾಮ ಶಿವಯೋಗಿಗಳು ಕಥನವಲ್ಲದ ಕಥನದ ಮೂಲಕ ಬಹು ಸುಂದರವಾಗಿಯೇ ಹೆಣೆದಿದ್ದಾರೆ.

ಜಲವೇ ಕಾಯವಾಗಿ ಕರಣಿಕನನ್ನು ಸೃಷ್ಟಿ ಮಾಡಿ ಕಾಯದ ಜಲದಲ್ಲಿ ಮೂವತ್ತಾರು

ತತ್ವಗಳನ್ನು ರಚಿಸಿದ್ದಾನೆ. ನೋಡಲು ಹೋದರೆ ಜಲಬಿಂದು. ಅದು ಬಯಲು ಬೀಜ. ಕಣ್ಣಿಗೆ ಕಾಣಬಾರದ ಬೀಜ! ಜಲದ ಅಚ್ಚಿನಲ್ಲಿ ಜಿಗಿದು ಕಾಣುವ ಕಾಯವಾಗಿ ಕಾಯದಿಂದ ಹೊರಬಂದಿದೆ. ಹೊರಬಂದ ಜಾಗವನ್ನೇ ಪುನಃ ಬಯಸಿದ ಕಾಯ ಹೆತ್ತ ಕಾಯದೊಂದಿಗೆ ಕೂಡಿದೆ. ಹೆತ್ತ ಮಕ್ಕಳ ಈ ಕೂಟದಿಂದಾಗಿ ಕಾಯದಲ್ಲಿ ಇನ್ನೂರಾ ಹದಿನಾರು ರಾಜಕುಮಾರರು ಜನಿಸಿದರು. ಮಕ್ಕಳ ಚೆಲುವನು ಕಂಡು ಮಕ್ಕಳೇ ಮನಸೋತು ಮಕ್ಕಳು ಮಕ್ಕಳನ್ನು ನೆರೆಯಲು ಮನವೆಂಬ ಪರಮ ಪತಿವ್ರತೆಯೊಬ್ಬಳು ಹುಟ್ಟಿದಳು. ಪತಿವ್ರತೆಯೆಂಬವಳು ಪರಮ ಪುರುಷನನ್ನು ನೆರೆಯಲು ಆ ಪರಮ ಪುರುಷನೊಬ್ಬನನ್ನೇ ಗಂಡನನ್ನಾಗಿಸಿಕೊಂಡು ಆಕೆ ಆತನಿಗೆ ಹೆಂಡತಿಯಾದಳು.

**469**

**ಕಪಿಲಸಿದ್ದ ಮಲ್ಲಯ್ಯನೊಬ್ಬನೆ ಗಂಡನೆಂದು ಹೆಂಡತಿ-ಕೂಗಿ ಕೂಗಿ ಲೋಕಕ್ಕೆ ಸಾರಿದಳು.**
**ಕ್ರೀಯಲ್ಲಿ ಮಗ್ನವಾದ ಬಳಿಕ ಐಕ್ಯದ ವಿಚಾರ ಬೇಕಿಲ್ಲ;**
**ಗುರುವಿನ ಗದ್ದುಗೆ ಬೇಕಿಲ್ಲ;**
**ಗಣಸಮ್ಮೇಳನದ ಪೂಜೆ ಮೊದಲೇ ಬೇಕಿಲ್ಲ;**
**ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ನಿನಗೆ ಭೇದವಿಲ್ಲೆಂಬುವುದು**
**ಈಗಳೆ ಬೇಕಿಲ್ಲ, ಕೇಳಾ ಪ್ರಭುವೇ.**

ತನುವಿನಲ್ಲಿಯೇ ತನ್ಮಯವಾದ ಅರಿವಿನಲ್ಲಿ ತನುವನ್ನು ಆವರಿಸಿದ ಮನ ಮಗ್ನವಾದ ಬಳಿಕ ಐಕ್ಯ ಎಂಬ ಶಬ್ದ ಕೂಡಾ ಕಳೆದು ಹೋಗುತ್ತದೆ. ಈ ಶಬ್ದವನ್ನು ಹೇಳಿ ಕ್ರಿಯೆಗೆ ಅಣಿಗೊಳಿಸಿದ ಗುರುದೇವ ಕೂಡಾ ಕಳೆದು ಹೋಗುತ್ತಾನೆ. ನಂತರ ಆತನು ಬೇಕಿಲ್ಲ; ಆತನ ಸಮಾಧಿ ಕೂಡಾ ಬೇಕಿಲ್ಲ. ಏಕೆಂದರೆ ಗುರುದೇವನ ಉದ್ದೇಶ ಈಡೇರಿತು.

ಅರಿವು ಎಂದರೆ ಅದು ನೆರೆಹೊರೆಯವರಿಂದ ಬಂದ ಅರಿವಲ್ಲ. ಗುರು ದೇವರು ಹೇಳಿಕೊಟ್ಟ ಅರಿವಲ್ಲ. ವೇದ ಆಗಮ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್‌ಗಳಿಂದ ಬಂದ ಅರಿವಲ್ಲ. ಇವೆಲ್ಲವುಗಳಿಗೆ ಜನ್ಮ ನೀಡಿದ ಅರಿವೇ ಅರಿವು. ಅಂಗಕ್ಕೆ ಜನ್ಮ ನೀಡಿ ಅಂಗದಲ್ಲಿಯೇ ಸಂಗಮವಾಗಿದೆ. ಅಂಗವನ್ನು ಆವರಿಸಿದ ಮನಕ್ಕೆ ಜನ್ಮ ನೀಡಿದೆ. ಮತ್ತೆ ಮನ ಘನಮನವಾಗಲು ಹಗಲಿರುಳೆನ್ನದೆ ಪಾಠ ಮಾಡುತ್ತಲಿದೆ.

ಮನ ಘನದಲ್ಲಿ ಲೀನ ಮಾಡಬೇಕೆಂದು ಶ್ರೀಗುರು ಹಠತೊಟ್ಟು ಶಿಷ್ಯನನ್ನಾಗಿಸಿಕೊಂಡ. ಮನ ಘನದಲ್ಲಿ ಸಂಗಮವಾಗುವ ತಂತ್ರಗಾರಿಕೆಯನ್ನು ಶಿಷ್ಯನಿಗೆ ಕಲಿಸಿದ. ಶಿಷ್ಯನಿಗೆ ನಿಜ ಗುರುವಿನ ದರುಶನವಾಯಿತು. ಗುರುವಿನ ಹೃದಯದಲ್ಲಿಯೂ ಗುರುವಿದ್ದಾನೆ, ಶಿಷ್ಯನ ಹೃದಯದಲ್ಲಿಯೂ ಗುರುವಿದ್ದಾನೆ.

ಸಕಲ ಅಂಗಗಳಲ್ಲಿಯೂ ಅರಿವೆಂಬ ಗುರುದೇವನೇ ವಾಸವಾಗಿದ್ದಾನೆ. ಗುರುದೇವನಿಲ್ಲದ ಅಂಗ ಒಂದೂ ಇಲ್ಲ. ತನ್ನಲ್ಲಿಯೂ ಅವನೆ ಇತರರಲ್ಲಿಯೂ ಅವನೆ. ಇನ್ನು ಐಕ್ಯದ ವಿಚಾರವೇ ತನಗೆ ಬೇಡ. ತನುವಿನಲ್ಲಿಯೇ ತನ್ಮಯವಾದ ಅರಿವು ತನ್ಮಯವೆಂದು ಗೊತ್ತಿರಲಿಲ್ಲ. ಗೊತ್ತಾಯಿತು. ಗೊತ್ತು ಮಾಡದ ಮುನ್ನವೂ ಇತ್ತು. ಗೊತ್ತಿರಲಿಲ್ಲ. ಗೊತ್ತು ಮಾಡಿದಾಗ ಗೊತ್ತಾಯಿತು. ಗೊತ್ತಾದ ಸುಖ ಅನುಭವಿಸಬೇಕೆ? ಗೊತ್ತುಮಾಡಿದವರ ಬೆನ್ನು ಬೀಳಬೇಕೆ?

ತನಗೆ ತಾನೆ ಕ್ರಿಯೆಯಲ್ಲಿ ತೊಡಗುವುದು ತನುವಿನ ಕೆಲಸ. ತನುವನ್ನು ಆವರಿಸಿದ

ಮನದ ಕೆಲಸ. ಮನಕ್ಕೆ ಗೊತ್ತಾಗದಿದ್ದರೆ ಅದಕ್ಕೆ ಗುರು ಬೇಕು. ಗುರುವಿನ ಗದ್ದುಗೆ ಬೇಕು. ಗಣಸಮ್ಮೇಳನ ಬೇಕು. ಗಣಸಮ್ಮೇಳನದ ಪೂಜೆ ಬೇಕು.

ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ನಿನಗೆ ಭೇದವಿಲ್ಲೆಂಬುದು ಈಗಳೆ ಬೇಕಿಲ್ಲ, ಕೇಳಾ ಪ್ರಭುವೆ:

ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯ ಯಾರೆಂಬುದೇ ಗೊತ್ತಿರಲಿಲ್ಲ. ಹೀಗಾಗಿ ತನುವನ್ನು ಹಿಡಿದು ಮಲ್ಲಯ್ಯನ ಆಲಯ ನಿರ್ಮಿಸಿತು. ಆಲಯ ನಿರ್ಮಿಸಿದ ಕಲ್ಲಲ್ಲೇ ಮಲ್ಲಯ್ಯನನ್ನು ಕೆತ್ತಿ ಆಲಯದಲ್ಲಿ ಕೂಡಿಸಿತು. ಆತನನ್ನೇ ಮಲ್ಲಯ್ಯನೆಂದು ತಿಳಿದು ಅನಂತಕಾಲ ಆರಾಧಿಸಿತು.

ಮಲ್ಲಯ್ಯನ ದರುಶನ ಪಡೆದ ಗುರುವಿನ ದರುಶನ ಮನಕ್ಕೆ ಆಯಿತು. ನೀನು ಪೂಜಿಸುವ ದೇವರು ನಿನ್ನಲ್ಲಿಯೇ ಇದ್ದಾನೆ. ನಿನ್ನ ತನುವಿನಲ್ಲಿಯೇ ಇದ್ದು ಮನಕ್ಕೆ ಹಗಲಿರುಳೆನ್ನದೆ ಬೋಧಿಸುತ್ತಿದ್ದಾನೆ. ಅವನಿಂದ ಜನ್ಮ ಪಡೆದ ನೀನು ಬೇರಲ್ಲ; ನಿನಗೆ ಜನ್ಮ ನೀಡಿ, ನಿನಗೆ ಭೋದೆ ಮಾಡುವ ಆತ ಕೂಡಾ ನಿನ್ನಿಂದ ಹೊರತಾಗಿಲ್ಲ. ಇದು ನೀವಿಬ್ಬರೂ ಒಂದಾಗುವ ಸುಕಾಲ ಎಂದು ಗುರುದೇವ ಬೋಧಿಸುವುದೊಂದೇ ತಡ ಮನಕ್ಕೆ ಅರಿವಿನ ಮಲ್ಲಯ್ಯನ ದರುಶನವಾಯಿತು. ಮನ ಘನಮನವಾಯಿತು. ದರುಶನ ನೀಡಿದ ಮಲ್ಲಯ್ಯನಿಗೂ ತನಗೂ ಭೇದವಿಲ್ಲೆಂದು ಆಗಳೇ ತಿಳಿಯಿತು.

**470**

**ಕ್ಲುಪ್ತವ ಮಾಡಿ ತನಗೆ ಬೇಕೆನ್ನ ಪ್ರಸಾದಿ ಬಸವಣ್ಣ.**
**ಬಂದುದತಿಗಳೆದು 'ಅಲ್ಲ ಒಲ್ಲೆ' ಎನ್ನ ಪ್ರಸಾದಿ ಬಸವಣ್ಣ.**
**ತಾನೆಂಬ ರೂಪ ಅಯ್ಯನೆಂಬ ರೂಪಿನಲ್ಲಿ ಒಂದು ಮಾಡಿದ**
**ಪ್ರಸನ್ನ ಪ್ರಸಾದಿ ಕಾಣಾ, ಬಸವಣ್ಣ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಅಯ್ಯನಿಂದ ಪ್ರಸಾದ ಪಡೆದವರು ಅಯ್ಯನನ್ನೇ ಹೊಗಳುವರು. ಅಯ್ಯನದು ಒಂದು ರೂಪ ತನ್ನದು ಒಂದು ರೂಪ; ಈ ಎರಡು ರೂಪಗಳಲ್ಲಿ ಸಂಗಮವಾದ ಅರಿವಿನ ಸಂಗಯ್ಯ ಒಬ್ಬನೆ. ಆದರೂ ಅಯ್ಯನ ರೂಪ ಶ್ರೇಷ್ಠ ಮಾಡಿಕೊಂಡು ತನ್ನ ರೂಪ ಕನಿಷ್ಟವಾಗಿದೆ. ಹೀಗಿದ್ದರೆ ತಾನು ಅಯ್ಯನಲ್ಲಿ ಯಾವುದಕ್ಕಾಗಿ ಹೋದನೋ ಆ ಕಾರ್ಯವೇ ಆಗುವುದಿಲ್ಲ.

ಅಯ್ಯನೆಂಬ ಗುರುದೇವನ ರೂಪವೂ ಒಂದೇ ಆಗಿದೆ; ತಾನೆಂಬ ತನ್ನ ರೂಪವು ಕೂಡಾ ಒಂದೇ ಆಗಿದೆ. ಮಾಟ ಬೇರೆಯಾದರೇನು? ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಇರಬೇಕಾದ ಜಾಗದಲ್ಲಿಯೇ ಇವೆ. ಅವುಗಳಲ್ಲಿರುವ ಜ್ಞಾನವು ಒಂದೇ ಆಗಿದೆ. ಹಾಗೆಯೇ ಅವುಗಳನ್ನು ಆವರಿಸಿದ ಅಜ್ಞಾನ ಕೂಡಾ ಒಂದೇ ಆಗಿದೆ.

ತಾನು ಅಜ್ಞಾನ ಬಳಸಿ ಸುಖಿಸುವಾಗ ತಾನು ಬಳಕೆ ಮಾಡಿದ್ದು ಅಜ್ಞಾನವೆಂದು ತನ್ನದೇ ಆದ ಜ್ಞಾನದಿಂದ ತಿಳಿಯುತ್ತದೆ. ಆದರೂ ಅಜ್ಞಾನದ ಸುಖದಲ್ಲಿ ರೂಪ ಮೈಮರೆಯುತ್ತದೆ. ಆ ರೂಪವನ್ನು ಆ ರೂಪದಲ್ಲಿಯೇ ಸಂಗಮವಾದ ನಿರೂಪ ಎಚ್ಚರಿಸುತ್ತದೆ.

ತಾನೆಂಬ ರೂಪ, ಅಯ್ಯನೆಂಬ ನಿರೂಪ ರೂಪದಲ್ಲಿಯೇ ಮಿಳಿತವಾಗಿವೆ. ರೂಪ

ನಿರೂಪ ಒಂದು ಮಾಡಿದ ಮಹಾವೀರ ಬಸವಣ್ಣ! ಹೀಗಾಗಿ ರೂಪದಿಂದ ರೂಪವನ್ನು ಮಾತನಾಡಿಸಲಿಲ್ಲ ಬಸವಣ್ಣ. ರೂಪದಲ್ಲಿ ಸಂಗಮವಾದ ಅಯ್ಯನೆಂಬ ನಿರೂಪಕ್ಕೆ ತಾನೆಂಬ ರೂಪದಿಂದ ಹಣೆಮಣಿದ ಬಸವಣ್ಣ. ಶರಣು ಶರಣಾರ್ಥಿ ಸಿದ್ಧರಾಮ ಎಂದು ರೂಪಕ್ಕೆ ಬಾಗಿ ನಿರೂಪದೊಂದಿಗೆ ಮಾತನಾಡಿದ ಬಸವಣ್ಣ.

ರೂಪವನ್ನು ಆವರಿಸಿದ ನಿರೂಪವೆಂಬ ತಾನು, ರೂಪದಲ್ಲಿ ಸಂಗಮವಾದ ನಿರೂಪವೆಂಬ ಅಯ್ಯರನ್ನು ರೂಪದಲ್ಲಿಯೇ ಒಂದು ಮಾಡಿದ ಬಸವಣ್ಣ ಪ್ರಸನ್ನ ಪ್ರಸಾದಿ ಕಾಣಾ ಬಸವಣ್ಣ.

ರೂಪಕ್ಕೆ ಬಡಿದ ರೂಪವೂ ನಿರೂಪದಲ್ಲಿಯೇ ಪ್ರಸಾದ. ರೂಪಕ್ಕೆ ಬಡಿದ ಶಬ್ದವೂ ನಿರೂಪದಲ್ಲಿಯೇ ಪ್ರಸಾದ. ರೂಪಕ್ಕೆ ಬಡಿದ ರುಚಿಯೂ ನಿರೂಪದಲ್ಲಿಯೇ ಪ್ರಸಾದ. ರೂಪಕ್ಕೆ ಬಡಿದ ವಾಸನೆಯೂ ನಿರೂಪದಲ್ಲಿಯೇ ಪರಿಮಳ, ರೂಪಕ್ಕೆ ಬಡಿದ ಸ್ಪರ್ಶವೂ ನಿರೂಪದಲ್ಲಿಯೇ ಪ್ರಸಾದ. ಬಸವಣ್ಣ ತನಗೆ ಬೇಕೆನ್ನ, ತನಗೆ ಬಂದುದನ್ನು ಕೂಡ ಒಲ್ಲೆ ಎನ್ನ ಪ್ರಸಾದಿ ಬಸವಣ್ಣ; ಪ್ರಸನ್ನ ಪ್ರಸಾದಿ ಕಾಣಾ ಬಸವಣ್ಣ.

**471**

**ಖರಕರ ಕೋಟಿಪ್ರಭೆ**
**ಪ್ರಭೆಯಂ ಮೀರಿಪ್ಪ ತೆರಹುಗೆಟ್ಟ ಸೀಮೆಯಲ್ಲಿ**
**ಬಿಂದು ಭೇದವಾದ**
**ಅಯ್ಯದಂದವನಾರು ಬಲ್ಲರು?**
**ಆನಂದ ಸಚ್ಚಿದಾನಂದ ಸ್ಥಾನದಲ್ಲಿ ಶೂನ್ಯ ಕಾನನದೊಳಿಪ್ಪರವ್ವಾ.**
**ಅರಿವ ನಿನ್ನವನು**
**ಎಲೆ ಕುರುಹಿಲ್ಲದ ಸೀಮನೆ, ಕಪಿಲಸಿದ್ಧ ಮಲ್ಲಿಕಾರ್ಜುನನ**
**ನೆನಹಿನ ಬ್ರಹ್ಮಾಂಡವಡುಗುವವೆ ಅಯ್ಯಾ .**

ಸೂರ್ಯ ಜಗತ್ತನ್ನು ಬೆಳಗುತ್ತಾನೆ. ಬೆಳಗುವ ಸೂರ್ಯನನ್ನು ಸೂರ್ಯ ಬೆಳಗಿದ ಜಗತ್ತನ್ನು ಶರಣ ಬೆಳಗುತ್ತಾನೆ. ಲಿಂಗ ಮಧ್ಯೆ ಜಗತ್ ಸರ್ವಂ, ಎನ್ನುವ ವಾಕ್ಯದಂತೆ. ಲಿಂಗಯ್ಯನೆಂದರೆ ಸಾಮಾನ್ಯನೆ? ಆತನ ಅಂದವನ್ನು ಜಗವನ್ನೇ ಬೆಳಗುವ ಸೂರ್ಯ ಕೂಡಾ ತಿಳಿದಿಲ್ಲ. ತಿಳಿಯಲು ಸಾಧ್ಯವಾಗಿಲ್ಲ. ಹೀಗಾಗಿ ಆತ ''ಖರಕರ ಕೋಟಿಪ್ರಭೆಯುಳ್ಳವನಾದರೆ ಪ್ರಭೆಯಂ ಮೀರಿಪ್ಪವನು ಲಿಂಗಯ್ಯ . ಆ ಅಯ್ಯನ ಅಂದವನು ಆರು ಬಲ್ಲರು?

ಬಿಂದುವನ್ನು ಸೃಷ್ಟಿ ಮಾಡಿ, ಆ ಬಿಂದುವಿನಲ್ಲಿ ತಾನಿದ್ದು, ಆ ಬಿಂದು ಬೆಳಗುತ್ತಾ ಆ ಬಿಂದುವಿನಲ್ಲಿಯೇ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದವನು. ಕಗ್ಗತ್ತಲೆಂಬ ಅಜ್ಞಾನದ ಕಾಡಿನೊಳಗಿದ್ದವನನ್ನು ಬೆಳಗುವನು; ಬೆಳಗಿಂಗೆ ಬೆಳಗಾಗಿ ಬೆಳಗಿ ಕತ್ತಲನ್ನೂ ತನ್ನಂತೆ ಮಾಡಿಕೊಳ್ಳುವನು. ಬೆಳಗುವ ಬಿಂದು ಕುರುಹನ್ನು ಸೃಷ್ಟಿ ಮಾಡಿ ಆ ಕುರುಹಿನೊಳಗೆ ತಾನಿದ್ದರೂ ಕೂಡಾ ಕುರುಹಿಲ್ಲದವನು.

ಬೆಳಗುವ ಸೂರ್ಯ ಸಕಲ ವಸ್ತುಗಳ ಮೇಲೆ ತನ್ನ ಕಿರಣಗಳನ್ನು ಚೆಲ್ಲಿ ಬೆಳಗಬಹುದು. ಆ ಬೆಳಕಿನಲ್ಲಿ ವಸ್ತು ಕಾಣಬಹುದು. ವಸ್ತು ತನ್ನಲ್ಲಿ ಬೆಳಕು ಕಾಣಲು ಸಾಧ್ಯವಿಲ್ಲ. ಆ ಬೆಳಕಿನಿಂದ

ವಸ್ತು ತನ್ನನ್ನು ತಾನು ಬೆಳಗಲು ಸಾಧ್ಯವಿಲ್ಲ. ಈ ಕೆಲಸ ಸೂರ್ಯಕೋಟಿ ಬೆಳಕಿನಿಂದಲೂ ಸಾಧ್ಯವಾಗುವುದಿಲ್ಲ. ಹೀಗಾಗಿ ಬೆಳಗುವ ಅಯ್ಯನ ಅಂದವನು ಸೂರ್ಯನೇ ಅರಿಯನು ಎಂದ ಮೇಲೆ ಇತರರು ಅರಿಯಲು ಸಾಧ್ಯವಿಲ್ಲ.

ಖರಕರ ಎಂದರೆ ಪ್ರಖರವಾದ ಬೆಳಗಿನ ಕಿರಣಗಳ ಮೂಲಕ ಬೆಳಗುವ ಸೂರ್ಯಕೋಟಿ ಪ್ರಭೆಯುಳ್ಳವನು. ಆ ಸೂರ್ಯ ಪ್ರಭೆಯನ್ನು ಮೀರಿದವನು ಲಿಂಗಯ್ಯ . ಆ ಅಯ್ಯನ ಅಂದವನ್ನು ಬಲ್ಲವರು ಯಾರು ಎಂದು ಪ್ರಶ್ನಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಎಲ್ಲೆಲ್ಲೂ ಕಾಯವೆಂಬ ಕತ್ತಲೆಯ ಕಾಡುಗಳೆ. ಆ ಕತ್ತಲೆಯಲ್ಲಿಯೇ ಇದ್ದು ಅದನ್ನು ಬೆಳಗುತ್ತಾ, ಬೆಳಗಿಂಗೆ ಬೆಳಕಾಗಿ ಬೆಳಗುವ ಸೂರ್ಯನನ್ನು ಬೆಳಗುವ ಪ್ರಭೆ ನೀನು. ಬೆಳಗಿನ ಬಿಂದುವಿನ ಭೇದವನು ಅರಿಯುವವರು ಯಾರು? ಆ ಕಾನನದೊಳಗೆ ಪರಮಾನಂದದಲ್ಲಿರುವ ಸಚ್ಚಿದಾನಂದ ನೀನು. ಸತ್ ಚಿತ್ ಆನಂದ ನೀನು. ಕುರುಹಿನಲ್ಲಿದ್ದೂ ಕುರುಹೇ ಇಲ್ಲದ ಕಪಿಲಸಿದ್ಧ ಮಲ್ಲಯನು ನೀನು. ನೆನಹಿನ ಬ್ರಹ್ಮಾಂಡವನ್ನೇ ಸೃಷ್ಟಿಸಿಕೊಂಡ ಮನದ ಅಜ್ಞಾನವನ್ನು ಕೊಂದು ಘನಮನವನ್ನಾಗಿ ಮಾಡಿದ ಮಹಾದೇವ ನೀನು. ನಿನ್ನ ಬೆಳಕಿಗೆ ನೆನಹಿನ ಬ್ರಹ್ಮಾಂಡವೆಲ್ಲ ಗಡಗಡನೆ ನಡುಗಿ ಅಡಗಿದವಯ್ಯಾ ಎಂದು ಆ ಸಚ್ಚಿದಾನಂದ ಮೂರ್ತಿಯನ್ನು ನೆನೆಯುತ್ತಾ ಆತನ ಪರಮ ಸುಖದ ಭೋಜನವನ್ನು ಮೆಲ್ಲುತ್ತಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**472**

**ಗಂಗೆಯೆ ಘನ ಮುಟ್ಟಿದ ಪ್ರಾಣಿಗಳೆಲ್ಲಾ ದೇವತೆಗಳೆಂದರೆ,**
**ಗಂಗೆಯ ಸಂಚಾರ ಸಾವಿರಾರು ಗಾವುದ.**
**ಅದರಲ್ಲಿಯ ಪ್ರಾಣಿಗಳು ಅನಂತಾನಂತ.**
**ಇಷ್ಟು ಜೀವಿಗಳೆಲ್ಲಾ ದೇವರಾದಡೆ,**
**ಸ್ವರ್ಗದಲ್ಲಿ ನಿಯಮಿತ ದೇವತೆಗಳೆಂಬುದು ಅಪ್ರಸಿದ್ಧ ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗಂಗೆಯೆ ಜಗದ ಜೀವಾಳ. ಗಂಗೆಯ ಜೀವಬಿಂದುವೊಂದು ಗರ್ಭದ ಮೂಲಕ ಗರ್ಭಕ್ಕೆ ಹರಿದು ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಅವು ಸೋರದಂತೆ ಸುಂದರವಾದ ಚರ್ಮ ಹೊಲಿದುಕೊಂಡು ಅಂಗವಾಗಿ ಅವತರಿಸಿ ಬಂದಿದೆ.

ಗಂಗೆಯ ಘನದಿಂದಲೇ ಪ್ರಾಣಿ ಪಶು ಪಕ್ಷಿ ಉರುಗ ಜಲಚರಗಳು ಸಸ್ಯಸಂಕುಲ. ಗಂಗೆಯಿಂದ ಹುಟ್ಟಿದ ಸಕಲ ಪ್ರಾಣಿಗಳನ್ನು ದೇವತೆಗಳೆಂದು ಹೇಳಲು ಸಾಧ್ಯವಿಲ್ಲ. ದೇವತೆಗಳು ಕೂಡಾ ಆಗುವುದಿಲ್ಲ.

ಗಂಗೆ ಹುಟ್ಟಿ ಸಾವಿರಾರು ಮೈಲಿ ಹರಿದು ಸಮುದ್ರದಲ್ಲಿ ಲೀನವಾಗಿ ಮತ್ತೆ ಹುಟ್ಟಿದ ಜಾಗಕ್ಕೆ ಸೇರಿ ಇಲ್ಲವಾಗುತ್ತಾಳೆ. ಗಂಗೆಯ ಲೀಲೆಯೇ ಅನಂತ. ಪಶು ಪಕ್ಷಿ ಪ್ರಾಣಿ ಉರಗ ಗಿಡಮರಬಳ್ಳಿ ಅನಂತ ಕೀಟಗಳು ಜಲಚರಗಳಿಗೆ ಜನ್ಮ ನೀಡಿ ಗಂಗೆ ಎನ್ನಿಸಿಕೊಂಡಿದ್ದಾಳೆ.

ಗಂಗೆಯು ಜನ್ಮ ಪಡೆದದ್ದು ಕೂಡಾ ಗಂಗಾಧರನಿಂದಲೇ. ಗಂಗಾಧರನೆಂದರೆ ಬಯಲು ದೇವ. ಆತನಿಗೆ ಹುಟ್ಟಿಲ್ಲ. ಸಾವು ಕೂಡಾ ಇಲ್ಲ; ಕೇಡು ಕೂಡಾ ಇಲ್ಲದ ಈತ ಜಲಜನಕ ಆಮ್ಲಜನಕಕ್ಕೆ ಜನ್ಮ ನೀಡಿದ; ಅವೆರಡನ್ನೂ ಒಂದು ಮಾಡಿ ಗಂಗೆಯನ್ನಾಗಿಸಿದ. ಆ ಗಂಗೆಯನ್ನೇ

ಧರಿಸಿಕೊಂಡು ಗಂಗಾಧರ ಎಂದು ಕರೆಯಿಸಿಕೊಂಡ. ಗಂಗೆಯ ಜಲಬಿಂದುವಿನಿಂದಲೇ ಪೃಥ್ವಿಯನ್ನು, ಅನಂತ ಆಕಾಶಕಾಯಗಳನ್ನು ಸೃಷ್ಟಿ ಮಾಡಿದ.

ಗಂಗೆಯನ್ನು ಪೃಥ್ವಿಯ ಮೇಲೆ ಹರಿಸಿ ಸಸ್ಯ ಸಂಕುಲವನ್ನು ಜಲಚರಗಳನ್ನು ಸೃಷ್ಟಿಸಿದ. ಅಷ್ಟೇ ಏಕೆ ಇಡೀ ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿದ. ಎಲ್ಲಿ ನೋಡಿದರೂ ಗಂಗೆವಾಳಕರೆ. ಗಂಗೆಯಿಂದಲೇ ಜನ್ಮ ತಳೆದು ಗಂಗೆಯನ್ನು, ಸೃಷ್ಟಿ ಮಾಡಿದ ಗಂಗಾಧರನನ್ನು ಮರೆತವರು.

ಗಂಗೆಯ ಸಂಚಾರ ಸಾವಿರಾರುಗಾವುದ. ಅದರಲ್ಲಿ ಹುಟ್ಟಿದ ಪ್ರಾಣಿಗಳು, ಅದರಿಂದಲೇ ಹುಟ್ಟಿ ಅದೇ ಆದ ಪ್ರಾಣಿಗಳು ಅನಂತಾನಂತ. ಗಂಗೆಯಿಂದ ಹುಟ್ಟಿದ ಪ್ರಾಣಿಗಳೆಲ್ಲ ದೇವತೆಗಳಾದರೆ ಸ್ವರ್ಗದಲ್ಲಿ ನಿಯಮಿತ ದೇವತೆಗಳೆಂಬುದು ಅಪ್ರಸಿದ್ಧ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ.

ಗಂಗೆಯ ಬಿಂದುವೊಂದು ತಂದೆ ಗರ್ಭದ ಮೂಲಕ ತಾಯಿಗರ್ಭ ಪ್ರವೇಶ ಮಾಡಿ ರಕ್ತವಾಗಿದೆ. ಗಂಗೆಯ ಬಿಂದುವೆ ಮಾಂಸವಾಗಿದೆ. ಮಜ್ಜಾ ಮೇದಸ್ಸು ಆಗಿದೆ. ಅದೆ ಗಟ್ಟಿಗೊಂಡು ಅಸ್ತಿಯಾಗಿದೆ. ಗಂಗೆಯ ಬಿಂದುವೇ ಸುಂದರವಾದ ಚರ್ಮವಾಗಿ ಸಪ್ತಧಾತುಗಳು ಸೋರದಂತೆ ಅಂಗವಾಗಿದೆ.

ಗಂಗೆಯ ಬಿಂದುವೇ ನೋಡುವ ಕಣ್ಣು ಆಗಿದೆ; ಕೇಳುವ ಕಿವಿಯಾಗಿದೆ. ಸ್ಪರ್ಶಿಸುವ ಚರ್ಮವಾಗಿ ರುಚಿಸುವ ನಾಲಿಗೆಯಾಗಿದೆ. ಸುಗಂಧ ದುರ್ಗಂಧವನ್ನು ಕಳೆದು ಮೂಸಿಸುವ ಅರಿವಿನ ಪರಿಮಳವಾಗಿದೆ. ಗಂಗೆಯೇ ಅಂಗವಾಗಿದೆ. ಗಂಗೆಯೆ ಸರ್ವಾಂಗದಲ್ಲಿ ಭರಿತವಾದ ಅರಿವಿನ ಲಿಂಗಯ್ಯನೇ ಆದ ಅಂಗ ಲಿಂಗಾಂಗವೆನ್ನಿಸಿಕೊಂಡಿದೆ.

ಗಂಗೆ ಅಂಗವಾಗಿ, ಲಿಂಗವಾಗಿ, ಲಿಂಗಯ್ಯನನ್ನು ಅಂಗವನ್ನು ಆವರಿಸಿಕೊಂಡ ಮನವೂ ಆಗಿದೆ. ತನುವಿನಲ್ಲಿ ತನ್ಮಯವಾದ ಅರಿವನ್ನು ತನುವನ್ನು ಆವರಿಸಿದ ಮನ ಅರಿತಾಗಲೇ ಅರಿವಿನ ಲಿಂಗಯ್ಯ ಎಂದು ಕರೆಯಿಸಿಕೊಳ್ಳುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ ತಾನಾಗುತ್ತದೆ.

**473**

**ಗಂಗೆಯ ಮುಳುಗಿ ಬಂದವರೆಲ್ಲಾ ಪಾಪವ ಮಾಡಿ ಸತ್ತಡೆ,**
**ಅವರಿಗೆ ಪುಣ್ಯದ ಪದವಿಯುಂಟಾದಡೆ, ಗಂಗೆ ಘನವೆಂಬೆ.**
**ಮುಳುಗಿ ಪಾಪವ ಮಾಡದೆ ಸತ್ತು ಹೋದಡೆ,**
**ಪುಣ್ಯದ ಪದವಿಯವರಿಗುಂಟಾದಡೆ ಘನವೆಂಬೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗಂಗೆಯ ಮುಳುಗಿ ಬಂದವರೆಲ್ಲಾ ಪಾಪ ಮಾಡಿ ಸತ್ತರೆ, ಪುನಃ ಅವರಿಗೆ ಪುಣ್ಯದಪದವಿ ದಕ್ಕಿದರೆ ಅವರ ಪಾಪ ಕಳೆದ ಗಂಗೆಯನ್ನು ಘನವೆನ್ನ ಬಹುದು.

ಗಂಗೆಯ ಮುಳುಗಿಯೂ ಪಾಪವ ಮಾಡದೆ ಸತ್ತು ಹೋದಡೆ ಪುಣ್ಯದ ಪದವಿಯು ಅವರಿಗೆ ಉಂಟಾದಡೂ ಗಂಗೆಯನ್ನು ಘನವೆನ್ನಬಹುದು.

ಇವೆರಡೂ ಸಾಧ್ಯವಾಗದ ಮಾತು. ಗಂಗಾಧರನೆ ತಾನಿದ್ದು ಗಂಗೆಯನ್ನು ಮುಳುಗುವುದೆಂದರೇನು? ಗಂಗೆ ಗಂಗೆಯಲ್ಲಿ ಮುಳುಗಿದರೆ ಅದಕ್ಕೆ ಪಾಪ ಪುಣ್ಯದ ಹೊರೆಯನ್ನು ಹೊರಿಸಲು ಸಾಧ್ಯವಾಗುವುದೆ?

''ಪುಣ್ಯ ಪಾಪಂಗಳೆಂಬವು ತಮ್ಮ ಇಷ್ಟ ಕಂಡಿರೆ, 'ಅಯ್ಯಾ' ಎಂದಡೆ ಸ್ವರ್ಗ, 'ಎಲವೊ'

ಎಂದಡೆ ನರಕ ದೇವಾ, ಭಕ್ತಾ, ಜಯಾ, ಜೀಯಾ ಎಂಬ ನುಡಿಯೊಳಗೆ ಕೈಲಾಸ ಮೈದುವುದೆ ಕೂಡಲ ಸಂಗಮದೇವಾ''

ಅಯ್ಯಾ ಎಂದರೆ ಸ್ವರ್ಗ ಲಭಿಸುವುದಿಲ್ಲ. ಎಲವೊ ಎಂದಡೆ ನರಕ ಪ್ರಾಪ್ತಿಯಾಗುವುದಿಲ್ಲ. ಅಯ್ಯಾ, ಎಲವೊ ಎನ್ನುವುದೆರಡೂ ಶಬ್ದಗಳೇ ಆಗಿವೆ. ಒಂದು ಶಬ್ದ ನಿನ್ನನ್ನು ಅರಳಿಸುತ್ತದೆ ಎಂದರೆ ನೀನು ಕೇಳಿದ ಶಬ್ದ ನಿನಗೆ ತಿಳಿಯಲಿಲ್ಲ ಎಂದು ಅಲ್ಲವೆ? ಮತ್ತೊಂದು ಶಬ್ದ ನಿನ್ನನ್ನು ಕೆರಳಿಸುತ್ತದೆ ಎಂದರೆ ಅದು ಕೂಡಾ ನಿನಗೆ ಕೇಳಲು ತಿಳಿಯಲಿಲ್ಲ ಎನ್ನುವುದು ಬಿಟ್ಟರೆ ಮತ್ತೇನೂ ಅಲ್ಲ. ನುಡಿದವನು ಸ್ವರ್ಗಕ್ಕೆ ಹೋಗಲಿಲ್ಲ; ನರಕಕ್ಕೆ ಭಾಜನನಾಗಲಿಲ್ಲ.

ನುಡಿಯಲು ಬರಲಿಲ್ಲ. ಅರಿವಿನಿಂದ ಕೇಳಲು ಬರಲಿಲ್ಲ. ಹಾಗೆಯೇ ಗಂಗೆಯಲ್ಲಿ ಮುಳುಗಿದರೆ ಪಾಪ ಹೋಗುವುದಿಲ್ಲ; ಮುಳಗದಿದ್ದರೆ ನರಕಕ್ಕೆ ಭಾಜನನಾಗುವುದಿಲ್ಲ.

ಅಂಗ ಗಂಗೆಯ ಬಿಂದುವಿನಿಂದ ಹುಟ್ಟಿದೆ. ತಾನು ಗಂಗೆ ಎನ್ನುವುದನ್ನು ಮರೆತಿದೆ. ತಾನು ಗಂಗೆಯನ್ನು ಧಾರಣೆ ಮಾಡಿಕೊಂಡ ಗಂಗಾಧರ ಎನ್ನುವುದನ್ನು ಕೂಡಾ ಮರೆತಿದೆ. ಗಂಗಾಧರನಿಂದ ಸೃಷ್ಟಿಯಾದ ಶಬ್ದ, ಗಂಗಾಧರ ನಿಂದಲೇ ಸೃಷ್ಟಿಯಾದ ಗಂಗೆ ಇವೆರಡೂ ತಾನೇ ಎನ್ನುವುದನ್ನು ಅರಿತರೆ ಪುಣ್ಯ ಪಾಪವೆಂಬುದೇ ಇಲ್ಲ. ಸ್ವರ್ಗ ನರಕ ಎಂಬುವುದು ಕೂಡಾ ಇಲ್ಲ.

ಗಂಗೆಯಿಂದ ಜನ್ಮ ತಳೆದು ಗಂಗೆಯನ್ನೇ ಧಾರಣ ಮಾಡಿಕೊಂಡ ತಾನು ಗಂಗಾಧರ ಎಂದು ಅಂಗ ತಿಳಿಯುವುದನ್ನು ಬಿಟ್ಟು ಬದುಕುವುದಕ್ಕಾಗಿ ಹೆಣಗಾಡುತ್ತಲಿದೆ. ಪುಣ್ಯ ಪಾಪವೆಂಬ ಕೋಳವನ್ನು ತನಗೆ ತಾನೆ ತೊಟ್ಟುಕೊಂಡು ತನ್ನನ್ನು ತಾನೇ ಬಂಧಿಸಿಕೊಂಡಿದೆ. ಪುಣ್ಯ ಪಾಪ ಸ್ವರ್ಗ ನರಕ ಎಂಬ ಶಬ್ದಗಳಿಂದ ಒಮ್ಮೆ ಅರಳುತ್ತದೆ ಮತ್ತೊಮ್ಮೆ ಕೆರಳುತ್ತದೆ.

ಗಂಗೆಯಿಂದಲೇ ಹುಟ್ಟಿದ ಮಾಯಾಮಯವಾದ ಮೃಗಜಲ ಗಂಗೆಯನ್ನು ಧರಿಸಿದ ಗಂಗಾಧರನನ್ನೇ ಕಂಗೆಡಿಸಿದೆ. ತಿಳಿದರೆ ಮಹಾದೇವ ತಿಳಿಯದಿದ್ದರೆ ಮನವುಳ್ಳ ಮಾನವ.

**474**

**ಗಂಡನ ಕಂಡ ಹೆಂಡತಿ ಭಂಡಾದಳು ;**
**ನಕ್ಕರು ನಾಣುಗೆಟ್ಟರೈವತ್ತು ಕೋಟಿ ಮಂದಿ**
**ಉಂಡವರುಪವಾಸಿಗಳಾದರು**
**ಕಪಿಲಸಿದ್ಧಮಲ್ಲಿನಾಥಯ್ಯಾ.**

ಗಂಡನನ್ನು ಕಂಡವರುಂಟು. ಹಾಗೆಯೇ ಹೆಂಡತಿಯನ್ನು ಕಂಡವರು ಕೂಡಾ ಉಂಟು. ಗಂಡ ಹೆಂಡಿರ ಸಂಸಾರ ಕಂಡವರು ಕೂಡಾ ಉಂಟು. ಗಂಡನ ಕಂಡ ಹೆಂಡತಿಯಿಲ್ಲ. ಹೆಂಡತಿಯನ್ನು ತನ್ನ ಸ್ವಾಧೀನ ಮಾಡಿಕೊಂಡ ಗಂಡ ಕೂಡಾ ಅಪರೂಪ.

ಸಂಸಾರದಲ್ಲಿ ಇದು ತಿರುವು ಮರುವು. ಆಧ್ಯಾತ್ಮ ಲೋಕದ ಮಾತು ಸಂಸಾರಕ್ಕೆ ಹಚ್ಚುವಂತಿಲ್ಲ. ಸಂಸಾರದ ಮಾತು ಆಧ್ಯಾತ್ಮಕ್ಕೆ ಹೊಂದಿಕೆಯಾಗುವುದಿಲ್ಲ. ಸಂಸಾರದ ಪದಗಳನ್ನೇ ಪಡೆದು ಅಧ್ಯಾತ್ಮಕ್ಕೆ ಬಳಸಿಕೊಂಡಿದ್ದಾರೆ; ಆಧ್ಯಾತ್ಮಲೋಕದ ಪರಿಣಿತರು.

ಸಿದ್ಧರಾಮ ಶಿವಯೋಗಿಗಳು ಹೇಳಿದ ಗಂಡನೇ ಬೇರೆ ಲೋಕದಲ್ಲಿ ಬಳಕೆಯಾಗುವ 'ಗಂಡ' ಶಬ್ದವೇ ಬೇರೆ. ಗಂಡ ಎಂದರೆ ಗಂಡು ಎನ್ನುವ ಅರ್ಥ ಬರುವುದು ಸಹಜ. ಆದರೆ ಗಂಡ ಗಂಡೂ ಅಲ್ಲ; ಹೆಣ್ಣು ಕೂಡಾ ಹೆಣ್ಣು ಅಲ್ಲ: ಹೆಣ್ಣು ಎನ್ನುವ ಅಂಗ ಕೂಡಾ ಹೆಣ್ಣು ಅಲ್ಲ. ಹೆಣ್ಣು

ಎನ್ನುವ ದೇಹದಲ್ಲಿ ಗಂಡ ಎನ್ನುವ ಅರಿವಿನ ಪರಮ ಪುರುಷನಿದ್ದಾನೆ. ಆ ಪರಮ ಪುರುಷನ ದರುಶನದ ಬಯಕೆಯುಳ್ಳ ಮನವೆಂಬ ಹೆಂಡತಿ ಹೆಣ್ಣು ಎನ್ನುವ ದೇಹವನ್ನು ಆವರಿಸಿದ್ದಾಳೆ.

ಗಂಡ ಎನ್ನುವ ದೇಹದಲ್ಲಿ ಕೂಡಾ ಗಂಡ ಎನ್ನುವ ಅರಿವಿನ ಪರಮ ಪುರುಷನಿದ್ದಾನೆ. ಮನವೆಂಬ ಹೆಂಡತಿ ದೇಹವನ್ನು ಆವರಿಸಿದ್ದಾಳೆ. ಒಂದು ದೇಹದಲ್ಲಿಯೇ ಗಂಡ ಹೆಂಡತಿ ಇದ್ದು ದೇಹವನ್ನೇ ಮನೆ ಮಾಡಿಕೊಂಡು ವಾಸ ಮಾಡುತ್ತಿದ್ದಾರೆ.

ಲೋಕದ ಗಂಡ ಹೆಂಡತಿಗೆ ಪ್ರತಿ ದೇಹದಲ್ಲಿಯೇ ಇರುವ ಗಂಡ ಹೆಂಡತಿಯ ವಿಷಯ ಗೊತ್ತಿಲ್ಲ. ಏಕೆಂದರೆ ದೇಹವನ್ನು ಆವರಿಸಿರುವ ಅರಿಷಡ್ವರ್ಗಗಳು ಸಪ್ತ ವ್ಯಸನಗಳು ಅಷ್ಟ ಮದಗಳು ಅಡ್ಡಿಪಡಿಸುತ್ತಲಿವೆ. ಇವರೆಲ್ಲರನ್ನು ಹೊರಗೆ ತಳ್ಳಿ ಹೆಂಡತಿಯಾದವಳು ಗಂಡನನ್ನು ಕಾಣಬೇಕು. ಹೀಗೆ ಕಂಡ ತಕ್ಷಣ ಭಂಡಾಗುವರು ತಮ್ಮ ಮೇಲೆ ಹೇರಿಕೊಂಡ ಅಜ್ಞಾನಕ್ಕೆ ತಮಗೆ ತಾವೇ ನಾಚಿಕೆಯಿಂದ ನಗುವರು.

ಅದುವರೆಗೆ ಸಂಸಾರದ ಮೂಲಕ ಉಂಡ ಅಜ್ಞಾನದ ಊಟವೆಲ್ಲ ಹುಸಿಯೆಂದೆನ್ನಿಸುವುದು. ಉಂಡು ಉಪವಾಸಿಯಾದೆವಲ್ಲ ಎಂದು ಹರುಷದಿಂದ ಬೀಗುವರು. ಬಳಸಿಯೂ ಬ್ರಹ್ಮಚಾರಿಯಾದೆವಲ್ಲ ಎಂದು ಕುಣಿದಾಡುವರು.

''ಎಮ್ಮಗಂಡನು ಏಕಾಂತಂಬೊಕ್ಕನು, ಬೇಗ ಬೇಗ ಹೊರ ನಡಿಯಿರಣ್ಣಗಳಿರಾ, ಒಬ್ಬರಿದ್ದಡೂ ಸೈರಿಸ ಕಪಿಲಸಿದ್ಧ ಮಲ್ಲಿಕಾರ್ಜುನ'' ಎಂದು ಸಿದ್ಧರಾಮ ಶಿವಯೋಗಗಳು ಹಾಡಿದ್ದಾರೆ. ಅವರು ಗಂಡು ಎನ್ನುವುದು ಲೋಕಕ್ಕೆ ಗೊತ್ತು. ಆದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಗಂಡನಿಗೆ ಹೆಂಡತಿಯೇ ಆಗಿದ್ದಾಳೆ.

ಅಂಗವನ್ನು ಆವರಿಸಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವನ್ನು, ಸಪ್ತ ವ್ಯಸನಗಳನ್ನು ಅಷ್ಟಮದಗಳನ್ನು ಹೊರಗೆ ಹೋಗಲು ವಿನಂತಿಸಿಕೊಂಡಿದ್ದಾರೆ. ಅವರಲ್ಲಿ ಒಬ್ಬರಿದ್ದರೂ ಗಂಡನ ಏಕಾಂತಕ್ಕೆ ಭಂಗ ಉಂಟಾಗುತ್ತದೆ ಎಂಬ ಸಂದೇಶವನ್ನು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ನೀಡಿದ್ದಾರೆ. ಅರಿತು ಓದಿ, ಸಾಧನೆಗೆ ಒಳಗಾದ ಓದುಗನೇ ಜಾಣ.

**475**

**ಗಂಡ ಬಾರನು ಎನ್ನ ತವರೂರಿಗೆ ಹೋಗುವೆನೆನಲು,**
**ನೋಡೆ, ನೋಡೆಲಗವ್ವಾ**
**ಬೇಟೆಯನಾಡುವ ನಾಯ ತಲೆಯ ಕೊಯ್ದಿಟ್ಟು,**
**ತಾ ಬೇರೆ ಬೇಟೆಕಾರನಾದ.**
**ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ ನೆಲೆಯಲ್ಲಿ ನಿಲವ ಕಂಡನು;**
**ಹುಚ್ಚನ ಸಂಗ ನಿಶ್ಚಯವಾಯಿತು.**

ತವರಿನಿಂದ ಬಂದ ಹೆಂಡತಿಯೊಂದಿಗೆ ಗಂಡ ಸಂಗ ಮಾಡಲು ಬಾರದಿದ್ದರೆ ಆಕೆ ಪುನಃ ತವರಿಗೆ ಹೋಗಲು ಸಿದ್ಧಳಾಗುತ್ತಾಳೆ. ಹಾಗೆ ಸಿದ್ಧಳಾಗುವ ಹೆಂಡತಿ ಹೆಂಡತಿಯೇ ಅಲ್ಲ. ಗಂಡನನ್ನು ಪ್ರೇಮದಿಂದ ಕಂಡು ಸೇವೆ ಮಾಡುತ್ತಾ ಆತನಿಗೆ ಅರಿಯದಂತೆ, ಆತನ ಮುನಿಸು ಕಳೆದು ಗಂಡನನ್ನು ಹತ್ತಿರಕ್ಕೆ ಕರೆದುಕೊಳ್ಳುವುದೇ ಹೆಂಡತಿಯ ಜಾಣತನ.

ಮನವೆಂಬ ಹೆಂಡತಿ ಅರಿಷಡ್ವರ್ಗಗಳೊಂದಿಗೆ ಸಪ್ತವ್ಯಸನಗಳೊಂದಿಗೆ

ಅಷ್ಟಮದಗಳೊಂದಿಗೆ ಸಂಗದಲ್ಲಿ ನಿರತವಾದಾಗ ಆಕೆಯ ನಾಯಿತನವನ್ನು ಕಳೆದು ಅರಿಷಡ್ವರ್ಗಗಳನ್ನು ಅಷ್ಟಮದಗಳನ್ನು ಸಪ್ತವ್ಯಸನಗಳನ್ನು ಬೇಟೆಯಾಡಿ ಅವುಗಳ ತಲೆಯ ಕೊಯ್ದು ಬೇಟೆಗಾರನಾಗಿದ್ದ ಗಂಡ ಹೆಂಡತಿಯನ್ನು ಮುಕ್ತಳನ್ನಾಗಿಸುತ್ತಾನೆ.

ಗಂಡ ಬೇಟೆಗಾರನಾಗುವ ಮುನ್ನ ಹೆಂಡತಿಯೇ ಅರಿಷಡ್ವರ್ಗಗಳಿಂದ ಸಪ್ತವ್ಯಸನಗಳಿಂದ ಅಷ್ಟಮದಗಳಿಂದ ಕಾಯದ ಕೈಯಲ್ಲಿ ಅಜ್ಞಾನದ ಕತ್ತಿ ಹಿಡಿದು ಸ್ವತಃ ಬೇಟೆಗೆ ಹೋಗುತ್ತಿದ್ದಳು. ಇದೆಲ್ಲವನ್ನು ಕೊಂದು ಸ್ವತಃ ಗಂಡನೇ ಬೇಟೆಗಾರನಾಗಿ ಹೆಂಡತಿಯನ್ನು ತನ್ನಂತೆ ಮಾಡಿಕೊಂಡಿದ್ದಾನೆ. ಆದರೂ ಗಂಡನ ಸಂಗವಿಲ್ಲದ ಹೆಂಡತಿ ಮುನಿಸಿಕೊಂಡಿದ್ದಾಳೆ.

ಅರಿವು ಕಾಯದಲ್ಲಿ ಸುಪ್ತವಾದಾಗ ಕಾಯದೊಂದಿಗೆ ಮನವೆಂಬ ಅಜ್ಞಾನದ ರಾಜ್ಯ ತಲೆಯೆತ್ತಿ ನಿಲ್ಲುತ್ತದೆ. ಅಜ್ಞಾನ ಸತ್ತು ಅರಿವು ನೆಲೆ ನಿಂತಾಗ ಸ್ವತಃ ಅರಿವು ಮನದೊಂದಿಗೆ ಮುನಿಸಿಕೊಳ್ಳುತ್ತದೆ. ಮನ ಜಾಗ್ರತವಾಗಿ ಅರಿವಿನ ಸಂಗ ಮಾಡುತ್ತಾ ಆ ಅರಿವೇ ತಾನಾಗುವ ನಿಲವನ್ನು ಮನವೇ ಕಂಡುಕೊಳ್ಳಬೇಕು. ಅರಿವು ಗೊತ್ತಾದ ಮೇಲೆ ಮನವೇ ಮುನಿಸಿಕೊಂಡರೆ ಹೇಗೆ? ಅರಿವಿನ ಸಂಗ ಮಾಡಿದರೆ ಅದು ತಪ್ಪು ಹೇಗೆ ಆಗುತ್ತದೆ ಎಂದು ತನ್ನನ್ನು ತಾನೇ ಮನ ಅರಿವಿನಿಂದ ಕೇಳಿಕೊಳ್ಳಬೇಕು.

**476**

**ಗಡಣ ಸಂಗಮುದಲ್ಲಿ ಮೃಡನರ್ಚಿಸ ಬಂದೆ**
**ಮೃಡ ಸಿಲುಕವನುವಲ್ಲ ನಿನ್ನ ಕರದ.**
**ಕರ ಕರದ ಸಂಬಂಧ ಸಿಲುಕುವನ**
**ಸಾಯುಜ್ಯ ಕರದಿಂದ ಮೇಲೆ ತಾ**
**ಮಂಗಳಾಂಗ ಬೆಳಗುವಂ ದೀಪ್ತಿಯಲಿ.**
**ನೆನಹು ಅಕ್ಷರದ್ವಯದ ಅನಿಮಿಷ ಸಿದ್ಧ ಆದ್ಯಂತ**
**ಶೂನ್ಯ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಭೇದ ಭೇದಿಗೆ ಅಲ್ಲದೆ ವೇದ್ಯವಲ್ಲ.**

ಲೋಕ ಮೃಡನನ್ನು ಒಲಿಸಿಕೊಳ್ಳಬೇಕೆಂಬ ಕಾತುರದಲ್ಲಿದೆ. ಕಾರಣ ಮೃಡನಿಗಾಗಿ ಅರ್ಚನೆ ಮಾಡುತ್ತದೆ. ಧ್ಯಾನಿಸುತ್ತದೆ; ಪೂಜಿಸುತ್ತದೆ. ಉತ್ಸವ ಮಾಡುತ್ತಾ ಕುಣಿಕುಣಿದು ಸಂಭ್ರಮಿಸುತ್ತದೆ. ಆದರೂ ಮೃಡನ ದರುಶನ ಆತನನ್ನು ಪೂಜಿಸುವ ಭಕ್ತನಿಗೆ ಆಗುವುದಿಲ್ಲ. ಏಕೆಂದರೆ ತಾನು ಪೂಜಿಸುವ ದೇವರು ದೇವರಲ್ಲ. ತನ್ನ ಕೈಯಿಂದಲೇ ಆತನನ್ನು ನಿರ್ಮಾಣ ಮಾಡಿ ತನ್ನ ಕೈಯಿಂದಲೇ ಆತನನ್ನು ಪೂಜಿಸಿದರೆ ಆತ ಒಲಿಯುವುದಾದರೂ ಎಂತು?

ದೇವರು ದೇಹದಲ್ಲಿಯೇ ಸಂಗಮವಾಗಿದ್ದಾನೆ. ದೇಹವನ್ನು ರಚನೆ ಮಾಡಿ, ಆ ದೇಹದಲ್ಲಿಯೇ ಇದ್ದ ದೇವರನ್ನು ದೇಹ ಮರೆತು, ದೇಹದಿಂದಲೇ ಕಲ್ಲಲ್ಲಿ ಕೆತ್ತಿದ ದೇವರನ್ನು ದೇವರೆಂದು ಆರಾಧಿಸಿದರೆ ದೇಹದಲ್ಲಿದ್ದ ದೇವರು ಪೂಜಿಸುವ ದೇವರನ್ನು ನೋಡಿ ನಗುವನು.

ದೇವರನ್ನು ತೋರಿಸುವುದಾಗಿ ನಂಬಿಸಿದ ದೇಹವನ್ನು ಗುರುವೆಂದು ಆರಾಧಿಸಿದರು ಕೂಡಾ ದೇಹ ದೇಹವನ್ನೇ ಪೂಜಿಸಿದಂತೆ. ಪೂಜಿಸುವ ಪೂಜಿಸಿಕೊಳ್ಳುವ ದೇಹಗಳೆರಡೂ ದೇವರನ್ನು ಮರೆತಂತಲ್ಲವೆ? ಪೂಜಿಸುವ ಪೂಜೆಗೊಳಗಾದ ದೇಹದಲ್ಲಿದ್ದ ದೇವರು ನಗುವನು.

ದೇಹ ದೇಹದ ಸಂಬಂಧಕ್ಕೆ ದೇವರು ಸಿಗುವವನಲ್ಲ.

ಪೂಜಿಸುವ ಕಲ್ಲಿನಲ್ಲಿ ಭೇದಿಸಿ ನೋಡುವವನಿಗೆ, ಪೂಜೆಗೊಳಪಟ್ಟ ದೇಹದಲ್ಲಿಯೇ ಭೇದಿಸಿ ನೋಡುವವನಿಗೆ ದೇವರ ದರುಶನ ವಾಗುವುದರಲ್ಲಿ ಸಂದೇಹವೇ ಇಲ್ಲ.

ದೇವರೆಂದರೆ ಸತ್ಯ. ಸಂಖ್ಯೆಯೇ ಅಲ್ಲದ ಶೂನ್ಯ, ಸಂಖೆಗಳಿಗೆ ಶೂನ್ಯದಿಂದಲೇ ಬೆಲೆ. ಶೂನ್ಯದಿಂದಲೇ ಸಂಖ್ಯೆಗಳ ನಿರ್ಮಾಣ. ಸಂಖ್ಯೆಗಳೇ ಶೂನ್ಯಗಳಲ್ಲ. ಸಕಲ ಸಂಖ್ಯೆಗಳಲ್ಲಿ ಶೂನ್ಯ ಸಂಗಮವಾಗಿದೆ.

ಕೆತ್ತಿದ ಕಲ್ಲಲ್ಲಿ ಕಲ್ಲು ಇದೆ. ಕೆತ್ತಿದ ಮೇಲೆ ಕಲ್ಲು ಮರೆತು ಹೋಗಿದೆ. ಕಲ್ಲನ್ನು ಮರೆತುದಕ್ಕಾಗಿ ಕೆತ್ತಿದ ಕಲ್ಲನ್ನೇ ದೇವರೆಂದು ಆರಾಧಿಸಿದ. ಅದಕ್ಕೆ ಚಿನ್ನದ ಕಿರೀಟ ತೊಡಸಿದ. ಬೆಳ್ಳಿಯ ಪಾದುಕೆಗಳನ್ನಿಟ್ಟು ಪಟ್ಟು ಪೀತಾಂಬರಗಳಿಂದ ಅಲಂಕರಿಸಿದ. ಆಲಯ ನಿರ್ಮಿಸಿದ, ಚಿನ್ನದ ತಗಡುಗಳನ್ನು ಜಡಿದು, ಚಿನ್ನದ ಕಳಶವನ್ನು ಶಿಖರಕ್ಕೆ ತೊಡಿಸಿದ. ಮತ್ತೊಂದು ದೇವರನ್ನು ಕಲ್ಲಲ್ಲಿ ಕೆತ್ತಿ ಅದಕ್ಕೆ ಹೆಣ್ಣು ದೇವರೆಂದು ನಾಮಕರಣ ಮಾಡಿದ. ತನ್ನಂತೆ ಎರಡು ದೇವರಿಗೆ ಕಲ್ಯಾಣೋತ್ಸವ ಮಾಡಿದ. ಕತ್ತಿಗೆ ತಾಳಿ ಬಿಗಿದು ಶಯನ ಗೃಹಕ್ಕೆ ಕಳುಹಿಸಿ ಶೋಬಾನೆ ಪದವನಾಡಿದ. ಆದರೂ ದೇವರು ಒಲಿಯಲಿಲ್ಲ. ಏಕೆಂದರೆ ಮಾಡಿದ ಪೂಜೆಯೇ ಅರ್ಥವಿಲ್ಲದ್ದು.

ದೇಹದಲ್ಲಿದ್ದ ದೇವರು ಪೂಜಿಸುವ ದೇಹದೊಂದಿಗೆ ಮುನಿಸಿಕೊಂಡ. ಭೇದಿಸಿ ಅದನ್ನು ಶೋಧಿಸಿ ತೆಗೆದವನನ್ನು ತೆಕ್ಕೆಗೆ ತೆಗೆದುಕೊಂಡು ತನ್ನಲ್ಲಿಯೇ ಸಂಗಮಗೊಳಿಸಿಕೊಂಡ.

ದೇವರೆಂದರೆ ದೇಹದೊಂದಿಗೆ ಮಾತಾಡುವವನು. ದೇಹದಿಂದ ಆಚರಿಸುವ ಅಜ್ಞಾನದ ಕೆಲಸಗಳಿಗೆ ದೇಹದಲ್ಲಿಯೇ ಶೂನ್ಯನಾಗಿ ದೇಹಕ್ಕೆ ಬೋಧಿಸುವವನು. ದೇಹವನ್ನು ಆವರಿಸಿದ ಮನವೂ ಶೂನ್ಯ. ದೇಹದಲ್ಲಿ ಸಂಗಮವಾದ ದೇವರೂ ಶೂನ್ಯ. ಶೂನ್ಯ ಶೂನ್ಯದಲ್ಲಿ ಬೆರೆತರೆ ಅಲ್ಲಿ ಅಂಕೆಗಳಿಗೆ ಜನ್ಮವಿಲ್ಲ. ಶೂನ್ಯವೇ ಆಗುತ್ತದೆ. ಶೂನ್ಯದಿಂದಲೇ ಜನ್ಮ ತಳೆದ ದೇಹಕ್ಕೆ ಶೂನ್ಯದ ದರುಶನವಾದರೆ ಸಾಕು ಶೂನ್ಯವೇ ಆಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**477**

**ಗರ್ಭದಾದಿ ಅಂತ್ಯದಲ್ಲಿ ಒಬ್ಬನೆಯಿದ್ದ.**
**ಅಯ್ಯಾ, ಪರ್ಬಗತ ನೀನೆ ಕಂಡಾ ಅಯ್ಯಾ.**
**ಒಂದೊಂದು ಪರಿಯಲ್ಲಿ**
**ಆಡುವಾನಂದು ಗುಣವ ನೋಡಯ್ಯಾ.**
**ಶೂನ್ಯ ಶೂನ್ಯ ಕಾಯನಾ ಕರಸ್ಥಲಕೆ ದೆವನಾದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಿಂದುವಾಗದ ಮುನ್ನ ಬಯಲೇ ಇತ್ತು. ಆ ಬಿಂದುವೇ ಜೀವಜಲ ಬಿಂದುವಾಗದ ಮುನ್ನವೂ ಬಯಲೇ ಇತ್ತು. ಆ ಜೀವ ಜಲಬಿಂದು ಗರ್ಭಧರಿಸದ ಮುನ್ನ ಬಯಲೇ ಇತ್ತು. ಬಯಲೇ ಬೀಜವಾಯಿತು. ಆ ಬೀಜವೇ ಗರ್ಭಕ್ಕೆ ಕಾರಣವಾಗಿ ಬ್ರಹ್ಮಾಂಡವಾಯಿತು.

ಬಯಲುದೇವ, ಬಯಲನ್ನೇ ಬೀಜವನ್ನಾಗಿಸಿ ಬ್ರಹ್ಮಾಂಡದ ಸಕಲೆಡೆಗಳಲ್ಲಿ ಬಿತ್ತಿದ. ಜಲವಾಯಿತು, ಜೀವಜಲವಾಯಿತು, ಜಲಚರವಾಯಿತು. ಗಿಡ ಮರ ಬಳ್ಳಿ ಸಸ್ಯ ಸಂಕುಲವಾಯಿತು. ಪ್ರಾಣಿ ಪಶು ಪಕ್ಷಿ ಕೀಟವಾಯಿತು. ಒಂದೊಂದು ಪರಿಯಲ್ಲಿ ಆಡುವ

ಆನಂದವನ್ನು ಅದನ್ನು ನೋಡುವ ಪರಮಾನಂದದ ಗುಣವನ್ನು ಕಾಯಕ್ಕೆ ತಂದುಕೊಟ್ಟು ಆ ಕಾಯವನ್ನೇ ಕೈಲಾಸವನ್ನಾಗಿಸಿದ.

ಕಾಯವೆಂಬ ಕೈಲಾಸದಲ್ಲಿ ವಾಸಮಾಡುತ್ತಾ ಆ ಕಾಯಕ್ಕೆ ಕಾಣದಂತೆ ಕಾಯದಲ್ಲಿಯೇ ಸಂಗಮವಾಗಿ ಸಂಗಯ್ಯನೆಂಬ ಹೆಸರು ಪಡೆದು ತಾನು ದೇವನಾದ. ದೇವರ ದೇವನಾದ.

ದೇಹದಲ್ಲಿಯೇ ಇದ್ದ ದೇವರು, ದೇಹಗಳುಳ್ಳ ದೇವರ ನಾಡನ್ನೇ ದೇಹದಿಂದಲೇ ರಚಿಸಿದ. ದೇಹದಲ್ಲಿದ್ದು ದೇಹಕ್ಕೆ ದೇವರಾದರೂ ದೇಹ ಕಾಣದಂತೆ ದೇಹದಲ್ಲಿಯೇ ಮಾಯವಾದ. ದೇಹದಿಂದಲೇ ದೇವಾಲಯವನ್ನು ನಿರ್ಮಿಸುವಂತೆ ಮಾಡಿದ. ಆ ದೇಹದಲ್ಲಿ ತಾನೊಬ್ಬನೇ ಇದ್ದು ಸೃಷ್ಟಿಕರ್ತ ನೀನೇ ದೇವ ಎಂದು ದೇಹದಿಂದಲೇ ದೇವರನ್ನು ಕೈ ಎತ್ತಿ ಬೇಡಿಕೊಳ್ಳುವಂತೆ ಮಾಡಿದ.

ಒಂದೊಂದು ಪರಿಯಲ್ಲಿ ನೀನು ಆಡುವ ಆನಂದ ಗುಣವನ್ನು ನೀನೇ ನೋಡಯ್ಯಾ. ಶೂನ್ಯ ನೀನು. ಶೂನ್ಯದಿಂದಲೇ ಕಾಯವನ್ನು ರಚಿಸಿದವನು ನೀನು. ಆ ಶೂನ್ಯದ ಕಾಯದಲ್ಲಿಯೇ ವಾಸ ಮಾಡಿದ ಸ್ವಾಮಿ ನೀನು. ಶಾಶ್ವತನು ನೀನು. ಎತ್ತಿದೆ ಬಿರಿದ ಜಗವೆಲ್ಲ ಅರಿಯಲು ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋದೇವ ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ, ಕಾಯದಲ್ಲಿಯೇ ಕೂಡಿದ ಕೂಡಲ ಸಂಗಮದೇವಾ ಎಂದು ಕಾಯದಿಂದಲೇ ಬಸವಣ್ಣ ನಿನ್ನನ್ನು ಗುರುತಿಸಿದ. 'ಶಿವನೇಕೋದೇವ ರುದ್ರನ ದ್ವಿತೀಯ' ಎಂದು ನಂಬುವುದು ಕಾಣಿರಣ್ಣಾ. ಕೂಡಲಸಂಗಮ ದೇವನಲ್ಲದೆ ಇಲ್ಲವೆಂದು ಎತ್ತಿದೆ ಬಿರಿದ ಜಗವೆಲ್ಲ ಅರಿಯಲು ಎಂದು ಬಸವಣ್ಣ ಜಗಕ್ಕೆ ಡಂಗುರ ಹೊಡೆದು ಹೇಳಿದರು.

ಕಾಯಕದಲ್ಲಿಯೇ ಇದ್ದ ಶೂನ್ಯನು ನೀನು. ಕಾಯವೆಂಬ ಕರಸ್ಥಲಕ್ಕೆ ದೇವನಾದೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಕೂಡಾ ಕಾಯದ ಕುಲಕ್ಕೆ ಕಾಯದಿಂದಲೇ ಮಾಹಿತಿ ನೀಡಿದ್ದಾರೆ.

ಕಾಯದ ಕುಲಗಳು ಕಾಯದಿಂದಲೇ ಕಾಯವನ್ನು ತಿಳಿಯಬೇಕಿದೆ. ದೇಹದಲ್ಲಿಯೇ ಸಂಗಮವಾದ ದೇವರನ್ನು ದೇಹದಿಂದಲೇ ಹುಡುಕಿ ದೇವರಾಗಬೇಕಿದೆ.

**478**

**ಗಮನವರಿತು ಸುಳಿಯಬಲ್ಲಡೆ**
**ಆಪ್ಯಾಯನವರಿತು ಉಣಬಲ್ಲಡೆ**
**ಇಚ್ಛೆಯರಿತು ಬೇಡಬಲ್ಲಡೆ**
**ಈ ತ್ರಿವಿಧ ಗುಣದ ಅನುವ ಬಲ್ಲವರು**
**ದೇವರಿಗೆ ದೇವರಾಗಿಪ್ಪರು ಕಾಣಾ,**
**ಕಪಿಲಸಿದ್ಧಮಲ್ಲಿಕಾರ್ಜುನ ದೇವರ ದೇವಾ.**

ತನುವಿನಲ್ಲಿ ಉಂಟಾದ ಅಜ್ಞಾನದ ವಿರುದ್ಧ ತನುವೇ ಹೋರಾಟ ಮಾಡಬೇಕು. ತನುವಿನ ಜ್ಞಾನದಿಂದ ಮಾತ್ರ ತನುವಿನಲ್ಲಿ ಉಂಟಾದ ಅಜ್ಞಾನದ ವಿರುದ್ಧ ಹೋರಾಟ ಮಾಡಲು ಸಾಧ್ಯ . ಇಂತಹ ಬಯಕೆ ತನುವಿನಲ್ಲಿ ಉಂಟಾದರೆ, ತನುವಿನ ಅದೃಷ್ಟ ಖುಲಾಯಿಸಿತೆಂದೇ ಅರ್ಥ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ತನುವಿನಲ್ಲಿ ಉಂಟಾದಾಗ

ತನುವನ್ನು ಆವರಿಸಿದ ಮನದಿಂದಲೇ ತನುವಿನಲ್ಲಿಯೇ ಸಂಗಮವಾದ ಜ್ಞಾನದಿಂದ ಗಮನಿಸಿ ನೋಡಿದಾಗ ಅದು ತನ್ನದೇ ತಪ್ಪೆಂದು ಮನಕ್ಕೆ ನಾಚಿಕೆಯಾಗುತ್ತದೆ.

ಕಾಯದಲ್ಲಿ ಹುಟ್ಟಿದ ಕಾಮದ ಬಗ್ಗೆ ಗಮನ ಹರಿಸುತ್ತದೆ. ಕಾಮದ ಉದ್ದೇಶವಾದರೂ ಏನು ಎಂದು ಮನಕ್ಕೆ ಜ್ಞಾನ ಪ್ರಶ್ನೆ ಮಾಡತೊಡಗುತ್ತದೆ. ಆಲೋಚನೆಯ ಸುಳಿಯಲ್ಲಿ ಬೀಳುವುದೊಂದೇ ತಡ ತನ್ನಿಂದ ತನ್ನ ತನುವಿನಲ್ಲಿಯೇ ಉಂಟಾದ ಕಾಮವನ್ನು ತನುವಿನ ಮೂಲಕವೇ ತಿಳಿಯಲು ಹೋಗುತ್ತದೆ.

ಕಾಯದಲ್ಲಿ ಕಾಮ ಅರಳುವ ಉದ್ದೇಶ ಮತ್ತೊಂದು ಕಾಯದ ಜನ್ಮ ಪಡೆಯುವುದಕ್ಕಾಗಿ; ಕಾಯ ಕಾಯದೊಂದಿಗೆ ಬೆರೆತು ಮತ್ತೊಂದು ಕಾಯವನ್ನು ಭೂಮಿಗೆ ಪರಿಚಯಿಸುತ್ತದೆ. ಈ ಹಿರಿಯ ಉದ್ದೇಶ ಕಾಯದಲ್ಲಿ ಇದೆ. ಕಾಯವನ್ನು ಆವರಿಸಿದ ಮನದಲ್ಲಿ ಇದೆಯೇ ಹೇಗೆ ಎಂದು ಗಮನಿಸಿದಾಗ ಅದು ಇಲ್ಲವೆಂದು ತನಗೆ ತಾನೇ ಉತ್ತರ ದೊರೆಯುತ್ತದೆ. ಹಾಗಾದರೆ ಮನ ಹಾದರಕ್ಕೆ ತೊಡಗಿದೆ. ಮನ, ತನ್ನ ಕಾಮದ ಸುಖಕ್ಕಾಗಿ ಕಾಯವನ್ನು ದುರ್ಬಳಕೆ ಮಾಡಿಕೊಳ್ಳ ಹತ್ತಿದೆ ಎಂದು ಕಾಯದಲ್ಲಿಯೇ ಸಂಗಮವಾದ ಜ್ಞಾನದ ಗಮನಕ್ಕೆ ಬರುತ್ತದೆ.

ಜ್ಞಾನದ ಹೊಡೆತ ಮನಕ್ಕೆ ಬಿದ್ದಾಗ, ಮನ ಜ್ಞಾನದ ಮಾತನ್ನು ಬಲವಾಗಿ ಗಮನಿಸಿದಾಗ ಅದು ತನಗೆ ತಾನೇ ಹಿಂದೆ ಸರಿಯುತ್ತದೆ. ಕಾಯದಲ್ಲಿ ಉತ್ಪತ್ತಿಯಾಗುವ ಕಾಮದ ದ್ರವ್ಯ ಕಾಯಗಳ ಸೃಷ್ಟಿಗಾಗಿ ಸಂಗ್ರಹವಾಗಿದೆಯೇ ಹೊರತು ಮನ ಕಾಯದೊಂದಿಗೆ ಸುಖಿಸುವ ಅಜ್ಞಾನದ ಸುಖಕ್ಕಾಗಿ ಅಲ್ಲ.

ಮದುವೆಯಾಗುವುದೇ ಕಾಮದ ಸುಖವನ್ನು ಈಡೇರಿಸಿಕೊಳ್ಳುವುದಕ್ಕಾಗಿ ಎಂದು ಲೋಕ ಭಾವಿಸಿದೆ. ಇದು ಶುದ್ಧ ತಪ್ಪು. ಲೋಕದ ಮಾತು ಸರಿಯೇ ಆಗಿದ್ದರೆ. ಮದುವೆಯಾದ ಮೇಲೆ ಅನ್ಯ ಕಾಯಗಳೊಂದಿಗೆ ಹಾದರ ಮಾಡುವ ಬಯಕೆ ಮನದಲ್ಲಿ ಹುಟ್ಟಲೇಬಾರದಿತ್ತು. ಮದುವೆಗೆ ಮುನ್ನ ಮದುವೆಯಾದ ನಂತರ, ಮುಪ್ಪಿನಲ್ಲಿ ಕೂಡಾ ಕಾಯದಲ್ಲಿ ಕಾಮದ ವಾಸನೆಯ ಹಾದರ ಮನದಲ್ಲಿ ಸುಳಿದಾಡುತ್ತದೆ.

ಕಾಯದಲ್ಲಿ ಹರಿದಾಡುವ ಕಾಮದ ವಾಸನೆಯನ್ನು ಅದರಿಂದ ಉಂಟಾಗುವ ಕ್ರೋಧವನ್ನು, ಕಾಯದಲ್ಲಿ ಹೊರ ಸೂಸುವ ಲೋಭವನ್ನು ಮೋಹವನ್ನು ಮದ ಮತ್ಸರವನ್ನು ಕಾಯದ ಮೂಲಕವೇ ಕಳೆದುಕೊಳ್ಳಬೇಕು.

ಕಾಯ ತ್ರಿಕೂಟ ಸಂಗಮ. ಅದರಲ್ಲಿ ಜ್ಞಾನವಿದೆ. ಈ ಜ್ಞಾನಕ್ಕೆ ಶರಣರು ದೇವರೆಂದು ಕರೆದಿದ್ದಾರೆ. ಕಾಯವನ್ನು ಮನ ಆವರಿಸಿದೆ. ಈ ಮನಕ್ಕೆ ಕಾಯದೊಂದಿಗೆ ಭೋಗಿಸುವ ಆಸಕ್ತಿಯೂ ಇದೆ. ಕಾಯದಲ್ಲಿಯೇ ಸಂಗವುವಾದ ಜ್ಞಾನವನ್ನು ಬಳಕೆ ಮಾಡುವ ಮಹಾಶಕ್ತಿಯೂ ಇದೆ. ಮನ ಅರಿಷಡ್ವರ್ಗಗಳೊಂದಿಗೆ ಸುಖಿಸುವ ಮುನ್ನ ತನ್ನದೇ ಆದ ಜ್ಞಾನವನ್ನು ಗಮನಿಸಿ ಅದರ ಇಚ್ಛೆಯನ್ನು ಅರಿತು, ಜ್ಞಾನದ ಇಚ್ಛೆಯನ್ನು ಪಾಲಿಸಿದರೆ ಕಾಯವೇ ತ್ರಿವಿಧ ಗುಣದ ಅನುವ ಬಲ್ಲ. ಕಾಯ ಎಂದು ಕರೆಯಿಸಿಕೊಳ್ಳುತ್ತದೆ.

ಕಾಯ ಕಾಯದೊಂದಿಗೆ ಮದುವೆಯಾಗುವುದು ಕಾಯದ ಗುಣ ದೋಷಗಳನ್ನು ಕಾಯದ ಮೂಲಕವೇ ತಿಳಿಯುವುದಕ್ಕಾಗಿ ಕಾಯವನ್ನೇ ಪ್ರಯೋಗ ಶಾಲೆಯನ್ನಾಗಿಸಿಕೊಂಡು ಅರಿವಿನ ಕಾಯವನ್ನಾಗಿಸಿಕೊಳ್ಳುವುದಕ್ಕಾಗಿ, ಕಾಯದ ಅರಿವಿನ ಇಚ್ಛೆಯನ್ನು ಅರಿತು ಆ ಅರಿವನ್ನೇ ಬೇಡುವುದಕ್ಕಾಗಿ.

ಅರಿವಿನ ಕಾಯ, ಮನೋಮಯವಾದ ಸೂಕ್ಷ್ಮ ಕಾಯ ಇವೆರಡೂ ಕಾಯಗಳಿಗೆ ಸ್ಥೂಲ ಕಾಯ ನೆಲೆಯಾಗಿದೆ. ಇವರಿಬ್ಬರೂ ವಾಸ ಮಾಡುವ ಮನೆಯಾಗಿದೆ. ಸಾತ್ವಿಕ ರಾಜಸ ತಾಮಸ ಗುಣಗಳೊಂದಿಗೆ ಕಾಯ ಹೋರಾಟ ಮಾಡುತ್ತ ತನ್ನ ಅವಸಾನವನ್ನು ಕಂಡುಕೊಳ್ಳುತ್ತದೆ. ಹೀಗೆ ವ್ಯರ್ಥವಾಗಿ ಕಾಯ ಹೋಗುವ ಮುನ್ನ ತ್ರಿವಿಧ ಗುಣಗಳನ್ನು ಕಂಡುಕೊಂಡವರೇ ದೇವರಿಗೆ ದೇವರಾಗಿಪ್ಪರು. ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ಎಂದು ಕರೆಯಿಸಿಕೊಳ್ಳುವರು.

**479**

**ಗಾರಪ್ಪ ವರ್ಗವನು ತೋರಬಲ್ಲಡೆ ಯೋಗಿ**
**ತೋರಿ ತೋರಿಯೇ ಮೀರಿ ಸಾದಾಖ್ಯದ**
**ದೇಹ ಪ್ರಪಂಚವಯೆಯ್ದಿಯೆಯ್ದದ ಆತ**
**ಆನಂದ ಶಿವಯೋಗಿ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಇದ್ದ ತನ್ನದೇ ದೇಹವನ್ನು ಶಿಷ್ಯನಿಗೆ ತೋರಿ ನಾನೇ ನಿನಗೆ ಗುರುದೇವ; ನೀನೇ ನನಗೆ ಶಿಷ್ಯ ಎಂದು ತೋರುವವನು ಗುರುದೇವನೂ ಅಲ್ಲ. ತಾನು ಶಿಷ್ಯನೂ ಅಲ್ಲ.

ಗುರುದೇವನ ದೇಹ, ಶಿಷ್ಯನ ದೇಹ, ಕಳ್ಳನ ದೇಹ, ಭ್ರಷ್ಟನ ದೇಹ. ಶಾಸಕ ಸಚಿವ ಮಂತ್ರಿ ಪ್ರಧಾನಿ ಅಧ್ಯಕ್ಷ ಅಧಿಕಾರಿ ಕಾರಖೂನನ ದೇಹ, ಹೆಣ್ಣಿನ ದೇಹ ಗಂಡಿನ ದೇಹ ಎಂದು ವಿಂಗಡಿಸಲು ಬರುವುದಿಲ್ಲ.

ದೇಹ ಒಂದೇ. ಪ್ರತಿ ದೇಹದಲ್ಲಿ ಅರಿವೆಂಬ ಗುರುದೇವನು ಸಂಗಮವಾಗಿದ್ದಾನೆ. ಆ ಗುರುದೇವನನ್ನು ಕಂಡುಕೊಳ್ಳಬೇಕಾದ ಶಿಷ್ಯನು ದೇಹವನ್ನು ಆವರಿಸಿದ್ದಾನೆ. ದೇಹದಲ್ಲಿಯೇ ಸಂಗಮವಾದ ಗುರುದೇವನನ್ನು, ದೇಹವನ್ನು ಆವರಿಸಿದ ಶಿಷ್ಯನಿಗೆ ತೋರುವಾತನೆ ಯೋಗಿ.

ದೇಹ ಕಾಣುತ್ತದೆ. ಕಾಣುವ ದೇಹಕ್ಕೆ ಗುರುದೇವನು ಕಾಣುವದಿಲ್ಲ. ಶಿಷ್ಯನೂ ಕಾಣುವುದಿಲ್ಲ. ಕಾಣಬಾರದ ಗುರುಶಿಷ್ಯರಿಬ್ಬರನ್ನೂ ಕಾಣಬರುವ ಗುರುದೇವನು ಕಾಣಬಾರದ ಶಿಷ್ಯನಿಗೆ ತೋರಲು ಸಾಧ್ಯವೆ? ಸಾಧ್ಯವೇ ಇಲ್ಲ. ಹೀಗಾಗಿ ನಾನು ನಿನಗೆ ಗುರು; ನೀನು ನನಗೆ ಶಿಷ್ಯ ಎಂದು ಗುರುದೇವ ಶಿಷ್ಯನಿಗೆ ಬೋಧಿಸುತ್ತಾನೆ. ಹೀಗೆ ಬೋಧಿಸುವವನನ್ನು ಪ್ರಭುದೇವರು ಕಾಳಗುರುಕಿ ಗುರುವಿಗೆ ಕಾಳಗುರುಕಿ ಶಿಷ್ಯ ಎಂದು ಅವರಿಬ್ಬರನ್ನೂ ಮೂದಲಿಸಿ ನುಡಿದು ಸರಿದಾರಿಗೆ ಹೋಗುವಂತೆ ಎಚ್ಚರಿಸಿದ್ದಾರೆ.

''ಗುರು ಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ: ಹಿಂದ ಬಿಟ್ಟು ಮುಂದ ಹಿಡಿಯಲೇ ಬೇಕು. ಕೂಡಲಸಂಗಮದೇವ ಕೇಳಯ್ಯಾ, ಕಿಚ್ಚಿನೊಳಗೆ ಕೋಲ ಬಚ್ಚಿಟ್ಟಂತಿರಬೇಕು''

ಕೋಲಿನೊಳಗೆ ಕಿಚ್ಚು ಇದೆ. ಕಿಚ್ಚು ಬೇರೆ ಕೋಲು ಬೇರೆ ಇರುವುದಿಲ್ಲ. ಕೋಲು ಕಿಚ್ಚಾಗಿದೆ. ಕಿಚ್ಚಾದ ಕೋಲು ಕೋಲನ್ನು ಚುಂಬಿಸಿದರೆ ಕೋಲೊಳಗೆ ಇದ್ದ ಕಿಚ್ಚು ಇಡೀ ಕೋಲನ್ನು ತನ್ನಂತೆ ಮಾಡಿಕೊಳ್ಳುತ್ತದೆ.

ಕೋಲು ಕೋಲಿಗೆ ತಾಗಿದರೆ ಕಿಚ್ಚು ಹೊತ್ತುವುದಿಲ್ಲ. ಕಿಚ್ಚು ತಾಗಿಸಿಕೊಂಡ ಕೋಲು, ಕಿಚ್ಚು ತಾನೇ ಆದ ಕೋಲು ಕೋಲಿನೊಳಗಿದ್ದ ಕಿಚ್ಚನ್ನು ಕೋಲಿಗೆ ತೋರಿಸುವಂತೆ ಕೋಲನ್ನು ಸ್ಪರ್ಶಿಸುತ್ತಾನೆ.

ಕಿಚ್ಚು ತಾಕಿದ ಕೋಲು ಕಿಚ್ಚಿಗೆ ಶಿಷ್ಯನಾಗುವುದಿಲ್ಲ. ಕೋಲ ತಾಕಿದ ಕಿಚ್ಚು ಕೋಲಿಗೆ ಗುರುವಾಗುವುದಿಲ್ಲ. ಇದು ನಿಜವಾದ ಗುರುಶಿಷ್ಯರ ಸಂಬಂಧ. ಕಿಚ್ಚಾಗಿ ಬೆಳಗಿಂಗೆ ಬೆಳಕಾಗಿ

ಬೆಳಗಬಲ್ಲವನು ಮಾತ್ರ ಶಿಷ್ಯನನ್ನು ಬೆಳಗಬಲ್ಲ. ಶಿಷ್ಯನಲ್ಲಿಯೇ ಇದ್ದ ಬೆಳಕನ್ನು ಶಿಷ್ಯನಿಗೆ ತೋರಿ ಶಿಷ್ಯನೇ ಬೆಳಗಿಸಿಕೊಳ್ಳುವ ಬಗೆಯನ್ನು ಶಿಷ್ಯನಿಗೆ ಹೇಳಬಲ್ಲ.

ತೋರಿ ತೋರಿಯೇ ಸುಳ್ಳು ಸಂಸಾರವುಳ್ಳ ದೇಹ ಪ್ರಪಂಚವನ್ನು ಮೀರಿ ನಿಲ್ಲುವಂತೆ ಮಾಡಬಲ್ಲಾತನೇ ಯೋಗಿ.

ದೇಹದಲ್ಲಿಯೇ ಇದ್ದ ಗುರುಶಿಷ್ಯರಿಬ್ಬರೂ ಒಬ್ಬರಿಗೊಬ್ಬರು ಪರಿಚಯವಾದ ಮೇಲೆ ಅವರಿಬ್ಬರು ವಾಸ ಮಾಡಲು ಯೋಗ್ಯವಾದ ದೇಹ ಗುರುಮನೆಯೆಂದು ಕರೆಯಿಸಿಕೊಳ್ಳುತ್ತದೆ. ಮಹಾಮನೆಯೆಂದು ಕರೆಯಿಸಿಕೊಳ್ಳುತ್ತದೆ. ದೇಹ ಗುರು ಶಿಷ್ಯರಿಬ್ಬರ ಅನುಭವ ಹಂಚಿಕೊಳ್ಳುವ ಅನುಭವ ಮಂಟಪವಾಗುತ್ತದೆ. ಆನಂದ ಶಿವಯೋಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**480**

**ಗಿರಗಹ್ವರದೊಳಗರಸಿ ತೊಳಲಿ ಬಳಲಿದೆನವ್ವಾ.**
**ನೋಡಿ ನೋಡಿ ಕಣ್ಣು ನಟ್ಟಾಲಿ ಬಿದ್ದವವ್ವಾ.**
**ನೀನು ಗುರುವಾಗಿ ಬಂದು ಎನ್ನ ಭವವ ಹರಿದೆ.**
**ನೀನು ಭಕ್ತ ಕಾರಣ ಪರಶಿವಮೂರ್ತಿಯೆಂದರಿದೆ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಪ ತಪ ಮಾಡಿದರೆ ಗುರುದರ್ಶನವಾಗುವುದಿಲ್ಲ. ಪುಣ್ಯ ಕ್ಷೇತ್ರಗಳಿಗೆ ಅಲೆದರು ಕೂಡಾ ಗುರುವಿನ ದರುಶನವಾಗುವುದಿಲ್ಲ. ಲಿಂಗ ನೋಡಿ ನೋಡಿ ಕಣ್ಣಾಲಿ ಬಿದ್ದರು ಕೂಡಾ ಗುರುವಿನ ದರುಶನವಾಗುವುದಿಲ್ಲ. ಗುರುದೇವನೆಂದರೆ ಯಾರೆಂದು ಆತನನ್ನು ಆರಾಧಿಸುವ ಭಕ್ತನಿಗೆ ತಿಳಿಯಬೇಕು.

ಲೋಕದ ಭಕ್ತರು ದೇವರನ್ನು ಪೂಜಿಸುತ್ತಾರೆ. ದೇವರಿಗಾಗಿ ದೇವಾಲಯಗಳನ್ನು ಕಟ್ಟಿಸುತ್ತಾರೆ. ದೇವರ ಪ್ರಾರ್ಥನೆ ಮಾಡಲು ಮಸೀದೆ ಚರ್ಚ್‌ಗಳನ್ನು ಕಟ್ಟಿಸುತ್ತಾರೆ. ಸಾಮೂಹಿಕ ಪ್ರಾರ್ಥನೆ ಎನ್ನುವುದು ಮನಕ್ಕೆ ಒಂದು ಸಂಪ್ರದಾಯವಾಗುತ್ತದೆ. ಆ ಸಂಪ್ರದಾಯದಲ್ಲಿಯೇ ತಾನು ಸಕಲರಿಗಿಂತಲೂ ಉತ್ತಮ ಎನ್ನುವ ಭಾವ ಕಾಯದಲ್ಲಿ ಬಲಿತು ಕಾಯ ಬಿದ್ದು ಹೋಗುತ್ತದೆ.

ದೇವರು ಎಂದರೆ ಯಾರು, ಗುರುದೇವ ಎಂದರೆ ಯಾರು ಎಂದು ಅರಿಯಲು ತನುವಿಗೆ ಸಾಧ್ಯವಾಗುವುದಿಲ್ಲ. ಗುರುದೇವನೆಂದರೆ ಯಾರು ಎಂದು ಅರಿಯುವ ಒಂದು ಉತ್ತಮವಾದ ವಿಧಾನವು ತನುವಿನಲ್ಲಿಯೇ ತನ್ಮಯವಾಗಿದೆ. ಆತನನ್ನು ಹುಡುಕುವ ಭಕ್ತನು ಕೂಡಾ ತನುವಿನಲ್ಲಿಯೇ ಇದ್ದಾನೆ. ಇವರಿಬ್ಬರನ್ನು ಸೂಕ್ಷ್ಮವಾಗಿ ತನುವಿನಿಂದಲೇ ತಿಳಿಯಬೇಕಾಗಿದೆ.

ನೋಡಿ ನೋಡಿ ಕಣ್ಣು ನಟ್ಟಾಲಿ ಬಿದ್ದವು. ಕಾಯದ ಅವಧಿ ಮುಗಿಯುತ್ತ ಬಂದರೂ ಗುರುವಿನ ದರುಶನವಾಗಲೇ ಇಲ್ಲ. ಗುರುದೇವನಿಗಾಗಿ ಗಿರಿಗಹ್ವರದೊಳಗೆ ಹುಡುಕಿ ಹುಡುಕಿ ತೊಳಲಿ ಬಳಲಿದೆನವ್ವಾ. ಆದರೂ ಆತ ನನಗೆ ದರುಶನ ನೀಡಲೇ ಇಲ್ಲ.

ಗುರುದೇವನೇ ನೀನು ಭಕ್ತಿಗೆ ಮಾತ್ರ ಒಲಿಯುವವನು ಎಂದು ಬಸವಣ್ಣನ ಮೂಲಕ ಕಂಡುಕೊಂಡೆ. ಮನವನ್ನೇ ಭಕ್ತನನ್ನಾಗಿ ಮಾಡಿಕೊಂಡೆ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನೇ ನಿಜಗುರು ಎಂದು ಮನದಿಂದಲೇ ತಿಳಿದುಕೊಂಡೆ. ಮನವೆಂಬ ಭಕ್ತನಿಂದಲೇ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿದೆ. ಆತನ ಚರಣ ಕಮಲಗಳಿಗೆ ಎರಗಿ ಬೇಡಿಕೊಂಡೆ.

ಗುರುವಾಗಿ ಬಂದು ನೀನು ಎನ್ನ ಭವವ ಹರಿದೆ. ಜನನ ಮರಣಗಳ ಭಯದಿಂದ ಬಳಲಾಡುವ ನನ್ನನ್ನು ನೀನು ನಿನ್ನಂತೆ ಮಾಡಿಕೊಂಡೆ. ಏಕೆಂದರೆ ನಿನಗೆ ಮರಣವಿಲ್ಲ ಜನನವೂ ಇಲ್ಲ. ನಿನ್ನ ಪೂಜಿಸುವ ನನ್ನನ್ನು ಕೂಡಾ ನೀನು ಬಿಗಿದಪ್ಪಿಕೊಂಡು ನಿನ್ನಂತೆ ಮಾಡಿಕೊಂಡೆ.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನು ಒಲಿದೆನವ್ವಾ ಎಂದು ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಚೆಲುವೆ ಅಕ್ಕಮಹಾದೇವಿ ಲೋಕಕ್ಕಾಗಿ, ಲೋಕದ ಉದ್ಧಾರಕ್ಕಾಗಿ ಹಾಡಿದ್ದನ್ನು ಲೋಕ ಕೇಳಿದೆ. ಹಾಡುವುದರಲ್ಲಿಯೇ ಲೋಕ ಮುಳುಗಿ ಹೋಗಿದೆ. ಸಾವಿಲ್ಲದ ಚೆಲುವನ ದರುಶನದಿಂದ ಬಹುದೂರ ಉಳಿದಿದೆ.

ಪೈಗಂಬರರು ಕ್ರಿಸ್ತ ಕ್ರಿಷ್ಣ ಮಹಾವೀರ ಬುದ್ಧ ಬಸವಾದಿ ಶರಣರು ದಾಸವರೇಣ್ಯರು ಇವರೆಲ್ಲ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವೆಯರು. ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವನನ್ನು ಒಲಿಸಿಕೊಂಡವರು. ದೇವರಿಗೆ ಭಕ್ತರಾದವರು. ಗುರುದೇವನಿಗೆ ಶಿಷ್ಯರಾದವರು. ಅವರ ದೇವರು ಹೊರಗಿಲ್ಲ; ಆಕಾಶದಲ್ಲಿಯೂ ಇಲ್ಲ. ಭೂಮಿ ಆಕಾಶ ಜಲ ಅಗ್ನಿ ವಾಯು ಸಂಗಮವಾದ ದೇಹದಲ್ಲಿಯೇ ದೇವರು ಸಂಗಮವಾಗಿದ್ದಾನೆ. ಆ ದೇವರನ್ನು ಹುಡುಕಬೇಕಾದ ಭಕ್ತನು ಕೂಡಾ ದೇಹದಲ್ಲಿಯೇ ಇದ್ದಾನೆ. ಭಕ್ತ ಮತ್ತು ದೇವರು ವಾಸ ಮಾಡಿದ ದೇಹವೇ ದೇವರ ಮನೆ. ಗುರುದೇವ ಮತ್ತು ಆತನನ್ನು ಹುಡುಕಬೇಕಾದ ಶಿಷ್ಯನು ಕೂಡಾ ದೇಹದಲ್ಲಿಯೇ ಇದ್ದಾನೆ. ಹೀಗಾಗಿ ದೇಹ ಗುರುದೇವನು ವಾಸ ಮಾಡಿದ ಗುರುಮನೆ.

ನೀನು ಭಕ್ತಕಾರಣ ಪರಶಿವಮೂರ್ತಿಯೆಂದರಿದೆ ಕಾಣಾ, ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಹಾಡುತ್ತಾ ಗುರುದೇವನೊಂದಿಗೆ ಮಾತನಾಡುತ್ತಾ ಆತನನ್ನೇ ಪರಶಿವಮೂರ್ತಿಯೆಂದು ತನ್ನ ಅನುಭಾವದಿಂದ ಅರಿತು ಹೃದಯ ತುಂಬಿ ಸಕಲ ಓದುಗರಿಗೂ ಕೇಳುವಂತೆ ಹಾಡಿದ್ದಾರೆ. ಅದನ್ನೇ ಸೂತ್ರರೂಪದ ವಚನದ ಮೂಲಕ ದಾಖಲಿಸಿದ್ದಾರೆ.

**481**

**ಗುರುವಾಜ್ಞೆಯ ಮೀರಿದೆನಾದಡೆ**
**ಎನ್ನ ಸುಕೃತವೆಲ್ಲ ಕಿಲ್ಬಿಷವಾಗಲಿ ದೇವಾ.**
**ಗುರು ಸಂಜ್ಞೆಯ ಅರಿಯೆನಾದಡೆ**
**ಎನ್ನ ಬ್ರಹ್ಮ ಸಂಜ್ಞೆ ಬತ್ತಿ ಹೋಗಲಿ ದೇವಾ.**
**ಗುರುದ್ವಾರವ ಕಾಯದಿದ್ದೆನಾದಡೆ**
**ಎನ್ನ ಪಶ್ಚಿಮದ್ವಾರ ಸಿಗದೆ ಹೋಗಲಿ ದೇವಾ.**
**ಗುರುಪುತ್ರರ ಗುರುವೆನ್ನದಿದ್ದೆನಾದಡೆ, ಯಮುಗಂಡ ನನಗಿರಲಿ,**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ.**

ಗುರುದೇವನ ಮಹತ್ವವೇ ಹಾಗಿದೆ. ಶಿಷ್ಯ ಗುರುದೇವನ ಆಜ್ಞೆ ಮೀರುವುದು ಅಕ್ಷಮ್ಯ ಅಪರಾಧ. ಅದು ತನ್ನನ್ನು ಪ್ರಪಾತಕ್ಕೆ ತಳ್ಳುತ್ತದೆ. ಮನುಷ್ಯ ಕುಲದಲ್ಲಿ ಹುಟ್ಟಿದರೂ ಕೂಡಾ ರಕ್ಕಸನಂತೆ ವರ್ತಿಸುತ್ತಾನೆ. ನರಕಕ್ಕೆ ಭಾಜನನಾಗುತ್ತಾನೆ.

ಗುರುದೇವನ ಆಜ್ಞೆಯ ಮೀರಿದೆನಾದಡೆ ಎನ್ನ ಸುಕೃತವೆಲ್ಲ ಕಿಲ್ಬಿಷವಾಗಲಿ ದೇವಾ: ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನೊಂದಿಗೆ ಮಾತನಾಡುತ್ತಾ ಹೇಳುವ

ಮಾತಿದು. ಗುರುದೇವನ ಸಂಜ್ಞೆಯನ್ನು ಅರಿತು ಆ ಗುರುದೇವನಿಗೆ ಶಿಷ್ಯನಾಗಿ ಹೇಳುವ ಮಾತಿದು. ಗುರುದೇವನೆ ನಿನ್ನನ್ನು ಇದುವರೆಗೆ ತಿಳಿಯದಿದ್ದಕ್ಕಾಗಿ ನಾನಾ ರೀತಿಯ ಯಮಯಾತನೆಯನ್ನು ಅನುಭವಿಸಿದೆ. ಮನುಷ್ಯ ಎಂದು ಕರೆಯಿಸಿಕೊಂಡರೂ ರಕ್ಕಸನಾಗಿ ಬದುಕಿದೆ. ಗುರುದೇವನ ಸಂಜ್ಞೆಯಿಂದಾಗಿ ಗುರುದೇವನೇ ಆದ ನಿನ್ನನ್ನು ಅರಿತೆ. ಇನ್ನು ನಿನ್ನ ಸಂಜ್ಞೆ ಅರಿಯದಿರ್ದಡೆ ಎನ್ನ ಬ್ರಹ್ಮ ಸಂಜ್ಞೆ ಬತ್ತಿ ಹೋಗಲಿ ತಂದೆ.

ಗುರುದೇವನೆ, ಮಾಹಾದೇವನೇ, ನಿನ್ನ ಅರಿವಿನ ದ್ವಾರವ ಕಾಯದಿದ್ದೆನಾದಡೆ ಎನ್ನ ಪಶ್ಚಿಮ ದ್ವಾರವು ನನಗೆ ಸಿಗದಂತೆ ಹೋಗಲಿ ದೇವಾ. ನಿನ್ನನ್ನು ನಂಬಿದ ನಿನ್ನ ಪುತ್ರರನ್ನು ಗುರುದೇವಾ ಎಂದು ಕರೆಯದಿದ್ದಡೆ ಎನಗೆ ಯಮಗಂಡವಿರಲಿ. ನನ್ನನ್ನು ನರಕದಲ್ಲಿ ಅದ್ದಿ ನೀನೆದ್ದು ಹೋಗು ತಂದೆ ಕಪಿಲಸಿದ್ಧ ಮಲ್ಲಯ್ಯ ಎಂದು ಸಿದ್ಧರಾಮ ಶಿವಯೊಗಿಗಳು ಗುರುದೇವನೊಂದಿಗೆ ಮಾತನಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳು, ಕಂಡು ಬರುವ ವ್ಯಕ್ತಿಯನ್ನು ಗುರುವಾಗಿಸಿಕೊಳ್ಳಲಿಲ್ಲ. ಅಂಗದಲ್ಲಿಯೇ ಸಂಗಮವಾದ ಕಾಣಬಾರದ ಅರಿವಿನ ಮಲ್ಲಯ್ಯನನ್ನೇ ಗುರುವಾಗಿಸಿಕೊಂಡರು. ಅಂಗವನ್ನು ಆವರಿಸಿದ ಮನವನ್ನು ಹಿಡಿದು ಆತನಿಗೆ ಶಿಷ್ಯನಾದರು. ಗುರು ಶಿಷ್ಯರಿಬ್ಬರಿಗೂ ಅಂಗ ಮನೆಯಾಯಿತು. ಮಹಾಮನೆಯಾಯಿತು. ಅರಿವಿನ ಲಿಂಗಯ್ಯನಿಗೆ ಮನ ಭಕ್ತನಾಯಿತು. ಅವರಿಬ್ಬರಿದ್ದ ಅಂಗ ಲಿಂಗಾಂಗವಾಯಿತು.

ಭೂಮಿಯ ಮೇಲೆ ಜೀವಿಸಿದ ಪ್ರತಿ ಅಂಗವೂ ಲಿಂಗಾಂಗವೇ ಆಗಿದೆ. ಆದರೂ ಕೂಡಾ ಅಂಗವನ್ನು ಆವರಿಸಿದ ಮನ ಅಂಗದ ಜೊತೆಗೆ ಸಂಬಂಧ ಬೆಳೆಸಿರುವುದರಿಂದ ಅಂಗದಲ್ಲಿಯೇ ಇದ್ದ ಅರಿವೆಂಬ ಲಿಂಗಯ್ಯನನ್ನು ಮರೆತಿದೆ.

ಈ ಸೂತ್ರವನ್ನು ಅರಿತ ಬಸವಣ್ಣ ಚೆನ್ನಬಸವಣ್ಣ ಹಾಗೂ ಪ್ರಭುದೇವರ ದರುಶನ ಸಿದ್ಧರಾಮ ಶಿವಯೋಗಿಗಳಿಗೆ ಆದುದರಿಂದ ಅವರ ದರುಶನದಿಂದಲೇ ಅಂಗದಲ್ಲಿದ್ದ ಅರಿವೆಂಬ ಗುರುದೇವನನ್ನು ಸಿದ್ಧರಾಮ ಶಿವಯೋಗಿಗಳಿಗೆ ಅರಿಯಲು ಸಾಧ್ಯವಾಯಿತು.

ಶರಣರ ಮಾರ್ಗದರ್ಶನದಿಂದಾಗಿ ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಇದ್ದ ಸಿದ್ಧ ವಸ್ತುವನ್ನು ಕಂಡುಕೊಂಡರು. ಆ ಸಿದ್ಧ ವಸ್ತುವನ್ನೇ ಗುರುವಾಗಿಸಿಕೊಂಡು ಆ ಗುರುದೇವನಿಗೆ ಮನವೆಂಬ ತಾವು ಶಿಷ್ಯರಾದರು.

ವ್ಯಕ್ತಿ ವ್ಯಕ್ತಿಗೆ ಗುರುವಾಗುವುದು ಶಿಷ್ಯನಾಗುವುದು ಲೋಕದ ಮಾತು. ಅದು ತಪ್ಪಾಗಿ ಭಾವಿಸಿದೆ. ಗುರುಶಿಷ್ಯರಿಬ್ಬರೂ ಅಂಗದಲ್ಲಿಯೇ ಸಂಗಮವಾಗಿದ್ದಾರೆ. ಹಾಗೆಂದು ಖಚಿತಪಡಿಸಿಕೊಂಡ ಅಂಗವೇ ಲಿಂಗಾಂಗ. ಅದು ವಿರಾಟ ಸ್ವರೂಪ! ಇಂತಹ ಅಂಗವೊಂದು ತಿಳಿಯದ ಅಂಗಕ್ಕೆ ಮಾಹಿತಿ ನೀಡುತ್ತದೆ. ಅಂಗದಲ್ಲಿಯೇ ಅರಿವೆಂಬ ಗುರುದೇವನಿದ್ದಾನೆ. ಆತನ ಇರುವಿಕೆಯನ್ನು, ಅಂಗವನ್ನು ಆವರಿಸಿದ ಮನದಿಂದಲೇ ತಿಳಿದು ಆ ಗುರುದೇವನ ಚರಣ ಕಮಲಗಳಲ್ಲಿ ಲೀನವಾಗುವುದೇ ಅಂಗದ ಬಲವಾದ ಬಯಕೆಯಾಗಬೇಕು.

ಕೃಷ್ಣ ಬೇರೆ ಅರ್ಜುನ ಬೇರೆ ಅಲ್ಲ. ಹಾಗೆಯೇ ರಾಧಾ ಬೇರೆ ಕೃಷ್ಣ ಬೇರೆ ಕೂಡಾ ಅಲ್ಲ. ಮನವೆಂಬ ಅರ್ಜುನನಿಗೆ ಅಂಗದಲ್ಲಿಯೇ ಅರಿವೆಂಬ ಶ್ರೀಕೃಷ್ಣ ಕಂಡಕೂಡಲೇ ಆತನಿಗೆ ವಿರಾಟಸ್ವರೂಪದ ದರುಶನವಾಯಿತು. ಅಂಗ ರಥವಾಯಿತು. ಶ್ರೀಕೃಷ್ಣ ಸಾರಥಿಯಾದ. ಅಜ್ಞಾನದ ಯುದ್ಧ ಅಂತ್ಯವಾಯಿತು. ಜ್ಞಾನದ ಪರ್ವ ಆರಂಭವಾಯಿತು.

ಅಂಗ ಅಂಗವನ್ನು ನೋಡಲು ಬಾರದಿದ್ದಕ್ಕಾಗಿ ಅದು ಅಪರಾಧಿ ಸ್ಥಾನದಲ್ಲಿ ನಿಂತಿದೆ.

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯ ಅಂಗವನ್ನು ಆವರಿಸಿದ ಮನಕ್ಕೆ ದರುಶನವಾದರೆ ಸಾಕು ಅಂಗ ಲಿಂಗಾಂಗವೆಂದು ಕರೆಯಿಸಿಕೊಳ್ಳುತ್ತದೆ. ಸರ್ವಾಂಗಗಳನ್ನು ಲಿಂಗದಂತೆ ನೋಡುತ್ತದೆ ಅಂಗಕ್ಕೆ ಬಂದ ಯಮಗಂಡ ಕಾಲ ತಪ್ಪುತ್ತದೆ.

**482**

**ಗುರುಗದ್ದಿಗೆಯ ಏರಿದಲ್ಲಿ ಭೇದವಿಲ್ಲೆಂಬರಿವು ಅಚ್ಚೊತ್ತಿದಡೆ,**
**ಹೇಳುವೆ ಕೇಳಯ್ಯಾ ;**
**ಗುರುಗದ್ದಿಗೆಯಲ್ಲಿ ಹರಿವ ಮಶಕ**
**ತಿಗುಣಿಗಳಿಗೆ ಅಭೇದವೊ ಭೇದವೊ?**
**ಅಲ್ಲಿ ಭೇದಾಭೇದವೆಂಬ ಜ್ಞಾನವಿಲ್ಲ.**
**ಇದು ಕಪಿಲಸಿದ್ಧ ಮಲ್ಲಿಕಾರ್ಜುನ ಶರಣನ ಮನಕ್ಕೆ ಸೊಗಸದು,**
**ಕೇಳಾ ಪ್ರಭುವೆ.**

ಗುರುದೇವರು ಒಬ್ಬರಲ್ಲ; ಇಬ್ಬರು. ಒಬ್ಬ ಗುರು ಗುರುದೇವನನ್ನು ತೋರಿದವನು. ಮತ್ತೊಬ್ಬ ಗುರು ಅಂಗದಲ್ಲಿಯೇ ಸಂಗಮವಾದವನು. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ತೋರಿದ ಗುರುದೇವನಿಗೆ ಅಂಗವಿದೆ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಅಂಗವಿಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಂಡುಕೊಂಡು ಆತನಿಗೆ ಶಿಷ್ಯನಾದ ಮನಕ್ಕೆ ಕೂಡಾ ಅಂಗವಿಲ್ಲ. ಅಂಗವಿಲ್ಲದ ಗುರುದೇವ; ಅಂಗವಿಲ್ಲದ ಶಿಷ್ಯ . ಇವರಿಬ್ಬರೂ ಅಂಗದಲ್ಲಿಯೇ ಸಂಗಮವಾಗಿದ್ದಾರೆ.

ಅಂಗಕ್ಕೆ ಸಾವು ಇದೆ. ಅದಕ್ಕೆ ಹುಟ್ಟು ಕೂಡಾ ಇದೆ. ಅಂಗಕ್ಕೆ ಅಂಗ ಹುಟ್ಟಿದರೆ ಅಂಗಗಳು ಸಂಭ್ರಮಿಸುತ್ತವೆ. ಅಂಗಕ್ಕೆ ಸಾವು ಬಂದು ಸತ್ತಾಗ ಅಂಗದ ಚಾರಿತ್ರ್ಯಕ್ಕೆ ಅನುಗುಣವಾಗಿ ಅಂಗಗಳು ಸತ್ತ ಅಂಗದ ಗುಣಗಾನ ಮಾಡುತ್ತವೆ. ಅದು ಗುರುದೇವನ ಅಂಗ ಆಗಿದ್ದರೆ ಗದ್ದಿಗೆ ಕಟ್ಟಿ ಪುಣ್ಯಸ್ಮರಣೆ, ಉತ್ಸವಾದಿಗಳನ್ನು ಮಾಡುತ್ತಾ ಕುಣಿದಾಡಿ ಸಂಭ್ರಮಿಸುತ್ತದೆ.

ಅಂಗಕ್ಕೆ ಚಾರಿತ್ರ್ಯ ಇದೆ. ಚಾರಿತ್ರ್ಯಗನುಗುಣವಾಗಿ ಅಂಗದ ಸಮಾಧಿ ಗದ್ದಿಗೆ ನಿರ್ಮಾಣವಾಗುತ್ತದೆ. ಚಾರಿತ್ರ್ಯ ಇಲ್ಲದ ಅಂಗ ಸತ್ತಾಗ ಸುಡುಗಾಡು ಸೇರುತ್ತದೆ. ಜನಸಂಖ್ಯೆ ಹೆಚ್ಚಾದ ಬೃಹತ್‌ನಗರಗಳಲ್ಲಿ ಅಂಗಕ್ಕೆ ಚಾರಿತ್ರ್ಯ ಇದ್ದರೂ ಕೂಡಾ ಸ್ಥಳ ಅಭಾವದಿಂದ ಸಾಮೂಹಿಕ ದಹನಕ್ರಿಯೆ ನಡೆಯುತ್ತದೆ. ಆ ಅಂಗದ ಚಾರಿತ್ರ್ಯ ಪುಟಗಳಲ್ಲಿ, ಕೆಲದಿನ ಸ್ಮೃತಿಯಲ್ಲಿ ಉಳಿಯುತ್ತದೆ.

ಚಾರಿತ್ರ್ಯಉಳ್ಳ ಅಂಗಕ್ಕೆ ಸಮಾಧಿ ಉಂಟು; ಗದ್ದಿಗೆ ಉಂಟು; ಉತ್ಸವಗಳು ಕೂಡಾ ಉಂಟು. ಅಂಗ ಗುರುದೇವನದ್ದು ಆದರೆ ಆ ಅಂಗದ ಶಿಷ್ಯರೇ ಅದಕ್ಕೆ ವಾರಸುದಾರರು. ಆ ಅಂಗವನ್ನು ಸೇವೆ ಮಾಡಿದ ಶಿಷ್ಯನೇ ಆತನ ಗದ್ದಿಗೆಗೆ ಆತ ವಾಸ ಮಾಡಿದ ಮಠಕ್ಕೆ ವಾರಸುದಾರನಾಗುತ್ತಾನೆ. ಮಠಾಧೀಶನಾಗುತ್ತಾನೆ. ಈತನನ್ನೇ ಉಳಿದ ಶಿಷ್ಯರು ಗ್ರಾಮಸ್ಥರು ಗುರುದೇವನೆಂದು ಭಾವಿಸುತ್ತಾರೆ. ಗದ್ದಿಗೆ ಮತ್ತು ಆಶ್ರಮವನ್ನು ಗದ್ದಿಗೆಯ ವಾರಸುದಾರ ದ್ವಿಗುಣಗೊಳಿಸುತ್ತಾನೆ. ಇದು ಸಂಪ್ರದಾಯ. ಈ ಸಂಪ್ರದಾಯಕ್ಕೆ ಎಲ್ಲ ಶಿಷ್ಯರೂ ಸಹಕರಿಸುತ್ತಾರೆ.

ಚಾರಿತ್ರ್ಯಉಳ್ಳ ಗುರುದೇವ ಮತ್ತು ಚಾರಿತ್ರ್ಯಉಳ್ಳ ಶಿಷ್ಯೋತ್ತಮರ ಸಂಪ್ರದಾಯ. ಗದ್ದಿಗೆ

ಬಯಲಿಗೆ ಇದ್ದರೆ ನಾಯಿ ಗದ್ದಿಗೆ ಮೇಲೆ ಏರಿ ನಿದ್ರಿಸುತ್ತದೆ. ದನಗಳು ಗದ್ದಿಗೆ ಪಕ್ಕದಲ್ಲಿಯೇ ಸೆಗಣಿ ಹಾಕುತ್ತವೆ. ಮಕ್ಕಳು ಗದ್ದಿಗೆ ಸುತ್ತ ಅದರ ಮೇಲೆ ಹತ್ತಿ ಆಟ ಆಡುತ್ತವೆ. ಹೀಗೆ ಆಗಬಾರದೆಂದು ಆ ಗದ್ದಿಗೆಗೆ ಆಲಯ ನಿರ್ಮಾಣ ಮಾಡಿ ತ್ರಿಕಾಲ ಪೂಜಾ ವ್ಯವಸ್ಥೆಯನ್ನು ಮಾಡಿಸುತ್ತಾನೆ ಅದರ ವಾರಸುದಾರ.

ಏನೇ ವ್ಯವಸ್ಥೆ ಮಾಡಿದರೂ ಕೂಡಾ ಗದ್ದಿಗೆ ಮೇಲೆ ತಿಗಣೆ ಹೇನು ಹುಳು ಹಲ್ಲಿ ಹಾವು ಇತರ ಪಕ್ಷಿಗಳು ಹರಿದಾಡುತ್ತವೆ. ಅವುಗಳಿಗೆ ಗದ್ದಿಗೆ ಎನ್ನುವುದು ಗೊತ್ತೇ ಇಲ್ಲ. ಅವುಗಳಿಗೆ ಚಾರಿತ್ರ್ಯ ಕೂಡಾ ಇಲ್ಲ. ಭಯವೂ ಇಲ್ಲ. ಚಾರಿತ್ರ್ಯ ಉಳ್ಳವನಿಗೆ ಭಯವಿದೆ. ಅವನು ಗದ್ದಿಗೆಯನ್ನು ಹತ್ತುವುದಿಲ್ಲ. ಅದನ್ನು ದೇವರೆಂದೇ ಭಾವಿಸುತ್ತಾನೆ. ಉಳಿದ ಪ್ರಾಣಿಗಳಿಗೂ ಗದ್ದಿಗೆ ಪೂಜಿಸುವವರಿಗೂ ಭೇದವಿದೆ. ಭೇದಜ್ಞಾನ ಸೃಷ್ಟಿಯಾಗಿದೆ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭೇದವಿಲ್ಲ. ಆತ ಚಾರಿತ್ರ್ಯ ಪುರುಷನಲ್ಲ. ಏಕೆಂದರೆ ಆತನಿಗೆ ಹುಟ್ಟು ಇಲ್ಲ; ಸಾವು ಕೂಡಾ ಇಲ್ಲ. ಆತನನ್ನು ಆರಾಧಿಸುವ ಮನವೆಂಬ ಶಿಷ್ಯನಿಗೆ ಕೂಡಾ ಸಾವು ಇಲ್ಲ; ಹುಟ್ಟು ಕೂಡಾ ಇಲ್ಲ.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನು ಒಲಿದೆನವ್ವಾ. ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ಎಂದು ಅಕ್ಕಮಹಾದೇವಿ ಎಲ್ಲರಿಗೂ ಕೇಳುವಂತೆ ಹಾಡಿದ್ದಾಳೆ. ಅಂಗಕ್ಕೆ ಹುಟ್ಟು ಇದೆ; ಸಾವು ಕೂಡಾ ಇದೆ. ಅಂಗದೊಳಗೆ ವಾಸ ಮಾಡಿದ ಅರಿವೆಂಬ ಗುರುದೇವನಿಗೆ ಹುಟ್ಟು ಇಲ್ಲ; ಸಾವು ಕೂಡಾ ಇಲ್ಲ. ಹಾಗೆಯೇ ಅಂಗವನ್ನು ಆವರಿಸಿದ ಮನಕ್ಕೆ ಕೂಡಾ ಹುಟ್ಟಿಲ್ಲ ಸಾವಿಲ್ಲ. ಅಂದ ಮೇಲೆ ಗುರುಶಿಷ್ಯರಿಬ್ಬರಿಗೂ ಚರಿತ್ರೆ ಇಲ್ಲ. ಅಂಗಕ್ಕೆ ಚರಿತ್ರೆ ಇದೆ. ಅಂಗವನ್ನು ಪೂಜಿಸಿ ಆರಾಧಿಸುವ ಅಂಗಗಳಿಗೂ ಚರಿತ್ರೆ ಇದೆ.

ಅರಿವೆಂಬ ಗುರುದೇವನಿಗೆ ಗದ್ದಿಗೆಯಿಲ್ಲ. ಆತನಿಗೆ ಶರಣು ಹೋಗಿ ಶರಣನೇ ತಾನಾದ ಮನವೆಂಬ ಶಿಷ್ಯನಿಗೆ ಕೂಡಾ ಗದ್ದಿಗೆ ಇಲ್ಲ. ಇವರಿಬ್ಬರಿಗೆ ಭೇದಜ್ಞಾನವೇ ಇಲ್ಲ. ಏಕೆಂದರೆ ಇವರಿಬ್ಬರೂ ವಾಸ ಮಾಡಿದ ಅಂಗವೇ ಇವರಿಗೆ ಮನೆಯಾಗಿದೆ. ಹಳೆಯ ಮನೆ ಬಿದ್ದರೆ ಯಾರಾದರೂ ಅದಕ್ಕೆ ಗದ್ದಿಗೆ ಕಟ್ಟಿ ಪೂಜೆ ಮಾಡುತ್ತಾರೆಯೆ? ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ ಶರಣನ ಮನಕ್ಕೆ ಈ ಮಾತು ಸೊಗಸದು ಪ್ರಭುವೆ ಎಂದು ಸಿದ್ಧರಾಮ ಶಿವಯೋಗಿಗಳು ಅಲ್ಲಮಪ್ರಭು ಕೇಳಿದ ಪ್ರಶ್ನೆಗೆ ಉತ್ತರಿಸಿದ್ದಾರೆ.

**483**

**ಗುರು ತೋರಿದನು ಲಿಂಗಜಂಗಮವ**
**ಪಾದೋದಕ-ಪ್ರಸಾದವ ಕೊಳಹೇಳಿದನಲ್ಲದೆ**
**ಇವ ತೊರೆಯ ಹೇಳಿದನೆ?**
**ಅಹಮ್ಮೆಂದು ಪ್ರಸಾದ ದ್ರೋಹಿಗಳಾಗಿ,**
**ನಾನೆ ಎಂದು ಲಿಂಗದ್ರೋಹಿಗಳಾಗಿ,**
**ವಿಭೂತಿ-ರುದ್ರಾಕ್ಷಿ ಸಾಕ್ಷಾತ್ ಶಿವನೆಂದರಿಯದೆ,**
**ಅವರಾಚರಣೆಯ ನೋಡಿ ನಿಂದಿಸಿ**
**ಜಂಗಮದ್ರೋಹಿಗಳಾಗ ಹೇಳಿದನೆ?**

**ಜಂಗಮದಲ್ಲಿ ಜಾತಿಯ, ಪ್ರಸಾದದಲ್ಲಿ ರುಚಿಯ,**
**ಲಿಂಗದಲ್ಲಿ ಮೃದುವನರಸುವ, ಸಮಯದಲ್ಲಿ ವಿಶ್ವಾಸವಿಲ್ಲದ**
**ಮಿಟ್ಟಿಯ ಭಂಡರ ತೋರದಿರಯ್ಯ ಎನಗೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಇವು ಏಳು ಶಬ್ದಗಳು ವಸ್ತು ಮತ್ತು ಅಂಗಕ್ಕೆ ಸಂಬಂಧಿಸಿದ್ದು ಅಲ್ಲ. ಅಂಗದ ಅಂತರಂಗದೊಳಗೆ ಇರುವಂಥದ್ದು. ಸರ್ವಾಂಗಗಳಲ್ಲಿ ಸಂಗಮವಾದ ಅವ್ಯಕ್ತ ಶಕ್ತಿ. ಈ ಶಕ್ತಿಯಿಂದಲೇ ವ್ಯಕ್ತಿ ನೋಡುತ್ತಾನೆ; ಮಾತನಾಡುತ್ತಾನೆ ಕೇಳುತ್ತಾನೆ ಮುಟ್ಟುತ್ತಾನೆ ರುಚಿಸುತ್ತಾನೆ ಮೂಸಿಸುತ್ತಾನೆ. ಇವುಗಳ ಪರಿಚಯವಿಲ್ಲದ್ದಕ್ಕಾಗಿ ಇವುಗಳಿಂದ ಸುಖದುಃಖಗಳನ್ನು ಅನುಭವಿಸುತ್ತಾನೆ.

ತಿಳಿದಂಥ ವ್ಯಕ್ತಿ ಈ ಶಬ್ದಗಳ ಮೂಲಕ ಬೋಧಿಸುತ್ತಾನೆ. ಬೋಧೆಗೆ ಒಳಗಾದವನು ತನ್ನ ಅಂತರಂಗದ ಅರಿವಿನ ಮೂಲಕ ಅರಿವನ್ನು ಮನದ ಮೂಲಕ ತಿಳಿಯುತ್ತ ಆ ವಸ್ತುವೇ ತನ್ನಲ್ಲಿ ಹೇಗೆ ಸಂಗಮವಾಗಿದೆ ಎನ್ನುವ ಅನುಭವಕ್ಕೆ ಬಂದಾತ ಮಾತ್ರ ಅವೆಲ್ಲವುಗಳಿಗೆ ಶರಣು ಹೋಗಿ ಶರಣನೇ ಆಗುತ್ತಾನೆ. ಆಗ ಆತನಿಗೆ ಸುಖ ಉಂಟಾಗುವುದಿಲ್ಲ; ದುಃಖವೂ ಉಂಟಾಗುವುದಿಲ್ಲ.

ತನುವಿಗೆ ಸುಖ ಮತ್ತು ದುಃಖ ಉಂಟು ಮಾಡುವ ಸಕಲ ವಸ್ತುಗಳನ್ನು ಶಬ್ದಗಳನ್ನು ತನ್ನ ಅರಿವಿನ ಮೂಲಕ ಅರಿಯುತ್ತಾನೆ.

ಪ್ರತಿಯೊಂದು ಶಬ್ದದಲ್ಲಿ ಅರಿವಿದೆ. ಅದನ್ನು ಅರಿವಿನಿಂದ ಕೇಳಲು ಸಾಧ್ಯವಾಗುತ್ತದೆ. ಆದರೂ ಕೂಡಾ ಮನುಷ್ಯ ತನ್ನಲ್ಲಿರುವ ಅರಿವನ್ನು ಬಳಸಿಕೊಳ್ಳಲು ಸಾಧ್ಯವಾಗದ್ದಕ್ಕಾಗಿ ಸುಖ ಅಥವಾ ದುಃಖವನ್ನು ಅನುಭವಿಸುತ್ತಾನೆ.

ಉದಾ: ಕತ್ತೆ ಎನ್ನುವುದು ಒಂದು ಶಬ್ದ. ಒಂದು ಪ್ರಾಣಿಯನ್ನು ಗುರುತಿಸಲು ಬಳಕೆಯಾಗಿದೆ. ಕತ್ತೆ ಕತ್ತೆಯಲ್ಲ. ಅದಕ್ಕೆ ವ್ಯಕ್ತಿ ಇಟ್ಟ ಹೆಸರು. ಹಾಗೆ ಕೂಗಿ ಕರೆದರೆ ಅದು ಸಿಟ್ಟಾಗುವುದಿಲ್ಲ. ಕಡಿಯುವುದಿಲ್ಲ; ಒದೆಯುವುದಿಲ್ಲ. ಆದರೆ ಮನುಷ್ಯನನ್ನು ಮನುಷ್ಯ ಕತ್ತೆ ಎಂದರೆ ನುಡಿದ ಮನುಷ್ಯನಿಗೂ ಕೇಳಿದ ಮನುಷ್ಯನಿಗೂ ಗಾಯವಾಗುತ್ತದೆ. ಈ ದೇಶದ ಪ್ರಧಾನಿಗೆ ಪಾಕಿಸ್ತಾನದ ಪ್ರಧಾನಿ ಹಾಗೆ ಸಂಬೋಧಿಸಿದರೆ ಯುದ್ಧವೇ ಆಗುತ್ತದೆ. ಲಕ್ಷಗಟ್ಟಲೆ ಜನ ಸಾಯುತ್ತಾರೆ.

ಗುರುದೇವ ಲಿಂಗ ಜಂಗಮ ಪಾದೋದಕ ಪ್ರಸಾದ ಕೊಳ ಹೇಳಿದನಲ್ಲದೆ ಇವ ತೊರೆಯ ಹೇಳಿದನೆ:

ವಿಭೂತಿ ರುದ್ರಾಕ್ಷಿ ಸಾಕ್ಷಾತ್ ಶಿವನೆಂದು ಅರಿಯದೆ ಅವರಾಚರಣೆಯ ನೋಡಿ ನಿಂದಿಸಿ ಜಂಗಮದ್ರೋಹಿಗಳಾಗ ಹೇಳಿದನೆ:

ಕತ್ತೆ ಎನ್ನುವ ಶಬ್ದ ಕೇಳುವವನಿಗೆ ಅರಿವಾದರೆ, ಅದು ತಾನು ಅಲ್ಲ. ಕತ್ತೆ ಎನ್ನುವ ಪ್ರಾಣಿಯೂ ಕತ್ತೆಯಲ್ಲ. ಗುರುತಿಗಾಗಿ ಇಟ್ಟ ಹೆಸರು ಎಂದು ಅರಿವೆಂಬ ಗುರುದೇವ ಮಾತ್ರ ತಿಳಿಯಬಲ್ಲ. ಈತ ಪ್ರತಿ ಅಂಗದಲ್ಲಿಯೂ ಸಂಗಮವಾಗಿದ್ದಾನೆ. ಈ ಅಜ್ಞಾನದ ಮಾತನ್ನು ತನುವಿಗೆ ಗಾಯ ಮಾಡದಂತೆ ಜಂಗಮ ಮಾತ್ರ ಕತ್ತರಿಸಬಲ್ಲ. ಈತ ಕೂಡಾ ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಇವರಿಬ್ಬರ ಶ್ರೀಪಾದದಿಂದ ಬಂದ ಅರಿವಿನ ಪಾದೋದಕವನ್ನು ಸ್ವೀಕರಿಸುವವನೇ ಪ್ರಸಾದಿ. ಆಗ ಕೇಳಿದ ಶಬ್ದ ಅರಿವಾಗಿ ತನುವಿನಲ್ಲಿಯೇ ನಷ್ಟವಾಯಿತು.

ತನುವಿನಿಂದ ಹೊರಬಂದ ಶಬ್ದ ತನುವಿಗೆ ಕೇಳಲು ಬರುತ್ತಿಲ್ಲವೆಂದರೆ ಅದು ತನುವಿನ ಅಜ್ಞಾನ. ತನುವಿನಲ್ಲಿ ಉಂಟಾದ ಅಜ್ಞಾನವನ್ನು ತನುವಿನಲ್ಲಿಯೇ ಸಂಗಮವಾದ ಜ್ಞಾನದಿಂದ ಸುಟ್ಟು ಭಸ್ಮಮಾಡಿ ಧರಿಸಲು ಬರುತ್ತದೆ. ಈ ಸೂತ್ರವೇ ವಿಭೂತಿ.

ತನುವು ಅರಿವಿನ ಕಣ್ಣುಗಳಿಂದ ತನ್ಮಯವಾಗಿದೆ. ಈ ಅರಿವೆ ಮರೆವಾಗಿ ಅಲ್ಲಿ ಅಜ್ಞಾನದ ಕಣ್ಣು ಹುಟ್ಟಿದೆ. ಈ ಅಜ್ಞಾನದ ಕಣ್ಣುಗಳನ್ನು ಜ್ಞಾನದ ಕಂಗಳಿಂದ ನೋಡಿ ಇಲ್ಲವಾಗಿಸುವುದೇ ರುದ್ರಾಕ್ಷಿ. ರುದ್ರ ಅಂದರೆ ನಾಶ ಮಾಡುವವನು. ಅಕ್ಷಿ ಎಂದರೆ ಕಣ್ಣು.

ಕಣ್ಣಿನಿಂದ ನೋಡಿಯೇ ತಿಳಿಯಬೇಕಿಲ್ಲ. ರುಚಿಸಿ ಮೂಸಿಸಿ ಕೇಳಿ ಮುಟ್ಟಿ ಭಾವಿಸಿ ತಿಳಿಯುವ ಅರಿವಿನ ಕಣ್ಣುಗಳೇ ರುದ್ರಾಕ್ಷಿ.

ನನ್ನನ್ನು ನಾನು ಮುಟ್ಟಿಕೊಂಡರೆ ಏನೂ ಆಗುವುದಿಲ್ಲ. ಏಕೆಂದರೆ ಚರ್ಮದಲ್ಲಿರುವ ಜ್ಞಾನದ ಕಣ್ಣು ಕೆಲಸ ಮಾಡಿತು. ಚರ್ಮವನ್ನು ಮತ್ತೊಂದು ಚರ್ಮ ತಾಗಿದರೆ ಹಾವು ಹರಿದಂತೆ ಭಾಸವಾಗಿ ತನು ಉದ್ರೇಕಗೊಳ್ಳುತ್ತದೆ. ಎಡಗೈಯನ್ನು ಬಲಗೈ ಮುಟ್ಟಿದ್ದು ಚರ್ಮವೇ. ಎಡಗೈಯನ್ನು ಮತ್ತೊಂದು ಕೈ ಮುಟ್ಟಿದ್ದು ಕೂಡಾ ಚರ್ಮವೇ ಆಗಿದೆ. ಆದರೂ ಹೀಗೇಕೆ ಎನ್ನುವ ಆಲೋಚನೆ ಚರ್ಮದಲ್ಲಿ ಬತ್ತಿ ಹೋಗಿದೆ. ಇದನ್ನು ಗುರುದೇವ ಮೀಟುತ್ತಾನೆ. ಅರಿವಿಗೆ ತಂದುಕೊಡುತ್ತಾನೆ. ಈ ಎಲ್ಲಾ ಅರಿವು ಅಂಗದಲ್ಲಿಯೇ ಸಂಗಮವಾಗಿದೆ. ಇದಕ್ಕೆ ಗುರುದೇವ ಲಿಂಗ ಎಂದು ಹೆಸರಿಟ್ಟು ಕರೆದ. ಲಿಂಗವೆಂದರೆ ವಸ್ತುವಲ್ಲ; ಪ್ರತಿ ಅಂಗದಲ್ಲಿಯೂ ಸಂಗಮವಾದ ಅರಿವು ಮಹಾಲಿಂಗ!

ಗುರುದೇವನಾದವನು ಇದನ್ನು ಶಿಷ್ಯನ ಅಂಗದಲ್ಲಿಯೇ ತೋರಿದನು. ಪಾದೋದಕ ಪ್ರಸಾದವ ಕೊಳಲು ಹೇಳಿದ್ದಾನೆ. ಇವುಗಳನ್ನು ತೊರೆಯಲು ಹೇಳಿದನೆ? ಅಹಂಕಾರದಿಂದ ಪ್ರಸಾದ ದ್ರೋಹಿಗಳಾದರು; ನಾನೇ ಲಿಂಗಕೊಟ್ಟು ಬೋಧ ಮಾಡಿದವನು ಎಂದು ಲಿಂಗದ್ರೋಹಿಗಳಾದರು. ವಿಭೂತಿ-ರುದ್ರಾಕ್ಷಿ ಸಾಕ್ಷಾತ್ ಅರಿವಿನ ಶಿವನೆಂದು ತಿಳಿಯದೆ, ಆಚರಣೆಯ ನೋಡಿ ನಿಂದಿಸಿ ಜಂಗಮದ್ರೋಹಿಗಳಾಗ ಹೇಳಿದನೆ? ಜಂಗಮದಲ್ಲಿ ಜಾತಿಯನ್ನು ಪ್ರಸಾದದಲ್ಲಿ ರುಚಿಯನ್ನು, ಲಿಂಗದಲ್ಲಿ ಮೃದುವನ್ನು ಹುಡುಕುವ, ಸಮಯದಲ್ಲಿ ವಿಶ್ವಾಸವಿಲ್ಲದ ಮಿಟ್ಟಿಯ ಭಂಡರ ತೋರದಿರಯ್ಯಾ ಎನಗೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನೊಂದಿಗೆ ಮಾತನಾಡುತ್ತ ಆ ಗುರುದೇವನನ್ನು ಬೇಡಿಕೊಂಡಿದ್ದಾರೆ.

**484**

**ಗುರುಪಾದುಕೆಯ ಮೆಟ್ಟಿ**
**ಅಮರಗುಂಡದ ಮಲ್ಲಿಕಾರ್ಜುನಭೃತ್ಯಭಂಗಬಟ್ಟು**
**ಗುರುಕರುಣವ ಪಡೆಯಲಿಲ್ಲವೆ?**
**ಗುರುಪಾದುಕೆಯ ಮೆಟ್ಟಿ ಅಮರ ಶೇಖರನೆಂಬರಸು ಪಾದವ ಕಡಿಸಲಿಲ್ಲವೆ?**
**ಗುರುಪಾದುಕೆಯ ಮೆಟ್ಟಿ**
**ರಾಜೇಂದ್ರ ಚೋಳ ತನ್ನ ರಾಣಿಯ ಸಂಗ ಬಿಡಲಿಲ್ಲವೆ?**
**ಗುರುಪಾದುಕೆಯ ಮೆಟ್ಟಿ**
**ಸಿಂಹಚೋಳ ಪಂಡಿತರ ಪಾದ ತುಂಡಿಸಲಿಲ್ಲವೆ?**

**ಇದು ಕಾರಣ,**
**ಗುರುಪಾದುಕೆ ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನನ**
**ಪೂಜೆಯ ಚಮ್ಮಾವುಗೆಂದು ನಂಬಿದೆ.**
**ಹುಸಿಯಾದಡೆ, ಪ್ರಮಥ ಸಂಕುಲದಲ್ಲಿ ಗುರು ಕೊಟ್ಟ**
**ಗುರುಮೂರ್ತಿ ಇಲ್ಲದಂತೆ ಮಾಡಾ ಪ್ರಭುವೆ.**

ಗುರುದೇವನು ಕಾಣುವವನು ಅಲ್ಲ. ಅವನ ಪಾದ ಕೂಡಾ ಕಾಣುವುದು ಅಲ್ಲ. ಕಾಣಲು ಬಾರದ ಗುರುವಿನ ಪಾದವನ್ನು ಹಿಡಿದು ಆ ಪಾದದಲ್ಲಿಯೇ ಸಂಗಮವಾಗುವ ಶಕ್ತಿ ಕಾಣಬಾರದ ಶಿಷ್ಯನಿಗೆ ಮಾತ್ರ ಇದೆ.

ಅಂಗದಲ್ಲಿಯೇ ಸಂಗಮವಾದ ಗುರುದೇವನು ಅಂಗವನ್ನು ಹೊಂದಿದ ಶಿಷ್ಯನಿಗೆ ಕಾಣಬರುವುದಿಲ್ಲ. ಅಂಗದಲ್ಲಿಯೇ ಸಂಗಮವಾದ ಶಿಷ್ಯ ಅಂಗವನ್ನು ಹೊಂದಿದ ಗುರುದೇವನಿಗೆ ಕಾಣಬರುವುದಿಲ್ಲ. ಅಂಗವನ್ನು ಹೊಂದಿದ ಗುರು ಅಂಗವನ್ನು ಹೊಂದಿದ ಶಿಷ್ಯರಿಬ್ಬರನ್ನು ಕುರಿತು ಹೇಳಿದ ಮಾತು ಇದಲ್ಲ.

ಸಿದ್ಧರಾಮ ಶಿವಯೋಗಿ ಜಾಣ. ಲೋಕದ ಗುರು ಶಿಷ್ಯರಾದವರ ತಿಳಿಯಲೆಂದು ಬೆಡಗಿನ ಮಾತನ್ನು ಆಡಿದ್ದಾನೆ. ಸೂಕ್ಷ್ಮಾತಿ ಸೂಕ್ಷ್ಮದ ಮಾತನ್ನು ಆಡುತ್ತಾ ಅಜ್ಞಾನದ ಪೊರೆಯನ್ನು ಕಿತ್ತಲು ಪ್ರಯತ್ನಿಸಿದ್ದಾನೆ.

ಗುರುಪಾದುಕೆಯನ್ನು ಮೆಟ್ಟಿದ ಅಮರಗುಂಡದ ಮಲ್ಲಿಕಾರ್ಜುನ ಗುರುಕರಣ ಪಡೆಯಲಿಲ್ಲವೆ?

ಗುರುಪಾದುಕೆಯ ಮೆಟ್ಟಿ ಅಮರಶೇಖರನೆಂಬರಸು ಪಾದವ ಕಡಿಸಲಿಲ್ಲವೆ?

ಗುರುಪಾದವ ಮೆಟ್ಟಿ ರಾಜೇಂದ್ರಚೋಳ ತನ್ನ ರಾಣಿಯ ಸಂಗ ಬಿಡಲಿಲ್ಲವೆ?

ಗುರುಪಾದುಕೆಯ ಮೆಟ್ಟಿ ಸಿಂಹಚೋಳ ಪಂಡಿತರ ಪಾದ ತುಂಡಿಸಲಿಲ್ಲವೆ?

ಗುರುಪಾದುಕೆ ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನನ ಪೂಜೆಯ ಚಮ್ಮಾವುಗೆ ಎಂದು ನಂಬಿದೆ.

ಗುರುದೇವನಿಗೆ ಅಂಗವಿಲ್ಲ. ಅಂಗದಲ್ಲಿಯೇ ಸಂಗಮವಾದ ಗುರುದೇವನ ದರುಶನ ಪಡೆದ ಶಿಷ್ಯನಿಗೆ ಗುರುದೇವನು ಇದ್ದ ಅಂಗವದು ಶ್ರೀಗುರುವಿನ ಅಂಗ. ಆತನ ಪಾದುಕೆಗಳು ಶಿಷ್ಯನಿಗೆ ಚಮ್ಮಾವುಗೆ. ಅವುಗಳನ್ನು ಮೆಟ್ಟುವುದು ಆತನಿಗೆ ಸಾಧ್ಯವಿಲ್ಲ. ಅದು ಪ್ರಾಣ ಘಾತುಕ. ತಲೆಯ ಮೇಲೆ ಹೊತ್ತು ತಿರುಗುತ್ತಾನೆ. ಪೂಜಿಸುತ್ತಾನೆ.

ಅಂಗದಲ್ಲಿಯೇ ಸಂಗಮವಾದ ಗುರುದೇವನಿಗೆ ಪಾದವಿಲ್ಲ; ಪಾದುಕೆಗಳೂ ಇಲ್ಲ. ಆತ ವಿರಾಟ ಸ್ವರೂಪಿ. ಜಗದಗಲ ಮುಗಿಲಗಲಕ್ಕೂ ವ್ಯಾಪಿಸಿದ್ದಾನೆ. ಆತನ ಶ್ರೀಮುಕುಟ ಬ್ರಹ್ಮಾಂಡದಿಂದಲೂ ಅತ್ತತ್ತ. ಆತನ ಶ್ರೀಪಾದ ಪಾತಾಳದಿಂದಲೂ ಅತ್ತತ್ತ.

ಅಂಗವನ್ನು ಆವರಿಸಿದ ಮನಕ್ಕೆ ವಿಶ್ವವ್ಯಾಪಿಯಾದ ವಿರಾಟಸ್ವರೂಪನಾದ ಗುರುವಿನ ದರುಶನ ಪಡೆಯಲೇಬೇಕೆಂದು ಬಲವಾದ ಬಯಕೆ ಉಂಟಾದಾಗ ಆ ಮನವೇ ಘನಮನವಾಗುತ್ತದೆ. ಬೆಳಗಿನ ದರುಶನ ಪಡೆದ ಕತ್ತಲಿನಂತಾಗುತ್ತದೆ. ಕತ್ತಲು ಬೆಳಕಿನಲ್ಲಿ ಲೀನವಾಗಿ ಬೆಳಕೇ ಆಗುತ್ತದೆ. ಅಲ್ಲಿ ಗುರು ಶಿಷ್ಯರಿಬ್ಬರೂ ಬೆಳಗಿಂಗೆ ಬೆಳಗಾಗಿ ಬೆಳಗುತ್ತಾರೆ. ನೆತ್ತಿ ಪಾದ ಒಂದೇ ಆಗುತ್ತದೆ. ನೆತ್ತಿಯಲ್ಲಿದ್ದ ಅಹಂಕಾರ ಶ್ರೀಪಾದಕ್ಕೆರಗಿ ಭಸ್ಮವಾಗುತ್ತದೆ.

**485**

**ಗುರುಪಾದೋದಕದಿಂದ ಲಿಂಗಮಜ್ಜನ ಮಾಡಬಹುದಲ್ಲದೆ,**
**ಬರಿಯುದಕದಿಂದೆರೆಯಬಹುದೆ ಕರಸ್ಥಲದ ತೇಜವ?**
**ಮೀರಿದ ಮೀರಿದ ಮಾರ್ಗ ಹೇಳಿದರಯ್ಯಾ, ಎನ್ನ ಗುರುಗಳು.**
**ಅನ್ಯಜಲವನೆರೆದೆನಾದಡೆ, ತಲೆ-ತಲೆದಂಡ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಉದಕದಿಂದ ಉದಕವನ್ನು ಮಜ್ಜನ ಮಾಡಲು ಸಾಧ್ಯವೆ? ಉದಕದ ಬಿಂದುವಿನಿಂದ ಆದ ತನುವನ್ನು ಉದಕದಿಂದಲೇ ಮಜ್ಜನ ಮಾಡಬಹುದೆ?

ಆಮ್ಲಜನಕ ಜಲಜನಕವನ್ನು ಒಂದರೊಳಗೆ ಒಂದನ್ನು ಕೂಡಿಸಿ ಅದರಲ್ಲಿ ತಾನು ಸಂಗಮವಾಗಿ ಜೀವ ಜಲಬಿಂದುವನ್ನಾಗಿ ಮಾಡಿದ ಜಗನ್ನಾಥನನ್ನು ಉದಕದಿಂದ ಮಜ್ಜನ ಮಾಡಲು ಸಾಧ್ಯವೆ? ಜೀವಜಲಬಿಂದುವೇ ಗರ್ಭಕ್ಕೆ ಹೋಗಿ ಅಂಗವಾಗಿ ಲಿಂಗಾಂಗವಾಗಿ ಬಂದ ಲಿಂಗಯ್ಯನನ್ನು ಬರಿ ಉದಕದಿಂದ ಎರೆಯಬಹುದೆ? ಆತ ಕರಸ್ಥಲದಲ್ಲಿ ತೇಜೋಪುಂಜವಾಗಿ ಬೆಳಗುವ ಜಗನ್ನಾಥ!

ಮನ ಮತ್ತು ತನುವಿಗೆ ಮೀರಿದ ಮಾರ್ಗವನ್ನು ಎನಗೆ ಹೇಳಿದನಯ್ಯಾ ಎನ್ನ ಗುರುದೇವ ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನನ್ನು ಸ್ಮರಿಸಿದ್ದಾರೆ.

ಜಲಕ್ಕೆ ಜನ್ಮಕೊಟ್ಟು ಜೀವ ಜಲವನ್ನಾಗಿಸಿ ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿದ ಸೃಷ್ಟಿಕರ್ತನನ್ನು ಅನ್ಯಜಲದಿಂದ ಎರೆದೆನಾದಡೆ, ತಲೆದಂಡ ತಲೆದಂಡ ಕಪಿಲಸಿದ್ಧ ಮಲ್ಲಿಕಾರ್ಜುನಾ.

**486**

**ಗುರುಪಾದೋದಕದಿಂದ ಲಿಂಗಮಜ್ಜನ**
**ಮಾಡುವೆನೆಂಬ ಭಾಷೆ ಎನ್ನದಯ್ಯಾ.**
**ಗುರುಪಾದೋದಕದಿಂದ ಸ್ವಯಂಪಾಕ ರಚನೆ**
**ಎಂಬ ಭಾಷೆ ಎನ್ನದಯ್ಯಾ.**
**ಗುರುಪಾದೋದಕದಿಂದ ಶಿರಃಸ್ನಾನ, ಅಂಗಸ್ನಾನ, ಮುಖಸ್ನಾನ**
**ಎಂಬ ಭಾಷೆ ಎನ್ನದಯ್ಯಾ.**
**ಗುರುಪಾದೋದಕದಿಂದ ಸರ್ವಶುದ್ಧ**
**ಎಂಬ ಭಾಷೆ ಎನ್ನದಯ್ಯಾ.**
**ಇದು ಕಾರಣ, ಗುರುವೆ ಘನವೆಂದು**
**ಗುರುಪಾದೋದಕವೇ ಎನ್ನ ಮೋಕ್ಷದ ಬೀಡೆಂದು ಡಂಗುರ ಹೊಯ್ವೆ.**
**ಇದು ಕಿಂಚಿತ್ ಹುಸಿಯಾದಡೆ ಕಪಿಲಸಿದ್ಧ ಮಲ್ಲಿಕಾರ್ಜುನ**
**ನಾಯಕನರಕದಲ್ಲಿಕ್ಕದೆ ಮಾಣ್ಬನೆ? ಮಡಿವಾಳತಂದೆ.**

ಉದಕದಿಂದ ಹುಟ್ಟಿದ ಪದಾರ್ಥಗಳು ಉದಕದಲ್ಲಿ ಬೆಂದು ಉದಕದಿಂದಲೇ ಆದ ದೇಹಕ್ಕೆ ಆಹಾರವಾಗುತ್ತದೆ. ನಾನಾ ಪಾಕಗಳು ಸಿದ್ಧವಾಗಿ ಪಕ್ವಾನ್ನವಾಗುತ್ತದೆ. ಇದು ಉದಕದ ಕಾಯಕ.

ಉದಕದಿಂದ ಆದ ಕಾಯದಲ್ಲಿ ಉದಕದಿಂದಲೇ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳೆಂಬ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಹುಟ್ಟಿಕೊಂಡಿವೆ. ಕಾಯದಲ್ಲಿ ಹುಟ್ಟಿದ ಪದಾರ್ಥಗಳು ಕಾಯವನ್ನು ಅಜ್ಞಾನದ ಬಂಧನದಲ್ಲಿ ಬಂಧಿಸಿವೆ.

ಉದಕದಿಂದಲೇ ಆದ ತನು. ಉದಕದಿಂದಲೇ ಆದ ಮನ. ತನುಮನಗಳನ್ನು ಸೃಷ್ಟಿಮಾಡಿ ಆ ತನುವಿನಲ್ಲಿಯೇ ಸಂಗಮವಾದ ಜ್ಞಾನೋದಕದಿಂದಲೇ ಸರ್ವಾಂಗವೆಂಬ ಲಿಂಗದ ಮಜ್ಜನ ಮಾಡುವೆನೆಂಬ ಭಾಷೆ ಎನ್ನದಯ್ಯಾ. ಜ್ಞಾನವೆಂದರೆ ಗುರುದೇವ. ಆತನ ಪಾದೋದಕದಿಂದಲೇ ಸ್ವಯಂಪಾಕ ರಚನೆ ಮಾಡುವೆನೆಂಬ ಭಾಷೆ ಎನ್ನದಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಹೇಳುತ್ತಾ:

ಗುರುಪಾದೋದಕದಿಂದ ಅಜ್ಞಾನ ತುಂಬಿದ ಶಿರಃಸ್ನಾನ ಮಾಡಿಸುವೆ, ಸರ್ವಾಂಗದಸ್ನಾನ ಮಾಡಿಸುವೆ, ಮುಖಸ್ನಾನ ಮಾಡಿಸುವೆ ಎಂಬ ಭಾಷೆ ಎನ್ನದಯ್ಯಾ. ಗುರುಪಾದೋದಕವೆಂಬ ಜ್ಞಾನೋದಕದಿಂದಲೇ ಸರ್ವಶುದ್ಧ ಎಂಬ ಭಾಷೆ ಎನ್ನದಯ್ಯಾ. ಇದು ಕಾರಣ, ಗುರುವೆ ಘನವೆಂದು, ಗುರಪಾದೋದಕವೇ ಎನ್ನ ಮೋಕ್ಷದ ಬೀಡೆಂದು ಡಂಗುರ ಹೊಡೆವೆನು. ಈ ಮಾತು ಕಿಂಚಿತ್ ಹುಸಿಯಾದಡೆ ಕಪಿಲಸಿದ್ಧ ಮಲ್ಲಿಕಾರ್ಜುನ ನಾಯಕನರಕದಲ್ಲಿಕ್ಕದೆ ಮಾಣ್ಬನೆ? ಮಡಿವಾಳ ತಂದೆ. ಎಂದು ಮಾಚಿದೇವರ ಮುಂದೆ ಭಾಷೆ ಮಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**487**

**ಗುರುಪಾದೋದಕದಿಂದ ಸ್ಥೂಲದೇಹ ಶುದ್ಧಿ ;**
**ಕ್ರಿಯಾಪಾದೋದಕದಿಂದ ಸೂಕ್ಷ್ಮದೇಹ ಶುದ್ಧಿ ;**
**ಜ್ಞಾನಪಾದೋದಕದಿಂದ ಕಾರಣದೇಹ ಶುದ್ಧಿ ;**
**ಗುರುಪಾದೋದಕದಿಂದ ಇಷ್ಟಲಿಂಗ ಸಂಬಂಧ ;**
**ಕ್ರಿಯಾ ಪಾದೋದಕದಿಂದ ಪ್ರಾಣಲಿಂಗ ಸಂಬಂಧ ;**
**ಜ್ಞಾನಪಾದೋದಕದಿಂದ ಭಾವಲಿಂಗ ಸಂಬಂಧ.**
**ಅದು ಕಾರಣ, ಪಾದೋದಕವೇ ಪ್ರತ್ಯಕ್ಷ ಪರಬ್ರಹ್ಮ ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸ್ಥೂಲದೇಹ ಸೂಕ್ಷ್ಮದೇಹ ಕಾರಣ ದೇಹಗಳೆಂದು ಮೂರು ದೇಹಗಳಿವೆ. ಸ್ಥೂಲದೇಹ ಮಾತ್ರ ಕಾಣುತ್ತದೆ. ಸೂಕ್ಷ್ಮದೇಹ ಕಾರಣದೇಹಗಳೆರಡು ಸ್ಥೂಲದೇಹದಲ್ಲಿಯೇ ಇವೆ.

ಸ್ಥೂಲದೇಹ ಸೂಕ್ಷ್ಮ ಮತ್ತು ಕಾರಣದೇಹಗಳಿಗೆ ಉಪಕರಣವಾಗಿದೆ. ಸೂಕ್ಷ್ಮದೇಹ ಸ್ಥೂಲದೇಹವನ್ನು ಬಳಕೆ ಮಾಡುತ್ತಿರುವುದರಿಂದ ಅದು ಸಾತ್ವಿಕ ರಾಜಸ ತಾಮಸ ವೇಷಗಳ ಮೂಲಕ ವ್ಯವಹರಿಸುತ್ತದೆ. ಕಾರಣ ದೇಹದಲ್ಲಿ ಜ್ಞಾನ ಮಾತ್ರ ಸಂಗಮವಾಗಿರುವುದರಿಂದ ಅದು ಗುರುದೇವನಾಗಿ ಸೂಕ್ಷ್ಮದೇಹಕ್ಕೆ ಸ್ಥೂಲದೇಹಕ್ಕೆ ಪಾಠ ಮಾಡುತ್ತದೆ.

ಸ್ಥೂಲದೇಹದಲ್ಲಿಯೇ ಸಂಗಮವಾದ ಗುರುದೇವನು ತನ್ನ ಜ್ಞಾನದ ಉದಕದಿಂದ ಸ್ಥೂಲದೇಹವನ್ನು ತೊಳೆದಾಗಲೇ ಅದು ಪರಿಶುದ್ಧವಾದ ಅಂಗವಾಗುತ್ತದೆ. ಲಿಂಗಾಂಗವೆಂದು ಕೂಡಾ ಕರೆಯಿಸಿಕೊಳ್ಳುತ್ತದೆ.

ಸೂಕ್ಷ್ಮದೇಹ ಕಾರಣದೇಹದಲ್ಲಿ ಸಂಗಮವಾದಾಗ ಸೂಕ್ಷ್ಮದೇಹ ಪರಿಶುದ್ಧಿಯಾಗುತ್ತದೆ.

ಸೂಕ್ಷ್ಮದೇಹವೆಂದರೆ ಮನ. ಕಾರಣದೇಹವೆಂದರೆ ಜ್ಞಾನ. ಜ್ಞಾನದೇಹದಲ್ಲಿ ಮನೋದೇಹ ಸಂಗಮವಾದಾಗ ಮನದೇಹ ಜ್ಞಾನದೇಹವೇ ಆಗುತ್ತದೆ. ಜ್ಞಾನವೆಂದರೆ ಬೆಳಕು. ಮನವೆಂದರೆ ಬೆಳಕಿನಿಂದ ಹುಟ್ಟಿದ ಕತ್ತಲು. ಕತ್ತಲು ಬೆಳಕಿನತ್ತ ಪಯಣಿಸಿ ಆ ಬೆಳಕಿನಲ್ಲಿ ಲೀನವಾದರೆ ಅದು ಬೆಳಕೇ ಆಗುತ್ತದೆ. ಮನ ಘನಮನವಾಗುತ್ತದೆ.

ಆಗ ದೇಹ ಜ್ಞಾನದೇಹವಾಗಿ ಕಾರ್ಯನಿರ್ವಹಿಸುತ್ತದೆ. ದೇಹಗಳಿಂದ ಜ್ಞಾನಿ ಎಂದು ಕರೆಯಿಸಿಕೊಳ್ಳುತ್ತದೆ. ಸಕಲದೇಹಗಳಲ್ಲಿ ಸಂಗಮವಾಗಿರುವ ಜ್ಞಾನದೇಹ ಜ್ಞಾನಿಗೆ ಮಾತ್ರ ಕಾಣುತ್ತದೆ. ಹೀಗಾಗಿ ಜ್ಞಾನಿ ಸಕಲ ದೇಹಗಳನ್ನು ಜ್ಞಾನದೇಹಗಳನ್ನಾಗಿಯೇ ನೋಡುತ್ತಾನೆ. ಆ ಮಹಾಜ್ಞಾನಕ್ಕೆ ಶರಣು ಹೋಗುತ್ತಾನೆ. ಸಕಲ ದೇಹಗಳನ್ನು ತನ್ನಂತೆಯೇ ನೋಡುತ್ತಾನೆ.

ಕಾರಣದೇಹವೆಂದರೆ ಜ್ಞಾನ, ಜ್ಞಾನವೆಂದರೆ ಕಾರಣದೇಹ. ಚಿನ್ನ ಎಲ್ಲಿ ತುಂಡರಿಸಿದರು ಕೂಡಾ ಚಿನ್ನ ಹೇಗೆ ಕಾಣುತ್ತದೆಯೇ ಹಾಗೆಯೇ ಜ್ಞಾನದೇಹ ಕೂಡಾ ಆಗಿದೆ. ''ಮುಳ್ಳು ಗುತ್ತುವುಡೆ ತೆರಹಿಲ್ಲದ ಘನ''ವೆಂದಿದ್ದಾರೆ ಶರಣರು. ''ಬೊಟ್ಟಿಡಲೆಡೆ ತೆರಹಿಲ್ಲದ ಘನ''ವೆಂದು ಕೂಡಾ ಹೇಳಿದ್ದಾರೆ. ಜ್ಞಾನ ಪಾದೋದಕದಿಂದ ಕಾರಣದೇಹ ಶುದ್ಧಿ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಸೂಕ್ಷ್ಮದೇಹ ಜ್ಞಾನದೇಹದಲ್ಲಿ ಸಂಗಮವಾಗುವುದೊಂದೇ ತಡ ಭಾವ ಸದ್ಭಾವವಾಗುತ್ತದೆ; ನಿರ್ಭಾವವಾಗುತ್ತದೆ. ಪ್ರಾಣ ಪ್ರಾಣಲಿಂಗವಾಗುತ್ತದೆ. ಸರ್ವಾಂಗವೂ ಲಿಂಗಾಂಗವಾಗುತ್ತದೆ.

ಜ್ಞಾನದ ಉದಕವೇ ಪಾದೋದಕ. ಇದು ಕಾಣುವುದಿಲ್ಲ. ಮನ ಜ್ಞಾನದ ಹುಡುಕಾಟದಲ್ಲಿ ತೊಡಗಿದಾಗಲೇ ಅದು ತನ್ನ ಭ್ರಮೆಯನ್ನು ಕಳೆದುಕೊಳ್ಳುತ್ತದೆ. ಮನದ ಭ್ರಮೆಗಳೆಲ್ಲ ಉದುರಿಬಿದ್ದು ಅದು ಸ್ವಯಂ ಬ್ರಹ್ಮನಾಗುತ್ತದೆ. ಪರಬ್ರಹ್ಮನೇ ತಾನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**488**

**ಗುರುಪಾದೋದಕವಿಲ್ಲದಲ್ಲಿ, ಜಂಗಮಪಾದೋದಕವಿಲ್ಲದಲ್ಲಿ,**
**ಪ್ರಣವೋದಕದಿಂದ ಅಂಗಸ್ನಾನ ಮಾಳ್ಪುದಯ್ಯಾ.**
**ಪ್ರಣವೋದಕದಿಂದ ಲಿಂಗಸ್ನಾನ ಲಿಂಗಾಭಿಷೇಕ ಮಾಳ್ಪುದಯ್ಯಾ.**
**ಗುರುವಿನಲ್ಲಿ ಗುರುಪಾದೋದಕವುಂಟು,**
**ಲಿಂಗಪಾದೋದಕವುಂಟು, ಜಂಗಮಪಾದೋದಕವುಂಟು.**
**ಲಿಂಗದಲ್ಲಿ ಗುರುಪಾದೋದಕವಿಲ್ಲ,**
**ಜಂಗಪಾದೋದಕವಿಲ್ಲ ನಿಮಿತ್ತ**
**ಜಂಗಮವ ಬರಿಸಿಕೊಂಡು ಕ್ರೀಯ ಮಾಳ್ಪಭಕ್ತನ ಪಾದಕ್ಕೆ**
**ನಮೋ ನಮೋ ಎಂಬೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದ ಮೇಲೆ ಧರಿಸಿಕೊಂಡ ಲಿಂಗ ಅಂಗಕ್ಕೆ ಯಾವ ಬೋಧೆಯನ್ನು ಕೂಡಾ ನೀಡಲು ಸಾಧ್ಯವಿಲ್ಲ. ಅಂಗದಲ್ಲಿ ಉಂಟಾಗುವ ಅಜ್ಞಾನವನ್ನು ಲಿಂಗಕ್ಕೆ ತಡೆದು ನಿಲ್ಲಿಸಲು ಸಾಧ್ಯವಿಲ್ಲ. ಹೀಗಾಗಿ ಅಂಗದ ಮೇಲೆ ಧರಿಸಿದ ಲಿಂಗದಲ್ಲಿ ಗುರುಪಾದೋದಕವಿಲ್ಲ, ಅದಕ್ಕೆ ಜಂಗಮವೆಂದರೆ ಯಾರೆಂದು ಕೂಡಾ ಗೊತ್ತಾಗುವುದಿಲ್ಲ, ಹೀಗಾಗಿ ಜಂಗಮ ಪಾದೋದಕವಿಲ್ಲ.

ಅಂಗದ ಮೇಲೆ ಧರಿಸಿಕೊಂಡ ಲಿಂಗದಲ್ಲಿ ಜಂಗಮವಿಲ್ಲ, ಗುರುವಿಲ್ಲ, ಗುರುಪಾದೋದಕವಿಲ್ಲ, ಜಂಗಮಪಾದೋದಕವಿಲ್ಲ. ಅದೊಂದು ಸಾಂಪ್ರದಾಯಿಕ ವಸ್ತು ಆಗಿರುವುದರಿಂದ ಅಂಗದ ಮೇಲೆ ಧರಿಸಿಕೊಂಡ ಲಿಂಗದಲ್ಲಿ ಜ್ಞಾನವಿಲ್ಲ. ಅದನ್ನು ಪೂಜಿಸಿದ ಅಂಗಕ್ಕೆ ಫಲವಿಲ್ಲ ಪದವಿಲ್ಲ. ಹೀಗಿದ್ದಾಗ

ಪ್ರಣವೋದಕದಿಂದ ಅಂಗಸ್ನಾನ ಮಾಳ್ಪುದಯ್ಯಾ. ಪ್ರಣವೋದಕದಿಂದ ಲಿಂಗಸ್ನಾನ ಲಿಂಗಾಭಿಷೇಕ ಮಾಳ್ಪುದಯ್ಯಾ :

ಸಿದ್ಧರಾಮ ಶಿವಯೋಗಿಗಳು ಸುಂದರವಾದ ಸೂತ್ರವನ್ನೇ ಹೇಳಿದ್ದಾರೆ. ಲಿಂಗವನ್ನೇ ನಂಬಿ ಅಂಗದ ಮೇಲೆ ಧರಿಸಿದ ಲಿಂಗವನ್ನು ನಿತ್ಯ ನಿತ್ಯ ಆರಾಧಿಸುವ ಅಂಗ ತನಗೆ ತಾನೆ ಎಚ್ಚರಗೊಂಡು ಆರಾಧಿಸಿದರೆ ಫಲವಿಲ್ಲವೆಂದು ಅರಿವಿನಿಂದ ತಿಳಿದು ಪ್ರಣವೋದಕದಿಂದ ಅಂಗಸ್ನಾನ ಮಾಡುವುದು ಅವಶ್ಯವಿದೆ.

ಪ್ರಣವೋದಕವೆಂದರೆ 'ಓಂ ನಮಃ ಶಿವಾಯ'. ಇದು ಕೂಡಾ ಜ್ಞಾನೋದಕವೇ ಆಗಿದೆ. ಅಂಗದಲ್ಲಿ ಸಂಗಮವಾಗಿದ್ದು ಸರ್ವಾಂಗವೂ ಪ್ರಣವವೇ ಆಗಿದೆ.

ತ್ವಙ್ಮಯವಾಗಿಹುದು 'ಓಂ'ಕಾರ, ರುಧಿರಮಯವಾಗಿಹುದು 'ನ'ಕಾರ, ಮಾಂಸಮಯವಾಗಿಹುದು 'ಮ'ಕಾರ, ಅಸ್ತಿಮಯವಾಗಿಹುದು 'ಶಿ'ಕಾರ, ಮಜ್ಜಾಮಯವಾಗಿಹುದು 'ವಾ'ಕಾರ, ಮೇಧೊಮಯವಾಗಿಹುದು 'ಯ'ಕಾರ, ಹೀಗೆ ಇಡೀ ಅಂಗವೇ ಪ್ರಣವವಾಗಿದೆ. ಸರ್ವಾಂಗದಲ್ಲಿ ಪ್ರಣವೋದಕವೇ ಭರಿತವಾಗಿದೆ ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ.

ಇಂತಹ ಪ್ರಣವೋದಕದಲ್ಲಿ ಅಂಗಸ್ನಾನ ಮಾಡಬೇಕು. ಲಿಂಗಕ್ಕೆ ಲಿಂಗಾಭಿಷೇಕ ಮಾಡಬೇಕು. ಜಂಗಮಕ್ಕೆ ಜಂಗಮಾಭಿಷೇಕ ಮಾಡಬೇಕು. ಪ್ರಣವೋದಕದಲ್ಲಿ ಗುರುವುಂಟು ಲಿಂಗವುಂಟು ಜಂಗಮವುಂಟು.

ಜಂಗಮವ ಬರಿಸಿಕೊಂಡು ಕ್ರೀಯ ಮಾಳ್ಪ ಭಕ್ತನ ಪಾದಕ್ಕೆ ನಮೋ ನಮೋ ಎಂಬೆ, ಕಪಿಲಸಿದ್ಧ ಮಲ್ಲಿಕಾರ್ಜುನಾ:

ಅಂಗದ ಮೇಲೆ ಲಿಂಗ ಧರಿಸಿದರು ಕೂಡಾ ಅಂಗವನ್ನು ಆವರಿಸಿದ ಮನ ಅಂಗದ ಸಂಗ ಮಾಡಿ ಮನೋವ್ಯಭಿಚಾರ ಮಾಡುವುದು ಬಿಡುವುದಿಲ್ಲ. ಅಂಗದ ಮೇಲೆ ಜೋತಾಡುವ ಲಿಂಗಕ್ಕೆ ಅಂಗ ಮಾಡುವ ವ್ಯಭಿಚಾರವನ್ನು ತಡೆಯಲು ಸಾಧ್ಯವಾಗುವುದಿಲ್ಲ. ಇದು ಏಕೆ ಎಂದು ಆಲೋಚನೆಗೆ ಒಳಗಾದಲ್ಲಿ ಅಂಗದಲ್ಲಿಯೇ ಸಂಗಮವಾದ ಜ್ಞಾನಿ ಜಂಗಮ ಸಹಾಯಕ್ಕೆ ಬರುತ್ತಾನೆ. ಈತ ತನ್ನ ಜ್ಞಾನ ಖಡ್ಗದಿಂದ ಅಂಗದಲ್ಲಿ ಹುಟ್ಟಿದ ಅಜ್ಞಾನವನ್ನು ಕೊಂದು ಹಾಕುತ್ತಾನೆ.

ತನ್ನ ಅಜ್ಞಾನದೊಂದಿಗೆ ತನ್ನ ಜ್ಞಾನದಿಂದಲೇ ಹೋರಾಟ ಮಾಡುವ ಸ್ವಯಂಕೃಷಿ ಅಂಗದಲ್ಲಿಯೇ ಏರ್ಪಡುತ್ತದೆ. ಅಂತವರ ಪಾದಕ್ಕೆ ನಮೋ ನಮೋ ಎಂದು ಸಿದ್ಧರಾಮ ಶಿವಯೋಗಿಗಳು ಹೃದಯಪೂರ್ವಕವಾಗಿ ನಮಸ್ಕರಿಸಿದ್ದಾರೆ.

**489**

**ಗುರುಪಾದೋದಕವೆಂದು, ಕ್ರಿಯಾಪಾದೋದಕವೆಂದು, ಜ್ಞಾನಪಾದೋದಕವೆಂದು ಮೂರು ತೆರನುಂಟು. ಗುರುಪಾದೋದಕವೆಂದಡೆ,**

**ಅಯ್ಯಗಳ ಪಾದಗಳ ಎರಡಂಗುಲಿಗಳಲ್ಲಿ,**
**ಪಾದಗಳೆರಡರ ಮೂಲಾಂಗುಲಿ ಹಿಮ್ಮಡಗಳ ಅಗ್ರದಲ್ಲಿ**
**ತನ್ನ ಪಾಂಚಾಗುಲಿಯಿಂದ ಉದಕವನದ್ದಿ,**
**ಮಂತ್ರವಳಹುದೆ ಗುರುಪಾದೋದಕ.**
**ಕ್ರಿಯಾ ಪಾದೋದಕವೆಂದಡೆ,**
**ಪಾದದ್ವಯದ ಅಂಗುಲಿಗಳಲ್ಲಿ ಶಿವನ ಶಕ್ತಿಯ ಪ್ರಣವವ ಬರೆದು,**
**ಭಸ್ಮವ ಧರಿಸಿ, ನೇತ್ರದಳಗಳ ಅರ್ಪಣಂಗೈದು,**
**ತನ್ನ ತರ್ಜನಿಯ, ಮೂರುವೇಳೆ ಪ್ರಣವ ಸಹಿತ ಪಂಚಾಕ್ಷರಿ ಮಂತ್ರದಿಂ**
**ಗುರುಪಾದೋದಕವನೆದ್ದಿ ಎಳೆಯುವುದೆ ಕ್ರಿಯಾಪಾದೋದಕ.**
**ಜ್ಞಾನಪಾದೋದಕವೆಂದಡೆ,**
**ದಶಾಂಗುಲಿಗಳಲ್ಲಿ ದಶಪ್ರಣವ ಮಂತ್ರದಿಂದ ಭಸ್ಮದಿಂ ಲಿಖಿಸಿ,**
**ಷೋಡಶೋಪಚಾರದಿಂ ಪೂಜೆಯ ಮಾಡಿ,**
**ಎರಡಂಗುಲಿಯ ಮಧ್ಯದಲ್ಲಿ ಮೂರು ಸ್ಥಾನಂಗಳಲ್ಲಿ,**
**ಪಂಚಾಕ್ಷರಿ ಮಂತ್ರದಿಂದ ಎರೆಯುವುದೆ ಜ್ಞಾನಪಾದೋದಕ.**
**ಇಂತಪ್ಪ ಪಾದೋದಕತ್ರಯಂಗಳ ಸೇವಿಸಿ ಸುಖಿಸಬಲ್ಲಡೆ**
**ಆತನೆ ಪರಾತ್ಪರ ವಸ್ತು, ಕಪಿಲಸಿದ್ಧ ಮಲ್ಲಿಕಾರ್ಜುನದೇವಾ.**

ಸಕಲ ಓದುಗರಿಗೆ ಅರ್ಥವಾಗುವಂತೆ ಸ್ಪಷ್ಟವಾಗಿ ಬರೆದಿದ್ದಾರೆ. ಗುರುಪಾದೋದಕ, ಕ್ರಿಯಾಪಾದೋದಕ, ಜ್ಞಾನಪಾದೋದಕದ ಮೂರು ಬಗೆಯನ್ನು ವಿವರಿಸಿದ್ದಾರೆ. ಸಿದ್ಧರಾಮ ಶಿವಯೋಗಿಗಳು ಸ್ವತಃ ಕ್ರಿಯೆಯಲ್ಲಿ ತೊಡಗಿ ಅನುಭವಿಸಿ ಪರಮಾನಂದವನ್ನು ಹೊಂದಿ ರಚಿಸಿದ ಸೂತ್ರವಿದು.

ಓದುಗರು ಸಾಧಕರು ಈ ಮೂರು ಕ್ರಿಯೆಗಳಲ್ಲಿ ತೊಡಗಿ ಮೂರು ಪಾದೋದಕಗಳನ್ನು ಸೇವಿಸಿ ಸುಖಿಸಿ ಪರಾತ್ಪರ ವಸ್ತುವೇ ತಾವಾಗಬೇಕೆನ್ನುವ ಮಹಾಸೂತ್ರವಿದು.

ಪಠ್ಯ ಓದಿದಾಗ ಅಥವಾ ಉಪನ್ಯಾಸ ಕೇಳಿದಾಗ ಸಕಲ ಓದುಗರಿಗೂ ಕೇಳುಗರಿಗೂ ಅನುಭವಕ್ಕೆ ಬರುತ್ತದೆ. ಏಕೆಂದರೆ ಸತ್ಯ ವಸ್ತು ತಾನೇ ಆಗಿರುವುದರಿಂದ. ಆದರೂ ಮತ್ತೆ ಮತ್ತೆ ಮರೆವಿಗೆ ಹೋಗುತ್ತಾನೆ. ಪ್ರಯೋಗಕ್ಕೆ ಹೋಗಿ ತನಗೆ ತಾನೇ ಸಿದ್ಧನಾಗದ ಹೊರತು ಯಾವ ಮಹಾಸೂತ್ರಗಳು ಕೆಲಸಕ್ಕೆ ಬರುವುದಿಲ್ಲ.

ಎಡಗೈಯಿಂದ ಎರಡು ಪಾದಗಳ ಹಿಮ್ಮಡಿಗಳನ್ನು ಹಿಡಿದು ತನ್ನ ಬಲಗೈಯ ಐದು ಬೆರಳುಗಳನ್ನು ಉದಕದಲ್ಲಿ ಅದ್ದಿ ಪಾದಗಳೆರಡರ ಮೂಲಾಂಗುಲಿಗಳಿಗೆ ಮಂತ್ರದ ಮೂಲಕ ಎರೆಯುವುದೇ ಗುರುಪಾದೋದಕ.

ಪಾದಗಳೆರಡರ ಬೆರಳುಗಳಿಗೆ ಶಿವಶಕ್ತಿಯ ಪ್ರಣವ ಬರೆದು, ಭಸ್ಮವ ಧರಿಸಿ, ಕಂಗಳ ಮೂಲಕ ಭಕ್ತಿಯಿಂದ ಪಾದಗಳನ್ನು ನೋಡುತ್ತಾ ತನ್ನ ತರ್ಜನಿ ಬೆರಳುಗಳ ಮೂಲಕ ಮೂರು ವೇಳೆ ಪ್ರಣವ ಸಹಿತ ಪಂಚಾಕ್ಷರಿ ಮಂತ್ರದಿಂದ ಗುರುಪಾದೋದಕವನ್ನು ಎದ್ದಿ ಎಳೆಯುವುದೇ ಕ್ರಿಯಾಪಾದೋದಕ.

ಪಾದಗಳೆರಡರ ಹತ್ತು ಬೆರಳುಗಳಿಗೆ ದಶಪ್ರಣವ ಮಂತ್ರದಿಂದ ಭಸ್ಮವನ್ನು ಧರಿಸಿ,

ಷೋಡಶೋಪಚಾರದಿಂದ ಪೂಜೆಯನ್ನು ಮಾಡಿ, ಪಾದಗಳೆರಡರ ಎರಡು ಹೆಬ್ಬೆರಳುಗಳ ಮಧ್ಯದಲ್ಲಿ ಮೂರು ಸ್ಥಾನಗಳಲ್ಲಿ ಪಂಚಾಕ್ಷರಿ ಮಂತ್ರದಿಂದ ಎರೆಯುವುದೇ ಜ್ಞಾನಪಾದೋದಕ.

ಹೀಗೆ ಮೂರು ಪಾದೋದಕಗಳನ್ನು ಸೇವಿಸಿ ಸುಖಿಸಬಲ್ಲಾತನೆ ಪರಾತ್ಪರ ವಸ್ತು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಗುರುವಿನ ಪಾದಗಳಿಗೆ, ಮಠಾಧೀಶರ, ಸ್ವಾಮಿಗಳ ಪಾದಗಳಿಗೆ ಸಕಲರು ಹಣೆಮಣಿಯುವುದು ನೋಡಿದ್ದೇವೆ. ಇದು ಸಹಜ. ಎಲ್ಲೆಲ್ಲೂ ನೋಡಲು ಸಿಗುತ್ತದೆ. ಗುರು ಶಿಷ್ಯ ಪರಂಪರೆಯಲ್ಲಿ ಸಂಗೀತ ಕ್ಷೇತ್ರದಲ್ಲಿ ಕೂಡಾ ಇದು ಸಂಪ್ರದಾಯವಾಗಿ ಉಳಿದಿದೆ. ಇನ್ನುಳಿದ ಕ್ಷೇತ್ರಗಳಲ್ಲಿ ಇದು ಬಹುದೂರ.

ಪಾದ ಮುಟ್ಟಿ ನಮಸ್ಕರಿಸಿದರೆ ಸಾಕು, ಪಾದರಕ್ಷೆಗಳನ್ನು ಕೈಯಲ್ಲಿ ಹಿಡಿದು ಹಿರಿಯರಿಗೆ ಮೆಡುವಂತೆ ಸಹಕರಿಸಿದರೆ ಸಾಕು ಚಿತ್ರ ಸಹಿತ ಅಪಮಾನವೆನ್ನುವ ಮಾತುಗಳ ಮೂಲಕ ಮಾಧ್ಯಮಗಳಲ್ಲಿ ಪ್ರಕಟವಾಗುತ್ತದೆ.

ನೆತ್ತಿ ಪಾದ ಕೈಗಳು ಅಂಗದ ಒಂದು ಭಾಗವಲ್ಲವೆ? ಎಂದು ಯಾರಿಗೂ ಹೊಳೆಯುವುದಿಲ್ಲ. ಅಂಗದಲ್ಲಿ ಒಡಮೂಡಿದ ಅಹಂಕಾರದ ಈ ಅಜ್ಞಾನವನ್ನು ಕಳೆದುಕೊಳ್ಳುವುದಾದರೂ ಹೇಗೆ? ನೆತ್ತಿ ಮತ್ತು ಪಾದಗಳೆರಡೂ ಅಂಗದಲ್ಲಿ ಇಲ್ಲವೆ? ನೆತ್ತಿ ಶ್ರೇಷ್ಠವಾದರೆ, ನೆತ್ತಿಯಲ್ಲಿ ಮಾತ್ರ ಜ್ಞಾನವಿದೆ ಎಂದು ಹೇಳುವುದಾದರೆ, ತಾನು ಶ್ರೇಷ್ಠವೆಂಬ ಅಜ್ಞಾನ ಮತ್ತು ಅಹಂಕಾರವಾದರೂ ನೆತ್ತಿಯಲ್ಲಿ ಏಕೆ ಹುಟ್ಟಬೇಕು?

ಇಡೀ ಶರೀರದ ಭಾರವನ್ನು ಹೊರುವ ಪಾದ ಶೂದ್ರವೆ ಹೇಗೆ? ಶರೀರದ ಮೇಲ್ಭಾಗದಲ್ಲಿರುವ ನೆತ್ತಿಯಲ್ಲಿ ಮಾತ್ರ ಜ್ಞಾನವಿದೆಯೇ ಹೇಗೆ? ನೆತ್ತಿ ಬ್ರಹ್ಮ ಹೇಗೆ? ಪಾದ ಶೂದ್ರ ಹೇಗೆ? ಸಕಲ ಭಾಗಗಳು ಸೇರಿ ಸರ್ವಾಂಗವಾಗಿಲ್ಲವೆ? 'ಮುಳ್ಳು ಗುತ್ತುವುಡೆ ತೆರಹಿಲ್ಲದ ಘನ'ವೆಂದು ಶರಣರು ಹೇಳಿಲ್ಲವೆ? 'ಬಟ್ಟಿಡಲೆಡೆ ತೆರಹಿಲ್ಲದ ಘನ'ವೆಂದು ಜ್ಞಾನಿಗಳು ಹೇಳಿಲ್ಲವೆ?

ಸೂಜಿಯ ಮೊನೆ ಚುಚ್ಚಲು ಸಹಿತ ಸಂದಿಲ್ಲದಂತೆ ಸರ್ವಾಂಗದಲ್ಲಿ ಜ್ಞಾನ ಭರಿತವಾಗಿದೆ. ನೆತ್ತಿಯಲ್ಲಿ ಅಜ್ಞಾನದ ಅಹಂಕಾರ ಸಂಗ್ರಹವಾಗಿರುವುದರಿಂದ ಇಡೀ ಅಂಗವೇ ತೊಳಲಿ ಬಳಲಾಡುತ್ತದೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಅಯ್ಯಗಳ ಪಾದ ಎಂದು ಬಳಸಿದ್ದಾರೆ. ಅಯ್ಯಗಳೆಂದರೆ ಹಿರಿಯರು. ಹಿರಿಯರಾದರೇನು, ಕಿರಿಯರಾದರೇನು? ಪಾದಗಳು ಮಾತ್ರ ಒಂದೇ. ಗುರುವಿನ ಪಾದ ಹಿರಿಯರ ಪಾದ ಕಿರಿಯರ ಪಾದವೆಂದು ವಿಂಗಡಿಸುವಂತಿಲ್ಲ. ಪೂಜಿಸುವಾಗ ನೆತ್ತಿಗೆ ಪಾದಕಾಣಬೇಕೆ ಹೊರತು ನೆತ್ತಿಯಲ್ಲ. ನೆತ್ತಿಗೆ ನೆತ್ತಿ ಕಂಡರೆ, ನೆತ್ತಿ ನೋಡಿ ಮತ್ತೆ ನೆತ್ತಿಯಲ್ಲಿ ಕಿರಿಯ ಹಿರಿಯ ಶೂದ್ರ ಹೆಣ್ಣು ಗಂಡು ಶ್ರೀಮಂತ ಬಡವ ಎನ್ನುವ ಅಜ್ಞಾನದ ಅಹಂಕಾರ ಸುಳಿಯುತ್ತದೆ.

ನೆತ್ತಿ ಕಡಿಯುವ ವೈರಿ ಖಡ್ಗ ಹಿಡಿದು ಹತ್ತಿರ ಬಂದಾಗ ಆಪತ್ಕಾಲಕ್ಕೆ ತುತ್ತಾದ ನೆತ್ತಿ ಪಾದಕ್ಕೆ ಉರುಳಿದರೆ ಸಾಕು ಕೈಯಲ್ಲಿ ಹಿಡಿದ ಖಡ್ಗ ನೆಲಕ್ಕೆ ಉರುಳುತ್ತದೆ. ಕ್ರೌರ್ಯ ಮತ್ಸರ ದ್ವೇಷ ತುಂಬಿದ ನೆತ್ತಿಯಲ್ಲಿ ಕೂಡಲೇ ಅಂತಃಕರಣ ಹರಿಯುತ್ತದೆ. ನೆತ್ತಿಯ ಅಹಂಕಾರ ಪಾದ ಮುಟ್ಟಿದ ಕೂಡಲೇ ತೊಲಗುತ್ತದೆ. ಪಾದದಲ್ಲಿ ಜ್ಞಾನವಿದೆಯೋ ಅಥವಾ ನೆತ್ತಿಯಲ್ಲಿ ಜ್ಞಾನವಿದೆಯೊ ಎಂದು ಒಮ್ಮೆ ಆಲೋಚನೆ ಮಾಡಿದರೆ ತನಗೆ ತಾನೇ ಹೊಳೆಯುತ್ತದೆ.

ಸರ್ವಾಂಗದಲ್ಲಿಯೂ ಜ್ಞಾನ ಭರಿತವಾಗಿದೆ. ಜ್ಞಾನವಿಲ್ಲದ ಜಾಗ ಯಾವುದೂ ಇಲ್ಲ.

ಸರ್ವರಿಗೂ ತಿಳಿಯಲೆಂದು ಪಾದಕ್ಕೆ ಒತ್ತುಕೊಟ್ಟರು. ಪಾದಗಳನ್ನು ಶ್ರೀಪಾದ ಎಂದು ಕರೆದರು. ನೆತ್ತಿಯನ್ನು ಮುಕುಟ ಎಂದು ಕರೆದರು. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ, ಪಾತಾಳದಿಂದತ್ತತ್ತ ನಿಮ್ಮ ಶ್ರೀಪಾದ. ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮವಾದ ಮಹಾಜ್ಞಾನ ಸರ್ವಾಂಗದಲ್ಲಿ ಚುಳುಕಾಗಿದೆ.

**490**

**ಗುರುಪಾದೋದಕ ಸಕಲಕ್ರಿಯೆಗಳಿಗೆ ಬರುವುದು.**
**ಕ್ರಿಯಾಪಾದೋದಕ ಭಸ್ಮಶುದ್ಧತೆಗೆ ಬರುವುದು.**
**ಜ್ಞಾನಪಾದೋದಕ ಅರ್ಪಣಗೈಯುವುದಕ್ಕೆ ಬರುವುದು ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಜ್ಞಾನೋದಕವು ಅಂಗವನ್ನು ಆವರಿಸಿದ ಮನವೆಂಬ ಮರೆವಿನ ಸಕಲ ಅಜ್ಞಾನವನ್ನು ತೊಳಗಿ ಬೆಳಗಲು ಬರುವುದು.

ಜಂಗಮ, ಗುರುಪಾದೋದಕವನ್ನು ಬಳಸಿದಡೆ ಅದು ಕ್ರಿಯಾಪಾದೋದಕವಾಗುವುದು. ಸೆಗಣಿ ಒಣಗಿ ಕರುಳಾದಾಗ ಅದಕ್ಕೆ ಅಗ್ನಿ ತಾಗಿದರೆ ತಂತಾನೆ ಭಸ್ಮವಾಗುವುದು. ಭಸ್ಮದಲ್ಲಿ ಸೆಗಣಿಯ ಅಂಶ ಹುಡುಕಿದರೂ ಸಿಕ್ಕುವುದಿಲ್ಲ. ಹಾಗೆಯೇ ಅಂಗದಲ್ಲಿಯೇ ಹುಟ್ಟಿದ ಅಜ್ಞಾನವನ್ನು ಕ್ರಿಯಾಪಾದೋದಕವೆಂಬ ಜ್ಞಾನಾಗ್ನಿ ತಾಕಿದಾಗ ಅಜ್ಞಾನವೆಂಬ ಸೆಗಣಿ ಸುಟ್ಟು ಭಸ್ಮವಾಗುವುದು. ಭಸ್ಮಕಾಯವಾಗುವುದು.

ಗುರುಪಾದೋದಕ ಮತ್ತು ಕ್ರಿಯಾಪಾದೋದಕಗಳು ಅಂಗವನ್ನು ಅಜ್ಞಾನದಿಂದ ದೂರೀಕರಿಸಿ ಸರ್ವಾಂಗವನ್ನು ಶುದ್ಧ ಮಾಡುತ್ತದೆ.

ಜ್ಞಾನಪಾದೋದಕವು ಮತ್ತೊಂದು ಅಂಗಕ್ಕೆ ಅರ್ಪಣಗೈಯುವುದಕ್ಕೆ ಬರುತ್ತದೆ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಜ್ಞಾನಲಿಂಗಯ್ಯನ ಸಂಗ ಮಾಡುವುದನ್ನು ಬಿಟ್ಟು ಅಂಗದ ಸಂಗ ಮಾಡಿದೆ. ಹೀಗಾಗಿ ಮನ ಅಂಗವನ್ನು ತನ್ನಿಚ್ಛೆ ಬಂದೆಡೆಗೆ ಕರೆದುಕೊಂಡು ಹೋಗುತ್ತದೆ.

ಮನವೆಂದರೆ ಮರ್ಕಟವಿದ್ದಂತೆ. ಮನದ ಕೈಯಲ್ಲಿ ಮಾಣಿಕ್ಯವಿದ್ದರೆ ಅದು ಸದ್ಬಳಕೆಯಾಗಲು ಸಾಧ್ಯವಿಲ್ಲ. ಅಂಗದೊಂದಿಗೆ ತನ್ನದೇ ಆದ ಸೃಷ್ಟಿಯಲ್ಲಿ ತೊಡಗುತ್ತದೆ. ಅಂಗದಲ್ಲಿಯೇ ಸಂಗಮವಾದ ಜ್ಞಾನದೆಡೆಗೆ ಪಯಣಿಸುವುದನ್ನು ಬಿಟ್ಟು ಸಕಲ ಅಜ್ಞಾನ ಕೆಲಸಗಳಲ್ಲಿ ಅಂಗವನ್ನು ತೊಡಗಿಸಿಕೊಳ್ಳುತ್ತದೆ. ಎಲ್ಲಿಯವರೆಗೆ ಮನ ಜ್ಞಾನದೆಡೆಗೆ ಪಯಣಿಸುವುದಿಲ್ಲವೊ ಅಲ್ಲಿಯವರೆಗೆ ಅದು ಮರ್ಕಟವೇ ಆಗಿರುತ್ತದೆ. ಜ್ಞಾನದ ದಾರಿ ಗೊತ್ತಾಗುವುದೊಂದೇ ತಡ ಜ್ಞಾನದತ್ತ ಪಯಣಿಸಿ ಮನವೆಂಬ ಮರ್ಕಟ ಆಂಜನೇಯನೇ ತಾನಾಗುತ್ತದೆ.

ಜ್ಞಾನಪಾದೋದಕ ಮನವೆಂಬ ಮರ್ಕಟವನ್ನು ಅರ್ಪಣಾ ಭಾವದಿಂದ ಕೈಹಿಡಿದು ಅರಿವೆಂಬ ಗುರುದೇವನಿದ್ದ ಜಾಗಕ್ಕೆ ಕರೆದುಕೊಂಡು ಹೋಗಿ ಆತನ ಚರಣ ಕಮಲಗಳಿಗೆರಗುವಂತೆ ಮಾಡುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನನ್ನಾಗಿಸುತ್ತದೆ.

491

**ಗುರುವಾಕ್ಯದಿಂದ ನಾರದನಿಗನಂತ ಜನ್ಮ ಪ್ರಳಯವಾಯಿತ್ತು .**
**ಗುರುವಾಕ್ಯದಿಂದ ಚಿದ್ಘನ ಶಿವಾಚಾರ್ಯರಿಗೆ ಬೋಧರತ್ನ ದೊರಕಿತ್ತು .**
**ಗುರುವಾಕ್ಯದಿಂದ ಮಳೆಯ ಮಲ್ಲೇಶಂಗೆ**
**ಪಾತಾಳ ಪದಾರ್ಥ ಸಿದ್ಧಿಯಾಯಿತ್ತು .**
**ಗುರುವಾಕ್ಯದಿಂದ ವೀರಸೇನರಿಗೆ ರಣಭೂಮಿ ಕಂಪಿಸಿತ್ತು .**
**ಗುರುವಾಕ್ಯದಿಂದ ಅನಂತ ಜನರಿಗೆ ಅನಂತ ಫಲಗಳಾದವು.**
**ಗುರುವಾಕ್ಯದಿಂದ ಪ್ರಮಥರ ಮನೆಯಲ್ಲಿ ಪರಮಾತ್ಮ ಸಂಚರಿಸಿದನು.**
**ಗುರುವಾಕ್ಯದಿಂದ ಆ ಸಿದ್ಧರಾಮನಿಗೆ**
**ಅಘೋರಮೂರ್ತಿ ಪ್ರಾಪ್ತವಾಯಿತ್ತು. ಇದು ಕಾರಣ**
**ಗುರುವೆ ಘನವೆಂದು ಗುರುವಾಗಿ ಗುರುಪೂಜೆಯ ಮಾಡಬೇಕಲ್ಲದೆ**
**ಗುರುಸಮ್ಮುಖದಲ್ಲಿ ಗದ್ದುಗೆಯನೇರಿದಡೆ,**
**ಕಪಿಲಸಿದ್ಧ ಮಲ್ಲಿಕಾರ್ಜುನ ಕರಸಿತಗ, ಕೇಳಾ ನಿಜಗುಣಯ್ಯಾ.**

ಸಿದ್ಧರಾಮ ಶಿವಯೋಗಿಗಳು ನಿಜಗುಣಯ್ಯನವರಿಗೆ ಗುರುದೇವನ ವೃತ್ತಾಂತವನ್ನು ಹೇಳಿದ್ದಾರೆ. ಶಿಷ್ಯ ಗುರುದೇವನೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಹೇಳಿದ್ದಾರೆ. ಗುರುದೇವನೆಂದರೆ ಸಾಮಾನ್ಯನಲ್ಲ. ಶಿಷ್ಯನನ್ನು ಗುರುದೇವನನ್ನಾಗಿ ಮಾಡುವಾತ. ತನ್ನ ವಾರಸುದಾರನನ್ನಾಗಿ ಮಾಡಿಕೊಳ್ಳುವಾತ.

ತಂದೆ ತಾಯಿಗಳಿಗೆ ಮಕ್ಕಳ ಮೇಲೆ ಭೇದಜ್ಞಾನ ಹುಟ್ಟುತ್ತದೆ. ಮಕ್ಕಳನ್ನು ಕೊಂದ ತಂದೆ ತಾಯಿಗಳುಂಟು. ತಂದೆ ತಾಯಿಗಳನ್ನು ಕೊಂದ ಮಕ್ಕಳುಂಟು. ಹಡೆದ ತಂದೆ ತಾಯಿಗಳಲ್ಲಿ ಮಕ್ಕಳಲ್ಲಿ ಭೇದಜ್ಞಾನ ಮನೆಮಾಡಿಕೊಂಡಿರುತ್ತದೆ. ಆದರೆ ಗುರುದೇವ ಎಳ್ಳಷ್ಟು ಕೂಡಾ ಶಿಷ್ಯನ ಮೇಲೆ ಭೇದ ಮಾಡುವುದಿಲ್ಲ. ಆತ ತನ್ನ ಸ್ವಸ್ವರೂಪನೆ ಆಗಿದ್ದಾನೆ ಎಂದು ತಿಳಿಯುತ್ತಾನೆ.

ತಂದೆ ತಾಯಿಗಳು ಮಕ್ಕಳಿಗೆ ಭೌತಿಕ ಪಾಲು ಕೊಡುತ್ತಾರೆ. ಅದು ತಮ್ಮನ್ನು ನೋಡಿಕೊಳ್ಳುವವರಿಗೆ ಮಾತ್ರ. ಗುರುದೇವ ಹಾಗಲ್ಲ. ತನ್ನ ಆಂತರಿಕ ಜ್ಞಾನಸಂಪತ್ತನ್ನು ಶಿಷ್ಯನಿಗೆ ಸಂಪೂರ್ಣವಾಗಿ ಧಾರೆ ಎರೆಯುತ್ತಾನೆ. ಹೀಗಾಗಿ ಶಿಷ್ಯ ಗುರುದೇವನ ವಾರಸುದಾರ.

ತನ್ನ ಅಂತರಂಗದ ಸಂಪತ್ತನ್ನು ತನಗೆ ಪರಿಪೂರ್ಣವಾಗಿ ತೋರುವ ಗುರುದೇವನ ಸೇವೆಯನ್ನು ಶಿಷ್ಯ ಮಾಡಲೇಬೇಕು. ಆತನಿಗೆ ದಾಸಾನು ದಾಸನಾಗಬೇಕು. ಆತನಿಗೆ ಶರಣು ಹೋಗಬೇಕು. ಗುರುದೇವನಿಗೆ ಸಂಪೂರ್ಣ ಶರಣು ಹೋದವನೇ ಶರಣನಾಗುತ್ತಾನೆ. ದಾಸಾನು ದಾಸನಾದವನೆ ದಾಸ ಎಂಬ ಬಿರುದು ಪಡೆಯುತ್ತಾನೆ.

ಗುರುದೇವ ಕರುಣಾಮೂರ್ತಿ. ನಾರದನ ಅಜ್ಞಾನದ ಅನಂತ ಜನ್ಮಗಳನ್ನು ಪ್ರಳಯ ಮಾಡಿದ. ಚಿದ್ಘನ ಶಿವಾಚಾರ್ಯರಿಗೆ ಭೋದ ಮಾಡಿ ಜ್ಞಾನರತ್ನವನ್ನೇ ನೀಡಿದ. ಮಳೆಯ ಮಲ್ಲೇಶನಿಗೆ ಪಾತಾಳ ಪದಾರ್ಥ ಸಿದ್ಧಿಯಾಯಿತು. ವೀರಸೇನನಿಗೆ ಗುರುವಾಕ್ಯದಿಂದ ರಣಭೂಮಿ ಕಂಪಿಸಿತ್ತು. ಅಂಗವೇ ಒಂದು ರಣಭೂಮಿ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ತನ್ನದೇ ಆದ ವೈರಿಗಳು ತನಗೇ ಮುತ್ತಿಗೆ ಹಾಕಿದ್ದಾರೆ. ಸಪ್ತವ್ಯಸನಗಳಿಂದ

ಅಷ್ಟಮದಗಳಿಂದ ಕಾಲುಕೆದರಿ ತನ್ನೊಂದಿಗೆ ಯುದ್ಧಕ್ಕೆ ಸನ್ನದ್ಧರಾಗಿ ಅಂಗವನ್ನೇ ರಣರಂಗವನ್ನಾಗಿಸಿದ್ದಾರೆ. ಗುರುವಾಕ್ಯದಿಂದ ತನ್ನದೇ ಆದ ರಣಭೂಮಿ ಗಡಗಡನೇ ನಡುಗಿತ್ತು.

ಗುರುವಾಕ್ಯದಿಂದ ಅನಂತ ಜನರಿಗೆ ಅನಂತ ಫಲಗಳಾದವು. ಗುರುವಾಕ್ಯದಿಂದಾಗಿ ಪ್ರಮಥರ ಮನೆಯಲ್ಲಿ ಪರಮಾತ್ಮ ಸಂಚರಿಸಿದನು. ನಿಜಗುಣಯ್ಯನೇ ಗುರುವಾಕ್ಯದಿಂದಾಗಿ ಈ ಸಿದ್ಧರಾಮನಿಗೆ ಅಘೋರಮೂರ್ತಿ ಪ್ರಾಪ್ತವಾಯಿತು.

ಗುರುವೇ ಘನನೆಂದು ಗುರುವಾಗಿ ಗುರುಪೂಜೆಯ ಮಾಡಬೇಕಲ್ಲದೆ ಗುರುಸಮ್ಮುಖದಲ್ಲಿ ಗದ್ದುಗೆಯನೇರಿದಡೆ ಕಪಿಲಸಿದ್ಧ ಮಲ್ಲಿಕಾರ್ಜುನ ಕರಸಿತಗ ಕೇಳಾ ನಿಜಗುಣಯ್ಯಾ :

ಶಿಷ್ಯನಾಗಿ ಗುರುದೇವನನ್ನು ಪೂಜಿಸುವ ವಿಧಾನವನ್ನು ಗುರುದೇವ ಹೇಳಿಕೊಡುವುದಿಲ್ಲ. ಶಿಷ್ಯನೇ ಆ ಕಲೆಯನ್ನು ಕರಗತ ಮಾಡಿಕೊಂಡಿರಬೇಕು. ಶಿಷ್ಯನ ಭಕ್ತಿಯು ಮೆಚ್ಚಿಗೆಯಾದರೆ ಗುರುದೇವ ಶಿಷ್ಯನನ್ನು ಗುರುದೇವನನ್ನಾಗಿಸುತ್ತಾನೆ. ಗುರುವಾಗಿ ಗುರುದೇವನನ್ನು ಹೇಗೆ ಪೂಜಿಸಬೇಕೆಂಬುದನ್ನು ಹೇಳುತ್ತಾನೆ.

ಶಿಷ್ಯನಾದವನು ಗುರುದೇವನ ಸಮ್ಮುಖದಲ್ಲಿಯೇ ಗುರುದೇವನ ಸರಿಸಮಾನವಾಗಿ ಕುಳಿತುಕೊಂಡರೆ ಅವನಿಗೆ ಶಿಷ್ಯನಾಗುವ ಅರ್ಹತೆ ಇಲ್ಲವೆಂದು ತಿಳಿದು ಉದಾಸೀನ ಮಾಡುತ್ತಾನೆ. ಪ್ರತಿ ದೇಹದಲ್ಲಿ ಗುರುದೇವನಿದ್ದಾನೆ. ಅವನನ್ನು ಕಂಡುಕೊಳ್ಳಬೇಕೆಂಬ ಬಯಕೆ ಉಂಟಾದಲ್ಲಿ ಫಲಭರಿತ ರೆಂಬೆಯಂತೆ ನೆತ್ತಿ ತಂತಾನೆ ಬಾಗುತ್ತದೆ. ಶಿಷ್ಯನಿಗೆ ಗುರುದೇವನನ್ನು ಕಂಡುಕೊಳ್ಳುವ ಆಸಕ್ತಿಯೇ ಇಲ್ಲದಿದ್ದರೆ ಅವನು ಲೌಕಿಕ ಶಿಷ್ಯ. ಲೌಕಿಕ ಶಿಷ್ಯನಿಗೆ ಲೌಕಿಕ ಗುರು ದೊರೆಯುತ್ತಾನೆ. ಲೌಕಿಕ ಗುರುದೇವನಿಗೆ ಮಠ ಮಂದಿರ ಉತ್ಸವ ವಾಹನಾದಿಗಳು ಬೇಕು. ಅವುಗಳನ್ನು ಲೌಕಿಕ ಶಿಷ್ಯ ಪೂರೈಸುತ್ತಾನೆ.

ಗುರುದೇವನಲ್ಲಿ ಅಂತರಂಗದ ಜ್ಞಾನ ಬೇಡುವ ಶಿಷ್ಯನಾಗಿ ಹೋಗಬೇಕು. ಗುರುದೇವ ಅಂತರಂಗದ ಜ್ಞಾನವನ್ನು ಧಾರೆಯೆರೆಯುವ ಧನಿಕ. ಶಿಷ್ಯ ಬೇಡುವ ಭಿಕ್ಷುಕ. ಲೌಕಿಕ ಗುರುದೇವ ಭಿಕ್ಷುಕ. ಆತನಿಗೆ ಭೌತಿಕ ಪದಾರ್ಥಗಳನ್ನು ನೀಡುವ ಶಿಷ್ಯ ಧನಿಕ. ಇವರಿಬ್ಬರೂ ಗುರುದೇವನ ದೃಷ್ಟಿಯಲ್ಲಿ ಭಿಕ್ಷುಕರೇ ಆಗಿದ್ದಾರೆ.

**492**

**ಗುರುವಿಂಗಾದಡೆಯೂ ಬಸವಣ್ಣನೇ ಬೇಕು;**
**ಲಿಂಗಕ್ಕಾದಡೆಯೂ ಬಸವಣ್ಣನೇ ಬೇಕು;**
**ಜಂಗಮಕ್ಕಾದಡೆಯೂ ಬಸವಣ್ಣನೇ ಬೇಕು.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿಮಗೂ ಎನಗೂ ನಿಮ್ಮ ಶರಣರಿಗೂ ಬಸವಣ್ಣನೆ ಬೇಕು.**

ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ತನುವನ್ನು ಆವರಿಸಿದ ಮನ ಘನಮನವಾಗಿ ದಾಖಲಿಸುತ್ತಾ ಬಂದಿದೆ. ವೇದ ಆಗಮ ಉಪನಿಷತ್‌ಗಳ ಮೂಲಕ, ಭಗವದ್ಗೀತೆ ಭಾಗವತಗಳ ಮೂಲಕ, ಪುರಾಣಗಳ ಮೂಲಕ, ರಾಮಾಯಣ ಮಹಾಭಾರತಗಳ ಮೂಲಕ, ಬುದ್ಧ ಮಹಾವೀರ ಬಸವಾದಿ ಪ್ರಮಥರ ಮೂಲಕ, ದಾಸವರೇಣ್ಯರ ಮೂಲಕ, ಕ್ರಿಸ್ತ ಪೈಗಂಬರರ ಮೂಲಕ, ತತ್ವ

ಪದಕಾರರ ಮೂಲಕ, ಜಿಡ್ಡು ಕ್ರಿಷ್ಣಮೂರ್ತಿ ಓಷೊ ಮೂಲಕ ಜ್ಞಾನ ಆವಿಷ್ಕಾರ ಆಗುತ್ತಲೆ ಬಂದಿದೆ.

ತನುವಿನಲ್ಲಿ ತನ್ಮಯವಾದ ಜ್ಞಾನ ಇದ್ದಂತೆಯೇ ಇದೆ. ಅದನ್ನು ಸರಿಪಡಿಸಲು ಬರುವುದಿಲ್ಲ. ಹೆಚ್ಚು ಕಡಿಮೆ ಮಾಡಲು ಬರುವುದಿಲ್ಲ. ತನುವಿನಲ್ಲಿ ಇದ್ದ ಜ್ಞಾನವನ್ನು ತನುವನ್ನು ಆವರಿಸಿದ ಮನ ತಿಳಿಯುವದರಲ್ಲಿ ವ್ಯತ್ಯಾಸವಾಗಿದೆ. ದೂರವೆಂದು ಸಮೀಪವೆಂದು ಮನ ನಿರ್ಧರಿಸಿದೆ. ಪರಿಪೂರ್ಣವಾಗಿ ನೋಡಲು ನೋಡಿ ಆ ಜ್ಞಾನವೇ ತಾನಾಗಲು ಮನಕ್ಕೆ ಸಾಧ್ಯವಾಗಿಲ್ಲ.

ಹೀಗಾಗಿ ಮನ ಜ್ಞಾನವನ್ನು ಕೂಡಿ ಜ್ಞಾನವೇ ತಾನಾಗುವುದನ್ನು ಬಿಟ್ಟು, ಜ್ಞಾನ ಹೀಗೆಂದು ದಾಖಲಿಸಿದ ಮಹನೀಯರಿಗೆ ಅನುಯಾಯಿ ಆಗಿದೆ.

ವರ್ಧಮಾನನೆಂಬ ಮನ ಮಹಾವೀರನಾದ. ವರ್ಧಮಾನ ಮಹಾವೀರನಲ್ಲಿ ಕಳೆದು ಹೋದ. ಸಿದ್ಧಾರ್ಥ ಬುದ್ಧನಲ್ಲಿ ಕಳೆದು ಹೋದ. ಮಹಾವೀರ ಬುದ್ಧ ಒಬ್ಬ ವ್ಯಕ್ತಿಯಲ್ಲ. ವ್ಯಕ್ತಿಗಳೇ ಆಗಿದ್ದ ಅವರು ತಮ್ಮದೇ ಆದ ಅವ್ಯಕ್ತ ಜ್ಞಾನ ಶಕ್ತಿಯಲ್ಲಿ ಕಳೆದು ಹೋದರು. ಹಾಗೆ ಅವರಂತೆ ಸರ್ವರು ತಮ್ಮ ದೇಹದಲ್ಲಿದ್ದ ಶಕ್ತಿಯಲ್ಲಿ ತಾವೇ ಕಳೆದು ಹೋಗಿ ಆ ಶಕ್ತಿಯನ್ನು ಬಳಕೆ ಮಾಡಲು ಬರುತ್ತದೆ. ಆದರೆ

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಅವ್ಯಕ್ತ ಶಕ್ತಿಯನ್ನು ಬಳಕೆ ಮಾಡುವುದು ಬಿಟ್ಟು ಬುದ್ಧ ಮಹಾವೀರ ಬಸವಾದಿ ಶರಣರನ್ನು ದಾಸವರೇಣ್ಯರನ್ನು ಕ್ರಿಸ್ತ ಕ್ರಿಷ್ಣ ಪೈಗಂಬರರನ್ನು ಆರಾಧಿಸುತ್ತದೆ. ಅವರಿಗೆ ಬಸದಿ ಸ್ಥೂಪ ಚರ್ಚ್ ಆಲಯಗಳನ್ನು ನಿರ್ಮಿಸುತ್ತದೆ.

ಬೌದ್ಧ ಜೈನ ಇಸ್ಲಾಂ ಕ್ರೈಸ್ತ ಹಿಂದು ಎನ್ನುವ ಮಹಾರೋಗದಿಂದ ಮನ ತನುವಿನೊಂದಿಗೆ ಬಳಲುತ್ತದೆ. ತನುವಿನಲ್ಲಿ ಸಂಗಮವಾದ ಜ್ಞಾನ ತನಗೆ ಬೇಕೆನ್ನುವ ಬಯಕೆ ಮನಕ್ಕೆ ಹುಟ್ಟಬೇಕೆ ಹೊರತು ತಾನು ಮುಸ್ಲಿಂನಾಗಬೇಕು ಕ್ರೈಸ್ತನಾಗಬೇಕು ಹಿಂದು ಆಗಬೇಕು ಎನ್ನುವುದಲ್ಲ.

ಮುಸ್ಲಿಂಮನಿಗಾದರೂ ಜ್ಞಾನಬೇಕು, ಹಿಂದುವಿಗಾದರೂ ಜ್ಞಾನಬೇಕು. ಕ್ರೈಸ್ತನಿಗಾದರೂ ಜ್ಞಾನಬೇಕು. ಜೈನನಿಗಾದರೂ ಜ್ಞಾನಬೇಕು. ಈ ಎಲ್ಲ ಧರ್ಮದವರು ದೇಹ ಉಳ್ಳವರೇ ಆಗಿದ್ದಾರೆ. ದೇಹದ ಧರ್ಮವೆಂದರೆ ಜ್ಞಾನ. ದೇಹವನ್ನು ಆವರಿಸಿದ ಮನಕ್ಕೆ ಜ್ಞಾನದ ಬಯಕೆ ಆಗಬೇಕು. ಸರಕಾರ ಸಮಾಜದಲ್ಲಿ ಜ್ಞಾನ ಪಡೆಯಲೇಬೇಕೆಂಬ ವಾತಾವರಣ ಮೂಡಬೇಕು.

ಶಿಲುಬೆ ಧರಿಸಿದ ಪೋಪನಿಗೆ, ಗಡ್ಡಬಿಟ್ಟ ಮೌಲ್ವಿಗೂ, ಲಿಂಗ ಧರಿಸಿದ ಲಿಂಗಾಯತನಿಗೂ, ಜನಿವಾರ ಧರಿಸಿದ ಬ್ರಾಹ್ಮಣನಿಗೂ ಜ್ಞಾನ ಬೇಕೇಬೇಕು. ಅವು ಅಂಗದ ಮೇಲೆ ಧರಿಸಿದರೆ ಜ್ಞಾನ ಕೈವಶವಾಗುತ್ತದೆ ಎಂದೇನೂ ಇಲ್ಲ. ಜ್ಞಾನವೆಂದರೆ ಅರಿವು. ಆ ಅರಿವೇ ಗುರು.

ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿಯೇ ತನ್ಮಯವಾದ ಗುರುದೇವನಿಗೆ ಬಸವಣ್ಣ ಎಂದು ಹೆಸರಿಟ್ಟು ಕರೆದಿದ್ದಾನೆ. ಸಿದ್ಧಾರ್ಥ ಬುದ್ಧನೆಂದು ಕರೆದಂತೆ. ವರ್ಧಮಾನ ಮಹಾವೀರನೆಂದು ಕರೆದಂತೆ.

ಸಿದ್ಧಾರ್ಥನೊಬ್ಬನೆ ಬುದ್ಧನಲ್ಲ; ವರ್ಧಮಾನನೊಬ್ಬನೆ ಮಹಾವೀರನಲ್ಲ. ಭೂಮಿಯ ಮೇಲೆ ಜನ್ಮ ತಳೆದ ಪ್ರತಿ ತನುವಿನಲ್ಲಿಯೂ ಜ್ಞಾನವಿದೆ. ಆ ಜ್ಞಾನವೇ ಬುದ್ಧ, ಮಹಾವೀರ, ಬಸವಣ್ಣನಂತೆ ಪ್ರತಿ ತನುವಿನಲ್ಲಿಯೂ ಬೆಳಗುತ್ತಲಿದೆ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ನಿಮಗೂ ಎನಗೂ ನಿಮ್ಮ ಶರಣರಿಗೂ ಬಸವಣ್ಣನೆ ಬೇಕು ಎಂದಿದ್ದಾರೆ.

**493**

**ಗುರುವಿಂದನ್ಯ ದೈವವಿಲ್ಲೆಂಬುದಕ್ಕೆ ಆಗಮವಾಣಿಯ ಸಾಕ್ಷಿ.**

**ಅದೆಂತೆಂದಡೆ: ''ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ !**
**ಗುರುದೇವಾತ್ಪರಂ ನಾಸ್ತಿ ತಸ್ಮೈ ಶ್ರೀಗುರುವೇ ನಮಃ ॥**
**ಗುರುಃಶಂಭುರ್ಗುರುಜ್ಞಾನಂ ಗುರುರ್ಮಾತಾ ಗುರುಃ ಪಿತಾ ।**
**ಗುರುರ್ಬಂಧುರ್ಗುರುಃ ಸಾಕ್ಷಾದ್ದೇವತಾ ಗಣಪುಂಗವಃ ॥**
**ಅನುಷ್ಠಾನಾಧಿಕಾಂ ಪೂಜಾಂ ಯಃ ಕರೋತಿ ಗುರುಂ ವಿನಾ ।**
**ಯಾತಿ ನೀಚಾನಿ ಜನ್ಮಾನಿ ತಸ್ಮಾದ್ಗುರುವರಂ ಭಜೇತ್ ॥**
**ಷಣ್ಮಾಸೇ ವ್ಯಾಪಿ ವರ್ಷೇ ವಾ ವರ್ಷೇ ವಾ ದ್ವಾದಶಾತ್ಮಕೇ ।**
**ಗುರೋರಾಲೋಕನಂ ಯಸ್ತು ನ ಕರೋತಿ ಸ ಪಾಪವಾನ್ ॥**
**ಎಂಬುದೇ ಪ್ರಮಾಣವಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ಗುರುದೇವನಿಗಿಂತ ಅನ್ಯ ದೈವವಿಲ್ಲ ಎಂಬುದಕ್ಕೆ ಸಿದ್ಧರಾಮ ಶಿವಯೋಗಿಗಳು ಆಗಮ ಸಾಕ್ಷಿಯನ್ನು ನೀಡಿದ್ದಾರೆ.

ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ ಅಂದರೆ ಗುರುದೇವನೇ ಮಹಾದೇವ. ಗುರುದೇವನೆಂದರೆ ಅಂಗದಲ್ಲಿಯೇ ಸಂಗಮವಾದ ಅರಿವೇ ಗುರು. ಆತ ಅಂಗವನ್ನು ಆವರಿಸಿದ ಮನಕ್ಕೆ ಕ್ಷಣಕ್ಷಣಕ್ಕೂ ಪಾಠ ಮಾಡುತ್ತಾನೆ. ಆ ಗುರುದೇವನ ಪಾಠ ಕೇಳಿದ ಮನವೇ ಘನಮನವಾಗುತ್ತದೆ.

ಶಿವಪಥವನು ಅರಿವಡೆ ಗುರುಪಥ ಮೊದಲು ಎಂದು ಬಸವಣ್ಣನವರು ಹೇಳಿದ್ದಾರೆ. ಲೋಕಕ್ಕೆ, ಲೋಕ ಮಾಡಿದ ದೇವರು ಗೊತ್ತು. ಹೀಗಾಗಿ ಲೋಕ ತಾನು ಮಾಡಿದ ದೇವರನ್ನೇ ತಾನು ಪೂಜಿಸುತ್ತದೆ. ಲೋಕವನ್ನು ಸೃಷ್ಟಿ ಮಾಡಿದ ದೇವರನ್ನು ಲೋಕ ಮರೆಯುತ್ತದೆ.

ದೇಶವೆಂದರೆ ದೇಹಗಳಿಂದ ಭರಿತವಾದದ್ದು. ದೇಶವೆಂದರೆ ಮಣ್ಣಲ್ಲ. ದೇಹವನ್ನೇ ದೇಶ, ಪುರ, ಪಟ್ಟಣವೆಂದು ತತ್ವವೇತ್ತರು ಕರೆದಿದ್ದಾರೆ. ದೇಹವೆಂಬುದು ದೇವಾಲಯ. ಆ ದೇವಾಲಯದಲ್ಲಿ ಅರಿವೆಂಬ ಗುರುದೇವನು ವಾಸವಾಗಿದ್ದಾನೆ. ದೇಹವನ್ನು ಮನ ಆವರಿಸಿದೆ. ಆ ಮನವೇ ಶಿಷ್ಯನಾಗಿ ಅರಿವೆಂಬ ಗುರುದೇವನನ್ನು ಆರಾಧಿಸಬೇಕು; ಪೂಜಿಸಬೇಕು. ಈ ಗುರುದೇವನನ್ನೇ ಮಹಾದೇವ ಎಂದು ಆಗಮಗಳು ಕರೆದಿವೆ. ಈ ಮಹಾದೇವನನ್ನೇ ಸದಾಶಿವ ಎಂದು ಕರೆದಿದ್ದಾರೆ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮನಾಗಿದ್ದಾನೆ.

ಮನಕ್ಕೆ ಅರಿವೆಂಬ ಗುರುದೇವನ ದರುಶನವಾಗದಿದ್ದರೆ ಅದು ದೇಹದೊಂದಿಗೆ ಸಂಗ ಮಾಡಿ ಸಾವಿರಾರು ದೇವರನ್ನು ಆರಾಧಿಸುತ್ತದೆ; ಪೂಜಿಸುತ್ತದೆ. ಹಾಗೆ ಪೂಜಿಸುವ ದೇವರುಗಳೆಲ್ಲ ದೇಹದಿಂದಲೇ ರಚನೆಯಾದ ದೇವರುಗಳಾಗಿದ್ದಾರೆ.

ದೇಹದಿಂದ ದೇವರನ್ನು ಸೃಷ್ಟಿ ಮಾಡಿ ಅದಕ್ಕೊಂದು ಆಲಯ ಸೃಷ್ಟಿ ಮಾಡಿ ಆ ದೇವರಿಗೊಂದು ಹೆಣ್ಣು ದೇವರನ್ನು ಸೃಷ್ಟಿ ಮಾಡಿ, ದೇಹದಿಂದಲೇ ಸೃಷ್ಟಿ ಮಾಡಿದ ದೇವರನ್ನು ದೇಹದ ಮೂಲಕ ಆರಾಧಿಸಿದರೆ ದೇಹದ ಅಜ್ಞಾನ ನಷ್ಟವಾಗಲು ಸಾಧ್ಯವೆ? ಸಾಧ್ಯವೇ ಇಲ್ಲ. ಏಕೆಂದರೆ ದೇಹದಿಂದ ದೇವರನ್ನು ಮಾಡುವುದು ಅದಕ್ಕೆ ದೇವಾಲಯ ಕಟ್ಟುವುದು, ಚಿನ್ನದ ಕಳಶ ಆಭರಣಗಳನ್ನು ತೊಡಿಸಿ ಪಟ್ಟುಪೀತಾಂಬರಗಳನ್ನು ಉಡಿಸಿ ಆರಾಧಿಸುವದು ದೇಹದ ಅಜ್ಞಾನವೇ ಆಗಿದೆ.

ದೇಹದಲ್ಲಿ ಸಂಗಮವಾದ ಅರಿವೆಂಬ ಗುರುದೇವ ಇದಕ್ಕೆ ಆಸ್ಪದ ಕೊಡುವುದಿಲ್ಲ.

ಹೀಗಾಗಿ ಬಸವಣ್ಣನವರು ದೇವರನ್ನು ಆರಾಧಿಸುವ ದೇಹಗಳನ್ನು ಉದ್ದೇಶಿಸಿ ''ಶಿವಪಥವನ್ನು ಅರಿವಡೆ ಗುರುಪಥ ಮೊದಲು'' ಎಂದು ಹೇಳಿದರು.

ಅರಿವೆಂಬ ಗುರುದೇವನನ್ನು ಕುರಿತು ''ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ ಹಾಲಲ್ಲಾದರು ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ'' ಎಂದು ಗುರುದೇವನೊಂದಿಗೆ ಮಾತನಾಡುತ್ತಾ ಅರಿವೆಂಬ ಗುರುದೇವನನ್ನು ಪೂಜಿಸಿದರು. ಆತನನ್ನು ಪೂಜಿಸುವ ವಿಧಾನವನ್ನು ಲೋಕಕ್ಕೆ ಸೂತ್ರದ ಮೂಲಕ ವಿವರಿಸಿದರು.

ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನು ಅಂಗವನ್ನು ಆವರಿಸಿದ ಮನದಿಂದಲೇ ತಿಳಿಯಲು ಪ್ರಯತ್ನಿಸಬೇಕು. ಸಾಧ್ಯವಾಗದಿದ್ದರೆ ಅಂಗದಲ್ಲಿಯೇ ಸಂಗವುವಾದ ಗುರುದೇವನನ್ನು ತೋರಿಸುವ ಗುರುದೇವನನ್ನು ಹುಡುಕಬೇಕು.

ಗುರುದೇವನನ್ನು ಅಂಗದಲ್ಲಿ ತೋರಿಸುವ ಗುರುವಿಗಾದರೂ ಗುರುದೇವನನ್ನು ಕಾಣುವ ಬಯಕೆಯುಳ್ಳ ಶಿಷ್ಯನಿಗಾದರೂ ಗುರುದೇವ ಬೇಕು. ಗುರು ಶಿಷ್ಯರಿಬ್ಬರಿಗೂ ಗುರು ಅವಶ್ಯ. ಗುರುದೇವನು ಇಲ್ಲದ ಅಂಗವು ಇಲ್ಲವೇ ಇಲ್ಲ. ಆದರೂ ಅಂಗವನ್ನು ಆವರಿಸಿದ ಮನಕ್ಕೆ ನಿಜ ಗುರುದೇವನ ಪರಿಚಯವಿಲ್ಲದ್ದಕ್ಕಾಗಿ ಗುರುವಿಗಿಂತ ಅನ್ಯ ದೈವವಿಲ್ಲವೆಂದು ಸಿದ್ಧರಾಮ ಶಿವಯೋಗಿಗಳು ಆಗಮದ ಉದಾಹರಣೆಯನ್ನು ಕೊಟ್ಟು ಓದುಗರಿಗೆ ಖಚಿತಪಡಿಸಿದ್ದಾರೆ.

**494**

**ಗುರುವಿಗೆ ಘನಗುರು ಮಾಚಿ ತಂದೆಗಳು;**
**ಲಿಂಗಕ್ಕೆ ಘನಲಿಂಗ ಮಾಚಿ ತಂದೆಗಳು;**
**ಜಂಗಮಕ್ಕೆ ನಿರಂಜನ ವಸ್ತು ನಮ್ಮ ಮಾಚಿ ತಂದೆಗಳು.**
**ಅಂತಪ್ಪ ಮಾಚಿ ತಂದೆಗೆ ಪೇಳ್ವ ತ್ರಾಣ ಎನ್ನಲ್ಲಿಹುದೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನಿಗಳು ಸಾಕ್ಷಾತ್ ಶಿವಸ್ವರೂಪಿಗಳೇ ಆಗಿರುತ್ತಾರೆ. ಹೀಗಾಗಿ ಮಡಿವಾಳ ಮಾಚಿ ತಂದೆಗಳನ್ನು ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿ ತನ್ಮಯವಾದ ಅಂತರಾಳದ ಅರಿವೆಂಬ ಗುರುದೇವನಿಗೆ ಮಾಚಿ ತಂದೆ ಎಂದು ಹೆಸರಿಟ್ಟು ಕರೆದಿದ್ದಾನೆ. ಆತ ಗುರುದೇವನಿಗೆ ಘನಗುರುದೇವನು, ಲಿಂಗಕ್ಕೆ ಘನಲಿಂಗನು, ಜಂಗಮಕ್ಕೆ ನಿರಂಜನ ವಸ್ತುವೇ ನಮ್ಮ ಮಾಚಿ ತಂದೆಗಳು ಎಂದು ಹೃದಯ ತುಂಬಿ ಹಾಡಿದ್ದಾನೆ.

ಮನದ ಮೈಲಿಗೆಯನ್ನು ತೊಳಗಿ ಬೆಳಗಿಂಗೆ ಬೆಳಗಾಗಿ ಬೆಳಗುವಾತನೇ ಮಾಚಿ ತಂದೆ. ಅಂತಪ್ಪ ಮಾಚಿ ತಂದೆಗಳಿಗೆ ಏನಾದರೂ ಹೇಳುವ ತ್ರಾಣ ಎನ್ನಲ್ಲಿಹುದೆ ಎಂದು ತನ್ನ ಅಂತರಾತ್ಮದ ಗುರುವಿನೊಂದಿಗೆ ಮಾತನಾಡಿಕೊಂಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**495**

**ಗುರುವಿಗ್ರಹವಿಡಿದು ಸರ್ವಾನುಗ್ರಾಹಕ ನೀನೆ ದೇವಾ.**
**ಚರವಿಗ್ರಹವಿಡಿದು ಚರಾಚರಂಗಳಿಗೆ ಚರಿಸಿ**

**ಸುಕೃತಿಗತಿಯನೀವ ಚರರೂಪ ನೀನೇ ದೇವಾ.**
**ಲಿಂಗವಿಗ್ರಹವಿಡಿದು ಸರ್ವರಿಂ ಪೂಜೆಗೊಂಡು**
**ಅವರವರಾಭಿಷ್ಟಭೋಗವ ಕೊಡುವ ದೇವ ನೀನೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಏಕಲವ್ಯ ಗುರುದೇವನ ವಿಗ್ರಹವನ್ನು ಮಾಡಿ ಆ ವಿಗ್ರಹದೊಂದಿಗೆ ಮಾತನಾಡುತ್ತಾ ತನ್ನ ಬೇಡಿಕೆಯನ್ನು ಪೂರೈಸಿಕೊಂಡ. ಬಿಲ್ವಿದ್ಯೆಯನ್ನು ಕಲಿತ. ಅಂತರಾಳದ ಅರಿವೆಂಬ ಗುರುದೇವನಿಗೆ ತಾನು ವಾಸಮಾಡಿದ ದೇಹವನ್ನು ಅನುಗ್ರಹಿಸಿ ಉದ್ಧಾರಮಾಡಬೇಕೆಂಬ ಬಯಕೆಯಾದಾಗ ಗುರುದೇವನ ವಿಗ್ರಹ ನೆಪವಾಗುತ್ತದೆ.

ನೋಡುಗರಿಗೆ ಕೇಳುಗರಿಗೆ ಏಕಲವ್ಯ ಆರಾಧಿಸಿದ ಗುರುವಿನ ವಿಗ್ರಹವೇ ಪ್ರಧಾನವಾಗುತ್ತದೆ. ಅಷ್ಟೇ ಏಕೆ ಬಿಲ್ವಿದ್ಯೆಯನ್ನು ಕಲಿತು ಚರಿತ್ರೆಯಲ್ಲಿ ಉಳಿದುಕೊಂಡ ಏಕಲವ್ಯನಿಗೆ ಕೂಡಾ ಗುರುದೇವನ ವಿಗ್ರಹದಿಂದಲೇ, ಆತನ ಕರುಣೆಯಿಂದಲೇ ತಾನು ಸಕಲ ವಿದ್ಯೆಗಳನ್ನು ಕಲಿತೆನೆಂದು ದೃಢಪಡಿಸಿಕೊಳ್ಳುತ್ತಾನೆ, ನಂಬುತ್ತಾನೆ.

ಅಂತರಾಳದ ಗುರುದೇವನ ಆಶೀರ್ವಾದದಿಂದ ಆತನ ಕರೆಯ ಮೂಲಕ ಏಕಲವ್ಯನ ದೇಹವನ್ನು ಆವರಿಸಿದ ಮನ ಗುರುದೇವನಿಗೆ ಶಿಷ್ಯನಾಯಿತು. ಗುರು ಶಿಷ್ಯ ಪರಂಪರೆಯಿಲ್ಲದೆ ವಿದ್ಯೆ ಬರುವದಿಲ್ಲ ಎನ್ನುವ ಸಂಪ್ರದಾಯದ ಬಲದಿಂದಾಗಿ ಏಕಲವ್ಯನನ್ನು ಮೂರ್ತಿಮಾಡ ಹಚ್ಚಿತು. ಆ ಮೂರ್ತಿಗೆ ಪೂಜೆಯನ್ನು ಸಲ್ಲಿಸುತ್ತಾ ತನ್ನ ಅರಿವೆಂಬ ಗುರುದೇವನ ಪ್ರೇರಣೆಯಿಂದ ವಿದ್ಯೆ ಕಲಿತ. ಹುಲ್ಲು ಕಡ್ಡಿಯೇ ಏಕಲವ್ಯನಿಗೆ ಬ್ರಹ್ಮಾಸ್ತ್ರವಾಯಿತು.

ದೇಹವನ್ನು ಆವರಿಸಿದ ಮನ ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಚರಣಕಮಲಗಳಲ್ಲಿ ಲೀನವಾದರೆ ಸಾಕು. ಗುರುದೇವನಿದ್ದ ದೇಹ ಅರಿವಿನಿಂದ ಚಲಿಸತೊಡಗುತ್ತದೆ. ಅದು ಚರಗುರುದೇವ ಚರಜಂಗಮನೆಂದು ಕರೆಯಿಸಿಕೊಳ್ಳುತ್ತದೆ.

ಆತ ನಡೆದದ್ದೇ ಹಾದಿಯಾಗುತ್ತದೆ. ಚರಾಚರಂಗಳಿಗೆ ಚರಿಸಿ ಸುಕೃತಿಗತಿಯನೀವ ಚರರೂಪನೇ ತಾನಾಗುತ್ತಾನೆ. ಕ್ರಿಸ್ತ, ಕ್ರಿಷ್ಣ, ಪೈಗಂಬರ, ಬುದ್ಧ, ಮಹಾವೀರ, ಬಸವಾದಿ ಶರಣರು ದಾಸವರೇಣ್ಯರು ಚರರೂಪ ಗುರುದೇವರೆಂದೆನ್ನಿಸಿಕೊಂಡು ಇಡೀ ಲೋಕವನ್ನು ಸಂಚರಿಸುತ್ತಾ ಲೋಕೋದ್ಧಾರವನ್ನು ಮಾಡಿದರು. ಅಂತರಾಳದ ಗುರುದೇವನು ದೇಹವನ್ನು ಆವರಿಸಿದ ಮನವನ್ನು ತನ್ನಂತೆ ಆಗಿಸಿಕೊಂಡು ದೇಹವನ್ನು ಹಿಡಿದು ಚರರೂಪ ಜಂಗಮನಾಗಿ ಲೋಕ ಸಂಚಾರವನ್ನುಮಾಡುತ್ತಾನೆ.

ಡಬ್ಬೇರುಮಡುವು ಸದ್ಗುರು ಶ್ರೀ ವಿದ್ಯಾನಂದ ಶರಣರು ಚರರೂಪ ಜಂಗಮರಾಗಿ ಮನೆಮನೆಗೆ ತಿರುಗಿ ತನುವನ್ನು ಉದ್ಧಾರ ಮಾಡುವ ಕಾಯಕವನ್ನು ತಮಗೆ ತಾವೆ ತಮ್ಮ ಕಾಯಕ್ಕೆ ಹಚ್ಚಿದರು. ಕಾಯದಿಂದ ಕಾಯದ ಮೂಲಕ ಕಾಯಗಳನ್ನು ಬೆಳಗಿದರು.

ಸಾಕಷ್ಟು ಕಾಯಗಳು ಲಿಂಗವಿಗ್ರಹವಿಡಿದು ಪೂಜೆಗೆ ತೊಡಗುತ್ತವೆ. ಏಕಲವ್ಯನಂತೆ ವಿಗ್ರಹಗಳನ್ನು ಆರಾಧಿಸುತ್ತಾ ಕಾಯ ಸವೆಸುತ್ತವೆ. ಕಾಯದೊಳಗೆ ಸಂಗಮವಾದ ಅರಿವೆಂಬ ಗುರುದೇವನ ಇಚ್ಛೆಯೇ ಹಾಗಿದೆ. ಹೀಗಾಗಿ ಕೆಲವರು ಲಿಂಗವಿಗ್ರಹವನ್ನು ಹಿಡಿದು, ಕೆಲವರು ಶಿಲುಬೆಯನ್ನು ಹಿಡಿದು, ಕೆಲವರು ವಿಗ್ರಹಗಳನ್ನು ಹಿಡಿದು ಪೂಜಿಸುತ್ತಾರೆ. ಆಯಾ ಕಾಯಗಳು ಮಾಡುವ ಪೂಜೆಗೆ ನಿನ್ನ ಪ್ರೇರಣೆಯೇ ಕಾರಣ ತಂದೆ. ಅವರವರ ಇಚ್ಛೆಗೆ ಅನುಗುಣವಾಗಿ

ಅವರವರಾಭಿಷ್ಟಭೋಗವ ಕೊಡುವ ದೇವನು ನೀನೇ ಆಗಿರುವಿ. ಇದು ಅರಿವೆಂಬ ಗುರುದೇವನು ಆಡುವ ಆಟ. ಕಪಿಲಸಿದ್ಧ ಮಲ್ಲಿಕಾರ್ಜುನದೇವನ ಆಟವೇ ಆಗಿದೆ.

**496**

**ಗುರುವಿಡಿದು ತನುವಾಯಿತ್ತು ;**
**ಲಿಂಗವಿಡಿದು ಮನವಾಯಿತ್ತು ;**
**ಜಂಗಮವಿಡಿದು ಧನವಾಯಿತ್ತು ;**
**ಬಸವಣ್ಣವಿಡಿದು ಭಕ್ತಿಯಾಯಿತ್ತು ;**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಶಿವಮಯವಾದ ಅರಿವೆಂಬ ಗುರುದೇವನು ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡಿ ಪರಮ ಸಂತೋಷ ಹೊಂದಬೇಕೆಂದು ತನುವನ್ನು ಸೃಷ್ಟಿ ಮಾಡಿದ. ಸೃಷ್ಟಿ ಮಾಡಿದ ತನುವಿನಲ್ಲಿ ತಾನೇ ಸಂಗಮವಾಗಿ ಮನವನ್ನು ಸೃಷ್ಟಿ ಮಾಡಿದ. ಆ ಮನವನ್ನೇ ತನಗೆ ಭಕ್ತನನ್ನಾಗಿಸಿಕೊಂಡು ಗುರುದೇವನಾಗಿ ಆ ಭಕ್ತನಿಗೆ ತಾನು ಬೋಧಿಸ ತೊಡಗಿದ. ಹೀಗಾಗಿ ಸಕಲ ತನುಗಳು ಗುರುದೇವನಿಂದಲೇ ಸೃಷ್ಟಿಯಾಗಿವೆ. ಸಕಲ ತನುಗಳನ್ನು ಅರಿವೆಂಬ ಗುರುದೇವ ತನ್ನ ಮುಷ್ಠಿಯಲ್ಲಿ ಹಿಡಿದಿಟ್ಟುಕೊಂಡಿದ್ದಾನೆ. ತನುವೇ ಆತನಿಗೆ ಗುರುಮನೆಯಾಗಿದೆ. ಅರಿವಿನ ಮನೆಯಾಗಿದೆ. ಆತ ತನ್ನ ಮುಷ್ಠಿ ಬಿಚ್ಚಿದಾಗ ತನುವಿನ ಪ್ರಾಣ ಪಕ್ಷಿ ಹಾರಿ ಹೋಗುತ್ತದೆ. ಗುರುವಿಡಿದು ತನುವಾಯಿತ್ತು.

ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ. ಅರಿವೇ ಗುರು; ಆ ಗುರುದೇವನೇ ಸದಾಶಿವನೂ ಲಿಂಗಯ್ಯನೂ ಆಗಿದ್ದಾನೆ. ಲಿಂಗಯ್ಯ ಅಂಗವನ್ನು ಸೃಷ್ಟಿ ಮಾಡಿ ಆ ಅಂಗದಲ್ಲಿಯೇ ಲಿಂಗಯ್ಯ ಸಂಗಮವಾಗಿದ್ದಾನೆ. ಆತನ ಅರಿವಿನ ಬೆಳಕಿನ ಕಿರಣಗಳಿಂದ ಮನವನ್ನು ಸೃಷ್ಟಿ ಮಾಡಿದ್ದಾನೆ. ಸೃಷ್ಟಿ ಮಾಡಿದ ಆ ಮನ ಅಂಗದ ಸಂಗ ಮಾಡಿ ಅಂಗವನ್ನು ಆವರಿಸಿದೆ; ಸೃಷ್ಟಿ ಮಾಡಿದ ಲಿಂಗಯ್ಯನನ್ನೇ ಮರೆತು ಹೋಗಿದೆ. ಮನಕ್ಕೆ ನೆನಪಾದಾಗ ಅಂಗದ ಸಂಗ ಬಿಟ್ಟು ಅರಿವಿನ ಲಿಂಗಯ್ಯನ ಸಂಗ ಮಾಡುತ್ತದೆ. ಆಗ ಮನ ಘನಮನವಾಗುತ್ತದೆ. ಹೀಗಾಗಿ ಲಿಂಗವಿಡಿದು ಮನವಾಯಿತ್ತು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಜಂಗಮವಿಡಿದು ಧನವಾಯಿತ್ತು :

ಜಂಗಮ ಒಂದು ಜಾತಿ ಸೂಚಕ ಪದವಲ್ಲ; ಅವ್ಯಕ್ತ ಅರಿವಿನ ವ್ಯಕ್ತಿ. ಶರಣರು ಈತನನ್ನು ಜಂಗಮ ಎಂದು ಕರೆದಿದ್ದಾರೆ. ಈ ಸಕಲ ಅಂಗಗಳಲ್ಲಿಯೂ ಈ ಜಂಗಮ ಸಂಗಮವಾಗಿದ್ದಾನೆ. ಅಂಗವನ್ನು ಆವರಿಸಿದ ಮನ ಭಕ್ತನಾಗಿ ಪರಿವರ್ತನೆ ಹೊಂದಿ ಜಂಗಮನೊಂದಿಗೆ ಸಂಗಮವಾದಾಗ ಇಡೀ ಅಂಗ ಜಂಗಮವಾಗಿ ಮಾರ್ಪಡುತ್ತದೆ. ಅರಿವಿನ ಸಂಪದ್ಭರಿತ ಅಂಗವಾಗುತ್ತದೆ. ಧನವೆಂದರೆ ಅರಿವು; ಇದು ಅಂಗದ ಸಂಪತ್ತು. ತನು ಮನ ಧನ ಎಂದಿದ್ದಾರೆ. ತನುವನ್ನು ಮನ ಆವರಿಸಿದೆ, ತನುವಿನಲ್ಲಿ ಧನವೆಂಬ ಅರಿವಿನ ಸಂಪತ್ತು ಸಂಗಮವಾಗಿದೆ. ತನುವಿನಲ್ಲಿ ಇರುವ ಅರಿವಿನ ಸಂಪತ್ತನ್ನು ಬಳಕೆ ಮಾಡುವ ಶಕ್ತಿ ಜಂಗಮನಿಗೆ ಮಾತ್ರ ಇದೆ. ಹೀಗಾಗಿ ಜಂಗಮವಿಡಿದು ಧನವಾಯಿತ್ತು ಎಂದು ಹೇಳಿದ್ದಾರೆ.

ಬಸವಣ್ಣವಿಡಿದು ಭಕ್ತಿಯಾಯಿತ್ತು :

ಬಸವಣ್ಣನನ್ನು ಶರಣರು 'ಭಕ್ತಿ ಭಂಡಾರಿ ಬಸವಣ್ಣ' ಎಂದು ಕರೆದಿದ್ದಾರೆ. ಗುರುದೇವನಿಗೆ, ದೇವರಿಗೆ ನಡೆದುಕೊಳ್ಳುವ ದೇಹವನ್ನು ಭಕ್ತ ಎಂದು ಗುರುತಿಸಿ ಜನ ಕರೆಯುತ್ತಾರೆ. ಗುರುದೇವನಿಗೆ ಯಥೇಚ್ಛ ಕಾಣಿಕೆಗಳನ್ನು ಸಲ್ಲಿಸಿ ಆಶ್ರಮ ದೇವಾಲಯ ಮಠ ಮಂದಿರಗಳನ್ನು ಕಟ್ಟಿಸುವಾತನಿಗೆ ಕೂಡಾ ಭಕ್ತ ಎಂದು ಕರೆಯುತ್ತಾರೆ. ಇಂಥವರು ಭಕ್ತರಲ್ಲ.

ಶರಣರು ಗುರುತಿಸಿದ ಭಕ್ತನೇ ಬೇರೆ. ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿ ಆ ಗುರುದೇವನನ್ನು ಸಾಕ್ಷಾತ್ಕಾರ ಮಾಡಿಕೊಂಡ ಮನವೇ ಘನಮನ. ಈ ಘನಮನವೇ ಭಕ್ತ.

ಅಂಗವನ್ನೇ ಅರಿವಿನ ಮನೆಯನ್ನಾಗಿ ಮಾಡಿಕೊಂಡು ಆ ಮನೆಯಲ್ಲಿ ಗುರುದೇವ ಮತ್ತು ಭಕ್ತರಿಬ್ಬರೂ ವಾಸಮಾಡುತ್ತಾರೆ. ಬಸವಣ್ಣ ಭಕ್ತನ ಈ ತಂತ್ರಗಾರಿಕೆಯನ್ನು ಬಲ್ಲಾತ. ಸಕಲ ಶರಣರೂ ಬಸವಣ್ಣನ "ಭಕ್ತ" ಸೂತ್ರವನ್ನು ಭಕ್ತಿಯಿಂದ ಪಾಲಿಸಿದರು. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿದರು. ಆತನಿಗೆ ಶರಣು ಹೋದರು. ಶರಣರೇ ತಾವಾದರು. ಸಿದ್ಧಾರ್ಥ ಬುದ್ಧನಿಗೆ ಶರಣು ಹೋಗಿ ಬುದ್ಧನಾದಂತೆ. ವರ್ಧಮಾನ ಮಹಾವೀರನಾದಂತೆ.

ಮಾನವ ಜ್ಞಾನ ಮಾರ್ಗಕ್ಕೆ ಹೋಗುವ ಸರಳವಾದ ಭಕ್ತಿ ಸೂತ್ರವನ್ನು ಬಸವಣ್ಣನವರು ಕಂಡು ಹಿಡಿದದ್ದಕ್ಕಾಗಿ ಸಕಲ ಶರಣರು ಬಸವಣ್ಣನವರನ್ನು 'ಭಕ್ತಿ ಭಂಡಾರಿ ಬಸವಣ್ಣ' ಎಂದು ಕರೆದರು. ಸೂತ್ರವೇನೋ ಸರಳವಿದೆ. ಆದರೆ ಭಕ್ತನಾಗುವುದು ಮಾತ್ರ ಸುಲಭವಲ್ಲ. ಹೀಗಾಗಿ ಬಸವಣ್ಣವಿಡಿದು ಭಕ್ತಿಯಾಯಿತ್ತು ಎಂದು ಸಿದ್ಧರಾಮ ಶಿವಯೋಗಿಗಳು ನಾಲ್ಕು ಸೂತ್ರಗಳನ್ನು ಬೆಡಗಿನ ಸಾಲುಗಳಲ್ಲಿ ಬಣ್ಣಿಸಿದ್ದಾರೆ.

**497**

**ಗುರುವಿನ ಕೃಪೆಯಿಂದ ಸಾಧಾರಣ ತನುವ ಮರೆದೆ.**
**ಗುರುವಿನ ಕೃಪೆಯಿಂದ ಮಲತ್ರಯದ ಪಂಕವ ತೊಳೆದೆ.**
**ಗುರುವಿನ ಕೃಪೆಯಿಂದ ದೀಕ್ಷಾತ್ರಯದಿಂದನುಭಾವಿಯಾದೆ.**
**ಗುರುವಿನ ಕೃಪೆಯಿಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಮಾಣವನರಿದೆ.**
**ಎನಗೆ ಅಧಿಕವಪ್ಪ ವಸ್ತು ಎನಗೆ ಬೇರೊಂದೂ ಇಲ್ಲ ಅದೇನು ಕಾರಣ? ಅವನಾದೆನಾಗಿ.**
**ಗುರುವೆ ಎನ್ನ ತನುವಿಗೆ ಲಿಂಗದೀಕ್ಷೆಯ ಮಾಡಿ, ಎನ್ನ ಜ್ಞಾನಕ್ಕೆ**
**ಸ್ವಾನುಭಾವ ದೀಕ್ಷೆಯ ಮಾಡಿ, ಎನ್ನ ತನುಮನದಲ್ಲಿ ವಂಚನೆಯಿಲ್ಲದೆ**
**ಮಾಡಲೆಂದು ಜಂಗಮದೀಕ್ಷೆಯ ಮಾಡಿ, ಎನ್ನ ಸರ್ವಾಂಗವೂ ನಿನ್ನ ವಿಶ್ರಾಮ**
**ಸ್ಥಾನ ಶುದ್ಧಮಂಟಪವಾದ ಕಾರಣದಲ್ಲಿ ಲೋಕವ್ಯಾಪ್ತಿಯನರಿದೆ,**
**ಲೋಕವೆನ್ನೊಳಗಾಯಿತು, ಆ ಲೋಕಕ್ಕೆ ಹೊರಗಾದೆ.**
**ಅದೇನು ಕಾರಣ? ಜನನ ಮರಣ ಪ್ರಳಯಕ್ಕೆ ನಾ ಹೊರಗಾದೆ ನಾ.**
**ನೀ ಸದ್ಗುರುವೆ. ಎನ್ನ ಭವದ ಬೇರ ಹರಿದೆ ಗುರುವೆ,**
**ಭವಪಾಶ ಮುಕ್ತಿ ಫಲಪ್ರದಾಯಕ ಗುರುವೆ ಬಸವಣ್ಣ,**

**ಕಪಿಲಸಿದ್ಧ ಮಲ್ಲಿಕಾರ್ಜುನಾ ನೀನಾಗಿ ಚೆನ್ನಬಸವಣ್ಣನಾಗಿ,**
**ಪ್ರಭು ಮೊದಲಾದ ಅಸಂಖ್ಯಾತರೆಲ್ಲರನೂ**
**ತೋರಿದೆ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ಅರಿವೆಂಬ ಗುರುದೇವ ತನ್ಮಯವಾಗಿದ್ದರೂ ತನುವನ್ನು ಆವರಿಸಿದ ಮನವೆಂಬ ಮಾಯೆಯಿಂದಾಗಿ ಗುರುದೇವನನ್ನು ಮರೆದೆ. ಅರಿವನ್ನು ಅರಿತು ಆ ಅರಿವೇ ತಾನಾದ ಗುರುದೇವನ ಕೃಪೆಯಿಂದ ತನುವನ್ನು ಆವರಿಸಿದ ಮನವೆಂಬ ಮಾಯೆಯನ್ನು ಮರೆತೆ. ತನುವನ್ನು ಮನವೆಂಬ ಮರೆವು ಆವರಿಸಿದ್ದರಿಂದ ತನು ಸಾಧಾರಣ ತನುವಾಗಿತ್ತು. ಗುರುವಿನ ಕೃಪೆಯಿಂದ ಸಾಕ್ಷಾತ್ ಗುರುದೇವನ ತನುವೇ ಆಗಿದೆ.

ಆಣವ ಮಲ, ಮಾಯಾಮಲ, ಕಾರ್ಮಿಕ ಮಲವೆಂಬ ಮೂರು ಮಲಗಳ ಕೆಸರು ತನುವನ್ನು ಮೆತ್ತಿಕೊಂಡಿತ್ತು. ಗುರುದೇವನ ಕೃಪೆಯಿಂದ ಮಲತ್ರಯಗಳ ಕೆಸರ ತೊಳೆದುಕೊಂಡೆ.

ಗುರುದೇವ ಮಹಾ ಕರುಣಿ; ಸ್ಥೂಲ ತನುವನ್ನು ಹಿಡಿದು ಆ ತನುವಿಗೆ ದೀಕ್ಷೆಯನ್ನು ಕರುಣಿಸಿದ. ಸೂಕ್ಷ್ಮ ತನುವಿನ ವೃತ್ತಾಂತವನ್ನು ಹೇಳುತ್ತಾ ಆ ತನುವಿಗೆ ಕೂಡಾ ದೀಕ್ಷೆಯನ್ನು ಕರುಣಿಸಿದ; ಕಾರಣ ತನುವನ್ನು ತೋರಿ ಸೂಕ್ಷ್ಮ ತನುವನ್ನು ಇಲ್ಲವಾಗಿಸಿದ. ಗುರುದೇವನ ದೀಕ್ಷಾತ್ರಯದಿಂದಾಗಿ ನಾನು ಅನುಭಾವಿಯಾದೆ.

ಗುರುದೇವನ ಕೃಪೆಯಿಂದಾಗಿ ಶುದ್ಧವೆಂದರೇನೆಂದು ಅರಿತು ಶುದ್ಧ ಪ್ರಸಾದವನ್ನು ಸ್ವೀಕರಿಸಿದೆ. ತನುವಿನಲ್ಲಿಯೇ ತನ್ಮಯವಾದ ಸಿದ್ಧ ಪ್ರಸಾದವನ್ನು ಸ್ವೀಕರಿಸಿದೆ. ಜಗದಗಲ ಮುಗಿಲಗಲಕ್ಕೂ ವಿಸ್ತರಿಸಿ ತನುವಿನಲ್ಲಿಯೇ ತನ್ಮಯವಾದ ಪ್ರಸಿದ್ಧ ಪ್ರಸಾದವನ್ನು ಗುರುದೇವನ ಕರುಣೆಯಿಂದ ಸ್ವೀಕರಿಸಿ ಧನ್ಯನಾದೆ.

ಎನಗೆ ಅಧಿಕವಾದ ವಸ್ತು ಬೇರೊಂದು ಇಲ್ಲ. ಅದೇನು ಕಾರಣವೆಂದರೆ ಎನಗೆ ಬೋಧಿಸಿದ ಗುರುದೇವ ನನ್ನನ್ನು ಕರುಣೆಯಿಂದ ತನ್ನಂತೆ ಮಾಡಿಕೊಂಡನಾಗಿ ನಾನು ಅವನೇ ಆದೆ. ಎಣ್ಣೆ ಬತ್ತಿ ಇದ್ದ ಪ್ರಣತಿಯನ್ನು ಜ್ಯೋತಿಯೊಂದು ಚುಂಬಿಸಿ ಜ್ಯೋತಿಯನ್ನಾಗಿಸಿದಂತೆ ಗುರುದೇವ ಎನ್ನನ್ನು ಗುರುದೇವನನ್ನಾಗಿಯೇ ಮಾಡಿಕೊಂಡ.

ಗುರುದೇವನೇ ನನ್ನ ಅಂಗಕ್ಕೆ ಅರಿವಿನ ಲಿಂಗದೀಕ್ಷೆಯನ್ನು ಮಾಡಿದ. ನನ್ನ ಜ್ಞಾನಕ್ಕೆ ಸ್ವಾನುಭಾವ ದೀಕ್ಷೆಯನ್ನು ಮಾಡಿದ. ಎನ್ನ ತನುಮನದಲ್ಲಿದ್ದ ವಂಚನೆಯನ್ನು ಕಳೆಯಲು ಜಂಗಮದೀಕ್ಷೆಯನ್ನು ಮಾಡಿದ. ಎನ್ನ ಸರ್ವಾಂಗವು ಅರಿವೆಂಬ ಗುರುದೇವನು ವಿಶ್ರಮಿಸಿದ ವಿಶ್ರಾಮ ಸ್ಥಾನದ ತಾಣವಾಯಿತು. ಶುದ್ಧಮಂಟಪವಾಯಿತು.

ಗುರುದೇವನ ಕರುಣೆಯಿಂದಾಗಿ ಲೋಕವ್ಯಾಪ್ತಿಯನ್ನು ಅರಿದೆ. ಇಡೀ ಲೋಕವೇ ಎನ್ನೊಳಗಾಯಿತು. ನಾನು ಲೋಕಕ್ಕೆ ಹೊರಗಾದೆ. ಜನನ ಮರಣವೆಂಬ ಪ್ರಳಯಕ್ಕೆ ಹೊರಗಾದೆ.

ಸದ್ಗುರುದೇವನೆ, ಕರುಣಾಮಯನೇ ನೀನು ನನ್ನ ಭವದ ಬೇರನು ಹರಿದು ಕಿತ್ತೆಸೆದೆ ತಂದೆ. ಮುಕ್ತಿ ಫಲಪ್ರದಾಯಕ ಗುರುದೇವನೇ ಬಸವಣ್ಣನೇ ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನಾಗಿ, ಚೆನ್ನಬಸವಣ್ಣನಾಗಿ, ಪ್ರಭು ಮೊದಲಾದ ಅಸಂಖ್ಯಾತರೆಲ್ಲರನ್ನೂ ಎನಗೆ ತೋರಿದೆ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

498

**ಗುರುವಿನ ಭಕ್ತಿಕ್ರೀಯ ಬೆಳಗಿನ್ನೆಂತೊ ;**
**ಶಿಷ್ಯನಳಿವ ಪೂಜಾ ಸಂಭ್ರಮವಿನ್ನೆಂತೊ ;**
**ಪ್ರಮಥರ ಶಿವಲಿಂಗ ಕೂಟವಿನ್ನೆಂತೊ ;**
**ಪ್ರಭುಗಳ ನಿರೀಕ್ಷಣೆಯಿನ್ನೆಂತೊ ;**
**ಮಡಿವಾಳನ ಮಹಾನುಭಾವವಿನ್ನೆಂತೊ ;**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುದೇವನ ಆಟವೇ ಹಾಗೆ. ಮನವನ್ನು ಹಿಡಿದು ಆ ಮನವನ್ನೇ ಭಕ್ತನನ್ನಾಗಿಸಿದ. ಆ ಭಕ್ತನನ್ನು ಅರಿವಿನ ಕ್ರಿಯೆಯಲ್ಲಿ ತೊಡಗಿಸಿದ ಆ ಕ್ರಿಯೆಯಿಂದ ಹೊರಚಿಮ್ಮಿದ ಬೆಳಗಿನ ಕಿರಣಗಳನ್ನು ಏನೆಂದು ಹೇಳಲಿ. ಉಪಮಿಸಲು ಬಾರದ ಬೆಳಗು.

ಗುರುದೇವನ ಕರುಣೆಯೇ ಅಪಾರ. ಮನವನ್ನು ಹಿಡಿದು ಆ ಮನವನ್ನೇ ಶಿಷ್ಯನಾಗಿಸಿದ. ಮನವನ್ನು ಅಳಿದ. ಆ ಶಿಷ್ಯನನ್ನು ಅಳಿದು ಗುರುವನ್ನಾಗಿಸಿದ. ಗುರು ಶಿಷ್ಯರು ಒಂದಾಗಿ ಮಾಡುವ ಪೂಜಾ ಸಂಭ್ರಮವನ್ನು ಏನೆಂದು ಬಣ್ಣಿಸಲಿ!

ಆಹಾ! ಎನಗೇ ಇಷ್ಟೊಂದು ಸಂಭ್ರವಿದೆಯೆಂದ ಮೇಲೆ ಪ್ರಮಥರುಗಳೆಲ್ಲ ಒಂದೆಡೆ ಸೇರಿದ ಶಿವಲಿಂಗಕೂಟದ ಸಂಭ್ರಮ ಹೇಗಿರಬೇಡ! ಪ್ರಭುದೇವರ ಲಿಂಗ ನಿರೀಕ್ಷಣೆ ಹೇಗಿರಬಹುದು ಊಹಿಸಲೂ ಅಸಾಧ್ಯ. ಸಸಿಯ ಮೇಲೆ ಸಾಗರವೇ ಹರಿದಂತಹ ಸುಖ. ಬಾಡಿ ಬಣಕಲಾದ ಸಸಿಯ ಮೇಲೆ ಸಾಗರವೇ ಆವಿಯಾಗಿ ತುಂತುರು ಹನಿಯಾಗಿ ಅಮೃತವನ್ನು ಚೆಲ್ಲಿದ ಸುಖ!

ಮಡಿವಾಳ ಮಾಚಿತಂದೆಗಳ ಮಹಾನುಭಾವದ ಪರಮಸುಖ ಹೇಗಿರಬೇಡ! ಸರ್ವರ ಮನದ ಮೈಲಿಗೆಯನ್ನು ತೊಳೆದು ಪರಮ ಸುಖದ ಪರಮಾಮೃತವನ್ನು ಉಣಬಡಿಸಿದ ಮಹಾತಂದೆಗಳು ಅವರು. ಶರಣಗಣತಿಂತಿಣಿಗಳಿಗೆಲ್ಲ ಮಾಚಿ ತಂದೆಯೇ ತಂದೆ. ಅವರ ಅನುಭಾವ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನದೇವ.

499

**ಗುರುವಿಲ್ಲದಲ್ಲಿ ಜಂಗಮವಿಲ್ಲವೆ?**
**ಜಂಗಮವಿಲ್ಲದಲ್ಲಿ ತಾ ಜಂಗಮವಲ್ಲವೆ?**
**ತಾ ಜಂಗಮನಲ್ಲದಲ್ಲಿ ಲಿಂಗವಲ್ಲವೆ?**
**ಲಿಂಗೋದಕದಿಂದ ಸರ್ವಾಚಾರ ಶುದ್ಧವಾಗದೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗಕ್ಕೆ ಚರಿತ್ರೆ ಇದೆ. ಅದಕ್ಕೆ ತಂದೆ ತಾಯಿ ಬಂಧು ಬಳಗ ನೆರೆಹೊರೆಯವರು ಇದ್ದಾರೆ. ಅಂಗ ಹುಟ್ಟಿದಂದಿನಿಂದ ಸಾಯುವವರೆಗೆ ಅದಕ್ಕೆ ಒಂದು ವಯಸ್ಸು ಇದೆ. ಹೀಗೆ ಅಂಗ ಚರಿತ್ರೆಉಳ್ಳದ್ದು.

ಚರಿತ್ರೆ ಇತಿಹಾಸ ಉಳ್ಳವನು ಗುರುವಲ್ಲ, ಜಂಗಮನಲ್ಲ, ಲಿಂಗವಲ್ಲ. ಲಿಂಗೋದಕವೂ

ಅಲ್ಲ. ಗುರುದೇವನಿಗೆ ಚರಿತ್ರೆ ಇಲ್ಲ. ಜಂಗಮನಿಗೂ ಚರಿತ್ರೆ ಇಲ್ಲ. ಲಿಂಗಕ್ಕೂ ಚರಿತ್ರೆ ಇಲ್ಲ. ಲಿಂಗೋದಕಕ್ಕೂ ಚರಿತ್ರೆ ಇಲ್ಲ. ಗುರು ಲಿಂಗ ಜಂಗಮ ಹಾಗೂ ಲಿಂಗೋದಕ ಇವರಿಗೆ ಹುಟ್ಟಿಲ್ಲ ಸಾವು ಕೂಡಾ ಇಲ್ಲ.

ಗುರು ಪ್ರತಿ ಅಂಗದಲ್ಲಿಯೂ ಸಂಗಮವಾಗಿದ್ದಾನೆ. ಗುರುವಿಗಾದರೂ ಗುರುದೇವ ಬೇಕು. ಶಿಷ್ಯನಿಗಾದರೂ ಗುರುದೇವ ಬೇಕು. ಗುರುದೇವನ ದರುಶನ ಪಡೆದ ಗುರುದೇವ ಮಾತ್ರ ಶಿಷ್ಯನಿಗೆ ಗುರುದೇವನನ್ನು ಶಿಷ್ಯನ ಅಂಗದಲ್ಲಿಯೇ ತೋರಿಸಬಲ್ಲ.

ಗುರುದೇವನು, ಶಿಷ್ಯನ ಅಂಗದಲ್ಲಿಯೇ ಗುರುದೇವನನ್ನು ಸೂಚಿಸುತ್ತಾನೆ. ಗುರುದೇವ ಸೂಚಿಸಿದ, ಗುರುದೇವನನ್ನು ನೋಡುವ ಶಿಷ್ಯನಿಗೂ ಅಂಗವಿಲ್ಲ. ಗುರುಶಿಷ್ಯರಿಬ್ಬರೂ ಅಂಗವಿಲ್ಲದವರು.

ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಅಂಗವಿಲ್ಲ. ಅಂಗವನ್ನು ಆವರಿಸಿದ ಮನವೆಂಬ ಶಿಷ್ಯನಿಗೂ ಅಂಗವಿಲ್ಲ.

ಅಂಗದಲ್ಲಿ ಅರಿವಿದೆ. ಅಂಗದಲ್ಲಿ ಅಜ್ಞಾನವೂ ಇದೆ. ಅಂಗದಲ್ಲಿ ಇರುವ ಅಜ್ಞಾನ ಅಂಗದಲ್ಲಿಯೇ ಇರುವ ಗುರುದೇವನಿಗೆ ಗೊತ್ತಾಗುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನಿಗೂ ಗೊತ್ತಾಗುತ್ತದೆ. ಇವರಿಬ್ಬರ ಇರುವಿಕೆ ಮನಕ್ಕೆ ಗೊತ್ತಾದರೆ, ಮನವೇ ಇವರಿಬ್ಬರಿಗೆ ಭಕ್ತನಾಗುತ್ತದೆ; ಪರಮ ಶಿಷ್ಯನಾಗುತ್ತದೆ.

ಅಂಗದಲ್ಲಿ ಹುಟ್ಟಿದ ಅಜ್ಞಾನವನ್ನು ಅರಿವಿನ ಖಡ್ಗದಿಂದ ಕೊಂದು ಹಾಕುವ ಜಂಗಮ ಹುಟ್ಟುತ್ತಾನೆ. ಅಂಗದಲ್ಲಿಯೇ ಜ್ಞಾನಜ್ಞಾನದ ಯುದ್ಧ ನಡೆಯುತ್ತದೆ. ಅನಾಚಾರ ಅಜ್ಞಾನ ಅರಿವಿನ ಲಿಂಗೋದಕದಿಂದ ನಾಶವಾಗುತ್ತದೆ. ಅಂಗ ಸರ್ವಾಚಾರ ಸಂಪನ್ನನಾಗುತ್ತದೆ.

ಸರ್ವಾಚಾರ ಸಂಪನ್ನನಾದ ಅಂಗದ ಆಚಾರ ಗೋಚರಕ್ಕೆ ಬರುವ ಆಚಾರವಲ್ಲ. ಅಂಗದ ಆಚಾರ ಗೋಚರಕ್ಕೆ ಬಾರದ ಅಗೋಚರ ಆಚಾರ!

ಕಣ್ಣು ಅರಿವಿನಿಂದ ನೋಡುವ ಆಚಾರದಲ್ಲಿ ನಿರತವಾಗುತ್ತದೆ. ಅದಕ್ಕೆ ಅಂಗ ಕಾಣುತ್ತದೆ; ಅಂಗದಲ್ಲಿ ಸಂಗಮವಾದ ಗುರುದೇವ ಕಾಣುತ್ತಾನೆ; ಜಂಗಮ ಕಾಣುತ್ತಾನೆ; ಲಿಂಗಯ್ಯ ಕಾಣುತ್ತಾನೆ. ಅಂಗ ಹೆಣ್ಣಾಗಿ ಕಾಣುವುದಿಲ್ಲ, ಗಂಡಾಗಿ ಕಾಣುವುದಿಲ್ಲ. ಕಣ್ಣು ಹೆಣ್ಣಾಗಿ ಗಂಡನ್ನು ನೋಡುವುದಿಲ್ಲ; ಗಂಡಾಗಿ ಹೆಣ್ಣನ್ನು ನೋಡುವುದಿಲ್ಲ. ಕಣ್ಣು ಮತ್ತು ಕಣ್ಣಿನಲ್ಲಿ ಹರಿಯುವ ದೃಶ್ಯಕ್ಕೆ ಹೆಣ್ಣು ಎಂಬುದಿಲ್ಲ, ಗಂಡೆಂಬುದ ಇಲ್ಲ. ಕಣ್ಣಿಗೆ ಕಣ್ಣಿನಲ್ಲಿಯೇ ಹರಿಯುವ ಜ್ಞಾನದ ದೃಶ್ಯ ಕಣ್ಣಿಗೆ ಪರಿಚಯವಿರಲಿಲ್ಲ. ಹೀಗಾಗಿ ಅದು ಗಂಡೆಂದು ಹೆಣ್ಣೆಂದು ನೋಡುವ ಅಜ್ಞಾನದ ಆಚಾರದಲ್ಲಿ ನಿರತವಾಗಿತ್ತು.

ಹೀಗೆ ಸರ್ವಾಂಗ ಕೂಡಾ ಅರಿವೆಂಬ ಗುರು ಲಿಂಗ ಜಂಗಮನ ಲಿಂಗೋದಕದಿಂದ ಅಂಗದ ಸರ್ವಾಚಾರವೂ ಶುದ್ಧವಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ. ಓದುಗ ಕೇಳಿ ಅಗೋಚರದ ಆಚಾರದಲ್ಲಿ ತೊಡಗಲಿ ಎಂದು.

**500**

**ಗುರುವಿಲ್ಲದೆ ಲಿಂಗಪೂಜೆಯ ಮಾಡಿದೆನಾದಡೆ**

**ಆ ಪೂಜೆ ಮೃತಮಹಿಷನ ಮೆರವಣಿಗೆಯಂತೆ.**
**ಗುರುವಿಲ್ಲದೆ ಗಣಾರಾಧನೆಯ ಮಾಡಿದೆನಾದಡೆ**
**ಪತಿವ್ರತೆಯರಿಲ್ಲದ ಪಾರ್ವತಿಯರ ಪೂಜೆಯಂತೆ.**
**ಗುರುವಿಲ್ಲದೆ ಲಗ್ನವ ಮಾಡಿದೆನಾದಡೆ**
**ಶೂಲವನೇರುವ ಪುರುಷನ ಭೋಗದಂತೆ.**
**ಗುರುವಿಲ್ಲದೆ ದೀಕ್ಷೆಯ ಮಾಡಿದೆನಾದಡೆ**
**ಪಾರ್ವತಿಯರಿಲ್ಲದ ರುದ್ರರಾಜನ ಮನೆಯಂತೆ**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಪೂಜಿಸಲು ಗುರುದೇವನಿಲ್ಲದೆ ಸಾಧ್ಯವಾಗುವುದಿಲ್ಲ. ಅಂಗದ ಮೇಲೆ ಧರಿಸಿದ ಲಿಂಗಪೂಜೆಯನ್ನು ಗುರುದೇವನು ಇಲ್ಲದೆ ಪೂಜಿಸುವುದು ಸತ್ತ ಕೋಣದ ಮೆರವಣಿಗೆಯಂತೆ. ಸಂಪ್ರದಾಯದ ಪೂಜೆಯನ್ನು ಸಿದ್ಧರಾಮ ಶಿವಯೋಗಿಗಳು ವಿರೋಧಿಸಿದ್ದಾರೆ. ಅರಿವಿನ ಗುರುಪೂಜೆಯನು ಪುರಸ್ಕರಿಸಿದ್ದಾರೆ.

ಗಣಾರಾಧನೆ ಮಾಡುವುದು ಕೂಡಾ ಸಂಪ್ರದಾಯವಾಗಿದೆ. ಹಿರಿಯರು ಹಾಕಿಕೊಟ್ಟ ಮಾರ್ಗವನ್ನು ಕಿರಿಯರು ಅನುಕರಣೆ ಮಾಡುತ್ತಾ ಬಂದಿದ್ದಾರೆ. ಇದು ಯಾಕೆ ಎಂದು ತನ್ನನ್ನು ತಾನು ಪ್ರಶ್ನೆಮಾಡಿಕೊಳ್ಳುವ ಶಕ್ತಿಯನ್ನು ಕಳೆದುಕೊಂಡಿದ್ದಾರೆ.

ಮನೆಗೆ ಬಂದ ಗಣಂಗಳಲ್ಲಿ ಸಾಕ್ಷಾತ್ ಶಿವನನ್ನು ಕಂಡು ಶಿವನ ಪೂಜೆ ಮಾಡುವ ಬಗೆಯನ್ನು ಅರಿತ ಗುರುದೇವ ಮಾತ್ರ ಹೇಳಿಕೊಡುತ್ತಾನೆ. ಆತನಿಲ್ಲದೆ ಮಾಡುವ ಗಣಾರಾಧನೆ ಪತಿವ್ರತೆಯರಿಲ್ಲದೆ ಮಾಡಿದ ಗೌರೀವ್ರತದಂತೆ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ ಎಂದು ಬಸವಣ್ಣ ಹೇಳಿದ್ದಾರೆ. ಗುರುವಿಲ್ಲದೆ ಲಗ್ನ ಮಾಡುವುದು ಶೂಲವನೇರುವ ಪುರುಷನ ಭೋಗದಂತೆ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಗಂಡನೊಬ್ಬನು ಇದ್ದಾನೆ. ಅಂಗವನ್ನು ಆವರಿಸಿದ ಮನವೆಂಬ ಹೆಂಡತಿಯೊಬ್ಬಳಿದ್ದಾಳೆ. ಇವರಿಬ್ಬರೂ ಒಂದಾಗುವುದು ಇವರಿಗೆ ಗೊತ್ತಿಲ್ಲ.

ಸತಿ ಪತಿಗಳಾದ ಮೇಲೆ ಗುರುದೇವ ಅವರಿಬ್ಬರಿಗೂ ಶರಣ ಸತಿ ಲಿಂಗ ಪತಿ ಆಗುವುದು ಹೇಗೆ ಎಂದು ಹೇಳಿಕೊಡುತ್ತಾನೆ. ಸತಿಪತಿಗಳೆಂಬ ನೀವಿಬ್ಬರೂ ಮನವೆಂಬ ಸತಿಯರೇ ಆಗಿರುವಿರಿ. ನಿಮ್ಮಿಬ್ಬರ ಅಂಗದಲ್ಲಿ ಅರಿವೆಂಬ ಲಿಂಗಯ್ಯನಿದ್ದಾನೆ. ಆತ ನಿಮ್ಮಿಬ್ಬರಿಗೂ ಗಂಡ. ನೀವಿಬ್ಬರೂ ಆ ಅರಿವಿನ ಗಂಡನಿಗೆ ಸಂಪೂರ್ಣ ಶರಣಾಗತರಾಗಿ ಶರಣು ಹೋಗಿ ಪೂಜಿಸಿ ಧನ್ಯರಾಗಿ ಎಂದು ಗುರುದೇವ ಸತಿಪತಿಗಳಿಗೆ ಅರಿವಿನ ಸೂತ್ರ ಹೇಳುತ್ತಾನೆ. ಅವರಿಬ್ಬರ ನಿಜ ಮದುವೆಗೆ ಸಾಕ್ಷಿಯಾಗುತ್ತಾನೆ. ಹೀಗಾಗಿ ಗುರುದೇವನಿಲ್ಲದ ಮದುವೆ ಶೂಲವನೇರುವ ಪುರುಷನ ಭೋಗದಂತೆ ಎಂದು ಸಿದ್ಧರಾಮ ಶಿವಯೋಗಿ ಖಾರವಾಗಿಯೇ ಹೇಳಿದ್ದಾರೆ. ಪಾರ್ವತಿಯರಿಲ್ಲದ ರುದ್ರರಾಜನ ಮನೆಯಂತೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಗುರುದೇವನ ಸಾಕ್ಷಿಯಾಗಿ ಶಿವಯೋಗಿ ನುಡಿದಿದ್ದಾರೆ.

**ಮಂಗಲಂ**

# ವಚನಾನುಕ್ರಮಣಿಕೆ

# ಲೇಖಕರ ಕೃತಿಗಳು

| | | |
|---|---|---|
| ಬೆಳಕಿನ ಬಳ್ಳಿ | - | 2011 |
| ಬಯಲ ಬೀಜಗಳು | - | 2012 |
| ರೂಹಿಲ್ಲದ ಚೆಲುವೆ | - | 2012 |
| ಜ್ಞಾನಭಂಡಾರಿ ಬಸವಣ್ಣ (ಭಾಗ-1) | - | 2014 |
| ಜ್ಞಾನಭಂಡಾರಿ ಬಸವಣ್ಣ (ಸಮಗ್ರ) | - | 2018 |
| ಅಂಬಿಗರ ಚೌಡಯ್ಯಗಳ ವಚನಾನುಭಾವ | - | 2019 |
| ಹಡಪದ ಅಪ್ಪಣ್ಣಗಳ ವಚನಾನುಭಾವ | - | 2019 |

**ಸಂಪಾದಿತ ಕೃತಿಗಳು**

| | | |
|---|---|---|
| ಗಗನ ಸಿದ್ಧಾಂತ (ಭಾಗ-1) | - | 2006 |
| ತೆರೆಹಿಲ್ಲದಭವ ನುಡಿಗೆಡೆಗೊಡನು | - | 2011 |
| ಗಗನ ಸಿದ್ಧಾಂತ (ಸಮಗ್ರ) | - | 2015 |
| ಗುರುಕನ್ಯೆ | - | 2017 |

(ಶ್ರೀ ವಿದ್ಯಾನಂದ ಶರಣರು ಡಬ್ಬೇರುಮಡುವು ಅವರ ಕೃತಿಗಳು)

**ಇ-ಕೃತಿಗಳು**

ಮಾದಾರ ಚೆನ್ನಯ್ಯಗಳ ವಚನಾನುಭಾವ

**ಸಂಪಾದಿತ ಇ-ಕೃತಿಗಳು**

| | |
|---|---|
| ಅಕಾಯ ಭಕ್ತ | - ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ಅಂತರಾತ್ಮ ಬೋಧೆ | - ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ಗುರು ಕಾರುಣ್ಯ | - ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ಉಪದೇಶಾಮೃತ | - ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |
| ನಿಶ್ಯಬ್ದ ವೇದಿ | - ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು |



ಮನುಷ್ಯನನ್ನು 'ವ್ಯಕ್ತಿ' ಎಂದು ಕರೆಯಲಾಗಿದೆ. ಏಕೆಂದರೆ ವ್ಯಕ್ತಿ ಕಾಣುತ್ತಾನೆ. ವ್ಯಕ್ತ ತನುವನ್ನು ಆವರಿಸಿದ 'ಮನ' ಕಾಣುವುದಿಲ್ಲ. ವ್ಯಕ್ತ ತನುವಿನಲ್ಲಿ ಸಂಗಮವಾದ 'ಗುರುದೇವ' ಕೂಡಾ ಕಾಣುವುದಿಲ್ಲ. ಕಾಣಬಾರದ ಗುರುದೇವ ಕಾಣಬಾರದ ಮನಕ್ಕೆ ಬೋಧೆ ಮಾಡುತ್ತಾನೆ. ಈ ಬೋಧೆಯನ್ನು ತನು ಸಾಕ್ಷಿಯಾಗಿ ಕೇಳುತ್ತದೆ. ಹಾಗೆಯೇ ಸಾಕ್ಷೀಕರಿಸುತ್ತದೆ. ಗುರುದೇವನ ಬೋಧೆಯನ್ನು ಆಲಿಸಲು ಮನ ಎಂದು ಸಿದ್ಧವಾಗುತ್ತದೆಯೋ ಅಂದೇ ಆ ಮನ ಘನಮನವಾಗುತ್ತದೆ. ಗುರುದೇವನಿಗೆ ಪರಮ ಶಿಷ್ಯನಾಗುತ್ತದೆ. ಮಹಾದೇವನಿಗೆ ಪರಮ ಭಕ್ತನಾಗುತ್ತದೆ.

'ಗುರು' 'ಶಿಷ್ಯ' ಇಬ್ಬರೂ ಸೇರಿ ತನುವನ್ನೇ ಉಪಕರಣ ಮಾಡಿಕೊಂಡು ತನುವಿನ ಏಳ್ಗೆಗಾಗಿ ಭಗವದ್ಗೀತೆ ರಚಿಸಿದರು. ಬೈಬಲ್, ಕುರಾನ್, ಗ್ರಂಥಸಾಹೇಬ, ತ್ರಿಪಿಟಿಕ, ಜೈನಸಾಹಿತ್ಯವನ್ನು ರಚಿಸಿದರು. ವಚನಗಳು, ತತ್ವಪದಗಳು, ಕೀರ್ತನಗಳು, ಮುಂಡಿಗೆಗಳು, ಉಗಾಭೋಗಗಳು ವೇದ ಆಗಮ ಉಪನಿಷತ್ ಭಾಗವತ ರಚನೆಯಾದವು.

ಈ ಎಲ್ಲಾ ಗ್ರಂಥಗಳು ತನುವಿನ ಏಳ್ಗೆಗಾಗಿ ತನುವಿನಿಂದಲೇ ಹೊರಬಂದವು. ತನುವಿನಲ್ಲಿ ಇರುವ ಅರಿವಿನ ಸಂಪತ್ತನ್ನು ಸೂಚಿಸುವ ಸೂತ್ರಗಳಾಗಿ ನಕಾಶೆಗಳಾಗಿ ಹೊರಬಂದವು. ಆದರೆ ಮನ ಈ ಎಲ್ಲಾ ಪುಸ್ತಕಗಳನ್ನು ಧರ್ಮಗ್ರಂಥಗಳನ್ನಾಗಿ ಮಾಡಿಕೊಂಡು ತನುವಿನಲ್ಲಿಯೇ ತುಂಬಿಕೊಂಡಿತು. ತನುವನ್ನು ಒಂದು ಗೋದಾಮನ್ನಾಗಿ ಮಾಡಿಕೊಂಡಿತು. ಮನ ತನುವನ್ನು ಪಂಡಿತನನ್ನಾಗಿ, ಗುರುವನ್ನಾಗಿ, ಮೌಲ್ವಿಯನ್ನಾಗಿ, ಬಿಷಪ್‌ನನ್ನಾಗಿ ಮಾಡಿತು. ಪೋಪ್‌ನನ್ನಾಗಿ ಜಗದ್ಗುರುವನ್ನಾಗಿ ಮಾಡಿತು. ಆಶ್ರಮ ಕಟ್ಟಿಕೊಂಡು ಮಠ ಪೀಠಗಳನ್ನು ರಚಿಸಿ ಮನ ತನುವನ್ನು ಅವುಗಳಿಗೆ ಅಧಿಪತಿಯನ್ನಾಗಿ ನಿಯಮಿಸಿತು.

ಮನ ಭೌತಿಕವಾಗಿ ಬೆಳೆಯಿತು; ಆಂತರಿಕವಾಗಿ ಬೆಳೆಯಲಿಲ್ಲ. ಭೌತಿಕ ವಸ್ತುಗಳು ಮನಕ್ಕೆ ಆಕರ್ಷಣೆಯಾದವು. ಹಗಲಿರುಳೆನ್ನದೆ ಭೌತಿಕ ವಸ್ತುಗಳಿಗಾಗಿ ಮನ ತನುವನ್ನು ದಂಡಿಸಿತು. ಭೌತಿಕ ವಸ್ತುಗಳನ್ನು ಪಡೆದು ಶ್ರೀಮಂತನಾಯಿತು. ಭೌತಿಕ ವಸ್ತುಗಳನ್ನು ಕದ್ದು ತನುವಿಗೆ ಕಳ್ಳನ ಪಟ್ಟ ಲಭಿಸಿತು. ಭೌತಿಕ ವಸ್ತುಗಳಿಗಾಗಿಯೇ ರಾಜ ಮತ್ತೊಬ್ಬ ರಾಜನನ್ನು ಕೊಂದ, ಪ್ರಧಾನಿ ಸೇನಾಧಿಪತಿ ಸೈನಿಕರು ವ್ಯರ್ಥವಾಗಿ ಸತ್ತು ಹೋದರು.

ಮನ ಮತ್ತು ತನುವಿಗೆ ಭೌತಿಕ ವಸ್ತುಗಳಿಂದ ಸುಖವಾಯಿತು. ದುಃಖವೂ ಆಯಿತು. ಸುಖ ದುಃಖಗಳಿಗಾಗಿ ಇತಿಹಾಸವೇ ರಚನೆಯಾಯಿತು. ಮನ ಮತ್ತು ತನುವಿಗೆ ತನುವಿನಲ್ಲಿಯೇ ಸಂಗಮವಾದ ಅರಿವಿನ ಸಹಜ ಸುಖ ಲಭ್ಯವಾಗಲೇ ಇಲ್ಲ. ತನುವಿನ ಸ್ಥಿತಿ ನೀರೊಳಗಿದ್ದೂ ನೀರಡಿಸಿದಂತಾಯಿತು.....

ಬಸವರಾಜಸ್ವಾಮಿ